# ಶ್ರೀ ಹರಿಕಥಾಮೃತಸಾರ

ಪದ್ಮನಾಭದಾಸರಿಂದ ರಚಿತವಾದ

ಭಾವಪ್ರಕಾಶಿಕೆ ಎಂಬ ವ್ಯಾಖ್ಯಾನ ಸಹಿತ.



ಒಂದನೆಯ ಭಾಗ.

ಪ್ರಕಾಶಕರು,

ಎಂ. ಮೂರ್ತಿರಾವ್,

" ಶ್ರೀಹರಿಕೃಪಾ " ಮಲ್ಲೇಶ್ವರ, ಬೆಂಗಳೂರು.

[ ಬೆಲೆ. ರೂ. 8 0 0.

# ಹರಿಕಥಾಮೃತಸಾರ

( ಭಾವಪ್ರಕಾಶಿಕಾ ಸಹಿತ )

## ಮಂಗಳಾಚರಣ ಸಂಧಿ

**ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು**
**ಪೇಳುವೆ, ಪರಮ ಭಗವದ್ಭಕ್ತರಿದನಾದರದಿ ಕೇಳುವುದು ||**

ಪದ್ಯಾರ್ಥ:—ಹರಿಕಥಾಮೃತಸಾರ=ಹರಿಕಥಾಮೃತಸಾರವೆಂಬ ಈ ಗ್ರಂಥವನ್ನು, ಗುರುಗಳ=ಉಪದೇಶಕರ, ಕರುಣದಿಂದ=ಕೃಪೆಯಿಂದ, ಆಪನಿತು=ನನ್ನ ಬುದ್ಧಿಗೆ ತೋಚಿದಷ್ಟು ಮಟ್ಟಿಗೂ, ಪೇಳುವೆ=ಹೇಳುವೆನು. ಪರಮ ಭಗವದ್ಭಕ್ತರು=ಪರಮ=ಶ್ರೇಷ್ಠರಾದ [ಫಲಾಪೇಕ್ಷೆ ಇಲ್ಲದ] ಭಗವದ್ಭಕ್ತರು=ಪರಮಾತ್ಮನಲ್ಲಿ ಭಕ್ತಿ ಮಾಡುವವರು (ಅವಿಚ್ಛಿನ್ನವಾಗಿ ಭಕ್ತಿ ಮಾಡುವವರು), ಇದನ=ಈ ಗ್ರಂಥವನ್ನು, ಆದರದಿ=ವಿಶ್ವಾಸದಿಂದ, ಕೇಳುವುದು=ಕೇಳತಕ್ಕದ್ದು.

ತಾತ್ಪರ್ಯ:—ಈ ಪಲ್ಲವಿಯಲ್ಲಿ ಮೊದಲು ಮಂಗಳಾಚರಣೆಯನ್ನು ಮಾಡದೆ, ಪೇಳುವೆನು ಎಂದು ಹೇಳಿ ತದನಂತರ ಮಂಗಳಾಚರಣೆಗಾಗಿ ಒಂದು ಸಂಧಿಯನ್ನೇ ರಚಿಸಿರುವರು. ಶಾಸ್ತ್ರಕಾರರು:—" ನತ್ವಾ ಸೂತ್ರಾರ್ಥ ಉಚ್ಯತೇ " ಇತ್ಯಾದಿಗಳಲ್ಲಿ ಮೊದಲು ಮಂಗಳಾಚರಣವನ್ನು ಮಾಡಿ ಆ ಮೇಲೆ ಗ್ರಂಥ ಪ್ರಾರಂಭದ ಪ್ರತಿಜ್ಞೆಯನ್ನು ಮಾಡಿರುವರು. ಮತ್ತು ಒಂದು ಗ್ರಂಥವನ್ನು ರಚಿಸಬೇಕಾದರೆ ವಿಷಯ (ಪ್ರತಿಪಾದ್ಯ), ಪ್ರಯೋಜನ, ಅಧಿಕಾರಿ, ಸಂಬಂಧ ಎಂಬ ನಾಲ್ಕು ಲಕ್ಷಣಗಳನ್ನು ಹೇಳಿದ ಹೊರತು ಗ್ರಂಥವನ್ನು ಪ್ರಾರಂಭಮಾಡಕೂಡದೆಂದು ಶಾಸ್ತ್ರಕಾರರ ಸಂಪ್ರದಾಯವಿರುವುದು. ಹಾಗೆ ದಾಸರಾಯರು ಈ ಗ್ರಂಥಾರಂಭದಲ್ಲಿಯೇ ಹೇಳಿರುವರು.

ಭಾರತಾದಿಗಳಲ್ಲಿ ಮಂಗಳಾಚರಣ ರೂಪವಾಗಿ ಹೇಳಿರುವ " ನಾರಾಯಣಂ ನಮಸ್ಕೃತ್ಯ " ಎಂಬ ಶ್ಲೋಕಾರ್ಥವನ್ನು ವಿಶದವಾಗಿ ತಿಳಿಸುವ ಉದ್ದೇಶದಿಂದ " ಮಂಗಳಾಚರಣ ಸಂಧಿ " ಎಂದು ಒಂದು ಸಂಧಿಯನ್ನೇ ಬೇರೆ ಮಾಡಿರುವರಲ್ಲದೆ, ಪ್ರತಿ ಸಂಧಿಯ ಆರಂಭದಲ್ಲಿಯೂ ಪಠಿಸುವರ ಸೌಕರ್ಯಕ್ಕೋಸ್ಕರ ಅರ್ಥ ಪದ್ಯಾತ್ಮಕವಾದ ಪಲ್ಲವಿಯಲ್ಲೇ ಮಂಗಳಾಚರಣವನ್ನು ಮಾಡಿ ಸಾಧನಚತುಷ್ಟಯವನ್ನು ಹೇಳಿರುತ್ತಾರೆ. ಹೇಗೆಂದರೆ:—

ಮಂಗಳಾಚರಣವೆಂದರೆ " ನಾನು ನಮಸ್ಕಾರವನ್ನು ಮಾಡುತ್ತೇನೆ"

ಎಂದು ಬರೆಯುವದು ಮಾತ್ರವೇ ಇಲ್ಲ. ಮಂಗಳಕರವಾದ ಪದವನ್ನಾಗಲೀ ಅಕ್ಷರವನ್ನಾಗಲೀ ಮೊದಲು ಹಾಕಿದರೂ ಮಂಗಳಾಚರಣವೆಂದು ಸೂಚಿತ ವಾಗಿರುವದು. “ ಅಥಾತೋ ಬ್ರಹ್ಮಜಿಜ್ಞಾಸಾ ”ಎಂಬ ಸೂತ್ರಾರಂಭದಲ್ಲಿ “ ಅ ” ಎಂಬ ಅಕ್ಷರವು “ ಅಥ ” ಎಂಬ ಶಬ್ದವು ಮಂಗಳಾಚರಣವೆಂದು ನಿರ್ಣಯ ಮಾಡಿರುವರು. ಭಾಗವತ ದ್ವಿತೀಯ ಸ್ಕಂಧಾರಂಭದಲ್ಲಿ ಶುಕಾ ಚಾರ್ಯ್ಯರು ಭಾಗವತವನ್ನು ಹೇಳಲು ಉಪಕ್ರಮ ಮಾಡುವಾಗ ಬೇರೆ ಮಂಗ ಳಾಚರಣ ಮಾಡದೆ “ ವರೀಯಾನೇಷತೇ ಪ್ರಶ್ನಃ ” ಎಂದು ಪ್ರಾರಂಭವಾ ಡಿರುವರು. ಅಲ್ಲಿ “ ವರೀಯಾನ್ ” ಎಂಬ ಪದವೇ ಮಂಗಳಾಚರಣವೆಂದು ಹೇಳಿರುವರು. ಹಾಗಿರಲು, ದಾಸರಾಯರು “ ಹರಿ ” ಶಬ್ದವನ್ನೇ ಮೊದ ಲು ಪ್ರಯೋಗಮಾಡಿರುವರು. ಸಕಲ ಪಾಪಗಳನ್ನೂ, ಕಷ್ಟಗಳನ್ನೂ, ಹರ ಣಮಾಡುವವನಾದುದರಿಂದ ಆತನಿಗೆ “ ಹರಿ ” ಎಂದು ಹೆಸರು ಇದಕ್ಕಿಂ ತಲೂ ಮಂಗಳವಾವುದು ? ಮತ್ತು ಈ ಗ್ರಂಥ ಪ್ರತಿಪಾದ್ಯನು ಶ್ರೀಹರಿಯೇ ಆಗಿರುವುದರಿಂದ ಹರಿಯೇ ವಿಷಯನೆಂದು ಹೇಳಿದಂತಾಯಿತು. ಅಥವಾ ಈ ಗ್ರಂಥದಲ್ಲಿ ವಿಶೇಷವಾಗಿ ಹರಿಯ ಚರಿತ್ರೆಯನ್ನೇ ಹೇಳುವುದರಿಂದ “ಹರಿ ಕಥಾ ” ಎಂಬುವದೇ ವಿಷಯವು. ಅಮೃತವೆಂದರೆ ಅಮೃತ=ಸಾವಿಲ್ಲದಿರು ವಿಕೆ. ಮೋಕ್ಷವೆಂದರ್ಥ. ಅಂತಹ ಮೋಕ್ಷಪ್ರಾಪ್ತಿಯೇ ಈ ಗ್ರಂಥದ ಪ್ರ ಯೋಜನ. ಸಾರವೆಂದರೆ ಪ್ರಯೋಜನ ಅಥವಾ ಫಲಿತಾಂಶವೆಂದರ್ಥ. ಪರ ಮಭಗವದ್ಭಕ್ತರೇ ಇದಕ್ಕೆ ಅಧಿಕಾರಿಗಳು. ಪರಮ ಭಕ್ತರೆಂದರೆ “ಸವೈ ಪುಂಸಾಂ ಪರೋಧರ್ಮೋ, ಯತೋ ಭಕ್ತಿರಧೋಕ್ಷಜೇ। ಅಹೈತುಕ್ಯಪ್ರತಿ ಹತಾ ಯಯಾತ್ಮಾಽಶು ಪ್ರಸೀದತಿ ” ಎಂಬ ಭಾಗವತ ವಾಕ್ಯಾನುಸಾರ ಫ ಲಾಪೇಕ್ಷೆ ಇಲ್ಲದ ಅವಿಚ್ಛಿನ್ನ ಭಕ್ತಿಯೇ ಪರಮಾತ್ಮನ ಪರಮ ಪ್ರಸಾದಕ್ಕೆ ಸಾಧನವು. ಇಂತಹ ಭಕ್ತಿಗೆ ಪರಮ ಭಕ್ತಿ ಎಂದು ಹೆಸರು. ಪರಮ ಭಗ ವದ್ಭಕ್ತರೇ ಇದಕ್ಕೆ ಅಧಿಕಾರಿಗಳೆಂದು ಹೇಳಿರುವುದರಿಂದ ಸಾಮಾನ್ಯ ಭಕ್ತ ರಿಗೆ ಈ ಗ್ರಂಥದಲ್ಲಿ ಅಧಿಕಾರವಿಲ್ಲವೆಂದೇ ಅರ್ಥವಲ್ಲ. ಸಾಮಾನ್ಯ ಭಕ್ತಿ ಯಿಂದಲೇ ಶ್ರವಣ, ಪಠನಗಳಿಗೆ ಅಧಿಕಾರಿಗಳಾಗಿ ಕ್ರಮೇಣ ಶ್ರವಣ ಪಠನ ಮಾಡುತ್ತಾ ಮಾಡುತ್ತಾ ಪರಮ ಭಕ್ತಿಗೂ ಪರಮಾತ್ಮನ ಪರಮ ಪ್ರಸಾದಕ್ಕೂ ಪಾತ್ರರಾಗುವರೆಂಬ ಭಾವ. ಅಂತು ಭಗವದ್ಭಕ್ತರೇ ಈ ಗ್ರಂ ಥಕ್ಕೆ ಅಧಿಕಾರಿಗಳೆಂದು ಸೂಚಿಸಿದಂತಾಯಿತು. ಕೇಳುವದು ಎಂಬ ಪದ ದಿಂದ ಸಂಬಂಧವನ್ನು ಹೇಳಿರುವರು. ಮತ್ತು ಪ್ರಥಮತಃ ಶ್ರವಣ, ತದ ನಂತರ ಶ್ರವಣಜನ್ಯ ಜ್ಞಾನ—ಇವುಗಳಿಂದ ಕೃತಾರ್ಥರಾಗುವರೆಂಬ ಭಾವ ದಿಂದ ಈ ಪದವನ್ನು ಪ್ರಯೋಗಮಾಡಿರುವರು.

॥ ಶ್ರೀ ॥

# ಹರಿಕಥಾಮೃತಸಾರ



## ಮೊದಲನೆಯ ಪದ್ಯದ ಅವತಾರಿಕೆ.

ಹೀಗೆ ದಾಸರಾಯರು ಪ್ರತಿ ಸಂಧಿಗೂ ಮಂಗಳಾಚರಣೆಯನ್ನು ತೋರಿಸುವುದಕ್ಕಾಗಿ ಪಲ್ಲವಿಯಲ್ಲಿಯೇ ಮಂಗಳಾಚರಣೆಯನ್ನೂ ವಿಷಯಾದಿ ಸಾಧನ ಚತುಷ್ಟಯಗಳನ್ನೂ ತೋರಿಸಿ, ಶಿಷ್ಟಾಚಾರ ಪರಂಪರಾಪ್ರಾಪ್ತ ಮಂಗಳಾಚರಣೆಯನ್ನು, ತಾವು ರಚಿಸುವ ೩೨ ಸಂಧಿ ಯುಕ್ತವಾದ ಹರಿ ಕಥಾಮೃತಸಾರದ ಸಂಪೂರ್ಣ ಗ್ರಂಥಕ್ಕೆ ನಿರ್ವಿಘ್ನಪರಿಸಮಾಪ್ತ್ಯಾದಿ ಇಷ್ಟಾರ್ಥ ಸಿದ್ಧಿಗೋಸ್ಕರ, ಪ್ರಥಮತಃ ಮಾಡಿ, ಶಿಷ್ಯಶಿಕ್ಷಾರ್ಥವಾಗಿ ಗ್ರಂಥಾರಂಭದಲ್ಲಿ ಮಂಗಳಾಚರಣೆಯನ್ನು ಇಷ್ಟು ವಿಸ್ತಾರಮಾಡಲು ಕಾರ ಣವೇನೆಂದರೆ, ಭಾರತಾದಿ ಗ್ರಂಥಕರ್ತರಾದ ವೇದವ್ಯಾಸದೇವರು ಶಿಷ್ಯಶಿಕ್ಷಾ ರ್ಥವಾಗಿ ಈ ದೇವತೆಗಳಿಗೆ ನಮಸ್ಕಾರ ಮಾಡಿಯೇ ಗ್ರಂಥ ಪ್ರಾರಂಭವನ್ನು ಮಾಡಬೇಕೆಂದು ಸೂಚಿಸಿರುವರು. ಹೇಗೆಂದರೆ :—

**" ನಾರಾಯಣಂ ನಮಸ್ಕೃತ್ಯ ನರಂಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ಚೈವ (ವ್ಯಾಸಂ) ತತೋಜಯ (ಗ್ರಂಥ)**
**ಮುದೀರಯೇತ್ ॥ "**

ಮೊದಲು ಸರ್ವೋತ್ತಮನಾದ ಶ್ರೀಮನ್ನಾರಾಯಣ ದೇವರಿಗೆ ನಮ ಸ್ಕಾರವನ್ನು ಮಾಡಬೇಕು. ಅನಂತರ " ದೇವೀಂ " ಲಕ್ಷ್ಮೀದೇವಿಯರಿಗೆ, ಆ ಮೇಲೆ " ಸರ್ವೋತ್ತಮಂ " ಶೇಷಾದಿದೇವತೆಗಳಿಗಿಂತಲೂ ಉತ್ತಮರಾದ ವಾಯುದೇವರಿಗೆ, ಉಪಲಕ್ಷಣಯಾ ಬ್ರಹ್ಮದೇವರಿಗೂ, " ಸರಸ್ವತೀಂ " ಸರ

ಸ್ವತೀ ಭಾರತೀಯರಿಗೆ, ನರಂ–ಅಹಂಕಾರ ತತ್ತ್ವಾಭಿಮಾನಿಗಳಾದ ಗರುಡ, ಶೇಷ, ರುದ್ರರಿಗೆ, (ಯದ್ಯಪಿ "ನರ" ಎಂಬ ಪದವು ಶೇಷದೇವರಿಗೆ ಆಗುವದು. ಆದರೂ, ಈ ಮೂರು ಮಂದಿ ದೇವತೆಗಳೂ ತಾರತಮ್ಯಾನುಸಾರ ಸಮರಾದುದರಿಂದ ಆ ಮೂವರನ್ನೂ, ಗ್ರಹಣಮಾಡಬೇಕೆಂದು ತಿಳಿಯಬೇಕು.) ತದನಂತರ ವೇದವ್ಯಾಸದೇವರಿಗೆ ನಮಸ್ಕಾರವನ್ನು ಮಾಡಿ ಗ್ರಂಥಾರಂಭವನ್ನು ಮಾಡಬೇಕೆಂದು ಹೇಳಿರುವರು. ವೇದವ್ಯಾಸದೇವರು ಈ ಶ್ಲೋಕವನ್ನು "ದೇವೀಂ ಸರಸ್ವತೀಂ ಚೈವ" ಎಂದು ರಚಿಸಿದ್ದರು. ಅವರ ಶಿಷ್ಯರು "ಚೈವ" ಎಂಬ ಸ್ಥಳದಲ್ಲಿ "ವ್ಯಾಸಂ" ಎಂದು ಹಾಕಿರುವರು.

ಯದ್ಯಪಿ ನಾರಾಯಣದೇವರೇ ವೇದವ್ಯಾಸದೇವರಾದರೂ ಗ್ರಂಥ ಪ್ರತಿಪಾದ್ಯತ್ವೇನ ಶ್ರೀಮನ್ನಾರಾಯಣದೇವರಿಗೆ ಮೊದಲು ನಮಸ್ಕಾರವೂ, ಗ್ರಂಥಕರ್ತೃವಾದುದರಿಂದ ಗುರುತ್ವೇನಕಡೆಗೆ ವೇದವ್ಯಾಸದೇವರಿಗೂ ಹೀಗೆ ಅಧಿಕಾರಭೇದದಿಂದ ಎರಡುಸಲ ನಮಸ್ಕಾರವನ್ನು ಮಾಡಿದರೆಂದು ಭಾವಿಸಬೇಕು. (ಇದೇ ವಿಷಯವನ್ನು "ವೇದಪೀಠಪಿರಿಂಚಿಭವ" ಎಂಬ ೭ನೇ ಪದ್ಯದ ವ್ಯಾಖ್ಯಾನದಲ್ಲಿ ವಿಸ್ತಾರಮಾಡಿರುತ್ತೇವೆ.) ಭಾರತಾದಿಗಳಲ್ಲಿ ನಾರಾಯಣಾದಿಗಳಿಗೆ ನಮಸ್ಕಾರ ಮಾಡಬೇಕೆಂದು ಮಾತ್ರ ಹೇಳಿರುವದೇ ಹೊರತು, ಏತಕ್ಕೆ ಮಾಡಬೇಕು? ಅದರ ಪ್ರಯೋಜನವೇನು? ಎಂಬ ವಿಷಯಗಳನ್ನು ಹೇಳಲಿಲ್ಲ. ನಿರ್ಣಯಾಚಾರ್ಯರು ಆ ಭಾಗವನ್ನು ಸ್ವಲ್ಪ ಸೂಚಿಸಿರುವರು. ಅದು ಹೇಗೆಂದರೆ :—ಮುಖ್ಯವಾಗಿ ಒಬ್ಬರಿಗೆ ನಮಸ್ಕಾರವನ್ನು ಮಾಡಬೇಕಾದರೆ ಅವರ ಮಹಾತ್ಮ್ಯಜ್ಞಾನವು ಆವಶ್ಯಕವು. ಆದುದರಿಂದ ದಾಸರಾಯರೂ ಮೇಲೆ ಹೇಳಿದ ಶ್ಲೋಕದಲ್ಲಿ ಕಂಡಿರುವ ದೇವತೆಗಳ ಮಹಿಮೆಗಳನ್ನು ಹೇಳಿ, ಆ ದೇವತೆಗಳಿಂದ ಆಗುವ ಫಲವನ್ನೂ ತೋರಿಸಿ, ಶ್ರವಣಪಠನಾದಿಗಳನ್ನು ಮಾಡುವ ಜನರಿಗೆ ಶ್ರದ್ಧೆಯನ್ನು ಹುಟ್ಟಿಸುವುದಕ್ಕಾಗಿ ತಾವೂ ಆ ದೇವತೆಗಳಿಗೆ ನಮಸ್ಕಾರವನ್ನು ಮಾಡುತ್ತಾ ಮಂಗಳಾಚರಣ ಸಂಧಿಯನ್ನು ರಚಿಸಿರುವರು. ಅವರಲ್ಲಿ ಮೊದಲನೆಯ ಪದ್ಯದಿಂದ ತಮ್ಮ ಇಷ್ಟದೈವವೂ, ಕುಲದೈವವೂ, ಉಪಾಸ್ಯಮೂರ್ತಿಯೂ ಆದ ಶ್ರೀ ಲಕ್ಷ್ಮೀನರಸಿಂಹ ದೇವರನ್ನೂ, ಈ ಗ್ರಂಥಪ್ರತಿಪಾದ್ಯನೂ, ಸರ್ವೇಷ್ಟದೇವತೆಯೂ ಆದ ಶ್ರೀ

ನಾರಾಯಣ ದೇವರನ್ನೂ ಸಹಾ ಒಂದೇ ಪದ್ಯದಿಂದ ನಮಸ್ಕರಿಸುತ್ತಾರೆ :—

**ಮೂಲ :—ಶ್ರೀ ರಮಣಿಕರಕಮಲಪೂಜಿತ ಚಾರುಚರಣಸರೋಜ ಬ್ರಹ್ಮಸಮೀರವಾಣಿಫಣೀಂದ್ರವೀಂದ್ರಭವೇಂದ್ರಮುಖವಿನುತ। ನೀರಜಭವಾಂಡೋದಯ ಸ್ಥಿತಿಕಾರಣನೆ ಕೈವಲ್ಯದಾಯಕ ನಾರಸಿಂಹನೆ ನಮಿಪೆ ಕರುಣಿಪುದೆಮಗೆ ಮಂಗಳವಾ ॥ ೧ ॥ ಸಂಧಿಸೂಚನೆ ॥**

**ಪದ್ಯಾರ್ಥ :**—ಶ್ರೀ ರಮಣಿಕರಕಮಲಪೂಜಿತಚಾರುಚರಣ ಸರೋಜ ! ಶ್ರೀ- ರಮಾದೇವಿಯೆಂಬ ಅಥವಾ ಶ್ರೀದೇವಿಯೆಂಬ, ರಮಣಿ - ಸ್ತ್ರೀಯ, ಕರ - ಕೈಗಳೆಂಬ, ಕಮಲ - ಕಮಲಗಳಿಂದ, ಪೂಜಿತ - ಪೂಜಿಸಲ್ಪಟ್ಟ, ಚಾರು - ಮನೋಹರಗಳಾದ, ಚರಣ - ಪಾದಗಳೆಂಬ, ಸರೋಜ - ಕಮಲಗಳುಳ್ಳ, " ಬ್ರಹ್ಮಸಮೀರವಾಣಿ ಫಣೀಂದ್ರವೀಂದ್ರಭವೇಂದ್ರಮುಖವಿನುತ ! ಬ್ರಹ್ಮ - ಬ್ರಹ್ಮದೇವರು, ಸಮೀರ - ವಾಯುದೇವರು, ವಾಣಿ - ಸರಸ್ವತಿ (ಭಾರತಿಯರು), ಫಣೀಂದ್ರ - ಸರ್ಪಶ್ರೇಷ್ಠರಾದ ಶೇಷದೇವರು, ವೀಂದ್ರ-ಪಕ್ಷಿಶ್ರೇಷ್ಠರಾದ ಗರುಡದೇವರು, ಭವ - ರುದ್ರದೇವರು, ಇಂದ್ರಮುಖ-ಇಂದ್ರದೇವರೇ ಮೊದಲಾದ ದೇವತೆಗಳಿಂದ, ವಿನುತ - ನಮಸ್ಕಾರಮಾಡಿಸಿಕೊಳ್ಳಲ್ಪಟ್ಟ, " ನೀರಜಭವಾಂಡೋದಯ ಸ್ಥಿತಿಕಾರಣನೆ!" ನೀರಜಭವಾಂಡ-ಬ್ರಹ್ಮಾಂಡದ, ಉದಯ- ಸೃಷ್ಟಿಗೂ, ಸ್ಥಿತಿ - ಸಂರಕ್ಷಣೆಗೂ, ಕಾರಣನೆ-ಕಾರಣಭೂತನಾದ, " ಕೈವಲ್ಯದಾಯಕ " ಕೈವಲ್ಯ - ಕೇವಲ ನಾಮಕನಾದ ಪರಮಾತ್ಮನೊಬ್ಬನೇ ಉಳಿಯುವ ಪ್ರಳಯವನ್ನು, ದಾಯಕ - ಕೊಡುವ, ಅಂದರೆ ಮಾಡುವ, ಮತ್ತೂ ಕೈವಲ್ಯದಾಯಕ - ಮುಕ್ತಿಯನ್ನು ಕೊಡುವ, ನಾರಸಿಂಹನೆ ! ಸ್ಥಂಭದಿಂದ ಅವತರಿಸಿದ ಲಕ್ಷ್ಮೀನರಸಿಂಹ, ಮತ್ತೂ ದೋಷರಹಿತರಾದ ಮುಕ್ತರ ಮಧ್ಯದಲ್ಲಿ ಶ್ರೇಷ್ಠ ಎಂದರೆ, ಮುಕ್ತರಿಗ ಆಶ್ರಯಭೂತನಾಗಿ ಇರುವುದರಿಂದ ನಾರಸಿಂಹ ಶಬ್ದವಾಚ್ಯನಾದ ಶ್ರೀಮನ್ನಾರಾಯಣನೇ ! (ನಾನು ನಿನಗೆ) ನಮಿಪೆ - ನಮಸ್ಕಾರಮಾಡುವೆನು ; ಎಮಗೆ - ಈ ಗ್ರಂಥವನ್ನು ಶ್ರವಣಪಠನಾದಿಗಳನ್ನು ಮಾಡುವವರು ಮತ್ತೂ ನಮ್ಮ ಶಿಷ್ಯರು ಮೊದಲಾದ ಎಲ್ಲರಿಗೂ, ಮಂಗಳವ - ನಿರ್ವಿಘ್ನಪರಿಸಮಾಪ್ತ್ಯಾದಿ ಮಂಗ

ಳವನ್ನೂ, ಮತ್ತೂ ಶ್ರವಣಪಠನಾದಿಗಳಿಂದ ಮುಕ್ತಿರೂಪವಾದ ಮಂಗಳಕ್ಕೆ ಸಾಧನವನ್ನೂ ಕರುಣಿಪುದು – ದಯಪಾಲಿಸಬೇಕು.

**ತಾತ್ಪರ್ಯಾರ್ಥ:—**ಎಲೈ ನಾರಸಿಂಹ ! ಶ್ರೀಮನ್ನಾರಾಯಣ ! ನೀನು ಈ ಬ್ರಹ್ಮಾಂಡದ ಸೃಷ್ಟಿ, ಸ್ಥಿತಿ, ಸಂಹಾರಗಳಿಗೆ ಕಾರಣನಾಗಿರುವೆ; ಮತ್ತೂ ಮುಕ್ತಿಯನ್ನು ಕೊಡುವವನೂ ನೀನೇ ಆಗಿರುವೆ; ಸಾಕ್ಷಾಲ್ಲಕ್ಷ್ಮೀ ದೇವಿಯರೇ ನಿನಗೆ ಸತಿಯೆನಿಸುವರು; ಆಕೆಯ ಕರಕಮಲಗಳಿಂದ ಪೂಜಿತ ವಾದ ಪಾದಪದ್ಮ ಉಳ್ಳವನು; ಬ್ರಹ್ಮರುದ್ರಾದಿ ಸಕಲ ದೇವತೆಗಳಿಂದ ವಂದ್ಯನು; ಇಂತಹ ನಿನ್ನನ್ನು ನಮಸ್ಕರಿಸುವೆನು. ನನಗೂ ನಮ್ಮ ಶಿಷ್ಯ ವರ್ಗದವರಿಗೂ ಈ ಗ್ರಂಥವನ್ನು ಶ್ರವಣಪಠನಮಾಡುವವರಿಗೂ ಮಂಗಳ ರೂಪವಾದ ಮುಕ್ತಿ ಸುಖಸಾಧನವನ್ನು ಮಾಡಿಸು.

**ವಿಶೇಷಾರ್ಥ:—**ಗ್ರಂಥಾರಂಭದಲ್ಲಿ ಮಂಗಳಾಚರಣಾದಿಗಳು ಮಾಡ ಬೇಕಾದರೆ ಅದಕ್ಕೆ ಅರ್ಹರಾದ ದೇವತೆಗಳು ಎರಡು ವಿಧ. ಗ್ರಂಥಪ್ರತಿ ಪಾದ್ಯದೇವತೆ, ಇಷ್ಟದೇವತೆ. ಲೋಕದಲ್ಲಿ ಜ್ಯೋತಿಷ್ಯಗ್ರಂಥಾದಿಗಳನ್ನು ಪ್ರಾರಂಭಮಾಡಬೇಕಾದರೆ ಸೂರ್ಯಾದಿ ನವಗ್ರಹ ದೇವತೆಗಳಿಗೆ ನಮಸ್ಕಾರ ವನ್ನುಮಾಡಿ ಗ್ರಂಥಾರಂಭವನ್ನು ಮಾಡುವರು. ಅದರಂತೆಯೇ ಶ್ರೀ ಪರ ಮಾತ್ಮನೇ ಈ ಗ್ರಂಥಪ್ರತಿಪಾದ್ಯನಾದುದರಿಂದ ಆವನಿಗ ನಮಸ್ಕಾರ ಮಾಡು ತ್ತಾರೆ, ನಾರಸಿಂಹನೆ ನಮಿಪೆ ಎಂದು. ನಾರಸಿಂಹನೆ ಎಂಬ ಸಂ-ಬುದ್ಧಿ ಬಲದಿಂದ ನಿನ್ನನ್ನು ಎಂಬ ಪದವನ್ನು ನಮಿಪೆ ಎಂಬ ಉತ್ತಮಪುರುಷಕ್ರಿಯಾ ಪದದ ಬಲದಿಂದ ನಾನು ಎಂಬ ಕರ್ತೃಪದವನ್ನೂ ಅಧ್ಯಾಹಾರಮಾಡಿಕೊಳ್ಳ ಬೇಕು. ಎಲೈ ನಾರಸಿಂಹ ! ನಾನು ನಿನ್ನನ್ನು ನಮಸ್ಕರಿಸುವೆನು ಎಂದು ಹೇಳಿದಂತಾಯಿತು. ಆದರೆ ಈ ಗ್ರಂಥ ಪ್ರತಿಪಾದ್ಯನು ಶ್ರೀಮನ್ನಾರಾಯ ಣನೇ ಆಗಿರುವನು. ಭಾಗವತ ಸಪ್ತಮಸ್ಕಂಧದಂತೆ ನರಸಿಂಹಾವತಾರದ ಚರಿತ್ರೆಯನ್ನೇ ಈ ಗ್ರಂಥದಲ್ಲಿ ಹೇಳಲಿಲ್ಲ. ಮತ್ತೂ ನರಸಿಂಹಾವತಾರದ ರೂಪವು ಸರ್ವೇಷ್ಟದೇವತೆ ಎಂದು ಹೇಳಿಸಿಕೊಳ್ಳಲ್ಪಡುವುದಿಲ್ಲ. ಕೆಲವರು ರಾಮ ರೂಪವನ್ನೂ, ಕೆಲವರು ಕೃಷ್ಣಾದಿ ರೂಪಗಳನ್ನೂ ಇಷ್ಟದೇವತೆಗಳ

ನನ್ನಾಗಿ ಮಾಡಿಕೊಂಡು ಉಪಾಸನಾ ಮಾಡುವರು. ಹೀಗಿರಲು ದಾಸರಾಯರು ಈ ಗ್ರಂಥ ಪ್ರತಿಪಾದ್ಯರೂಪವೂ ಅಲ್ಲದ, ಸರ್ವೇಷ್ಟದೇವತೆಯೂ ಅಲ್ಲದ ನರಸಿಂಹ ರೂಪವನ್ನು ಪತಕ್ಕೆ ಮೊದಲು ನಮಸ್ಕರಿಸಿರುವರು ಎಂದರೆ, ಶ್ರೀ ಮಜ್ಜಗನ್ನಾಥ ದಾಸರಾಯರವರ ಕುಲದೈವವೂ ಇಷ್ಟದೈವವೂ ಶ್ರೀ ಲಕ್ಷ್ಮೀ ನೃಸಿಂಹ ರೂಪವು. ಮತ್ತೂ ದಾಸರಾಯರ ಉಪಾಸ್ಯಮೂರ್ತಿಯೂ ನರ ಸಿಂಹರೂಪವೇ " ಬಿಂಬರೂಪೋಪಾಸನಂ ಚಕಾರ್ಯಂ ಸದ್ಭಕ್ತಿಪೂರ್ವಕಂ" ಎಂಬ ಪ್ರಮಾಣಬಲದಿಂದ ಆ ರೂಪಕ್ಕೆ ನಮಸ್ಕಾರವನ್ನು ಮಾಡಿರುವರು. ಮತ್ತೂ ನರಸಿಂಹ ರೂಪವು ಅನಿಷ್ಟನಿವೃತ್ತಿಪೂರ್ವಕ ಇಷ್ಟಪ್ರಾಪ್ತಿಮಾ ಡುವ ರೂಪವು ಆ ಕಾರಣದಿಂದಲೂ ನರಸಿಂಹ ರೂಪಕ್ಕೆ ನಮಸ್ಕಾರವು ಮೊದಲು ಅವಶ್ಯವಾಗಿದ್ದಿತು. ಈ ಗ್ರಂಥ ಪ್ರತಿಪಾದ್ಯನೂ ಸರ್ವೇಷ್ಟದೇ ವತೆಯೂ ಶ್ರೀಮನ್ನಾರಾಯಣನು. ಆದುದರಿಂದ ಎರಡು ರೂಪಕ್ಕೂ ಒಂದೇ ಸಲ ನಮಸ್ಕಾರ ಮಾಡಬೇಕಾಗಿತ್ತು. ಯದ್ಯಪಿ ಮೂಲರೂಪಕ್ಕೂ ರಾಮ ಕೃಷ್ಣಾದಿ ಅವತಾರರೂಪಗಳಿಗೂ ಸ್ವಲ್ಪವೂ ಭೇದವಿಲ್ಲ. ಭೇದವಿಲ್ಲದಿದ್ದರೆ ಇದು ರಾಮ, ಇದು ಕೃಷ್ಣ, ಇದು ಮತ್ಸ್ಯ ಮುಂತಾದ ಹೆಸರು ವ್ಯತ್ಯಾಸ ವಾಗುವುದೆಂದರೆ " ನಹಿವಿಕೃತಂ ತ್ಯಜಂತಿಕನಕಸ್ಯತದಾತ್ಮತಯಾ " ಎಂಬ ಶೃತಿಗೀತಾವಾಕ್ಯದಿಂದ ಒಂದೇ ವಿಧವಾದ ಉತ್ಕೃಷ್ಟವಾದ ಚಿನ್ನದಿಂದ ಸರಿಗೆ, ವಂಕಿ, ಕಡಗ ಮೊದಲಾದ ಒಡವೆಗಳನ್ನು ಮಾಡಿಸಿದರೆ ಅವುಗಳ ರೂಪಭೇದಗಳಿಂದಲೂ, ಉಪಯೋಗಿಸುವ ಸ್ಥಳಭೇದದಿಂದಲೂ ಹೆಸರು ಭೇದವೇ ಹೊರತು ಚಿನ್ನದಲ್ಲಿ ಹೇಗೆ ಭೇದವಿಲ್ಲವೋ ಹಾಗೆಯೇ ಮತ್ಸ್ಯ ಕೂರ್ಮಾದಿ ರೂಪಭೇದಗಳಿಂದ ನಾಮಮಾತ್ರಭೇದವೇ ಹೊರತು ಗುಣಾದಿ ಗಳಲ್ಲಿ ಭಗವದ್ರೂಪಗಳಿಗೆ ಪರಸ್ಪರ ಯಾವ ಭೇದವೂ ಇರುವುದಿಲ್ಲ. ಆದರೂ ಜನರು ಭಗವದ್ರೂಪಗಳನ್ನು ಉಪಾಸನೆ ಮಾಡುವ ವಿಷಯದಲ್ಲಿ ಎಲ್ಲರಿಗೂ ಎಲ್ಲಾರೂಪಗಳನ್ನು ಉಪಾಸನಾ ಮಾಡುವ ಅಧಿಕಾರವಿಲ್ಲ.

**" ತತ್ರಾಪಿಹಯಗ್ರೀವ । ನಾರಸಿಂಹ, ವರಾಹಕಾಃ ॥**
**ಭಾರ್ಗವಶ್ಚ ದುರಾಚಾರ್ಯೈ ರ್ನೈವಸೇವ್ಯಾಂಃ ಕಥಂಚನ ॥**
**ಏತನ್ಮಂತ್ರೋಪಾಸಕಾಯೆ ಯದಿಸ್ಯುಃ ಪರದಾರಿಣಃ ॥**

* * * *

**ಮಂತ್ರಕ್ಷೋಭೋಭವೇತ್ತ್ರೆ ಷಾಂ ತತ್ಕಾಲೇಸು: ಪಿಶಾಚಕಾ: ||**
**ವಿಲಂಬೇನಾಪಕಾರೋಽಪಿ ಜಾಯತೆ ನಾತ್ರಸಂಶಯ: ||**
**ರಾಮಗೋಪಾಲಕೃಷ್ಣಾದ್ಯಾ ಹರಿದಾವೋದರಾಚ್ಯುತಾ: ||**
**ಮತ್ಸ್ಯವಾಮನಕೂರ್ಮಾದ್ಯಾ: ಸರ್ವೇಸ್ಯು: ಸೌಮ್ಯಮೂರ್ತಯ:||**
**ನಕುಪ್ಯಂತಿದುರಾಚಾರೈ: ಸದಾಚಾರೈ: ಫಲಾಧಿಕಾ: || "**

ಇತ್ಯಾದಿ ವಿಷ್ಣುರಹಸ್ಯದ ವಾಕ್ಯಗಳಿಂದ ಹಯಗ್ರೀವ, ನರಸಿಂಹ, ವರಾಹಾದಿ ಮೂರ್ತಿಗಳನ್ನು ಉಪಾಸನಾ ಮಾಡುವವರು ಕೇವಲ ಆಚಾರ ಶೀಲರಾಗಿರ ಬೇಕು. ದುರಾಚಾರ ಉಳ್ಳವರು ಈ ಮೂರ್ತಿಗಳನ್ನು ಉಪಾಸನೆ ಮಾಡಲೇ ಬಾರದು. ಒಂದುವೇಳೆ ಉಪಾಸನೆ ಮಾಡುತ್ತಾ ನರಸಿಂಹಾದಿ ಮಂತ್ರಗ ಳನ್ನು ಜಪಿಸುವವರು ಪರಸ್ತ್ರೀಲೋಲುಪರಾಗಿದ್ದಲ್ಲಿ ಆ ಕಾಲದಲ್ಲೇ ಪಿಶಾಚ ರಂತೆ ಆಗುವರು. ಹುಚ್ಚು ಹಿಡಿಯುವುದು. ಕಾಲವಿಳಂಬದಿಂದ ಇನ್ನೂ ಹೆಚ್ಚಾದ ಅನರ್ಥವೂ ಸಂಭವಿಸಬಹುದು. ರಾಮ, ಗೋಪಾಲಕೃಷ್ಣ, ವಾಮನಾದಿ ರೂಪಗಳು ಸೌಮ್ಯ ಮೂರ್ತಿಗಳು ದುರಾಚಾರದಿಂದ ಜಪಿಸಿ ದರೂ ಕೋಪಮಾಡುವುದಿಲ್ಲ. ಆಚಾರದಿಂದ ಫಲ ಹೆಚ್ಚಾಗುವುದು. ಆದುದ ರಿಂದ ಈ ರೂಪಗಳನ್ನು ಯಾರು ಬೇಕಾದರೂ ಉಪಾಸನಾ ಮಾಡಬಹುದೆಂದು ಸಿದ್ಧಾಂತವಾಗುವುದು. ಈ ಪ್ರಕಾರ ಅಧಿಕಾರ ಭೇದದಿಂದ ಇಷ್ಟ ದೇವತೆ ಗಳು ಭೇದಿಸುವುದು ಸಹಜವೇ ಆಗಿರುವುದು. ಮೂಲರೂಪೋಪಾಸನೆ ಅಂದರೆ :—" ನಾರಾಯಣಾಯ ಪರಿಪೂರ್ಣ ಗುಣಾರ್ಣವಾಯ " " ಧ್ಯೇಯ ಸ್ಸದಾ ಸವಿತೃಮಂಡಲ ಮಧ್ಯವರ್ತೀ " ಇಂತಹ ಮಂತ್ರಗಳಿಂದ ಮೂಲ ರೂಪೋಪಾಸನಕ್ಕೆ ನಿರ್ಬಂಧಗಳೇನೂ ಇರುವುದಿಲ್ಲ. ಹೀಗಿರುವುದರಿಂದಲೇ ಭಾರತಾದಿಗಳಲ್ಲಿ " ನಾರಾಯಣಂ ಸುರಗುರುಂ " " ಪರಂಧೀಮಹಿ " ಇತ್ಯಾದಿ ವಾಕ್ಯಗಳಿಂದ ಮಂಗಳಾಚರಣವನ್ನು ಮಾಡಿರುವರು.

ಇಲ್ಲಿ ದಾಸರಾಯರ ಇಷ್ಟದೇವತೆಯೂ ಉಪಾಸನಾಮೂರ್ತಿಯೂ ನರಸಿಂಹ ದೇವರು. ಗ್ರಂಥ ಪ್ರತಿಪಾದ್ಯನೂ ಸರ್ವೇಷ್ಟ ದೇವತೆಯೂ ನಾರಾ ಯಣನು. ಇವೆರಡು ರೂಪಗಳಿಗೂ ಒಂದೇ ಪದ್ಯದಿಂದ ನಮಸ್ಕಾರವನ್ನು ಮಾಡುವುದಕ್ಕಾಗಿ " ನಾರಸಿಂಹನೆ" ಎಂಬ ಶಬ್ದವನ್ನು ಪ್ರಯೋಗ ಮಾಡಿ

ರುವರು. ಹಾಗಿಲ್ಲದಿದ್ದರೆ "ನರಸಿಂಹ" ಎಂದು ಪ್ರಯೋಗ ಮಾಡುತ್ತಿದ್ದರು. ನರಸಿಂಹ ಎಂಬ ಪದಕ್ಕೆ ಮೂಲರೂಪಕ್ಕೆ ಅನ್ವಯಿಸುವ ಹಾಗೆ ಅರ್ಥಮಾಡಲು ಸಾಧ್ಯವಿಲ್ಲ. ನಾರಸಿಂಹ ಎಂಬ ಪದದ ಅರ್ಥವು ಮೂಲ ರೂಪಕ್ಕೂ ಅವತಾರ ರೂಪಕ್ಕೂ ಸಹ ಅನ್ವಯಿಸುವುದು. ನರಸಂಬಂಧ ವಾದ ಶರೀರದಿಂದ ಕೂಡಿದ ಸಿಂಹರೂಪವಾದುದರಿಂದ ನಾರಸಿಂಹನೆಂದು ಅವತಾರ ರೂಪಕ್ಕೆ ಅರ್ಥವಾಗುವುದು. ಮೂಲರೂಪಕ್ಕೂ ಸರಿಹೋಗುತ್ತದೆ. ಹೇಗೆಂದರೆ :— ಅರಾಃ ಎಂದರೆ ದೋಷಗಳು ಅದಿಲ್ಲದವರು ನಾರಾಃ ಅಂದರೆ ಮುಕ್ತರೆಂದರ್ಥ; ಅವರಿಗೆ ಸಿಂಹನೆಂದರೆ ಶ್ರೇಷ್ಠನು. ಮುಕ್ತರಿಂದ ವಂದ್ಯನು; ಮುಕ್ತರಿಗೆ ಆಶ್ರಯನು ಎಂದು ತಾತ್ಪರ್ಯ. ಅಥವಾ ಶ್ರೀ ಪರಮಾತ್ಮನು ನಾರ=ದೋಷರಹಿತನು. ಸಿಂಹನೆಂದರೆ ರಮಾ ಬ್ರಹ್ಮಾದಿ ಸಕಲ ದೇವತೆಗಳಿಗಿಂತಲೂ ಉತ್ತಮನೆಂದರ್ಥ.

ಹೇಗೆಂದರೆ :—ಸಿಂಹ ಶಬ್ದವನ್ನು ಅರ್ಥಾತ್ ಅದರ ಪರ್ಯಾಯ ಪದವಾದ ಮೃಗೇಂದ್ರ ಪದವನ್ನು ಇಲ್ಲಿ ಇಟ್ಟುಕೊಂಡರೆ "ಮೃಗಯಂತೀತಿ ಮೃಗಾಃ" ಎಂಬ ನಿರ್ವಚನದಿಂದ ಭಗವದ್ಗುಣ, ನಾಮರೂಪಗಳನ್ನು ಪಾರಗಾಣದೆ ಹುಡುಕುತ್ತಿರುವುದರಿಂದ, ಮೃಗಾಃ ಅಂದರೆ, ರಮಾ ಬ್ರಹ್ಮಾದಿಗಳು. ಯೋಮೃಗ್ಯತೆ ಹಸ್ತಗೃಹೀತಪದ್ಮಯಾ" "ತಮೇವ ತತ್ರಾಶ್ರಯ ಭೃತ್ಯವತ್ಸಲಂ ಮುಮುಕ್ಷುಭಿ ರ್ಮೃಗ್ಯ ಪದಾಬ್ಜ ಪದ್ಧತಿಂ ||" ಇತ್ಯಾದಿ ಭಾಗವತ ವಾಕ್ಯಗಳೇ ಇದಕ್ಕೆ ಆಧಾರಗಳಾಗಿರುವುವು. ಮೃಗಾಣ-ಮಿಂದ್ರಃ ಮೃಗೇಂದ್ರಃ ಅಂದರೆ ಮೇಲೆ ಹೇಳಿದ ರಮಾ ಬ್ರಹ್ಮಾದಿವಂದ್ಯತ್ವವು ಸಿದ್ಧಿಸುವುದು.

"ನಾರಶ್ಚಾಸೌ ಸಿಂಹಶ್ಚ ನಾರಸಿಂಹಃ" ನಿರ್ದೋಷನೂ, ರಮಾಬ್ರಹ್ಮಾದಿವಂದ್ಯನೂ ಆದುದರಿಂದ ನಾರಸಿಂಹನೆಂದು ಹೆಸರು. ಅಥವಾ ನಾರಂ ದದಾತೀನಾರಃ, ನಾರ ಎಂದರೆ ನಿರ್ದೋಷವಾದ ವೈಕುಂಠಲೋಕವು; ಭಕ್ತರಿಗೆ ಅದನ್ನು ಕೊಡುವವನಾದುದರಿಂದ ನಾರ ಎಂದು ಹೆಸರು. ಇಲ್ಲಿ ನಾರಂ ದದಾತೀತಿ ನಾರದಃ ಆಗಬೇಕಾಗಿತ್ತು ನಾರಂದದಾತೀತಿ ನಾರಃ ಹೇಗಾ

ಯಿತು ಅಂದರೆ :—ಸುಧಾಗ್ರಂಥದಲ್ಲಿ ವೈಕುಂಠ ಶಬ್ದವನ್ನು ಪರಮಾತ್ಮನ ಪರವಾಗಿ ಅರ್ಥಮಾಡುವಾಗ ವೈಕುಂಠಂದದಾತೀತಿ ವೈಕುಂಠಃ, ವೈಕುಂಠ ವನ್ನು ಕೊಡುವವನಾದುದರಿಂದ ವೈಕುಂಠನೆಂದು ಪರಮಾತ್ಮನಿಗೆ ಹೆಸರು ಎಂದು ನಿರ್ವಚನ ಮಾಡಿ, ಅದಕ್ಕೆ ಅಲ್ಲಿಯೇ ಪೂರ್ವಪಕ್ಷಸಿದ್ಧಾಂತ ಮಾಡಿ ರುವರು. ಹೇಗೆಂದರೆ ವೈಕುಂಠವನ್ನು ಕೊಡುವವನೇ ವೈಕುಂಠನಾದರೆ ಘಟವನ್ನು ಕೊಡುವವನೂ ಘಟವಾಗಬಹುದಲ್ಲವೇ? ಎಂದರೆ, "ಪ್ರಯೋ ಗೇಸತಿ ನಿಮಿತ್ತಾನುಸರಣಂ; ನತುನಿಮಿತ್ತೇಸತಿ ಪ್ರಯೋಗಾನುಸರಣಂ, ಪ್ರಯೋಗವಿದ್ದರೆ ನಿಮಿತ್ತವನ್ನು ಅನುಸರಿಸಬೇಕೇ ಹೊರತು ನಿಮಿತ್ತವನ್ನನು ಸರಿಸಿ ಹೊಸ ಪ್ರಯೋಗವನ್ನು ಮಾಡಬಾರದು. ಹೇಗೆಂದರೆ, ಯಾವನಾದ ರೊಬ್ಬನು ಮೊಸರು ಸೌದೆ ಮೊದಲಾದುವುಗಳನ್ನು ಮಾರಲಿಕ್ಕೆ ತಂದಿದ್ದರೆ, ಅವನಹೆಸರು ಮೊದಲಾದವು ತಿಳಿಯದವನು ಅವನನ್ನು ಕರೆಯಬೇಕಾದರೆ ಯೇ ಮೊಸರು ! ಸೌದೆ ! ಎಂದು ಕರೆಯುವುದುಂಟು. ಹೀಗೆ ಕರೆಯಬಹುದೇ, ಅವನೇ ಸೌದೆಯೋ? ಅವನೆ ಮೊಸರೇ? ಎಂದು ಯಾರಾದರೂ ಕೇಳಿದರೆ ಅವನ ಹೆಸರು ನನಗೆ ಗೊತ್ತಿಲ್ಲ. ಅವನು ಮೊಸರು, ಸೌದೆ ಕೊಡುವವನಾದುದ ರಿಂದ ಅವನನ್ನು ಹಾಗೆ ಕರೆದೆನೆಂದು ಹೇಳಬಹುದು. ಇದಕ್ಕೇನೇ ಪ್ರಯೋ ಗವಿದ್ದರೆ ನಿಮಿತ್ತವನ್ನನುಸರಿಸ ಬೇಕೆಂದರ್ಥ. ಈ ನಿಮಿತ್ತವನ್ನು ಇಟ್ಟು ಕ್ಕೊಂಡು ಮೊಸರು ತೆಗೆದುಕೊಂಡು ಬಾರೋ ಎಂದರೆ ಗೋಪಾಲನನ್ನು ಕರತಂದರೆ ಅಸಂಬಂಧವಾಗುವುದು. ಆದುದರಿಂದ ನಿಮಿತ್ತವಿದೆಯೆಂದು ಹೊಸ ಪ್ರಯೋಗವನ್ನು ಮಾಡಬಾರದೆಂದು ಸುದಾ ಪಂಗ್ತಿಗೆ ಅರ್ಥವು. ಪ್ರಕೃತ ಅದೇ ಭಾವನೆಯಿಂದ ನಾರ (ವೈಕುಂಠ) ವನ್ನೇ ಕೊಡುವವನಾದು ದರಿಂದ ನಾರನೆಂದು ಪರಮಾತ್ಮನಿಗೆ ಹೆಸರು. ಸಿಂಹ ಶಬ್ದಕ್ಕೆ ಮೊದಲಿನಂ ತೆಯೇ ಅರ್ಥ. ಆದುದರಿಂದ ನಾರಸಿಂಹ ಶಬ್ದವು ಮೂಲರೂಪಕ್ಕೆ ಸಮಂ ಜಸವಾಗುವುದೆಂದು ತಿಳಿಯಬೇಕು. ಇದಲ್ಲದೆ ಅಭಿಪ್ರಾಯವು ಅವತಾರ ರೂಪವೆಂದೇ ಏಕೆ ಇರಕೂಡದು? ಮೂಲರೂಪವೇ ಅವರ ಅಭಿಪ್ರಾಯವೆಂಬ ಕಲ್ಪನೆಯನ್ನು ಏಕೆ ಮಾಡಬೇಕೆಂದರೆ :—

ಅವರು ಆ ಪದ್ಯದಲ್ಲಿ ಕೊಟ್ಟಿರುವ "ನೀರಜಭವಾಂಡೋದಯ ಸ್ಥಿತಿ

ಕಾರಣನೇ " ಇತ್ಯಾದಿ ವಿಶೇಷಣಗಳೇ ಅವರ ಅಭಿಪ್ರಾಯವು ಮೂಲರೂಪ ವನ್ನೇ ನಮಸ್ಕರಿಸಿದುವೆಂಬು ಹೇಳಬಹುದು. ಹೇಗೆಂದರೆ, ಅವತಾರ ರೂಪ ಗಳಿಗೆ ಬ್ರಹ್ಮಾಂಡದ ಸೃಷ್ಟ್ಯಾದಿ ಕರ್ತೃತ್ವವು ಕೂಡುವುದಿಲ್ಲವು. ಇದೇ ವಿಷ ಯದಲ್ಲಿ ಭಾಗವತ ಪ್ರಥಮಸ್ಕಂಧದಲ್ಲಿ, ಶ್ರೀ ಕೃಷ್ಣನು ಹಸ್ತಿನಾವತಿಯಿಂದ ದ್ವಾರಕಾವತಿಗೆ ಹೋಗುವ ಸಂಧರ್ಭದಲ್ಲಿ ಬ್ರಾಹ್ಮಣರು ಪರಮಾತ್ಮನನ್ನು ಸ್ತೋತ್ರಮಾಡುವ ಸಂದರ್ಭದಲ್ಲಿ " ಅಶೂ್ರಯಂತಾಶಿಷಃ ಸತ್ಯಾಸ್ತತ್ರತತ್ರ ದ್ವಿಜೇರಿತಾಃ || ನಾನು ರೂಪಾನುರೂಪಾಶ್ಚ ನಿರ್ಗುಣಸ್ಯಗುಣಾತ್ಮನಃ || " ಇದರ ತಾತ್ಪರ್ಯವೇನೆಂದರೆ ಅಲ್ಲಲ್ಲಿ ಬ್ರಾಹ್ಮಣರ ಆಶೀರ್ವಚನ ರೂಪಗಳಾದ ಸ್ತೋತ್ರಗಳು ಶ್ರೀ ಕೃಷ್ಣನ ಕಿವಿಗಳಲ್ಲಿ ಬೀಳುತ್ತಿದ್ದವು. ದುಷ್ಟರನ್ನು ಸಂ ಹರಿಸು ! ಸಾಧುಗಳನ್ನುಪಾಲಿಸು ! ಎಂಬೀ ಮೊದಲಾದ ಆಶೀರ್ವಚನಗಳು ನಿರ್ಗುಣನಾದ ಅಂದರೆ ಬ್ರಹ್ಮಾಂಡದ ಹೊರಭಾಗವಲ್ಲಿ ವೈಕುಂಠವಾಸಿಯಾಗಿ ಸತ್ವಾದಿಗುಣಪ್ರವೃತ್ತಿಯಲ್ಲಿ ಉದಾಶೀನತೆಯನ್ನವಲಂಬಿಸಿದಮೂಲರೂಪಕ್ಕೆ ನಾಮರೂಪವಾಗಿತ್ತು. ಶ್ರೀ ಪರಮಾತ್ಮನು ಸೃಷ್ಟ್ಯಾದಿ ಕಾರ್ಯವನ್ನೇ ಆಗಲಿ, ದುಷ್ಟನಿಗ್ರಹ ಶಿಷ್ಟಪಾಲನಾದಿ ಕಾರ್ಯಗಳನ್ನಾಗಲಿ ಮಾಡಬೇಕಾದರೆ ಇಂತಹ ರೂಪದಿಂದಲೇ ಈ ಕಾರ್ಯವನ್ನು ಮಾಡುವೆನೆಂದು ಅವನ ಸಂಕಲ್ಪವಿ ರುವುದರಿಂದ ಅದಕ್ಕೆ ಅನ್ಯಥಾಮಾಡುವುದಿಲ್ಲ. ಒಂದಾವರ್ತಿ ಹುಬ್ಬುಹಾರಿ ಸೋಣಮಾತ್ರದಿಂದ ಸಕಲ ಜಗತ್ತನ್ನೂ ನಾಶಮಾಡುವಶಕ್ತಿ ಪರಮಾತ್ಮನಿಗೆ ಇದ್ದರೂಕೂಡ, ರಾಮಾವತಾರ ಮಾಡಿ ರಾವಣನ ಸಂಹಾರ ಮಾಡುವೆನೆಂತ ಲೂ, ಕೃಷ್ಣಾವತಾರದಿಂದಲೇ ಕಂಸಾದಿ ನಿಗ್ರಹಮಾಡುವನೆಂದೂ ಅವನ ಸಂಕಲ್ಪವು. ಅನ್ಯಥಾಮಾಡುವುದಿಲ್ಲ. ಆದುದರಿಂದ ಬ್ರಹ್ಮಾಂಡದ ಒಳಗಿನ ಅವತಾರರೂಪಾದಿಗಳು ಸತ್ವಾದಿ ಗುಣವನ್ನು ಉಪಾದಾನತ್ವೇನ ಸ್ವೀಕರಿಸಿ ದುಷ್ಟನಿಗ್ರಹಾದಿ ಕಾರ್ಯಗಳನ್ನು ಮಾಡುವ ರೂಪಗಳಾದುದರಿಂದ ಈ ಬ್ರಾ ಹ್ಮಣರ ಆಶೀರ್ವಚನವು ಕೃಷ್ಣಾದಿರೂಪಗಳಿಗೆ ಅನುಗುಣವಾಗಿದ್ದಿತು. ಎಂ ದು ಭಾಗವತ ಶ್ಲೋಕದ ತಾತ್ಪರ್ಯ. ಇದರಂತೆಯೇ ಹಿರಣ್ಯಕಶಿಪುವನ್ನು ಸಂಹರಿಸಿ, ಪ್ರಹ್ಲಾದನನ್ನು ಉದ್ಧಾರಮಾಡುವುದಕ್ಕೋಸ್ಕರ ಅವತರಿಸಿದ ನಾರಸಿಂಹರೂಪವು ಬ್ರಹ್ಮಾಂಡದ ಸೃಷ್ಟಿಸ್ಥಿತ್ಯಾದಿ ಕಾರ್ಯಗಳಿಗೆ ಅನು ರೂಪಗಳಾಗುವುದಿಲ್ಲ.

ಆದುದರಿಂದ ಇಲ್ಲಿ ದಾಸರಾಯರು ಹೇಳಿರುವ ನೀರಜಭವಾಂಡೋದಯಾದಿ ವಿಶೇಷಣಗಳು ಮೂಲರೂಪವನ್ನೇ ಹೇಳುವುವಾದುದರಿಂದ ದಾಸರಾಯರ ಅಭಿಪ್ರಾಯವು, ಮೂಲರೂಪವನ್ನೂ ಅವತಾರರೂಪವನ್ನೂ ಸೇರಿಸಿ ನಮಸ್ಕಾರ ಮಾಡಿದರೆಂದು ಈ ಪದ್ಯದಿಂದಲೇ ವ್ಯಕ್ತವಾಗುವುದು. "ನಮಿಪೆ" ( ನಮಸ್ಕಾರ ಮಾಡುವೆನು ) ಎಂಬ ಶಬ್ದದಿಂದ ನಮಸ್ಕಾರರೂಪವಾದ ಕರ್ಮಕ್ಕೆ ಪ್ರಾಧಾನ್ಯಕೊಟ್ಟಿರುವರು. "ಅಥಾತೋ ಬ್ರಹ್ಮಜಿಜ್ಞಾಸಾ", "ಸತ್ಯಂಪರಂಧೀಮಹಿ", "ಭರ್ಗೋದೇವಸ್ಯಧೀಮಹಿ" ಇತ್ಯಾದಿ ಬ್ರಹ್ಮಸೂತ್ರ, ಭಾಗವತ, ಗಾಯತ್ರ್ಯಾದಿಗಳಲ್ಲಿ ಧ್ಯಾನವೇ ಮುಕ್ತಿಸಾಧನವೆಂದು ಮಂಗಳಾಚರಣದಲ್ಲಿ ಧ್ಯಾನಕ್ಕೆ ಮಹಿಮೆ ಕೊಟ್ಟಿರುವರು. ಈ ಗ್ರಂಥದಲ್ಲಿ ಹಾಗೆ ಹೇಳದೆ ನಮಸ್ಕರಿಸುತ್ತೇನೆಂದು ನಮನಕ್ರಿಯಾಕ್ಕೆ ಪ್ರಾಧಾನ್ಯ ಕೊಡಲು ಕಾರಣವೇನೆಂದರೆ, ಅಧಿಕಾರಿಗಳ ಭೇದದಿಂದ ಕರ್ಮಭೇದಗಳಾಗುವುವು. ಬ್ರಹ್ಮಸೂತ್ರ, ಭಾಗವತಾದಿಗಳಿಗೆ ಮುಖ್ಯಾಧಿಕಾರಿಗಳು ದೇವತೆಗಳೆಂದು ಸೂಚಿಸಿರುವರು. ಭಾಗವತದಲ್ಲಿ "ನಿರ್ಮತ್ಸರಾಣಾಂ ಸತಾಂ ವೇದ್ಯಂ" ಎಂದು ಅಧಿಕಾರಿಯನ್ನು ಹೇಳುವಾಗ ತನಗಿಂತಲೂ ಉತ್ತಮರಲ್ಲಿ ಮಾತ್ಸರ್ಯ (ಹೊಟ್ಟೇಕಿಚ್ಚು) ಇಲ್ಲದವರಾರೋ ಅವರೇ ಅಧಿಕಾರಿಗಳೆಂದು ಹೇಳಿದುದರಿಂದ, ಸ್ವರೂಪ ಜ್ಞಾನವಿಲ್ಲದವರು, ಸ್ವೋತ್ತಮರು, ಸ್ವಾವರರೆಂದು ಕಾಣಲಾರರಾದುದರಿಂದಲೂ, ಆ ಸ್ವರೂಪ ಜ್ಞಾನವು, ದೇವಾಂಶರಿಗೇ ಹೊರತು, ಸಾಮಾನ್ಯ ಮನುಷ್ಯರಿಗೆ ಇರುವುದಿಲ್ಲವಾದಕಾರಣ, ದೇವತೆಗಳು ಅಥವ ದೇವಾಂಶಸಂಭೂತರಾದ ಮನುಷ್ಯೋತ್ತಮರೇ ಇದಕ್ಕೆ ಅಧಿಕಾರಿಗಳೆಂದು ಹೇಳಿದಂತಾಯಿತು. ಆದುದರಿಂದ ಭಾಗವತಾದಿಗಳಲ್ಲಿ ಹೇಳಿರುವ ಧ್ಯಾನವು ಉತ್ತಮಾಧಿಕಾರಿಗಳಾದ ಜ್ಞಾನಯೋಗಿಗಳಿಗೂ, ಭಕ್ತಯೋಗಿಗಳಿಗೂ, ಸಾಧ್ಯವಾದುದೇ ಹೊರತು, ಸಾಮಾನ್ಯಕರ್ಮಯೋಗಿಗಳಾದ ಮನುಷ್ಯರಿಗೆ "ಕರ್ಮಣಾ ಜ್ಞಾನಮಾಪ್ನೋತಿ" "ಕರ್ಮಣೈವಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ || ಕುರುಕರ್ಮೈವಕೌಂತೇಯ" ಇತ್ಯಾದಿ ಶೃತಿಸ್ಮೃತಿಗಳಿಂದ ನಮಸ್ಕಾರಾದಿ ಕರ್ಮಗಳೇ ಮುಖ್ಯವೆಂದು ಸೂಚಿಸಿ ತದನಂತರ ಕ್ರಮಕ್ರಮವಾಗಿ ಭಕ್ತಿಹೆಚ್ಚಿ, ಭಗವನ್ಮಹಿಮೆಯನ್ನು ತಿಳಿದು ಆಮೇಲೆ ಧ್ಯಾನಮಾಡಲ

ರ್ಹರಾಗುವರೆಂದು ಸೂಚಿಸುವುದಕ್ಕಾಗಿ "ನಮಿಪೆ" ಎಂಬ ಶಬ್ದವನ್ನು ಪ್ರ
ಯೋಗವಾಡಿರುವರು. ನಮುಸ್ಕಾರವೂ ಕೂಡ ಧ್ಯಾನವನ್ನು ಬಿಟ್ಟು ಆಗು
ವಾತಿಲ್ಲ ಹೇಗೆಂದರೆ—ನಮುಸ್ಕಾರವೆಂದರೆ ಸುಮ್ಮನೆ ಕೈಮುಗಿಯುವುದೂ, ಅ
ಡ್ಡಬೀಳುವುದೂ ಅಲ್ಲ. ಸಾಷ್ಟಾಂಗ ಪ್ರಣಾಮವೇ ನಮುಸ್ಕಾರವು. ಸಾಷ್ಟಾಂ
ಗವೆಂದರೆ "ಉರಸಾಶಿರಸಾದೃಷ್ಟ್ಯಾ ಮನಸಾ ವಚಸಾತಥಾ || ಪದ್ಭ್ಯಾಂ
ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಈರಿತಃ"|| ಎದೆಯನ್ನು, ಶಿರ
ಸ್ಸನ್ನು, ಪಾದಗಳನ್ನು ಕೈಗಳನ್ನು, ಮೊಣಕಾಲುಗಳನ್ನು ನೆಲದ ಮೇಲೆ
ಊರಿಕೊಂಡು, ದೃಷ್ಟಿಯಿಂದ ನೋಡುತ್ತಾ, ಮನಸ್ಸಿನಿಂದ ಧ್ಯಾನಿಸುತ್ತಾ,
ವಾಕ್ಯದಿಂದ ಸ್ತೋತ್ರವಾಡುತ್ತಾ ಮಾಡುವ ನಮುಸ್ಕಾರಕ್ಕೆ ಸಾಷ್ಟಾಂಗವೆಂ
ದುಹೆಸರು. ಮನುಷ್ಯೋತ್ತಮರಿಗೆ ಇದೇ ಮುಕ್ತಿಸಾಧನವು. ಈ ವಿಷಯ
ದಲ್ಲಿ ಶ್ರೀಮದಾಚಾರ್ಯರ ವಾಕ್ಯ:—

**ಏಕೋಽಪಿ ಕೃಷ್ಣಸ್ಯ ಸಕೃತ್ಪ್ರಣಾಮೋ ದಶಾಶ್ವ**
**ಮೇಧಾವಭೃತೇನತುಲ್ಯಃ ||**
**ದಶಾಶ್ವಮೇಧೀ ಪುನರೇತಿ ಜನ್ಮ ಕೃಷ್ಣಪ್ರಣಾಮೋ**
**ನಪುನರ್ಭವಾಯ ||**

ಇದರ ಅರ್ಥ:—ಒಂದು ನಮುಸ್ಕಾರವನ್ನಾದರೂ ಶ್ರೀ ಪರಮಾತ್ಮನ
ಉದ್ದೇಶವಾಗಿ ಸಾಷ್ಟಾಂಗ ವಿಧಿಪೂರ್ವಕವಾಗಿ ಭಕ್ತಿಯಿಂದ ಮಾಡಿದರೆ,
ಹತ್ತು ಅಶ್ವಮೇಧಯಾಗಗಳನ್ನು ಮಾಡಿ ಅವಭೃತಸ್ನಾನ ಮಾಡಿದವನಿಗೆ
ಯಾವ ಫಲ ಬರುವುದೋ ಆ ಫಲ ಬರುವುದು ಆದರೆ ಹತ್ತು ಅಶ್ವಮೇಧಯಾ
ಗ ಮಾಡಿದವನು ಸ್ವರ್ಗಕ್ಕೆ ಹೋಗಿ ಪುಣ್ಯ ಕ್ಷೀಣವಾಗುವವರೆವಿಗೂ ಇದ್ದು
ಪುನಃ ಭೂಮಿಯಲ್ಲಿ ಹುಟ್ಟುವನು. ಶ್ರೀಕೃಷ್ಣನಿಗೆ ನಮುಸ್ಕಾರ ಮಾಡಿದವ
ನು ಮುಕ್ತಿಯನ್ನು ಪಡೆದು, ದಶಾಶ್ವಮೇಧಿಯು ಸ್ವರ್ಗದಲ್ಲಿ ಅನುಭವಿಸುವ
ಸುಖವನ್ನು ಇವನು ಶಾಶ್ವತವಾಗಿ ಮುಕ್ತಿಯಲ್ಲಿ ಅನುಭವಿಸುತ್ತಾ ಇರುವನು.
ಇವನಿಗೆ ಪುನರ್ಜನ್ಮವಿಲ್ಲವೆಂದು ಈ ಶ್ಲೋಕದರ್ಥವು. ಹೀಗಿರುವುದರಿಂದ
ಮೊಟ್ಟಮೊದಲು ಧ್ಯಾನಾದಿಗಳಿಂದ ಕೂಡಿದ ನಮುಸ್ಕಾರಾದಿ ಕರ್ಮಗಳ
ನ್ನು ಮಾಡಿ ಭಗವದನುಗ್ರಹವನ್ನು ಪಡೆದು ಪರಮಾತ್ಮನು ಧ್ಯಾನ ಗೋ

ಚರನಾದಮೇಲೆ, ಧ್ಯಾನದಿಂದಲೇ ಮುಕ್ತಿಯನ್ನು ಪಡೆಯಬಹುದೆಂಬ ಭಾವನೆಯಿಂದ ದಾಸರಾಯರು ನಮಿಪೆ ಎಂದು ಹೇಳಿರುವರೆಂದು ಭಾವಿಸಬೇಕು. ಇದರ ಸಾರಾಂಶವೇನೆಂದರೆ, ಈ ಗ್ರಂಥವನ್ನು ಶ್ರವಣ ಪಠನಾದಿಗಳನ್ನು ಮಾಡಲುಪಕ್ರಮಿಸುವಾಗ, ನಮಸ್ಕಾರಾದಿ ಕರ್ಮಗಳನ್ನು ಮಾಡಿ ಭಗವದನುಗ್ರಹ ಪಡೆದು ಕ್ರಮಕ್ರಮವಾಗಿ ಮುಂದಿನ ಸಂಧಿಗಳನ್ನು ಪಠಿಸುತ್ತಾ ಬಂದರೆ, ಧ್ಯಾನ, ಜ್ಞಾನ ಫಲಿಸುವುವಲ್ಲದೆ, ಮೊದಲೇ ಧ್ಯಾನವು ಸಾಧ್ಯವಲ್ಲವೆಂದು ಅಭ್ಯಾಸವನ್ನು ತೋರಿಸುವುದಕ್ಕಾಗಿ, ಪ್ರಥಮಾಧಿಕಾರಿಗಳ ಉದ್ದಿಶ್ಯವಾಗಿ "ನಮಿಪೆ" ಶಬ್ದವನ್ನು ಪ್ರಯೋಗಮಾಡಿದರೆಂದು ಭಾವಿಸಬೇಕು. ಇದರಿಂದ ಈ ಮೆಟ್ಟಲುಗಳನ್ನು ಏರಿದವರೇ ಭಾಗವತಾದಿಗಳಿಗೆ ಅಧಿಕಾರಿಗಳೆಂದು ಸೂಚಿಸಿದಂತಾಯಿತು. ಆಗಲಿ! "ನಾರಸಿಂಹನೇ ನಮಿಪೆ" ಎಂಬಷ್ಟರಿಂದಲೇ ಮಂಗಳಾಚರಣೆಯಾದಂತಾಯಿತು. ಇನ್ನು ಈ ಪದ್ಯದಿಂದ ಪ್ರಯೋಜನವೇನು? ನಾರಸಿಂಹ ಶಬ್ದದಿಂದಲೇ ಭಗವನ್ಮಹಿಮೆ ತಿಳಿದಮೇಲೆ ಮತ್ತೂ ಚರ್ವಿತಚರ್ವಣವೇಕೆಂದರೆ:— ಶ್ರೀಪರಮಾತ್ಮನನ್ನು ಧ್ಯಾನಮಾಡಿ ನಮಸ್ಕಾರಾದಿಗಳನ್ನು ಮಾಡಬೇಕಾದರೆ ವಸ್ತುಜ್ಞಾನವು ಬೇಕಾಗುವುದು. ವಾಙ್ಮನೋ ಗೋಚರವಾದ ಭಗವದ್ರೂಪವನ್ನು ಧ್ಯಾನಿಸುವುದೆಂದರೆ ಹೇಗೆ? ಅದಕ್ಕೆ ಆ ಪರಮಾತ್ಮನ ಸ್ವರೂಪಜ್ಞಾನವು ಅವಶ್ಯಕ. ಸ್ವರೂಪಜ್ಞಾನವು ಉಪದೇಶಸಾಧ್ಯವು. ಹೇಗೆಂದರೆ:—ಒಬ್ಬನು ತಾನು ಎಂದೂ ಕಾಣದ ಹೊಸ ವಸ್ತುವೊಂದನ್ನು ಕಂಡರೆ ಅದನ್ನು ತಿಳಿದಿರುವ ಯಾವನನ್ನಾದರೂ ಕೇಳಿ ತಿಳಿದುಕೊಳ್ಳಬೇಕಾಗುವುದೇ ಹೊರತು ಸ್ವತಃ ತಿಳಿದುಕೊಳ್ಳಲು ಸಾಧ್ಯವಿಲ್ಲ. ಪದಾರ್ಥವನ್ನು ನಾವು ಕಾಣದಿದ್ದರೂ ಅದರ ಲಕ್ಷಣವನ್ನು ಯಾರಾದರೂ ಉಪದೇಶಮಾಡಿದರೆ ಆ ಲಕ್ಷಣದಿಂದಕೂಡಿದ ಪದಾರ್ಥವನ್ನು ನಾವು ನೋಡಿದ ಕಾಲದಲ್ಲಿ ಅವರು ಉಪದೇಶಮಾಡಿರುವ ಲಕ್ಷಣದಿಂದಕೂಡಿದ ಪದಾರ್ಥವು ಇದು ಎಂದು ನಿರ್ಧರಿಸಬಹುದು. ಉದಾಹರಣ:—ಹಸುವನ್ನು ನೋಡದಿರುವ ಮಗುವಿಗೆ ಒಂದು ಹಸುವನ್ನು ತೋರಿಸಿ ಇದೇ ಹಸುವೆಂದು ಹೇಳಿದರೆ ಆ ಮಗುವು ಆ ಹಸುವಿನ ಕೋಡನ್ನೋ, ಅಥವ ಕಪ್ಪು, ಕೆಂಪು ಮೊದಲಾದ ಬಣ್ಣವನ್ನೋ ಗುರ್ತಿಸಿ ಅದರ ಮೇಲಿಂದಲೇ ಹಸುವನ್ನು

ನಿರ್ಧರಿಸಿದ್ದರೆ, ಕೋಡುಳ್ಳ ಎಮ್ಮೆ ಮೊದಲಾದುವುಗಳನ್ನೋ, ಕೆಂಪು, ಕಪ್ಪು ಮೊದಲಾದ ಬಣ್ಣಗಳಿಂದ ಕೂಡಿದ ಕುದುರೆ ಮೊದಲಾದುವುಗಳನ್ನೋ ನೋಡಿ, ಇದು ಹಸುವೆಂದು ನಿರ್ಧಾರಮಾಡುವುದು. ಆದ್ದರಿಂದ ಹಸುವನ್ನು ತೋರಿಸುವುದಕ್ಕಿಂತಲೂ, ಯಾವ ಲಕ್ಷಣವನ್ನು ನಾವು ಉಪದೇಶ ಮಾಡಿದರೆ ಮಕ್ಕಳಾದರೂ ಇದು ಹಸುವೆಂದು ಗುರ್ತಿಸಬಲ್ಲರೋ ಯಾವ ಲಕ್ಷಣವು ಹಸು ಜಾತಿಯ ಹೊರತು ಮತ್ತೊಂದು ಜಾತಿಯ ಪಶುವಿನಲ್ಲಿ ಇರುವುದಿಲ್ಲವೋ ಅಂತಹ ಲಕ್ಷಣವನ್ನು ಉಪದೇಶಮಾಡಿದರೆ ಮಕ್ಕಳಾದರೂ ಹಸುವನ್ನು ಗುರ್ತಿಸಬಲ್ಲರು.

ಅದಾವುದು, ಅಂತಹ ಉಪದೇಶವೇನೆಂದರೆ :—" ಸಾಶ್ನಾದಿ ಮಾನ್ ಗೌಃ" ಯಾವ ಪಶುವಿನ ಕಂಠದಲ್ಲಿ ಗಂಗೆ ತೊಗಲೆಂಬ ಚರ್ಮವು ಜೋಲುತ್ತಿರುವುದೋ ಅದೇ ಹಸು ಎಂದು ಉಪದೇಶ ಮಾಡಿದರೆ ಈ ಲಕ್ಷಣವು ಗೋಜಾತಿಯನ್ನು ಬಿಟ್ಟು ಬೇರೆ ಜಾತಿಯ ಪಶುಗಳಿಗೆ ಇರುವುದಿಲ್ಲ. ಆದುದರಿಂದ ಯಾವನಾದರೂ ಈ ಗುರ್ತಿನಿಂದಲೇ ಹಸುವನ್ನು ಕಂಡು ಹಿಡಿಯಬಹುದು. ಇದರಂತೆ ಯಾವ ಲಕ್ಷಣವು ಪರಮಾತ್ಮನ ಸ್ವರೂಪವನ್ನೇ ತೋರಿಸುವುದೋ, ಪರಮಾತ್ಮನನ್ನು ಬಿಟ್ಟರೆ ಮತ್ತ್ಯಾರಲ್ಲೂ ಯಾವ ಲಕ್ಷಣವು ಇರುವುದಿಲ್ಲವೋ ಅಂತಹ ಲಕ್ಷಣವನ್ನು ಉಪದೇಶ ಮಾಡಿದರೆ ಈ ಲಕ್ಷಣಗಳುಳ್ಳವನು ಪರಮಾತ್ಮನೇ ಎಂದು ನಿಶ್ಚಯ ಜ್ಞಾನದಿಂದ ಪರಮಾತ್ಮನನ್ನು ಉಪಾಸನೆ ಮಾಡಬಹುದು. ಆದುದರಿಂದ, ಈಗ ದಾಸರಾಯರು "ಶ್ರೀರಮಣಿ ಕರಕಮಲ ಪೂಜಿತ" ಎಂಬ ಪದ್ಯದಿಂದ ಶ್ರೀ ಪರಮಾತ್ಮನ ಲಕ್ಷಣವನ್ನು ಹೇಳುತ್ತಾರೆ.

ದಾಸರಾಯರು ಪರಮಾತ್ಮನ ಲಕ್ಷಣವನ್ನು ಕೇವಲ ತಮ್ಮ ಬುದ್ಧಿಯಿಂದ ಕಲ್ಪಿಸಿ ಹೇಳಲಿಲ್ಲ. ಶ್ರೀ ವೇದವ್ಯಾಸದೇವರು ತಾವು ರಚಿಸಿದ ಬ್ರಹ್ಮಸೂತ್ರ ಭಾಗವತಾದಿಗಳಲ್ಲಿ ಯಾವ ಜಗಜ್ಜನ್ಮಾದಿ ಕಾರಣತ್ವ ಲಕ್ಷಣವನ್ನು "ಜನ್ಮಾದ್ಯಸ್ಯಯತಃ" ಎಂಬ ಸೂತ್ರದಿಂದಲೂ "ಜನ್ಮಾದ್ಯಸ್ಯ ಯತೋಽನ್ವಯಾತ್" ಎಂಬ ಶ್ಲೋಕದಿಂದಲೂ, ಹೇಳಿರುವರೋ ಅದೇ ಲಕ್ಷಣವನ್ನೇ ಇಲ್ಲಿಯೂ ಹೇಳಿರುವರು. ಅದೆಂತೆಂದರೆ :—" ನೀರಜಭವಾಂಡೋದಯಸ್ಥಿತಿ ಕಾರಣನೆ ಕೈವಲ್ಯದಾಯಕ" ಎಂಬ. "ಕೇವಲೋಽಖಗವಾಸ್ವಿ

ಷ್ಣುಃ ಕೈವಲ್ಯಂ ಪರಮಂಪದಂ" ॥ ಎಂದರೆ ಅನಾದ್ಯಂತ ಕಾಲವಾಗಿ ಪರಮಾತ್ಮನು ಸ್ವತಂತ್ರನಾಗಿ ತಾನೊಬ್ಬನೇ ಇರುವುದರಿಂದ ಕೇವಲನೆಂದು ಪರಮಾತ್ಮನಿಗೆ ಹೆಸರು. ಆತನು ವಾಸಮಾಡುವ ಲೋಕಕ್ಕೆ ಕೈವಲ್ಯವೆಂದು ಹೆಸರು. ಅಂದರೆ ವೈಕುಂಠಲೋಕವೆಂದು ತಿಳಿಯಬೇಕು. ಹಾಗೆಯೇ ಪ್ರಳಯದಲ್ಲಿಯೂ ಪರಮಾತ್ಮನೊಬ್ಬನೇ ವಾಸ ಮಾಡುವುದರಿಂದ ಪ್ರಳಯಕ್ಕೂ ಕೂಡ ಕೈವಲ್ಯವೆಂದು ಹೆಸರುಂಟು. ಇದರಿಂದ ಫಲಿತಾಂಶವೇನೆಂದರೆ:- ನೀರಜಭವಾಂಡೋದಯಸ್ಥಿತಿ ಕಾರಣನೆ ಎಂಬ ಪದದಿಂದ ಬ್ರಹ್ಮಾಂಡದ ಸೃಷ್ಟಿಗೂ, ಸಂರಕ್ಷಣೆಗೂ ಮಾತ್ರ ಪರಮಾತ್ಮನು ಕಾರಣನೆಂದು ತೋರುವುದು. ಪ್ರಳಯಕ್ಕೂ ಕಾರಣನು ಪರಮಾತ್ಮನೇ. ಆದುದರಿಂದ ಕೈವಲ್ಯದಾಯಕ ಎಂಬ ಪದದಿಂದ ಪ್ರಳಯ ಮಾಡತಕ್ಕವನೂ ಮುಕ್ತಿಯನ್ನು ಕೊಡುವವನೂ ಪರಮಾತ್ಮನೆಂದು ಹೇಳುವುದಕ್ಕಾಗಿ, ಒಂದೇ ಕೈವಲ್ಯ ಶಬ್ದವು, ಪ್ರಳಯಕ್ಕೂ ಮುಕ್ತಿಗೂ ಅರ್ಥವಾಗುವುದರಿಂದಲೇ ದಾಸರಾಯರು ಪ್ರತ್ಯೇಕವಾಗಿ ಪ್ರಳಯವನ್ನು ಹೇಳಲಿಲ್ಲವೆಂದು ತಿಳಿಯಬೇಕು. ಅಂತು "ಕೈವಲ್ಯದಾಯಕ" ಎಂಬ ಪದವನ್ನು ಎರಡಾವರ್ತಿ ಹೇಳಿ ಅರ್ಥ ಮಾಡಬೇಕೆಂಬ ಭಾವ. ! ಅಂತೂ ನೀರಜಭವಾಂಡವೆಂದರೆ, ಬ್ರಹ್ಮಾಂಡ, ಅದರ ಉದಯವೆಂದರೆ—ಸೃಷ್ಟಿ, ಸ್ಥಿತಿ ಎಂದರೆ ರಕ್ಷಣೆ. ನಾಶ (ಪ್ರಳಯ) ಮತ್ತೂ ಉಪಲಕ್ಷಣದಿಂದ, ನಿಯಮನ, ಜ್ಞಾನ, ಅಜ್ಞಾನ, ಬಂಧ ಮೋಕ್ಷಗಳೆಂಬ ಇವು ಐದನ್ನೂ ಸೇರಿಸಿಕೊಂಡು ಸೃಷ್ಟ್ಯಾದಿ ಎಂಟುವಿಧ ಕರ್ತೃತ್ವವೂ ಶ್ರೀ ಪರಮಾತ್ಮನದೆಂದು ಹೇಳಬೇಕು. ಅಷ್ಟಕರ್ತೃತ್ವವೇಕೆ ಹೇಳಬೇಕೆಂದರೆ ಬ್ರಹ್ಮಸೂತ್ರಭಾಷ್ಯದಲ್ಲಿ ಶ್ರೀಮದಾಚಾರ್ಯರು "ಉತ್ಪತ್ತಿ, ಸ್ಥಿತಿಸಂಹಾರ ನಿಯತಿಜ್ಞಾನಸಮಾವೃತಿಃ। ಬಂಧಮೋಕ್ಷೌ ಚ ಪುರುಷಾದ್ಯಸ್ಮಾತ್ಸಹರಿರೇಕರಾಟ್" ಎಂದು ಹೇಳಿರುವರು.

ಈ ಆಧಾರದಿಂದಲೇ ಅಷ್ಟಕರ್ತೃತ್ವವು ಪರಮಾತ್ಮನಿಗೇ ಉಂಟೆಂದು ನಿರ್ಧರಿಸಬೇಕು. ಹಾಗಾದರೆ ದಾಸರಾಯರು, ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾತ್ರವೇ ಹೇಳಿರುವರು. ಅಷ್ಟಕರ್ತೃತ್ವವನ್ನೇಕೆ ಹೇಳಲಿಲ್ಲವೆಂದರೆ ಮುಖ್ಯವಾದ ಸೃಷ್ಟಿ, ಸ್ಥಿತಿ, ಸಂಹಾರ ಕರ್ತೃತ್ವವು ಪರಮಾತ್ಮನದೆಂದು ಯಾವಾಗ ಸ್ಥಿರಪಡಿಸಿದೆವೋ ಆಗ ನಿಯಮನಾದಿಗಳೆಲ್ಲವೂ ಸ್ವತಃ ಪರಮಾತ್ಮನದೆಂದೇ

ಸಿದ್ಧವಾಯಿತೆಂಬ ಭಾವನೆಯಿಂದ ಬಿಟ್ಟಿರುವರು. ಹಾಗಾದರೆ ಶ್ರೀಮದಾ ಚಾರ್ಯರು ಏಕೆ ಬೇರೆ ಹೇಳಿರುವರೆಂದರೆ, ಎಲ್ಲಿಯಾದರೂ ಒಂದು ಕಡೆಯಲ್ಲಿ ಅದನ್ನು ಹೇಳದಿದ್ದರೆ ನಿಯಮನಾದಿಗಳಿಗೆ ಮತ್ಯಾರಾದರೂ ಕಾರಣರು ಬೇರೆ ಇರುವರೋ ಏನೋ ಎಂಬ ಸಂಶಯವು ಬಂದೀತೆಂಬ ಭಾವನೆಯಿಂದ ಶ್ರೀಮದಾಚಾರ್ಯರು ಸ್ಪಷ್ಟವಾಗಿ ಹೇಳಿರುವರು. ಅದಂತಿರಲಿ, ಜಗಜ್ಜನ್ಮಾದಿ ಕಾರಣನು ಪರಮಾತ್ಮನೇ ಎಂದು ಯಾವ ಆಧಾರದ ಮೇಲೆ ಹೇಳಬೇಕು? ಎಂದರೆ ಯಾವುದಾದರೂ ಒಂದು ಸಿದ್ಧಾಂತವನ್ನು ಮಾಡಬೇಕಾದರೆ, ಪ್ರತ್ಯಕ್ಷ, ಅನುಮಾನ, ಆಗಮ ಎಂಬ ಮೂರು ಆಧಾರಗಳ ಮೇಲೆ ಮಾಡುವರು. ಈಗ ಪ್ರತ್ಯಕ್ಷವಾಗಿ ಕಾಣುವುದು ಜಗತ್ತು. ಇದನ್ನು ಸೃಷ್ಟಿಸಿದವನು ಯಾವನೋ ಒಬ್ಬನು ಇರಬೇಕೆಂಬ ಅನುಮಾನ. ತಂದೆತಾಯಿಗಳ ಹೊರತು ಮಕ್ಕಳಾಗುವುದಿಲ್ಲವೆಂತಲೂ, ಕಟ್ಟದ ಹೊರತು ಮನೆಯಾಗುವುದಿಲ್ಲವೆಂತಲೂ ನಮ್ಮ ಅನುಭವದಿಂದ ಗೊತ್ತಾಗಿದೆ. ಒಬ್ಬ ಮನುಷ್ಯನನ್ನೋ, ಮನೆಯನ್ನೋ ನೋಡಿ ಇವನಿಗೆ ತಂದೆ ತಾಯಿಗಳಿರಬೇಕು. ಈ ಮನೆಯನ್ನು ಕಟ್ಟಿಸಿದವನೊಬ್ಬನಿರಬೇಕು ಎಂದು ಅನುಮಾನ ಹುಟ್ಟುವುದು. ಹಾಗೆಯೇ ಪ್ರತ್ಯಕ್ಷವಾದ ಜಗತ್ತನ್ನು ನೋಡಿದರೂ ಸೃಷ್ಟಿಕರ್ತನೊಬ್ಬನಿರಬೇಕೆಂದು ಅನುಮಾನ ಹುಟ್ಟುವುದು. ಇದನ್ನು ನಿರ್ಣಯಮಾಡಬೇಕಾದರೆ ಆಪ್ತರ ವಾಕ್ಯ ಬೇಕು. ಇದಕ್ಕೆ ಶೃತಿ ಸ್ಮೃತಿ ಮೊದಲಾದ ಪ್ರಮಾಣಗಳೇ ಆಪ್ತವಾಕ್ಯಗಳು ಶ್ರೀಪರಮಾತ್ಮನಿಗೆ ಜಗಜ್ಜನ್ಮಾದಿ ಕಾರಣತ್ವವನ್ನು ನಿರೂಪಿಸುವುದಕ್ಕೆ ಆಗಮಗಳೇ ಪ್ರಮಾಣವಾಗಿರುವುವು. ಅವು ಯಾವುವೆಂದರೆ :---"ಯತೋವಾ ಇಮಾನಿಭೂತಾನಿ ಜಾಯಂತೆ | ಯೇನಜಾತಾನಿ ಜೀವಂತಿ ಯತ್ಪ್ರಯಂತ್ಯಭಿಸಂವಿಶಂತೀತಿ ||" "ಅಹಂಸರ್ವಸ್ಯಪ್ರಭವೋ ಮತ್ತಸ್ಸರ್ವಂ ಪ್ರವರ್ತತೆ | ಪ್ರಸ್ಥಾನಾತ್ತಾ ತಥೈವಾತಾ ನಿಖಿಲಸ್ಯೈಕ ಏವತು |" ಇತ್ಯಾದಿ ಶೃತಿ ಸ್ಮೃತಿಗಳೇ ಇದಕ್ಕೆ ಆಧಾರವಾಗಿರುವುವು. ಹಾಗಾದರೆ ಇದೇ ಆಗಮಗಳಲ್ಲೇ ಬ್ರಹ್ಮದೇವರು ಸೃಷ್ಟಿಕರ್ತರೆಂತಲೂ, ರುದ್ರದೇವರು ಸಂಹಾರಕರ್ತರೆಂತಲೂ ಹೇಳುವುದು. ಇದರಲ್ಲಿ ಯಾವ ಆಗಮವು ಪ್ರಮಾಣವು? ಯಾವದು ಅಪ್ರಮಾಣವು. ಎಂದರೆ, ಶೃತಿಸ್ಮೃತಿಗಳಲ್ಲಿ ಅತ್ಯಲ್ಪ ಭಾಗಗಳು ಮಾತ್ರವೇ ಹಾಗೆ ಹೇಳು

ಥುವು. ಅನೇಕ ಶ್ರುತಿಸ್ಮೃತಿಗಳು ಶ್ರೀಮನ್ನಾರಾಯಣನೇ ಸೃಷ್ಟ್ಯಾದಿ ಕರ್ತನೆಂದೂ, ಸರ್ವೋತ್ತಮನೆಂದೂ, ವೇದಪ್ರತಿಪಾದ್ಯನೆಂದೂ ಹೇಳುವುವು. ಒಂದೆರಡು ವೇದಗಳಲ್ಲಿ ಬ್ರಹ್ಮರುದ್ರಾದಿಗಳಿಗೆ ಹೇಳುವ ನಿರತಿಶಯವಾದ ಮಹಿಮೆಯು ಆ ಹೆಸರಿನಿಂದ ಕೂಡಿದ ಶ್ರೀಮನ್ನಾರಾಯಣನನ್ನೇ ಹೇಳುವುದೇ ಹೊರ್ತು ಪರಮಾತ್ಮನ ನಾಭಿಕಮಲದಿಂದ ಜನಿಸಿದ ಬ್ರಹ್ಮದೇವರನ್ನಾಗಲಿ, ಅಥವ ಆತನ ಹುಬ್ಬಿನ ದೆಸೆಯಿಂದ ಹುಟ್ಟಿದ ರುದ್ರದೇವರನ್ನಾಗಲಿ ಹೇಳುವುದಿಲ್ಲ. ಈ ವಿಷಯದಲ್ಲಿ ಶ್ರುತಿ ಸ್ಮೃತಿಗಳ ಆಧಾರಗಳಿರುವುವು. ಅವುಗಳಾವುವೆಂದರೆ :—" ಯೋದೇವಾನಾಂ ನಾಮಧಾಏಕಏವ|| " ಬ್ರಹ್ಮಾ ರುದ್ರೇಂದ್ರಾದಿ ಎಲ್ಲಾ ದೇವತೆಗಳ ನಾಮಧೇಯದಿಂದ ಕೂಡಿರುವವನೊಬ್ಬನು ತಾನೇ ತಂದೆಯಾಗಿಯೂ, ತಾಯಿಯಾಗಿಯೂ ಸಕಲ ಜಗತ್ಸೃಷ್ಟಿ ಕರ್ತನಾಗಿಯೂ, ಸಂಹಾರಕರ್ತನಾಗಿಯೂ, ಇರುವನೋ ಅಂತಹವನನ್ನು ನಮಸ್ಕರಿಸುವೆವು. " ರುಜಂದ್ರಾವಯತೇ ಯಸ್ಮಾದ್ರುದ್ರ ಇತ್ಯಭಿಶಬ್ದ್ಯತೆ " ರೋಗವನ್ನು ಪರಿಹರಿಸುವನಾದುದರಿಂದ ಪರಮಾತ್ಮನಿಗೇ ರುದ್ರನೆಂದು ಹೆಸರು. ಬೃಹ್‌ಪೂರ್ಣಾವಿತ್ಯಸ್ಮಾದ್ಬ್ರಹ್ಮತೋಃ ಪೂರ್ಣಗುಣನಾದುದರಿಂದ ಬ್ರಹ್ಮನೆಂದೂ ಹೆಸರು. " ಬ್ರಹ್ಮ ವಿಷ್ಣ್ವೀಶರ ರೂಪಾಣಿ ತ್ರೀಣಿ ವಿಷ್ಣೋರ್ಮಹಾತ್ಮನಃ ಬ್ರಹ್ಮಣಿ ಬ್ರಹ್ಮರೂಪಸ್ಸ್ಯ ಶಿವರೂಪೀ ಶಿವೇ ಸ್ಥಿತಃ " ಶ್ರೀ ವಿಷ್ಣುವಿಗೆ ಬ್ರಹ್ಮಾ, ವಿಷ್ಣು, ಮಹೇಶ್ವರ ಎಂಬ ಮೂರು ರೂಪಗಳುಂಟು. ಚತುರ್ಮುಖ ಬ್ರಹ್ಮ ದೇವರಲ್ಲಿ ಬ್ರಹ್ಮ ನಾಮಕನಾದ ಪರಮಾತ್ಮನು ಇದ್ದು ಸೃಷ್ಟಿಯನ್ನು ಮಾಡುವನು. ರುದ್ರ ನಾಮಕನಾದ ಪರಮಾತ್ಮನು ರುದ್ರ ದೇವರಲ್ಲಿ ಇದ್ದು ಸಂಹಾರ ಮಾಡುವನು. ಆದುದರಿಂದಲೇ ಬ್ರಹ್ಮದೇವರು ಸೃಷ್ಟಿಕರ್ತನೆಂತಲೂ, ರುದ್ರದೇವರು ಸಂಹಾರಕರ್ತನೆಂತಲೂ ಶ್ರುತಿ ಸ್ಮೃತಿಗಳಲ್ಲಿ ಹೇಳುವುದು. ಇಂತಹ ಅನೇಕ ಪ್ರಮಾಣಗಳಿಂದ ಪರಮಾತ್ಮನನ್ನು ವೇದಗಳು ಬ್ರಹ್ಮ ರುದ್ರಾದಿ ಶಬ್ದವಾಚ್ಯನೆಂದು ಸ್ತುತಿಸುವುವೆಂದು ಸಿದ್ಧವಾಗುವುದು ಸರ್ವ ಶಬ್ದವಾಚ್ಯನಾದ ಶ್ರೀ ಪರಮಾತ್ಮನು ನಾರಾಯಣಾದಿ ಕೆಲವು ನಾಮಗಳನ್ನು ಮಾತ್ರ ತಾನು ಇಟ್ಟುಕೊಂಡು ಉಳಿದ ಬ್ರಹ್ಮ ರುದ್ರ ಮೊದಲಾದ ತನ್ನ ನಾಮಗಳನ್ನೇ ಇತರ ದೇವತೆಗಳಿಗೆ ಕೊಟ್ಟಿರುವುದರಿಂದ ಮುಖ್ಯವಾಗಿ ಬ್ರಹ್ಮ ರುದ್ರಾದಿ ಹೆಸರು

ಗಳು ಪರಮಾತ್ಮನವು ಎಂತಲೂ, ಅಮುಖ್ಯಕರಾದ ಬ್ರಹ್ಮಾದಿಗಳಿಗೆ ಆ ಹೆಸ
ರು ಬಂದಿರುವುವೆಂತಲೂ ತಿಳಿಯಬೇಕು. ಈ ವಿಷಯವನ್ನು ಬ್ರಹ್ಮಸೂತ್ರ
ಭಾಷ್ಯದಲ್ಲಿ ಶ್ರೀಮನ್ಮಧ್ವಾಚಾರ್ಯರು ವಿಸ್ತಾರವಾಗಿ ಹೇಳಿರುವರು. ಮತ್ತು
"ಕೈವಲ್ಯದಾಯಕ" ಅಂದರೆ ಮೋಕ್ಷವನ್ನು ಕೊಡುವವನು ಎಂಬ ವಿಶೇಷ
ಣದಿಂದ ಈ ಅಧಿಕಾರವು ವಿಷ್ಣು ಒಬ್ಬನಿಗೆ ಹೊರತು ಮತ್ಯಾವ ದೇವತೆಗಳಿ
ಗೂ ಇಲ್ಲ "ವಿಷ್ಣುರ್ಹಿದಾತಾಮೋಕ್ಷಸ್ಯ ವಾಯುಸ್ತುತದನುಜ್ಞಯಾ"
ಅಂದರೆ ಮುಕ್ತಿಯನ್ನು ಕೊಡುವವನು ಒಬ್ಬನೇ. ವಿಷ್ಣುವಿನ ಅಪ್ಪಣೆ ಪಡೆ
ದು ವಾಯುದೇವರು ಕೊಡುವರು ಎಂಬೀ ಪ್ರಮಾಣದಿಂದ ಪರಮಾತ್ಮನೇ
ಸರ್ವೋತ್ತಮನೆಂತಲೂ ಜಗಜ್ಜನ್ಮಾದಿ ಕಾರಣನೆಂತಲೂ ಸಿದ್ಧವಾದರೂ
ದಾಸರಾಯರು ವಿಶೇಷಣಾಂತರದಿಂದಲೂ ಕೂಡ ವಿಷ್ಣುವು ಸರ್ವೋತ್ತಮನು
ನೆಂದು ಸ್ಥಾಪನೆ ಮಾಡುತ್ತಾರೆ :—"ಬ್ರಹ್ಮಸಮೀರವಾಣಿ ಫಣೀಂದ್ರವೀಂ
ದ್ರ ಭವೇಂದ್ರಮುಖವಿನುತ" ಹೀಗೆ ಬ್ರಹ್ಮಾದಿ ಸಕಲ ದೇವತೆಗಳಿಂದ
ನಮಸ್ಕಾರ ಮಾಡಿಸಿಕೊಳ್ಳಲ್ಪಟ್ಟವನು ಎಂಬ ವಿಶೇಷಣದಿಂದ ಶ್ರೀ ವಿಷ್ಣು
ವಿಗೆ ಸರ್ವೋತ್ತಮತ್ವವನ್ನು ಸ್ಥಾಪನೆ ಮಾಡಿದಂತಾಯಿತು. ಭಾಗವತ
ದ್ವಾದಶ ಸ್ಕಂಧದಲ್ಲಿ ಹೇಳಿರುವ "ಎಂ ಬ್ರಹ್ಮಾವರುಣೇಂದ್ರ ರುದ್ರಮರುತ
ಸ್ತುನ್ವಂತಿ ದಿವ್ಯೈಸ್ತವೈಃ" ಎಂಬೀ ವಚನವು ಇವಕ್ಕೆ ಆಧಾರವಾಗಿರುವುದು.
ಮತ್ತು ದ್ವಿತೀಯ ಸ್ಕಂಧದಲ್ಲಿ ಬ್ರಹ್ಮದೇವರು ತನ್ನ ಪ್ರಿಯ ಪುತ್ರರಾದ ನಾ
ರದರಿಗೆ ಉಪದೇಶ ಮಾಡುವ ಸಂದರ್ಭದಲ್ಲಿ ಈ ಕೆಳಗೆ ಕಂಡಂತೆ ಹೇಳಿರು
ವರು. "ಸೃಜಾಮಿ ತನ್ನಿಯುಕ್ತೋಽಹಂ ಹರೋಹರತಿ ತದ್ವಶಃ || ವಿಶ್ವಂಪು
ರುಷರೂಪೇಣ ಪರಿಪಾತಿತ್ರಿಶಕ್ತಿಧೃಕ್" ನಾನು ಆ ಪರಮಾತ್ಮನ ವಶದಲ್ಲಿ
ದ್ದು ಸೃಷ್ಟಿಸುವೆನು. ರುದ್ರನೂ ಅವನ ವಶದಲ್ಲಿದ್ದು ಸಂಹರಿಸುವನು.
ವಿಷ್ಣುವು ಸ್ವಯಂ ಪುರುಷ ರೂಪದಿಂದ ಪರಿಪಾಲಿಸುವನು. ಹೀಗೆ ಸೃಷ್ಟಿ,
ಸ್ಥಿತಿ, ಸಂಹಾರವೆಂಬ ಮೂರು ವಿಧ ಶಕ್ತಿಯೂ ಪರಮಾತ್ಮನದೇ ಆಗಿರು
ವುವು. ಎಂದರೆ—ನನ್ನೊಳಗಿದ್ದು ಸೃಷ್ಟಿ ಮಾಡುವವನೂ, ರುದ್ರನಲ್ಲಿದ್ದು
ಸಂಹಾರ ಮಾಡುವವನೂ ಆತನೇ. ಆದುದರಿಂದ ಈ ಮೂರು ಕರ್ತೃತ್ವ
ಶಕ್ತಿಯೂ ಪರಮಾತ್ಮನದೇ ಎಂದು ತಿಳಿ. "ನಾಹಂ, ನಯೂಯಂಬತತದ್ಗ
ತಿಂ ವಿದುರ್ನವಾಮದೇವಃ ಕಿಮುತಾಪರೇಸುರಾಃ || ಯನ್ಮಾಯಯಾ ಮೋ

ಹಿತ ಬುದ್ಧಯಸ್ತ್ವದಂ ವಿನಿರ್ಮಿತಂ ಸ್ವಾತ್ಮಸಮಂ ವಿಚಕ್ಷ್ಮಹೇ" || ನಾನು ಆ ಭಗವತ್ಸ್ವರೂಪವನ್ನು ಸಾಕಲ್ಯೇನ ತಿಳಿಯಲಾರೆನು. ನೀನೂ ತಿಳಿಯಲಾರೆ. ವಾಮದೇವನು ಅಂದರೆ ರುದ್ರದೇವನೂ ತಿಳಿಯಲರಿಯನು. ಇಂತಿಂಥವರೆಲ್ಲಾ ಹೀಗಾದಮೇಲೆ ಇನ್ನು ಮಿಗಿಲಾದ ದೇವತೆಗಳು ಏನು ಬಲ್ಲರು. ಅವನ ಬಂಧಕ ಶಕ್ತಿಯಿಂದ ಮೋಹಿತರಾಗಿ ಅವನಿಂದ ನಿರ್ಮಿತವಾದ ಈ ಪ್ರಪಂಚವನ್ನು ಅವನಿಗೆ ಸಮವಾಗಿ ಭಾವಿಸುವೆವು ; ಅಥವಾ ಇದನ್ನು ನಿರ್ಮಿಸಿದ ಭಗವಂತನನ್ನು "ಸ್ವಾತ್ಮಸಮಂ ವಿಚಕ್ಷ್ಮಹೇ" ನಮ್ಮ ನಮ್ಮ ಯೋಗ್ಯತಾನುಸಾರವೇ ತಿಳಿಯುವೆವು. ಹೀಗೆ ಬ್ರಹ್ಮದೇವರು ತನ್ನ ಪುತ್ರರಾದ ನಾರದರಿಗೆ ಉಪದೇಶ ಮಾಡಿದುದರಿಂದ ಈ ವಚನಗಳೇ ಪರಮಾತ್ಮನು ಬ್ರಹ್ಮಾದಿ ವಂದ್ಯನು ಎನ್ನುವುದಕ್ಕೆ ಆಧಾರವಾಗಿರುವುವು. ಇದಲ್ಲದೆ ಮತ್ತೊಂದು ವಿಶೇಷಣವನ್ನು ಇದೇ ವಿಷಯದಲ್ಲಿ ದಾಸರಾಯರು ಉದಹರಿಸಿರುತ್ತಾರೆ— "ಶ್ರೀರಮಣೀ ಕರಕಮಲಪೂಜಿತ ಚಾರುಚರಣ ಸರೋಜ" ಎಂದು. ಈ ವಿಶೇಷಣವು ಲಕ್ಷ್ಮೀವಲ್ಲಭನಿಗೇ ಹೊರತು ಅನ್ಯರಿಗೆ ಸಲ್ಲದು. ತನ್ನ ಹೆಂಡತಿಯಾದ ಶ್ರೀಲಕ್ಷ್ಮೀದೇವಿಯಿಂದ ಪೂಜಿತವಾದ ಮನೋಹರವಾದ ಪಾದಗಳುಳ್ಳವನು—ಎಂಬೀ ವಿಶೇಷಣವು ಬ್ರಹ್ಮಾದಿ ವಂದ್ಯತ್ವವನ್ನು ಸ್ಪಷ್ಟ ಮಾಡುವುದು. ಹೇಗೆಂದರೆ—ಅಂಭೃಣೀ ಸೂಕ್ತದೊಳಗಿನ ಲಕ್ಷ್ಮೀದೇವಿಯ ವಾಕ್ಯ. "ಯಂ ಕಾಮಯೇತಂ ತಮುಗ್ರಂ ಕೃಣೋಮಿತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಂ" ಅಂದರೆ ಯಾವ ಪುರುಷನನ್ನು ರುದ್ರನನ್ನಾಗಿ ಮಾಡಬೇಕೆಂದು ನನಗೆ ಇಚ್ಛಾ ಹುಟ್ಟುವುದೋ ಅವನನ್ನು ರುದ್ರನನ್ನಾಗಿ ಮಾಡುವೆನು. ಯಾವನನ್ನು ಬ್ರಹ್ಮನನ್ನಾಗಿ ಮಾಡಬೇಕೆಂದು ತೋರುವುದೋ ಅವನನ್ನು ಬ್ರಹ್ಮನನ್ನಾಗಿ ಮಾಡುವೆನು. ಹೀಗೆ ಲಕ್ಷ್ಮೀದೇವಿಯದು ತಮಗೆ ಬ್ರಹ್ಮ ರುದ್ರಾದಿಗಳನ್ನು ಸೃಷ್ಟಿ ಮಾಡುವ ಯೋಗ್ಯತೆ ಇದೆ ಎಂದು ಹೇಳಿಕೊಂಡು ಕಡೆಗೆ "ಮಮಯೋನಿರಪ್ಸ್ವಂತಸ್ಸಮುದ್ರೇ" ಇಂತಹ ನನಗೆ ಕಾರಣಭೂತನಾದವನು ಸರ್ವಾಂತರ್ಯಾಮಿಯಾಗಿಯೂ, ಕ್ಷೀರ ಸಮುದ್ರಶಾಯಿಯೂ ಆದ ಶ್ರೀ ಪರಮಾತ್ಮನು, ಆತನ ಅನುಗ್ರಹದಿಂದಲೇ ನನಗೆ ಈ ಶಕ್ತಿಯು ಉಂಟಾದುದು ಎಂದು ಹೇಳಿಕೊಂಡಿರುವರು. ಇಂತಹ ಬ್ರಹ್ಮರುದ್ರಾದಿಗಳನ್ನು ಸೃಷ್ಟಿ ಮಾಡಲು ಯೋಗ್ಯತೆಯುಳ್ಳ ರಮಾ ದೇವಿಯರಿಂದ

ಪೂಜಿತಗಳಾದ ಪಾದ ಕಮಲಗಳುಳ್ಳವನೆಂದ ಮೇಲೆ ಹರಿ ಸರ್ವೋತ್ತಮನು ಎಂಬ ವಿಷಯದಲ್ಲಿ ಬೇರೆ ಆಧಾರವು ಮತ್ತೇನು ಬೇಕು ?

ಇಂತಹಾ ಗುಣಪೂರ್ಣನಾದ, ಮುಕ್ತಾಶ್ರಯನೂ, ದೋಷದೂರನೂ ಆದ ಶ್ರೀಮನ್ನಾರಾಯಣನೇ ! ನಾನು ನಿನ್ನನ್ನು ನಮಸ್ಕರಿಸುವೆನು. ನನಗೆ ಮಂಗಳವನ್ನು ಕರುಣಿಸು ಎಂಬುದು ಈ ಶ್ಲೋಕದ ಭಾವಾರ್ಥವು.

ಭಾಗವತದ ಮಂಗಳಾಚರಣ ರೂಪವಾದ " ಜನ್ಮಾದ್ಯಸ್ಯ ಯತೋನ್ವಯಾದಿತರತಃ " ಎಂಬ ಶ್ಲೋಕದಲ್ಲಿ ಯಾವ ಅರ್ಥವನ್ನು ಹೇಳಿರುವರೋ, ಅದೇ ಅರ್ಥವನ್ನೇ ವಿಸ್ತಾರ ಮಾಡುತ್ತಾ ಶ್ರೀಮದಾಚಾರ್ಯರು ಭಾಗವತ ತಾತ್ಪರ್ಯದ ಮಂಗಳಾಚರಣ ಶ್ಲೋಕವನ್ನು ರಚಿಸಿರುವರು. ಅದಾವುದೆಂದರೆ-

" ಸೃಷ್ಟಿಸ್ಥಿತ್ಯಪ್ಯಯೇಹ ನಿಯತಿವಿಶಿತಮೋ
ಬಂಧ ಮೋಕ್ಷಾಶ್ಚ ಯಸ್ಮಾದಸ್ಯ ಶ್ರೀಬ್ರಹ್ಮ
ರುದ್ರಪ್ರಭೃತಿಸುರನರದ್ವೇಶ ತತ್ಪ್ರಾತ್ಮ ಕಸ್ಯ ||
ವಿಷ್ಣೋರ್ವ್ಯಸ್ತಾಃ ಸಮಸ್ತಾಃ ಸಕಲಗುಣನಿಧಿಃ ಸರ್ವ
ದೋಷವ್ಯಪೇತಃ ಪೂರ್ಣಾನಂದೋವ್ಯಯೋ
ಯೋಗುರುರಪಿ ಪರಮಶ್ಚಿಂತಯೇ ತಂಮಹಾಂತಂ || "

ಇದರ ಅರ್ಥವೇನೆಂದರೆ :—ಬ್ರಹ್ಮ, ರುದ್ರ ಮೊದಲಾದ ದೇವತೆಗಳೂ, ಮನುಷ್ಯರುಗಳೂ, ದೈತ್ಯರೂ ಮತ್ತು ಇವರುಗಳಿಂದ ಕೂಡಿದ, ಚೇತನಾಚೇತನಾತ್ಮಕವಾದ ಈ ಪ್ರಪಂಚಕ್ಕೆ, ಯಾವ ಶ್ರೀಪರಮಾತ್ಮನಿಂದ, ಸೃಷ್ಟಿ, ಸ್ಥಿತಿ, ಪ್ರಳಯ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳೆಂಬ ವಿವಿಧ ವ್ಯಾಪಾರಗಳೂ ಅವರವರ ಯೋಗ್ಯತಾನುಸಾರ ಸಾಕಲ್ಯದಿಂದಲೂ, ಸಂಕೋಚದಿಂದಲೂ ಆಗುತ್ತಿರುವುವೋ, ಯಾವನು ಸಕಲ ಗುಣಗಳಿಗೆ ನಿಧಿಯಾಗಿರುವನೋ, ಸರ್ವದೋಷರಹಿತನೊ , ಸಕಲ ಜಗದ್ಗುರುವೋ, ಸರ್ವೋತ್ತಮನೋ ಅಂತಹ ಮಹಾತ್ಮನನ್ನು ಧ್ಯಾನಿಸುವೆನು ಎಂದು.

ಇದೇ ಅರ್ಥವನ್ನೇ ಒಂದಕ್ಷರವನ್ನೂ ಬಿಡದೆ ಶ್ರೀ ದಾಸರಾಯರೂ ತಾವು ರಚಿಸಿರುವ ಈ ಗ್ರಂಥಾರಂಭದಲ್ಲಿ ಆಚಾರ್ಯರ ವಾಕ್ಯಕ್ಕೇ ವ್ಯಾಖ್ಯಾನರೂಪವಾಗಿ ರಚಿಸಿರುವರು.

"ಶ್ರೀರಮಣೀ ಕರಕಮಲ ಪೂಜಿತ" ಎಂಬೀ ಪದದ ವ್ಯಾಖ್ಯಾನವನ್ನು ನೋಡಿದರೆ ಈ ಅರ್ಥಾಂದಿಂದಲೇ ಅದರ ವ್ಯಾಖ್ಯಾನವು ಬರೆಯಲ್ಪಟ್ಟಿದೆ ಎಂದು ಸ್ವತಃ ಸ್ಫೂರ್ತಿಗೆ ಬರುವುದು, ಮತ್ತೂ ನಾವು ಈ ಶ್ಲೋಕಾರ್ಥವನ್ನೂ ಪದ್ಯಾರ್ಥವನ್ನೂ ಹೋಲಿಸಿ ಬರೆಯುವುದರಿಂದ ಗ್ರಂಥ ಬಾಹುಳ್ಯವೂ ಚರ್ವಿತ ಚರ್ವಣವೂ ಆಗುವುದೆಂದು ಇಲ್ಲಿ ಬರೆಯಲಿಲ್ಲ. ಇದಲ್ಲದೆ ಗಾಯತ್ರಿಯು ವೇದಗಳಿಗೆ ಮಾತೃ ಸ್ಥಾನೀಯವಾಗಿರುವುದು. ಆ ವೇದಾಂತ್ಯಾರ್ಥಗಳೆಲ್ಲವೂ ಸಹ ಈ ಗ್ರಂಥದಲ್ಲಿಯೇ ಇದೆ ಎಂಬುವುದನ್ನು ಸೂಚಿಸುವುದಕ್ಕಾಗಿ ಈ ಪದ್ಯದಲ್ಲಿ ಗಾಯತ್ರ್ಯರ್ಥವನ್ನು ಸಹ ಹೇಳುವರು. ಅದಂತೆಂದರೆ—"ತತ್ಸವಿತುರ್ವರೇಣ್ಯಂ ॥ ಭರ್ಗೋದೇವಸ್ಯಧೀಮಹಿ। ಧಿಯೋಯೋನಃ ಪ್ರಚೋದಯಾತ್" ಇದರ ಅರ್ಥ ಯಃ=ಯಾವಾತನು, ನಃ=ನಮ್ಮಗಳ, ಧಿಯಃ=ಬುದ್ಧಿಗಳನ್ನು, ಪ್ರಚೋದಯಾತ್=ಪ್ರೇರಿಸುತ್ತಿರುವನೋ, ತಸ್ಯ= ಅಂತಹ, ದೇವಸ್ಯ=ಕ್ರೀಡಾದಿ ಗುಣ ವಿಶಿಷ್ಟನಾದ (ಅಂದಾಸಪಿಲ್ಲದೆ ಸೃಷ್ಟ್ಯಾದಿಗಳನ್ನು ಆಟದಿಂದಲೇ ಮಾಡುತ್ತಿರುವನೋ ಎಂದರ್ಥ) ಸವಿತುಃ= (ಸೃಷ್ಟಿಕರ್ತನಾದ) ಸೂರ್ಯನಾಮಕನಾದ ಶ್ರೀಮನ್ನಾರಾಯಣನ, ವರೇಣ್ಯಂ=ಬ್ರಹ್ಮಾದಿ ಸಕಲ ದೇವತೆಗಳಿಂದ ವಂದ್ಯನಾದ, ಭರ್ಗಃ=ಜ್ಯೋತಿ ರೂಪವಾದ, ವಪುಃ=ಶರೀರವನ್ನು, ಧೀಮಹಿ=ಧ್ಯಾನ ಮಾಡುತ್ತೇವೆ ಎಂದು ಗಾಯತ್ರ್ಯರ್ಥವು. ಈ ಅಭಿಪ್ರಾಯವನ್ನೂ ದಾಸರಾಯರು ಪ್ರಥಮ ಪದ್ಯದಲ್ಲಿ ಸೂಚಿಸಿರುವರು. ಅದೆಂತೆಂದರೆ—"ಧಿಯೋಯೋನಃ ಪ್ರಚೋದಯಾತ್" ಎಂಬ ಪದಗಳಿಗೆ ವ್ಯಾಖ್ಯಾನ ರೂಪವಾಗಿ "ಕರುಣಿಪುದೆಮಗೆ ಮಂಗಳವ" ಎಂದು ಹೇಳಿರುವರು. ಅರ್ಥಾತ್—ಯಾವ ಪರಮಾತ್ಮನು ನಮ್ಮ ಬುದ್ಧಿಯನ್ನು ಶುಭಾಶುಭ ಕರ್ಮಗಳಲ್ಲಿ ಪ್ರೇರಣೆ ಮಾಡಿ ಆ ಕರ್ಮಗಳನ್ನು ಮಾಡಿಸಿ, ಫಲಗಳನ್ನು ಕೊಡುವನೊ ಅಂತಹ ಪರಮಾತ್ಮನನ್ನು ನಮಗೆ ಮಂಗಳವನ್ನು ಕರುಣಿಸು ಎಂದು ಕೇಳಿಕೊಂಡರೆಂಬ ಭಾವ. (ಯಾವನು ನಮ್ಮ ಬುದ್ಧಿಯ ಪ್ರೇರಕನೋ ಅವನನ್ನು ಧ್ಯಾನಿಸುತ್ತೇನೆಂಬುದರ ಅಭಿಪ್ರಾಯವು ಅವನಿಂದ ಮಂಗಳವನ್ನು ಕೋರುವುದೆಂಬುದು ಅಥವಾ ಮಂಗಳವಾಗುವುದೆಂಬುದು. ಆದುದರಿಂದ ಅರ್ಥಾತ್ ಈ ಅರ್ಥವನ್ನು ಗ್ರಹಿಸಬೇಕು.) ದೇವಸ್ಯ, ಸವಿತುಃ ಎಂಬ ಪದಗಳಿಗೆ ಸೃಷ್ಟ್ಯಾದಿ ಕ್ರೀಡಾ ಗುಣಗಳುಳ್ಳವ

ನೆಂಬ ತಾತ್ಪರ್ಯ. ಇದರ ವ್ಯಾಖ್ಯಾನವು " ನೀರಜಭವಾಂಡೋದಯ ಸ್ಥಿತಿ
ಕಾರಣನ " ಎಂಬುವುದು " ವರೇಣ್ಯಂ=ಅಂದರೆ ಸಕಲ ದೇವತೆಗಳಿಂದ ಸಂ
ದ್ಯನೆಂಬರ್ಥ. ಇದರ ವ್ಯಾಖ್ಯಾನವು " ಬ್ರಹ್ಮಸಮೀರವಾಣಿ ಫಣೀಂದ್ರ
ವೀಂದ್ರ ಭವೇಂದ್ರ ಮುಖವಿನುತ" ಎಂಬುವುದು ಭರ್ಗಃ = ದುರಿತಗಳ
ನ್ನು ಭರ್ಜನ ಮಾಡುವ, ಪ್ರಕಾಶಮಾನವಾದ ಎಂದರ್ಥ. ಇದರ ವ್ಯಾ
ಖ್ಯಾನವು " ನಾರಸಿಂಹನೇ " ಎಂದು. ನರಸಂಬಂಧಿಯಾದ, ಅಜ್ಞಾನಗಳ
ನ್ನು ಹರಣ ಮಾಡುವ ವಿಷಯದಲ್ಲಿ ಸಿಂಹದಂತಿರುವನು ಅಥವಾ ಸ್ವಯಂ
ನಾರ (ದೋಷರಹಿತ) ನಾಗಿ ನಿರ್ದೋಷಿಗಳಾದ ಮುಕ್ತರ ಮಧ್ಯದಲ್ಲಿ ಶ್ರೇಷ್ಠ
ನಾಗಿ ಪ್ರಕಾಶಮಾನನಾಗಿ ಒಪ್ಪುತ್ತಿರುವವನು ಎಂಬುವುದರಿಂದ " ಭರ್ಗಃ "
ಎಂಬ ಪದವನ್ನು ವಿಶದ ಮಾಡಿದಂತಾಯಿತು. ‹‹ ಧೀಮಹಿ ›› ಎಂಬ ಪದಕ್ಕೆ
ಅಧಿಕಾರಿ ಭೇದದಿಂದ ಧ್ಯಾನಸಹಿತವಾದ ನಮಸ್ಕಾರವನ್ನು ಸೂಚಿಸುತ್ತ
‹‹ ನಮಿಪೆ ›› ಎಂಬ ಪದವನ್ನು ಉಪಯೋಗಿಸಿರುವರು. ಇದಲ್ಲದೆ ಬ್ರಹ್ಮ
ಸೂತ್ರದೊಳಗಿನ ‹‹ ಅಥಾತೋಬ್ರಹ್ಮಜಿಜ್ಞಾಸಾ | ಜನ್ಮಾದ್ಯಸ್ಯಯತಃ |
ಶಾಸ್ತ್ರಯೋನಿತ್ವಾತ್ | ತತ್ತು ಸಮನ್ವಯಾತ್ " ಎಂಬ ನಾಲ್ಕು ಸೂತ್ರಾ
ರ್ಥಗಳನ್ನು ಈ ಪದದಲ್ಲಿ ಹೇಳಿರುತ್ತಾರೆ. ಇದರಿಂದ ಭಾರತ, ಭಾಗವತ,
ನಿರ್ಣಯಾದಿಶಾಸ್ತ್ರಾರ್ಥಗಳೂ ಇದರಲ್ಲಿ ಅಡಗಿರುವುವೆಂಬ ಸೂಚನೆ. ಮತ್ತು
ಈ ಪದ್ಯಕ್ಕೆ ಸಂಧಿ ಸೂಚನೆ ಎಂದು ಹೆಸರಿಟ್ಟಿರುವರು. ಇದರ ಅಭಿಪ್ರಾ
ಯವೇನೆಂದರೆ :—ಈ ಸಂಧಿಯಲ್ಲಿ ಯಾವ ಅಭಿಪ್ರಾಯವನ್ನು ಹೇಳಿರುವರೋ
ಅದೇ ಅಭಿಪ್ರಾಯವನ್ನೇ ಈ ಪದ್ಯದಲ್ಲಿ ಸೂಚಿಸಿರುವರು. ಈ ಸಂಧಿಯಲ್ಲಿ
ಮಧ್ವಮತದವರು ಮುಖ್ಯವಾಗಿ ತಿಳಿದುಕೊಳ್ಳಬೇಕಾದ ಅಂಶಗಳನ್ನು ಹೇಳಿ
ರುತ್ತಾರೆ. ಅವು ಯಾವುವೆಂದರೆ :—‹‹ ಶ್ರೀಮನ್ಮಧ್ವಮತೇಹರಿಃ ಪರತರಃ
ಸತ್ಯಂ ಜಗತ್ತತ್ವತೋಭೇದಾಜೀವಗಣಾಃ ಹರೇರನುಚರಾಃ ನೀಚೋಚ್ಚಭಾ
ವಂಗತಾಃ || ಮುಕ್ತಿರ್ನೈಜ ಸುಖಾನುಭೂತಿರಮಲಾ ಭಕ್ತಿಶ್ಚತತ್ಸಾಧನಂ
ಹ್ಯಕ್ಷಾದಿ ತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋಹರಿಃ ››

ಇದರ ಅರ್ಥ,—ಶ್ರೀಮನ್ಮಧ್ವ ಮತದಲ್ಲಿ, ಹರಿಯು ಸರ್ವೋತ್ತಮ
ನು, ಜಗತ್ತು, ಸತ್ಯ, ಸ್ವಭಾವದಿಂದ ಜೀವಗಣಗಳು ಭೇದ ಉಳ್ಳವುಗಳು

ಮತ್ತು ಪರಮಾತ್ಮನ ಕಿಂಕರರು, ಇವರು ಉತ್ತಮ, ಮಧ್ಯಮ, ಅಧಮ ರೆಂಬ ತಾರತಮ್ಯದಿಂದ ಕೂಡಿರುವರು. ಸ್ವರೂಪಾನಂದಾವಿರ್ಭಾವವೇ ಮುಕ್ತಿಯು. ವಿಮಲವಾದ ಭಕ್ತಿಯೇ ಮುಕ್ತಿಗೆ ಯೋಗ್ಯವಾದ ಸಾಧನ ಪ್ರತ್ಯಕ್ಷ, ಅನುಮಾನ, ಆಗಮಗಳೆಂಬ ಮೂರು ಪ್ರಮಾಣಗಳು. ಸಕಲ ವೇದ ಪ್ರತಿಪಾದ್ಯನು ಶ್ರೀಹರಿಯೇ ಎಂದು ಹೇಳಿರುವರು. ಇವೆಲ್ಲವನ್ನು ಈ ಸಂಧಿಯಲ್ಲಿ ವಿವರಿಸಿರುವರು. ಅದೇ ಅಭಿಪ್ರಾಯವನ್ನು ಈ ಪದ್ಯದಲ್ಲಿ ಸೂಚಿಸಿರುವರು. ನಾರಸಿಂಹನೇ ಎಂಬ ಪದದಿಂದ "ಹರಿ" ಸರ್ವೋತ್ತಮ ನೆಂದು ಸ್ಥಾಪನೆ ಮಾಡಿರುವರು. "ನಾರಸಿಂಹ" ಶಬ್ದದ ವ್ಯಾಖ್ಯಾನದಿಂದ ಈ ಅರ್ಥವು ಗ್ರಾಹಕರಿಗೆ ಗೊತ್ತಾಗಿರಬಹುದು.

ಇದರ ತಾತ್ಪರ್ಯ.—ಮುಕ್ತರು ಪ್ರಳಯ ಕಾಲದಲ್ಲೂ ಸಹ ಇರುವುದ ರಿಂದ ಮುಕ್ತಾಶ್ರಯತ್ವ ಪರಮಾತ್ಮನಿಗೆ ಹೇಳಿರುತ್ತಾರೆ. ಹೀಗೆ ಶ್ರೀಪರಮಾತ್ಮನೂ ಮುಕ್ತ ಬ್ರಹ್ಮಾದಿಗಳೂ ಅನಾದಿ ಕಾಲದಲ್ಲೂ ಇರುವುದರಿಂದ ಜಗನ್ಮಿಥ್ಯಾ ಎಂದು ಹೇಳಲಾಗುವುದಿಲ್ಲ. ಆದುದರಿಂದ ಇದು ಸತ್ಯವೆಂದು ತಿಳಿಯಬೇಕೆಂದರ್ಥ. ಬ್ರಹ್ಮಾದಿ ಜೀವಗಣಗಳಿಂದ ಕೂಡಿದ ಚೇತನಾಚೇತನಾತ್ಮಕವಾದ ಜಗತ್ತು ಸತ್ಯವು ಎಂಬ ವಿಷಯದಲ್ಲಿ ನಾರಸಿಂಹ ಶಬ್ದದಿಂದ ಮುಕ್ತಾಶ್ರಯತ್ವಾದಿ ಗುಣಗಳನ್ನು ಸೂಚಿಸಿರುವುದರಿಂದಲೂ ಬ್ರಹ್ಮಾದಿ ವಂದ್ಯತ್ವವು ಪರಮಾತ್ಮನಿಗೇ ಹೇಳಿರುವುದರಿಂದಲೂ ಜಗತ್ತು ಸತ್ಯವೆಂದು ಹೇಳಿದಂತಾಯಿತು. ಪ್ರಪಂಚವು ಪಂಚಭೇದಾತ್ಮಕವು ಇದನ್ನು ಶ್ರೀ ರಮಣಿಕರ ಕಮಲಪೂಜಿತ, ಬ್ರಹ್ಮ ಸಮೀರವಾಣಿ ಇತ್ಯಾದಿ ವಿಶೇಷಣಗಳಿಂದ ಲಕ್ಷ್ಮೀ ಬ್ರಹ್ಮಾದಿ ಜೀವರಾಶಿಗಳಿಗೂ ಪರಮಾತ್ಮನಿಗೂ ಭೇದ ಹೇಳಿದಂತಾಯಿತು. ರಾಜ ಮತ್ತು ರಾಜ ಭೃತ್ಯರುಗಳಿಗೆ ಹೇಗೆ ಭೇದವೋ ಹಾಗೆಯೇ ಸ್ವಾತಂತ್ರ್ಯ ಅಸ್ವಾತಂತ್ರ್ಯ ಭೇದದಿಂದ ಜೀವಪರಮಾತ್ಮರಿಗೆ ಪರಸ್ಪರ ಭೇದವೆಂದು ಸೂಚಿಸಿರುವರು. ಬ್ರಹ್ಮ, ಸಮೀರವಾಣಿ, ಎಂಬ ವಿಶೇಷಣಗಳಿಂದಲೇ ಲಕ್ಷ್ಮೀ, ಬ್ರಹ್ಮ, ವಾಯು ಎಂಬ ನಾಮ ಕ್ರಿಯಾಭೇದಗಳಿಂದ ಜೀವ-ಜೀವರುಗಳಿಗೆ ಪರಸ್ಪರ ಭೇದವನ್ನು ಹೇಳಿದಂತಾಯಿತು. "ನೀರಜಭವಾಂಡೋದಯ ಸ್ಥಿತಿ ಕಾರಣನೆ" ಎಂಬ ವಿಶೇಷಣದಿಂದ ಬ್ರಹ್ಮಾಂಡಾದಿ ಜಡಗಳಿಗೂ, ಪರಮಾತ್ಮನಿಗೂ ಭೇದವನ್ನು ಸೂಚಿಸಿದಂತಾಯಿತು.

ಗಡಿಗೆಗಳಿಗೂ ಕುಂಬಾರನಿಗೂ ಹೇಗೆ ಭೇದವೋ ಹಾಗೆಯೇ ಪರಮಾತ್ಮನಿಂದ ಸೃಷ್ಟವಾದ ಬ್ರಹ್ಮಾಂಡಕ್ಕೂ ಪರಮಾತ್ಮನಿಗೂ ಭೇದ. ಬ್ರಹ್ಮಾಂಡಾದಿ ಜಡಗಳಿಗೂ ಬ್ರಹ್ಮಾದಿ ಜೀವರಾಶಿಗಳಿಗೂ ಪರಸ್ಪರ ಭೇದವನ್ನು ಈ ವಿಶೇಷಣಗಳಿಂದಲೇ ತೋರಿಸಿದಂತಾಯಿತು. ಬ್ರಹ್ಮ ಸವಿತಾರವಾಣಿ ಮೊದಲಾದ ವಾಕ್ಯಗಳಿಂದ ಬ್ರಹ್ಮ, ವಾಯು ಮೊದಲಾದವರ ಜಡದೇಹಗಳಿಗೂ ಪರಸ್ಪರ ಭೇದವನ್ನು ಹೇಳಿದಂತಾಯಿತು. ಹೀಗೆಯೇ ೧. ಜೀವಕ್ಕೂ-ಪರಮಾತ್ಮನಿಗೂ ಭೇದ, ೨. ಜೀವಕ್ಕೂ ಜೀವಕ್ಕೂ ಭೇದ, ೩. ಜೀವಕ್ಕೂ-ಜಡಕ್ಕೂ ಭೇದ, ೪. ಜಡಕ್ಕೂ-ಪರಮಾತ್ಮನಿಗೂ ಭೇದ, ೫. ಜಡಕ್ಕೂ-ಜಡಕ್ಕೂ ಭೇದ, ಎಂಬ ೫ ಭೇದಗಳನ್ನು ಮುಖ್ಯವಾಗಿ ತಿಳಿಯಬೇಕು ಎಂದು ಸೂಚಿಸಿದಂತಾಯಿತು. ಮೇಲಿನ ವಿಶೇಷಣಗಳಿಂದಲೇ ಅಂದರೆ, ಶ್ರೀರಮಣಿ, ಬ್ರಹ್ಮ, ಸವಿತಾ, ಇತ್ಯಾದಿ ವಿಶೇಷಣಗಳಿಂದ ರಮಾ ಬ್ರಹ್ಮಾದಿಗಳೆಲ್ಲರೂ ಪರಮಾತ್ಮನ ಕಿಂಕರರೆಂದು ಹೇಳಿದಂತಾಯಿತು. ಮತ್ತು ಇದೇ ವಿಶೇಷಣಗಳಿಂದಲೇ ರಮಾ ಬ್ರಹ್ಮ ಮೊದಲು “ ಭವೇಂದ್ರಮುಖವಿನುತ ” ಎಂಬ ಪದದಿಂದ ಇಂದ್ರದೇವರ ವರೆವಿಗೂ ತಾರತಮ್ಯವನ್ನು ಹೇಳಿ “ ಇಂದ್ರಮುಖವಿನುತ ” ಎಂಬ ಮುಖ ಶಬ್ದದಿಂದ ಮನುಷ್ಯೋತ್ತಮರ ಪರ್ಯಂತ ತಾರತಮ್ಯವನ್ನು ಹೇಳಿರುವರೆಂದು ತಿಳಿಯಬೇಕು. ಹೀಗೆ ಚನ್ನಾಗಿ ತಿಳಿಯುವುದರಿಂದ ವಿಮಲವಾದ ಭಕ್ತಿಯು ಹುಟ್ಟುವುದು. (ಇದನ್ನು ಸ್ಥಾಪಿಸುವುದಕ್ಕೆ ಪ್ರತ್ಯಕ್ಷಾದಿ ಪ್ರಮಾಣಗಳು ಈ ಪದ್ಯದ ವ್ಯಾಖ್ಯಾನದ ಆರಂಭದಲ್ಲಿಯೇ ಸೂಚಿಸಲ್ಪಟ್ಟಿವೆ) ಇದರಿಂದ ಸ್ವರೂಪಾನಂದಾವಿರ್ಭಾವ ಮುಕ್ತಿಯನ್ನು ಕೊಡುವವನೆಂಬುದನ್ನು ಕೈವಲ್ಯದಾಯಕ, ಎಂಬ ಪದದಿಂದ ಹೇಳಿರುವರು. ಸ್ವರೂಪಾನಂದಾವಿರ್ಭಾವ ವೆಂಬುವುದನ್ನು, ಮಂಗಳವನ್ನು ಕೋರುವುದು ಎಂಬ ಪದವು ಸೂಚಿಸುವುದು. ಹೀಗೆ ಪ್ರಥಮ ಪದ್ಯದಿಂದಲೇ ಸಂಧಿಯ ಸೂಚನೆಯನ್ನು ತೋರಿಸಿರುತ್ತಾರೆಂದು ತಿಳಿಯಬೇಕು.

ಹೀಗೆ ಸಾಕ್ಷಾಜ್ಜಗದೀಶ್ವರನಾದ ಶ್ರೀ ಪರಮಾತ್ಮನಿಗೆ ಪ್ರಥಮ ಪದ್ಯದಿಂದ ಮಂಗಳ ರೂಪವಾದ ನಮಸ್ಕಾರವನ್ನು ಮಾಡಿ, ನಂತರ ಭಾಗ್ಯಾತ್ಮಿಕರಾದ ರಮಾದೇವಿಯವರನ್ನು ಪ್ರಾರ್ಥಿಸುತ್ತಾರೆ. ಯದ್ಯಪಿ ಶ್ರೀರಮಣಿಕರಕಮಲ ಪೂಜಿತ ಎಂಬ ಪದ್ಯದ ಮೊದಲನೆಯ ವಿಶೇಷಣವಾದ ಲಕ್ಷ್ಮೀದೇ

ಣಿಯರಿಂದ ಸೇವಿತನಾಗಿರುವ ಪರಮಾತ್ಮನನ್ನು ವಂದಿಸಿರುವರು. ಆದುದರಿಂದ ಲಕ್ಷ್ಮೀದೇವಿಯರಿಗೆ ಬೇರೆ ನಮಸ್ಕಾರವನ್ನು ಮಾಡದೆ " ಸಲಹಲಿ " ಎಂದು ಪ್ರಾರ್ಥನೆಯನ್ನು ಮಾತ್ರ ಮಾಡುವರು. ಲಕ್ಷ್ಮೀ ನರಸಿಂಹನೆಂದು ಸೇರಿಸಿ ನಮಸ್ಕಾರವನ್ನು ಏಕೆ ಮಾಡಬೇಕು ? ಲಕ್ಷ್ಮೀದೇವಿಯರಿಗೆ ಬೇರೆ ಏಕೆ ನಮಸ್ಕಾರವನ್ನು ಮಾಡಲಿಲ್ಲ ಎಂದರೆ ಲಕ್ಷ್ಮೀದೇವಿಯರನ್ನು ಬಿಟ್ಟು ಪರಮಾತ್ಮನಿಗೆ, ಮಾತ್ರ ನಮಸ್ಕಾರವನ್ನೂ ಪೂಜಾದಿಗಳನ್ನೂ ಮಾಡಿದರೆ ಪರಮಾತ್ಮನು ಸ್ವೀಕರಿಸುವುದಿಲ್ಲವೆಂತಲೂ, ಪರಮಾತ್ಮನನ್ನು ಬಿಟ್ಟು ಲಕ್ಷ್ಮೀದೇವಿಯರನ್ನು ಮಾತ್ರ ಪೂಜಿಸಿದರೆ ಅವರೂ ಅದನ್ನು ಸ್ವೀಕರಿಸುವುದಿಲ್ಲವೆಂತಲೂ, ಭಾಗವತ, ಹರಿ ವಂಶಾದಿಗಳಲ್ಲಿ ಹೇಳಿರುವರು. ಈ ವಿಷಯವಾಗಿ ಹರಿವಂಶದಲ್ಲಿ ಆಶ್ಚರ್ಯೋಪಾಖ್ಯಾನವೆಂಬ ಒಂದು ಇತಿಹಾಸ ಉಂಟು. ಅದನ್ನು ನಿರ್ಣಯದ ೨೦ನೆಯ ಅಧ್ಯಾಯದಲ್ಲಿ ೬೩ ಮೊದಲು ೭೭ನೆಯ ಶ್ಲೋಕಗಳವರೆಗೂ ಹೇಳಿರುವರು. ಅದರ ಅಭಿಪ್ರಾಯವೇನೆಂದರೆ :—

ಒಂದು ದಿವಸ ದ್ವಾರಾವತಿಯಲ್ಲಿ ಶ್ರೀಕೃಷ್ಣನು ವಾಸಮಾಡುತ್ತಿರುವಾಗ ಆತನ ವೈಭವವನ್ನು ನೋಡಬೇಕೆಂಬ ಅವಲವಿಕೆಯಿಂದ ಅನೇಕಮಂದಿ ರಾಜರುಗಳು ನಾನಾ ದೇಶಗಳಿಂದ ಅಲ್ಲಿಗೆ ಬಂದರು. ಅವರುಗಳಲ್ಲಿ ಪಾಂಡವರೂ, ಕೌರವರೂ ಸಹಾ ಇದ್ದರು. ಶ್ರೀಕೃಷ್ಣನು ಇವರೆಲ್ಲರನ್ನು ರೈವತಗಿರಿಗೆ ಕರತಂದು ಉಚಿತವಾದ ಸತ್ಕಾರವನ್ನು ಮಾಡಿ ಸ್ನೇಹದೊಡನೆ ಮಾತನಾಡುತ್ತ ಕೂತಿದ್ದನು. ಆ ಸಮಯದಲ್ಲಿ ನಾರದರು ಅಂತರಿಕ್ಷದಿಂದ ಇಳಿದು ಬಂದು ಶ್ರೀಕೃಷ್ಣನನ್ನು ನೋಡಿ " ನೀನು ಆಶ್ಚರ್ಯನು ! ಧನ್ಯನು " ಎಂಬು ಹೇಳಿದರು. (ಇದರ ಅಭಿಪ್ರಾಯವು " ನೀನೇ ಸರ್ವೋತ್ತಮನು ! ನಿನಗೆ ಸಮರು ಯಾರೂ ಇಲ್ಲ " ಎಂದು) ಅದಕ್ಕೆ ಶ್ರೀಕೃಷ್ಣನು " ದಕ್ಷಿಣಾಭಿಸ್ಸಾಕಂ " ಎಂದು ಉತ್ತರವನ್ನು ಹೇಳಿದನು. ನಾರದರು ಅದನ್ನು ಅನುಮೋದಿಸಿದರು. ಅದರ ಅರ್ಥವನ್ನು ತಿಳಿಯಲಾರದ ಅಲ್ಲಿದ್ದ ರಾಜರೆಲ್ಲರೂ ಇದೇನೆಂದು ಬೆಸಗೊಳ್ಳಲು ಶ್ರೀಕೃಷ್ಣನು ನಾರದರಿಗೆ ಇದನ್ನು ವಿಶದಪಡಿಸಿರಿ ಎಂದು ಅಪ್ಪಣೆ ಕೊಟ್ಟನು. ಆಗ ನಾರದರು ಹೇಳಿದರೆಂತೆಂದರೆ— " ರಾಜರುಗಳಿರಾ—ಲಾಲಿಸಿ, ನಾನು ಒಂದು ದಿವಸ ಗಂಗೆಯ ಒಂದು ಮಡುವಿನಲ್ಲಿ ದೊಡ್ಡ ಪರ್ವತವನ್ನು ಹೋಲುವ ಒಂದು ಆಮೆಯನ್ನು ಕಂಡೆನು. ಅದು ನನಗೆ ಆಶ್ಚರ್ಯವನ್ನುಂಟು ಮಾಡಿತು. ಆಗ " ನೀನು ಆಶ್ಚರ್ಯವಾದ

ಪ್ರಾಣಿಯು ನೀನೇ ಧನ್ಯನು" ಎಂದೆನು. ಅದಕ್ಕೆ ಆಮೆಯು, "ಎಲೈ, ನಾರದ. ಅಲ್ಪನಾದ ನನ್ನನ್ನು ಏನೆಂದು ಬಣ್ಣಿಸುವೆ! ಈ ಗಂಗೆಯನ್ನು ನೋಡು ನನ್ನಂತಹ ಎಷ್ಟು ಪ್ರಾಣಿಗಳನ್ನು ಒಳಗೊಂಡಿರುವಳು. ಆಕೆಯು ಮುಂದೆ ನಾನೆಷ್ಟು ಮಾತ್ರದವನು" ಎಂದು ನುಡಿಯಿತು. ಆಗ ನಾನು ಗಂಗೆಯನ್ನು ಉದ್ದೇಶಿಸಿ "ನೀನು ಆಶ್ಚರ್ಯ ಸ್ವರೂಪಳು ನೀನೇ ಧನ್ಯಳು" ಎಂದೆನು. ಅದಕ್ಕೆ ಆಕೆ "ನನ್ನಂಥಃ ಅನೇಕ ನದಿಗಳನ್ನು ಒಳಗೊಂಡರೂ ಹೆಚ್ಚು ಕಡಿಮೆಯಾಗದೆ ಒಂದೇ ಸ್ಥಿತಿಯಲ್ಲಿರುವ ಸಮುದ್ರನಿರಲು ನನ್ನನ್ನೇಂತು ಬಣ್ಣಿಸುವೆ" ಎಂದಳು. ನಾನು ಅಲ್ಲಿಂದ ಹೊರಟು ಸಮುದ್ರ ಸ್ವರೂಪನಾದ ವರುಣನನ್ನು "ಆಶ್ಚರ್ಯ, ಧನ್ಯ" ಎಂಬ ವಾಕ್ಯಗಳಿಂದ ಸ್ತುತಿಸಿದೆನು. ವರುಣನು ನನ್ನಂತಹ ಅನೇಕ ಸಮುದ್ರಗಳನ್ನು ಒಳಗೊಂಡಿರುವ ಭೂಮಿಯನ್ನು ತೋರಿಸಿದನು. ಭೂಮಿ ಸ್ವರೂಪಳಾದ ಉಮಾದೇವಿಯನ್ನು ಸ್ತುತಿಸಿದೆನು. ಆಕೆಯು "ನನ್ನನ್ನು ಚಾಪೆಯಂತೆ ಸುತ್ತಿಕೊಳ್ಳದ ಹಾಗೆ ಧರಿಸಿಕೊಂಡಿರುವುವು ಪರ್ವತಗಳು" ಎಂದಳು. ನಾನು ಪರ್ವತಾಭಿಮಾನಿಗಳಾದ ಗರುಡ, ಶೇಷ, ರುದ್ರ ದೇವರುಗಳನ್ನು ನೋಡಿ "ನೀವು ಆಶ್ಚರ್ಯ ಸ್ವರೂಪಿಗಳು, ಧನ್ಯರು" ಎಂದೆನು. ಅವರು, "ನಮ್ಮಂತಹ ಅನೇಕ ಪರ್ವತಗಳಿಂದೊಡಗೂಡಿದ ಬ್ರಹ್ಮಾಂಡವಿರಲು ನಮ್ಮನ್ನಿಂತೇಕೆ ಹೊಗಳುವೆ" ಅಂದರು. ನಾನು ಬ್ರಹ್ಮಾಂಡವೇ ದೇಹವಾಗಿ ಉಳ್ಳ ಬ್ರಹ್ಮದೇವರನ್ನು ಸ್ತುತಿಸಿದೆನು. ಅವರು ವೇದವನ್ನು ಉತ್ತಮವೆಂದು ತೋರಿಸಿದರು. ನಾನು ವೇದರೂಪಳಾದ ಶ್ರೀ ಲಕ್ಷ್ಮೀದೇವಿಯನ್ನು ಪೊಗಳಿದೆನು. ಆಕೆಯು ಯಜ್ಞವನ್ನು ಪೊಗಳಿದಳು. ಆಗ ನಾನು ಯಜ್ಞರೂಪನು ಶ್ರೀ ಮನ್ನಾರಾಯಣನು ಶ್ರೀಮನ್ನಾರಾಯಣನೇ ಶ್ರೀಕೃಷ್ಣ ರೂಪಿಯಾಗಿ ಅವತರಿಸಿರುವನು, ಆದುದರಿಂದ ಶ್ರೀಕೃಷ್ಣನಲ್ಲಿಗೆ ಹೋದರೆ ನನ್ನ ಸಮಸ್ಯೆಯು ಪೂರ್ಣವಾದೀತೆಂದು ನಾನು ಇಲ್ಲಿಗೆ ಬಂದು ಶ್ರೀ ಕೃಷ್ಣನನ್ನು ಉದ್ದೇಶಿಸಿ "ನೀನು ಆಶ್ಚರ್ಯ ಸ್ವರೂಪನು. ನೀನೇ ಧನ್ಯನು" ಅಂದೆನು. ಶ್ರೀ ಕೃಷ್ಣನು ಅದಕ್ಕೆ "ದಕ್ಷಿಣಾಭಿಸ್ನಾಕಂ" ಎಂದು ಉತ್ತರವನ್ನ ಹೇಳಿದನು. ಇಲ್ಲಿಗೆ ನನ್ನ ಸಮಸ್ಯವು ಪೂರ್ಣವಾದುದು. ಇದರ ಅರ್ಥವೇನೆಂದರೆ ಯಜ್ಞವನ್ನೇ ದೊಡ್ಡದೆಂದು ಇಟ್ಟುಕೊಂಡರೆ ದಕ್ಷಿಣೆ ಸಹಿತವಾದ ಯಜ್ಞವು (ಯಾ

ಗವು) ದೊಡ್ಡದೆಂದು ಅರ್ಥವು. ಯಜ್ಞವೆಂದರೆ—ಪರಮಾತ್ಮನು. ಪರಮಾತ್ಮನು—ಶ್ರೀ ಕೃಷ್ಣನೇ. ಶ್ರೀ ಕೃಷ್ಣನು ಹೇಳಿದುದು "ದಕ್ಷಿಣೆಗಳಿಂದ ಕೂಡಿದ ನಾನು ಧನ್ಯನು" ಎಂದು ದಕ್ಷಿಣೆ ಎಂದರೆ ಲಕ್ಷ್ಮೀದೇವಿಯರಿಗೆ ಹೆಸರು. ಅದೆಂತೆಂದರೆ (ಮಹಾಭಾರತ ತಾತ್ಪರ್ಯ ನಿರ್ಣಯ ಅಧ್ಯಾಯ ೨೦) "ಸರ್ವೋತ್ತಮಃ ಕಿಂತುಯದಾಶು ಸಾಮೇ ವಾಮಾರ್ಧರೂಪಾ ದಕ್ಷಿಣಾನಾಮಥೇಯಾ ॥ ಯಸ್ಮಾತ್ತಸ್ಯಾಃ ದಕ್ಷಿಣತಃ ಸ್ಥಿತೋಽಹಂ ತಸ್ಮಾನ್ನಾಮ್ನಾ ದಕ್ಷಿಣೇತ್ಯೇವ ಸಾಸ್ಯಾತ್" ॥೭೩॥ ಇದರ ಅರ್ಥ—ಶ್ರೀ ಕೃಷ್ಣನ ವಾಕ್ಯ. ನಾನು ಸರ್ವದಾ ಉತ್ತಮನೇ. ಆದರೂ ಶ್ರೀ ಲಕ್ಷ್ಮೀದೇವಿಯು ನನ್ನ ಎಡಭಾಗದ ಅರ್ಧ ಶರೀರವನ್ನು ಆವರಿಸಿಕೊಂಡು ನನ್ನ ಎಡದ ಅರ್ಧ ದೇಹವಾಗಿ ಕಾಣುತ್ತಿರುವಳು. ನಾನು ಆಕೆಯ ದಕ್ಷಿಣ ಭಾಗದಲ್ಲಿ (ಬಲಗಡೆಯಲ್ಲಿ ಸರ್ವದಾ ಇರುವುದರಿಂದ ಆಕೆಗೆ ದಕ್ಷಿಣೆಯೆಂದು ಹೆಸರು. ಆಕೆಯು ನನ್ನ ಅರ್ಧ ಶರೀರ ಸ್ವರೂಪಳಾಗಿ ಕಾಣುವುದರಿಂದ ಅರ್ಧ ನಾರಾಯಣಿ ಎಂದು ಆಕೆಗೆ ಹೆಸರು) ಎಂದು ಪರಮಾತ್ಮನು ಹೇಳಿರುವನು. ಆದುದರಿಂದ ತಾನು ಲಕ್ಷ್ಮೀ ಸಮೇತನಾಗಿ ಪೂಜ್ಯನು ಎಂದು ಪರಮಾತ್ಮನು ಹೇಳಿರುವನು. "ದಕ್ಷಿಣಾಭಿಸ್ಸಾಕಂ" ದಕ್ಷಿಣೆಗಳಿಂದ ಎಂಬ ಬಹುವಚನವೇಕೆ? ಅಂದರೆ—ಅವತಾರ ರೂಪಗಳನ್ನೂ ಮೂಲ ರೂಪವನ್ನೂ ಸೇವಿಸುವುದಕ್ಕಾಗಿ ಶ್ರೀ ಲಕ್ಷ್ಮಿಯು ಬಹು ರೂಪವುಳ್ಳವಳಾಗಿರುವಳು. ಎಂದು ನಾರದರು ಹೇಳಿದರು. ಆಗ ಸರ್ವರೂ ರುಕ್ಮಿಣಿ ಸಮೇತನಾದ ಶ್ರೀ ಕೃಷ್ಣನನ್ನು ಪೂಜಿಸಿದರೆಂದು ನಿರ್ಣಯದಲ್ಲಿ ಹೇಳಿರುವರು. ಇದರಿಂದ ಶ್ರೀ ಲಕ್ಷ್ಮೀ ಸಮೇತನಾದ ಪರಮಾತ್ಮನನ್ನೇ ಪೂಜಿಸಬೇಕು ಎಂಬ ನಿಯಮಾನುಸಾರವಾಗಿ ದಾಸರಾಯರು ಲಕ್ಷ್ಮೀ ಸಮೇತನಾದ ಪರಮಾತ್ಮನನ್ನು ಪ್ರಥಮ ಪದ್ಯದಲ್ಲಿ ಭಾಗ್ಯಾಭಿಮಾನಿಯಳಾದ ರಮಾದೇವಿಯನ್ನು ತಮ್ಮ ಇಷ್ಟಾರ್ಥ ಸಿದ್ಧಿಯನ್ನು ಕೊಡಲೆಂದು ಪ್ರಾರ್ಥಿಸಿರುತ್ತಾರೆ.

**ಜಗದುದರನತಿ ವಿಮಲಗುಣರೂಪಗಳನಾ ಲೋಚನದಿ ಭಾರತ**
**ನಿಗಮತತಿಗಳತಿ ಕ್ರಮಿಸಿ ಕ್ರಿಯಾವಿಶೇಷಗಳ ॥**
**ಬಗೆಬಗೆಯ ನೂತನವ ಕಾಣುತ ಮಿಗೆಹರುಷದಿಂ ಪೊಗಳಿಹಿಗ್ಗುವ**
**ತ್ರಿಗುಣಮಾನಿ ಮಹಾಲಕುಮಿ ಸಂತೈಸಲನುದಿನವು ॥೨॥**

ಪದ್ಯಾರ್ಥ.—ಜಗದುದರನ=ಈ ಜಗತ್ತೆಲ್ಲವನ್ನು ತನ್ನುದರದಲ್ಲಿಟ್ಟು

ಕೊಂಡಿರುವ ಶ್ರೀ ಪರಮಾತ್ಮನ, ಅತಿ ವಿಮಲ ಗುಣರೂಪಗಳನ, ಅತಿ ವಿಮಲ=ಅತ್ಯಂತ ನಿರ್ದೋಷವಾದ, ಗುಣ=ಆನಂದಾದಿ ಗುಣಗಳು, ರೂಪಗೆಳನ=ಮತ್ಸ್ಯಾದ್ಯನಂತಾನಂತ ರೂಪಗಳನ್ನು, ಕ್ರಿಯಾ ವಿಶೇಷಗಳ=ಮೂಲ ರೂಪ, ಅವತಾರ ರೂಪಗಳಿಂದ ಮಾಡುವ ಕರ್ಮ ವಿಶೇಷಣಗಳನ್ನು, ಭಾರತನಿಗಮತತಿಗಳತಿಕ್ರಮಿಸಿ-ಭಾರತ=ಐದನೆಯ ವೇದವೆಂದು ಪ್ರಸಿದ್ಧಿ ಹೊಂದಿದ ಭಾರತವನ್ನೂ, ನಿಗಮತತಿಗಳ=ವೇದ ರಾಶಿಗಳನ್ನೂ, ಅತಿಕ್ರಮಿಸಿ=ಮೀರಿ (ಭಾರತದಲ್ಲೂ, ವೇದ ರಾಶಿಗಳಲ್ಲೂ ಹೇಳಿರುವ ಭಗವನ್ಮಹಿಮೆಗಳಿಗಿಂತಲೂ ಅತ್ಯಧಿಕವಾಗಿ) ಆಲೋಚನದಿ=ಆಲೋಚನೆಯಿಂದ, ಬಗೆಬಗೆಯ=ನಾನಾ ವಿಧವಾದ, ನೂತನವ=ಹೊಸ ಹೊಸ ಮಹಿಮೆಗಳನ್ನು ಕಾಣುತ, ಮಿಗೆಹರುಷದಿಂ=ಬಹಳ ಸಂತೋಷದಿಂದ (ಆನಂದದಿಂದ) ಪೊಗಳಿ=ಸ್ತುತಿಸಿ, ಹಿಗ್ಗುವ=ಉಬ್ಬುವ, ತ್ರಿಗುಣಮಾನಿ=ಶ್ರೀ, ಭೂ, ದುರ್ಗ ಎಂಬ ಮೂರು ರೂಪಗಳಿಂದ ಸತ್ವರಜಸ್ತಮಸ್ಸೆಂಬ ಮೂರು ಗುಣಗಳಿಗೆ ಅಭಿಮಾನಿಯಾದ, ಮಹಾಲಕುಮಿ=ಮಹಾ ಲಕ್ಷ್ಮಿಯು, ಅನುದಿನವು = ಪ್ರತಿದಿನದಲ್ಲು, ಸಂತೈಸಲಿ=ಗ್ರಂಥವನ್ನು ಪೂರ್ತಿ ಮಾಡಿಸುವುದು ಮೊದಲಾದ ಇಷ್ಟಾರ್ಥಗಳನ್ನು (ಸಿದ್ಧಿಗೊಳಿಸಲಿ) ಸಮಾಧಾನಗೊಳಿಸಲಿ (ಪಾಲಿಸಲಿ).

ತಾತ್ಪರ್ಯ.— ಯಾವ ಶ್ರೀ ಲಕ್ಷ್ಮೀದೇವಿಯು ಸತ್ವಗುಣ, ರಜೋಗುಣ ತಮೋಗುಣಗಳೆಂಬ ಮೂರು ಗುಣಗಳಿಗೆ ಅಭಿಮಾನಿಯಾಗಿ, ಶ್ರೀದೇವಿ, ಭೂದೇವಿ, ದುರ್ಗಾದೇವಿಯರೆಂಬ ಮೂರು ರೂಪಗಳಿಂದ ಶ್ರೀ ಪರಮಾತ್ಮನನ್ನು ಸೃಷ್ಟಿ ಕಾಲದಲ್ಲೂ, ಸಂರಕ್ಷಣೆ ಕಾಲದಲ್ಲೂ, ಜಗತ್ತನ್ನು ತನ್ನ ಉದರದಲ್ಲಿಟ್ಟುಕೊಂಡು ಮಲಗಿರುವ ಪ್ರಳಯ ಕಾಲದಲ್ಲೂ ಸಹ ಅರ್ಧ ಕ್ಷಣದಲ್ಲೂ ಬಿಡದೆ ಸೇವಿಸುತ್ತಿರುವಳೋ ಮತ್ತು ಶ್ರೀ ಪರಮಾತ್ಮನು ಅವತಾರ ರೂಪಗಳಿಂದಲೂ, ಮೂಲ ರೂಪದಿಂದಲೂ, ಯಾವ ಯಾವ ಕಾರ್ಯಗಳನ್ನು ಮಾಡುತ್ತಿರುವನೋ, ಮಾಡಿರುವನೋ, ಮಾಡುವನೋ ಆಯಾ ಕರ್ಮ ವಿಶೇಷಗಳನ್ನೂ, ಗುಣರೂಪಗಳನ್ನೂ ಆಲೋಚನೆಯಿಂದ ತಿಳಿಯುತ್ತಾ ಇನ್ನೂ ಭಾರತದಲ್ಲಿಯೂ, ವೇದರಾಶಿಗಳಲ್ಲಿಯೂ ಕೂಡ ಹೇಳದಿರುವ ಹೊಸ ಹೊಸದಾದ ಭಗವನ್ಮಹಿಮೆಗಳನ್ನೂ, ಗುಣರೂಪಗಳನ್ನೂ, ಅಪಾರವಾಗಿ ಕ್ಷಣ ಕ್ಷಣದಲ್ಲೂ ಕಾಣುತ್ತಾ, ಪರಮಾತ್ಮನನ್ನು ಪೊಗಳಿ ಹಿಗ್ಗುವಳೋ; ಪರಮಾ

ತ್ಮನ ಮಹಿಮಾದಿಗಳನ್ನು ಎಷ್ಟು ಕಂಡರೂ ಅವನಲ್ಲಿರುವ ಮಹಿಮೆಗಳ ಲೇ ಶಾಂಶವನ್ನಾದರೂ ಕಾಣಲು ತನಗೆ ಸಾಧ್ಯವಲ್ಲವೆಂದು ಆಶ್ಚರ್ಯ ಪಡುತ್ತಿರುವಳೋ, ಅಂತಹ ರಮಾದೇವಿಯು ನಾನು ಕೈಗೊಂಡಿರುವ ಈ ಕಾರ್ಯವನ್ನು ಪೂರೈಸಿ ನಮ್ಮನ್ನು ಪ್ರತಿ ದಿನದಲ್ಲೂ ಸಲಹಲಿ.

ವಿಶೇಷಾರ್ಥ.—ಹಿಂದಿನ ಪದ್ಯದಲ್ಲಿ ದಾಸವರ್ಯರು ಲಕ್ಷ್ಮೀ ಸಮೇತನಾದ ಶ್ರೀ ಪರಮಾತ್ಮನಿಗೆ ನಮಸ್ಕಾರವನ್ನು ಮಾಡಿ, ಈಗ ಲಕ್ಷ್ಮೀ ದೇವಿಯ ರಿಂದ ತಾವು ಪಡೆಯಬೇಕಾದುವನ್ನು ಬೇಡುವರು. ತಾವು ಪಡೆಯಬೇಕಾದುವು ಯಾವುವೆಂದರೆ :—ಪ್ರಕೃತ ಗ್ರಂಥ ಉಪಸಂಹಾರವಾಗುವಿಕೆ, ಭಗವಂತನಲ್ಲಿ ದೃಢವಾದ ಭಕ್ತಿ, ಅಪರೋಕ್ಷದಲ್ಲಿ ಪರಮಾತ್ಮನನ್ನು ಕಾಣುವಿಕೆ, ಮುಕ್ತಿಯನ್ನು ಪಡೆಯುವಿಕೆ ಮುಂತಾದ ಇವೆಲ್ಲವೂ ಲಕ್ಷ್ಮೀ ದೇವಿಯವರ ಅನುಗ್ರಹದಿಂದಲೇ ಆಗಬೇಕು. ಆದುದರಿಂದ "ಸಂತೈಸಲಿ" ಎಂಬ ಪದದಿಂದ ಮೇಲೆ ಹೇಳಿದ ವಿಷಯಗಳನ್ನು ಪ್ರಾರ್ಥಿಸಿರುವರು. ಶ್ರೀ ಪರಮಾತ್ಮನ ಅನುಗ್ರಹ ಪಡೆಯಬೇಕಾದರೂ, ಶ್ರೀ ಪರಮಾತ್ಮನನ್ನು ಅಪರೋಕ್ಷದಲ್ಲಿ ಕಾಣಬೇಕಾದರೂ, ಶ್ರೀ ಲಕ್ಷ್ಮೀದೇವಿಯರ ಅನುಗ್ರಹವು ಮುಖ್ಯವಾದುದರಿಂದ ಮೋಹನದಾಸರು "ವೆಂಕಟಾದ್ರಿನಿಲಯನ | ಪಂಕಜನಾಭನ | ತೋರವ್ವಾ | ಲಕುಮಿ" ಎಂದು ಪದ ಮಾಡಿರುವರು. ಆದುದರಿಂದ ದಾಸವರ್ಯರು ಈ ಅಭಿಪ್ರಾಯದಿಂದಲೇ ಸಂತೈಸಲಿ ಎಂದು ಹೇಳಿರುವರೆಂದು ತಿಳಿಯಬೇಕು. ಮತ್ತೂ "ತ್ರಿಗುಣಮಾನಿ" ಎಂಬ ವಿಶೇಷಣದಿಂದ ಬ್ರಹ್ಮಾದಿ ಯಾವ ದೇವತೆಗಳೂ ಇಲ್ಲದ ಪ್ರಳಯ ಕಾಲದಲ್ಲೂ ಶ್ರೀದೇವಿ, ಭೂದೇವಿ, ದುರ್ಗಾದೇವಿ ಎಂಬ ಮೂರು ರೂಪಗಳಿಂದ ತ್ರಿಗುಣಗಳಿಗೆ ಅಭಿಮಾನಿ ಎಂದರೆ, ಸತ್ವಗುಣಾಭಿಮಾನಿ–ಶ್ರೀ ದೇವಿಯು, ರಜೋಗುಣಾಭಿಮಾನಿ ಭೂದೇವಿಯು, ತಮೋಗುಣಕ್ಕೆ–ಅಭಿಮಾನಿ ದುರ್ಗಾದೇವಿ. ಹೀಗೆ ತ್ರಿಗುಣಾಭಿಮಾನಿಯಾಗಿ ರೂಪತ್ರಯಗಳಿಂದ ಪರಮಾತ್ಮನ ಸೇವಾ ಮಾಡುತ್ತಿರುವಳು. "ಶ್ರೀ ಭೂರ್ಮಿರಿತಿ ರೂಪಾಭ್ಯಾಂ ಪ್ರಕೃತಿರ್ವಿಷ್ಣುನಾ ಸಹ || ಶೇತೇ ಶೃತಿಸ್ವರೂಪೇಣ ಸ್ತೌತಿಬ್ರಹ್ಮಲಯೇ ಹರಿಂ" || ಎಂಬ ಭಾಗವತದ ದಶಮಸ್ಕಂಧದ ತಾತ್ಪರ್ಯ ನಿರ್ಣಯ ವಚನದಿಂದ ಪ್ರಳಯಕಾಲದಲ್ಲಿ ಭೂದೇವಿಯು ಶಯ್ಯಾರೂಪಳಾಗಿ ವಟಪತ್ರವಾಗುವಳು.

ಶ್ರೀ ದೇವಿಯು ಪರಮಾತ್ಮನ ಕೂಡ ಶಯನ ಮಾಡುವಳು, ದುರ್ಗಾದೇವಿಯು ಪರಮಾತ್ಮನನ್ನು ಪ್ರತಿರೂಪಳಾಗಿ ಸ್ತೋತ್ರ ಮಾಡುತ್ತಿರುವಳು. " ನ ಘಟಿತ ಉದ್ಭವಃ ಪ್ರಕೃತಿ ಪೂರುಷಯೋರಜಯೋಃ " ಉತ್ಪತ್ತಿ ಶೂನ್ಯರಾದ ಪ್ರಕೃತಿಪುರುಷನಾಮಕರಾದ ಲಕ್ಷ್ಮೀನಾರಾಯಣರಿಗೆ ಉತ್ಪತ್ತಿಯು ಘಟಿಸುವುದಿಲ್ಲ. ಇವರಿಬ್ಬರೂ ಪ್ರಳಯ ಕಾಲದಲ್ಲೂ ಸಹ ಇದ್ದೇ ಇರುವರೆಂದು ಹೇಳಲ್ಪಟ್ಟದೆ. ಅದೇ ಶ್ರುತಿಗೀತೆಯಲ್ಲಿ " ಉಭಯ ಯುಜೋರ್ಭವಂತ್ಯಸುಭೃತೋ ಜಲಬುದ್ಬುದವತ್ " ಇವರಿಬ್ಬರ ಸಂಬಂಧದಿಂದಲೇ ನೀರಿನೊಳಗೆ ನೀರು ಬೀಳಲು ಗುಳ್ಳೆಗಳು ಏಳುವಂತೆ ಬ್ರಹ್ಮಾದಿ ಜೀವ ರಾಶಿಗಳೆಲ್ಲ ಹುಟ್ಟುವರೆಂತಲೂ ಹೇಳಲ್ಪಟ್ಟದೆ. ಅದೇ ಶ್ರುತಿಗೀತೆಯಲ್ಲಿ ಮತ್ತೊಂದು ಶ್ಲೋಕದಲ್ಲಿ " ಯತ ಉದಗಾದೃಷಿರನು ದೇವಗಣಾ ಉಭಯೇ " ಯಾವ ಕಾರಣದಿಂದ " ಋಷಿಃ " ಜ್ಞಾನಿಯಾದ ಬ್ರಹ್ಮದೇವರು ನಿನ್ನಿಂದ ಹುಟ್ಟಿದರೋ ಮತ್ತು ಅನು=ಅವರನ್ನನುಸರಿಸಿ (ಅವರು ಹುಟ್ಟಿದ ಕೂಡಲೆ), ದೇವಗಣಾ ಉಭಯೇ=ಬ್ರಹ್ಮಾದಿ ಪದವಿಯನ್ನು ಪಡೆದವರೂ, ಮುಂದೆ ಆ ಪದವಿಗೆ ಬರುವವರೂ ಈ ಎರಡು ವಿಧರಾದ ದೇವತೆಗಳು ಜನಿಸಿದರೋ, ಆ ಕಾರಣದ್ದೆಶೆಯಿಂದಲೇ ಈ ಜಗತ್ತಿನಲ್ಲಿ ಉತ್ಪತ್ತಿ ನಾಶಗಳು ಇಲ್ಲದಿರುವವನು ನಿನ್ನ ಹೊರತು ಮತ್ಯಾರೂ ಇಲ್ಲ. ಉತ್ಪತ್ತಿ ನಾಶ ಉಳ್ಳವರು ಆವಿಲ್ಲದ ನಿನ್ನ ಮಹಿಮೆಯನ್ನು ಎಂತು ತಿಳಿಯುವರು. ನಿನ್ನ ಮಹಿಮೆಯನ್ನು ಸಾಕಲ್ಯವಾಗಿ ನೀನೊಬ್ಬನೇ ಒಲ್ಲೆ ಎಂದು ಶ್ರುತಿಗಳು ಹೇಳುವುವು. ಅದಂತಿರಲಿ, ಪ್ರಕೃತ ಪ್ರಳಯಕಾಲದಲ್ಲಿ ಪರಮಾತ್ಮನ ಸೇವಾ ಮಾಡುತ್ತಾ ಲಕ್ಷ್ಮೀ ದೇವಿಯವರು ಮಾತ್ರ ಇರುವರೇ ಹೊರತು ಬ್ರಹ್ಮಾದಿಗಳು ಯಾರೂ ಇರುವುದಿಲ್ಲವೆಂದು ಸ್ಪಷ್ಟಪಡಿಸಿದಂತಾಯಿತು. ಮತ್ತು " ಜಗದುದರನ " ಎಂಬ ವಿಶೇಷಣವೂ ಪರಮಾತ್ಮನ ಪ್ರಳಯ ಕಾಲದ ಸ್ಥಿತಿಯನ್ನು ತೋರಿಸುವುದು. ಅದೆಂತೆಂದರೆ,—" ಸಂಹೃತ್ಯ ಸರ್ವಮಖಿಲಂ ಜಠರೇ ನಿಧಾಯ ಲಕ್ಷ್ಮೀ ಭುಜಾಂತರಗತಃ ಸ್ವರತೋಪಿಚಾಗ್ರೇ " ಎಂಬೀ ಮಹಾಭಾರತ ತಾತ್ಪರ್ಯ ನಿರ್ಣಯ ಶ್ಲೋಕದಿಂದ, ಅಖಿಲವಾದ ಜಗತ್ತನ್ನು ತನ್ನ ಉದರದಲ್ಲಿಟ್ಟುಕೊಂಡು ಲಕ್ಷ್ಮೀ ದೇವಿಯರಿಂದ ಆಲಂಗಿತನಾಗಿ ಪ್ರಳಯ ಕಾಲದಲ್ಲಿ ಇರುತ್ತಾನೆಂದು ಸಿದ್ಧವಾಗುವುದು. ಮತ್ತೂ " ತಸ್ಯೋದರಸ್ಥ ಜಗತಃ " ಎಂಬ ನಿರ್ಣಯ

ಶ್ಲೋಕದಿಂದ ಶ್ರೀ ಪರಮಾತ್ಮನು ಪ್ರಳಯ ಕಾಲದಲ್ಲಿ ತನ್ನ ಉದರದಲ್ಲಿದ್ದ ಜೀವಗಣಗಳನ್ನು ಸೃಷ್ಟಿಗೆ ತಂದು, ಅವರವರ ಯೋಗ್ಯತಾನುಸಾರ ಸಾಧನ ವನ್ನು ಮಾಡಿಸಿ ತಕ್ಕ ಫಲಗಳನ್ನು ಕೊಟ್ಟು ಉದ್ಧರಿಸಬೇಕೆಂದು ಪ್ರಳಯದ ಅವಸಾನ ಕಾಲದಲ್ಲಿ ನಿಶ್ಚಯಿಸಿದನು ಎಂದು ಹೇಳಿರುವರು. ಇದರಿಂದ ತಿಳಿ ದುಬಂದ ಫಲಿತಾಂಶವೇನೆಂದರೆ :—ಬ್ರಹ್ಮಾದಿಗಳು ಇಲ್ಲದ ಪ್ರಳಯ ಕಾಲ ದಲ್ಲಿ ಭಗವದ್ವ್ಯಾಪಾರಗಳು ಹೇಗೆ ತ್ತೆಂಬುವುದನ್ನು ಬ್ರಹ್ಮಾದಿಗಳು ಅರಿಯ ರು. ಆಗಲೂ ರಮಾ ದೇವಿಯರು ಇದ್ದುದರಿಂದ ಅಪಾರವಾದ ಆಗಿನ ಭಗವ ನ್ಮಹಿಮೆಗಳನ್ನು ಕೂಡ ಬಿಡದೆ ನೋಡುತ್ತಿದ್ದುದರಿಂದ ಶ್ರೀ ಲಕ್ಷ್ಮೀ ದೇವಿ ಯವರು ಮಹಾಮಹಿಮೆಯುಳ್ಳವರು. 'ಲಕ್ಷ್ಮೀ ದೇವಿಯವರ ಜ್ಞಾನದಲ್ಲಿ ಲೇಶಾಂಶವಾದರೂ ಬ್ರಹ್ಮಾದಿಗಳಿಗೆ ಇಲ್ಲವೆಂಬುದು ಸ್ಪಷ್ಟವಾದಂತಾಯಿತು. ಇದಲ್ಲದೆ ಬ್ರಹ್ಮ ದೇವರು ಜಗದ್ವಿಷಯವನ್ನು ಆಲೋಚಿಸಿದರೆ, ಅಂಗೈಯೊ ಳಗಿನ ನೆಲ್ಲಿಯ ಕಾಯಿಯಂತೆ ಎಲ್ಲಾ ವಿಷಯಗಳನ್ನೂ ತಿಳಿದುಕೊಳ್ಳುವರು. ರಮಾ ದೇವಿಯವರು ಆಲೋಚನೆ ಇಲ್ಲದೆ ಜಗದ್ವಿಷಯ ಜ್ಞಾನ ಉಳ್ಳವರಾಗಿ ರುವರು. ಆದರೂ ಶ್ರೀ ಪರಮಾತ್ಮನ ಅತಿ ವಿಮಲವಾದ ಗುಣ ರೂಪಗಳ ನ್ನೂ ಮೂಲರೂಪ ಅವತಾರ ರೂಪಗಳಿಂದ ಮಾಡುವ ಕ್ರಿಯಾ ವಿಶೇಷಣಗ ಳನ್ನೂ ಆಲೋಚಿಸಿ, ವೇದ ರಾಶಿಗಳಲ್ಲಿಯೂ, ಭಾರತಾದಿಗಳಲ್ಲಿಯೂ ಹೇಳಿ ರುವುದಕ್ಕಿಂತ ಅತ್ಯಧಿಕವಾಗಿ ತಿಳಿಯುವರು. ಆದರೆ ಸಾಕಲ್ಯವಾಗಿ ಭಗವ ನ್ಮಹಿಮೆಗಳನ್ನು ತಿಳಿಯಲು ಎಷ್ಟು ಆಲೋಚಿಸಿದರೂ ರಮಾ ದೇವಿಯವರಿಗೆ ಸಾಧ್ಯವಾಗುವಂತಿಲ್ಲ. ಈ ವಿಷಯದಲ್ಲಿ ಭಾಗವತದ ದಶಮಸ್ಕಂಧದಲ್ಲಿ ವಾ ಕ್ಯವಿರುವುದು. ಅದೆಂತೆಂದರೆ :—

ನನಾಮರೂಪೇ ಗುಣಕರ್ಮಜನ್ಮಭಿ
ರ್ನಿರೂಪಿತವ್ಯೆತವತಸ್ಯ ಸಾಕ್ಷಿಣಃ ||
ಮನೋವಚೋಭ್ಯಾಮನುಮೇಯವರ್ತ್ಮನೋ
ದೇವಕ್ರಿಯಾಯಾಃ ಪ್ರತಿಯಂತ್ಯಥಾಪಿಹಿ ||

ದೇವಕೀ ಗರ್ಭದಲ್ಲಿರುವ ಪರಮಾತ್ಮನನ್ನು ಬ್ರಹ್ಮದೇವರು ಸ್ತೋತ್ರ ಮಾಡುವ ಪ್ರಕರಣದಲ್ಲಿ ಇರುವ ಬ್ರಹ್ಮದೇವರ ವಚನ “ ಎಲೈ ಈಶ ! ನಿನ್ನ

ನಾಮ ರೂಪಗಳನ್ನು ಕರ್ಮದಿಂದಾಗಲೀ, ಜನ್ಮದಿಂದಾಗಲಿ, ಗುಣಗಳಿಂದಾಗಲಿ, ಕಾಣಲು ಸಾಧ್ಯವಿಲ್ಲವು. ಅಗ್ನಿಯನ್ನು—ಗುಣ, ಕರ್ಮ, ಜನ್ಮಗಳಿಂದ ಕಾಣಬಹುದು. ಹೇಗೆಂದರೆ-ತೇಜಃಪುಂಜವಾದ ಕಾಂತಿಯುಳ್ಳವನೆಂಬ ಗುಣದಿಂದಲೂ, ದಹನ ಶಕ್ತಿಯುಳ್ಳವನೆಂಬ ಕರ್ಮದಿಂದಲೂ, ಕಾಷ್ಠವನ್ನು ಮಥನ ಮಾಡಲು ಜನಿಸುವನೆಂಬ ಜನ್ಮದಿಂದಲೂ ಸ್ವರೂಪವನ್ನು ಕಾಣಬಹುದು. ಹೀಗೆ ನಿನ್ನ ಸ್ವರೂಪವನ್ನು ಕಾಣಲು ಸಾಧ್ಯವಿಲ್ಲ. ಹಾಗಾದರೆ ಗುಣರೂಪಗಳೇ ಇಲ್ಲದಿರಬಹುದು. ಅಂದರೆ ನಿನ್ನ ಗುಣರೂಪಗಳನ್ನು ಸಾಕ್ಷಿಭೂತನಾಗಿ ನೀನೇ ನೋಡುತ್ತಿರುವೆ. ನೀನು ಸಾಕ್ಷಾತ್ತಾಗಿ ನೋಡುತ್ತಿರುವುದನ್ನು ಸುಳ್ಳೆಂದು ಹೇಳಲಾದೀತೆ ? ಅಪರಿಮಿತವಾಗಿರುವುದರಿಂದ ಕಾಣಲು ಸಾಧ್ಯವಿಲ್ಲವೆಂದು ತಿಳಿಯಬೇಕು. ಇದಕ್ಕೆ ಆಧಾರವೇನೆಂದರೆ :—" ಸರ್ವನಾಮಾ, ಸರ್ವ ಕರ್ಮಾ, ರುಗ್ಮವರ್ಣಂ, ಕರ್ತಾರಮೀಶಂ " ಇತ್ಯಾದಿ ಶ್ರುತಿಗಳೆಂಬ ಆಪ್ತವಾಕ್ಯದ ಆಧಾರದಿಂದಲೂ, ಮನಸ್ಸಿನಿಂದಲೂ, ವಚನದಿಂದಲೂ, ಅಪರಿಮಿತವಾದ ಗುಣನಾಮಗಳುಳ್ಳವನೆಂದು ಅನುಮಾನಿಸಲು ಸಾಧ್ಯವಾದುದನ್ನು ಸುಳ್ಳೆಂದು ಹೇಳಲು ಸಾಧ್ಯವಿಲ್ಲವೆಂಬುದೇ ಇದಕ್ಕೆ ಆಧಾರವು. ಹಾಗಾದ ಮೇಲೆ ಯಾರಿಂದಲೂ ಕಾಣಲಶಕ್ಯವಾದ ಗುಣ ನಾಮಗಳಿದ್ದರೂ ಇಲ್ಲದ ಪ್ರಾಯವೇ ಅಂದರೆ ನಿನ್ನ ಪ್ರೇರಣ ಲಕ್ಷಣ ಕರ್ಮದಿಂದ ನಿನ್ನ ಭಕ್ತರು ತಮ್ಮ ತಮ್ಮ ಯೋಗ್ಯತಾನುಸಾರವಾಗಿ ತಿಳಿಯುವರು ಎಂದು ಶ್ಲೋಕಾರ್ಥವು. ಆದುದರಿಂದ ರಮಾ ದೇವಿಯವರು ಬ್ರಹ್ಮಾದಿಗಳಿಗಿಂತಲೂ, ವೇದಾದಿಗಳು ಹೇಳಿರುವುದಕ್ಕಿಂತಲೂ, ಅತ್ಯಧಿಕವಾಗಿ ಭಗವನ್ಮಹಿಮೆಯನ್ನು ತಿಳಿದಿದ್ದರೂ ಸಾಕಲ್ಯವಾಗಿ ತಿಳಿಯಲಾರರೆಂದು ನಿಶ್ಚಯವಾದಂತಾಯಿತು. ಬ್ರಹ್ಮಾದಿಗಳು ವೇದಾದಿಗಳಲ್ಲಿ ಹೇಳಿರುವ ಭಗವನ್ಮಹಿಮೆಗಳೆಷ್ಟಿರುವವೋ ಅಷ್ಟು ಪರಿಮಿತವಾದ ಭಗವನ್ಮಹಿಮೆಗಳನ್ನು ಮಾತ್ರ ತಿಳಿದು, ಪರಿಮಿತವಾದ ಆನಂದವನ್ನೇ ಅನುಭವಿಸುತ್ತಿರುವರು. ಲಕ್ಷ್ಮೀ ದೇವಿಯಾದರೋ ವೇದಾದಿಗಳಲ್ಲಿ ಹೇಳಿರುವ ಭಗವನ್ಮಹಿಮೆಗಳನ್ನು ಆಲೋಚನೆ ಇಲ್ಲದೇನೇ ಕಾಣುತ್ತಿರುವರು. ಅವುಗಳಲ್ಲಿ ಹೇಳದ ಅಪಾರವಾದ ಗುಣಗಳನ್ನು ಆಲೋಚಿಸುತ್ತಾ ಪರಮಾತ್ಮನ ಅನಂತಾನಂತ ರೂಪಗಳ ಪೈಕಿ ಒಂದು ರೂಪದೊಳಗಿನ ಅನಂತಾನಂತ ಭಾಗಗಳ ಪೈಕಿ ಒಂದು ಭಾಗದೊಳಗಿನ, ಅನಾ

ತಾನಂತ ಕ್ರಿಯಾ ವಿಶೇಷಗಳ ಪೈಕಿ ಒಂದು ಕ್ರಿಯಾ ವಿಶೇಷದ ಹೊಸ ಹೊಸದಾದ ವಿಷಯಗಳನ್ನು ಒಂದು ಕ್ಷಣದ ಅನೇಕಾನೇಕ ಭಾಗಗಳ ಪೈಕಿ ಒಂದು ಭಾಗವಾದ ಅತಿ ಸ್ವಲ್ಪ ಕಾಲದಲ್ಲಿ ಅತ್ಯಧಿಕವಾಗಿ ಕಾಣುತಾ, ಒಂದು ಸಲ ನೋಡಿದ ಆಶ್ಚರ್ಯವನ್ನು ಮತ್ತೊಂದು ಸಲ ನೋಡದೆ, ನೂತನನೂತನವಾದ ವಿಶೇಷಗಳನ್ನೇ ಕಾಣುವುದರಿಂದ ಹೊಸ ಹೊಸದಾದ ಅಪಾರವಾದ ಆನಂದಗಳೊಳಗೆ ಮುಳುಗುತ್ತಾ, ಸ್ತೋತ್ರ ಮಾಡುತ್ತಾ, ಮೈಮರತು ಉಬ್ಬುತ್ತಾ ಇರುವಳು. ಬ್ರಹ್ಮಾದಿಗಳು ವೇದಾದಿಗಳಲ್ಲಿ ಹೇಳಿದ ಭಗವನ್ಮಹಿಮೆಗಳನ್ನೇ ಅಪಾರವಾಗಿ ಕಾಣುವರು. ಅವರು ಅಪಾರವಾಗಿ ಕಾಣುವ ಭಗವನ್ಮಹಿಮೆಗಳು ಲಕ್ಷ್ಮೀ ದೇವಿಯವರಿಗೇ ಪರಿಮಿತಿಯಾಗಿರುವೂ ಅಲ್ಪವಾಗಿಯೂ ಕಾಣುವುವು. ಇಂಥಾ ಮಹಿಮೆಯುಳ್ಳ ರಮಾ ದೇವಿಯರು ಅತ್ಯಲ್ಪ ಕಾಲದಲ್ಲಿ ಅಪರಿಮಿತವಾದ ಭಗವನ್ಮಹಿಮೆಗಳನ್ನು ಕಾಣುವ ಶಕ್ತಿಯುಳ್ಳವರಾದರೂ, ಹೊಸ ಹೊಸದಾಗಿಯೇ ಭಗವನ್ಮಹಿಮೆಗಳನ್ನು ಕಾಣುತ್ತಿದ್ದರೂ ಇನ್ನೂ ಅವರಿಗೇ ಗೋಚರವಾಗದ ಭಗವನ್ಮಹಿಮೆಗಳು ಅಪಾರವಾಗಿರುವುವು. ಆದುದರಿಂದ ಭಗವಂತನಲ್ಲಿ ಇರುವ ಗುಣಗಳಲ್ಲಿ ಬಹಳ ಸ್ವಲ್ಪವನ್ನೇ ರಮಾದೇವಿಯರು ತಿಳಿದಿರುವರೆಂದು ಭಾವಿಸಬೇಕು. ಲಕ್ಷ್ಮೀ ದೇವಿಯರು ಕಂಡಿರುವ ಭಗವನ್ಮಹಿಮೆಗಳನ್ನು ಪರಮಾತ್ಮನು ಅತ್ಯಲ್ಪವಾಗಿ ಪರಿಮಿತಿಯುಳ್ಳದ್ದನ್ನಾಗಿ ಕಾಣುವನು. ಪರಮಾತ್ಮನೊಬ್ಬನೇ ತನ್ನ ಮಹಿಮೆಯನ್ನು ಸಾಕಲ್ಯವಾಗಿ ತಿಳಿದಿರುವನೆಂದು ತಿಳಿಯಬೇಕು. ಇದೇ ಅರ್ಥವನ್ನೇ "ಸತ್ತತ್ವರತ್ನಮಾಲಾ" ಎಂಬ ಗ್ರಂಥದಲ್ಲಿ "ವಿಷ್ಣೋರ್ಗುಣಾ ವರ್ಣಿತಾಂಶ್ಚ ದ್ರಷ್ಟುಂ ಶಕ್ತಾಪಿ ಹಿಸ್ಫುಟಂ। ಕ್ಷಣೇಕ್ಷಣೇ ನವನವ ಸುವಿಶೇಷೋಪಲಂಭತಃ ॥" ಇತ್ಯಾದಿ ವಾಕ್ಯಗಳಿಂದ ವಿಶದವಾಗಿ ಹೇಳಿರುವರು.

ಇಂತಹ ಮಹಾಮಹಿಮೆಯುಳ್ಳ ರಮಾ ದೇವಿಯರು ಶ್ರೀ ಪರಮಾತ್ಮನ ಅನುಗ್ರಹವು ನಮಗೆ ದೊರೆಯುವಂತೆ ಮಾಡಿ, ಪ್ರತಿ ದಿನದಲ್ಲೂ ಅವನನ್ನು ಅಪರೋಕ್ಷದಲ್ಲಿ ಕಾಣುವಂತೆ ಮಾಡಿ, ನಿರ್ವಿಘ್ನದಿಂದ ಈ ಗ್ರಂಥವನ್ನು ಪೂರ್ಣಗೊಳಿಸಿ, ನಮ್ಮನ್ನು ಪರಿಪಾಲಿಸಲಿ.

ಹೀಗೆ ಭಾಗ್ಯಾತ್ಮಿಕರಾದ ಲಕ್ಷ್ಮೀ ದೇವಿಯರನ್ನು ಇದುವರಿವಿಗೂ ಪ್ರಾರ್ಥಿಸಿ ಈಗ ಚಿತ್ತಾಭಿಮಾನಿಗಳಾದ ಬ್ರಹ್ಮ, ವಾಯುಗಳು, ಇಬ್ಬರೂ

ಸಮರಾದರೂ, ಪದವಿಯಿಂದ ಕಿಂಚಿದುತ್ತಮರಾದ ಬ್ರಹ್ಮದೇವರನ್ನು ನಮಸ್ಕರಿಸಿ, ಸನ್ಮತಿಯನ್ನು ಬೇಡುತ್ತಾರೆ.

**ನಿರುಪಮಾನಂದಾತ್ಮಭವನಿ**
**ರ್ಜರ ಸಭಾಸಂಸೇವ್ಯ ಋಜುಗಣ**
**ದರಸೇ, ಸತ್ವ ಪ್ರಚುರವಾಣೀ ಮುಖಸರೋಜೇನ ॥**
**ಗರುಡ, ಶೇಷ, ಶಶಾಂಕದಳ ಶೇ**
**ಖರರಜನಕ ಜಗದ್ಗುರುವೇ, ತ್ವ**
**ಚ್ಚರಣಗಳಿಗಭಿವಂದಿಸುವೇ ಪಾಲಿಪುದು ಸನ್ಮತಿಯ ॥**

ಪದಾರ್ಥ.—ನಿರುಪಮಾನಂದ=ಉಪಮೆ ಇಲ್ಲದ ಆನಂದ ಉಳ್ಳ, ಆತ್ಮಭವ=ಆತ್ಮ=ಪರಮಾತ್ಮನಿಂದ, ಭವ = ಉದ್ಭವಿಸಿದ, ಅಥವಾ ನಿರುಪಮಾನಂದಾತ್ಮಭವ=ಉಪಮಾನರಹಿತವಾದ ಆನಂದ ರೂಪನಾದ ಪರಮಾತ್ಮನ ನಾಭಿ ಕಮಲದಿಂದ ಉದ್ಭವಿಸಿದ, ನಿರ್ಜರಸಭಾಸಂಸೇವ್ಯ = ನಿರ್ಜರ= ದೇವತೆಗಳ, ಸಭಾ=ಸಮೂಹದಿಂದ, ಸಂಸೇವ್ಯ=ಚನ್ನಾಗಿ ಸೇವಿಸಿಕೊಳ್ಳಲ್ಪಡುವ ಋಜುಗಣದರಸೆ=ಬ್ರಹ್ಮ ಪಟ್ಟಕ್ಕೆ ಅರ್ಹರಾದ ಋಜು ಗಣಗಳಿಗೆ ಒಡೆಯನಾದ, ಸತ್ವಪ್ರಚುರ=ಸತ್ವಗುಣಪ್ರಾಚುರ್ಯನಾದ (ವಿಶುದ್ಧವಾದ ಸತ್ವ ರೂಪನಾದ) ವಾಣೀಮುಖಸರೋಜೇನ=, ವಾಣೀ=ಸರಸ್ವತಿಯ, ಮುಖಸರೋಜ=ಮುಖ ಕಮಲಕ್ಕೆ, ಇನ=ಸೂರ್ಯನಂತಿರುವ, ಗರುಡ, ಶೇಷ, ಶಶಾಂಕದಳಶೇಖರರ=ಗರುಡ ಶೇಷ ರುದ್ರರ, ಜನಕ=ತಂದೆಯಾದ, ಜಗದ್ಗುರುವೇ=ಜಗತ್ತಿಗೆ ಮುಖ್ಯ ಗುರುವಾದ, ಎಲೈ ಬ್ರಹ್ಮ! ತ್ವಚ್ಚರಣಗಳಿಗೆ= ನಿನ್ನ ಪಾದಾರವಿಂದಗಳಿಗೆ, ಅಭಿವಂದಿಸುವೆ=ನಮಸ್ಕಾರ ಮಾಡುವೆನು, ಸನ್ಮತಿಯ=(ಶ್ರೀ ಪರಮಾತ್ಮನ ಪಾದಾರವಿಂದದಲ್ಲಿ ನಮ್ಮ ಮನಸ್ಸು ಲೀನವಾಗುವಂತೆ) ಉತ್ತಮವಾದ ಮತಿಯನ್ನು, ಪಾಲಿಪುದು = ದಯಪಾಲಿಸಬೇಕು (ಕೊಟ್ಟು ರಕ್ಷಿಸಬೇಕು).

ತಾತ್ಪರ್ಯಾರ್ಥ.—ಯಾವನು ಉಪಮಾನ ಕೊಡಲು ಸಾಧ್ಯವಿಲ್ಲದ ಆನಂದ ಸ್ವರೂಪನಾದ ಶ್ರೀ ಪರಮಾತ್ಮನ ಸಾಕ್ಷಾತ್ಪುತ್ರನಾಗಿರುವನೋ; ಯಾವನು ಸಮಸ್ತ ದೇವತೆಗಳಿಂದ ನಮಸ್ಕರಿಸಿಕೊಳ್ಳಲ್ಪಡುವನೋ, ಯಾವನು ವಿಶುದ್ಧವಾದ ಸತ್ವ ಸ್ವರೂಪನಾಗಿರುವನೋ, ಯಾವನು ಸರಸ್ವತೀ ದೇ

ಯಾವ ಮುಖ ಕಮಲಕ್ಕೆ ಸೂರ್ಯನಂತಿರುವನೋ, ಯಾವನು ಗರುಡ ಶೇಷ ರುದ್ರಾದಿಗಳಿಗೆ ತಂದೆಯಾಗಿರುವನೋ, ಅಂತಹ ಜಗದ್ಗುರುವಾದ ಬ್ರಹ್ಮನ ಪಾದಪದ್ಮಂಗಳಿಗೆ ನಮಸ್ಕರಿಸುವೆನು. ನನಗೆ ಚಿತ್ತಶುದ್ಧಿಯನ್ನಿತ್ತು ಸಲಹಲಿ.

ವಿಶೇಷಾರ್ಥ.—ಸಾಧಾರಣವಾಗಿ ಮನಸ್ಸು, ಬುದ್ಧಿ, ಚಿತ್ತ ಇವು ಮೂರನ್ನೂ ಒಂದಾಗಿ ಪ್ರಯೋಗಿಸುವ ಸಂಪ್ರದಾಯವಿದ್ದರೂ, ಇವು ಮೂರೂ ಬೇರೆ ಬೇರೆ ತತ್ವವಾಗಿಯೂ ಬೇರೆ ಬೇರೆ ದೇವತೆಗಳಿಂದ ಅಭಿಮನ್ಯಮಾನವಾಗಿಯೂ ಇರುವುವು. ಮನಸ್ಸೆಂದರೆ ಮೊಟ್ಟಮೊದಲು ಹುಟ್ಟುವ ಚಂಚಲ ವೃತ್ತಿಯು. ಬುದ್ಧಿ-ಎಂದರೆ, ಅದನ್ನು ನಿಶ್ಚಯಿಸಿದ ನಿಶ್ಚಲ ವೃತ್ತಿಯು. ಚಿತ್ತವೆಂದರೆ-ಸದ್ವ್ಯಕ್ತಿಯು ಮನೋಭಿಮಾನಿಯು ಚಂದ್ರನು. ಬುದ್ಧಿಗೆ ಅಭಿಮಾನಿಯು-ಬೃಹಸ್ಪತಿ, ಮತ್ತು ಉಮಾದೇವಿ. ಚಿತ್ತಾಭಿಮಾನಿಗಳು-ಬ್ರಹ್ಮ ವಾಯುಗಳು. ಅದರಲ್ಲಿ ವಾಯು ದೇವರೇ ಮುಂದಿನ ಕಲ್ಪದಲ್ಲಿ ಬ್ರಹ್ಮ ಪಟ್ಟಕ್ಕೆ ಬರುವವರು ಇಬ್ಬರೂ ಸಮರು. ಆದಗೂ ವಾಯು ದೇವರಿಗಿಂತಲೂ ಪದವಿಯಿಂದ ಕಿಂಚಿದಾಧಿಕ್ಯವಿರುವುದರಿಂದ ಪ್ರಥಮದಲ್ಲಿ ಬ್ರಹ್ಮ ದೇವರನ್ನು ನಮಸ್ಕರಿಸಿ ಪ್ರಾರ್ಥಿಸುತ್ತಾರೆ. "ನಿರುಪಮಾನಂದ" ಎಂಬ ಪದ್ಯದಿಂದ ಎಲೈ ಜಗದ್ಗುರುವೆ ನಿನ್ನ ಚರಣಗಳಿಗೆ ನಮಸ್ಕರಿಸುವೆನು ಎಂದು ಹೇಳಿರುವರು. ಬ್ರಹ್ಮ ದೇವರಿಗೆ ಜಗದ್ಗುರುತ್ವ ಹೇಗೆಂದರೆ :—

"ಜಗದ್ಗುರುತ್ವಮಾದಿಷ್ಟಂ ಮಯಾ ತೇ ಕಮಲೋದ್ಭವ" ನನ್ನಿಂದ ನಿನಗೆ ಜಗದ್ಗುರುತ್ವವು ಕೊಡಲ್ಪಟ್ಟಿದೆ. ಎಂದು ಬ್ರಹ್ಮದೇವರನ್ನು ಉದ್ದೇಶಿಸಿ ಪರಮಾತ್ಮನು ಹೇಳಿರುವುದಾಗಿ ತಾತ್ಪರ್ಯ ನಿರ್ಣಯದ ಎರಡನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ. ಮತ್ತು ಅದೇ ನಿರ್ಣಯದ ಮತ್ತೊಂದು ಕಡೆಯಲ್ಲಿ-"ಷಣ್ಣವತ್ಯಂಗುಲೋಯಸ್ತು ನ್ಯಗ್ರೋಧಪರಿಮಂಡಲಃ ಸಪ್ತಪಾದಶ್ಚತುರ್ಹಸ್ತೋ ದ್ವಾತ್ರಿಂಶಲ್ಲಕ್ಷಣೈರ್ಯುತಃ ಅಸಂಶಯಃ ಸಂಶಯಚ್ಛಿದ್ಗುರುರುಕ್ತೋ ಮನೀಷಿಭಿಃ ತಸ್ಮಾದ್ಬ್ರಹ್ಮಾ ಗುರುರ್ಮುಖ್ಯಃ ಸರ್ವೇಷಾಮೇವ ಸರ್ವದಾ ||" ಎಂದು ಹೇಳಲ್ಪಟ್ಟಿದೆ. ಇದರ ಅರ್ಥವೇನೆಂದರೆ :—ಗುರುವಿನ ಲಕ್ಷಣಗಳನ್ನು ಹೇಳುತ್ತಾರೆ. ೯೬ ಅಂಗುಲ ಎತ್ತರವಿರಬೇಕು. ತನ್ನ ಬಾಹು ಅಳತೆಯನ್ನು ತೆಗೆದುಕೊಂಡು ಪಾದ ಮೊದಲು ತಲೆಯ ವರೆಗೂ

ಅಳತೆ ಮಾಡಿದರೆ ಆ ಅಳತೆಯೂ ಈ ಅಳತೆಯೂ ಸರಿಹೋಗಬೇಕು; ಅಂ ದರೆ ಬಾಹು ಅಳತೆಯೂ ಎತ್ತರದ ಅಳತೆಯೂ ೯೬ ಅಂಗುಲಗಳಿರಬೇಕು. ೨೪ ಅಂಗುಲಗಳಿಗೆ ಒಂದು ಮೊಳವೆಂದು ಹೆಸರು. ಅಂತಹ ಮೊಳಗಳು ನಾಲ್ಕು ಆದರೆ ೯೬ ಅಂಗುಲಗಳು ಆಗುವವು. ೪ ಮೊಳಗಳನ್ನು ಹೆಜ್ಜೆಗ ಳಿಂದ ಅಳೆದರೆ ೭ ಹೆಜ್ಜೆಗಳು ಆಗಬೇಕು. ಹೀಗೆ ತನ್ನ ಬಾಹು ಅಳತೆ ಯೂ, ಎತ್ತರವೂ ಸರಿಹೋಗುವುದಕ್ಕೆ ನ್ಯಗ್ರೋಧ ಪರಿಮಂಡಲವೆನ್ನುವ ರು. ೩೨ ಲಕ್ಷಣಗಳುಳ್ಳವನಾಗಿರಬೇಕು. ತನಗೆ ಸಂಶಯವಿರಬಾರದು. ಮತ್ತೊಬ್ಬರ ಸಂಶಯವನ್ನು ಚನ್ನಾಗಿ ಪರಿಹಾರ ಮಾಡುವವನಾಗಿರಬೇಕು. ಇಂತಹ ಗುಣಗಳುಳ್ಳವನೇ ಗುರುವೆಂದೆನಿಸುವನು. ಇಂತಹ ಸಂಪೂರ್ಣ ಗುರು ಲಕ್ಷಣಗಳಿಂದ ಕೂಡಿದವರು ಬ್ರಹ್ಮದೇವರು ಒಬ್ಬರೇ. ವಾಯು ದೇವರು ಬ್ರಹ್ಮದೇವರಿಗೆ ಸಮರಾದುದರಿಂದಲೂ, ಮುಂದೆ ಇವರೇ ಬ್ರಹ್ಮ ಪದವಿಯನ್ನು ಪಡೆಯುವವರಾದುದರಿಂದಲೂ ವಾಯು ದೇವರೂ ಗುರುಗಳೆ ನಿಸುವರು. ಹೀಗೆ ನಿರ್ಣಯ ವಾಕ್ಯವಿರುವುದರಿಂದ ದಾಸರಾಯರು "ಜಗ ದ್ಗುರುವೆ" ಎಂದು ಸಂಬೋಧನೆ ಮಾಡಿರುವರೆಂದು ತಿಳಿಯಬೇಕು. "ನಿರು ಪಮಾನಂದಾತ್ಮಭವ" ಎಂಬ ವಿಶೇಷಣದಿಂದ ಪರಮಾತ್ಮನ ನಾಭಿ ಕಮ ಲದಿಂದ ಜನಿಸಿದುದರಿಂದ ಮಹಾಮಹಿಮೆಯುಳ್ಳವರೆಂದು ತೋರಿಸಿದರು. ಮನ್ಮಥನೂ ಪರಮಾತ್ಮನ ಪುತ್ರನೇ ಆಗಿರುವನು. ಇವರೇ ಹೇಗೆ ಶ್ರೇಷ್ಠ ರು? ಅಂದರೆ "ನಿರ್ಜರಸಭಾಸಂಸೇವ್ಯ" ಎಂದು ಹೇಳಿದರು. ದೇವೇಂ ದ್ರನೂ ದೇವ ಸಮೂಹದಿಂದ ವಂದ್ಯನು. "ಮುಖಾದಿಂದ್ರಾಶ್ಚಾಗ್ನಿಶ್ಚ" ಎಂಬ ವಾಕ್ಯದಿಂದ ದೇವೇಂದ್ರನೂ ಪರಮಾತ್ಮನ ಪುತ್ರನೆ ಬ್ರಹ್ಮದೇವ ರೇ ಶ್ರೇಷ್ಠರೆಂದೇಕೆ ಹೇಳುವರೆಂದರೆ "ಋಜುಗುಣದರಸೆ" ಅಂದರು. ಈ ಅಧಿಕಾರವು ಬ್ರಹ್ಮದೇವರನ್ನುಳಿದು ಮತ್ತಾರಲ್ಲೂ ಇಲ್ಲ. ಆದುದರಿಂ ದಲೇ ಬ್ರಹ್ಮದೇವರು ಸಕಲ ಜೀವೋತ್ತಮರೆಂದು ಸ್ಥಾಪಿತವಾಯಿತು. ಇದಲ್ಲದೆ ರುದ್ರಾದಿ ದೇವತೆಗಳಲ್ಲಿ ರಜೋಗುಣವು ಹೆಚ್ಚಾಗಿರುವುದು. ಇವ ರಲ್ಲಿ ಹಾಗಿಲ್ಲವೆಂದು "ಸತ್ವಪ್ರಚುರ" ಎಂದು ಹೇಳಿದರು. "ವಿಶುದ್ಧ ಸತ್ವಂ ಬ್ರಹ್ಮಾಖ್ಯಂ" ಎಂಬ ಭಾಗವತದ ವಾಕ್ಯದಿಂದ ಸತ್ವಗುಣಪ್ರಾ ಚುರ್ಯ ಉಳ್ಳವರೆಂದು ಸೂಚಿಸಿರುವರು. ಇತ್ಯಾದಿ ವಾಕ್ಯಗಳಿಂದ ಇವ

ರಿಗೆ ಅಸುರಾವೇಶವಾಗಲೀ, ಅಜ್ಞಾನಾದಿಗಳಾಗಲೀ ಇಲ್ಲವೆಂದು ಹೇಳಿದಂ ತಾಯಿತು. ಮತ್ತೂ ನಮಗೆ ಒಬ್ಬ ದೊಡ್ಡ ಅಧಿಕಾರಿಯಿಂದ ಏನಾದ ರೂ ಕೆಲಸವಾಗಬೇಕಾಗಿದ್ದರೆ ಆತನನ್ನೇ ನೇರವಾಗಿ ಕಂಡು ಕೇಳಿದರೆ ಕಾ ರ್ಯವು ಕೆಟ್ಟು ಹೋಗುವ ಸಂಭವ ಉಂಟು. ಆದಕ್ಕಾಗಿ ಪ್ರಥಮತಃ ಆ ಅಧಿಕಾರಿಗೆ ಪ್ರೀತಿಪಾತ್ರನಾದವನ ದಯೆಯನ್ನು ಪಡೆದು, ಆತನ ದ್ವಾರಾ ಅಧಿಕಾರಿಯನ್ನು ಕಂಡರೆ ಕಾರ್ಯವು ಕೈಗೂಡುವ ಸಂಭವವು ಲೋಕದ ವಾಡಿ ಕೆಯಲ್ಲಿರುವುದು. ಅದನ್ನನುಸರಿಸಿ ದಾಸರಾಯರು, ಬ್ರಹ್ಮದೇವರ ಪರಿವಾ ರಗಳಲ್ಲಿ ಶ್ರೇಷ್ಠರಾದ ಅವರ ಪತ್ನಿಯ ದ್ವಾರವೇ ಅವರ ಪ್ರಸಾದವನ್ನು ಪಡೆಯಲುದ್ದೇಶಿಸಿ " ವಾಣೀಮುಖಸರೋಜೇನ " ಅಂದರು. ಕಮಲವು ಸೂರ್ಯೋದಯವಾಗಲು ಹೇಗೆ ವಿಕಸಿತವಾಗುವುದೋ ಹಾಗೆಯೇ ಸರಸ್ವತೀ ದೇವಿಯವರ ಮುಖ ಕಮಲವು ಬ್ರಹ್ಮದೇವರೆಂಬ ಸೂರ್ಯನನ್ನು ಕಂಡ ಕೂಡ ಲೇ ವಿಕಾಸ ಹೊಂದುತ್ತವೆಂಬ ಭಾವನೆಯಿಂದ ಈ ಪದವನ್ನು ಹಾಕಿರುವರು. ಇದರಿಂದ ಬಂದ ಲಾಭಾಂಶವೇನು, ಪ್ರಾಯಶಃ ಪತಿಯ ಮುಖವನ್ನು ನೋ ಡಿದರೆ ಸತಿಯ ಮುಖವು ವಿಕಾಸ ಹೊಂದುವುದು ; ಇದರಿಂದ ಸತಿಯ ಪಾತಿ ವ್ರತ್ಯವನ್ನೂ, ಅವರಿಬ್ಬರ ಅನುಕೂಲ ದಾಂಪತ್ಯವನ್ನು ಪ್ರಕಟಿಸಿದಂತಾಯಿ ತು. ಹೀಗೆ ಬಣ್ಣಿಸಿದುದರಿಂದ ಸರಸ್ವತೀ ದೇವಿಯವರ ಪ್ರಸಾದವು ದೊರೆ ತು ಅವರ ದ್ವಾರಾ ಬ್ರಹ್ಮದೇವರ ಪ್ರಸಾದವು ಲಭಿಸುವುದೆಂದು ಅಭಿಪ್ರಾ ಯ. ಮತ್ತು " ಗರುಡ, ಶೇಷ, ಶಶಾಂಕದಳಶೇಖರರ ಜನಕ " ಗರುಡ, ಶೇಷ, ರುದ್ರರ ತಂದೆ ಎಂದು ಹೇಳಿದರು. ಇದಕ್ಕೆ ಆಧಾರವೇನೆಂದರೆ :— ಮಹಾಭಾರತ ತಾತ್ಪರ್ಯ ನಿರ್ಣಯದ ೩ನೆಯ ಅಧ್ಯಾಯದಲ್ಲಿ " ವ್ಯೂಹಶ್ಚ ತುರ್ಧಾಭಗವಾನ್ " ಎಂಬ ೯ನೆಯ ಶ್ಲೋಕ ಮೊದಲುಗೊಂಡು " ಶ್ರೌನಾ ಹನಂ ಶಯನಂ ಚೈವವಿಷ್ಣೋಃ " ಎಂಬ ೧೩ನೆಯ ಶ್ಲೋಕದ ವರೆವಿಗೂ ಇವರ ಉತ್ಪತ್ತಿಯನ್ನು ಹೇಳಿರುವರು. ಇದರ ತಾತ್ಪರ್ಯವೇನೆಂದರೆ :— " ಶ್ರೀ ಪರಮಾತ್ಮನು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಗಳೆಂಬ ೪ ರೂಪಗಳನ್ನು ಧರಿಸಿದನು. ಲಕ್ಷ್ಮೀದೇವಿಯರೂ ೪ ರೂಪಗಳ ನ್ನು ಧರಿಸಿ ೪ ರೂಪಧಾರಿಯಾದ ಪರಮಾತ್ಮನಿಗೆ ಪತ್ನಿಯಾದರು. ಅದರಲ್ಲಿ ವಾಸುದೇವ ನಾಮಕನಾದ ಶ್ರೀ ಪರಮಾತ್ಮನ ದೆಸೆಯಿಂದ ಮಾಯಾ ದೇವಿ

ಯು ಪುರುಷನನ್ನು ಪಡೆದಳು. ಸಂಕರ್ಷಣನ ದೆಸೆಯಿಂದ ಜಯಾ ದೇವಿ ಯು ಸೂತ್ರನನ್ನು ಪಡೆದಳು. "ಸೂತ್ರಂ ಸಮಾಯುಃ ಪುರುಷೋವಿರಿಂಚಿಃ" ಸೂತ್ರನೇ ವಾಯು ದೇವರು, ಪುರುಷನು ಬ್ರಹ್ಮದೇವರು, ಪ್ರದ್ಯು ಮ್ನನ ದೆಸೆಯಿಂದ ಕೃತಿ ದೇವಿಯಲ್ಲಿ ಇಬ್ಬರು ಹೆಣ್ಣು ಮಕ್ಕಳು ಜನಿಸಿದರು. ಮೊದಲನೆಯವಳು-ಪ್ರಕೃತಿ, ಎರಡನೆಯವಳು-ಶ್ರದ್ಧಾ. ಇವರಿಬ್ಬರೇ ಸರ ಸ್ವತೀ ಭಾರತೀಯರು. ಬ್ರಹ್ಮದೇವರ ದೆಸೆಯಿಂದ ಸರಸ್ವತಿಯಲ್ಲಿ ಜೀವ ನೂ, ವಾಯು ದೇವರ ದೆಸೆಯಿಂದ ಭಾರತಿಯಲ್ಲಿ ಕಾಲನೂ ಜನಿಸಿದರು. ಅವರಲ್ಲಿ ಜೀವನೇ ಶೇಷನು. ಕಾಲನು ಗರುಡನು. ಇವರಿಬ್ಬರಲ್ಲಿ ಒಬ್ಬನು ಪರಮಾತ್ಮನಿಗೆ ಹಾಸಿಗೆಯಾದನು. ಮತ್ತೊಬ್ಬನು ವಾಹನನಾದನು ಎಂಬು ನಿರ್ಣಯ ವಾಕ್ಯದ ತಾತ್ಪರ್ಯ. ಇದೇ ಅರ್ಥವನ್ನೇ ವಿಷ್ಣುರಹಸ್ಯದಲ್ಲೂ ಹೇಳಿರುವರು. ಬ್ರಹ್ಮದೇವರಿಂದ ರುದ್ರದೇವರು ಜನಿಸಿದರೆಂಬುವುದಕ್ಕೆ ಭಾ ಗವತ ನಿರ್ಣಯಾದಿಗಳೂ ಆಧಾರವಾಗಿರುವುವು. ಶೇಷ, ಗರುಡರು, ಬ್ರಹ್ಮ ವಾಯುಗಳ ಮಕ್ಕಳಾದರೂ ವಾಯು ದೇವರೇ ಕಲ್ಪಾಂತದಲ್ಲಿ ಬ್ರಹ್ಮರಾಗು ವುದರಿಂದ ದಾಸರಾಯರು ಗರುಡ, ಶೇಷ, ರುದ್ರರನ್ನು ಬ್ರಹ್ಮ ದೇವರ ಮ ಕ್ಕಳೆಂದು ಹೇಳಿರುವರು. ಇಂತಹ ಬ್ರಹ್ಮ ದೇವರಿಗೆ ನಮಸ್ಕಾರವನ್ನು ಮಾ ಡುವೆನು, ಸನ್ಮತಿಯ ಪಾಲಿಸಲಿ.

ಮುಂದಿನ ಪದ್ಯದಿಂದ ಜಗತ್ತಿಗೆ ಮುಖ್ಯ ಗುರುಗಳಾದ, ಹನುಮ ದ್ಭೀಮ ಮಧ್ವಾವತಾರಗಳಿಂದ ರಾಮ, ಕೃಷ್ಣ, ವೇದವ್ಯಾಸರ ಸೇವಾ ಮಾಡಿ, ಹರಿ ಸರ್ವೋತ್ತಮ, ವಾಯು ಜೀವೋತ್ತಮರೆಂಬ ಜ್ಞಾನದೀಪ ಪಂಚ ಭೇದ ತಾರತಮ್ಯಾದಿಗಳನ್ನು ತಿಳಿದು ಪರಮಾತ್ಮನನ್ನು ಉಪಾಸನೆ ಮಾಡುವುದೇ ಮುಕ್ತಿಗೆ ಸಾಧನವೆಂದು ವಿಧಿಸಿ, ಜಗತ್ತನ್ನುದ್ಧರಿಸಿದ ವಾಯು ದೇವರನ್ನು ಪ್ರಾರ್ಥಿಸುತ್ತಾರೆ.

**ಮೂಲ ||** **ಅರು ಮೂರೆರಡೊಂದು ಸಾವಿರ**
**ಮೂರೆರಡು ಶತಶ್ವಾಸಜಪಗಳ ಮೂರುವಿಧ**
**ಜೀವರೊಳಗಬ್ಜಜ ಕಲ್ಪ ಪರಿಯಂತ ||**
**ತಾರತಮ್ಯ ಸತ್ವರಿಗೆ ಸುಖ ಸಂಸಾರಮಿಶ್ರ**
**ರಿಗಧಮಜನರಿಗ ಪಾರದುಃಖಗಳೀವಗುರು**
**ಪವಮಾನ ಸಲಹೆಮ** ||೪||

ಪದ್ಯಾರ್ಥ.—" ಆರು ಮೂರೆರಡೊಂದು ಸಾವಿರ ಮೂರೆರಡು ಶತ ಶ್ವಾಸ ಜಪಗಳ " ಆರು ಮೂರು (೬×೩=೧೮) ಎರಡೊಂದು (೨+೧=೩) ಸಾವಿರ, ಅಂತು ೨೧ ಸಾವಿರದ, ಮೂರೆರಡು ಶತ=(೩×೨×೧೦೦=೬೦೦) ಶ್ವಾಸ ಜಪಗಳ (೨೧,೬೦೦) ಇಪ್ಪತ್ತೊಂದು ಸಾವಿರದ ಆರುನೂರು ಶ್ವಾಸ ರೂಪ ಷಡಕ್ಷರಾತ್ಮಕ ಹಂಸಮಂತ್ರ ಜಪಗಳನ್ನು, (ಪ್ರತಿ ದಿವಸದಲ್ಲೂ) ಮೂರು ವಿಧ ಜೀವರೊಳಗೆ=ಸಾತ್ವಿಕ, ರಾಜಸ, ತಾಮಸರೆಂಬ ತ್ರಿವಿಧ ಜೀವರಾಶಿಗಳಲ್ಲಿನ್ನು, ಅಬ್ಜಜಕಲ್ಪಪರ್ಯಂತ = ಬ್ರಹ್ಮಕಲ್ಪ ಪರ್ಯಂತವಾಗಿ, ತಾರಚಿಸಿ=ತಾನು ಮಾಡಿಸಿ, ಸತ್ವರಿಗೆ=ಸಾತ್ವಿಕರಿಗೆ, ಸುಖ=ಮುಕ್ತಿ ಸುಖವನ್ನೂ, ಮಿಶ್ರರಿಗೆ=ರಾಜಸಜೀವರಿಗೆ, ಸಂಸಾರ=ಸುಖ ದುಃಖ ಮಿಶ್ರವಾದ ನಿತ್ಯ ಸಂಸಾರವನ್ನೂ, ಅಧಮರಿಗೆ=ತಾಮಸ ಜನರಿಗೆ, ಅಪಾರದುಃಖಗಳ=ಸಹಿಸಲಶಕ್ಯವಾದ ದುಃಖಗಳುಳ್ಳ ಅಂಧಂತಮಸ್ಸನ್ನೂ, ಈವ=ಕೊಡುವ, ಗುರುಪವಮಾನ=ಗುರುಮುಖ್ಯಪ್ರಾಣ ! ಎಮ್ಮ = ನಮ್ಮನ್ನು, ಸಲಹು= ಪಂಚಭೇದ ತಾರತಮ್ಯಾದಿ ಜ್ಞಾನವನ್ನು ಕೊಟ್ಟುದ್ಧರಿಸು.

ತಾತ್ಪರ್ಯ.—ಎಲೈ ಪವಮಾನ ! ಸಾತ್ವಿಕರು, ರಾಜಸರು, ತಾಮಸರೆಂಬ ಮೂರು ವಿಧ ಜೀವರೊಳಗಿದ್ದು ಪ್ರತಿ ದಿವಸದಲ್ಲೂ ೨೧,೬೦೦ ಶ್ವಾಸರೂಪವಾದ ಹಂಸಮಂತ್ರ ಜಪಗಳನ್ನು ಬ್ರಹ್ಮ ಪ್ರಳಯದ ಪರಿಯಂತವೂ ಮಾಡಿಸಿ, ಸಾತ್ವಿಕರಿಗೆ ಮುಕ್ತಿಯನ್ನೂ, ರಾಜಸರಿಗೆ ನಿತ್ಯ ಸಂಸಾರವನ್ನೂ, ತಾಮಸರಿಗೆ ಅಂಧಂತಮಸ್ಸನ್ನೂ, ಕೊಡುವುದಕ್ಕೆ ಕಾರಣಭೂತನಾಗಿರುವಿಯೋ ಅಂತಃ ನೀನು ನಮ್ಮನ್ನು ಸಲಹು.

ವಿಶೇಷಾರ್ಥ —ದಾಸರಾಯರು " ತ್ವಚ್ಚರಣಗಳಿಗಭಿವಂದಿಸುವೆ ಪಾಲಿಪುದು ಸನ್ಮತಿಯ " ಎಂಬ ಪದ್ಯದಿಂದ ಬ್ರಹ್ಮದೇವರಿಗೆ ನಮಸ್ಕಾರವನ್ನು ಮಾಡಿ, ಸನ್ಮತಿಯ ಕೊಡೆಂದು ಹೇಗೆ ಪ್ರಾರ್ಥನೆ ಮಾಡಿಕೊಂಡಿರುವರೋ ಹಾಗೆಯೆ ವಾಯುದೇವರಿಗೆ ನಮಸ್ಕಾರವನ್ನು ಮಾಡದೆ " ಗುರುಪವಮಾನ ಸಲಹೆಮ್ಮ " ಎಂದು ಪ್ರಾರ್ಥನೆಯನ್ನು ಮಾತ್ರ ಮಾಡಿರುವರು. ಇದು ಏಕೆ ? ವಾಯುದೇವರೇ ಬ್ರಹ್ಮ ಪದವಿಗೆ ಬರುವುದರಿಂದ, ಬ್ರಹ್ಮ ಶಬ್ದದಿಂದಲೇ ವಾಯುದೇವರನ್ನೂ ನಮಸ್ಕಾರ ಮಾಡಿದಂತಾಯಿತೆಂದು ಭಾ

ಎಸಿ ವಾಯುದೇವರಿಗೆ ಬೇರೆ ನಮಸ್ಕಾರ ಮಾಡಲಿಲ್ಲ. ವಾಯುದೇವರಿಗೆ ಬೇರೆ ನಮಸ್ಕಾರ ಮಾಡಕೂಡದೆಂಬ ವಿಧಿ ಏನೂ ಇಲ್ಲ. ಏಕೆ ಮಾಡಲಿಲ್ಲ ವೆಂದರೆ,-ಬ್ರಹ್ಮದೇವರಿಗೂ, ವಾಯುದೇವರಿಗೂ ಪದವಿಯಲ್ಲಿ ಮಾತ್ರ ಭೇದವೇ ಹೊರತು ಮತ್ತಾವ ಭೇದವೂ ಇಲ್ಲ ವಾಯು ದೇವರೇ ಬ್ರಹ್ಮದೇವರು ಎಂಬ ಜನರಿಗೆ ತಿಳಿಸುವುದಕ್ಕಾಗಿಯೇ ವಾಯು ದೇವರಿಗೆ ಬೇರೆ ನಮಸ್ಕಾರವನ್ನು ಮಾಡಲಿಲ್ಲ. ಆದರೂ ವಾಯು ಪದವಿಯಿಂದ ಜನರನ್ನುದ್ಧರಿಸುವ ಬಗೆ ಬೇರೆ. ಬ್ರಹ್ಮ ಪದವಿಯಿಂದ ಜನೋಪಕಾರ ಆಗುವ ಬಗೆಯೇ ಬೇರೆ. ಆದಕ್ಕಾಗಿಯೇ ಬ್ರಹ್ಮ ದೇವರಿಂದ ಚಿತ್ತಶುದ್ಧಿಯನ್ನು ಮಾತ್ರ ಬೇಡಿ, ವಾಯುದೇವರಿಂದ ಲೋಕಕ್ಕಾಗುವ ಮಹೋಪಕಾರವನ್ನು ತಿಳಿಸಿ, ಅವರಿಂದ ತಮಗೂ ಈ ಗ್ರಂಥವನ್ನು ಶ್ರವಣ ಪಠನಾದಿಗಳನ್ನು ಮಾಡುವ ಜನರಿಗೂ ಸಹ ಆಗಬೇಕಾದ ಉಪಕಾರವನ್ನು ಬೇಡುತ್ತಾರೆ. ವಾಯು ದೇವರಿಂದ ಜನರಿಗೆ ಆಗುವ ಉಪಕಾರವಾವುದೆಂದರೆ :—ಲೋಕದಲ್ಲಿ ಸಕಲ ಪ್ರಾಣಿಗಳೂ ಶ್ವಾಸ ಬಿಡುತ್ತಿರುವರಷ್ಟೆ ? ಈ ಶ್ವಾಸಗಳನ್ನು ವಾಯು ದೇವರೇ ಪ್ರಾಣಿಗಳಲ್ಲಿದ್ದು ಮಾಡಿಸುವರು. ಅವು ಸಾಧಾರಣವಾಗಿ ದಿವಸ ಒಂದಕ್ಕೆ (ಅಂದರೆ ೬೦ ಘಳಿಗೆಯಲ್ಲಿ) ೨೧,೬೦೦ ಆಗುವುವು ಜೀವರಾಶಿಗಳು ದೇವಮನುಷ್ಯಾದಿ ಭೇದಗಳಿಂದ ಸಾತ್ವಿಕರು, ರಾಜಸರು, ತಾಮಸರೆಂಬ ಮೂರು ವಿಧರಾಗಿ ಭಾಗಿಸಲ್ಪಟ್ಟಿರುವರು. ಶ್ವಾಸದಲ್ಲಿ-ಶ್ವಾಸ, ಉಚ್ಛ್ವಾಸ, ನಿಶ್ವಾಸಗಳೆಂಬ ಮೂರು ವಿಧಗಳುಂಟು. ಶ್ವಾಸವೆಂದರೆ-ಮೂಗಿನಿಂದ ಗಾಳಿಯನ್ನು ಹೊರಗೆ ಬಿಡುವುದು. ಉಚ್ಛ್ವಾಸವೆಂದರೆ-ಗಾಳಿಯನ್ನು ಒಳಗೆ ಸೆಳೆದುಕೊಳ್ಳುವುದು. ನಿಶ್ವಾಸವೆಂದರೆ-ಮಧ್ಯಮವಾದ ವಿರಾಮ ಕಾಲ. ಇವು ಮೂರೂ ಸೇರಿ ಒಂದು ಶ್ವಾಸವಾಗುವುದು. ಇಂತಹ ಶ್ವಾಸಗಳು ೨೧,೬೦೦ ರನ್ನು ಪ್ರತಿ ದಿವಸದಲ್ಲೂ ಮನುಷ್ಯಾದಿಗಳು ಬಿಡುತ್ತಿರುವರು ಈ ಶ್ವಾಸಗಳು ಬರೀ ಶ್ವಾಸಗಳೆಂದೆನ್ನಿಸಿಕೊಳ್ಳದೆ ಆರು ಅಕ್ಷರಗಳಿಂದ ಕೂಡಿದ ಹಂಸ ಮಂತ್ರ ಜಪವೆಂದೆನ್ನಿಸಿಕೊಳ್ಳುವುವು. ಶ್ವಾಸ ರೂಪವಾದ ಈ ಹಂಸ ಮಂತ್ರ ಜಪವನ್ನು ತ್ರಿವಿಧ ಜೀವರಾಶಿಗಳೊಳಗಿದ್ದು ವಾಯು ದೇವರು ತಾವು ಮಾಡಿ, ಜೀವರಿಂದಲೂ ಮಾಡಿಸುತ್ತಿರುವರು. ಪ್ರಾಣಿಗಳು ಬಿಡುವ ಶ್ವಾಸಗಳು ಮಂತ್ರ ಜಪಗಳೆಂದು ಹೇಗೆ ತಿಳಿಯುವುದು ಎಂದರೆ--ಹಂಸ ಮಂತ್ರವು

" ಹಂಸಃ, ಸೋऽಹಂ, ಸ್ವಾಹಾ " ಎಂಬ ಆರು ಅಕ್ಷರಗಳಿಂದ ಕೂಡಿರುವು ದು. ಹಂಸಃ ಎಂಬ ಎರಡು ಅಕ್ಷರಗಳು ವಿರಾಮ ಕಾಲವು. ಸೋऽಹಂ ಎಂಬ ಎರಡು ಅಕ್ಷರಗಳು ಉಚ್ಛ್ವಾಸ ಕಾಲವು ಅಂದರೆ ಗಾಳಿಯನ್ನು ಸೆಳೆದುಕೊ ಳ್ಳುವ ಕಾಲವು. ಸ್ವಾಹಾ ಎಂಬ ಎರಡು ಅಕ್ಷರಗಳು ಶ್ವಾಸ ಬಿಡುವ ಕಾ ಲವು. ಈ ವಿಷಯವನ್ನು ಒಬ್ಬೊಬ್ಬರೂ ಚೆನ್ನಾಗಿ ಪರೀಕ್ಷಿಸಿ ನೋಡಬಹುದು ಬಾಯಿಯನ್ನು ಮುಚ್ಚಿಕೊಂಡು ಮೂಗಿನಿಂದ ಮಾತ್ರ ಶ್ವಾಸವನ್ನು ಬಿಡು ತ್ತಾ ಪರೀಕ್ಷಿಸಿರಿ! ಶ್ವಾಸವೂ ಉಚ್ಛ್ವಾಸವೂ ಇಲ್ಲದ ವಿರಾಮ ಕಾಲದಲ್ಲಿ " ಹಂಸಃ " ಎಂಬ ಎರಡು ಅಕ್ಷರಗಳನ್ನು ಮನಸಾ ಅಂದುಕೊಳ್ಳಿ. ಆಗ ಉಮ್ಮು ಹಿಡಿಯುವುದರಿಂದ ಆಯಾಸವು ಆಗುವುದಿಲ್ಲ. ಗಾಳಿಯನ್ನು ಸೆಳೆ ದುಕೊಳ್ಳುವಾಗ " ಸೋऽಹಂ " ಅನ್ನಿ! ತಾನಾಗಿ ಅದು ಉಚ್ಛ್ವಾಸವಾ ಗುವುದು. ಮತ್ತೂ ಶ್ವಾಸವನ್ನು ಹೊರಗೆ ಬಿಡುವಾಗ " ಸ್ವಾಹಾ " ಅನ್ನಿ! ಸುಲಭವಾಗಿ ಶ್ವಾಸವನ್ನು ಬಿಡಬಹುದು. ಇದೇ ಹಂಸಮಂತ್ರ ಜಪವು. ಮೂರು ವಿಧ ಜೀವರಾಶಿಗಳಲ್ಲೂ ವಾಯು ದೇವರು ಈ ಒಂದೇ ಮಂತ್ರವನ್ನು ಜಪ ಮಾಡಿಸುತ್ತಿದ್ದರೂ, ಜಪದ ಫಲವನ್ನು ಮಾತ್ರ ಮೂರು ವಿಧ ಪ್ರಾಣಿ ಗಳಿಗೂ ಮೂರು ವಿಧವಾಗಿ ಕೊಡಿಸುವರು. ಅದೇಕೆಂದರೆ:—ಮಂತ್ರಾ ರ್ಥದ ಉಪಾಸನಾ ಭೇದದಿಂದ ಫಲವು ಭೇದವಾಗುವುದು ಸಾತ್ವಿಕರು ತಾವು ಬಿಡುವುದು ತಿದಿ ಮೊದಲಾದುವುಗಳಿಂದ ಹೊರಡುವ ಬರೀ ಗಾಳಿಯಂ ತಲ್ಲವೆಂತಲೂ ಹಂಸ ಮಂತ್ರವನ್ನು ಜಪಿಸುತ್ತೇವೆಂತಲೂ ಅನುಸಂಧಾನ ಮಾ ಡುವರು. ಅದರ ಕ್ರಮ ಹೇಗೆಂದರೆ:—ತಂತ್ರಸಾರದಲ್ಲಿ ಹೇಳಲ್ಪಟ್ಟ ೭೨ ಮಹಾಮಂತ್ರಗಳ ಪೈಕಿ ಇದೊಂದು ಮುಖ್ಯ ಮಂತ್ರವಾಗಿರುವುದು. " ಪೂ ರ್ವೇದ್ಯುಃ ಪ್ರಾತಃ ಸೂರ್ಯೋದಯಮಾರಭ್ಯ ಅದ್ಯಸೂರ್ಯೋದಯ ಪರ್ಯಂತಂ ಮದ್ದೇಹಸ್ಥಿತ ಮುಖ್ಯ ಪ್ರಾಣಕೃತೇನ, ಮುಖ್ಯಪ್ರಾಣಪ್ರೇರಿತೇನ ಮಯಾ ಕೃತೇನಚ ಷಟ್ ಶತಾಧಿಕ ಏಕವಿಂಶತ್ಸಹಸ್ರ ಸಂಖ್ಯಾಕ ಶ್ವಾಸ ರೂಪ ಷಡ ಕ್ಷರ ಹಂಸಮಹಾಮಂತ್ರ ಜಪೇನ ಭಗವಾನ್ ಮುಖ್ಯ ಪ್ರಾಣಾಂತರ್ಗತ ಹಂ ಸರೂಪೀ ಶ್ರೀ ಲಕ್ಷ್ಮೀ ನಾರಾಯಣಃ ಪ್ರೀಯತಾಂ " ಇದರರ್ಥವೇನೆಂದರೆ:— " ನಿನ್ನೇ ದಿವಸ ಸೂರ್ಯೋದಯದ ಮೊದಲುಗೊಂಡು ಈವತ್ತಿನ ಸೂರ್ಯೋದ ಯದ ವರೆವಿಗೂ ನನ್ನೊಳಗಿರುವ ವಾಯು ದೇವರು ಮಾಡಿದ, ಮತ್ತೂ

ಅವರ ಪ್ರೇರಣೆಯಿಂದ ನಾನು ಮಾಡಿದ ೨೧,೬೦೦ ಸಂಖ್ಯಾ ಉಳ್ಳ ಶ್ವಾಸ ರೂಪಗಳಾದ ಆರು ಅಕ್ಷರಗಳಿಂದ ಕೂಡಿದ ಹಂಸಮಹಾಮಂತ್ರ ಜಪಗಳಿಂದ ಮುಖ್ಯ ಪ್ರಾಣಾಂತರ್ಯಾಮಿಯಾದ ಶ್ರೀ ಲಕ್ಷ್ಮೀ ನಾರಾಯಣನು ಪ್ರೀತನಾಗಲಿ." ಎಂಬೀ ಅರ್ಥಾನುಸಂಧಾನ ಪೂರ್ವಕವಾಗಿ ಬಿಟ್ಟ ಶ್ವಾಸಗಳನ್ನು ಪರಮಾತ್ಮನಿಗೆ ಜಪ ಭಾವನೆಯಿಂದ ಸಮರ್ಪಿಸಿ, ಈ ಶ್ಲೋಕವನ್ನು ಹೇಳುವರು.

ಮುಖ್ಯಪ್ರಾಣೇನ ಮದ್ದೇಹೇ ಮಂತ್ರ ತ್ರಯಜಪಸ್ಸದಾ
ಅನುಗ್ರಹಾಯಮೇವಿಷ್ಣು ಪ್ರೀತಯೇಕ್ರಿಯತೇಽಪಿಸಃ ||
ಏಕವಿಂಶತ್ಸಹಸ್ರಾತ್ಮಾ ಸಷಟ್ಶತಮಹರ್ನಿಶಂ
ತತ್ಸರ್ವಂವಿಷ್ಣುಪೂಜಾಸ್ತು ಪ್ರಿಯತಾಂಪ್ರಾಣಮಾಪತಿಃ ||೪||

ಇದರ ಅರ್ಥ.—ಮುಖ್ಯ ಪ್ರಾಣದೇವರು ನನ್ನ ದೇಹದೊಳಗಿದ್ದು, ಹಂಸಃ, ಸೋಽಹಂ, ಸ್ವಾಹಾ ಎಂಬ ಮೂರು ಮಂತ್ರಗಳ ಜಪಗಳನ್ನು ನನಗೆ ಅನುಗ್ರಹ ಮಾಡುವುದಕ್ಕೋಸ್ಕರವೂ, ವಿಷ್ಣು ಪ್ರೀತ್ಯರ್ಥವಾಗಿಯೂ ಮಾಡಿಸುತ್ತಿರುವರು. ಹೀಗೆ ನಾನು ಹಗಲು ರಾತ್ರಿಗಳಲ್ಲಿ ಮಾಡುವ ೨೧,೬೦೦ ಶ್ವಾಸ ರೂಪಗಳಾದ ಜಪಗಳೆಲ್ಲವೂ ವಿಷ್ಣು ಪೂಜೆಯಾಗಲಿ. ಇದರಿಂದ ಪ್ರಾಣ ದೇವರಿಗೂ ಲಕ್ಷ್ಮೀ ದೇವಿಯರಿಗೂ ಪಾಲಕನಾದ ಶ್ರೀ ಪರಮಾತ್ಮನು ಪ್ರೀತನಾಗಲಿ, ಎಂಬುದು ಮಂತ್ರಾರ್ಥ. ಇದು ಉಪಸಂಹಾರ ಮಂತ್ರ. ಇದರಂತೆಯೇ ಉಪಕ್ರಮ ಮಂತ್ರವೂ ಇರುವುದು. ಅದರ ಅರ್ಥವನ್ನು ಮಾತ್ರ ಇಲ್ಲಿ ಹೇಳುತ್ತೇವೆ. ಈ ಹೊತ್ತಿನ ಸೂರ್ಯೋದಯ ಮೊದಲುಗೊಂಡು ನಾಳಿನ ಸೂರ್ಯೋದಯದ ವರೆಗೂ ೨೧,೬೦೦ ಶ್ವಾಸ ರೂಪ ಹಂಸಮಂತ್ರ ಜಪಗಳನ್ನು ನಮ್ಮ ದೇಹದೊಳಗಿದ್ದು ತಾವೂ ಮಾಡಿ, ನನ್ನಿಂದಲೂ ಮಾಡಿಸಬೇಕೆಂಬ ಇಚ್ಛೆಯುಳ್ಳ ಮುಖ್ಯ ಪ್ರಾಣ ದೇವರಿಂದ ಪ್ರೇರಿತನಾಗಿ ನಾನು ಮಾಡುವೆನು ಎಂದು ಮುಂದೆ ಮಾಡುವ ಶ್ವಾಸ ಜಪಗಳಿಗೆ ಸಂಕಲ್ಪ ಮಾಡಿಕ್ಕೊಳ್ಳುವರು. ನನ್ನ ದೇಹದೊಳಗಿನ ಪ್ರಾಣನಾಮಕವಾಯುದೇವರ ಮತ್ತು ಅಪಾನನಾಮಕ ವಾಯು ದೇವರ ಸಹಾಯದಿಂದಲೂ, ಧ್ಯಾನ ಯೋಗದಿಂದಲೂ, ಈ ಶ್ವಾಸರೂಪ ಹಂಸಮಂತ್ರ ಜಪಗಳನ್ನು ಮಾಡುವೆನು. ಆದರಿಂದ ಹಂಸರೂಪಿ ಶ್ರೀ ಪರಮಾತ್ಮ ಪ್ರೀತನಾಗಲಿ ಎಂದು ಉಪಕ್ರಮ ಸಂಕಲ್ಪವನ್ನು ಮಾಡುವರು.

ಇದಕ್ಕೆ ಬೇರೆ ಮಂತ್ರವಿಲ್ಲ. ಇವರು ಬಿಡುವ ಶ್ವಾಸೋಚ್ಛ್ವಾಸಗಳೇ ಜಪಗಳೆಂದು ತಿಳಿಯಬೇಕು. ಹಂಸಃ, ಸೋಹಂ, ಸ್ವಾಹಾ ಎಂಬ ಮಂತ್ರದ ಅರ್ಥವನ್ನು ಸಾತ್ವಿಕರು ತಿಳಿದಿರುವ ಕ್ರಮ ಹೇಗೆಂದರೆ :—"ಹಂಸಃ=ದುಃಖಂ ಸರ್ವಂ ಹಂತೀತಿ ಹಂಸಃ"=ಸಕಲ ದುಃಖಗಳನ್ನೂ ನಾಶಗೊಳಿಸುವವನಾದುದರಿಂದ ಹಂಸನೆಂದು ಪರಮಾತ್ಮನಿಗೆ ಹೆಸರು. "ಸೋಹಂ" ಎಂದರೆ ಆ ಹಂಸನ ಪ್ರತಿಬಿಂಬನೇ ನಾನು ಆದುದರಿಂದ ಹಂಸ ಶಬ್ದವು ನನಗೂ ಇರುವುದು. ಇದು ಹೇಗೆಂದರೆ ಕನ್ನಡಿಯಲ್ಲಿ ನಮ್ಮ ಪ್ರತಿ ಬಿಂಬವನ್ನು ನೋಡಿದರೆ ಅದು ನಮ್ಮಂತೆಯೇ ಕಾಣುವುದರಿಂದ ನಾನೇ ಅದು ಎಂದು ಪ್ರತಿ ಬಿಂಬವನ್ನು ನಿರ್ದೇಶ ಮಾಡುವೆವು. ನಮ್ಮ ಭಾವವನ್ನು ಯಂತ್ರ ಸಾಮಗ್ರಿಯಿಂದ (ಫೋಟೋ) ತೆಗೆಯುವರಷ್ಟೆ? ಸಾಮಾನ್ಯವಾಗಿ ಈ ಫೋಟೋ ಯಾರದೆಂದು ಕೇಳಿದರೆ ಯಾವನ ಭಾವವನ್ನು ತೆಗೆದಿರುವರೋ ಅವನ ಹೆಸರನ್ನೇ ಹೇಳುವರು. ಆದರೂ ಯಾವನ ಫೋಟೋವನ್ನು ತೆಗೆದಿರುವರೋ ಅವನಿಗೂ ಫೋಟೋವಿಗೂ ಹೇಗೆ ಭೇದವು ಇರುವುದೋ ಹಾಗೆಯೇ ಸೋಹಂ ಶಬ್ದದಿಂದ, ಅವನೇ ನಾನೆಂಬ ಅರ್ಥವಲ್ಲ, ಅವನ ಪ್ರತಿ ಬಿಂಬವು ನಾನೆಂದು ತಿಳಿದುಕೊಳ್ಳುವರು.

"ಸ್ವಾಹಾ" ಶಬ್ದವು ನಮಸ್ಕಾರ ಸೂಚಕವು ಈ ಪ್ರಕಾರ ಮಂತ್ರಾರ್ಥವನ್ನು ತಿಳಿದು ಸಾತ್ವಿಕರು ಉಪಾಸನೆ ಮಾಡುವುದರಿಂದ ಅವರು ಸುಖ ಸ್ವರೂಪವಾದ ಮುಕ್ತಿಯನ್ನು ಪಡೆಯುವರು. ತಾಮಸರು ಇದಕ್ಕೆ ವಿರುದ್ಧವಾಗಿ ಅಂದರೆ :—ಯೋಹಂಸಃ ಯಾವನು ಹಂಸನೋ; ಸೋಹಂ ಅವನೇ ನಾನು. ಸ್ವಾಹಾ ಶಬ್ದವು ಪೂರ್ವದಂತೆಯೇ. ಹೀಗೆ ಪರಮಾತ್ಮನೇ ತಾನೆಂದು ಉಪಾಸನಾ ಮಾಡುವುದರಿಂದ ದುಃಖ ಸ್ವರೂಪವಾದ ತಮಸ್ಸನ್ನು ಹೊಂದುವರು. ರಾಜಸರು—ಇವರ ಸರಿಯಾದ ಅರ್ಥವನ್ನು ತಿಳಿಯದೆ ಸಂಶಯಗ್ರಸ್ತರಾಗಿ ಸುಖ ದುಃಖ ಮಿಶ್ರವಾದ ನಿತ್ಯ ಸಂಸಾರಕ್ಕೆ ಗುರಿಯಾಗುವರು. ಹೀಗ ತ್ರಿವಿಧ ಜೀವರಿಗೂ ಅನುಸಂಧಾನ ಭೇದದಿಂದ ಫಲ ಭೇದವನ್ನು ಕೊಡುವ "ಗುರುಪವಮಾನ" ನಮ್ಮನ್ನು ಸಲಹು. ರಾಜಸ, ತಾಮಸ ಬುದ್ಧಿಗಳನ್ನು ಬಿಡಿಸಿ ಸಾತ್ವಿಕ ಭಾವದಿಂದ ಉಪಾಸನೆ ಮಾಡುವಂತೆ ಮಾಡಿ ಸದ್ಗತಿಯನ್ನು ಕೊಟ್ಟು ಉದ್ಧರಿಸು ಎಂದು ದಾಸರಾಯರು ಪ್ರಾರ್ಥಿಸಿರುವರು.

ಈಗ ವಾಕ್ಕಿಗೆ ಅಭಿಮಾನಿಯಾದ ಸರಸ್ವತೀ ದೇವಿಯನ್ನು ನಮಸ್ಕಾರಪೂರ್ವಕವಾಗಿ ಪ್ರಾರ್ಥಿಸುತ್ತಾರೆ.

**ಶ್ಲೋಕ || ಚತುರವದನನರಾಣಿ ಅತಿರೋ**
**ಹಿತವಿಮಲ ವಿಜ್ಞಾನಿನಿಗಮ**
**ಪ್ರತತಿಗಳಿಗಭಿಮಾನಿ ವೀಣಾಪಾಣಿ ಬ್ರಹ್ಮಾಣಿ ||**
**ನತಿಸಿಬೇಡುವೆ ಜನನಿ ಲಕುಮಿಾ**
**ಪತಿಯ ಗುಣಗಳ ತುತಿಪುದಕೆಸ**
**ನ್ಮತಿಯಪಾಲಿಸಿನೆಲಿಸು ನೀ ಮದ್ವದನ ಸದನದಲಿ ||೫||**

ಪದ್ಯಾರ್ಥ.—ಚತುರವದನನ ರಾಣಿ = ಚತುರ್ಮುಖ ಬ್ರಹ್ಮದೇವರ ಪತ್ನಿಯಾದ, ಅತಿರೋಹಿತ ವಿಮಲವಿಜ್ಞಾನಿ=, ಅತಿರೋಹಿತ=ತಿರೋಹಿತವೆಂದರೆ ಮರೆಯಾಗುವಿಕೆ, ಅಂದರೆ ಮರೆತು ಹೋಗುವುದೆಂದು ತಾತ್ಪರ್ಯ. ಅತಿರೋಹಿತವೆಂದರೆ=ಅದು ಇಲ್ಲದಿರುವಿಕೆ, ಅಂದರೆ ಚೆನ್ನಾಗಿ ಜ್ಞಾಪಕದಲ್ಲಿಟ್ಟು ಇರುವ, ವಿಮಲ=ನಿರ್ದುಷ್ಟವಾದ, ವಿಜ್ಞಾನಿ=ವಿಶೇಷ ಜ್ಞಾನವುಳ್ಳ, ನಿಗಮಪ್ರತತಿಗಳಿಗಭಿಮಾನಿ=, ನಿಗಮ=ವೇದಗಳ, ಪ್ರತತಿಗಳಿಗೆ=ಸಮೂಹಗಳಿಗೆ, ಅಭಿಮಾನಿ=ಅಭಿಮಾನಿಯಾದ, ವೀಣಾಪಾಣಿ=ವೀಣೆಯಿಂದ ಕೂಡಿದ್ದ ಕೈಗಳುಳ್ಳ, ಬ್ರಹ್ಮಾಣೀ=ವೇದಗಳ ತಾತ್ಪರ್ಯೋಪದೇಶಕಳಾದ ಅಥವಾ ಜಗದ್ಗುರುವಾದ ಬ್ರಹ್ಮದೇವರ ಪತ್ನಿಯಾದುದರಿಂದ ಗುರ್ವಾಣಿಯಾದ, ಜನನಿ=ತಾಯಿಯಾದ ಸರಸ್ವತಿ! ನಿನ್ನನ್ನು ನತಿಸಿ=ನಮಸ್ಕಾರ ಮಾಡಿ, ಬೇಡುವೆ=ಪ್ರಾರ್ಥಿಸುವೆ, ಲಕುಮಿಾಪತಿಯ=ಲಕ್ಷ್ಮೀ ಪತಿಯಾದ ಶ್ರೀಮನ್ನಾರಾಯಣನ, ಗುಣಗಳ=ಗುಣಗಳನ್ನು, ತುತಿಪುದಕೆ=ಸ್ತೋತ್ರ ಮಾಡುವುದಕ್ಕೆ, ಸನ್ಮತಿಯ=ಉತ್ತಮವಾದ ಬುದ್ಧಿಯನ್ನು, ಪಾಲಿಸಿ=ದಯಮಾಡಿ ಕೊಟ್ಟು, ನೀ=ನೀನು, ಮದ್ವದನಸದನದಲಿ=, ಮತ್=ನನ್ನ, ವದನ=ಮುಖವೆಂಬ, ಸದನದಲಿ=ಮನೆಯಲ್ಲಿ, ನೆಲಸು=ವಾಸಮಾಡು.

ತಾತ್ಪರ್ಯ.—ಅಮ್ಮಾ ಸರಸ್ವತೀ, ನೀನು ಬ್ರಹ್ಮದೇವರಿಗೆ ಸತಿಯು, ನಿನಗೆ ನಿರ್ಮಲವಾದ ಜ್ಞಾನವು ಯಾವಾಗಲು ಸ್ಫೂರ್ತಿಯಲ್ಲಿರುವುದು. ವೇದ ಸಮೂಹಗಳಿಗೆ ಅಭಿಮಾನಿಯಾಗಿರುವೆ. ನಿನ್ನ ಕೈಯಲ್ಲಿ ಯಾವಾಗಲೂ ವೀಣೆ ಇರುವುದು. (ಆ ವೀಣೆಯಿಂದ ಪತಿಯನ್ನು ನುಡಿಸುತ್ತಾ ಭಗವ

ದ್ಗುಣ ಗಣಗಳನ್ನು ಜನರಿಗೆ ಬೋಧಿಸುತ್ತಿರುವೆ). ಮುಖ್ಯವಾದ ಗುರು ಪತ್ನಿ ಎಂದೆನಿಸುವೆ. ಪ್ರಕೃತದಲ್ಲಿ ನಾನು ಲಕ್ಷ್ಮೀ ಪತಿಯ ಗುಣಗಳನ್ನು ಸ್ತೋತ್ರ ಮಾಡಲು ಎತ್ನಿಸಿರುವೆನು. ಆ ವಿಷಯದಲ್ಲಿ ಅನ್ಯಥಾ ಜ್ಞಾನ, ಸಂಶಯ ಜ್ಞಾನಾದಿಗಳು ಬಾರದೆ ಶ್ರೀ ಪರಮಾತ್ಮನ ಗುಣಗಳೆಲ್ಲವೂ ಸ್ಫೂರ್ತಿಗೆ ಬರುವಂತೆ ದಯಮಾಡಿ ಸದ್ಬುದ್ಧಿಯನ್ನು ಅನುಗ್ರಹಿಸುವುದಲ್ಲದೆ ನೀನೇ ಒಂದು ರೂಪದಿಂದ ನನ್ನ ವಾಕ್ಕಿನಲ್ಲಿ ನಿಂತು ಭಗವದ್ವಿಷಯಗಳನ್ನು ಚೆನ್ನಾಗಿ ನುಡಿಸಬೇಕೆಂದು ಬೇಡಿಕೊಳ್ಳುವೆನು.

ವಿಶೇಷಾರ್ಥ.—ಬ್ರಹ್ಮದೇವರಿಗೆ ಸರ್ವದೇವೋತ್ತಮತ್ವವೂ, ಜಗದ್ಗುರುತ್ವವೂ ಹೇಗೆ ಹೇಳಿರುವರೋ ಹಾಗೆಯೇ ಸರಸ್ವತೀ ದೇವಿಯರಿಗೂ ಇವೆ ಎಂಬ ಭಾವನೆಯಿಂದ ಚತುರವದನನ ರಾಣಿ ಎಂಬ ಶಬ್ದದಿಂದ ದೇವೋತ್ತಮತ್ವವನ್ನೂ, ಬ್ರಹ್ಮಾಣಿ ಶಬ್ದದಿಂದ ಗುರುಪತ್ನಿತ್ವವನ್ನೂ ತೋರಿಸಿರುವರು. ಇದರಿಂದ ಪುನರುಕ್ತಿ ದೋಷವಿಲ್ಲೆಂದು ತಿಳಿಯಬೇಕು. ಈಗ ಜಗದ್ಗುರುವಾದ ವಾಯು ದೇವರ ನಿಯತಪತ್ನಿಯರಾದ ಮತ್ತೂ ವಾಕ್ಕಿಗಭಿಮಾನಿಯರಾದ ಭಾರತೀ ದೇವಿಯರನ್ನ ಹರಿಕಥಾಮೃತಸಾರವನ್ನು ಹೇಳುವುದಕ್ಕೆ ಸನ್ಮತಿಯನ್ನು ಬೇಡುತ್ತಾರೆ.

**ಕೃತಿರಮಣ ಪ್ರದ್ಯುಮ್ನನಂದನೇ**
**ಚತುರವಿಂಶತಿ ತತ್ವಪತಿ ದೇ**
**ವತೆಗಳಿಗೆ ಗುರುವೆನಿಸುತಿಹ ಮಾರುತನ ನಿಜಪತ್ನೀ ||**
**ಸತತಹರಿಯಲಿ ಗುರುಗಳಲಿ ಸ**
**ದ್ರತಿಯ ಪಾಲಿಸಿ ಭಾಗವತ ಭಾ**
**ರತಪುರಾಣ ರಹಸ್ಯತತ್ವಗಳರುಪು ಕರುಣದಲಿ ||೬||**

ಪದ್ಯಾರ್ಥ.—ಕೃತಿರಮಣ ಪ್ರದ್ಯುಮ್ನ ನಂದನೇ=ಕೃತಿ=ಕೃತಿ ನಾಮಕಳಾದ ರಮಾ ದೇವಿಯರ, ರಮಣ=ಪತಿಯಾದ, ಪ್ರದ್ಯುಮ್ನ=ಪ್ರದ್ಯುಮ್ನ ನಾಮಕನಾದ ಶ್ರೀ ಪರಮಾತ್ಮನ, ನಂದನೇ=ಪುತ್ರಿಯಾದ, ಚತುರವಿಂಶತಿ ತತ್ವಪತಿ ದೇವತೆಗಳಿಗೆ=೨೪ ತತ್ವಾಭಿಮಾನಿಗಳಾದ ದೇವತೆಗಳಿಗೆ, ಗುರುವೆನಿಸುತಿಹ=ಗುರುವೆಂದು ಪ್ರಸಿದ್ಧಿಯನ್ನು ಹೊಂದಿರುವ, ಮಾರುತನ=ವಾಯುದೇವರ, ನಿಜಪತ್ನಿ=ನಿಯತ ಪತ್ನಿಯಾದ ಭಾರತಿ ದೇವಿಯೇ, ಸತತ=

ನಿತ್ಯದಲ್ಲೂ, ಹರಿಯಲಿ=ಶ್ರೀ ಪರಮಾತ್ಮನಲ್ಲೂ, ಗುರುಗಳಲಿ=ಬ್ರಹ್ಮ ದೇವ್ರು ಮೊದಲುಗೊಂಡು ನಮ್ಮ ಗುರುಗಳ ವರೆವಿಗೂ, ತಾರತಮ್ಯ ಪ್ರಕಾರ ಎಲ್ಲಾ ಗುರುಗಳಲ್ಲೂ, ಸದ್ರತಿಯ=ವಿಶೇಷವಾದ ಭಕ್ತಿಯನ್ನು, ಪಾಲಿಸಿ=ಕೊಟ್ಟು, ಕರುಣದಲಿ=ನನ್ನ ಮೇಲೆ ಕರುಣದಿಂದ, ಭಾಗವತ, ಭಾರತ ಪುರಾಣ ರಹಸ್ಯತತ್ವಗಳ=ಭಾಗವತ ಭಾರತಾದಿ ಪುರಾಣಗಳಲ್ಲಿ ಅಡಗಿರುವ, ಗೂಢವಾದ ಭಗವತ್ತತ್ವಗಳನ್ನು, ಅರುಪು=ತಿಳಿಸು.

ತಾತ್ಪರ್ಯ.—ಮೇಲಿನ ಪದ್ಯದಿಂದ ಸರಸ್ವತೀ ದೇವಿಯರನ್ನು ವಂದಿಸಿ ಸ್ವಾರ್ಥವನ್ನು ಬೇಡಿ ಮುಂದೆ ಸರಸ್ವತೀ ಪದವಿಗೆ ಬರುವ ಭಾರತೀ ದೇವಿಯರಿಂದ ಇಷ್ಟಾರ್ಥವನ್ನು ಈಗ ಬೇಡುತ್ತಾರೆ. ಅಮ್ಮಾ! ಭಾರತಿ! ನೀನು ಪ್ರದ್ಯುಮ್ನ ರೂಪಿಯಾದ ಪರಮಾತ್ಮನ ದೆಸೆಯಿಂದ ಕೃತಿ ಎಂಬ ಲಕ್ಷ್ಮೀ ದೇವಿಯರಲ್ಲಿ ಜನಿಸಿದವಳಾದ್ದರಿಂದ ನಿನಗೆ ಲಕ್ಷ್ಮೀ ನಾರಾಯಣರೇ ತಾಯಿ ತಂದೆಗಳಾಗಿರುವರು. ನಿನ್ನ ಪತಿಯೋ! ೨೪ ತತ್ವಾಭಿಮಾನಿ ದೇವತೆಗಳಿಗೆ ಗುರುವು ಎನಿಸುವರು. ಇಂತಹ ನಿನ್ನನ್ನು ಬೇಡಿಕೊಳ್ಳುವೆನು. ಶ್ರೀ ಪರಮಾತ್ಮನಲ್ಲೂ, ಅವನ ಭಕ್ತಾಗ್ರೇಸರರಾದ ನಿನ್ನ ಪತಿ ಮೊದಲಾದ ಎಲ್ಲಾ ಗುರುಗಳಲ್ಲೂ ದೃಢವಾದ ಭಕ್ತಿಯನ್ನು ಕೊಡು. ಮತ್ತೂ ನನ್ನಲ್ಲಿ ಕರುಣವನ್ನಿಟ್ಟು ನಾನು ಉದ್ದೇಶ ಮಾಡಿರುವ ಈ ಹರಿಕಥಾಮೃತ ಸಾರವೆಂಬ ಗ್ರಂಥಕ್ಕೆ ಸಾಧಕವಾಗಿರುವ ಭಾರತ ಭಾಗವತಾದಿ ಪುರಾಣಗಳಲ್ಲಿ ಅಡಗಿರುವ ರಹಸ್ಯ ತತ್ವಾರ್ಥಗಳನ್ನು ನನಗೆ ಜ್ಞಾಪಕಕ್ಕೆ ಬರುವಂತೆ ಮಾಡು.

ವಿಶೇಷಾರ್ಥ.—ಭಾರತೀ ದೇವಿಯರೇ ಸರಸ್ವತೀ ದೇವಿಯರಾಗುವರೆಂದು ಸೂಚಿಸುವುದಕ್ಕಾಗಿ ಭಾರತೀ ದೇವಿಯರಿಗೆ ಪ್ರತ್ಯೇಕವಾಗಿ ನಮಸ್ಕಾರವನ್ನು ಮಾಡಲಿಲ್ಲ. ಅಧಿಕಾರ ಭೇದದಿಂದ ಫಲವನ್ನು ಮಾತ್ರ ಪ್ರತ್ಯೇಕವಾಗಿ ಬೇಡಿಕೊಂಡರೆಂದು ತಿಳಿಯಬೇಕು. ಈ ಭಾರತೀ ದೇವಿಯರು, ಗರುಡ, ಶೇಷ ರುದ್ರಾದಿ ದೇವತೆಗಳಿಗಿಂತಲೂ ಉತ್ತಮರೆಂದು ತೋರಿಸುವುದಕ್ಕಾಗಿ "ಕೃತಿರಮಣಪ್ರದ್ಯುಮ್ನ ನಂದನೆ" ಎಂಬ ಪದವನ್ನು ಪ್ರಯೋಗ ಮಾಡಿರುವರು.

ಸೃಷ್ಟಿಗೆ ಆರಂಭದಲ್ಲಿ ಶ್ರೀ ಪರಮಾತ್ಮನು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ೪ ರೂಪಗಳನ್ನು ಧರಿಸಿದನು. ಆಗ ಭಗವ

ಡಾಜ್ಞಾ ಪ್ರಕಾರ ರಮಾ ದೇವಿಯರೂ ಮಾಯಾ, ಜಯಾ, ಕೃತಿ, ಶಾಂತಿ ಎಂಬ ೪ ರೂಪಗಳನ್ನು ಧರಿಸಿ ಈ ೪ ರೂಪಗಳಿಂದ ಪರಮಾತ್ಮನ ವಾಸುದೇವಾದಿ ೪ ಭಗವದ್ರೂಪಗಳಿಗೂ ಪತ್ನಿಯರಾದರು. ವಾಸುದೇವನ ದೆಸೆಯಿಂದ ಮಾಯಾ ದೇವಿಯಲ್ಲಿ ಪುರುಷನೆಂಬ ಕುಮಾರನು ಜನಿಸಿದನು. ಸಂಕರ್ಷಣನಿಂದ ಜಯಾ ದೇವಿಯರಲ್ಲಿ ಸೂತ್ರನೆಂಬ ಕುಮಾರನು ಜನಿಸಿದನು. ಪ್ರದ್ಯುಮ್ನನಿಂದ ಕೃತೀ ದೇವಿಯರಲ್ಲಿ ಇಬ್ಬರು ಹೆಣ್ಣು ಮಕ್ಕಳು ಹುಟ್ಟಿದರು. ಮೊದಲನೆಯವಳು-ಪ್ರಕೃತಿ, ಎರಡನೆಯವಳು-ಶ್ರದ್ಧಾ. ಪುರುಷನಿಗೆ-ಪ್ರಕೃತಿಯೂ, ಸೂತ್ರನಿಗೆ-ಶ್ರದ್ಧೆಯೂ ಪತ್ನಿಯರಾದರು. ಈ ಪುರುಷನೇ ಬ್ರಹ್ಮ ದೇವರು. ಪ್ರಕೃತಿಯೇ ಸರಸ್ವತಿ "ಸೂತ್ರಂಸವಾಯುಃ ಪುರುಷೋವಿರಿಂಚಿಃ ಪ್ರದ್ಯುಮ್ನತಶ್ಚಾಥಕೃತೌಸ್ತ್ರಿಯೌದ್ವೇ" ಎಂಬ ಮಹಾಭಾರತ ತಾತ್ಪರ್ಯ ನಿರ್ಣಯ ೩ನೆಯ ಅಧ್ಯಾಯದ ವಾಕ್ಯವು ಇದಕ್ಕೆ ಆಧಾರವಾಗಿರುವುದು. ಪುರುಷ, ಸೂತ್ರನಾಮಕರಾದ ಬ್ರಹ್ಮ ವಾಯುಗಳ ದೆಸೆಯಿಂದ ಸೂಕ್ಷ್ಮ ಸೃಷ್ಟಿಯಲ್ಲಿ ಗರುಡ, ಶೇಷ, ರುದ್ರಾದಿಗಳು ಹುಟ್ಟಿದರು. ಇವರೆಲ್ಲರಿಗಿಂತಲೂ ಭಾರತೀ ದೇವಿಯರು ಉತ್ತಮರೆಂದು ಹೇಳಿದಂತಾಯಿತು. "ಗರುಡಶೇಷ ಶಶಾಂಕದಳಶೇಖರರ ಜನಕ" ಎಂಬ ೩ನೆಯ ಪದ್ಯದಿಂದ ಬ್ರಹ್ಮ ದೇವರು ಗರುಡಾದಿಗಳಿಗೆ ತಂದೆ ಎಂದು ಹೇಳಿರುವರು. ಅದರ ವ್ಯಾಖ್ಯಾನವನ್ನು ಬರೆಯುವಾಗ ಆ ವಿಷಯವನ್ನು ವಿಸ್ತಾರ ಮಾಡಿರುವೆವು. ೨೪ ತತ್ತ್ವಾಭಿಮಾನಿಗಳಲ್ಲಿ ಒಬ್ಬರಾದ ವಾಯು ದೇವರನ್ನು ಗುರು ಎಂದು ಈ ಪದ್ಯದಲ್ಲಿ ಹೇಳಿರುವರು. ಆ ೨೪ ತತ್ತ್ವಗಳು ಯಾವುವೆಂದರೆ:—ಪೃಥಿವ್ಯಾಧಿ ಮಹಾ ಭೂತಗಳು ೫, ಶಬ್ದಾದಿ ತನ್ಮಾತ್ರಾ ಗುಣಗಳು ೫, ಕಣ್ಣು ಮೊದಲಾದ ಜ್ಞಾನೇಂದ್ರಿಯಗಳು ೫, ಕೈ ಮೊದಲಾದ ಕರ್ಮೇಂದ್ರಿಯಗಳು ೫, ಚಿತ್ತ ೧, ಬುದ್ಧಿ ೨, ಮನಸ್ಸು ೩, ಅಹಂಕಾರ ೪, ಅಂತು ೨೪. ಇವುಗಳಲ್ಲಿ ೨೪ನೆಯವಾದ ಚಿತ್ತಕ್ಕೆ ಅಭಿಮಾನಿಗಳು ವಾಯು ದೇವರು ; ಇವರೇ ಎಲ್ಲರಲ್ಲಿಯೂ ಉತ್ತಮರು. ಈ ವಿಷಯದಲ್ಲಿ ಭಾಗವತದಲ್ಲೂ ಮತ್ತು ವಿಷ್ಣು ರಹಸ್ಯದಲ್ಲೂ ಒಂದು ಇತಿಹಾಸವನ್ನು ಹೇಳಿರುವರು. ಅದು ಎಂತೆಂದರೆ :—

ಒಂದು ಕಾಲದಲ್ಲಿ ೨೩ ತತ್ತ್ವೇಶರು (ವಾಯು ದೇವರು ಹೊರತು)

ತಮ್ಮೊಳಗೆ ತಾವು ನಾನು ಉತ್ತಮನು, ತಾನು ಉತ್ತಮನೆಂದು ಕಲಹ ಮಾಡತೊಡಗಿದರು. ಆಗ ಶ್ರೀ ಪರಮಾತ್ಮನು ಎಲೈ ದೇವತೆಗಳಿರಾ ! ಕಲಹವನ್ನು ಏಕೆ ಬೆಳೆಸುವಿರಿ. ನಿಮ್ಮಗಳ ಶಕ್ತಿಯನ್ನು ಪರೀಕ್ಷಿಸಿ ಉತ್ತಮರು ಯಾರು ಎಂದು ಕಂಡು ಹಿಡಿಯೋಣ, ಬಿದ್ದಿರುವ ಈ ವಿರಾಟ್ ಶರೀರವು ಯಾವನ ಪ್ರವೇಶದಿಂದ ಎದ್ದು ಕೂಡುವುದೋ ಮತ್ತು ಯಾವನು ಬಿಡುವುದರಿಂದ ಆ ಶರೀರವು ಬೀಳುವುದೋ ಅವನೇ ಉತ್ತಮನೆಂದು ಭಾವಿಸಿ ಈಗ ನಿಮ್ಮ ಶಕ್ತಿಯನ್ನು ತೋರಿಸಿರಿ ಅಂದನು. ಅದರಂತೆಯೇ ದೇಹದಲ್ಲಿ ೨೩ ತತ್ವೇಶರೂ ಪ್ರವೇಶ ಮಾಡಿದರೂ ಆ ಶರೀರವು ಏಳಲಿಲ್ಲ. "ಚಿತ್ತೇನಹೃದಯಂ ಚೈತ್ಯಃ ಕ್ಷೇತ್ರಜ್ಞಃ ಪ್ರಾವಿಶದ್ಯದಾ | ವಿರಾಟ್‌ಶದೈವ ಪುರುಷಃ ಸಲಿಲಾದುದತಿಷ್ಠತ ||" ಎಂದು ಚಿತ್ತಾಭಿಮಾನಿಗಳಾದ ವಾಯುದೇವರು ಹೃದಯದಲ್ಲಿ ಪ್ರವೇಶ ಮಾಡಿದ ಕೂಡಲೇ ಶರೀರವು ಎದ್ದಿತು. ಮತ್ತು ಎಲ್ಲಾ ತತ್ವೇಶರೂ ಹೊರಗೆ ಹೊರಟರೂ ಶರೀರವು ಬೀಳಲಿಲ್ಲ. ವಾಯು ದೇವರು ಹೊರಗೆ ಹೊರಟ ಕೂಡಲೇ ಶರೀರವು ಕೆಳಗೆ ಬಿದ್ದಿತು. ಆಗಲೂ ಉಳಿದ ತತ್ವೇಶರು ನಾವುಗಳು ಅಂದರೆ ಕಣ್ಣು ಮೊದಲಾದ ಇಂದ್ರಿಯಾಭಿಮಾನಿಗಳು ಇಲ್ಲದಿದ್ದರೆ ವಾಯು ದೇವರು ಒಬ್ಬರು ಏನು ಮಾಡಿಯಾರು ? ಅಂದರು. ಆಗ ವಾಯು ದೇವರು ಒಬ್ಬರೇ ಶರೀರದಲ್ಲಿ ಪ್ರವೇಶಿಸಿ ೨೩ ತತ್ವೇಶರ ಕಾರ್ಯಗಳನ್ನೂ ತಾವು ಒಬ್ಬರೇ ನಡೆಯಿಸಿದರು. ಆಗ ತತ್ವೇಶರೆಲ್ಲರೂ ವಾಯು ದೇವರಿಗೆ ನಮಸ್ಕರಿಸಿ ಕ್ಷಮಾಪಣೆಯನ್ನು ಬೇಡಿಕೊಂಡರು. ಇದು ಭಾಗವತಾದಿಗಳಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿರುವುದು. ಇದೇ ಆಧಾರದ ಮೇಲೆ ದಾಸರಾಯರು ತತ್ವೇಶರ ಗುರುಗಳೆಂದು ವಾಯು ದೇವರನ್ನು ಹೇಳಿರುವರೆಂಬ ಭಾವ, "ನಿಜಪತ್ನೀ" ಎಂಬುವುದರಿಂದ ಅವತಾರ ರೂಪ, ಮೂಲ ರೂಪಗಳಲ್ಲೂ ಕೂಡ ಭಾರತೀ ದೇವಿಯರೇ ವಾಯು ದೇವರಿಗೆ ಪತ್ನಿಯಾಗುವರೆಂಬ ಭಾವ. ಇಂತಹ ಗುಣಪೂರ್ಣಳಾದ ಭಾರತಿಯೆ ! ನಮಗೆ ಹರಿ ಗುರುಗಳಲ್ಲಿ ಸದ್ಭಕ್ತಿಯನ್ನು ಕೊಟ್ಟು ಸಲಹು ಎಂದು ಬೇಡುವರು.

ಹೀಗೆ ದಾಸರಾಯರು "ನಾರಾಯಣಂ ನಮಸ್ಕೃತ್ಯನರಂಚೈವ ನರೋತ್ತಮಂ || ದೇವೀಂ ಸರಸ್ವತೀಂ ವ್ಯಾಸಂ" ಎಂಬ ವಚನದಿಂದ, ಕ್ರಮವಾಗಿ ಭಾರತೀ ದೇವಿಯರ ವರೆವಿಗೂ ತಾರತಮ್ಯ ಪ್ರಕಾರ ನಮಸ್ಕರಿಸ

ನ್ನು ಮಾಡಿ, ಈಗ ಶ್ರೀ ಪರಮಾತ್ಮನ ಅವತಾರ ರೂಪವಾದ, ಮತ್ತು ಭಾರತಾದಿ ಗ್ರಂಥ ಕರ್ತರಾದ ಶ್ರೀ ಬಾದರಾಯಣ (ವೇದವ್ಯಾಸ) ದೇವರನ್ನು ಗುರುಭಾವನೆಯಿಂದ ಪ್ರಾರ್ಥಿಸುತ್ತಾರೆ. ಯದ್ಯಪಿ ನಾರಾಯಣ ದೇವರೇ ವೇದವ್ಯಾಸ ದೇವರಾದರೂ ಗ್ರಂಥ ಪ್ರತಿಪಾದ್ಯನೂ ಸರ್ವೋತ್ತಮನೂ ಆದ ಶ್ರೀಮನ್ನಾರಾಯಣ ದೇವರಿಗೆ ಮೊದಲು ನಮಸ್ಕಾರ ಮಾಡಿದರು. ಅಧಿಕಾರ ಭೇದದಿಂದ, ಅಂದರೆ ಗುರುತ್ವೇನ ಶ್ರೀ ವೇದವ್ಯಾಸ ದೇವರಿಗೆ ಈಗ ನಮಸ್ಕಾರವೆಂದು ತಿಳಿಯಬೇಕು. ಇದಲ್ಲದೆ "ವ್ಯಾಸೋಽಕಶ್ಚನಋಷಿಃ" ಎಂದು ಕೆಲವು ತಾಮಸ ಪುರಾಣಗಳ ಆಧಾರದಿಂದ ಕೆಲವು ತಮೋ ಯೋಗ್ಯರು ವೇದವ್ಯಾಸ ದೇವರನ್ನು ಸಾಮಾನ್ಯ ಋಷಿ ಎಂದು ಭಾವಿಸುವರು. ಅವರು ಹಾಗೆಯೇ ತಿಳಿದುಕೊಂಡು ತಮಸ್ಸಾಧನ ಮಾಡಿಕೊಳ್ಳಲೆಂದೇ ಕಡೆಗೆ ವೇದವ್ಯಾಸ ದೇವರಿಗೆ ನಮಸ್ಕಾರವನ್ನು ಮಾಡಿರುವರು ಎಂದು ಗರುಡಪುರಾಣದಲ್ಲಿ ಸೂತರು ಶೌನಕಾದಿಗಳಿಗೆ ಹೇಳಿರುವರು

ಸೂತರ ವಾಕ್ಯ.—"ತತ್ರಾಪಿಕಾರಣಂ ವಕ್ಷ್ಯೇಸಾರೇಣ ಮುನೀಶ್ವರಾಃ || ವ್ಯಾಸಸ್ತು ಕಶ್ಚನಋಷಿಃ ಪುರಾಣೀ ತಾಮಸೇಸ್ಮೃತಃ || ಇತಿ ಜ್ಞಾನಾವಲಂಬೇನ ದೈತ್ಯಾದೈತ್ಯಾನುಗಾಸ್ಸದಾ | ಪ್ರವಿಶೇಯುರ್ಹ್ಯಂಧತಮ ಇತಿಹ್ಯಂತೆ ನಮಸ್ಕೃತಂ || ಇದಂಚ ಪರಮಂಗೋಪ್ಯಂ ಹೃದಿಧಾರ್ಯಂನಸಂಶಯಃ ||" ಎಂಬ ವಾಕ್ಯಗಳು ಮೇಲಿನ ಅರ್ಥಕ್ಕೆ ಆಧಾರವೆಂದು ಭಾವಿಸಬೇಕು. ಈ ಕಾರಣದಿಂದಲೇ ಈಗ ದಾಸರಾಯರು ವೇದವ್ಯಾಸ ದೇವರನ್ನು ಪ್ರಾರ್ಥಿಸುತ್ತಾರೆ.

**ವೇದಪೀಠವಿರಂಚಿಭವಶ |**
**ಕ್ರಾದಿ ಸುರವಿಜ್ಞಾನದಾಯಕ |**
**ಮೋದ ಚಿನ್ಮಯಗಾತ್ರ ಲೋಕಪವಿತ್ರ ಸುಚರಿತ್ರ ||**
**ಛೇದ ಭೇದ ವಿಷಾದ ಕುಟಿಲಾಂ |**
**ತಾದಿಮಧ್ಯವಿದೂರ ಆದಾ |**
**ನಾದಿಕಾರಣ ಬಾದರಾಯಣ ಪಾಹಿ ಸತ್ರಾಣ ||೭||**

ಪದ್ಯಾರ್ಥ.—ವೇದಪೀಠ=ವೇದಗಳೇ ಪೀಠವಾಗುಳ್ಳ, ವಿರಿಂಚಿಭವಶಕ್ರಾದಿಸುರ ವಿಜ್ಞಾನದಾಯಕ, ವಿರಂಚಿ=ಬ್ರಹ್ಮದೇವರೂ, ಭವ=ರುದ್ರ

ದೇವರೂ, ಶಕ್ರ=ಇಂದ್ರ ದೇವರೂ, ಆದಿ=ಮೊದಲಾದ, ಸುರ=ದೇವತೆಗಳಿಗೆ, ವಿಜ್ಞಾನದಾಯಕ=ವಿಜ್ಞಾನ=ವಿಶೇಷ ಜ್ಞಾನವನ್ನು, ದಾಯಕ=ಕೊಡತಕ್ಕ, ಮೋದಚಿನ್ಮಯಗಾತ್ರ, ಮೋದ=ಆನಂದವೂ, ಚಿನ್ಮಯ=ಜ್ಞಾನವೂ, ಗಾತ್ರ=ದೇಹವಾಗುಳ್ಳ, ಲೋಕ=ಮೂರು ಲೋಕಗಳನ್ನೂ, ಪವಿತ್ರ=ಪವಿತ್ರರನ್ನಾಗಿ ಮಾಡುವ, ಸುಚರಿತ್ರ=ಉತ್ಕೃಷ್ಟವಾದ ಮಹಿಮೆಯುಳ್ಳ, ಛೇದ=ಭೇದ ವಿಷಾದ ಕುಟಿಲಾಂತಾದಿ ಮಧ್ಯವಿದೂರ, ಛೇದ=ಕತ್ತಿ, ಮೊದಲಾದ ಆಯುಧಗಳಿಂದ ಶರೀರವು ಕತ್ತರಿಸಲ್ಪಡುವಿಕೆ, ಭೇದ = ಬಾಣಾದಿಗಳಿಂದ ಶರೀರವು ಭೇದಿಸಲ್ಪಡುವಿಕೆ, ವಿಷಾದ=ವ್ಯಸನಪಡುವಿಕೆ, ಕುಟಿಲ=ರೋಗಾದಿಗಳಿಂದ ದೇಹವು ವಕ್ರನಾಗುವಿಕೆ, ಇವುಗಳಿಂದ-ವಿದೂರ=ವಿಶೇಷ ದೂರವಾಗಿರುವವನು, ಅಂದರೆ (ಮೇಲೆ ಹೇಳಿದ ದೋಷಗಳು ಇಲ್ಲದವನೆಂದು ಅರ್ಥ) ಆದಾನಾದಿಕಾರಣ=ಆದಾನಾದಿ=ಬ್ರಹ್ಮಾದಿಗಳಿಂದ ಪೂಜೆಗಳನ್ನು ಸ್ವೀಕರಿಸುವಿಕೆ ಮೊದಲಾದವುಗಳಿಗೆ, ಕಾರಣ=ಕಾರಣ ಭೂತನಾದ, ಸತ್ರಾಣಾ=ಸಜ್ಜನರನ್ನು ಪಾಲಿಸುವ, ಬಾದರಾಯಣ=ಬದರೀ ವೃಕ್ಷಗಳಿಂದ (ಬೋರೆ ಮರಗಳಿಂದ) ಕೂಡಿದ ವನಕ್ಕೆ ಬಾದರವೆಂದು ಹೆಸರು. ಅದನ್ನೇ ಆಶ್ರಯ ಮಾಡಿಕೊಂಡಿರುವುದರಿಂದ ಬಾದರಾಯಣ ಶಬ್ದವಾಚ್ಯ. (ಅಂದರೆ ಬದರಿಕಾಶ್ರಮ ವಾಸಿ ಎಂದು ಅರ್ಥ.) ಎಲೈ ವೇದವ್ಯಾಸದೇವರೇ ಪಾಹಿ = ನಿಮ್ಮ ಶಾಸ್ತ್ರಗಳನ್ನು ಹೇಳಲು ಉದ್ಯುಕ್ತನಾದ ನನಗೆ ಸನ್ಮತಿಯನ್ನು ಕೊಟ್ಟು ಉದ್ಧರಿಸು.

ತಾತ್ಪರ್ಯ.—" ವಿಧಿಶಕ್ರ ಪೂರ್ವಗೀರ್ವಾಣ ವಿಜ್ಞಾನದ ಮಾನತೋಸ್ಮಿ" ಎಂಬ ತಂತ್ರಸಾರದ ವಾಕ್ಯಾನುಸಾರವಾಗಿ " ವಿರಂಚಿಭವ ಶಕ್ರಾದಿ ಸುರವಿಜ್ಞಾನದಾಯಕ" ಮೊದಲಾದ ವಿಶೇಷಣಗಳಿಂದ " ವೇದವ್ಯಾಸ ದೇವರು ಸಾಮಾನ್ಯ ಒಬ್ಬ ಋಷಿ" ಎಂಬ ಮತವು ನಿರಾಕರಿಸಲ್ಪಟ್ಟಿತು.

ಹೀಗೆ ವೇದವ್ಯಾಸ ದೇವರನ್ನು ಪ್ರಾರ್ಥಿಸಿ, ತಾರತಮ್ಯ ಪ್ರಕಾರವಾಗಿ ಮೊದಲು ವಾಯು ದೇವರಿಗೆ ನಮಸ್ಕಾರವನ್ನು ಮಾಡಿದ್ದರೂ. ಈಗ ದ್ವೈತ ಮತ ಪ್ರವರ್ತಕರಾದ ಮತ್ತು ಮುಕ್ತಿಗೆ ಮುಖ್ಯ ಸಾಧನಗಳಾದ ಪಂಚಭೇದ ತಾರತಮ್ಯಾದಿಗಳನ್ನು ತೋರಿಸಿ ಕೊಟ್ಟ ವಾಯು ದೇವರ ಅವ

ತಾರ ಭೂತರಾದ, ಸದ್ವೈಷ್ಣವರಿಗೆ ಮುಖ್ಯ ಗುರುಗಳಾದ ಶ್ರೀಮ ಧ್ವಾಚಾರ್ಯರನ್ನು ಎರಡು ಪದ್ಯಗಳಿಂದ ನಮಸ್ಕರಿಸುತ್ತಾರೆ,

**ಕ್ಷಿತಿಯೊಳಗೆ ಮಣಿಮಂತ ಮೊದಲಾದ ।**
**ದತಿ ದುರಾತ್ಮರು ಪಂದಧಿಕವಿಂ ।**
**ಶತಿಕುಭಾಷ್ಯವರಚಿಸೆ ನಡುಮನೆಯೆಂಬ ಬ್ರಾಹ್ಮಣನ ॥**
**ಸತಿಯ ಜಠರದೊಳವತರಿಸಿ ಭಾ ।**
**ರತಿರಮಣ ಮಧ್ವಾಭಿದಾನದಿ ।**
**ಚತುರದಶಲೋಕದಲಿ ಮೆರೆದ ಪ್ರತಿಮಗೊಂದಿಸುವೆ ॥**

ಪದ್ಯಾರ್ಥ.—ಮಣಿಮಂತ ಮೊದಲಾದ=ಮಣಿಮಂತನೇ ಮೊದಲಾದ ಅತಿ ದುರಾತ್ಮರು=ತಮೋ ಯೋಗ್ಯರಾದ ದೈತ್ಯರು, ಕ್ಷಿತಿಯೊಳಗೆ=ಭೂಮಿ ಯಲ್ಲಿ ಹುಟ್ಟಿ, ಒಂದಧಿಕವಿಂಶತಿಕುಭಾಷ್ಯವ=ಬ್ರಹ್ಮ ಸೂತ್ರಕ್ಕೆ ೨೧ ಕು ಭಾಷ್ಯಗಳನ್ನು, ರಚಿಸೆ=ಮಾಡಲಾಗಿ ಭಾರತೀರಮಣ=ಭಾರತೀ ಪತಿಯಾದ ವಾಯು ದೇವರು, ನಡುಮನೆಯೆಂಬ=ಮಧ್ಯಗೇಹಭಟ್ಟರೆಂಬ ಬ್ರಾಹ್ಮಣನ, ಸತಿಯ=ಭಾರ್ಯೆಳ, ಜಠರದೊಳು=ಉದರದಲ್ಲಿ, ಅವತರಿಸಿ=ಹುಟ್ಟಿದ ಕೂಸಿನ ದೇಹದೊಳಗೆ ಪ್ರವೇಶ ಮಾಡಿ, ಮಧ್ವಾಭಿಧಾನದಿ=ಮಧ್ವಾಚಾರ್ಯರೆಂಬ ನಾ ಮಧೇಯದಿಂದ, ಚತುರದಶಲೋಕದಲಿ=೧೪ ಲೋಕಗಳಲ್ಲಿ, ಮೆರೆದ=ಕೀರ್ತಿ ಯನ್ನು ಪಡೆದ, ಅಪ್ರತಿಮಗೆ=ಸಮರಹಿತನಿಗೆ, ಒಂದಿಸುವೆ= ನಮಸ್ಕಾರವ ನ್ನು ಮಾಡುವೆನು.

ತಾತ್ಪರ್ಯ.—“ ಏಕವಿಂಶತಿಕುಭಾಷ್ಯದೂಷಕಂ ” ಎಂದು ಮಧ್ವವಿಜ ಯದಲ್ಲಿ ಹೇಳಿರುವ ಪ್ರಕಾರ ಶ್ರೀಮದಾಚಾರ್ಯರು ೨೧ ಕುಭಾಷ್ಯಗಳನ್ನು ನಿರಾಕರಿಸುತ್ತಾ ೨೨ನೆಯ ಭಾಷ್ಯವನ್ನು ಬ್ರಹ್ಮ ಸೂತ್ರಕ್ಕೆ ರಚಿಸಿರುತ್ತಾರೆ. “ ನಡುಮನೆ ಎಂಬ ಬ್ರಾಹ್ಮಣನ ಸತಿಯ ಜಠರದೊಳವತರಿಸಿ ” ಎಂದು ಹೇ ಳುವುದರಿಂದ ನೋಡುವವರಿಗೆ ಮಧ್ಯಗೇಹಭಟ್ಟರ ಭಾರ್ಯೆಳ ಗರ್ಭದಲ್ಲಿ ಜನಿಸಿ ದವರೆಂದು ಲೋಕದಲ್ಲಿ ಪ್ರಸಿದ್ಧಿಯಾಗಿ ಇರುವುದು. ಅದನ್ನೇ ದಾಸರಾಯ ರೂ ತೋರಿಸಿರುವರು. ಆದರೆ ಇವರು ಶುಕ್ಲ ಶೋಣಿತ ಸಂಪರ್ಕಾದಿಗಳಿಂದ ಗರ್ಭ ಯಾತನಾದಿಗಳನ್ನು ಹೊಂದಿ ಹುಟ್ಟಿದವರಲ್ಲ. ಮತ್ತೆ ಹೇಗೆ ಜನಿಸಿ

ದರೆಂದರೆ:—ಮಧ್ಯಗೇಹಭಟ್ಟರ ಪತ್ನಿಯು ಗರ್ಭ ಧಾರಣ ಮಾಡಿ ದಿವ್ಯ ವಾದ, ಮನ್ಮಥ ಸ್ವರೂಪನಾದ ಮಗುವನ್ನು ಹೆತ್ತಳು. ಆಗ ವಾಯುದೇವರು ಅಲ್ಲಿಗೆ ಒಂದು ಹೊಸ ರಾಜ್ಯವನ್ನು ಜಯಿಸಿದ ಒಬ್ಬ ರಾಜನು ಅಲ್ಲಿ ಇದ್ದ ಮೊದಲಿನ ರಾಜನನ್ನು ಹೊರಗೆ ಹೊರಡಿಸುತ್ತಾ ತಾನು ಒಳಗೆ ಹೊಕ್ಕರೆ ಹೇಗೋ ಹಾಗೆ ಆ ಮಗುವಿನ ದೇಹದೊಳಗಿನ ಜೀವವನ್ನು ಹೊರಗೆ ಹೊರಡಿಸುತ್ತಾ ತಾವು ಒಳಗೆ ಪ್ರವೇಶ ಮಾಡಿದರು. ಆದ್ದರಿಂದ ಆ ದೇಹವು ಮಾತ್ರ ಮಧ್ಯಗೇಹಭಟ್ಟರ ಪತ್ನಿಯ ಉದರದಿಂದ ಹುಟ್ಟಿದ್ದಾಯಿತು. ಹುಟ್ಟಿದ ಮೇಲೆ ವಾಯು ದೇವರ ಪ್ರವೇಶ. "ರಾಜೀವ ಸತ್ಪುರವರಂ ಭುವನಾಧಿರಾಜೋ ನಿಷ್ಕಾಸಯನ್ ಪರಮಸೌಭಗವಾನ್ ವಿವೇಶ" ಎಂಬ ಮಧ್ವವಿಜಯ ವಾಕ್ಯದಿಂದ ಇದು ಸ್ಪಷ್ಟವಾಗುವುದು. ದಾಸರಾಯರು "ಜಠರದೊಳವತರಿಸಿ" ಎಂದು ಏಕೆ ಹೇಳಿದರೆಂದರೆ ಇವರ ದೇಹವು ಆಕೆಯ ಹೊಟ್ಟೆಯಲ್ಲಿ ಹುಟ್ಟಿದುದರಿಂದ ಹಾಗೆ ಹೇಳಿರುವರೆಂದು ತಿಳಿಯಬೇಕು. "ಚತುರ್ದಶಲೋಕದಲಿ ಮೆರೆದ" ಅಂದರೆ ಇವರ ಕೀರ್ತಿಯು ಹದಿನಾಲ್ಕು ಲೋಕಗಳಲ್ಲಿಯೂ ವ್ಯಾಪಿಸಿ ಇದೆ ಎಂಬ ಭಾವ.

**ಪಂಚ ಭೇದಾತ್ಮಕ ಪ್ರಪಂಚಕೆ ।**
**ಪಂಚರೂಪಾತ್ಮಕನೇ ದೈವಕ ।**
**ಪಂಚಮುಖ ಶಕ್ರಾದಿಗಳು ಕಿಂಕರರು ಶ್ರೀಹರಿಗೆ ।**
**ಪಂಚವಿಂಶತಿ ತತ್ವತರತಮ।**
**ಪಂಚಿಕೆಗಳನು ಪೇಳ್ವ ಭಾವಿವಿ ।**
**ರಂಜಿನೆನಿಪಾನಂದ ತೀರ್ಥರನೆನವೆನನುದಿನವು ॥೪॥**

ಪದ್ಯಾರ್ಥ.—ಪಂಚ ಭೇದಾತ್ಮಕ ಪ್ರಪಂಚಕೆ=೫ ಭೇದಗಳಾಗುಳ್ಳ ಈ ಪ್ರಪಂಚಕ್ಕೆ, ಪಂಚರೂಪಾತ್ಮಕನೆ ದೈವಕ=ಅನಿರುದ್ಧಾದಿ ೫ ರೂಪಗಳುಳ್ಳ ಶ್ರೀ ಪರಮಾತ್ಮನೇ ದೈವವು, ಶ್ರೀ ಹರಿಗೆ=ಇಂತಹ ಪರಮಾತ್ಮನಿಗೆ, ಪಂಚಮುಖ ಶಕ್ರಾದಿಗಳು ಕಿಂಕರರು=ಪಂಚ ಮುಖ ಐದು ತಲೆಗಳುಳ್ಳ ರುದ್ರ ದೇವರೂ, ಶಕ್ರ=ದೇವೇಂದ್ರನೂ. ಆದಿಗಳು=ಇವರೇ ಮೊದಲಾದವರೂ, ಕಿಂಕರರು=ಭೃತ್ಯರು, ಪಂಚವಿಂಶತಿ ತತ್ವತರತಮಪಂಚಿಕೆಗಳ=ಪಂಚ

ವಿಂಶತಿತತ್ವ=೨೫ ತತ್ವಗಳು. ತರ, ತಮ=ದೇವತಾದಿಗಳಲ್ಲಿ ಉತ್ತಮ, ಮ ಧ್ಯಮರೆಂಬ ತಾರತಮ್ಯ ಇವುಗಳ, ಪಂಚಿಕೆಗಳ=ವಿಸ್ತಾರಗಳನ್ನು, ಪೇಳಿದ ತಿಳಿಸಿದ, ಭಾವಿವಿರಿಂಚಿನೆನಿಸ=ಮುಂದಿನ ಕಲ್ಪದಲ್ಲಿ ಬ್ರಹ್ಮನೆನಿಸುವ ವಾ ಯುದೇವರ ಅವತಾರವಾದ, ಆನಂದತೀರ್ಥರ = ಶ್ರೀಮದಾನಂದ ತೀರ್ಥಾ ಚಾರ್ಯರನ್ನು, ಅನುದಿನವು=ಪ್ರತಿ ದಿವಸದಲ್ಲೂ, ನೆನೆವೆನು=ಸ್ಮರಿಸುವೆನು.

ತಾತ್ಪರ್ಯ.—ಪಂಚ ಭೇದಾತ್ಮಕ ಪ್ರಪಂಚಕೆ ಎಂಬಲ್ಲಿ ಪಂಚಭೇದ ಗಳ ವಿವರ :—ಜೀವನಿಗೂ-ಈಶ್ವರನಿಗೂ ಭೇದ, ಜೀವನಿಗೂ - ಜೀವನಿಗೂ ಪರಸ್ಪರ ಭೇದ, ಜೀವನಿಗೂ—ಜಡಕ್ಕೂ ಭೇದ, ಜಡಕ್ಕೂ—ಈಶ್ವರನಿಗೂ ಭೇದ, ಜಡ-ಜಡಕ್ಕೂ ಪರಸ್ಪರ ಭೇದ ಹೀಗೆ ಐದು ಭೇದಗಳು. ಪಂಚ ರೂಪಗಳು—ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾ ಯಣನೆಂಬ ಪರಮಾತ್ಮನ ೫ ರೂಪಗಳು. ಹೀಗೆ ೫ ಭೇದಗಳುಳ್ಳ ಪ್ರಪಂ ಚಕ್ಕೆ ೫ ರೂಪಗಳುಳ್ಳ ಶ್ರೀ ಪರಮಾತ್ಮನೇ ದೇವತಾ ಎಂದರ್ಥ. " ಧ್ಯೆಯಃ ಪಂಚಮುಖೋರುದ್ರಃ " ಎಂಬ ತಂತ್ರಸಾರದ ವಾಕ್ಯದಿಂದ ಪಂಚಮುಖ ನೆಂದರೆ ರುದ್ರದೇವರೆಂದು ಸಿದ್ಧವಾಗುವುದು. ೨೫ ತತ್ವಗಳು ಯಾವುವೆಂ ದರೆ:—

ಪಂಚ ಮಹಾ ಭೂತಗಳು-ಅಂದರೆ ಪೃಥಿವೀ ಮೊದಲಾದುವು ೫ ತನ್ಮಾ ತ್ರಾ-ಶಬ್ದಾದಿಗಳು ೫, ಕರ್ಮೇಂದ್ರಿಯ ಕೈ ಮೊದಲಾದುವು ೫, ಜ್ಞಾನೇಂದ್ರಿ ಯಗಳು-ಕಣ್ಣು ಮೊದಲಾದ ೫. ಅಹಂಕಾರ, ಮನಸ್ಸು, ಬುದ್ಧಿ, ಚಿತ್ತ ೪, ಹೀಗೆ ೨೪. ಪರಮಾತ್ಮನೊಬ್ಬನು. ಆತೂ ೨೫ ತತ್ವಗಳು. ತರತಮ ವೆಂದರೆ—ವಿಷ್ಣು ಸರ್ವೋತ್ತಮನು ; ಅವನಿಗೆ ಎರಡನೆಯವರು-ರಮಾ ದೇವಿ; ತದನಂತರ ಬ್ರಹ್ಮ ವಾಯುಗಳು, ಅವರಿಗೆ ಕಡಮೆ ಸರಸ್ವತೀ ಭಾರತೀಯ ರು ಎಂಬ ಭೇದಗಳನ್ನು ತೋರಿಸುವುದೇ ತಾರತಮ್ಯವು. ಈ ರೀತಿಯಾಗಿ ೨೫ ತತ್ವಗಳನ್ನೂ, ಪಂಚಭೇದಗಳನ್ನೂ, ತಾರತಮ್ಯಗಳನ್ನೂ ವಿಸ್ತಾರ ಪಡಿಸಿದರೆಂಬ ಭಾವ. ಇದೇ ವಾಯು ದೇವರೇ ಮುಂದಿನ ಕಲ್ಪಕ್ಕೆ ಬ್ರಹ್ಮ ಪದವಿಗೆ ಬರುವವರಾದುದರಿಂದ ಭಾವಿವಿರಿಂಚಿ ಎಂದು ಹೇಳಿರುವರೆಂದು ತಿಳಿ ಯಬೇಕು.

ಈಗ ಅಹಂಕಾರ ತತ್ವಕ್ಕೂ ಮತ್ತೂ ಮನಸ್ಸಿಗೂ ಅಭಿಮಾನಿಗಳಾದ ರುದ್ರ ದೇವರನ್ನು ೨ ಶ್ಲೋಕಗಳಿಂದ ಪ್ರಾರ್ಥಿಸುತ್ತಾರೆ :—

**ವಾಮದೇವ ವಿರಿಂಚಿತನಯ ಉ**
**ಮಾಮನೋಹರ ಉಗ್ರಧೂರ್ಜಟಿ**
**ಸಾಮಜಾಜಿನವಸನ ಭೂಷಣ ಸುಮನಸೋತ್ತಂಸಾ ||**
**ಕಾಮಹರ ಕೈಲಾಸ ಮಂದಿರ**
**ಸೋಮಸೂರ್ಯಾನಲ ವಿಲೋಚನ**
**ಕಾಮಿತಪ್ರದ ಕರುಣಿಸೆಮಗೆ ಸದಾ ಸುಮಂಗಳವಾ ||೧೦||**

ಪದ್ಯಾರ್ಥ.—ವಾಮದೇವ=ಮೃದು ಸ್ವಭಾವವುಳ್ಳ ದೇವತೆಯಾದ ಅಥವಾ ತನ್ನ ಎಡಭಾಗದಲ್ಲಿರುವ ಶ್ರೀ ಪರಮಾತ್ಮನನ್ನು ಸರ್ವದಾ ಉಪಾಸನಾ ಮಾಡುತ್ತಿರುವವನಾದುದರಿಂದ ವಾಮದೇವನೆಂಬ ಹೆಸರುಳ್ಳ, ವಿರಿಂಚಿತನಯ=ಬ್ರಹ್ಮ ಪುತ್ರನಾದ, ಉಮಾಮನೋಹರ=ಉಮಾ=ಪಾರ್ವತೀ ದೇವಿಯರ, ಮನೋಹರ=ಮನಸ್ಸನ್ನು ಹರಣ ಮಾಡುವ, (ಅಂದರೆ ಉಮಾಪತಿಯಾದ ಎಂದರ್ಥ) ಉಗ್ರ=ಶತೃಗಳಿಗೆ ಉಗ್ರ ಸ್ವರೂಪನಾದ, ಅಥವಾ ಪ್ರಳಯ ಕಾಲದಲ್ಲಿ ಉಗ್ರ ರೂಪದಿಂದ ಪ್ರಪಂಚವನ್ನು ದಹಿಸುವುದರಿಂದ ಉಗ್ರನೆಂಬ ನಾಮಧೇಯವುಳ್ಳ, ಧೂರ್ಜಟಿ=ಗಂಗೆಯಿಂದ ಕೂಡಿದ ಜಟೆಯುಳ್ಳ, ಸಾಮಜಾಜಿನವಸನ=ಸಾಮಜ=ಆನೆಯ, ಅಜಿನ=ಚರ್ಮವೆಂಬ, ವಸನ=ವಸ್ತ್ರವೇ, ಭೂಷಣ=ಭೂಷಣವಾಗುಳ್ಳ, ಸುಮನಸೋತ್ತಂಸಾ=ದೇವೋತ್ತಮನಾದ, ಕಾಮಹರ=ಮನ್ಮಥನನ್ನು ದಹಿಸಿದ, ಕೈಲಾಸಮಂದಿರ=ಕೈಲಾಸ ಪರ್ವತವೇ ಮನೆಯಾಗುಳ್ಳ, ಸೋಮಸೂರ್ಯಾನಲವಿಲೋಚನ=ಸೋಮ=ಚಂದ್ರನು, ಸೂರ್ಯ=ಸೂರ್ಯನು, ಅನಲ=ಅಗ್ನಿ, ಹೀಗೆ ಮೂರು ದೇವತೆಗಳಿಂದ ಕೂಡಿದ ಮೂರು ಕಣ್ಣುಗಳುಳ್ಳ (ಎಡ ಬಲ ಕಣ್ಣುಗಳಲ್ಲಿ-ಚಂದ್ರ ಸೂರ್ಯರೂ, ಫಾಲ ನೇತ್ರದಲ್ಲಿ-ಅಗ್ನಿಯೂ ಇರುವರೆಂಬ ಭಾವ) ಕಾಮಿತಪ್ರದ=ಭಜಿಸುವವರ ಇಷ್ಟಾರ್ಥವನ್ನು ಪೂರೈಸುವ

**ಕೃತ್ತಿವಾಸನೆ ಹಿಂದೆ ನೀನಾ**
**ಲ್ವತ್ತು ಕಲ್ಪಸಮೀರನಲಿ ಶಿ**
**ಷ್ಯತ್ವನೋಹಿಸ್ಯಖಿಳಾಗಮಾರ್ಥಗಳೋದಿ ಜಲಧಿಯೊಳು ||**
**ಹತ್ತುಕಲ್ಪದಿ ತಪವಗೈದಾ**
**ದಿತ್ಯರೊಳುಗುತ್ತಮನೆನಿಸಿ ಪುರು**
**ಷೋತ್ತಮನ ಪರ್ಯಂಕ ಪದವೈದಿದಿಯೋಮಹಾದೇವಾ ||೧೧||**

ಪದ್ಯಾರ್ಥ.—ಕೃತ್ತಿವಾಸನೆ=(ಹುಲಿಯ) ಚರ್ಮವೇ ವಸ್ತ್ರವಾಗುಳ್ಳ, ಮಹಾದೇವ=ದೇವೋತ್ತಮ ! ನೀ=ನೀನು, ಹಿಂದೆ ರುದ್ರ ದೇವರ ಪದವಿಗೆ ಬರುವುದಕ್ಕಿಂತಲೂ ಪೂರ್ವದಲ್ಲಿ, ನಾಲ್ವತ್ತುಕಲ್ಪ=೪೦ ಬ್ರಹ್ಮ ಕಲ್ಪಗಳ ವರೆವಿಗೂ. ಸಮೀರನಲಿ=ವಾಯುದೇವರಲ್ಲಿ, ಶಿಷ್ಯತ್ವವ = ಶಿಷ್ಯತ್ವವನ್ನು, ಒಹಿಸಿ=ವಹಿಸಿ (ಹೊಂದಿ), ಅಖಿಳಾಗಮಾರ್ಥಗಳ=ಸಕಲ ವೇದಾದಿ ಸಚ್ಛಾ ಸ್ತ್ರಗಳ, ಓದಿ, ಜಲಧಿಯೊಳು=ಸಮುದ್ರದಲ್ಲಿ, ಹತ್ತುಕಲ್ಪದಿ=೧೦ ಬ್ರಹ್ಮ ಕಲ್ಪಗಳ ವರೆವಿಗೂ, ತಪವಗೈದು=ತಪಸ್ಸನ್ನು ಮಾಡಿ, ಆದಿತ್ಯರೊಳಗೆ= ಅದಿತಿ ಮಕ್ಕಳಾದ ದೇವತೆಗಳಲ್ಲಿ, ಉತ್ತಮನೆನಿಸಿ = ಉತ್ತಮನೆಂದು ಪ್ರಸಿ ದ್ಧನಾಗಿ, ಪುರುಷೋತ್ತಮನ=ಕ್ಷರಾಕ್ಷರ ಪುರುಷರುಗಳಲ್ಲಿ ಶ್ರೇಷ್ಠನಾದ ಶ್ರೀಮನ್ನಾರಾಯಣನ, ಪರ್ಯಂಕ = ಹಾಸಿಗೆ ಭೂತನಾದ ಶೇಷ ದೇವರ, ಪದವ=ಪದವಿಯನ್ನು, ಯೈದಿದಿಯೋ=ಹೊಂದಿದೆ ಇಂತಹ ನೀನು ! ಎಮ ಗೆ=ನಮಗೆ, ಸದಾ=ಸರ್ವ ಕಾಲಗಳಲ್ಲೂ, ಮಂಗಳವ = ಮಂಗಳಕರವಾದ ಉತ್ತಮ ಜ್ಞಾನವನ್ನು, ಕರುಣಿಸು=ದಯಮಾಡಿ ಕೊಡು.

ತಾತ್ಪರ್ಯ.—ವಾಮದೇವನೆಂದು ರುದ್ರದೇವರಿಗೆ ಹೆಸರು ಹೇಗೆ ಬಂ ತೆಂದರೆ—ಗರುಡ ಪುರಾಣ ಬ್ರಹ್ಮ ಕಾಂಡದಲ್ಲಿ “ಈಶಾನ್ಯಕೋಣೆ ಸಂಸ್ಥಿ ತೋಯಸ್ತು ರುದ್ರೋಹ್ಯ ವಾಮದೇವೋ ವಾಮದೇವೇತಿ ಸಂಜ್ಞಾಂ || ಸ್ವ ವಾಮಭಾಗೇ ಸಂಸ್ಥಿತಂ ವಾಸುದೇವಂ ಸ್ವಯೋಗ್ಯಭಕ್ತ್ಯಾ ಪೂಜತೇ ಸರ್ವ ದೈವ” ಇದರರ್ಥ—ಶ್ರೀ ಪರಮಾತ್ಮನು ಮಧ್ಯದಲ್ಲಿ ಪಶ್ಚಿಮಾಭಿ ಮುಖ ನಾಗಿ ಕೂತಿರಲು ರುದ್ರದೇವರು ಪರಮಾತ್ಮನಿಗೆ ಈಶಾನ್ಯ ಕೋಣದಲ್ಲಿದ್ದು (ಅಂದರೆ ಪರಮಾತ್ಮನ ಹಿಂಭಾಗದ ಬಲಗಡೆ ಕೋಣದಲ್ಲಿ ಪಶ್ಚಿಮಾಭಿ ಮು ಖನಾಗಿ ಕೂತು) ತಮ್ಮ ವಾಮ ಭಾಗದಲ್ಲಿರುವ ಪರಮಾತ್ಮನನ್ನು ತಮ್ಮ

ಯೋಗ್ಯತಾನುಸಾರವಾಗಿ ಭಕ್ತಿಯಿಂದ ಪೂಜಿಸುತ್ತಿರುವುದರಿಂದ ವಾಮದೇವನೆಂಬ ಹೆಸರೆಂದು ಹೇಳಿರುವರು. ಕೃತ್ತಿವಾಸನೆ ಎಂಬ ಪದದಿಂದ ಸಾಮಾನ್ಯವಾಗಿ ಚರ್ಮ ವಸ್ತ್ರ ಉಳ್ಳವನೆಂದು ಅರ್ಥವಾದರೂ "ವ್ಯಾಘ್ರ ಚರ್ಮಾಂಬರಧರಂ" ಎಂಬ ಭಾಗವತ ವಚನದಿಂದಲೂ, ಪುರಂದರ ದಾಸರಾಯರ ಪದದಲ್ಲಿನ "ಉಟ್ಟಿದ್ದು ಹುಲಿ ತೊಗಲೂ ಬೆನ್ನ ಮೇಲೆ ಹೊದ್ದ ಆನೆಯ ತೊಗಲೂ" ಎಂಬ ವಾಕ್ಯದಿಂದಲೂ "ಸಾಮಜಾಜಿನ ವಸನಭೂಷಣ ಕೃತ್ತಿವಾಸನೆ" ಎಂಬ ಎರಡು ವಿಶೇಷಣಗಳಿಂದ ಮೇಲಿನ ಅರ್ಥವನ್ನೇ ದಾಸರಾಯರು ಸೂಚಿಸಿರುವರು ಆದ್ದರಿಂದ ಪುನರುಕ್ತಿ ದೋಷವಿಲ್ಲ. ರುದ್ರದೇವರು ೪೦ ಬ್ರಹ್ಮಕಲ್ಪ ಸಾಧನವನ್ನು ಮಾಡಿಕೊಂಡು ಮತ್ತು ೧೦ ಬ್ರಹ್ಮಕಲ್ಪ ತಪಸ್ಸನ್ನು ಮಾಡಿರುವರು. ಅಂತು ೫೦ ಕಲ್ಪ ಸಾಧನವನ್ನು ದಾಸರಾಯರು ಹೇಳಿರುವರು. ಇದಕ್ಕೆ ಆಧಾರವಾಗಿ ಶ್ರೀಮದಾಚಾರ್ಯರ ವಾಕ್ಯ "ತಥೈವ ಚತ್ವಾರಿಂಶದ್ಭಿಃ ಪದಂ ಶೈವಂಚ ಜನ್ಮಭಿಃ" ಎಂಬ ಭಾಗವತ ತಾತ್ಪರ್ಯ ವಚನದಿಂದಲೂ "ದಶಕಲ್ಪ ತಪಶ್ಶೀರ್ಣಾ ರುದ್ರೇಣಲವಣಾರ್ಣವೆ" ಎಂಬ ಅನುವ್ಯಾಖ್ಯಾನ ವಚನದಿಂದಲೂ, ೫೦ ಕಲ್ಪ ಸಾಧನವು ರುದ್ರದೇವರಿಗೆ ಸಿದ್ಧವಾಗುವುದು. ಮತ್ತು ಭಾಗವತ ಚತುರ್ಥಸ್ಕಂಧ ತಾತ್ಪರ್ಯದಲ್ಲಿ ಉದಾಹರಿಸಿದ ಅನುವ್ಯಾಖ್ಯಾನ ವಾಕ್ಯದಲ್ಲಿ "ಬ್ರಹ್ಮಣಾಂ ಶತಕಾಲತ್ತು ಪೂರ್ವ ಮಾರಬ್ಧ ಸಂಕ್ಷಯಃ | ಬ್ರಹ್ಮಣಸ್ತ್ವೇವತಾವತ್ವಂ ಪಂಚಾಶದ್ಭ್ರಹ್ಮಣಸ್ತಥಾ | ರುದ್ರಸ್ಯವಿಂಶದೇವಸ್ಯಾಚ್ಛಕ್ರಸ್ಯಾರ್ಕಾದಿಕೇದಶ" ಎಂದು ಹೇಳಿರುವರು. ಇದರಿಂದ ೫೦ ಬ್ರಹ್ಮಕಲ್ಪ ರುದ್ರದೇವರಿಗೆ ಸಾಧನವೆಂದು ಸ್ಪಷ್ಟವಾಗುವುದು. ಇದೇ ಅಭಿಪ್ರಾಯವನ್ನೇ ದಾಸರಾಯರು ತಮ್ಮ ಗ್ರಂಥದಲ್ಲಿ ಹೇಳಿರುವರು.

ಒಂದುವೇಳೆ ಪುರಾಣಾರ್ಥಗಳು ಶ್ರೀ ಮದಾಚಾರ್ಯರ ಉಕ್ತಿಗೆ ವಿರುದ್ಧವಾಗಿ ಕಂಡು ಬಂದರೆ ಅವುಗಳಿಗೆ ಆಚಾರ್ಯರ ವಾಕ್ಯಕ್ಕೆ ಅನುಸಾರವಾಗಿ ಅರ್ಥವನ್ನು ಮಾಡಬೇಕು. ಏಕೆಂದರೆ ಪುರಾಣಗಳಲ್ಲಿ ಅನೇಕ ಕಲ್ಪಾನುಸಾರವಾಗಿಯೋ ಅಥವಾ, ಅಜ್ಞಜನರ ಮೋಹಕ್ಕಾಗಿಯೋ, ಅಂತೂ ಪರಸ್ಪರ ವಿರುದ್ಧಾರ್ಥಗಳು ಹೇಳಲ್ಪಟ್ಟಿರುವವು. ಅವುಗಳ ಪರಿಹಾರಕ್ಕಾಗಿ ಶ್ರೀಮದಾಚಾ

ರ್ಯರು ತಾತ್ಪರ್ಯ ನಿರ್ಣಯಾದಿಗಳನ್ನು ಮಾಡಿರುವರು. ಆದ್ದರಿಂದ ಪುರಾಣಾರ್ಥಗಳು ನಮಗೆ ಹೇಗೆ ಕಂಡುಬಂದರೂ ಅವರು ಹೇಳಿದ ಅರ್ಥವನ್ನೇ ಸತ್ಯವೆಂದು ತಿಳಿಯಬೇಕು. ಈ ವಿಷಯದಲ್ಲಿ " ನಾಸ್ಮದುಕ್ತಿ ಸದೃಶಂ ಹಿತರೂಪಂ " ಎಂಬ ಶ್ರೀಮದಾಚಾರ್ಯರ ವಾಕ್ಯದಿಂದ ಈ ಅರ್ಥವು ಸಿದ್ಧವಾಗುವುದು. ಮತ್ತೂ " ಋಗಾದಯಶ್ಚ ಚತ್ವಾರಃ ಭಾರತಂ ಪಂಚರಾತ್ರಕಂ | ಮೂಲ ರಾಮಾಯಣಂ ಚೈವ ಶಾಸ್ತ್ರಮಿತ್ಯಭಿಧೀಯತೆ || ಯಚ್ಚಾನುಕೂಲಮೇತಸ್ಯತಚ್ಚ ಶಾಸ್ತ್ರಂ ಪ್ರಕೀರ್ತಿತಂ " ಋಗಾದಿ ೪ವೇದಗಳು, ಭಾರತ, ಪಾಂಚ ರಾತ್ರಾಗಮ, ಮೂಲರಾಮಾಯಣ ಇವುಗಳಿಗೆ ಶಾಸ್ತ್ರವೆಂದು ಹೆಸರು. ಮಿಗಲಾದ ಭಾಗವತಾದಿ ಯಾವ ಪುರಾಣಗಳಾದರೂ ಇವುಗಳನ್ನು ಅನುಸರಿಸಿ ಇದ್ದರೆ ಅವುಗಳು ಶಾಸ್ತ್ರಗಳೇ ಹೊರ್ತು ಇಲ್ಲದಿದ್ದರೆ ಅಲ್ಲ. ಆದ್ದರಿಂದ ಶ್ರೀಮದಾಚಾರ್ಯರು ಭಾರತಾದಿಗಳನ್ನನುಸರಿಸಿ ಭಾಗವತ ಪುರಾಣಕ್ಕೆ ವ್ಯಾಖ್ಯಾನ ರೂಪವಾಗಿ ಭಾಗವತ ತಾತ್ಪರ್ಯವೆಂಬ ಗ್ರಂಥವನ್ನು ತಾವೇ ಮಾಡಿರುವರು.

ಆದರೆ ಈಗಿನ ಕೆಲವು ಅಜ್ಞರು ದಾಸವೇಷಧಾರಿಗಳಾಗಿ ವ್ಯಾಸಕೂಟಕ್ಕೂ ದಾಸಕೂಟಕ್ಕೂ ದ್ವೇಷವನ್ನು ಬೆಳೆಸಿದರೂ ದಾಸರಾಯರು ಶ್ರೀಮದಾಚಾರ್ಯರ ಶಿಷ್ಯರಲ್ಲವೆಂದು ಎಂದಿಗೂ ಹೇಳಲಾಗುವ್ರದಿಲ್ಲ. ಶ್ರೀಮದಾಚಾರ್ಯರ ಉಕ್ತಿಗೆ ವಿರುದ್ಧವಾಗಿ ಒಂದು ವಾಕ್ಯವನ್ನಾದರೂ ಅವರು ಹೇಳಲಿಲ್ಲ. ಆದ್ದರಿಂದ ಶ್ರೀಮದಾಚಾರ್ಯರ ಗ್ರಂಥಗಳಿಗೆ ಈ ಗ್ರಂಥವು ವ್ಯಾಖ್ಯಾನ ರೂಪವೆಂದು ಭಾವಿಸಬೇಕು. ಹೀಗಿರಲು ಒಬ್ಬ ವ್ಯಾಖ್ಯಾನಕರ್ತರು, ತಮ್ಮ ಶ್ರೀಹರಿಕಥಾಮೃತಸಾರದ ವ್ಯಾಖ್ಯಾನದಲ್ಲಿ ದಾಸರ ಅಭಿಪ್ರಾಯ ರುದ್ರದೇವರಿಗೆ ೫೦ ಕಲ್ಪ ಸಾಧನವೆಂದು ಬರೆದು ಅದಕ್ಕೆ ಆಧಾರವಾಗಿ ಶ್ರೀಮದಾಚಾರ್ಯರ ವಾಕ್ಯವನ್ನು ಉದಾಹರಿಸಿ, ೫೦ ಕಲ್ಪಸಾಧನವನ್ನು ಸಮರ್ಥಿಸಿ, ಕಡೆಗೆ ಗರುಡ ಪುರಾಣದ ಒಂದು ವಾಕ್ಯವನ್ನು ಉದಹರಿಸಿ ಆ ಪಂಗ್ತಿಗೆ ಸರಿಯಾದ ಅರ್ಥ ಮಾಡಿಕೊಳ್ಳದೆ ರುದ್ರದೇವರಿಗೆ ೫೦ ಕಲ್ಪಸಾಧನವೆಂದ ಯಾರು ತಿಳಿಯುತ್ತಾರೆಯೋ ಅವರು ತಮೋಯೋಗ್ಯರೆಂದುಬರೆದು ಶ್ರೀಮದಾಚಾರ್ಯರಿಗೂ, ದಾಸರಾಯರಿಗೂ ಸಹ ತಮೋಯೋಗ್ಯತ್ವವನ್ನು ಕಲ್ಪಿಸಿರುವರು ಇದು ಬಹು ಶೋಚನೀಯವಾಗಿರುವುದು. ನಿಜವಾಗಿಯೂ ಬ್ರಹ್ಮಕಾಂಡದಲ್ಲಿ ರುದ್ರದೇವರಿಗೆ

೫೦ ಕಲ್ಪಸಾಧಸವೆಂದು ತಿಳಿಯುವವರು ತಮೋಯೋಗ್ಯರೆಂದು ಇದ್ದರೂ ಅವಕ್ಕೆ ಅರ್ಥವನ್ನು ಆಚಾರ್ಯರ ಮತವನ್ನನುಸರಿಸಿ ಹೇಳಬೇಕೇ ಹೊರತು ಪುರಾಣಗಳನ್ನು ನಂಬಿ ಶ್ರೀಮದಾಚಾರ್ಯರ ದ್ರೋಹವನ್ನು ಸಂಪಾದಿಸಬಾರದು. ನಿಜವಾಗಿಯೂ ಗರುಡ ಪುರಾಣದಲ್ಲಿ ೫೦ ಕಲ್ಪಸಾಧನವೆಂದು ತಿಳಿದವರು ತಮೋ ಯೋಗ್ಯರೆಂಬ ವಾಕ್ಯವು ಇಲ್ಲವೇ ಇಲ್ಲ. ಅಲ್ಲಿರುವ ವಾಕ್ಯವೇನೆಂದರೆ—"ಪಂಚಾಶೀತಿ ಬ್ರಹ್ಮಕಲ್ಪಂ ಯೇ ವಿಜಾನಂತಿತೇ ದ್ವಿಜ ॥ ಅಂಧಂತಮಃ ಪ್ರವಿಶ್ಯಂತಿ ಸತ್ಯಂ ಸತ್ಯಂ ಮಯೋದಿತಂ" ಎಂದು ಇರುವುದು. ಇದರಲ್ಲಿನ ಪಂಚಾಶೀತಿ ಎಂಬ ಪದಕ್ಕೆ ೫೦ ಎಂಬ ಅರ್ಥವು ಯಾವ ಕೋಶಾಧಾರದಿಂದ ಇವರಿಗೆ ದೊರಕಿತೋ ನಾಕಾಣೆ. ಇಂತಹ ಉದ್ಗ್ರಂಥಕ್ಕೆ ಅನೇಕ ಪ್ರಮಾಣಗಳನ್ನು ಉದಾಹರಿಸಿ ವ್ಯಾಖ್ಯಾನವನ್ನು ಬರೆದು ಪ್ರಖ್ಯಾತಿ ಪಡೆದಂಥ ಮಹನೀಯರು ಪಂಚಾಶೀತಿ ಎಂಬ ಶಬ್ದಕ್ಕೆ ೫೦ ಎಂದು ಅರ್ಥ ಮಾಡಿದ್ದು ಶೋಚನೀಯವೇ ಸರಿ. ಅವರಿಗೆ ಒಂದು ಭ್ರಾಂತಿಯಾಗಿರಬಹುದೆಂದು ಕಾಣುತ್ತದೆ. ಸಂಸ್ಕೃತದಲ್ಲಿ "ಪಂಚಾಶತ್" ಎಂದರೆ ೫೦ ಎಂದರ್ಥ. "ಪಂಚಾಶೀತಿ" ಎಂದರೆ ೮೫ ಎಂದರ್ಥ. ಇವರು ತಾವು ಉದಹರಿಸಿದ ಶ್ಲೋಕದಲ್ಲಿ ಪಂಚಾಶೀತಿ ಅಂತ ಬರೆದು ಪಂಚಾಶತ್ ಪಂಚಾಶೀತಿ ಎಂಬ ಪದಗಳಿಗೆ ಇರುವ ಭೇದವನ್ನರಿಯದೆ ಭ್ರಾಂತಿಯಿಂದ ಹೀಗೆ ಕಲ್ಪಿಸಿ ಮಹನೀಯರಾದ ಶ್ರೀಮದಾಚಾರ್ಯ ಪ್ರಭೃತಿಗಳನ್ನು ತಮೋಯೋಗ್ಯರನ್ನಾಗಿ ಮಾಡಿಬಿಟ್ಟರು. ಗರುಡ ಪುರಾಣದ ವಾಕ್ಯವೇನೆಂದರೆ— ಗರುಡ ಉವಾಚ—"ಪಂಚಾಶೀತಿ ಬ್ರಹ್ಮ ಕಲ್ಪಂ ಸಮಾರಭ್ಯ ಮಹಾಪ್ರಭೊ । ರುದ್ರಸ್ಯ ಹ್ಯಪರೋಕ್ಷಂ ಸ್ಯಾತ್ತಥಾಹ್ಯಾರಬ್ಧ ಸಂಕ್ಷಯಃ । ಇತಿಶ್ರುತಂ ಮಯಾ ಬ್ರಹ್ಮಣ" ಕೃಷ್ಣ ಉವಾಚ "ಪಂಚಾಶೀತಿ ಬ್ರಹ್ಮಕಲ್ಪಂ ಯೇವಿಜಾನಂತಿ" ಇತ್ಯಾದಿ. ಗರುಡ ಪ್ರಶ್ನ :—ರುದ್ರ ದೇವರಿಗೆ ೮೫ಕಲ್ಪ ಮೊದಲು ಪ್ರಾರಬ್ಧ ಸಂಕ್ಷಯವೂ ಅಪರೋಕ್ಷವೂ ಆಗುವುದೆಂದು ನಾನು ಬ್ರಹ್ಮದೇವರ ಮುಖದಿಂದ ಕೇಳಿದ್ದೆನು ; ನೀನು ೪೦ ಕಲ್ಪ ಸಾಧನವೆಂದು ಹೇಳುತ್ತೀಯೆ ಇದರಿಂದ ನನಗೆ ಸಂಶಯವು ಬಾಧಿಸುತ್ತಿರುವುದು. ನಿಮ್ಮಿಬ್ಬರ ಅಭಿಪ್ರಾಯಗಳು ಹೀಗ್ಗೆ ಭಿನ್ನ ಭಿನ್ನವಾಗಿರಲು ಕಾರಣವೇನು ?" ಎಂದು ಕೇಳಲು, ಆಗ ಶ್ರೀ ಕೃಷ್ಣನು ಹೇಳುತ್ತಾರೆ—"ಎಲೈ ಗರುಡನೇ ! ರುದ್ರ

ದೇವರಿಗೆ ೮೫ ಕಲ್ಪ ಸಾಧನೆ ಎಂದು ಹೇಳುವವರು ತಮೋಯೋಗ್ಯರು. ಈ ವಾಕ್ಯವು ಸತ್ಯವೆಂದು ತಿಳಿ. ನನ್ನ ವಾಕ್ಯಕ್ಕೂ, ಬ್ರಹ್ಮನ ವಾಕ್ಯಕ್ಕೂ ಅಜ್ಞರು ಮಾತ್ರ ಭಿನ್ನಾಭಿಪ್ರಾಯವನ್ನು ಕಲ್ಪಿಸುವರು. ಜ್ಞಾನಿಗಳು ನಮ್ಮಿಬ್ಬರ ಮತವನ್ನೂ ಒಂದಾಗಿ ಭಾವಿಸುವರು. ಹೇಗೆಂದರೆ—ಬ್ರಹ್ಮದೇವರು ಹೇಳಿದ ೮೫ ಶಬ್ದವನ್ನು ಸಂಖ್ಯೆಯಿಂದ ಬರೆದರೆ ೮-೫ ಹೀಗೆ ಎರಡು ಅಂಕಿಗಳಾಗುವುವಷ್ಟೆ. ಅದರಲ್ಲಿ (೮×೫=೪೦) ಹೀಗೆ ೫ ರಿಂದ ೮ನ್ನು ಗುಣಾಕಾರ ಮಾಡಿದಲ್ಲಿ ೪೦ ಆಗುವುದು. ಇದೇ ಬ್ರಹ್ಮದೇವರು ಹೇಳಿದ ಪಂಚಾಶೀತಿ ಎಂಬ ಶಬ್ದಕ್ಕೆ ಅರ್ಥವು" ಎಂಬುದೇ ಗರುಡ ಪುರಾಣದ ವಾಕ್ಯಾರ್ಥವು. ಹೀಗೆ ಇರುವುದರಿಂದ, ೮೫ ಕಲ್ಪಸಾಧನವೆಂದು ತಿಳಿದವರಿಗೆ ಮಾತ್ರ ತಮಸ್ಸಾಧನವೆಂದು ಗರುಡ ಪುರಾಣದಲ್ಲಿ ಹೇಳಿರುವದೇ ಹೊರತು ೫೦ ಕಲ್ಪಸಾಧನವೆಂದು ತಿಳಿದವರಿಗೆ ಹೇಳಲಿಲ್ಲ. ಇರಲಿ! ಆಗಲು ಜಗನ್ನಾಥ ದಾಸರು ಹೇಳಿದಂತೆಯೂ, ಆಚಾರ್ಯರು ಹೇಳಿದಂತೆಯೂ, ೫೦ ಕಲ್ಪ ಸಾಧನವೆಂದು ಇರಲು, ಗರುಡ ಪುರಾಣದಲ್ಲಿ ೪೦ ಕಲ್ಪವೆಂದು ಹೇಗೆ ಹೇಳಲ್ಪಟ್ಟಿರುವುದೆಂದರೆ :—ಶ್ರೀಮದಾಚಾರ್ಯರಾಗಲಿ, ದಾಸರಾಯರಾಗಲೀ ರುದ್ರದೇವರಿಗೆ ೫೦ ಕಲ್ಪವೆಂದು ಹೇಳದೆ ಒಂದು ಸಲ ೪೦ ಕಲ್ಪವನ್ನೂ, ಮತ್ತೊಂದು ಸಲ ೧೦ ಕಲ್ಪವನ್ನೂ ಹೇಳಿರುವರು. ಇದರ ಅಭಿಪ್ರಾಯವೇನೆಂದರೆ :—ರುದ್ರ ಪದವಿಗೆ ಬರಬೇಕಾದರೆ ೪೦ ಕಲ್ಪಸಾಧನವನ್ನೂ ಶೇಷ ಪದವಿಯನ್ನು ಹೊಂದಿದ ನಂತರ ಮುಕ್ತಿಯನ್ನು ಹೊಂದುವುದಕ್ಕಾಗಿ ೧೦ ಕಲ್ಪವೂ ಬೇರೆಯಾಗಿ ಸಾಧನ ಮಾಡಬೇಕು. ನಿರ್ಣಯ ವ್ಯಾಖ್ಯಾನದಲ್ಲಿ " ದಶಕಲ್ಪಸ್ಯ ಮೋಕ್ಷವಿಶೇಷಾರ್ಥಂ ತಪಃ ಪರತ್ವಮುಕ್ತಂ " ಎಂದು ಹೇಳಿರುವರು. ಹೀಗಿರುವುದರಿಂದ ೪೦ ಕಲ್ಪವೆಂದು ಹೇಳುವ ಗ್ರಂಥಗಳ ಅಭಿಪ್ರಾಯವು ರುದ್ರ ಪಟ್ಟಕ್ಕೆ ಬರುವುದಕ್ಕೆ ಮಾತ್ರವೆಂತಲೂ, ೫೦ ಕಲ್ಪವನ್ನು ಹೇಳುವ ಪ್ರಮಾಣಗಳು ಮೋಕ್ಷ ಸಾಧನವನ್ನು ಸೇರಿಸಿ ಹೇಳಿದೆ ಎಂದು ತಾತ್ಪರ್ಯ. ಹೀಗೆ ಹೇಳುವುದರಿಂದ ಆಚಾರ್ಯರ ವಾಕ್ಯಕ್ಕೂ, ದಾಸರಾಯರ ವಾಕ್ಯಕ್ಕೂ, ಗರುಡ ಪುರಾಣದ ವಾಕ್ಯಕ್ಕೂ ಏಕ ವಾಕ್ಯತಾ ಒಂದಂತಾಗುವುದು. ಆದ್ಯಂತ ರುದ್ರದೇವರ ಸಾಧನವು ೫೦ ಕಲ್ಪವೆಂದೇ ತಿಳಿಯಬೇಕು.

"ಪುರುಷೋತ್ತಮನ ಪರ್ಯಂಕ ಪದವೈದಿದೆಯೋ" ಎಂಬುದರಿಂದ ಶೇಷ ದೇವರನ್ನೂ ಪ್ರಾರ್ಥಿಸಿದಂತಾಯಿತೆಂಬ ಭಾವ.

ಮುಂದಿನ ಪದ್ಯದಿಂದ ಇಂದ್ರ ದೇವರು ಆರಂಭ ಮಾಡಿ ಸ್ವಗುರುಪರ್ಯಂತ ದಾಸ ವರ್ಗಕ್ಕೆ ನಮಸ್ಕರಿಸುತ್ತಾರೆ.

**ಮೂ || ಪಾಕಶಾಸನ ಮುಖ್ಯ ಸಕಲದಿ**
**ವೌಕಸರಿಗಭಿನಮಿಪೆ ಋಷಿಗಳಿ**
**ಗೇಕ ಚಿತ್ತದಿ ಪಿತೃಗಳಿಗೆ ಗಂಧರ್ವ ಕ್ಷಿತಿಪರಿಗೆ ||**
**ಆ ಕಮಲನಾಭಾದಿ ಯತಿಗಳ**
**ನೀಕಕಾನಮಿಸುವೆನು ಬಿಡದೆರ**
**ಮಾಕಳತ್ರನ ದಾಸವರ್ಗಕೆ ನಮಿಪೆ ನನವರತಾ ||೧೨||**

ಪದ್ಯಾರ್ಥ.—ಪಾಕಶಾಸನ ಮುಖ್ಯ ಸಕಲ ದಿವೌಕಸರಿಗೆ=ದೇವೇಂದ್ರ ಮೊದಲಾದ ಸಕಲ ದೇವತೆಗಳಿಗೆ, ಏಕ ಚಿತ್ತದಿ = ಏಕಾಗ್ರಚಿತ್ತನಾಗಿ ಮನಸ್ಸನ್ನು ಅವರಲ್ಲೇ ಇಟ್ಟು, ಅಭಿನಮಿಪೆ=ಸಾಷ್ಟಾಂಗ ನಮಸ್ಕಾರವನ್ನು ಮಾಡುವೆ, ಋಷಿಗಳಿಗೆ=ವಿಶ್ವಾಮಿತ್ರ ಮರೀಚ್ಯಾದಿ ಋಷಿಗಳಿಗೂ, ಪಿತೃಗಳಿಗೆ=ಪಿತೃ ಗಣಗಳಿಗೂ, ಗಂಧರ್ವ=ದೇವಗಂಧರ್ವ=ಮನುಷ್ಯ ಗಂಧರ್ವರಿಗೂ, ಕ್ಷಿತಿಪರಿಗೆ=ಪ್ರಿಯವ್ರತಾದಿ ಭೂಪತಿಗಳಿಗೂ, ಆ ಕಮಲನಾಭಾದಿ ಯತಿಗಳ=(ಶ್ರೀಮದಾಚಾರ್ಯರ ಶಿಷ್ಯರಾದ) ಪದ್ಮನಾಭತೀರ್ಥರೇ ಮೊದಲಾದ ಯತಿಗಳ, ಅನೀಕಕೆ=ಸಮೂಹಕ್ಕೂ, ಆನಮಿಸುವೆನು=ಚನ್ನಾಗಿ ನಮಸ್ಕರಿಸುವೆನು, ಬಿಡದೆ=ಯಾರೊಬ್ಬರನ್ನು ಬಿಡದೆ, ರಮಾಕಳತ್ರನ = ಶ್ರೀಲಕ್ಷ್ಮೀ ದೇವಿಯನ್ನೇ ಪತ್ನಿಯಾಗುಳ್ಳ ಶ್ರೀ ಪರಮಾತ್ಮನ, ದಾಸ ವರ್ಗಕೆ= ದಾಸರ ಸಮೂಹಕ್ಕೆ, ಅನವರತ=ನಿತ್ಯದಲ್ಲೂ, ನಮಿಪೆ=ನಮಸ್ಕರಿಸುವೆನು.

ತಾತ್ಪರ್ಯ.—ಇಂದ್ರಾದಿ ಸಕಲ ದೇವತೆಗಳಿಗೆ ನಮಸ್ಕಾರವನ್ನು ಮಾಡುವೆನು. ತದೇಕ ಮನಸ್ಕನಾಗಿ ಋಷಿಗಳಿಗೂ, ಪಿತೃಗಳಿಗೂ, ಗಂಧರ್ವರಿಗೂ, ಭೂಪತಿಗಳಿಗೂ, ಪದ್ಮನಾಭ ತೀರ್ಥರು, ನರಹರಿ ತೀರ್ಥರು ಮೊದಲಾದ ಯತಿಶಿರೋಮಣಿಗಳಿಗೂ, ಹರಿದಾಸರಾದ ಪುರಂದರ, ವಿಜಯ ಮೊದಲಾದ ದಾಸ ವರ್ಗಕ್ಕೂ ನಮಸ್ಕರಿಸುವೆನು. ಎಂದು ತಾರತಮ್ಯ ಪ್ರಕಾರ

ಷ್ಯೋತ್ತಮರಿಗೆಲ್ಲರಿಗೂ ಈ ಪದ್ಯದಿಂದ ನಮಸ್ಕಾರವನ್ನು ಮಾಡಿರುವರೆಂದು ತಾತ್ಪರ್ಯ.

ವಿಶೇಷಾರ್ಥ.—ಮೇಲಿನ ಪದ್ಯಗಳಿಂದ "ನಾರಾಯಣಂ ನಮಸ್ಕೃತ್ಯ" ಎಂಬ ಶ್ಲೋಕದಲ್ಲಿ ಹೇಳಿದಂತೆ ಶ್ರೀಪರಮಾತ್ಮನನ್ನು ಮೊದಲು ಮಾಡಿ ರುದ್ರ ದೇವರ ಪರ್ಯಂತ ತಾರತಮ್ಯ ಪ್ರಕಾರ ಕ್ರಮವಾಗಿ ನಮಸ್ಕಾರ ಪ್ರಾರ್ಥನೆಗಳನ್ನು ಮಾಡಿ ಉಳಿದಿರುವ ಇಂದ್ರಾದಿ ದೇವತೆಗಳು ಮೊದಲುಮಾಡಿ ಮನುಷ್ಯೋತ್ತಮರ ಪರ್ಯಂತ ಕ್ರಮವಾಗಿ ನಮಸ್ಕಾರವನ್ನು ಮಾಡಿರುತ್ತಾರೆ

"ಪಾಕಶಾಸನ ಮುಖ್ಯ ಸಕಲ ದಿವೌಕಸರಿಗೆ" ಎಂಬ ವಾಕ್ಯದಿಂದ ಪಾಕಶಾಸನನೆಂದರೆ ಇಂದ್ರ. ಇಂದ್ರನೇ ಮೊದಲಾದ ದೇವತೆಗಳೆಂದರೆ— ಇಂದ್ರ ಕಾಮರು, ಅನಿರುದ್ಧನಾಮಕಪ್ರಾಣ, ರತಿ, ಮನುಗುರು, ದಕ್ಷ, ಶಚಿ, ಪ್ರವಹ, ಯಮ, ಶತರೂಪಾ, ಚಂದ್ರ, ಸೂರ್ಯ, ವರುಣನ ವರೆಗೂ ಇರುವ ಸಕಲ ದೇವತೆಗಳಿಗೂ ನಮಸ್ಕರಿಸಿದರೆಂದರ್ಥ.

ಋಷಿಗಳಿಗೆ ಎಂಬ ಪದದಿಂದ ನಾರದರು, ಭೃಗು. ಅಗ್ನಿ, ಪ್ರಸೂತಿ ವಿಶ್ವಾಮಿತ್ರ, ಮರೀಚ್ಯಾದಿ ೭ ಮಂದಿ ಬ್ರಹ್ಮದೇವರ ಮಕ್ಕಳುಗಳನ್ನೂ ಪುಷ್ಕರನೆಂಬ ಕರ್ಮದೇವತೆಯೂ ಅಜಾನಜರೆಂಬ ದೇವತೆಗಳೂ ತೆಗೆದುಕೊಳ್ಳಪಡಬೇಕು. ಆಜಾನಜರೆಂದರೆ—ದೇವ ಕುಲದಲ್ಲಿ ಹುಟ್ಟಿ, ತತ್ವಗಳಿಗೆ ಅಭಿಮಾನಿಗಳಾಗದೆ ಸೋಮಪಾನಕ್ಕೂ ಅರ್ಹರಲ್ಲದೆ ಇರುವ ದೇವತೆಗಳು, ತುಂಬರು ಮೊದಲಾದ ಪ್ರಧಾನ ಗಂಧರ್ವರೂ ೧೦೦ ಅಪ್ಸರೋಗಣಗಳು, ನಾರದರು ಮೊದಲು ಉಚಥ್ಯರವರೆಗೂ ಮೇಲೆ ತಾರತಮ್ಯದಲ್ಲಿ ಹೇಳಿರುವ ಋಷಿಗಳನ್ನು ಬಿಟ್ಟು ಮಿಗಲಾದ ಋಷಿಗಳು ಇವರೆಲ್ಲರೂ ಆಜಾನಜರಿಗೆ ಶೇರಿದವರು. ಋಷಿ ಶಬ್ದದಿಂದ ಇವರೆಲ್ಲರನ್ನೂ ತೆಗೆದುಕೊಳ್ಳಬೇಕು. ಪಿತೃಗಳಿಗೆ ಅಂದರೆ ಪಿತೃ ಗಣಗಳಲ್ಲಿ ಕೆಲವು ಗಣಗಳು ಉತ್ತಮ ಗಣದಲ್ಲಿ ಗಣನ ಮಾಡಲ್ಪಟ್ಟವೆ. (ಈ ತಾರತಮ್ಯದ ಹೆಚ್ಚಿನ ವಿಷಯಗಳು ಬೃಹತ್ತಾರತಮ್ಯ ಸಂಧಿಯನ್ನು ನೋಡುವಾಗ ವಿಶದವಾಗುವುವು) ಆ ಪಿತೃಗಳನ್ನು ಬಿಟ್ಟು ಉಳಿದ ಪಿತೃ ಗಣಗಳನ್ನು ಇಲ್ಲಿ ತೆಗೆದುಕೊಳ್ಳಬೇಕು, ಗಂಧರ್ವ ಶಬ್ದದಿಂದ ಅಜಾನಜರಲ್ಲಿ ಶೇರಿದ ತುಂಬರು ಮೊದಲಾದ ಪ್ರಧಾನ ಗಂಧರ್ವ

ರನ್ನು ಬಿಟ್ಟು ಉಳಿದ ಗಂಧರ್ವರನ್ನು ತೆಗೆದುಕೊಳ್ಳಬೇಕು. ಕ್ಷಿತಿಪರೆಂದರೆ ಪ್ರಿಯವ್ರತಾದಿ ಉತ್ತಮಾಧಿಕಾರಿಗಳನ್ನು ಬಿಟ್ಟು ಮಿಗಲಾದ ಭೂಪತಿಗಳನ್ನೂ ಮನುಷ್ಯೋತ್ತಮರನ್ನೂ ಸಹ ತೆಗೆದುಕೊಳ್ಳಬೇಕು. ಹೀಗೆ ಇರುವವರೆಲ್ಲರಿಗೂ ನಮಸ್ಕಾರವನ್ನು ಮಾಡಿ ಗುರು ಪರಂಪರೆಯನ್ನು ನಮಸ್ಕರಿಸುತ್ತಾರೆ. " ಆ ಕಮಲನಾಭಾದಿ ಯತಿಗಳ ನಿಕರಕೆ ನಮಿಸುವೆನು " ಎಂದು ಶ್ರೀಮದಾಚಾರ್ಯರ ಸಾಕ್ಷಾಚ್ಛಿಷ್ಯರಾದ ಪದ್ಮನಾಭ ತೀರ್ಥರು, ನರಹರಿ ತೀರ್ಥರು, ಮಾಧವತೀರ್ಥರು, ಅಕ್ಷೋಭ್ಯತೀರ್ಥರು, ಎಂಬ ನಾಲ್ವರಾದ ಯತಿ ಶಿರೋಮಣಿಗಳನ್ನೂ, ಇವರ ಪರಂಪರೆಯಲ್ಲಿ ಸೇರಿದ, ಟೀಕಾಚಾರ್ಯರು (ಜಯತೀರ್ಥರು) ಶ್ರೀಪಾದರಾಯರು, ವ್ಯಾಸರಾಯರು, ವಾದಿರಾಜಸ್ವಾಮಿಗಳವರು, ಶ್ರೀ ರಾಘವೇಂದ್ರ ಸ್ವಾಮಿಗಳವರೇ ಮೊದಲಾದ ಯತಿಗಳ ಸಮೂಹಕ್ಕೆ ನಮಸ್ಕಾರ ಮಾಡಿರುವರೆಂತ ತಿಳಿಯಬೇಕು. ಹೀಗೆ ತಮಗೆ ವ್ಯಾಸಕೂಟದಲ್ಲಿ ಅಭಿಮಾನವಿದೆ ಎಂಬುದನ್ನೂ, ವ್ಯಾಸಕೂಟದವರ ಮತಕ್ಕೂ ದಾಸಕೂಟದವರ ಮತಕ್ಕೂ ಭೇದವಿಲ್ಲವೆಂಬುದನ್ನೂ, ಈಗಿನವರು ಭೇದವನ್ನು ಕಲ್ಪಿಸುವುದು ಅಜ್ಞಾನದ ಮೂಲಕವೆಂತಲೂ ಸ್ಪಷ್ಟವಾಗಿ ತೋರಿಸಿ ವ್ಯಾಸಕೂಟಕ್ಕೆ ಮೊದಲು ನಮಸ್ಕಾರವನ್ನು ಮಾಡಿ ನಂತರ ದಾಸವರ್ಗಕ್ಕೆ ನಮಸ್ಕಾರವನ್ನು ಮಾಡುತ್ತಾರೆ. ' ಬಿಡದೆ ರಮಾಕಳತ್ರನ ದಾಸವರ್ಗಕೆ ನಮಿಪೆ ನನವರತ ' ಎಂದು ' ರಮಾಕಳತ್ರನ ' ಎಂಬ ಪದದಿಂದ ಪರಮಾತ್ಮನು ಗೃಹಸ್ಥಾಶ್ರಮಿಯಾಗಿ ಜಗತ್ಕುಟುಂಬಿ ಎಂದು ಸೂಚಿಸಿದಂತಾಯಿತು. ಕುಟುಂಬಕ್ಕೆ ದಾಸವರ್ಗವು ಅವಶ್ಯಕವು. ಭಗವದ್ದಾಸರಲ್ಲಿ ಪರಮಾತ್ಮನಿಗೆ ಹೆಚ್ಚು ಪ್ರೀತಿ ಇರುವುದೆಂಬುದನ್ನು " ರಮಾಕಳತ್ರನ " ಎಂಬ ಪದವು ಸೂಚಿಸುವುದು. " ನಾಹಂವಸಾಮಿ ವೈಕುಂಠೇ ನಯೋಗೀ ಹೃದಯೇ ರವೌ | ಮದ್ಭಕ್ತಾ ಯತ್ರಗಾಯಂತೆ ತತ್ರತಿಷ್ಠಾಮಿನಾರದ " ಹೇ ! ನಾರದ ನಾನು ವೈಕುಂಠದಲ್ಲೇ ಇರುವೆನೆಂದು ಭಾವಿಸಬೇಡ, ಮತ್ತು ಯೋಗಿಗಳ ಹೃದಯದಲ್ಲಾಗಲೀ ಸೂರ್ಯನಲ್ಲಿ ಮಾತ್ರವೇ ಆಗಲಿ ಇರುತ್ತೇನೆಂದು ತಿಳಿಯಬೇಡ. ನನ್ನ ಭಕ್ತರು ಎಲ್ಲಿ ಗಾನವನ್ನು ಮಾಡುತ್ತಿರುವರೋ ಅಲ್ಲಿ ನಾನು ಯಾವಾಗಲೂ ಸನ್ನಿಹಿತನಾಗಿರುವೆನು. ಎಂದು ಪರಮಾತ್ಮನು ಹೇಳಿರುವನು. ಈ ಭಗವದ್ವಾಕ್ಯವು ಪರಮಾತ್ಮನಿಗೆ ದಾಸರಲ್ಲಿ ಇರುವ

ಪ್ರೀತಿಯನ್ನು ಸೂಚಿಸುತ್ತಿರುವುದು ದಾಸವರ್ಗಕೆ ಎಂಬ ಪದದಿಂದ, ಪುರಂದರದಾಸರು, ವಿಜಯದಾಸರು, ಭಾಗಣ್ಣದಾಸರು ಮೊದಲಾಗಿ ಜಗನ್ನಾಥ ದಾಸರಾಯರಿಗಿಂತಲೂ ಉತ್ತಮರಾದ ದಾಸವರ್ಗಕ್ಕೆ ನಮಸ್ಕರಿಸಿದರೆಂದು ತಿಳಿಯಬೇಕು.

ಹೀಗೆ ಪ್ರಥಮ ಪದ್ಯವಾದ ಸಂಧಿ ಸೂಚನೆಯ ಪದ್ಯದಲ್ಲಿ ಹೇಳಿದಂತೆಯೇ, ಮುಕ್ತಿಗೆ ಮುಖ್ಯ ಸಾಧನಗಳಾದ ಪಂಚ ಭೇದಗಳನ್ನೂ, ತಾರತಮ್ಯಗಳನ್ನೂ, ೨೪ ತತ್ವಗಳನ್ನೂ ಹೇಳಿ ಈಗ ಸಂಧಿ ಸಮಾಪ್ತಿ ಮಾಡುತ್ತಾ, ಅಂತ್ಯ ಮಂಗಳ ರೂಪವಾಗಿ, ತಮ್ಮ ಅಂತರ್ಯಾಮಿಯಾದ ಬಿಂಬರೂಪಿ ಶ್ರೀ ಜಗನ್ನಾಥ ವಿಠ್ಠಲ ನಾಮಕ ಶ್ರೀ ಪರಮಾತ್ಮನನ್ನು ('ಬಿಂಬ ರೂಪೋಪಾಸನಂ ಚ ಕಾರ್ಯಂ ಸದ್ಭಕ್ತಿಪೂರ್ವಕಂ' ಸಮೀಚೀನವಾದ ಭಕ್ತಿಯಿಂದ ಬಿಂಬರೂಪೋಪಾಸನವನ್ನು ಮಾಡಬೇಕೆಂಬ ವಿಧಿಯನ್ನನುಸರಿಸಿ) ಸ್ಮರಿಸುತ್ತಾರೆ.

**ಪರಿಮಳವು ಸುಮನದೊಳಗಲ**
**ನರಣಿಯೊಳಗಿಪ್ಪಂತೆ ದಾಮೋ**
**ದರನು ಬ್ರಹ್ಮಾದಿಗಳ ಮನದಲಿ ತೋರಿ ತೋರದಲೆ ||**
**ಇರುತಿಹ ಜಗನ್ನಾಥ ವಿಠ್ಠಲನ**
**ಕರುಣಪಡೆವ ಮುಮುಕ್ಷು ಜೀವರು**
**ಪರಮ ಭಾಗವತರನು ಕೊಂಡಾಡುವುದು ಪ್ರತಿದಿನವೂ ||೧೩||**

ಪದ್ಯಾರ್ಥ.—ದಾಮ=ಉದರ, ದಾಮೋದರನು=ಯಶೋದೆಯಿಂದ ಹಗ್ಗದಿಂದ ಕಟ್ಟಿಸಿಕೊಳ್ಳಲ್ಪಟ್ಟ ಉದರವುಳ್ಳ ಶ್ರೀ ಪರಮಾತ್ಮನು, ಬ್ರಹ್ಮಾದಿಗಳ=ಬ್ರಹ್ಮದೇವನೇ ಮೊದಲಾದ ಸಕಲ ದೇವತೆಗಳ, ಮನದಲಿ=ಮನಸ್ಸಿನಲ್ಲಿ, ಸುಮನದೊಳಗೆ = ಪುಷ್ಪದೊಳಗೆ, ಪರಿಮಳವು = ಸುವಾಸನೆಯು, ಗೋಚರವಾಗುವಂತೆ, ತೋರಿ=ಕಾಣುತ್ತಾ, ಅರಣಿಯೊಳಗೆ=ಅರಣಿ ಎಂಬ ಅಶ್ವತ್ಥ ಕಾಷ್ಠದೊಳಗೆ, ಅನಲನು=ಅಗ್ನಿಯು ಇದ್ದರೂ ಕಾಣದಿರುವಂತೆ, ತೋರದಲೆ=ಸ್ಥೂಲ ದೃಷ್ಟಿಗೆ ಕಾಣಿಸಿಕೊಳ್ಳದೆ, ಇರುತಿಹನು=ವಾಸಮಾಡುತ್ತಿರುವನು. ಇಂತಹ ಜಗನ್ನಾಥ ವಿಠ್ಠಲನ=ಜಗನ್ನಾಥದಾಸರ ಬಿಂಬರೂಪಿಯಾದ, ಜಗನ್ನಾಥವಿಠ್ಠಲ ನಾಮಕನಾದ ಶ್ರೀ ಪರಮಾತ್ಮನ, ಕರುಣಪಡೆ

ವ=ದಯೆಯನ್ನು ಪಡೆಯಬೇಕೆಂಬ ಅಪೇಕ್ಷೆಯುಳ್ಳ, ಮುಮುಕ್ಷುಜೀವರು= ಮೋಕ್ಷ ಯೋಗ್ಯರಾದ ಜೀವರೆಲ್ಲರೂ, ಪ್ರತಿದಿನವೂ=ಪ್ರತಿ ದಿವಸದಲ್ಲೂ, ಪರಮಭಾಗವತರ=ರನ್ನಾ ಬ್ರಹ್ಮ ಮೊದಲುಮಾಡಿಕೊಂಡು ಮನುಷ್ಯೋತ್ತಮರ ವರೆವಿಗೂ ತಾರತಮ್ಯ ಪ್ರಕಾರ ಈ ಸಂಧಿಯಲ್ಲಿ ಹೇಳಿರುವ ಪರಮ ಭಗವದ್ಭಕ್ತರನ್ನು ಕೊಂಡಾಡುವುದು ನಮಸ್ಕಾರಾದಿಗಳನ್ನು ಮಾಡಿ ಸ್ತೋತ್ರಗಳಿಂದ ಕೊಂಡಾಡಬೇಕು.

ತಾತ್ಪರ್ಯ.—ಮಲ್ಲಿಕಾದಿ ಪುಷ್ಪಗಳು ಅರಳಿದ ಕೂಡಲೆ ಸುವಾಸನೆಯು ಹೇಗೆ ವ್ಯಕ್ತವಾಗಿ ಸಕಲರಿಗೂ ಗೋಚರವಾಗುವುದೋ, ಹಾಗೆ ಬ್ರಹ್ಮ ವಾಯುಗಳಿಗೆ ಶ್ರೀ ಪರಮಾತ್ಮನು ಅಪರೋಕ್ಷವಲ್ಲಿ ಸರ್ವದಾ ವ್ಯಕ್ತನಾಗಿಯೇ ಕಾಣುತ್ತಿರುವನು. ಅರಣಿಯಲ್ಲಿ ಅಂದರೆ ಯಾಗಶಾಲೆಯಲ್ಲಿ ಅಗ್ನಿಯನ್ನು ಪಡೆಯುವುದಕ್ಕಾಗಿ ಇಟ್ಟುಕೊಂಡಿರುವ ಅಶ್ವತ್ಥಕಾಷ್ಠವು. ಅದನ್ನು ಮತ್ತೊಂದು ಕಾಷ್ಠದಿಂದ ಮೊಸರನ್ನು ಕಡೆದಂತೆ ಕಡೆದರೆ ಅಗ್ನಿಯು ಕಾಣುವನು. ಇಲ್ಲದಿದ್ದರೆ ಕಾಷ್ಠದೊಳಗೆ ಅಗ್ನಿ ಇದ್ದರೂ ಕಾಣುವುದಿಲ್ಲ. ಹಾಗೆಯೇ ರುದ್ರಾದಿ ದೇವತೆಗಳಲ್ಲಿ ಪರಮಾತ್ಮನು ಇದ್ದರೂ ಯಾವಾಗಲೂ ಗೋಚರನಾಗದೆ ಧ್ಯಾನ ಮಾಡುವ ಕಾಲದಲ್ಲಿ ಮಾತ್ರ ಅಪರೋಕ್ಷದಲ್ಲಿ ಗೋಚರನಾಗುತ್ತಿರುವನು. ಅದುದರಿಂದ ಮುಕ್ತಿಯೋಗ್ಯರೆಲ್ಲರೂ, ತಾರತಮ್ಯ ಪ್ರಕಾರ ಪರಮ ಭಗವದ್ಭಕ್ತರಾದ ಬ್ರಹ್ಮಾದಿ ಸಕಲ ದೇವತೆಗಳಿಗೂ ತಮಗಿಂತಲೂ ಉತ್ತಮರಾದ ಮನುಷ್ಯೋತ್ತಮರಿಗೂ ನಮಸ್ಕಾರವನ್ನು ಮಾಡಿ ಅವರನುಗ್ರಹವನ್ನು ಪಡೆದರೆ ಭಗವತ್ಪ್ರಸಾದವಾಗುವುದೆಂದು ತಿಳಿಯಬೇಕು.

ಇತಿ ಶ್ರೀಮತ್ಕವಿಕುಲತಿಲಕ ಶ್ರೀಮಜ್ಜಗನ್ನಾಥ ದಾಸಾರ್ಯ
ವಿರಚಿತ ಹರಿಕಥಾಮೃತ ಸಾರಸ್ಯ ಟೀಕಾಯಾಂ
ಪದ್ಮನಾಭದಾಸ ವಿರಚಿತಾಯಾಂ
ಮಂಗಳಾಚರಣ ಸಂಧಿಃ
ಸಮಾಪ್ತಃ.

# ಶ್ರೀ ಹರಿಕಥಾಮೃತಸಾರ



## ಕರುಣಾ ಸಂಧಿ.



ಪ್ರಥಮ ಸಂಧಿಯಲ್ಲಿ ಮಂಗಳಾಚರಣ ನಿಮಿತ್ತ ಮಾಡಿ ಮಧ್ವ ಸಿದ್ಧಾಂತ ಪ್ರಕಾರ ಮುಕ್ತಿಗೆ ಮುಖ್ಯ ಸಾಧನಗಳಾದ ಪಂಚಭೇದ ತಾರ ತಮ್ಯಗಳನ್ನು ತಿಳಿದು ಹರಿ ಸರ್ವೋತ್ತಮನೆಂಬ ಭಾವನೆಯಿಂದ ಉಪಾಸನೆ ಮಾಡಬೇಕೆಂಬ ವಿಷಯಗಳನ್ನು ಸೂಚಿಸಿದರು. ಈ ಸಂಧಿಯಲ್ಲಿ ಪರಮಾ ತ್ಮನು, ಅವತಾರ ರೂಪಗಳಿಂದಲೂ ಮತ್ತು ಮೂಲ ರೂಪದಿಂದಲೂ ಸಹ ಭಕ್ತರಲ್ಲಿ ಕರುಣಾರಸವನ್ನು ಎಷ್ಟರ ಮಟ್ಟಿಗೆ ಬೀರಿರುವನೆಂಬುವುದನ್ನು ಹೇಳುವರು. ಈ ವಿಷಯಗಳನ್ನು ಭಾರತ ಭಾಗವತಾದಿಗಳಲ್ಲಿ ಇತಿಹಾಸ ರೂಪವಾಗಿ ವಿಸ್ತಾರ ಮಾಡಿ ಹೇಳಿರುವರು. ಅವುಗಳು ವಿಸ್ತಾರವಾದ ಗ್ರಂಥಗಳಾದುದರಿಂದ ಪ್ರತಿ ಒಂದು ಚರಿತ್ರೆಯನ್ನೂ ಕೇಳಿ ಪರಮಾತ್ಮನ ದಯೆಯು ಭಕ್ತರಲ್ಲಿ ಎಷ್ಟು ಇದೆ ಎಂದು ತಿಳಿಯಬೇಕಾದರೆ ನಮ್ಮ ಆಯು ಷ್ಯವೇ ಸಾಲದು. ಆದುದರಿಂದ ಪ್ರಪಂಚಕ್ಕೆ ಅನುಗ್ರಹ ಮಾಡಬೇಕೆಂಬ ಕುತೂಹಲದಿಂದಲೇ ದಾಸರಾಯರು ಭಾರತ, ಭಾಗವತಾದಿಗಳಲ್ಲಿ ಭಕ್ತರು ಪರಮಾತ್ಮನಿಂದ ಪಡೆದಿರುವ ಕರುಣಾ ರೂಪವಾದ ಫಲಿತಾಂಶಗಳನ್ನು ಮಾತ್ರ ತೆಗೆದು, **ಕರುಣಾ ಸಂಧಿ** ಎಂಬ ಈ ಸಂಧಿಯನ್ನು ರಚಿಸಿ ಇರುವರು. ಇದರಲ್ಲಿ ಸಂಧಿ ಸೂಚನೆ ಎಂಬ ಪ್ರಥಮ ಪದ್ಯದಿಂದ ಈ ಸಂಧಿಯಲ್ಲಿ ಬರುವ

ವಿಷಯಗಳನ್ನು ಸಂಗ್ರಹದಿಂದ ಸೂಚಿಸುತ್ತಾ ಕಥಾ ಶ್ರವಣ ಮಹಿಮೆಯು ನ್ನು ಸ್ತುತಿಸುತ್ತಾರೆ.

**ಶ್ರವಣ ಮನಕಾನಂದ ವೀವುದು**
**ಭವಜನಿತ ದುಃಖಗಳ ಕಳೆವುದು**
**ವಿವಿಧಭೋಗಗಳಿಹ ಪರಂಗಳಲಿತ್ತು ಸಲಹುವುದು ||**
**ಭುವನಪಾವನ ವೆನಿಪಲಕುಮಿಾ**
**ಧವನ ಮಂಗಳ ಕಥೆಯು ಪರಮೋ**
**ತ್ಸವದಿ ಕಿವಿಕೊಟ್ಟಾಲಿಪುದು ಭೂಸುರರು ದಿನದಿನದಿ ||೧||**

ಪದ್ಯಾರ್ಥ.—ಶ್ರವಣ=ಭಗವತ್ಕಥಾ ಶ್ರವಣವು, ಮನಕೆ=ಮನಸ್ಸಿಗೆ, ಆನಂದವ=ಸಂತೋಷವನ್ನು, ಈವುದು=ಕೊಡುವುದು, ಭವಜನಿತ ದುಃಖ ಗಳ=ಭವ=ಸಂಸಾರ ಸಂಬಂಧದಿಂದ, ಜನಿತ=ಸಂಭವಿಸುವ, ದುಃಖಗಳ= ಜನನ ಮರಣಾದಿ ಕ್ಲೇಶಗಳನ್ನು, ಕಳೆವುದು=ಪರಿಹರಿಸುವುದು, ಇಹಪರಂಗ ಳಲಿ=ಈ ಭೂಲೋಕದಲ್ಲೂ ಪರಲೋಕದಲ್ಲೂ ಕೂಡ, ವಿವಿಧ ಭೋಗಂಗಳ= ನಾನಾ ವಿಧಗಳಾದ ಸುಖಗಳನ್ನು, ಇತ್ತು=ಕೊಟ್ಟು, ಸಲಹುವುದು=ಸಂರಕ್ಷಿ ಸುವುದು, ಭುವನಪಾವನ (ವೆ) ನೆನಿಪ=ಲೋಕ ಪವಿತ್ರ (ವಂ) ನೆಂದೆನಿ ಸುವ, ಲಕುಮಿಾಧವನ=ಲಕ್ಷ್ಮೀಪತಿಯ, ಮಂಗಳ=ಕಥೆಯು=ಪರಮ ಮಂ ಗಳಕರವಾದ ಕಥೆಯನ್ನು, ಪರಮೋತ್ಸವದಿ=ಪರಮ ಕುತೂಹಲ ಉಳ್ಳವ ರಾಗಿ (ಆದರ ಪೂರ್ವಕವಾಗಿ), ಕಿವಿಕೊಟ್ಟು=ಶ್ರವಣೇಂದ್ರಿಯವನ್ನು ಅನ್ಯ ವಿಷಯದಲ್ಲಿ ಹೋಗಲೀಸದೆ ಏಕನಿಷ್ಟೆಯಿಂದ ಇದರಲ್ಲಿ ಕಿವಿಗಳನ್ನಿತ್ತು, ಭೂ ಸುರರು=ಬ್ರಾಹ್ಮಣರು, ದಿನದಿನದಿ=ಪ್ರತಿ ದಿವಸದಲ್ಲೂ, ಆಲಿವುದು=ಕೇ ಳುವುದು.

ತಾತ್ಪರ್ಯ.—ಪರಮಾತ್ಮನ ಕಥಾ ಶ್ರವಣವು ಕೇಳುವಾಗ ಬ್ರಹ್ಮಾನಂ ದವಾಗಿರುವುದು. ನವಕಾದಂಬರಿಗಳನ್ನೋದಿದರೂ ಆನಂದವೇ ಆಗುವುದು ಇದರಿಂದೇನು ! ಅಂದರೆ, ಅದರಲ್ಲಿ ಕರ್ಣಾನಂದ ಮಾತ್ರ ಆಗುವುದು. ಇದು ಸಂಸಾರ ಬಂಧನವನ್ನೂ ಬಿಡಿಸುವುದು. ಅಲ್ಲದೆ ಇಹದಲ್ಲಿ ಸಕಲ ದುಃಖಗಳನ್ನೂ ಪರಿಹರಿಸಿ ಪರಲೋಕದಲ್ಲೂ ನಾನಾ ಪ್ರಕಾರವಾದ ಭೋಗ

ಗಳನ್ನೂ ಕೊಟ್ಟು ಸುಖಪಡಿಸುವುದು. ಆದುದರಿಂದ ಇಂತಹ ಲೋಕಪಾವನನಾದ, ಶ್ರೀ ರಮಾಪತಿಯ ಮಂಗಳ ಕಥೆಯನ್ನು ಪರಮೋತ್ಸಾಹದಿಂದ ಭಕ್ತರೆಲ್ಲರೂ, ಕೇಳಬೇಕು.

ವಿಶೇಷಾರ್ಥ.—ಈ ಪದ್ಯಕ್ಕೆ ಸಂಧಿ ಸೂಚನೆ ಎಂದು ಹೇಳಿರುವುದರಿಂದ ಸಂಧಿಯಲ್ಲಿ ಹೇಳುವ ವಿಷಯಗಳನ್ನೆಲ್ಲಾ ಈ ಪದ್ಯದಲ್ಲೇ ಅಡಗಿಸಿ ಇರುತ್ತಾರೆಂದು ತಿಳಿಯಬೇಕು. ಪದ್ಯದ ಸಾರಾಂಶವೇನು? ಎಂದರೆ—ಭಗವತ್ಕಥಾ ಶ್ರವಣದಿಂದ ಅನಿಷ್ಟ ನಿವರ್ತಿ ಪೂರ್ವಕ, ಇಹಪರಂಗಳಲ್ಲಿ ಪರಮ ಸುಖ ಉಂಟಾಗುವುದೆಂಬುವುದು ಮುಖ್ಯವಾಗಿ ಭಗವದ್ಭಕ್ತರು ಪರಮಾತ್ಮನ ಕಥಾ ಶ್ರವಣ ಮಾಡಿ ತಜ್ಜನ್ಯ ಜ್ಞಾನದಿಂದ ಆತನನ್ನು ಆರಾಧಿಸಿದರೆ ತಾನು ಅವರಿಗೆ ಪರಮಾನುಗ್ರಹ ಮಾಡಿ ಇಹಪರಂಗಳಲ್ಲಿ ಸುಖವನ್ನು ಕೊಡುವನೆಂಬ ವಿಷಯವನ್ನೇ ಹೇಳಿರುವರು. ಆದುದರಿಂದ ಈ ಪದ್ಯಕ್ಕೆ ಸಂಧಿ ಸೂಚನೆ ಎಂಬ ಹೆಸರು ನ್ಯಾಯವೆಂದು ತಿಳಿಯಬೇಕು. ಮೇಲೂ ಈ ಸಂಧಿಯಲ್ಲಿ ಭಾರತಾದಿಗಳಲ್ಲಿ ಹೇಳಿರುವ ಕಥೆಗಳ ಸಾರವನ್ನೇ ಹೇಳಿರುವರು. ಹೇಗೆಂದರೆ, ಭಾರತ ಸಮಗ್ರವೂ ಓದಿದರೆ ನಮಗೆ ತಿಳಿದು ಬರುವ ಫಲಿತಾಂಶವಾವುದು! ಅದನ್ನು ಯೋಚಿಸೋಣ! ಹುಟ್ಟಿದೊಡನೆ ಪಾಂಡವರು ವನದಲ್ಲಿ ಹುಟ್ಟಿ ಕುಂತೀ ಸಮೇತರಾಗಿ ಬಹಳ ಕಷ್ಟಪಟ್ಟು ಶ್ರೀಪರಮಾತ್ಮನೇ ಗತಿ ಎಂದು ಚಿಂತಿಸುತ್ತಿರುವಾಗ ವ್ಯಾಸ ರೂಪಿಯಾದ ಶ್ರೀ ಪರಮಾತ್ಮನು ಒಲಿದು ಪಾಂಡವರನ್ನು ಹಸ್ತಿನಾಪತಿಗೆ ಕರತಂದು ರಕ್ಷಿಸಿದನು. ತದನಂತರ ಖಾಂಡವವನದ ದಹನ ಕಾಲದಲ್ಲೂ, ದ್ರೌಪದಿ ವಸ್ತ್ರಾಪಹರಣದಲ್ಲೂ, ವನವಾಸದಲ್ಲೂ, ಅಜ್ಞಾತವಾಸದಲ್ಲೂ, ಯುದ್ಧಾದಿಗಳಲ್ಲೂ ಭಕ್ತಿವಶ್ಯನಾದ ಶ್ರೀ ಪರಮಾತ್ಮನು ಶ್ರೀ ಕೃಷ್ಣ ರೂಪದಿಂದ ಪಾಂಡವರಿಗೆ ಸಖನಾಗಿಯೂ, ದೂತನಾಗಿಯೂ, ಬಂಧುವಾಗಿಯೂ, ಸಾರಥಿಯಾಗಿಯೂ ಅವರನ್ನು ರಕ್ಷಿಸಿದ ಕಥೆಗಳಲ್ಲದೆ ಭಾರತದಲ್ಲಿ ಮತ್ತಾವುದನ್ನು ಹೇಳಿರುವರು? ಆ ಕಥೆಗಳ ಮುಖ್ಯ ಸಾರಾಂಶವಾವುದು? ಶ್ರೀ ಪರಮಾತ್ಮನು ತನ್ನ ಭಕ್ತರನ್ನು ಸರ್ವ ಪ್ರಕಾರದಿಂದಲೂ ಉದ್ಧಾರ ಮಾಡುವನು ಎಂಬುದಲ್ಲವೆ" ಭಾಗವತದಲ್ಲೂ ಯೋಚಿಸಿ ನೋಡಿ! ಧ್ರುವ, ಪ್ರಹ್ಲಾದ, ಅಂಬರೀಷ, ಮು

ಚುಕುಂದ ಮೊದಲಾದವರ ಚರಿತೆಗಳಿಂದಲೂ, ಶ್ರೀ ಪರಮಾತ್ಮನ ಮತ್ಸ್ಯ, ಕೂರ್ಮ, ರಾಮ, ಕೃಷ್ಣಾದಿ ಅವತಾರ ಚರಿತ್ರೆಗಳಿಂದಲೂ ನಮಗೆ ತಿಳಿಯುವುದೇನು ? ಶ್ರೀ ಪರಮಾತ್ಮನು ಕರುಣಾಸಮುದ್ರನು ; ಭಕ್ತೋದ್ಧಾರಕನು ಎಂಬುದಲ್ಲದೆ ಮತ್ತೇನಿರುವುದು ? ಇದೆಲ್ಲವನ್ನು ಯೋಚಿಸಿ ದಾಸರಾಯರು ಸಪಾದ ಲಕ್ಷಗ್ರಂಥ ಭಾರತ, ಪುರಾಣಗಳೆಲ್ಲವೂ ೪ ಲಕ್ಷ ಗ್ರಂಥಗಳು. ಇವೆಲ್ಲವನ್ನು ಶ್ರವಣ ಮಾಡಿ ತಿಳಿದುಕೊಳ್ಳುವ ಫಲಿತಾಂಶವನ್ನು ಈ ಕರುಣಾ ಸಂಧಿ ಒಂದರಲ್ಲಿಯೇ ಹೇಳಿರುವರು. ಧ್ರುವಾದಿಗಳ ಚರಿತ್ರೆಗಳನ್ನು ಕೇಳಿ ಅವುಗಳಿಂದ ತಿಳಿಯಬೇಕಾದ ಮುಖ್ಯ ಸಾರಾಂಶವನ್ನು ಗ್ರಹಣ ಮಾಡದಿದ್ದರೆ ಸಾಮಾನ್ಯ ಕಾದಂಬರಿಗಳನ್ನು ಕೇಳಿ ಆನಂದಪಡುವಂತೆಯೇ ಆಗುವುದಲ್ಲದೆ ಅದರಿಂದ ಮತ್ತೇನಿರುವುದು ? ಆದುದರಿಂದ ಅದರ ಸಾರಾಂಶವನ್ನು ಗ್ರಹಣ ಮಾಡಬೇಕು. ಧ್ರುವ ಚರಿತ್ರೆಯನ್ನು ಕೇಳಿದರೆ ನಮಗೆ ತಿಳಿದು ಬರುವ ಅಂಶವಾವುದು ? ಆಹ ! ಐದು ವರ್ಷದ ಬಾಲಕನು ತಾಯಿ ತಂದೆಗಳನ್ನು ಬಿಟ್ಟು ವನಕ್ಕೆ ಹೋಗಿ ಪರಮಾತ್ಮನನ್ನು ಕುರಿತು ತಪಸ್ಸು ಮಾಡಲು ಪರಮಾತ್ಮನು ಪ್ರಸನ್ನನಾಗಿ ಬಾಲಕನು ಮಾಡಿದ ಅಲ್ಪವಾದ ೫ ತಿಂಗಳ ತಪಸ್ಸಿಗೆ ಮೆಚ್ಚಿ ಅವನಿಗೆ ಪ್ರತ್ಯಕ್ಷನಾಗಿ ಇಹದಲ್ಲಿ ೩೬ ಸಹಸ್ರ ವರ್ಷ ರಾಜ್ಯಪದವಿಯನ್ನೂ, ಪರದಲ್ಲಿ ಧ್ರುವಾಧಿಪತ್ಯವನ್ನೂ ಕೊಟ್ಟನು. ಇದರಿಂದ ನಾವು ತಿಳಿದುಕೊಳ್ಳಬೇಕಾದ ಅಂಶವಾವುದು ? "ಭಗವಂತನನ್ನು ಭಕ್ತಿಯಿಂದ ಯಾರು ಭಜಿಸಿದರೂ ಕರುಣಾ ಸಮುದ್ರನಾದ ಶ್ರೀ ಹರಿಯು ಅವರನ್ನು ಉದ್ಧರಿಸುವನು." ಎಂಬುದಲ್ಲದೆ ಅಂತಹ ಕರುಣಾರಸವನ್ನೇ ಈ ಸಂಧಿಯಲ್ಲಿ ಹೇಳಿರುವುದರಿಂದ ಇದಕ್ಕೆ ಕರುಣಾ ಸಂಧಿ ಎಂದೇ ಹೆಸರಿಟ್ಟಿರುವರು. ಈ ಸಂಧಿಯನ್ನು ಶ್ರವಣ ಮಾಡಿದರೂ ಕೂಡ ಮಹಾ ಫಲ ಲಭಿಸುವುದೆಂಬುವುದನ್ನು ಸೂಚಿಸುವುದಕ್ಕಾಗಿ ಪ್ರಥಮ ಪದ್ಯದಲ್ಲಿ ಶ್ರವಣದ ಮಹಾತ್ಮೆಯನ್ನು ವರ್ಣಿಸಿ ಇರುವರು. ಶ್ರವಣದಿಂದಾಗುವ ಸಾಧನವು ಈ ಕಲಿಯುಗದಲ್ಲಿ ಮತ್ತಾವುದರಿಂದಲೂ ಆಗುವುದಿಲ್ಲವೆಂದು ದಾಸರಾಯರ ಅಭಿಪ್ರಾಯವು. ಆದರೆ ಈ ಅಭಿಪ್ರಾಯವು ವ್ಯಾಸಕೂಟದವರ ಅಭಿಪ್ರಾಯಕ್ಕೆ ವಿರುದ್ಧವೆಂದು ಶಂಕಾ ಪಡಬಾರದು. ವ್ಯಾಸ ವಾಕ್ಯವೂ ಹೇಗೆ ಇರುವುದು. ಭಾಗವತ ದ್ವಾದಶ ಸ್ಕಂಧದಲ್ಲಿ " ಯಶಃ ಶ್ರಿಯಾಮೇವ ಪರಿಶ್ರಮಃ ಪರೋ

ವರ್ಣಾಶ್ರಮಾಚಾರತಪಃ ಶ್ರುತಾದಿಷು ॥ ಅವಿಸ್ಮೃತಿಃ ಶ್ರೀಧರಪಾದಪದ್ಮ
ಯೋರ್ಗುಣಾನುವಾದ ಶ್ರವಣಾದಿಭಿರ್ಹರೇಃ॥ ಅವಿಸ್ಮೃತಿಃ ಕೃಷ್ಣಪದಾರ
ವಿಂದಯೋಃ ಕ್ಷಿಣೋತ್ಯಭದ್ರಾಣಿ ಶಮಂತನೋಚಿತ ॥ ಸತ್ವಸ್ಯ ಶುದ್ಧಿಂಪರ
ಮಾಂಚ ಭಕ್ತಿಂ ಜ್ಞಾನಂಚ ವಿಜ್ಞಾನ ವಿರಾಗಯುಕ್ತಂ ॥" ಎಂದು ಹೇಳಿ
ರುವರು. ಇದರ ಅರ್ಥವೇನೆಂದರೆ:—ಮನುಷ್ಯರು ಮಾಡುವ ವರ್ಣಾ
ಶ್ರಮ ಧರ್ಮಾನುಷ್ಠಾನದಿಂದಲೂ, ತಪಸ್ಸಿನಿಂದಲೂ, ಧೃವಾದಿ ಚರಿತ್ರೆಗಳಿಂ
ದೊಡಗೂಡಿದ ಭಾಗವತಾದಿಗಳ ಸಾರಾಂಶವನ್ನರಿಯದೆ ಬರೀ ಶ್ರವಣಾದಿಗ
ಳನ್ನು ಮಾಡುವುದರಿಂದಲೂ ಆಗುವ ಫಲವೇನೆಂದರೆ:—ಲೋಕದಲ್ಲಿ ಇವ
ರು ದೊಡ್ಡವರು, ಸ್ನಾನ, ಜಪ, ತಪಸ್ಸು ಮೊದಲಾದುವುಗಳನ್ನು ಮಾಡಿ
ಕೊಂಡು ಇದ್ದಾರೆ, ಎಂಬ ಕೀರ್ತಿಯೂ, ತಾವು ದಾನಾದಿಗಳನ್ನು ಇಂಥವ
ರಿಗೇನೇ ಕೊಡಬೇಕು ಎಂದು–ಗೃಹದಾನ, ಭೂದಾನ, ಗೋದಾನಗಳನ್ನು
ಕೊಡತಕ್ಕದ್ದೂ, ಇವುಗಳೇ ಇವರಿಗೆ ಲಭ್ಯವಾಗುವ ಫಲವು. ಅಂದರೆ
ವರ್ಣಾಶ್ರಮಾಚಾರಗಳ ಅನುಷ್ಠಾನದಿಂದ ಕೀರ್ತಿಯೂ ಐಶ್ವರ್ಯವೂ ಬರುವು
ದೆಂಬ ಭಾವ. ಶ್ರವಣ ಮಾಡುವ ಕಾಲದಲ್ಲಿ ಅದರ ಫಲಿತಾಂಶವನ್ನು ತಿಳಿ
ದು ಮಾಹಾತ್ಮ್ಯ ಜ್ಞಾನಪೂರ್ವಕವಾಗಿ ಆದರದಿಂದ ಭಗವತ್ಕಥಾ ಶ್ರವಣ
ಮಾಡಿದರೆ ಭಗವಂತನ ಸ್ಮರಣೆಯನ್ನು ಮಾಡಿದಂತಾಗುವುದು. ಆ ಅವಿ
ಸ್ಮೃತಿಯು ಐಹಿಕ ಕಷ್ಟಗಳನ್ನೆಲ್ಲಾ ನಿವೃತ್ತಿ ಮಾಡಿ ಇಹ ಪರಂಗಳಲ್ಲಿ
ಸುಖವನ್ನು ಕೊಟ್ಟು, ಜ್ಞಾನ ಭಕ್ತಿ ವೈರಾಗ್ಯಗಳನ್ನು ವೃದ್ಧಿ ಮಾಡಿ ಮು
ಕ್ತಿಗೆ ಸಾಧನವಾಗುವುದೆಂದು ಭಾಗವತ ಶ್ಲೋಕದ ತಾತ್ಪರ್ಯ. ಇದನ್ನೇ
ದಾಸರಾಯರು ಕಂಠೋಕ್ತಿಯಾಗಿ ಪ್ರಥಮ ಪದ್ಯದಲ್ಲಿ ಹೇಳಿರುವರು. ಅಂ
ತು ಭಾಗವತಾದಿಗಳನ್ನು ಪುರಾಣ ಹೇಳುವವರು ಒಂದೊಂದು ಕಥೆಯನ್ನು
ಮುಗಿಸಿದ ಕೂಡಲೆ ಅದರ ಫಲಿತಾಂಶವನ್ನು ಹೇಳುವವರಾಗಬೇಕು. ಇದು
ಪ್ರಾಯಶಃ ವಿರಳ. ಒಂದು ವೇಳೆ ಅವರು ಹೇಳಿದರೂ ಅಲ್ಲಿ ಕೂತವರೆಲ್ಲ
ರೂ ಆ ಅರ್ಥವನ್ನು ಗ್ರಹಿಸುವರೆಂದು ಹೇಳುವಹಾಗಿಲ್ಲ. ಬಹಳ ಸ್ವಲ್ಪ
ಜನರೇ ಅದನ್ನು ಗ್ರಹಿಸುವರು. ಮಿಗಲಾದವರು, ಕಥಾ ಮುಕ್ತಾಯವಾ
ಗುವಾಗಲೇ ಮನೆಗೆ ಹೋಗುವ ಗಡಿಬಿಡಿ ಮಾಡುತ್ತಾ ಮಾತುಗಳನ್ನಾಡು
ತ್ತಾ ಗಲಭೆಯನ್ನೆಬ್ಬಿಸುವುದು ನಮ್ಮ ಅಭ್ಯಾಸದಲ್ಲಿ ಕಾಣಬರುತ್ತಿರುವುದು.

ಆದುದರಿಂದಲೇ ದಾಸರಾಯರು ಇವೆಲ್ಲವನ್ನೂ ತಿಳಿದು ಯೋಚಿಸಿ ಅದರ ಫಲಿತಾಂಶವನ್ನೇ ತೆಗೆದು ಈ ಗ್ರಂಥವನ್ನಾಗಿ ರಚಿಸಿ ಇರುವರು. ಇಂತಹ ಮಹದುಪಕಾರವನ್ನು ಮಾಡಿ ಜನರನ್ನುದ್ಧರಿಸಿದ ಮಹಾನುಭಾವರಾದ ಈ ದಾಸರಾಯರನ್ನು ಎಷ್ಟು ಕೊಂಡಾಡಿದರೂ ಸ್ವಲ್ಪವೇ ಆಗುವುದು. ಅದಂತಿರಲಿ, ಹೀಗೆ ಪ್ರಥಮ ಪದ್ಯದಲ್ಲಿ ಸಂಧಿ ಸೂಚನೆಯನ್ನೂ, ಶ್ರವಣಾದಿಗಳ ಮಹಿಮೆಯನ್ನೂ ಹೇಳಿ, ಈ ಪದ್ಯದಿಂದ ತಾವು ಮಾಡಿದ ಗ್ರಂಥವನ್ನು ಪ್ರಾಕೃತವೆಂದು ಭಾವಿಸಿ ಮಹಾತ್ಮರು ಉದಾಶೀನ ಮಾಡಬಾರದು. ಅವಶ್ಯವಾಗಿ ಇದು ನೋಡತಕ್ಕದ್ದು. ಎಂದು ಅದರ ಮಹಾತ್ಮ್ಯೆಯನ್ನು ಸೂಚಿಸುತ್ತಾರೆ.

**ಮಳೆಯ ನೀರೋಣಿಯಲಿ ಹರಿಯಲು**
**ಬಳಸರೂರೊಳಗಿದ್ದ ಜನರಾ**
**ಜಲವು ಹೆದ್ದೊರೆಗೂಡೆ ಮಜ್ಜನ ಪಾನಗೈದಪರೂ ||**
**ಕಲುಷ ವಚನಗಳಾದರಿವು ಬಾಂ**
**ಬೊಳೆಯ ಪೆತ್ತನಪಾದ ಮಹಿಮಾ**
**ಜಲಧಿ ಪೊಕ್ಕದರಿಂದ ಮಾಳ್ಪಪರೇ ಮಹೀಸುರರು ||೨||**

ಪದ್ಯಾರ್ಥ.—ಮಳೆಯನೀರು, ಓಣಿಯಲ್ಲಿ=ಬೀದಿಯ ಮೊಹರಿಗಳಲ್ಲಿ, ಪೆರಿಯಲು=ಹರಿಯುತ್ತಿರಲು, ಊರೊಳಗಿದ್ದ ಜನರು, ಬಳಸರು=ಅವನ್ನು ಉಪಯೋಗಪಡಿಸರು, ಆ ಜಲವು=ಅದೇ ನೀರು, ಹೆದ್ದೊರೆಗೂಡೆ=ದೊಡ್ಡ ನದಿಯನ್ನು ಶೇರಲು, ಮಜ್ಜನಪಾನಗೈದಪರು=ಸ್ನಾನ ಪಾನಾದಿಗಳನ್ನು ಮಾಡುವರು. ಅದರಂತೆಯೇ, ಇವು=ಈ ಗ್ರಂಥದಲ್ಲಿರುವ ನನ್ನ ವಚನಗಳು, ಕಲುಷವಚನಗಳಾದರು=ಪ್ರಾಕೃತ ಭಾಷಾದಿ ದೋಷಗಳಿಂದ ಕೂಡಿದ್ದರೂ, ಬಾಂಬೊಳೆಯಪೆತ್ತನ=ಗಂಗೆಯನ್ನು ಪಡೆದ ಶ್ರೀ ಪರಮಾತ್ಮನ ಪಾದ ಮಹಿಮಾಜಲಧಿ ಪೊಕ್ಕದರಿಂದ=ಪಾದ ಮಹಿಮೆ ಎಂಬ ಸಮುದ್ರವನ್ನು ಪ್ರವೇಶ ಮಾಡಿರುವುದರಿಂದ, ಮಹೀಸುರರು = ಬ್ರಾಹ್ಮಣರು, ಮಾಳ್ಪಪರೆ=ಸ್ವೀಕರಿಸದೆ ಇರುವರೆ? ಅಂದರೆ ಸ್ವೀಕಾರ ಮಾಡಿಯೇ ಮಾಡುವರು.

ತಾತ್ಪರ್ಯ.—ಮಳೆ ಬಂದಾಗ ಬೀದಿಯ ಸಂದುಗೊಂದುಗಳಲ್ಲಿ ನೀರು ಓಡುತ್ತಿದ್ದರೆ ಅದನ್ನು ಯಾರೂ ಬಳಸುವುದಿಲ್ಲ. ಅದೇ ನೀರು ದೊಡ್ಡ ನದಿಯಲ್ಲಿ ಸೇರಿದರೆ ಹೇಗೆ ಅದರಲ್ಲಿ ಸ್ನಾನಾದಿಗಳನ್ನು ಮಾಡುವರೊ, ಅದ ರಂತೆಯೇ ನನ್ನ ಗ್ರಂಥದಲ್ಲಿ ಏನು ದೋಷಗಳಿದ್ದರೂ ಇದು ಸಂಸ್ಕೃತ ಭಾಷೆ ಅಲ್ಲದಿದ್ದರೂ ಶ್ರೀ ಪರಮಾತ್ಮನ ಪಾದ ಚರಿತ್ರೆ ಎಂಬ ಸಮುದ್ರವ ನ್ನು ಪ್ರವೇಶ ಮಾಡಿರುವುದರಿಂದ, ಅಂದರೆ ಇದರಲ್ಲಿ ಭಗವನ್ಮಹಿಮೆಯೇ ಹೇಳಿರುವುದರಿಂದ ಬ್ರಾಹ್ಮಣರು ಇದನ್ನು ಸ್ವೀಕರಿಸದೆ ಇರಲಾರರು.

ವಿಶೇಷಾರ್ಥ.—ಶ್ರೀ ಮಟ್ಟೀಕಾಚಾರ್ಯರು (ಜಯತೀರ್ಥರು) ಹೇಳಿರು ವರು. "ಗಂಗಾ ಸಂಗೇನ ನೈರ್ಮಲ್ಯಂ ರಥ್ಯಾಪ್ಸ್ವಿವ ಲಭ್ಯತೇಯಥಾ। ವಾ ಚೋವಿಶುದ್ಧಿಸಿದ್ಧ್ಯರ್ಥಂ ಸಂಗಮ್ಯಂತೇ ಗುರೋರ್ಗಿರಃ"॥ ಅಂದರೆ "ಬೀ ದಿಯ ಮೋಹರಿಯೊಳಗಿನ ನೀರು ಗಂಗೆಯನ್ನು ಸೇರಲು ಅದು ಹೇಗೆ ನೈರ್ಮ ಲ್ಯವನ್ನು ಹೊಂದುವುದೋ ಹಾಗೆಯೇ ನಮ್ಮ ವಾಕ್ಯ ಶುದ್ಧಿಯ ಸಿದ್ಧಿಗೋ ಸ್ಕರ ಟೀಕಾ ರೂಪವಾದ ಈ ವಾಕ್ಯಗಳನ್ನು ಗುರುಗಳ ವಾಕ್ಯ ಭೂತವಾದ ಮೂಲ ಗ್ರಂಥವಲ್ಲಿ ಸೇರಿಸುವೆವು." ಎಂದು ಬ್ರಹ್ಮಸೂತ್ರ ಭಾಷ್ಯದ ಟೀಕಾ ಗ್ರಂಥವಾದ ತತ್ವ ಪ್ರಕಾಶಿಕೆಯಲ್ಲಿ ಹೇಳಿರುವರು. ಅದೇ ಅಭಿಪ್ರಾಯವ ನ್ನೇ ದಾಸರಾಯರು ಈ ಪದ್ಯದಲ್ಲಿ ಹೇಳಿರುವರು.

ಮಳೆಯ ನೀರು ಬೀದಿಯ ಓಣಿಗಳಲ್ಲಿ ಪ್ರವಹಿಸಿದಾಗ ಜನರು ಅದ ನ್ನು ಬಳಸದಿದ್ದರೂ ಅದೇ ನೀರು ದೊಡ್ಡ ನದಿಯನ್ನು ಸೇರಲು ಹೇಗೆ ಉಪ ಯೋಗಿಸುವರೊ ಹಾಗೆಯೇ ಈ ಗ್ರಂಥವು ಪ್ರಾಕೃತವಾದ ಕನ್ನಡ ಭಾಷೆ ಯಲ್ಲಿದ್ದರೂ ಅಪ್ರಾಕೃತವಾದ ಭಗವಂತನ ಮಹಿಮೆಗಳನ್ನೇ ಹೇಳುವುದ ರಿಂದ ಇದನ್ನು ಪ್ರಾಕೃತವೆಂದು ಉದಾಸೀನ ಮಾಡದೆ ಸ್ವೀಕರಿಸುವರು, ಎಂಬ ನಂಬಿಕೆಯಿಂದ ಇದನ್ನು ರಚಿಸುವೆನೆಂತ ಸೂಚಿಸುತ್ತಾರೆ. ಕೆಲವರು ಲೋಕದಲ್ಲಿ ಸಂಸ್ಕೃತ ಗ್ರಂಥವೇ ಗ್ರಂಥವೆಂತಲೂ ಪ್ರಾಕೃತ ಗ್ರಂಥವನ್ನು ಓದಬಾರದೆಂತಲೂ ಹೇಳುತ್ತಿರುವರು. ಆದರೆ ಈ ಅಭಿಪ್ರಾಯ ಉಳ್ಳವ ರು ಪುರಾಣ ವಾಕ್ಯಗಳಲ್ಲಿ ಅಲ್ಲಲ್ಲಿ ಹೇಳಿರುವ ಪ್ರಾಕೃತ .ಸಂಸ್ಕೃತ ಶಬ್ದಗ ಳಿಗೆ ಸರಿಯಾದ ಅರ್ಥವನ್ನು ಮಾಡಿಕೊಳ್ಳದೆ, ಕೇವಲ ಭಾಷಾ ಪರವಾಗಿ ಅರ್ಥ ಮಾಡಿಕೊಂಡು ಅನ್ಯಾಯವಾಗಿ ದೊಡ್ಡವರ ದ್ರೋಹವನ್ನು ಸಂಪಾದಿ

ಸಿಕೊಳ್ಳುವರು. ಲೋಕದಲ್ಲಿ ಪ್ರಾಕೃತವೇ ದೊಡ್ಡ ದೋಷವಾಗಿಸ್ತು ಸಂ ಸ್ಕೃತಕ್ಕೆ ಮಾತ್ರವೇ ಮಹಿಮೆ ಇದ್ದಲ್ಲಿ ಕಲಿಯುಗದಲ್ಲವತರಿಸಿ ಸಂಸ್ಕೃತ ಬಲ್ಲವರಾದ ಮಣಿಮಂತನೇ ಮೊದಲಾದವರಿಗೂ ಮುಕ್ತಿಯಾಗಬೇಕಾಗಿತ್ತು ಕನ್ನಡ ಭಾಷೆಯೇ ನಿಷೇಧವಾಗಿದ್ದರೆ ಶ್ರೀಮದ್ವಾದಿರಾಜ ಸ್ವಾಮಿಗಳವರೂ, ಶ್ರೀಪಾದರಾಜರೂ, ವ್ಯಾಸರಾಯ ಸ್ವಾಮಿಗಳವರೂ ಕೂಡ ಕನ್ನಡದಲ್ಲಿ ಪದ ಗಳನ್ನು ಮಾಡಿರುವುದರಿಂದ ಅವರೆಲ್ಲರೂ ನರಕ ಭಾಗಿಗಳಾಗಬೇಕಾಯಿತು. ಸಂಸ್ಕೃತ ಬಾರದ ಉತ್ತಮರಾದ ದಾಸರಾಯರಿಗೆಲ್ಲರಿಗೂ ತಮಸ್ಸೇ ಆಗ ಬೇಕಾಯಿತು. ಆದುದರಿಂದ ಪ್ರಾಕೃತ, ಸಂಸ್ಕೃತ ಶಬ್ದಗಳಿಗೆ ಭಾಷಾ ಪರವಾಗಿ ಅರ್ಥ ಮಾಡಿಕೊಂಡು ಅನರ್ಥಸಾಧನ ಮಾಡಿಕೊಳ್ಳುವವರನ್ನು ನೋಡಿ ಶೋಚಿಸಬೇಕಾಗಿದೆ. ಭಾಗವತ ಏಕಾದಶಸ್ಕಂಧದ ತಾತ್ಪರ್ಯ ದಲ್ಲಿ "ಗರ್ದಭಯಾನಮ ಸಂಸ್ಕೃತ ವಾಣೀ ಇತ್ಯಾದೇಃ" ಎಂದು ವಸ್ತು ವಿನ ಶುದ್ಧಿ ಅಶುದ್ಧಿಗಳನ್ನು ಹೇಳುವ ಸಂದರ್ಭದಲ್ಲಿ ಅಸಂಸ್ಕೃತವಾಣಿಯ ನ್ನು ಕತ್ತಲೆಯ ವಾಹನಕ್ಕೆ ಸಮ ಮಾಡಿರುತ್ತಾರೆ. ಇದಕ್ಕೆ ಭಾಷಾ ಪರ ವಾಗಿ ಅರ್ಥ ಮಾಡುವುದಾದರೆ ವಿದ್ವಾಂಸರುಗಳು ಸುಧಾದಿಗಳಿಗೂ ಪುರಾ ಣಗಳಿಗೂ ಅರ್ಥವನ್ನು ಹೇಳುವಾಗ ಪ್ರಾಕೃತ ಭಾಷೆಯಲ್ಲಿಯೇ ಹೇಳಬೇ ಕಾಯಿತು. ಹೀಗೆ ಯಾರೂ ಹೇಳುವಂತಿಲ್ಲ. ಮನೆಯಲ್ಲಿ ಹೆಂಡರು ಮ ಕ್ಕಳ ಕೂಡ ಮಾತಾಡುವಾಗಲೂ ಪ್ರಾಕೃತ ಭಾಷೆಯಿಂದಲೇ ಮಾತಾಡುತ್ತಿ ರುವರು. ಇವರೆಲ್ಲರಿಗೂ ಕತ್ತೆಯ ಮೇಲೆ ಕೂತಂತೆ ಅಶುದ್ಧಿಯು ಪ್ರಾಪ್ತ ವಾಗುತ್ತಿದ್ದರೆ ಅವರಿಗೆ ಬ್ರಾಹ್ಮಣ್ಯವು ಉಳಿಯುವುದೆಂತು? ಇವೆಲ್ಲವನ್ನು ಯೋಚಿಸದೆ ಮನ ಬಂದಂತೆ ಅರ್ಥ ಮಾಡಿಕೊಂಡರೆ ಅನರ್ಥವೂ, ದೊಡ್ಡ ವರ ದ್ರೋಹವೂ ನಿಸ್ಸಂಶಯವಾಗಿ ಪ್ರಾಪ್ತವಾಗುವುದು. ಆದುದರಿಂದ ಸಂಸ್ಕೃತ ಪ್ರಾಕೃತ ಶಬ್ದಗಳಿಗೆ ಅರ್ಥಾಂತರವನ್ನು ಮಾಡೇ ತೀರಬೇಕು. ಮತ್ತೂ ಏಕಾದಶ ಸ್ಕಂಧದಲ್ಲಿ 'ಪುರಾಣೈಃ ಪ್ರಾಕೃತೈರಪಿ' ಪ್ರಾಕೃತದಿಂ ದಲೂ ಕೂಡ ಪರಮಾತ್ಮನನ್ನು ಸ್ತೋತ್ರ ಮಾಡಬೇಕು, ಎಂದು ಹೇಳಿರು ವರು. ಇದಲ್ಲದೆ "ನಯದ್ವಚಶ್ಚಿತ್ರಪದಂ ಹರೇರ್ಯಶೋ ಜಗತ್ಪವಿತ್ರಂ ನ ಗೃಣೀತ ಕರ್ಹಿಚಿತ್ ॥ ತದ್ವಾಯಸಂ ತೀರ್ಥಮುಶಂತಿ ಮಾನಸಾನಯತ್ರ ಹಂಸಾನ್ನ್ಯವಸ್ನಿಮುಂಕ್ಷಯಾ ॥ ಸವಾಗ್ವಿಸರ್ಗೋಜನ ತಾಘ ವಿಪ್ಲವೋಯಸ್ಮಿ

ನ್ಯತಿಶ್ಲೋಕಮುಬದ್ಧವತ್ಯಪಿ ॥ ನಾಮಾನ್ಯನಂತಸ್ಯಯಶೋಂಕಿತಾನಿಯಚ್ಛೃ ಣ್ವಂತಿಗಾಯಂತಿ ಗೃಣ್ಣಂತಿ ಸಾಧವಃ" ಎಂಬ ಭಾಗವತ ವಚನಾನುಸಾರ ವಾಗಿ, ಯಾವದಾದರು ಗ್ರಂಥವು, ವಿಚಿತ್ರ ಪದ ರಚನಾದಿಗಳಿಂದ ಕೂಡಿ ಕಿವಿಯಲ್ಲಿ ಕೇಳಲು ಇಂಪಾಗಿದ್ದರೂ ಅದರಲ್ಲಿ ಭಗವನ್ಮಹಿಮೆ ಮಾತ್ರ ಇಲ್ಲ ದಿದ್ದರೆ ಆ ಗ್ರಂಥವನ್ನು ಕಾಗೆಯು ಮುಣುಗುವ ಕೆಸರಿನ ನೀರೊಳಗೆ ಮಾ ನಸ ಸರೋವರದ ವಾಸಿಗಳಾದ ಹಂಸ ಪಕ್ಷಿಗಳು ಹೇಗೆ ಮುಣುಗಲು ಇಚ್ಛೈಸಲಾರವೋ ಹಾಗೆಯೇ ದೊಡ್ಡವರಾದ 'ಹಂಸ' ಅಂದರೆ ಸನ್ಯಾ ಸಿಗಳಾದ ಸನಕಾದಿಗಳೇ ಮೊದಲಾದ ಮಹನೀಯರು ಸ್ವೀಕರಿಸಲಾರರು. ಅದನ್ನು (ವಾಯಸತೀರ್ಥ) ಹೊಟ್ಟೆ ತುಂಬಿಕೊಂಡು ಕಾಲ ಕಳೆಯುವು ದಕ್ಕೆ ಉಪಯೋಗವಾದ್ದೆಂದು ಭಾವಿಸುವರು. ಗ್ರಂಥದಲ್ಲಿ ಪ್ರತಿ ಶ್ಲೋ ಕದಲ್ಲೂ ಛಂದೋ ಭಂಗಾದಿ ದೋಷಗಳಿದ್ದರೂ ಭಗವನ್ನಾಮಾಂಕಿತವಾ ಗಿದ್ದರೆ ಆ ಗ್ರಂಥವನ್ನು ಸಾಧುಗಳು ಶ್ರವಣ ಪಠನಾದಿಗಳನ್ನು ಮಾಡಿ ಆನಂದಪಡುವರು. ಈ ರೀತಿಯಾಗಿ ಭಗವನ್ಮಹಾತ್ಮ್ಯೆಗಳುಳ್ಳ ಗ್ರಂಥಗ ಳಿಗೆ ಮಹಾ ಮಹಿಮೆಯನ್ನು ಹೇಳಿರುವರು. ಹೀಗಿರುವಲ್ಲಿ ಸಂಸ್ಕೃತ ಪ್ರಾ ಕೃತವೆಂದರೆ ಅರ್ಥವೇನು? ಸಂಸ್ಕೃತ ಭಾಷಾದಲ್ಲಿ ಬರಿಯಲ್ಪಟ್ಟ ಕಾವ್ಯ ಕಾದಂಬರೀ ಮೊದಲಾದ ಗ್ರಂಥಗಳು ಪರಮಾತ್ಮನನ್ನು ಅಲ್ಲದೆ ಅನ್ಯರ ನ್ನು ಬಣ್ಣಿಸಿರುವುಗಳಾದರೆ ಅಂತಹ ಗ್ರಂಥಗಳೇ ಪ್ರಾಕೃತ ಗ್ರಂಥಗಳು. ಕನ್ನಡ ಮೊದಲಾದ ಗ್ರಂಥಗಳಾದರೂ ಅಪ್ರಾಕೃತನಾದ ಭಗವಂತನನ್ನು ಕೊಂಡಾಡುವ ಗ್ರಂಥಗಳು ಸಂಸ್ಕೃತ ಗ್ರಂಥಗಳೆಂದು ಭಾವಿಸಬೇಕೆಂಬುದೇ ಶ್ರೀಮದಾಚಾರ್ಯರ ಹೃದ್ಗತವೆಂದು ಭಾವಿಸಬೇಕು. ಮತ್ತೂ ಅಕಾರಾದಿ ಏಕಪಂಚಾಶದ್ವರ್ಣಗಳೇ ಕನ್ನಡದಲ್ಲಿ ಇರುವುದರಿಂದಲೂ ಅಜಾದಿ ಪರಮಾ ತ್ಮನೇ ಈ ವರ್ಣಗಳಿಗೂ ಪ್ರತಿಪಾದ್ಯನಾದುದರಿಂದಲೂ ಇಂತಹ ಉದ್ಗ್ರಂ ಥವನ್ನು ಕನ್ನಡ ಭಾಷೆ ಎಂದು ಹೀಯ್ಯಾಳಿಸುವವರು ಹರಿ ಗುರುಗಳ ದ್ರೋ ಹಕ್ಕೆ ಸಂಪೂರ್ಣ ಪಾತ್ರರಾಗುವರೆಂಬ ವಿಷಯದಲ್ಲಿ ಸಂಶಯವೇ ಇಲ್ಲ. ಇದೇ ಅಭಿಪ್ರಾಯದಿಂದ ಪ್ರಾಚೀನರಾದ ಮಹರಾಷ್ಟ್ರ ದೇಶಿಯರಾದ ತು ಕ್ಕಾರಾಂ, ತುಲಸೀದಾಸ್, ನಾಮದೇವ, ಜ್ಞಾನದೇವ ಮೊದಲಾದ ಅವ ತಾರ ಪುರುಷರೆಂದ್ಧೆ ಪ್ರಸಿದ್ಧಿ ಹೊಂದಿರುವ ಮಹಾ ಭಗವದ್ಭಕ್ತರೂ ಸಹ

ತಮ್ಮ ತಮ್ಮ ಭಾಷೆಗಳಿಗೆ ಮಹಾತ್ಮ್ಯೆ ಕೊಟ್ಟಿರುವರು. ಆದ್ದರಿಂದಲೇ ನಮ್ಮ ದಾಸರಾಯರೂ ಸಹ ಇವು ಕಲುಷ ವಚನಗಳಾದೊಡೆಯು ಭಗವನ್ಮಹಿಮೆ ಎಂಬ ಸಮುದ್ರವನ್ನು ಪ್ರವೇಶ ಮಾಡಿದುದರಿಂದ ಸರ್ವರೂ ಸ್ವೀಕರಿಸತಕ್ಕದ್ದು ಎಂದು ಹೇಳಿರುವರು. ಇಷ್ಟು ಹೇಳಿಯೂ ಜನರಿಗೆ ಇದರಲ್ಲಿ ಆದರ ಹುಟ್ಟದೆ ಮಾತ್ಸರ್ಯಗ್ರಸ್ತರಾಗುವುದಾದರೆ ಕೋತೀ ಕೈಲಿ ಸಿಕ್ಕಿದ ಮಾಣಿಕ್ಯದಂತೆಯೇ ಭಾವಿಸಬೇಕು. ಮುಖ್ಯವಾಗಿ ಶ್ರೀ ಹರಿಯು ಪ್ರತಿ ಒಬ್ಬ ಮನುಷ್ಯನಿಂದ ಆವನ ಯೋಗ್ಯತಾನುಸಾರ ಸಾಧನೆಯನ್ನು ಮಾಡಿಸುವನು. ಹೆಚ್ಚಿಗೆ ಹೇಳುವುದೇನು.

ಈ ಪದ್ಯದಲ್ಲಿ ಭಕ್ತರಧೀನನಾದ ಸ್ವಾಮಿಯ ಕರುಣವನ್ನು ಕೊಂಡಾಡುತ್ತಾರೆ.

**ಶೃತಿತತಿಗಳಿಗಭಿಮಾನಿ ಲಕುಮಿಾ**
**ಸ್ತುತಿಗಳಿಗ ಗೋಚರಿಸದ ಪ್ರತಿ**
**ಹತಮಹೈಶ್ವರ್ಯಾದ್ಯಖಿಳ ಸದ್ಗುಣಗಣಾಂಭೋಧಿ ||**
**ಪ್ರತಿ ದಿವಸ ತನ್ನಂಘ್ರಿ ಸೇವಾ**
**ರತ ಮಹಾತ್ಮರು ಮಾಡುತಿಹ ಸಂ**
**ಸ್ತುತಿಗೆ ವಶನಾಗುವನಿವನ ಕಾರುಣ್ಯಕೇನೆಂಬೇ ||೩||**

ಪದ್ಯಾರ್ಥ.—ಶೃತಿತತಿಗಳಿಗೆ=ವೇದ ಸಮೂಹಗಳಿಗೆ, ಅಭಿಮಾನಿ= ಅಭಿಮಾನಿಯಾದ, ಲಕುಮಿಾಸ್ತುತಿಗಳಿಗೆ = ಲಕ್ಷ್ಮೀದೇವಿಯರು ಮಾಡುವ ಸ್ತೋತ್ರಗಳಿಗೆ, ಗೋಚರಿಸದ=ಪಾರಗಾಣಿಸಿಕೊಳ್ಳಲ್ಪಡದ, ಅಪ್ರತಿಹತಮಹೈಶ್ವರ್ಯಾದ್ಯಖಿಳ ಗುಣಗಣಾಂಭೋಧಿ=ಅಪ್ರತಿಹತ ಮಹೈಶ್ವರ್ಯಾದಿ=ಶಶ್ವದೇಕಪ್ರಕಾರವಾದ ಮಹದೈಶ್ವರ್ಯ ಮೊದಲಾದ, ಅಖಿಳ=ಸಮಸ್ತವಾದಂಥ, ಸದ್ಗುಣಗಣ=ಉತ್ಕೃಷ್ಟ ಗುಣಗಳಿಗೆ, ಅಂಬುಧಿ=ಸಮುದ್ರದಂತೆ ಆಶ್ರಯನಾಗಿರುವ ಶ್ರೀ ಪರಮಾತ್ಮನು, ಪ್ರತಿದಿವಸ=ಪ್ರತಿ ದಿವಸದಲ್ಲೂ, ತನ್ನಂಘ್ರಿ ಸೇವಾರತಮಹಾತ್ಮರು=ತನ್ನಂಘ್ರಿ=ತನ್ನ ಪಾದಗಳ, ಸೇವಾ=ಸೇವೆಯಲ್ಲಿ, ರತ=ನಿರತರಾದ, ಮಹಾತ್ಮರು=ಮಹನೀಯರು, ಮಾಡುತಿಹ=ಮಾಡುತ್ತಿರುವ, ಸಂಸ್ತುತಿಗೆ=ಸ್ತೋತ್ರಕ್ಕೆ ವಶನಾಗುವನು, ಇವನ ಕಾರುಣ್ಯಕ್ಕೆ= ಕರುಣಕ್ಕೆ, ಏನೆಂಬೆ=ಎಷ್ಟೆಂದು ವರ್ಣಿಸಲಿ !

ತಾತ್ಪರ್ಯ.—ಯಾವ ಪರಮಾತ್ಮನನ್ನು ಸ್ತೋತ್ರ ಮಾಡಿ ಪಾರಗಾಣ ಲು ಶ್ರೀ ಲಕ್ಷ್ಮೀ ದೇವಿಯರಿಗೂ ಸಾಧ್ಯವಿಲ್ಲವೋ, ಯಾವನು ಎಂದಿಗೂ ನಾಶವಿಲ್ಲದ ಒಂದೇ ರೀತಿಯಾದ ಮಹದೈಶ್ವರ್ಯ ಸಮುದ್ರನಾಗಿ ಇರುವನೋ ಅಂತಹ ಮಹಾನುಭಾವನು ತನ್ನ ಪಾದಸೇವಾರತರಾದ ಮಹಾತ್ಮರು ಮಾ ಡುವ ಅಲ್ಪವಾದ ಸ್ತೋತ್ರಕ್ಕೆ ವಶನಾಗುವನು. ಇಂತಹ ಮಹಾನುಭಾ ವನ ಕಾರುಣ್ಯವನ್ನು ಎಷ್ಟೆಂದು ವರ್ಣಿಸಲಿ.

ವಿಶೇಷಾರ್ಥ.—ಶ್ರೀ ಪರಮಾತ್ಮನು ತನ್ನ ಪಾದ ಸೇವಾರತರಾದ ಮ ಹಾತ್ಮರು ಮಾಡುತಿಹ ಸಂಸ್ತುತಿಗೆ ವಶನಾಗುವನು ಎಂದು ದಾಸರಾಯರು ಹೇಳಿರುವರು. ಇದಕ್ಕೆ ಆಧಾರವೇನು! ಎಂದರೆ ದಾಸರಾಯರು ಸ್ವಾನು ಭವದಿಂದಲೂ, ದೊಡ್ಡವರ ವಾಕ್ಯ ಪ್ರಮಾಣದಿಂದಲೂ ಸಹ ಹೀಗೆ ಹೇಳಿ ರುವರು. ಸ್ವಾನುಭವವಾವುದು! ಅಂದರೆ ವಿಜಯದಾಸರೂ, ಭಾಗಣ್ಣದಾ ಸರೂ ಇವರಿಬ್ಬರೂ ಜಗನ್ನಾಥ ದಾಸರು ಅಶಕ್ತಿ ಇಂದಿರುವಾಗ ಅವರನ್ನು ಕರೆದುಕೊಂಡು ತಿರುಪತೀ ಕ್ಷೇತ್ರಕ್ಕೆ ಹೋಗಿದ್ದರು. ಒಂದಾನೊಂದು ದಿವಸ ಅಶಕ್ತರಾದ ಜಗನ್ನಾಥ ದಾಸರನ್ನು ಮಾತ್ರ ತಾವು ಇಳಿದುಕೊಂಡಿದ್ದ ಸ್ಥಳದಲ್ಲೇ ಬಿಟ್ಟು ಭಾಗಣ್ಣ ದಾಸರು ಮೊದಲಾದವರು ದೇವರ ದರ್ಶನಕ್ಕೆ ಹೋಗಿದ್ದರು. ಅಲ್ಲಿ ನೆರೆದಿದ್ದ ಹರಿದಾಸರೆಲ್ಲರೂ ಭಜನೆ ಮಾಡುತ್ತಾ ನರ್ತನ ಗಾನಗಳಲ್ಲಿ ನಿರತರಾಗಿರಲು ಜಗನ್ನಾಥ ದಾಸರ ಅಂಗ ರಕ್ಷಕರಾಗಿದ್ದ ಗುರು ಗಳ ಭಾಗಣ್ಣ ದಾಸರೂ ಸಹ ಭಜನ ತತ್ಪರರಾಗಿ ಜಗನ್ನಾಥ ದಾಸರನ್ನು ಮರೆತುಬಿಟ್ಟರು. ಜಗನ್ನಾಥ ದಾಸರು ರೋಗದಿಂದ ಪೀಡಿತರಾಗಿ ಕಾಲಕ್ಕೆ ಅನ್ನವಿಲ್ಲದೆ ಹಸಿವಿನಿಂದ ನರಳುತ್ತ, ಮಿಕ್ಕವರೆಲ್ಲರೂ ಶ್ರೀನಿವಾಸನ ದರ್ಶನ ವನ್ನು ಮಾಡಿ ಆನಂದಪಡುತ್ತಿರಲು ತಮ್ಮ ಗತಿಯು ಹೀಗೆ ಆಯಿತಲ್ಲಾ ಎಂದು ವ್ಯಸನಪಡುತ್ತ ಶ್ರೀ ಪರಮಾತ್ಮನನ್ನು ಕ್ಷಣ ಬಿಡದೆ ಧ್ಯಾನ ಮಾಡಿ ಸ್ತೋತ್ರ ಮಾಡುತ್ತಿದ್ದರು. ಆಗ ಶ್ರೀ ಪರಮಾತ್ಮನು ಭಾಗಣ್ಣ ದಾಸರಂತೆ ವೇಷಧಾರಿಯಾಗಿ ದಿವ್ಯವಾದ ಭಕ್ಷ್ಯ ಭೋಜ್ಯಗಳಿಂದ ಕೂಡಿದ ಅನ್ನವನ್ನು ತಂದು ಅವರಿಗೆ ಭೋಜನ ಮಾಡಿಸಿದನು. ತಕ್ಷಣ ಇವರ ಅಶಕ್ತಿಯು ನಿವಾರಣವಾಗಿ ಸಂತೋಷದಿಂದ ಪರಮಾತ್ಮನನ್ನು ಭಜಿಸುತ್ತಿದ್ದರು. ಇತ್ತ ಲಾ ಭಾಗಣ್ಣ ದಾಸರಿಗೆ ಬಹಳ ಹೊತ್ತಿನ ಮೇಲೆ ಜಗನ್ನಾಥದಾಸರ ನೆನಪು

ಬಂದಿತು. ಆಗ ಅವರು ಆಹಾ! ರೋಗಿಷ್ಠನಾದ ನಮ್ಮ ಶಿಷ್ಯನನ್ನು ಆದರಿಸದೆ ಬಂದು ಬಿಟ್ಟೆನಲ್ಲ. ಹಸಿವೆಯಿಂದ ಎಷ್ಟು ತಲ್ಲಣಿಸುತ್ತಿರುವನೊ ಎಂದು ಪಶ್ಚಾತ್ತಾಪಗೊಂಡು ಬೇಗ ಬೇಗನೆ ಮನೆಗೆ ಬಂದು ನೋಡುವಾಗ ಸಂತೋಷಚಿತ್ತನಾಗಿ ಕೂತಿರುವ ಶಿಷ್ಯನನ್ನು ಕಂಡು ನಾನು ನಿನ್ನನ್ನು ಮರೆತು ಭಜನೆಯಲ್ಲಿ ಇದ್ದುಬಿಟ್ಟೆನು. ನೀನು ಕ್ಷುದ್ಬಾಧೆಯಿಂದ ಎಷ್ಟು ಕಷ್ಟಪಟ್ಟಿರುವಿಯೋ ಎಂದು ಓಡಿ ಬಂದೆನು. ಇದೇನು ಇಂದು ಉಪವಾಸವಿದ್ದರೂ ಸಂತೋಷಚಿತ್ತನಾಗಿ ಕೂತಿರುವಿಯಲ್ಲಾ, ನಿನಗೆ ಕೂಡುವ ಶಕ್ತಿಯು ಈಗಾಗಲೇ ಹೇಗೆ ಬಂದಿತು ಅಂದರು. ಆಗ ಜಗನ್ನಾಥದಾಸರು ಆಶ್ಚರ್ಯಗೊಂಡು ಇದೇನು ಹೀಗೆ ಕೇಳುತ್ತೀರಿ! ಈಗತಾನೆ ತಾವೇ ಬಂದು ನನಗ ಮಿಷ್ಟಾನ್ನವನ್ನು ಭೋಜನ ಮಾಡಿಸಿದರಲ್ಲಾ ಇಂತಹ ಅಮೃತಾನ್ನವನ್ನು ನಾನು ಎಂದಿಗೂ ನೋಡಿರಲಿಲ್ಲ. ಅದರ ಮಹಿಮೆಯಿಂದಲೇ ನನಗೆ ಶಕ್ತಿಯು ಉಂಟಾಯಿತೆಂದು ಹೇಳಿದರು. ಇದನ್ನು ಕೇಳಿ ಭಾಗಣ್ಣದಾಸರು ಆಶ್ಚರ್ಯಚಕಿತರಾಗಿ ಶ್ರೀನಿವಾಸನೇ ನಿನಗನ್ನವನ್ನಿತ್ತವನು, ನಾನು ನಿನ್ನನ್ನು ಮರೆತುಬಿಟ್ಟೆನು. ನಿನ್ನ ಭಕ್ತಿಗೆ ಮೆಚ್ಚಿ ಪರಮಾತ್ಮನು ಅನುಗ್ರಹ ಮಾಡಿದನೆಂದು ಪರಮಾತ್ಮನನ್ನು ಜಗನ್ನಾಥದಾಸರಿಂದ ಸಮೇತರಾಗಿ ಪಾಡಿ ಪೊಗಳಿದರು ಎಂದು ಜಗನ್ನಾಥದಾಸರ ಚರಿತ್ರೆಯಲ್ಲಿ ಹೇಳಿದೆ. ಹೀಗೆ ದಾಸರಾಯರಿಗೆ ಸ್ವಾನುಭವವೇ ಇರುವುದು. ಮತ್ತೂ ಕನಕದಾಸರು ಉಡುಪಿ ಕೃಷ್ಣನ ದರ್ಶನಕ್ಕೆ ಹೋದ ಕಾಲದಲ್ಲಿ ಅಲ್ಲಿದ್ದವರು ಆತನನ್ನು ಶೂದ್ರನೆಂದು ಆಲಯ ಪ್ರವೇಶಕ್ಕೆ ಅಡ್ಡಿ ಮಾಡಿದರು. ಅವನು ದೇವಸ್ಥಾನದ ಹಿಂದುಗಡೆ ಕೂತು ಪರಮಾತ್ಮನನ್ನು ಪಾಡಿ ಪೊಗಳಲು ಪಶ್ಚಿಮದ ಗೋಡೆಯು ಒಡೆದು ಕಿಂಡಿಯಾಯಿತೆಂತಲೂ ಪೂರ್ವಾಭಿಮುಖವಾಗಿದ್ದ ಕೃಷ್ಣಮೂರ್ತಿಯು ಪಶ್ಚಿಮಾಭಿ ಮುಖವಾಗಿ ತಿರುಗಿದನೆಂತಲೂ, ಈಗಲೂ ಆ ಗುರುತು ಉಡುಪಿಯಲ್ಲಿ 'ಕನಕನ ಕಂಡಿ' ಎಂಬ ಹೆಸರಿನಿಂದ ಪ್ರತ್ಯಕ್ಷವಾಗಿ ತೋರುವುದೆಂದೂ ಹೇಳುವರು. ಇಂತಹ ದೃಷ್ಟಾಂತಗಳು ಅನೇಕವಾಗಿ ವಿಠ್ಠಲ ದೇವರ ಭಕ್ತರಲ್ಲಿ ಪ್ರಖ್ಯಾತಿ ಇರುವುವು. ಆದುದರಿಂದ ದಾಸರಾಯರು ಪ್ರತ್ಯಕ್ಷಾನುಭವದಿಂದಲೇ "ತನ್ನಂಘ್ರಿ ಸೇವಾರತರು ಮಾಡುತಿಹ ಸಂಸ್ತುತಿಗೆ ವಶನಾಗುವನು" ಎಂದು ಹೇಳಿರುವರು. ಇದಕ್ಕೆ ಉಪಮಾನರೂಪ

ವಾಗಿ "ಶ್ರುತಿದೇವ" "ಬಹಳಾಶ್ವರಾಜ" ಮೊದಲಾದವರ ಕಥೆಗಳು ಭಾಗವತಾದಿಗಳಲ್ಲಿರುವುವು. ಇವೆಲ್ಲವೂ ಪುರಾಣ ಕಥೆಗಳೆಂದು ಜನರಿಗೆ ಅಸ್ವಾರಸ್ಯವಾಗಿದ್ದರೆ "ಅಕ್ಬರು ಚಕ್ರವರ್ತಿಯ" ಕಾಲದಲ್ಲಿ ಪ್ರತ್ಯಕ್ಷವಾಗಿ ನಡೆದ ಉಪವಾನಗಳನ್ನೇ ಉದ್ದೇಶಿಸಿ ದಾಸರಾಯರು ಪ್ರತ್ಯಕ್ಷದಂತೆ ತೋರಿಸಿ ಇರುವರು. ಮತ್ತು "ಇವನ ಕಾರುಣ್ಯಕೇನೆಂಬೆ" ಎಂದು ಮೇಲೆ ಹೇಳಿರುವ ಪ್ರಕಾರ ಆ ಪರಮಾತ್ಮನ ಕಾರುಣ್ಯವನ್ನೇ ವಿಶದ ಮಾಡುತ್ತಾರೆ.

**ಮನವಚನಕತಿದೂರ ನೆನೆವವರ**
**ನನುಸರಿಸಿ ತಿರುಗುವನು ಜಾಹ್ನವಿ**
**ಜನಕ ಜನರೊಳಗಿದ್ದು ಜನಿಸುವ ಜಗದುದರ ತಾನು ||**
**ಘನಮಹಿಮ ಗಾಂಗೇಯನುತ ಗಾ**
**ಯನವ ಕೇಳುತ ಗಗನ ಚರವಾ**
**ಹನ ದಿವೌಕಸರೊಡನೆ ತಿರುಗುವನು ಮನೆ ಮನೆಗಳಲಿ ||೪||**

ಪದ್ಯಾರ್ಥ.—ಜಾಹ್ನವಿಜನಕ=ಗಂಗೆಯನ್ನು ಪೆತ್ತ ಶ್ರೀ ಪರಮಾತ್ಮನು, ಮನವಚನಕತಿದೂರ=ಮನಸ್ಸಿಗೂ ವಾಕ್ಯಕ್ಕೂ ಗೋಚರಿಸದವನು, ಆದರೂ ನೆನೆವರನ=ಸ್ಮರಿಸುವವರನ್ನು, ಅನುಸರಿಸಿ=ಹಿಂಬಾಲಿಸಿ, ತಿರುಗುವನು, ಜಗದುದರ=ಜಗತ್ತನ್ನೇ ತಾನು ಉದರದಲ್ಲಿ ಇಟ್ಟುಕೊಂಡವನಾದರೂ, ಜನರೊಳಗಿದ್ದು=ಸಕಲ ಪ್ರಾಣಿಗಳಲ್ಲೂ ಇದ್ದು, ಜನಿಸುವ = ಪ್ರಾಣಿಗಳು ಗರ್ಭದಿಂದ ಹುಟ್ಟುವಾಗ ತಾನೂ ಅವರೊಂದಿಗೆ ಹುಟ್ಟುವನು. ಗಾಂಗೇಯನುತ=ಭೀಷ್ಮಾಚಾರ್ಯರಿಂದ ಸ್ತೋತ್ರ ಮಾಡಿಸಿಕೊಳ್ಳಲ್ಪಟ್ಟ, ಘನಮಹಿಮ=ಅಪಾರವಾದ ಮಹಿಮೆ ಉಳ್ಳವನಾದರೂ, ಗಗನಚರವಾಹನ = ಪಕ್ಷಿವಾಹನ (ಗರುಡವಾಹನನಾದ) ಶ್ರೀ ಪರಮಾತ್ಮನು ತನ್ನ ಭಕ್ತರು ಪಾಡುತ್ತಿರುವ ಗಾಯನವನ್ನು, ಕೇಳುತ=ಕೇಳುತ್ತ, ದಿವೌಕಸರೊಡನೆ = ದೇವತೆಗಳೊಡನೆ ಮನೆ ಮನೆಗಳಲ್ಲಿ=ಭಕ್ತರ ಮನೆಗಳಲ್ಲಿ, ತಿರುಗುವ=ಸಂಚರಿಸುವನು.

ತಾತ್ಪರ್ಯ.—ಗಂಗೆಯನ್ನು ಪೆತ್ತ ಶ್ರೀ ಪರಮಾತ್ಮನು ಮನಸ್ಸಿನಿಂದ ಯೋಚಿಸಿ ತಿಳಿಯಲಿಕ್ಕಾಗಲೀ, ವಾಕ್ಯದಿಂದ ಸ್ತುತಿಸುವುದಕ್ಕಾಗಲೀ ಸಾಧ್ಯನಾಗದವನು ಮತ್ತು ಅಪಾರ ಮಹಿಮನು. ಆದರೂ ಸಾಮಾನ್ಯ ಭಕ್ತರು

ತನ್ನನ್ನು ಸ್ಮರಿಸುತ್ತಿದ್ದರೆ ಅವರ ರಕ್ಷಣೆಗೋಸ್ಕರ ಅವರನ್ನು ಹಿಂಬಾಲಿಸಿ ತಿರುಗುವನು. ಜಗತ್ತನ್ನೆಲ್ಲಾ ತನ್ನ ಉದರದಲ್ಲಿಟ್ಟುಕೊಂಡವನಾದರೂ ತಾನು ಜನರಲ್ಲಿದ್ದು ಗರ್ಭದಿಂದ ಅವರು ಜನಿಸುವಾಗ ತಾನೂ ಜನಿಸುವನು. ಭೀಷ್ಮಾಚಾರ್ಯರಂಥಾವರಿಂದ ಸ್ತುತ್ಯಮಾನನಾದ ಮಹಾನುಭಾವನು ತನ್ನ ಸಾಮಾನ್ಯ ಭಕ್ತರು ಪಾಡುವ ಗಾಯನವನ್ನು ಕೇಳುತ್ತಾ ಗರುಡವಾಹನನಾಗಿ ದೇವತೆಗಳಿಂದ ಕೂಡಿ ಭಕ್ತರ ಮನೆಗಳಲ್ಲಿ ತಿರುಗುತ್ತಿರುವನು. ಆದುದರಿಂದ ದಾಸರಾಯರು "ಇವನ ಕಾರುಣ್ಯಕೇನೆಂಬೆ" ಎಂದು ಸ್ತುತಿಸಿರುವರು.

ವಿಶೇಷಾರ್ಥ.—ಪೂರ್ವ ಶ್ಲೋಕದಲ್ಲಿ "ಇವನ ಕಾರುಣ್ಯಕೇನೆಂಬೆ" ಎಂದು ದಾಸರಾಯರು ಇವನ ಪರಮ ಕರುಣವನ್ನು ಕೊಂಡಾಡಿದರು. ಈ ಶ್ಲೋಕದಿಂದ ಅದನ್ನು ವಿಶದ ಮಾಡುತ್ತಾರೆ, "ಜಾಹ್ನವಿ ಜನಕ" ಈ ವಿಶೇಷಣವು ಶ್ರೀ ಪರಮಾತ್ಮನ ಪಾದ ಮಹಿಮೆಯನ್ನೂ ಪವಿತ್ರತ್ವವನ್ನೂ ಸೂಚಿಸುವುದು, ಹೇಗೆಂದರೆ.

ಭಾಗವತ ಪಂಚಮಸ್ಕಂಧದಲ್ಲಿ "ತತ್ರಭಗವಸ್ಸಾಕ್ಷಾದ್ಯಜ್ಞಲಿಂಗಸ್ಯ, ವಿಷ್ಣೋರ್ವಿಕ್ರ ಮತೋವಾಮ ಪಾದಾಂಗುಷ್ಟ ನಖನಿರ್ಭಿನ್ನೋರ್ಧ್ವಾಂಡ ಕಟಾಹ ವಿವರೇಣಾಂತಃ ಪ್ರವಿಷ್ಟಯಾ ಜಲಧಾರಾ" ಶ್ರೀ ಪರಮಾತ್ಮನು ವಾಮನಾವತಾರ ಮಾಡಿ ಬಲಿಚಕ್ರವರ್ತಿಯಿಂದ ಮೂರಡಿ ಭೂಮಿಯನ್ನು ಬೇಡಿ ಅವನಿಂದ ದತ್ತವಾದ ಭೂಮಿಯನ್ನು ಅಳತೆ ಮಾಡುವಾಗ ತ್ರಿವಿಕ್ರಮ ರೂಪವನ್ನು ತೋರಿ ಒಂದು ಹೆಜ್ಜೆಯಿಂದ ಭೂಮಂಡಲವೆಲ್ಲವನ್ನೂ ಅಳೆದು ಎರಡನೆಯ ಹೆಜ್ಜೆಯನ್ನು ಅಂತರಿಕ್ಷದಲ್ಲಿಡಲು ಆ ಹೆಜ್ಜೆಯು ಭುವರ್ಲೋಕವಮೊದಲು ಸತ್ಯಲೋಕದ ವರೆವಿಗೂ ಇರುವ ಆರು ಲೋಕಗಳನ್ನೂ ದಾಟಿ ಮೇಲಿನ ಬ್ರಹ್ಮಾಂಡ ಕರ್ಪರಕ್ಕೆ ತಗಲಿತು. ಆಗ ಪರಮಾತ್ಮನ ಎಡದ ಪಾದಾಂಗುಷ್ಟ ನಖವು ಆ ಖರ್ಪರಕ್ಕೆ ತಗಲಿದ ಮಾತ್ರದಲ್ಲಿ ಬ್ರಹ್ಮಾಂಡ ಖರ್ಪರವು ಒಡೆದು ಹೊರಗಿನ ನೀರು ಧಾರೆಯಾಗಿ ಒಳಗೆ ಪ್ರವೇಶ ಮಾಡಿತು. ಆ ಧಾರೆಯು ಪರಮಾತ್ಮನ ಪಾದವನ್ನು ತೊಳೆದುಕೊಂಡು ಬಂದುದರಿಂದ ನದಿಗಳಲ್ಲಿ ಉತ್ತಮಳೆಂದೆಣಿಸಿ ವಿಷ್ಣುಪದೀ ಎಂಬ ನಾಮಧೇಯದಿಂದ ಜಗತ್ತನ್ನು ಪವಿತ್ರವನ್ನಾಗಿ ಮಾಡಿದಳೆಂದು ಹೇಳಿರುವರು. ಇದರಿಂದ ಜಾಹ್ನವಿ

ಯ ಪೆತ್ತನನೆಂದು ಪರಮಾತ್ಮನಿಗೆ ಹೇಳಲು ಕಾರಣವಾಯಿತು. ಮತ್ತು ತೃತೀಯ ಸ್ಕಂಧದಲ್ಲಿ "ಯಚ್ಛೌಚನಿಃ ಸೃತಸರಿತ್ಪ್ರವರೋದಕೇನ ತೀರ್ಥೇನ ಮೂರ್ಧ್ನ್ಯಧಿ ಧೃತೇನಶಿವಃ ಶಿವೋಭೂತ್' ಧ್ಯಾತುರ್ಮನಃ ಶಮಲ ಶೈಲ ನಿಸೃಷ್ಟವಜ್ರಂ ಧ್ಯಾಯೇಚ್ಚಿರಂಭಗವತಶ್ಚರಣಾರವಿಂದಂ" ಈ ಶ್ಲೋಕದಲ್ಲಿ "ಯಾವ ಪರಮಾತ್ಮನ ಪಾದ ಶೌಚದಿಂದ ಹೊರಟ ಉದಕವನ್ನು" ಎಂದು ಹೇಳಿರುವರು. ಗಂಗೆಗೆ ಪಾದಪ್ರಕ್ಷಾಳನೋದಕವೆಂದು ಹೇಳಲು ಮತ್ತೊಂದು ಕಾರಣವುಂಟು. ಬಾಹ್ಯೋದಕವು ಒಳಗೆ ಪ್ರವೇಶ ಮಾಡುವ ಕಾಲದಲ್ಲಿ ಪರಮಾತ್ಮನ ಪಾದದ ಮೇಲೆ ಬಿದ್ದು ನಂತರ ಒಳಗೆ ಬಂದ ಕಾರಣವನ್ನು ಮೇಲೆ ಹೇಳಿದೆಯಷ್ಟೆ ! ಮತ್ತೊಂದು ಕಾರಣವಾವುದೆಂದರೆ :—ಪರಮಾತ್ಮನು ಭೂಮಿಯನ್ನು ಅಳತೆ ಮಾಡುವಾಗ ಸತ್ಯ ಲೋಕಕ್ಕೆ ಬರಲು ಬ್ರಹ್ಮದೇವರು ಪರಮಾನಂದ ಭರಿತರಾಗಿ ಆ ಪರಮಾತ್ಮನ ಪಾದದಿಂದ ಉದ್ಭವಿಸಿದ ಉದಕವನ್ನೇ ಕಮಂಡಲದಲ್ಲಿ ತುಂಬಿಕೊಂಡು ಪರಮಾತ್ಮನ ಪಾದಕ್ಕೆ ವಿಧ್ಯುಕ್ತ ಪ್ರಕಾರ ಅರ್ಚಿಸಿ ಪ್ರಕ್ಷಾಳನೆ ಮಾಡಿದರು. ಭಾಗವತ ಅಷ್ಟಮ ಸ್ಕಂಧದಲ್ಲಿ "ಧಾತುಃ ಕಮಂಡಲು ಜಲಂತದು ರುಕ್ರಮಸ್ಯ ಪಾದಾವನೇಜನಪವಿತ್ರತ ಯಾನರೇಂದ್ರ ಸ್ವರ್ಧುನ್ಯ ಭೂನ್ನಭಸಿಸಾಪತತೀ ನಿಮಾರ್ಷ್ಟಿ ಲೋಕತ್ರಯಂ ಭಗವತೋ ವಿಶದೇವಕೀರ್ತಿಃ" ಅಂದರೆ ಆ ಕಮಂಡಲೋದಕವು ಪರಮಾತ್ಮನ ಪಾದ ಪ್ರಕ್ಷಾಳನೆಯಿಂದ ಪವಿತ್ರತೆಯನ್ನು ಹೊಂದಿ ಆಕಾಶಗಂಗೆ ಎಂದೆನಿಸಿಕೊಂಡು ಲೋಕತ್ರಯವನ್ನೂ ಪವಿತ್ರವನ್ನಾಗಿ ಮಾಡಿತು ಎಂದು ಹೇಳಿರುವರು. ಆದುದರಿಂದ ತೃತೀಯ ಸ್ಕಂಧದಲ್ಲಿ ಹೇಳಿದ ಶ್ಲೋಕದ ಅಭಿಪ್ರಾಯವು ಇದಕ್ಕೆ ಅವಿರುದ್ಧವೆಂದು ಭಾವಿಸಬೇಕು. ತೃತೀಯ ಸ್ಕಂಧದ ಶ್ಲೋಕಾರ್ಥವೇನೆಂದರೆ :—ಯಾವ ಪರಮಾತ್ಮನ ಪಾದ ಪ್ರಕ್ಷಾಳನೆಯಿಂದ ಹೊರಟ ಶ್ರೇಷ್ಠಳಾದ ಗಂಗೆಯ ಉದಕವನ್ನು ಶಿರಸಾ ಧರಿಸಿದ ಪ್ರಯುಕ್ತ ರುದ್ರದೇವರಿಗೆ ಶಿವ ಎಂಬ ಹೆಸರು ಪ್ರಾಪ್ತವಾಯಿತೋ, ಯಾವನ ಪಾದವು ಧ್ಯಾನ ಮಾಡುವವರ ಮನಃಕಲ್ಮಷವೆಂಬ ಬೆಟ್ಟವನ್ನು ಪುಡಿ ಪುಡಿ ಮಾಡುವ ವಿಷಯದಲ್ಲಿ ವಜ್ರಪ್ರಾಯವಾಗಿರುವುದೋ ಅಂತಹ ಶ್ರೀ ಪರಮಾತ್ಮನ ಚರಣ ಕಮಲವನ್ನು ಚಿಂತಿಸಬೇಕು ಎಂಬುದು "ಯಚ್ಛೌಚನಿಃ ಸೃತ" ಎಂಬ ತೃತೀಯ ಸ್ಕಂಧದ ಶ್ಲೋಕಾರ್ಥವು. ಮಹನೀಯರೆ ! ನೋಡಿರಿ !

ಸಾಮಾನ್ಯವಾಗಿ ನಾವು ಯಾವ ಅಂಗವನ್ನು ಬಹಳ ನಿಕೃಷ್ಟವನ್ನಾಗಿ ಭಾವಿಸುವೆವೋ ಅಂತಹದು ಪಾದ, ನಖ, ಕೇಶ ಮೊದಲಾದವು ಪಾನೀಯದಲ್ಲಾದರೂ ಭಕ್ಷ್ಯ ಪದಾರ್ಥದಲ್ಲಾದರೂ ಇದ್ದಲ್ಲಿ ಆ ಪದಾರ್ಥವನ್ನೇ ಶಾಸ್ತ್ರಕಾರರು ನಿಷೇಧಿಸಿರುವರು. ಆದರೆ ಶ್ರೀ ಪರಮಾತ್ಮನ ವಿಚಾರದಲ್ಲಿ ಇದು ಹೇಗೆ ಪರಿಣಮಿಸಿತು ನೋಡಿರಿ ! "ಏದೋಷಾಃ ಇತರತ್ರಾಪಿತೇ ಗುಣಾಃ ಪರಮೇ ಮತಾಃ" ಯಾವುದು ಜನರಲ್ಲಿ ದೋಷವಾಗಿ ಕಾಣುವುದೋ ಅದು ಪರಮಾತ್ಮನಲ್ಲಿ ಗುಣವೇ ಆಗುವುದು, ಎಂದು ಸ್ಮೃತಿ ವಾಕ್ಯವಿರುವುದು. ಈ ಉದಾಹರಣೆಯಿಂದ ಅದು ಚನ್ನಾಗಿ ವ್ಯಕ್ತವಾಗುವುದು. ಪರಮಾತ್ಮನ ಎಡಗಾಲಿನ ಅಂಗುಷ್ಟ ನಖದಿಂದ ಉತ್ಪನ್ನವಾಗಿ, ಆ ಪರಮಾತ್ಮನ ಪಾದವನ್ನು ಪ್ರಕ್ಷಾಳನ ಮಾಡಿ ರುದ್ರದೇವರು ಮೊದಲು ಮಾಡಿ ಸಕಲ ಜಗತ್ತನ್ನೂ ಪವಿತ್ರವನ್ನಾಗಿ ಮಾಡಿತು ಅಂದಮೇಲೆ ಆ ಪರಮಾತ್ಮನ ಪಾದಮಹಿಮೆಯನ್ನು ಬೇರೆ ವರ್ಣಿಸಲೇಕೆ ? ಇಂತಹ ಮಹಿಮೋಪೇತನು ಪರಮಾತ್ಮನು ಎಂದು ತೋರಿಸುವುದಕ್ಕಾಗಿ "ಜಾನ್ಹವಿಜನಕ" ಎಂದು ದಾಸರಾಯರು ಹೇಳಿರುವರು.

ಮತ್ತು "ಮನವಚನಕತಿದೂರ ನೆನೆವವರನನುಸರಿಸಿ ತಿರುಗುವನು" ಈ ಪದಗಳಿಂದ ಪರಮಾತ್ಮನ ಕಾರುಣ್ಯವನ್ನು ಪ್ರಕಟನ ಮಾಡುವರು. ಹೇಗೆಂದರೆ :—ಭಾಗವತ ದಶಮಸ್ಕಂದದಲ್ಲಿ "ಮನೋವಚೋಭ್ಯಾ ಮನುಮೇಯ ವರ್ತ್ಮನೋ ದೇವಕ್ರಿಯಾಯಾಃ ಪ್ರತಿಯಂತ್ಯಥಾಪಿಹಿ" ಬ್ರಹ್ಮಾದಿ ದೇವತೆಗಳೂ ಕೂಡ ಸಾಕಲ್ಯೇನ ಭಗವನ್ಮಹಿಮೆಯನ್ನು ಕಾಣರು. ಭಗವತ್ಸ್ವರೂಪವು ಎಂತಹುದೆಂದರೆ,—ಮನೋ ವಾಕ್ಯಗಳಿಂದ ಅನುಮೇಯಿಸಲ ಹರ್ಹವಾದುದು. ಅಂದರೆ :—ಜಗತ್ತು ಇದ್ದ ಮೇಲೆ ಅದರ ಸೃಷ್ಟಿಕರ್ತನೊಬ್ಬನಿರಬೇಕು. ಅವನಾರು ? ವೇದದಲ್ಲಿ ಪರಮಾತ್ಮನೇ ಸೃಷ್ಟ್ಯಾದಿಕರ್ತನು ಎಂದು ಹೇಳಿರುವುದರಿಂದ ಆತನೇ ಸೃಷ್ಟಿಕರ್ತನು, ಅನುಮೇಯಿಸಲು ಯೋಗ್ಯನು. ಸಾಮಾನ್ಯವಾಗಿ ಬ್ರಹ್ಮಾದಿಗಳಿಗೂ ಇಷ್ಟರಮಟ್ಟಿಗೆ ಅಥವಾ ಕೊಂಚ ಇದಕ್ಕಿಂತ ಹೆಚ್ಚಿಗೆ ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಭಗವತ್ಪ್ರೇರಣೆಯಿರಿವ ಭಗವನ್ಮಹಿಮೆಯನ್ನು ಕಾಣುವರೇ ಹೊರತು ಸಾಕಲ್ಯೇನ ತಿಳಿಯಲು ಸಾಧ್ಯವಲ್ಲ. ಹಾಗಾದರೆ ದಾಸರಾಯರು "ಸುಲಭನೋಹರಿ"

ಎಂದು ಹೇಳಿರುವರಲ್ಲ! ಇದರ ಅಭಿಪ್ರಾಯವೇನು? "ಯಮೇವೈಷ ವೃಣುತೇ ತೇನ ಲಭ್ಯಃ" ಯಾರಲ್ಲಿ ಅನುಗ್ರಹ ಮಾಡಬೇಕೆಂದು ಪರಮಾತ್ಮನಿಗೆ ಇಚ್ಛೆ ಹುಟ್ಟುವುದೋ ಅವನಿಗೆ ಪರಮಾತ್ಮನು ಸುಲಭನೇ ನಿಶ್ಚಯ. ಇದರ ತಾತ್ಪರ್ಯವೇನೆಂದರೆ :—ಬ್ರಹ್ಮಾದಿಗಳಿಗೆ ಅಗೋಚರನಾದ ಸ್ವಾಮಿಯನ್ನು ಸಾಮಾನ್ಯ ಭಕ್ತರು ವಲಿಯುವಂತೆ ಮಾಡಿಕೊಳ್ಳುವುದೆಂದರೇನು? ಏನಾದರೂ ರಮಾದೇವಿಯಲ್ಲಿ ಇರುವ ಭಗವದನುಗ್ರಹವು ಬ್ರಹ್ಮದೇವರಲ್ಲಿಲ್ಲ. ಅವರಲ್ಲಿರುವ ಅನುಗ್ರಹವು ರುದ್ರಾದಿಗಳಲ್ಲಿಲ್ಲ. ಬ್ರಹ್ಮಾದಿಗಳು ಸಾಕಲ್ಯೇನ ಭಗವತ್ಸ್ವರೂಪವನ್ನು ಅರಿಯರು ಅಂದಮೇಲೆ ಅವರಿಗಿಂತಲೂ ಹೆಚ್ಚಾಗಿ ಭಗವನ್ಮಹಿಮೆಯನ್ನು ತಿಳಿದ ಭಕ್ತರು ಇರಬಹುದೆಂದು ಯೋಚಿಸಲು ಸಾಧ್ಯವಲ್ಲ. ಇದಕ್ಕೆ ಉದಾಹರಣೆಯಾಗಿ ಭಾಗವತೋಕ್ತವಾದ ಒಂದು ದೃಷ್ಟಾಂತವನ್ನು ಹೇಳುವೆವು. ಮಹನೀಯರೇ ಆಲಿಸಿರಿ, ಅಂಬರೀಷ ರಾಜನು ಮಹಾ ಭಗವದ್ಭಕ್ತನಾಗಿದ್ದನು. ಅವನ ಭಕ್ತಿಗೆ ಮೆಚ್ಚಿ ಶ್ರೀ ಪರಮಾತ್ಮನು ಅವನ ರಕ್ಷಣೆಗಾಗಿ ತನ್ನ ಚಕ್ರಾಯುಧವನ್ನೇ ಕೊಟ್ಟಿದ್ದನು. ಅವನು ದ್ವಾದಶೀ ದಿವಸದಲ್ಲಿ ಲಕ್ಷ್ಯ ಬ್ರಾಹ್ಮಣ್ಯ ಭೋಜನವನ್ನು ಮಾಡಿಸಿ ಪಾರಣೆ ಕಾಲದೊಳಗಾಗಿ ತಾನೂ ಪಾರಣೆ ಮಾಡುವೆನೆಂಬ ಒಂದು ವಿಶೇಷ ವ್ರತವನ್ನು ಮಾಡುತ್ತಿದ್ದನು. ಹೀಗಿರುವಲ್ಲಿ ಒಂದಾನೊಂದು ದ್ವಾದಶಿ ದಿವಸ ಅಂಬರೀಷರಾಜನು ಬ್ರಾಹ್ಮಣರ ಭೋಜನವನ್ನು ಮಾಡಿಸಿ ಅವರಸಮ್ಮತಿಯನ್ನು ಪಡೆದು ತಾನು ಪಾರಣೆಗೆ ಉಪಕ್ರಮಿಸುವ ಕಾಲಕ್ಕೆ ಸರಿಯಾಗಿ ದೂರ್ವಾಸ ಋಷಿಗಳು ಆ ವ್ರತಭಂಗವನ್ನು ಮಾಡುವ ಉದ್ದೇಶ್ಯವಾಗಿ ೧೦,೦೦೦ ಶಿಷ್ಯರುಗಳೊಂದಿಗೆ ಅಲ್ಲಿಗೆ ಬಂದರು. ರಾಜನು ತಾನು ಪಾರಣೆ ಮಾಡುವುದನ್ನು ಬಿಟ್ಟು ಪಾರಣೆಗೆ ಬರಬೇಕೆಂದು ಎದ್ದು ಬೇಡಿಕೊಂಡನು. ದೂರ್ವಾಸರು ಹಾಗೇ ಆಗಲೆಂದು ಸ್ನಾನ ನಿಮಿತ್ತದಿಂದ ಯಮುನಾ ನದಿಗೆ ಹೋಗಿ ಮಡುವಿನೊಳಗೆ ಮುಳುಗಿಕೊಂಡು ಬೃಹದ್ಧ್ಯಾನ ಮಾಡುತ್ತಾ ಕೂತುಬಿಟ್ಟರು. ಪಾರಣೆ ಮೀರುವ ಹೊತ್ತಾದರೂ ದೂರ್ವಾಸರು ಬಾರದಿರಲು ರಾಜನು ಚಿಂತಾಕ್ರಾಂತನಾಗಿ ಅಲ್ಲಿದ್ದ ಬ್ರಾಹ್ಮಣರ ಆಜ್ಞೆಯನ್ನು ಪಡೆದು ತೀರ್ಥ ಪ್ರಾಶನದಿಂದ ಪಾರಣೆಯ ವ್ರತವನ್ನು ಪೂರೈಸಿಬಿಟ್ಟನು. ನಂತರ ದೂರ್ವಾಸರು ಬಂದು ನೋಡಿ ಇದನ್ನು ತಿಳಿದು ಬಹು ಕೋಪದಿಂದ ಒಂದು ಆಭಿಚಾ

ರವನ್ನು (ಶಕ್ತಿಯನ್ನು) ಸೃಷ್ಟಿಸಿ ರಾಜನನ್ನು ಕೊಲ್ಲುವಂತೆ ಅದಕ್ಕೆ ಆಜ್ಞೆ ಯನ್ನಿತ್ತರು. ರಾಜನು ಭಗವಧ್ಯಾನ ಮಾಡುತ್ತಾ ನಿಂತೇ ಇದ್ದನು. ತಕ್ಷಣ ಭಗವಚ್ಚಕ್ರವು ಹೊರಟು ಆ ಅಭಿಚಾರವನ್ನು ಭಸ್ಮ ಮಾಡಿ ದೂರ್ವಾಸರ ನ್ನು ಅಟ್ಟಿಕೊಂಡು ಬಂದಿತು. ದೂರ್ವಾಸರು ಭಯಪಟ್ಟು ಬ್ರಹ್ಮದೇವ ರನ್ನೂ, ರುದ್ರ ದೇವರನ್ನೂ ರಕ್ಷಿಸಿರೆಂದು ಬೇಡಿಕೊಳ್ಳಲು ಅವರು ಭಗವಚ್ಚ ಕ್ರದಿಂದ ರಕ್ಷಿಸಲು ತಮಗೆ ಸಾಧ್ಯವಿಲ್ಲವೆಂದು ಹೇಳಿಬಿಟ್ಟರು. ತದನಂತರ ವೈಕುಂಠವಾಸಿಯಾದ ಪರಮಾತ್ಮನನ್ನೇ ಶರಣಾಗತರಾದರು. ಪರಮಾತ್ಮ ನೂ "ನಾನು ಭಕ್ತರಾಧೀನನು ನಾನು ಅದನ್ನು ಪರಿಹರಿಸಲಾರೆನು. ಅಂಬ ರೀಷನ ಪಾದವನ್ನೇ ಹಿಡಿದುಕೊಂಡರೆ ಅವನೇ ರಕ್ಷಿಸುವನು" ಅಂದನು. ಅದರಂತೆ ದೂರ್ವಾಸರು ಅಂಬರೀಷನನ್ನು ಶರಣು ಹೋಗಲು ಅಂಬರೀಷನು ಚಕ್ರವನ್ನು ಪ್ರಾರ್ಥಿಸಿ ದೂರ್ವಾಸರನ್ನು ರಕ್ಷಿಸಿದನು. ಅವರು ಅಲ್ಲಲ್ಲಿ ಸು ತ್ತಿಕೊಂಡು ಹಿಂತಿರುಗಿ ಬರಬೇಕಾದರೆ ಒಂದು ವರ್ಷಕಾಲ ಕಳೆದು ಹೋ ಗಿತ್ತು. ಆ ವರೆವಿಗೂ ರಾಜನು ಉಪವಾಸವಾಗಿಯೇ ಕಾದಿದ್ದು ಅವರಿಗೆ ಪಾರಣೆ ಮಾಡಿಸಿ ನಂತರ ತಾನು ಪಾರಣೆ ಮಾಡಿದನು. ಹೀಗಿರುವುದರಿಂದ "ಯಯಾವಿರಿಂಚಾದಿ ಮಧಶ್ಚಕಾರ" ಅಂದರೆ ಭಕ್ತಿಯಲ್ಲಿ ಅಂಬರೀಷನು ಬ್ರಹ್ಮಾದಿಗಳನ್ನೂ ಕೂಡ ಮೀರಿಬಿಟ್ಟನು ಎಂದು ಭಾಗವತದಲ್ಲಿ ಹೇಳಲ್ಪ ಟ್ಟದೆ. ಅಂಬರೀಷನ ಚಕ್ರದಿಂದ ರಕ್ಷಿಸಲು, ಬ್ರಹ್ಮ ರುದ್ರಾದಿಗಳಿಗೂ ಕೂಡ ಆಗಲಿಲ್ಲ. ಎಂಬುದು ಈ ಕಥೆಯಿಂದ ಗೊತ್ತಾಗುವುದು. ಆದರೆ ಇದು ಸಿದ್ಧಾಂತಕ್ಕೆ ವಿರುದ್ಧವಾಗಿರುವುದರಿಂದ ಶ್ರೀಮದಾಚಾರ್ಯರು ಈ ಪ್ರ ಕಾರವಾಗಿ ತಾತ್ಪರ್ಯ ಹೇಳಿರುವರು. ಅದು ಹೇಗೆಂದರೆ :—

"ಬ್ರಹ್ಮಾದಿ ಭಕ್ತಿಕೋಟ್ಯಂಶಾದಂಶೋನೈವಾಂಬರೀಷಕೇ | ತಾ ತ್ಕಾಲಿಕೋ ಪಚೇಯತ್ವಾತ್ತೇಷಾಂ ಯಶಸ ಆದಿರಾಟ್ || ಬ್ರಹ್ಮಾದಯಶ್ಚ ತತ್ಕೀರ್ತಿಂ ವ್ಯಂಜಯಾಮಾಸುರುತ್ತಮಾಂ" ಬ್ರಹ್ಮಾದಿಗಳ ಭಕ್ತಿಯಲ್ಲಿ ಕೋಟಿ ಅಂಶದಲ್ಲಿ ಒಂದು ಅಂಶವೂ ಕೂಡ ಅಂಬರೀಷನಲ್ಲಿ ಇಲ್ಲ. ಆದರೆ ಮನುಷ್ಯೋತ್ತಮನಾದ ಅಂಬರೀಷನಿಗೆ, ಬ್ರಹ್ಮಾದಿಗಳಿಂದ ಸಾಧ್ಯವಲ್ಲದ ಕಾರ್ಯವನ್ನು ಮಾಡಿದನೆಂಬ ಕೀರ್ತಿಯನ್ನು ಕೊಡಿಸಬೇಕೆಂಬ ಇಚ್ಛೆಯು, ಪರ ಮಾತ್ಮನಿಗೆ ಇತ್ತು ಎಂಬುವ ವಿಷಯವು ಬ್ರಹ್ಮಾದಿಗಳಿಗೆ ಗೊತ್ತಿತ್ತು. ಆದ್ದ

ರಿಂದಲೆ ಅವರು ದೂರ್ವಾಸರನ್ನು ರಕ್ಷಿಸದೆ ಅಂಬರೀಷನ ಭಕ್ತಿಯನ್ನು ವ್ಯಕ್ತಿಪಡಿಸಿದರು—ಎಂದು, ಇಂತಹ ಮಹಿಮೆಯು ಅಂಬರೀಷಾದಿಗಳಲ್ಲಿ ಕ್ಷಣಿಕವಾಗಿರುವುದು ಎಂದು ಭಾಗವತ ತಾತ್ಪರ್ಯದ ವಾಕ್ಯವು. ಲೋಕ ವಾಡಿಕೆಯಲ್ಲೂ ಕೂಡ, ಯಾವನಾದರೂ ಒಬ್ಬ ಸೇವಕನು ಯಜಮಾನನಿಗೆ ಬಹಳ ಬೇಕಾದವನಾಗಿದ್ದರೆ, ಅವನ ವಿಷಯದಲ್ಲಿ ಜನರು "ಎಜಮಾನರಿಗೆ ಈ ಸೇವಕನ ಮೇಲೆ ಇದ್ದಷ್ಟು ಪ್ರೀತಿಯು ಹೆಂಡತಿ ಮಕ್ಕಳ ಮೇಲು ಕೂಡ ಇಲ್ಲ." ಎಂದು ಅಂದುಕೊಳ್ಳುವ ರೀತಿಯಲ್ಲಿ, ಹೀಗೆ ಅಂದುಕೊಂಡ ಮಾತ್ರಕ್ಕೇನೆ ಹೆಂಡರು ಮಕ್ಕಳಿಗಿರುವ ಸ್ವಾತಂತ್ರ್ಯಾದಿ ಸುಖವು ಸೇವಕನಿಗೆಂದಾದರೂ ಬಂದೀತೆ? ಹಾಗೆಯೇ ಅಂಬರೀಷನ ವಿಷಯದಲ್ಲಿ ಹೇಳಿರುವುದೆಂದು ಭಾವಿಸಬೇಕು. ಭಕ್ತರಲ್ಲಿ ತನಗೆ ಹೆಚ್ಚು ಕಾರುಣ್ಯವೆಂದು ತೋರಿಸುವುದಕ್ಕಾಗಿ ಪರಮಾತ್ಮನು ಜನರಲ್ಲಿ ಈ ರೀತಿಯಾಗಿ ಕಾಣಿಸಿಕೊಳ್ಳುವನು. ಅಂದರೇನು! ಭಕ್ತರನ್ನು ಕಷ್ಟಕಾಲದಲ್ಲಿ ಮಾತ್ರ ಉದ್ಧರಿಸುವನು. ಬ್ರಹ್ಮಾದಿಗಳಿಗೆ ಯಾವಾಗಲೂ ಗೋಚರನಾಗುತ್ತಲೇ ಇರುವನು.

ಸರ್ವದಾ ಮಹಾರಾಜರನ್ನು ನೋಡುತ್ತಿರುವ ದಿವಾನರು ಮೊದಲಾದವರಿಗೆ ಮಹಾರಾಜರು ಭೇಟಿ ಕೊಟ್ಟರೆಂದರೆ ಆಶ್ಚರ್ಯವೇನು? ಹಾಗಲ್ಲದೆ ಬಡಬಗ್ಗರಲ್ಲಿ ಮಹಾರಾಜನು, ಅಭಿಮಾನವನ್ನಿಟ್ಟು ಅವರಿಗೆ ದರ್ಶನವನ್ನಿತ್ತು ಉದ್ಧರಿಸಿದನೆಂದರೆ ಅವನನ್ನು ಕರುಣಾಳುವೆನ್ನುವರು. ಹಾಗೆಯೇ ಪರಮಾತ್ಮನು ಅಲ್ಪರಾದ ಭಕ್ತ ಜನರಿಗೆ ವಶನಾಗುವುದರಿಂದ ಅವನನ್ನು 'ಕರುಣಾಳು' ಎಂದು ಕೊಂಡಾಡುತ್ತಿರುವರು. ಅದಂತಿರಲಿ! ಮನೋವಾಕ್ಯಗಳಿಗೂ ಅಗೋಚರನಾದ ಮಹಾಮಹಿಮನು ತನ್ನ ಸ್ಮರಣೆಯನ್ನು ಮಾಡುವ ಜನರನ್ನು ಅನುಸರಿಸಿ ತಿರುಗುವನು ಎಂದು ದಾಸರಾಯರು ಹೇಳಿರುವರು. ಇದು ಎಥಾರ್ಥವೇ? ಅಂದರೆ ಪಾಂಡವರ, ತತ್ರಾಪಿ ಅರ್ಜುನನ ವಿಷಯವನ್ನು ಯೋಚಿಸಿರಿ! ಪಾಂಡವರು ಕಷ್ಟದೆಶೆಯಲ್ಲಿರುವಾಗ ಯಾವ ಕ್ಷಣದಲ್ಲಿ ಸ್ಮರಿಸಿದರೂ ಆಗ ಸಿದ್ಧನಾಗಿ ಶ್ರೀ ಕೃಷ್ಣ ರೂಪದಿಂದಲೂ, ವ್ಯಾಸ ರೂಪದಿಂದಲೂ, ಗೋಚರನಾಗುತ್ತಿದ್ದನು. ಮತ್ತೂ ಅರ್ಜುನನಿಗೆ ಸಾರಥಿಯಾಗಿಯೂ, ಸಖನಾಗಿಯೂ, ಗುರುವಾಗಿಯೂ, ದೂತನಾಗಿಯೂ, ರಾತ್ರಿ ಹಗಲುಗಳಲ್ಲಿ ಅವನನ್ನು ಹಿಂಬಾಲಿಸಿ ರಕ್ಷಿಸಿದನು. ಒಂದು ವೇಳೆ ಇದು

ಪುರಾಣದ ಕಥೆ ಅಂದರೆ ಅದು ಹಾಗಿರಲಿ ನಮ್ಮ ಪುರಂದರದಾಸರು, ಕನಕ ದಾಸರು ಮೊದಲಾದವರನ್ನೂ, ಇವರಿಗಿಂತಲೂ ಪ್ರಾಚೀನರಾದ ಮಹಾರಾಷ್ಟ್ರ ದೇಶದ ತುಕ್ಕಾರಾಂ, ನಾಮದೇವ, ಜ್ಞಾನದೇವ, ರಾಮದಾಸ್ ಮೊದಲಾದವರನ್ನೂ ಹೇಗೆ ರಕ್ಷಿಸಿದ ಎಂಬುದನ್ನು ನೋಡಿದರೆ ಜಗನ್ನಾಥ ದಾಸರಾಯರು ಹೇಳಿದ ‹‹ ನೆನೆವವರನನುಸರಿಸಿ ತಿರುಗುವನು ” ಎಂಬ ಮಾತು ಎಷ್ಟು ಸ್ಪಷ್ಟವಾಗಿದೆ ಎಂಬುದು ಗೊತ್ತಾಗುತ್ತದೆ. ಗ್ರಂಥ ವಿಸ್ತಾರ ಭಯದಿಂದ ಅವೆಲ್ಲವನ್ನು ಇಲ್ಲಿ ಬರೆಯಲು ಸಾಧ್ಯವಿಲ್ಲದೆ ಇದೆ. ‹‹ ಜಗದುದರ ತಾನು ಜನರೊಳಗಿದ್ದು ಜನಿಸುವನು ” ಎಂದು ಹೇಳಿರುವರು.

ಇದರ ಅಭಿಪ್ರಾಯವು ಏನು ಅಂದರೆ :—ಪರಮಾತ್ಮನು ಬಿಂಬರೂಪಿಯಾದುದರಿಂದ ಉಪಾಧಿಯಾದ ಜೀವನ ಸ್ವರೂಪ ದೇಹವನ್ನು ಬಿಡದೆ ಸಮೀಪದಲ್ಲೇ ಇರುವನು. ಇದರಿಂದ ಪ್ರತಿಬಿಂಬನಾದ ಜೀವನು ನಿತ್ಯನಾದನು. ಹಾಗಿಲ್ಲದಿದ್ದರೆ ಬಿಂಬನ ಸನ್ನಿಧಾನ ನಾಶದಿಂದ ಪ್ರತಿ ಬಿಂಬನಿಗೆ ಅನಿತ್ಯತ್ವವು ಬರುವುದು. ಕನ್ನಡಿಗೆ ನಾವು ಅಭಿಮುಖರಾದರೆ ನಮ್ಮ ಪ್ರತಿಬಿಂಬವು ಕನ್ನಡಿಯಲ್ಲಿ ಕಾಣುವುದು, ಕನ್ನಡಿಗೂ ನಮಗೂ ಸಂಬಂಧ ತಪ್ಪಿದರೆ ಪ್ರತಿಬಿಂಬವು ಹೇಗೆ ಕಾಣದೆ ಹೋಗುವುದೋ ಹಾಗೆಯೇ ಕನ್ನಡಿಯಂತಿರುವುದು (ಉಪಾಧಿ) ಜೀವನ ಸ್ವರೂಪ ದೇಹವು, ಬಿಂಬನು ಪರಮಾತ್ಮನು. ಇವರಿಬ್ಬರ ಸಂಬಂಧದಿಂದ ಪ್ರತಿಬಿಂಬವು ಕಾಣುವುದು. ಪರಸ್ಪರ ಸಂಯೋಗವು ತಪ್ಪಿದರೆ ಪ್ರತಿಬಿಂಬವು ಇಲ್ಲವಾಗುವುದು. ಆದುದರಿಂದ ಜೀವನು ಹುಟ್ಟುವಾಗ ಅವನ ಕೂಡಲೇ ಪರಮಾತ್ಮನು ಜನಿಸುವನು. ಭಾಗವತ ದಶಮಸ್ಕಂಧದಲ್ಲಿ “ ಗುಣೇಷು ಮಾಯಾ ರಚಿತೇಷು ದೇಹ್ಯಸೌ ಪ್ರಪದ್ಯಮಾನ ಸ್ಸಹತೇನ ಜಾಯತೇ” ಮರಣ ಕಾಲದಲ್ಲಿ ದೇಹಿಯು, ಪ್ರಕೃತಿ ಸಂಬಂಧವಾದ ಸತ್ವ, ರಜಸ್ತಮೋ ಗುಣಗಳಲ್ಲಿ ತನ್ನ ಯೋಗ್ಯತಾನುಸಾರ ಅಂದರೆ ತಾನು ಸಾತ್ವಿಕನೋ, ರಾಜಸನೋ, ತಾಮಸನೋ ಆ ಯೋಗ್ಯತೆಯನ್ನನುಸರಿಸಿ, ಅದೃಷ್ಟೋದ್ಬೋಧಕನಾದ ಪರಮಾತ್ಮನ ಪ್ರೇರಣೆಯಿಂದ ದೇವಾಸುರ ಗಂಧರ್ವ ಮನುಷ್ಯಾದಿ ಯೋನಿಗಳಲ್ಲಿ ಮನಸ್ಸನ್ನು ಮಾಡುವನು. ಮರಣಕಾಲದಲ್ಲಿ ಯಾವ ಯೋನಿಯನ್ನು ಚಿಂತಿಸಿ ದೇಹವನ್ನು ಬಿಡುವನೋ ಮುಂದಿನ ಜನ್ಮದಲ್ಲಿ ಅದೇ ಯೋನಿಯಲ್ಲಿ ಅದೃಷ್ಟೋ

ಬ್ಬೋಧಕ ಶ್ರೀ ಪರಮಾತ್ಮನಿಂದ ಸಮೇತನಾಗಿ ಭೂಮಿಯಲ್ಲಿ ಜನಿಸುವನು. ಆದರೆ ಗರ್ಭಯಾತನಾದಿ ದುಃಖಗಳೆಲ್ಲವೂ ಜೀವನಿಗೆ ಮಾತ್ರವೇ ಹೊರತು ಪರಮಾತ್ಮನಿಗೆ ಸಂಬಂಧವಿಲ್ಲ. ಹೇಗೆಂದರೆ:-ನೀರಿನಲ್ಲಿ ಸೂರ್ಯನ ಪ್ರತಿಬಿಂಬವಿರಲು ಗಾಳಿಯ ಸಂಬಂಧದಿಂದ ನೀರು ಚಲಿಸಿದರೆ ಸೂರ್ಯನ ಪ್ರತಿಬಿಂಬವು ಭಿನ್ನಭಿನ್ನವಾಗಿ ಕಾಣುವುದು, ಆದರೂ ಬಿಂಬರೂಪನಾದ ಸೂರ್ಯನಿಗೆ ನೀರು ಸಂಬಂಧವಿಲ್ಲದಿರುವುದರಿಂದ ಅತನು ನಿಶ್ಚಲನಾಗಿರುವನು. ಹಾಗೆಯೇ ದೇಹ ಸಂಬಂಧದಿಂದ ಪ್ರತಿಬಿಂಬನಾದ ಜೀವನಿಗೆ ಮಾತ್ರ ದುಃಖಾದಿಗಳೇ ಹೊರತು ದೇಹ ಸಂಬಂಧವಿಲ್ಲದ ಪರಮಾತ್ಮನಿಗೆ ದೇಹಗತವಾದ ಯಾವ ವಿಧದ ದುಃಖವೂ ಇಲ್ಲ, ಎಂದು ತಿಳಿಯಬೇಕು. "ಗಾಂಗೇಯನುತ" "ಗಗನಚರವಾಹನ" ಎಂಬೀ ಎರಡು ಪದಗಳು ಪರಮಾತ್ಮನ ಘನ ಮಹಿಮೆಗಳನ್ನು ತೋರ್ಪಡಿಸುವುವು. ಹೇಗೆಂದರೆ:-ಗಂಗಾಪುತ್ರರಾದ ಭೀಷ್ಮಾಚಾರ್ಯರು ಮಾಡಿದ ಸ್ತೋತ್ರವು "ಭೀಷ್ಮಸ್ತವರಾಜ" ಎಂದು ಭಾರತ ಅನುಶಾಸನಪರ್ವದಲ್ಲಿ ಹೇಳಲ್ಪಟ್ಟಿರುವುದು. ಅದರಲ್ಲಿ ವಿಶೇಷವಾದ ಭಗವನ್ಮಹಿಮೆಗಳನ್ನು ತೋರಿಸಿರುವರು. ಭಾರತದಲ್ಲಿ ಪಂಚರತ್ನಗಳೆಂದು (೫ ರತ್ನಗಳು) ಆರಿಸಿ ತೆಗೆದಿರುವರು. ಅವುಗಳು "ಗೀತಾ, ಸಹಸ್ರನಾಮೈವಸ್ತವರಾಜೋಹ್ಯನುಸ್ಮೃತಿಃ । ಗಜೇಂದ್ರಮೋಕ್ಷಣಂ ಚೈವ ಪಂಚರತ್ನಾನಿ ಭಾರತೆ" ೧ ಭಗದದ್ಗೀತೆ. ೨ ವಿಷ್ಣುಸಹಸ್ರನಾಮ. ೩ ಭೀಷ್ಮಸ್ತವರಾಜ. ೪ ಅನುಸ್ಮೃತಿ. ೫ ಗಜೇಂದ್ರಮೋಕ್ಷ; ಇವು ೫ ರತ್ನಗಳೆಂದು ಹೇಳಿರುವರು. ಇದರಲ್ಲಿ ೨ ರತ್ನಗಳು ಭೀಷ್ಮಾಚಾರ್ಯರು ಮಾಡಿದ ಸ್ತೋತ್ರಗಳು, (೧) ಕೃಷ್ಣನನ್ನು ಪ್ರತ್ಯಕ್ಷವಾಗಿ ಸ್ತೋತ್ರ ಮಾಡಿದ್ದು ಭೀಷ್ಮಸ್ತವರಾಜ. (೨) ಅನುಸ್ಮೃತಿಯು-ಭೀಷ್ಮಾಚಾರ್ಯರು ದೇಹತ್ಯಾಗ ಮಾಡುವ ಕಾಲದಲ್ಲಿ, ಅಂತರ್ಯಾಮಿ ಪರಮಾತ್ಮನನ್ನೂ ಶ್ರೀಕೃಷ್ಣನನ್ನೂ ಐಕ್ಯ ಚಿಂತನೆ ಮಾಡಿ ಸ್ಮರಣೆಯಿಂದ ಭಗವನ್ಮಹಿಮೆಯನ್ನು

ಪ್ರಕಟನಪಡಿಸಿದ್ದು, ಅಂತು–೫ ರತ್ನಗಳ ಪೈಕಿ ಸ್ತವರಾಜ, ಅನುಸ್ಮೃತಿ, ಇವೆರಡು ಭೀಷ್ಮಕೃತ ಸ್ತೋತ್ರಗಳು. ಈ ಎರಡು ಸ್ತೋತ್ರಗಳ ಪ್ರತಿಪಾದ್ಯನೂ ಶ್ರೀ ಪರಮಾತ್ಮನೆಂದೇ ಹೇಳಿದಂತಾಯಿತು. ಆ ಸ್ತೋತ್ರಗಳನ್ನು ನೋಡಿದರೆ ಭಗವಂತನ ಘನ ಮಹಿಮೆಯು ಗೊತ್ತಾಗುವುದು. ಗಗನಚರನಾದ ಗರುಡವಾಹನನೆಂದು ಹೇಳಿರುವರು. ಇಂತಹ ಮಹಿಮೆಯು ಮತ್ತಾರಿಗುಂಟು? ಯೋಚಿಸಿರಿ! ಮೊದಲು, ಗರುಡನ ಮಹಿಮೆ ಗೊತ್ತಾದರೆ ಅವನನ್ನು ವಾಹನವನ್ನಾಗಿ ಮಾಡಿಕೊಂಡಿರುವವನ ಮಹಿಮೆಯು ತಾನಾಗಿ ವ್ಯಕ್ತವಾಗುವುದು, ಅಲ್ಲವೆ? ಗರುಡನ ಮಹಾಮಹಿಮೆಯನ್ನು ಶ್ರುತಿಯು ಈ ರೀತಿಯಾಗಿ ಹೇಳುವುದು :—

“ಗರುಡಸ್ಯ ಜಾತಮಾತ್ರೇಣ ತ್ರಯೋಲೋಕಾಃ ಪ್ರಕಂಪಿರೆ । ಪ್ರಕಂಪಿತಾ ಮಹೀಸರ್ವಾಸ ಶೈಲವನಕಾನನಾ ॥ ಗಗನಂನಷ್ಟಾಚಂದ್ರಾರ್ಕಂ ಜ್ಯೋತಿಷನಪ್ರಕಾಶತ । ದೇವತಾಭಯ ಭೀತಾಸ್ತು ಮಾರುತೋನ ಪ್ರಕಂಪತ ॥” ಇದರರ್ಥ :–ಗರುಡನು ಜನಿಸಿದಾಗ ಮೂರು ಲೋಕದ ಜನರು ನಡುಗಿಹೋದರು, ಬೆಟ್ಟಗುಟ್ಟಗಳಿಂದ ಕೂಡಿದ ಭೂಮಿಯು ನಡುಗಿತು, ಆಕಾಶವಲ್ಲಿ ಚಂದ್ರ ಸೂರ್ಯರು ಕಾಂತಿಹೀನರಾದರು, ದೇವತೆಗಳೆಲ್ಲರೂ ಭಯಪಟ್ಟರು, ಗಾಳಿಯು ಚಲಿಸಲಿಲ್ಲ, ಎಂಬೀ ಶ್ರುತಿ ವಾಕ್ಯದಿಂದ ಗರುಡನ ಮಹಿಮೆಯು ಗೊತ್ತಾಗುವುದು. ಮತ್ತೂ ಭಾರತದಲ್ಲಿ ಗರುಡನ ಮಹಿಮೆಯನ್ನು ಬಹಳವಾಗಿ ಹೇಳಿರುವರು. ಅದನ್ನು ವಿಸ್ತಾರ ಮಾಡಲು ಸಾಧ್ಯವಿಲ್ಲವಾದರೂ ಸ್ವಲ್ಪ ಸೂಚಿಸುತ್ತೇವೆ. ತಾಯಿಯಾದ ವಿನತಾದೇವಿಯ ದಾಸ್ಯತ್ವವನ್ನು ಬಿಡಿಸುವುದಕ್ಕಾಗಿ, ಹುಟ್ಟಿದ ಕೂಡಲೆ ಅಮೃತವನ್ನು ತರಲು ಹೊರಟನು- ಆ ಸಮಯದಲ್ಲಿ ಅವನಿಗೆ ಆಹಾರ ದೊರಿಯದೆ ತಾಯಿಯನ್ನು ಕೇಳಲು ಆಕೆಯು ಸಮುದ್ರದ ಕುಕ್ಷಿಯ ಏಕಾಂತ ಪ್ರದೇಶದಲ್ಲಿ ಮಹಾ ಪಾಪಿಗಳಾದ ಲೋಕ ಕಂಟಕರಾದ ಅನೇಕ ಸಹಸ್ರ ನಿಷದರು ಮನೆ

ಯನ್ನು ಕಟ್ಟಿಕೊಂಡು ವಾಸವಾಗಿರುವರು. ಅವರೆಲ್ಲರನ್ನೂ ಭಕ್ಷಿಸಿ ಅಮೃತ ತರುವುದಕ್ಕೆ ಹೊರಡೆಂದಳು. ಗರುಡನು ಹಾಗೆಯೇ ಮಾಡಿದನು. ಆದರೂ ಅವನಿಗೆ ಸ್ವಲ್ಪವೂ ಹೊಟ್ಟೆ ತುಂಬಲಿಲ್ಲ. ಆಗ ಚಿಂತಾಕ್ರಾಂತನಾಗಿ ಬರುತ್ತಿರಲು ಎದುರಿಗೆ ತನ್ನ ತಂದೆಯಾದ ಕಶ್ಯಪರನ್ನು ಕಂಡು, "ನನಗೆ ತಾಯಿಯು ಆಹಾರವನ್ನು ಕಲ್ಪಿಸಿದರೂ ಅದು ಸಾಕಾಗಲಿಲ್ಲ. ಮತ್ತೆಲ್ಲಾದರೂ ಆಹಾರವನ್ನು ತೋರಿಸಬೇಕೆಂದು" ಬೇಡಿಕೊಂಡನು. ಆಗ ಕಶ್ಯಪರು ಅಲ್ಲಿದ್ದ ಸರೋವರವನ್ನು ತೋರಿಸಿ, ಇದರಲ್ಲಿ ಒಂದು ಆನೆಯೂ, ಒಂದು ಆಮೆಯೂ ಇರುವುವು. ಇವೆರಡೂ ಪೂರ್ವ ಜನ್ಮದಲ್ಲಿ ಅಣ್ಣ ತಮ್ಮಂದಿರಾಗಿದ್ದು ವಿಭಾಗದ ವಿಷಯವಾಗಿ ಇಬ್ಬರೂ ವಿವಾದ ಮಾಡಿ ಪರಸ್ಪರ ಶಾಪಗಳನ್ನು ಕೊಟ್ಟುಕೊಂಡು, ಆನೆ ಆಮೆಗಳಾಗಿ ಹುಟ್ಟಿರುವರು. ಆನೆಯು ೬ ಗಾವುದ ಎತ್ತರವೂ, ೧೨ ಗಾವುದ ಅಗಲವೂ ಇರುವುದು. ಆಮೆಯು ೩ ಗಾವುದ ಎತ್ತರವೂ, ೧೦ ಗಾವುದ ಸುತ್ತಳತೆಯೂ ಇರುವುದು. ಪೂರ್ವ ಜನ್ಮದ ವೈರದಿಂದ ಈಗಲೂ ಇವರು ವೈರಿಗಳಾಗಿಯೇ ಜಗಳವಾಡುತ್ತಾ ಇರುವರು. ಅವರಡನ್ನು ಭಕ್ಷಿಸಿ ನಿನ್ನ ಕೆಲಸಕ್ಕೆ ಹೋಗೆಂದು ಹೇಳಿ ಕಶ್ಯಪರು ಹೊರಟುಹೋದರು. ಗರುಡನು ಅವೆರಡು ಪ್ರಾಣಿಗಳನ್ನು ತನ್ನ ಕಾಲುಗಳಲ್ಲಿ ಹಿಡಿದುಕೊಂಡು ಎಲ್ಲಿ ಕೂತುಕೊಂಡು ತಿನ್ನಬೇಕೆಂದು ಯೋಚಿಸುತ್ತಾ ವೃಕ್ಷಗಳನ್ನೆಲ್ಲಾ ನೋಡುತ್ತಾ ಬರುವಾಗ ಅವುಗಳೆಲ್ಲಾ ನಡುಗುತ್ತಿದ್ದವು. ಆಗ ಅಲ್ಲಿ ದೊಡ್ಡದಾದ ಒಂದು ವಟ ವೃಕ್ಷವಿದ್ದಿತು. ಆ ವೃಕ್ಷವು ಗರುಡನನ್ನು ನೋಡಿ, "ಗರುಡಾ ಯೋಚಿಸಬೇಡ. ನನ್ನ ಟೊಂಗೆಗಳು ಒಂದೊಂದು ಒಂದು ನೂರು ಗಾವುದಕ್ಕಿಂತಲೂ ಹೆಚ್ಚಿಗೆ ಹಬ್ಬಿವೆ. ಒಂದು ಟೊಂಗೆಯ ಮೇಲೆ ಕೂತು ಗಜಕೂರ್ಮಗಳನ್ನು ಭಕ್ಷಿಸಬಹುದು" ಎಂದಿತು. ಗರುಡನು ಸಂತೋಷದಿಂದ ೧೦೦ ಗಾವುದ ಉದ್ದವಾಗಿರುವ ಒಂದು ಟೊಂಗೆಯ ಮೇಲೆ ಕೂಡಲು ಉದ್ದೇಶಿಸಿ ತನ್ನ ಕಾಲನ್ನು ಆ ಟೊಂಗೆಗೆ

ತಗುಲಿಸಿದ ಕೂಡಲೆ ಚಟ ಚಟ ಶಬ್ದದಿಂದ ಆ ಟೊಂಗೆಯು ಮುರಿದು ಕೆಳಗೆ ಬೀಳುವ ಹಾಗಾಯಿತು. ಆಗ ಅದರಲ್ಲಿ ತಪಸ್ಸು ಮಾಡುತ್ತಾ ಜೋಲಾಡುತ್ತಿದ್ದ ಸಹಸ್ರಾರು ಮಂದಿ ಋಷಿಗಳನ್ನು ಗರುಡನು ನೋಡಿದನು. ಟೊಂಗೆಯು ಕೆಳಗೆ ಬಿದ್ದರೆ ಇಷ್ಟು ಮಂದಿ ಋಷಿಗಳೂ ಪ್ರಾಣಾಪಾಯವಾಗುವುದೆಂಬ ಭಯದಿಂದ ಶತಯೋಜನ ವಿಸ್ತೀರ್ಣವಾದ ಆ ಶಾಖೆಯನ್ನು ಮೂಗಿನಿಂದ ಕಚ್ಚಿಕೊಂಡು ಹಾರಿಬಿಟ್ಟನು. ಹಾಗೆ ಅನೇಕ ಸಹಸ್ರ ಗಾವುದಗಳು ಹಾರುತ್ತಲೇ ಇದ್ದನು. ಕಶ್ಯಪರು ತಮ್ಮ ಮಗನ ಸಾಹಸಕ್ಕೆ ಆಶ್ಚರ್ಯಪಟ್ಟು ಆ ಟೊಂಗೆಯಲ್ಲಿ ಜೋಲಾಡುತ್ತಿದ್ದ ಋಷಿಗಳನ್ನು ಪ್ರಾರ್ಥಿಸಿ ಅವರು ಆ ಸ್ಥಳವನ್ನು ಬಿಟ್ಟು ಹೋಗುವಂತೆ ಮಾಡಿ ಆ ಟೊಂಗೆಯನ್ನು ಬೆಟ್ಟದಮೇಲೆ ಹಾಕೆಂದರು. ಗರುಡನು ಅದನ್ನು ದೊಡ್ಡದಾದ ಪರ್ವತದ ಮೇಲೆ ಹಾಕಲು ಆ ಪರ್ವತವು ೧೦೦ ಹೋಳಾಯಿತು. ಅಲ್ಲಿ ಕೂತು ಗಜ ಕೂರ್ಮಗಳನ್ನು ಭಕ್ಷಿಸಿ ಅಮೃತವನ್ನು ತರುವುದಕ್ಕೆ ಹೋದನೆಂದು ಹೇಳಿರುವರು. ಇದರಿಂದ ಗರುಡನ ಮಹಿಮೆಯು ಎಂಥಾದ್ದೆಂದು ಗೊತ್ತಾಗುವುದು. ಇಂತಹ ಗರುಡನನ್ನು ವಾಹನವನ್ನಾಗಿ ಮಾಡಿಕೊಳ್ಳಬೇಕಾದರೆ ಸಾಮಾನ್ಯರಿಗೆ ಆದೀತೆ? ಹೀಗಿರಲು "ಗಾಂಗೇಯನುತ" "ಗಗನಚರವಾಹನ" ಇವೆರಡು ಪದಗಳಿಂದ ಪರಮಾತ್ಮನು ಘನಮಹಿಮನೆಂದು ಸ್ಪಷ್ಟ ಮಾಡಿದಂತಾಯಿತು. ಇಂತಹ ಮಹಿಮೆಯುಳ್ಳವನಾದರೂ "ಗಾಯನವ ಕೇಳುತ, ದಿವೌಕಸರೊಡನೆ ಮನೆಮನೆಗಳಲಿ ತಿರುಗುವನು" ಎಂದು ಹೇಳಿರುವರು. ಭಗವಂತನು ಸರ್ವಜ್ಞನಾದರೂ ಭಕ್ತರು ಮಾಡುವ ಗಾನವನ್ನು ಕೇಳುತ್ತಾ ದೇವತೆಗಳಿಂದೊಡಗೂಡಿ ಭಕ್ತರನ್ನು ಹಿಂಬಾಲಿಸಿ ಮನೆಮನೆಗಳಲ್ಲೂ ತಿರುಗುತ್ತಾ ಆಪತ್ತು ಬಂದಾಗ ಅವರನ್ನು ರಕ್ಷಿಸುತ್ತಾ ಇರುವನು. ಈ ವಾಕ್ಯದಿಂದ ಪರಮಾತ್ಮನಿಗೆ ಭಕ್ತರಲ್ಲಿ ಇರುವ ವಾತ್ಸಲ್ಯವನ್ನು ಪ್ರದರ್ಶನ ಮಾಡಿದಂತಾಯಿತು. ಇಂತಹ ಆಧಾರದಿಂದಲೇ ದಾಸರಾಯ

ರು " ಇವನ ಕಾರುಣ್ಯಕೇನೆಂಬೆ " ಎಂದು ಹೇಳಿರುವರು. ಮನೆ ಮನೆಗಳಲ್ಲಿ ತಿರುಗುವನೆಂಬ ವಿಷಯದಲ್ಲಿ ಗೋಪಿಕಾ ಸ್ತ್ರೀಯರಿಗಿಂತಲೂ ಉದಾಹರಣೆ ಮತ್ತಾವುದೂ ಬೇಕಾಗಿಲ್ಲ. ಗೋಪಾಲ ವೇಷಧಾರಿಗಳಾದ ದೇವಕಿಗಳೊಡನೆ (ಗೋಪಿಕಾ ಸ್ತ್ರೀಯರ) ಮನೆಗಳಲ್ಲಿ ತಿರುಗುತ್ತಾ, ಅವರು ಪಾಡುತ್ತಿರುವುದನ್ನು ಕೇಳುತ್ತಾ, ಮೊಸರು ಗಡಿಗೆಗಳನ್ನು ಒಡೆಯುವುದು, ಹಾಲು ಬೆಣ್ಣೆಗಳನ್ನು ಕದ್ದು ಮೆಲ್ಲುವುದು, ಮೊದಲಾದ ಬಾಲ ಚೇಷ್ಟೆಗಳಿಂದ ಅವರನ್ನು ಸಂತೋಷಪಡಿಸುತ್ತಾ, ಅವರಿಗೆ ಬಂದ ಆಪತ್ತುಗಳನ್ನು ಪರಿಹರಿಸುತ್ತಾ, ಅವರಿಗೆ ಅಂಗ ಸಂಗವನ್ನಿತ್ತು ಉದ್ಧರಿಸಿದ ಉದಾಹರಣೆಯೇ ಇದಕ್ಕೆ ಸಾಕ್ಷಿಯಾಗಿರುವುದು. ಮತ್ತೂ ಭಕ್ತವಶ್ಯನಾದ ಸ್ವಾಮಿಯು ತನ್ನನ್ನು ತಾಯಿಯಾದ ಯಶೋದೆಯು ಹಗ್ಗದಿಂದ ಕಟ್ಟುವುದಕ್ಕೆ ಬಂದಾಗ ಮೊದಲು ಎಷ್ಟು ಹಗ್ಗಗಳನ್ನು ತಂದು ಕಟ್ಟಿದರೂ ಎರಡು ಅಂಗುಲದಷ್ಟು ಹಗ್ಗವು ಸಾಲದೆ ಹೋದುದನ್ನೂ, ತಿರಿಗೂ ಕಟ್ಟುವಾಗ ಮೊದಲು ಕಟ್ಟಲಿಕ್ಕೆ ತಂದ ಕರುವನ್ನು ಕಟ್ಟುವ ಹಗ್ಗವೇ ಮಿಕ್ಕುಹೋದುದನ್ನೂ, ಇವೇ ಮೊದಲಾದ ಆಶ್ಚರ್ಯಗಳನ್ನು ಕಂಡು ಆಕೆಗೆ ಆದ ಆನಂದವು ರಮಾ ಬ್ರಹ್ಮಾದಿಗಳಿಗೆ ಕೂಡ ಇಲ್ಲವೆಂದು ಊಹಿಸಬೇಕಾಗುವುದು. ಈ ಅರ್ಥವನ್ನು ಭಾಗವತದ " ನೇಮಂ ವಿರಿಂಚಿರ್ನಭವೋ ನ ಶ್ರೀರಪ್ಯಂಗ ಸಂಶ್ರಯಾ। ಪ್ರಸಾದಂ ಲೇಭಿರೇಗೋಹ್ಯೋ ಯತ್ತಾಪ ವಿಮುಕ್ತಿದಾತ್ " ॥ ಎಂಬ ಶ್ಲೋಕದಲ್ಲಿ ಹೇಳಿರುವರು. ಇದರ ಮುಖ್ಯಾಂಶವೇನು? ಏಕಾಂತ ಭಕ್ತರೂ ಹೆಂಡತಿ ಮಕ್ಕಳೂ ಆದ ರಮಾ ಬ್ರಹ್ಮಾದಿಗಳಲ್ಲಿ, ಪರಮಾತ್ಮನ ಸಂಪೂರ್ಣಾನುಗ್ರಹವಿರುವುದು ಆಶ್ಚರ್ಯಕರವಲ್ಲ. ಸಾಮಾನ್ಯರಿಂದ ಭಕ್ತರಲ್ಲಿ ಸ್ವಲ್ಪ ಅನುಗ್ರಹವಿದ್ದರೂ ಅವರ ಯೋಗ್ಯತೆಗೆ ಅದು ಅತಿಶಯವಾಗಿಯೇ ಕಾಣುವುದು. ರಮಾ ಬ್ರಹ್ಮಾದಿಗಳಲ್ಲಿ ಇರುವ ಅನುಗ್ರಹದಲ್ಲಿ ಕೋಟಿ ಅಂಶಗಳಲ್ಲಿ ಒಂದು ಅಂಶವೂ ಕೂಡ ಇವರಲ್ಲಿ ಇರುವುದಿಲ್ಲ. ಆದರೂ,

ಅವರಲ್ಲಿ ಇಟ್ಟಿರುವ ಪ್ರೀತಿಯನ್ನು ನೋಡಿ ಇವನು ಕರುಣಾಳು ಎಂದು ಯಾರೂ ಹೇಳುವಹಾಗಿಲ್ಲ. ಸಾಮಾನ್ಯ ಜನರ ಕಷ್ಟವನ್ನು ಪರಿಹರಿಸುವಾಗ ಪರಮಾತ್ಮನು ತೋರಿಸುವ ಅನುಗ್ರಹವೇ ಇವನ ಅತಿಶಯವಾದ ಕಾರುಣ್ಯವನ್ನು ಪ್ರದರ್ಶನ ಮಾಡುವುದು.

ಈ ಶ್ಲೋಕದಲ್ಲಿ ಕೆಲವು ವ್ಯಾಖ್ಯಾನ ಕರ್ತರು ಮನೆ ಮನೆಗಳಲ್ಲಿ ತಿರುಗುವನು, ಎಂಬ ಪದಗಳಿಗೆ "ಇಂದ್ರಿಯಾದಿಗಳೆಂಬ ಮನೆಗಳಲ್ಲಿ ಬಿಂಬರೂಪದಿಂದ ತಿರುಗುವನು" ಎಂದು ವ್ಯಾಖ್ಯಾನ ಮಾಡಿರುವರು. ಆದರೆ ದಾಸರಾಯರ ಅಭಿಪ್ರಾಯವು ಹಾಗೆ ಇದ್ದುದಾಗಿ ಕಾಣುವುದಿಲ್ಲ, ಏಕೆಂದರೆ "ಗಾಯನವ ಕೇಳುತ" ಎಂಬ ಪದವು ಭಕ್ತಿಯಿಂದ ಗಾನ ಮಾಡುವವರನ್ನು ಸೂಚಿಸುವುದು. ಬಿಂಬ ರೂಪಿಯಾದ ಪರಮಾತ್ಮನು ಇಂದ್ರಿಯಾದಿಗಳಲ್ಲಿ ತಿರುಗಾಡುವನು ಎಂದು ಹೇಳಿದರೆ, ಪಶು, ಪಕ್ಷಿಗಳಲ್ಲೂ, ತಮೋಯೋಗ್ಯ ಜೀವರಾಶಿಗಳಲ್ಲೂ ಅಂತರ್ಯಾಮಿಯಾಗಿ ಇದ್ದೇ ಇರುವನು. ಆದುದರಿಂದ ಈ ಅರ್ಥವು ಕಾರುಣ್ಯವನ್ನು ತೋರಿಸುವುದಿಲ್ಲ.

ಅವತಾರಿಕೆ.—ಈ ಪದ್ಯವು ಪರಮಾತ್ಮನ ಭಜನೆಯ ಸೌಲಭ್ಯವನ್ನು ತೋರಿಸುತ್ತದೆ:—

**ಮಲಗಿ ಪರಮಾದರದಿ ಪಾಡಲು**
**ಕುಳಿತು ಕೇಳುವ ಕುಳಿತು ಪಾಡಲು**
**ನಿಲುವನಿಂತರೆ ನಿಲಿವನಲಿದರೆ ವಲಿವೆ ನಿಮಗೆಂಬಾ ||**
**ಸುಲಭನೋ ಹರಿ ತನ್ನವರ ನರ**
**ಘಳಿಗೆ ಬಿಟ್ಟಗಲನು ರಮಾಧವ**
**ನೊಲಿಸಲರಿಯದೆ ಪಾಮರರು ಬಳಲುವರು ಭವದೊಳಗೆ ||೫||**

ಪದ್ಯಾರ್ಥ.—ಮಲಗಿ=ನಾವು ಮಲಗಿದ ಹಾಗೆಯೇ, ಪರಮಾದರದಿ=ಪರಮ ಭಕ್ತಿಯಿಂದುಂಟಾದ ಆದರದಿಂದ, ಪಾಡಲು=ಭಗವನ್ಮಹಿಮೆಗ

ಳನ್ನು ಗಾನ ರೂಪವಾಗಿ ಪಾಡಲು, **ಕುಳಿತುಕೇಳುವ** = ಶ್ರೀ ಪರಮಾತ್ಮನು **ಕೂತುಕೊಂಡು ಕೇಳುವನು, ಕುಳಿತು ಪಾಡಲು**=ಕೂತುಕೊಂಡು ಗಾನಮಾಡಿದರೆ, **ನಿಲ್ಲುವ**=ಶ್ರೀಹರಿಯು ನಿಂತುಕೊಂಡು ಕೇಳುವನು, **ನಿಂತರೆ**=ನಾವು ನಿಂತು ಗಾನ ಮಾಡಿದರೆ, **ನಲಿವ**=ನರ್ತನ ಮಾಡುತ್ತಾ ಕೇಳುವನು, **ನಲಿದರೆ**=ನಾವು ನರ್ತನ ಮಾಡುತ್ತಾ ಗಾನ ಮಾಡಿದರೆ, **ವಲಿವೆನಿಮಗೆಂಬ**= ನಾನು ನಿಮಗೆ ಪ್ರಸನ್ನನಾಗುವೆನು ಎಂದು, ಕೆಲವರಿಗೆ ಅಪರೋಕ್ಷದಲ್ಲೂ, ಕೆಲವರಿಗೆ ಪ್ರತ್ಯಕ್ಷದಲ್ಲೂ, ಅಂತು ಅವರವರ ಯೋಗ್ಯತಾನುಸಾರವಾಗಿ ಗೋಚರನಾಗುವನು. (ಆದುದರಿಂದ) **ಸುಲಭನೋ ಹರಿ**=ಎಲೈ ಭಕ್ತರುಗಳಿರಾ, ಶ್ರೀ ಹರಿಯು ಬಹು ಸುಲಭನೆಂದು, ಕೈಗಳನ್ನು ಮೇಲಕ್ಕೆತ್ತಿ ಉದ್ಘೋಷಿಸುತ್ತಾ ಹೇಳುವರು, **ತನ್ನವರನ**=ತನ್ನ ಭಕ್ತರನ್ನು, **ಅರಘಳಿಗೆ**= ಅರ್ಧ ಗಳಿಗೆ ಕಾಲವಾದರೂ, **ಬಿಟ್ಟಗಲನು**=ಬಿಟ್ಟು ಕದಲನು, **ಪಾಮರರು**=ಮೂಢರು, **ರಮಾಧವನ**=ಲಕ್ಷ್ಮೀ ಪತಿಯನ್ನು, **ಒಲಿಸಲರಿಯದೆ**=ಪ್ರಸನ್ನೀಕರಿಸುವ ಉಪಾಯವನ್ನರಿಯದೆ, **ಭವದೊಳಗೆ**=ಸಂಸಾರದಲ್ಲಿ, **ಬಳಲುವರು**=ಕಷ್ಟಪಡುವರು.

**ತಾತ್ಪರ್ಯ.—ನಾವು ಮಲಗಿದ ಹಾಗೆಯೇ ಭಕ್ತಿಯಿಂದ ಆದರ ಪೂರ್ವಕವಾಗಿ ಪರಮಾತ್ಮನನ್ನು ಪೊಗಳಿ ಪಾಡಿದರೆ, ಪರಮಾತ್ಮನಿಗೆ** ನಮ್ಮಲ್ಲಿ ಇರುವ ಪ್ರೀತಿಯಿಂದ ಕೂತು ಕೇಳುವನು. ಅದರಂತೆಯೇ ನಾವು ಕೂತು ಪಾಡಿದರೆ ಅವನು ನಿಂತು ಕೇಳುವನು. ನಾವು ನಿಂತು ಪಾಡಿದರೆ ಪರಮಾತ್ಮನು ನರ್ತನ ಮಾಡುತ್ತಾ ಕೇಳುವನು. ನಾವು ನರ್ತನ ಮಾಡುತ್ತಾ ಪಾಡಿದರೆ ಆತನು ಪ್ರತ್ಯಕ್ಷನಾಗುವನು. ಈ ರೀತಿಯಾಗಿ ಅವರವರ ಯೋಗ್ಯತಾನುಸಾರವಾಗಿ ತನ್ನ ಭಕ್ತರಿಗೆ ಅಪರೋಕ್ಷದಲ್ಲಿ ಕಾಣಿಸಿಕೊಳ್ಳುವನು. ಕೆಲವರು ಅವತಾರ ರೂಪಗಳನ್ನೇ ಪ್ರತ್ಯಕ್ಷವಾಗಿ ನೋಡುವರು. ಹೀಗಿರು

ವುದರಿಂದ, "ಎಲೈ ಭಕ್ತರುಗಳಿರಾ! ಪರಮಾತ್ಮನು ಪರಮ ಸುಲಭನೆಂದು ಕೈಯ್ಯನ್ನು ಮೇಲಕ್ಕೆತ್ತಿ ಉದ್ಘೋಷಿಸುವೆನು" (ಇದೆಲ್ಲಿಯ ಕಲ್ಪನವೆಂದರೆ "ಸುಲಭನೋ! ಹರಿ" ಎಂಬ ವಾಕ್ಯವು ಶಪಥವನ್ನೂ, ಉಚ್ಚಧ್ವನಿಯನ್ನೂ, ಸೂಚಿಸುವುದು. ಇಲ್ಲದಿದ್ದರೆ "ಸುಲಭನು" ಎಂದಿಷ್ಟೇ ಸಾಕಾಗಿತ್ತು) ಇಷ್ಟು ಸುಲಭನಾಗಿದ್ದರೂ ಇನ್ನೂ ಸಂಸಾರದಲ್ಲಿ ಜನರು ಬಳಲುವುದೇಕೆಂದರೆ :—ಪರಮಾತ್ಮನನ್ನು ಪ್ರಸನ್ನೀಕರಿಸಿಕೊಳ್ಳುವ ಉಪಾಯವನ್ನರಿಯದೆ ಮೂಢರು ಸಂಸಾರದಲ್ಲಿ ಮುಳುಗಿರುವುದರಿಂದ.

ವಿಶೇಷಾರ್ಥ.—ಶ್ರೀ ಪರಮಾತ್ಮನನ್ನು ಭಜಿಸಬೇಕಾದರೆ—ದೇಶ, ಕಾಲ, ಮೊದಲಾದುವು ಕಾರಣವಲ್ಲ. ಯಾವ ದೇಶ ಕಾಲಗಳಲ್ಲಾದರೂ ಯಾವ ಅವಸ್ಥೆಯಲ್ಲಿದ್ದರೂ ಸರ್ವದಾ ಪರಮಾತ್ಮನನ್ನು ಭಜಿಸಬಹುದು ಎಂಬುದಕ್ಕೆ "ಮಲಗಿ ಪರಮಾದರದಿ" ಎಂಬೀ ಪದ್ಯದಿಂದ ಹೇಳಿರುವರು. ಸಪ್ತಮಸ್ಕಂಧ ಭಾಗವತದಲ್ಲಿ ಪ್ರಹ್ಲಾದನ ಗುಣ ವರ್ಣನ ಪ್ರಕರಣದಲ್ಲಿ ಅವನು ಯಾವ ಸ್ಥಿತಿಯಲ್ಲಿದ್ದಾನೆಂಬುದನ್ನು "ಆಸೀನಃ ಪರ್ಯಟನ್ನಶ್ನನ್ ಶಯಾನಃ ಪ್ರಪಿಬನ್ಬ್ರುವನ್ | ನಾನು ಸಂಧದ ಏತಾನಿಗೋವಿಂದ ಪರಿರಂಭಿತಃ" ಕೂತಿರುವಾಗಲೂ, ತಿರುಗಾಡುವಾಗಲೂ, ಭೋಜನ ಮಾಡುವಾಗಲೂ, ಮಲಗಿರುವಾಗಲೂ, ಪಾನ ಮಾಡುವಾಗಲೂ ಸಹ ಪರಮಾತ್ಮನಲ್ಲಿ ಲೀನವಾದ ಮನಸ್ಸಿನಿಂದ ಆತನನ್ನೇ ಧ್ಯಾನಿಸುತ್ತಿರುವಲ್ಲಿ ತಾನು ಯಾವ ಸ್ಥಿತಿಯಲ್ಲಿದ್ದನೆಂಬುವದೇ ಅವನಿಗ ಗೊತ್ತಿರಲಿಲ್ಲ, ಎಂದು ಹೇಳಿರುವರು. ಹೀಗೆ ಏಕಾಂತ ಭಕ್ತರು ಪರಮಾತ್ಮನನ್ನು ಭಜಿಸುವುದಕ್ಕೆ ಕಾಲ, ದೇಶ, ಅವಸ್ಥೆ ಮೊದಲಾದವು ಕಾರಣವಲ್ಲವೆಂಬ ಅಭಿಪ್ರಾಯವನ್ನೇ ಈ ಪದ್ಯದಲ್ಲಿ ದಾಸರಾಯರು ಹೇಳಿರುವರು. ಇದಲ್ಲದೆ ಈ ಪದ್ಯದಲ್ಲಿ ಮಲಗಿ ಪಾಡುವುದಕ್ಕೂ, ಕೂತು ಪಾಡುವುದಕ್ಕೂ, ನಿಂತು ಪಾಡುವುದಕ್ಕೂ, ನಲಿದು ಪಾಡುವುದಕ್ಕೂ ತಾರ

ತಮ್ಯವನ್ನು ಹೇಳಿರುವರು. ಇದಕ್ಕೆ ಆಧಾರವಾಗಿ ಬೃಹನ್ನಾರದೀಯ ಪುರಾಣದಲ್ಲಿ " ಯಃ ಸ್ವಪಿತಾತು ಶಯನೇಹರಿಂಚಿಂತಯತೇ ವರಃ || ಸಹರಿಃ ಕೀರ್ತನಂತಸ್ಯ ಸಂತಿಷ್ಟನ್ ಶೃಣುತೇಮುದಾ || ಯಸ್ತಿಷ್ಟನ್ ಕೀರ್ತಯೇದ್ದೇವಂ ಭಕ್ತ್ಯಾಯುಕ್ತೋನರೋತ್ತಮಃ | ಸ್ವಯಮುತ್ಥಾಯದೇವೇಶೋ ಭಕ್ತಸ್ಯ ಶೃಣುತೇಸ್ತವಂ | ಯಸ್ಸಮುತ್ಥಾಯ ಮತಿಮಾನ್ ಜಗದಾಧಾರಮೀಶ್ವರಂ | ಕೀರ್ತಯೇದ್ವಿವಿಧೈರ್ಗೀತೈ ಮಹಾಭಕ್ತಿ ಸಮನ್ವಿತಃ || ಸಹರಿಃ ಶೃಣುತೇ ಸ್ತೋತ್ರಂ ನೃತ್ಯಮಾನೋತಿ ಹರ್ಷಿತಃ | ಯಃಪುಮಾನ್ ನೃತ್ಯಮಾನಸ್ಸನ್ ವಿಲಜ್ಜೋಗೀಯತೇಯದಿ | ಸಹರಿಃ ಪರಮಪ್ರೀತೋ ಪ್ರತ್ಯಕ್ಷೋಭವತಿಧೃವಂ " || ಎಂದು ಹೇಳಿರುವರು. ಇದರರ್ಥವನ್ನು ' ಮಲಗಿ ಪರಮಾದರದಿ ' ಎಂಬ ಪದ್ಯದಲ್ಲಿ ಸ್ಪಷ್ಟವಾಗಿ ಹೇಳಿರುವುದರಿಂದ ಇಲ್ಲಿಯೂ ಬರೆದರೆ ಚರ್ವಿತ ಚರ್ವಣವಾಗುವುದು. ಇದರ ಮುಖ್ಯ ಸಾರಾಂಶವೇನೆಂದರೆ:- ಒಬ್ಬನು ದೃಢಾಂಗನಾಗಿದ್ದು ಐಶ್ವರ್ಯಾದಿಗಳಿಂದ ಮದಾಂಧನಾಗಿ ಮನಸ್ಸನ್ನು ಪರಮಾತ್ಮನಲ್ಲಿ ಲೀನ ಮಾಡದೆ ಎಷ್ಟು ಸ್ತೋತ್ರ ಮಾಡಿದರೂ ಅವನಿಗೆ ಭಗವದನುಗ್ರಹವು ಎಂದಿಗೂ ಆಗಲಾರದು. ಭಗವಧ್ಯಾನವನ್ನು ಮಾಡುವಾಗಲೂ ಅಥವಾ ಭಜಿಸುವಾಗಲೂ ಮೈಮರೆತು ತಾನು ಇರುವ ಸ್ಥಿತಿಯು ತನಗೇ ಗೊತ್ತಿಲ್ಲದೆ; ಮಲಗಿಯೋ ಕೂತೋ ಗಾನ ಮಾಡುತ್ತಿದ್ದರೆ ಅವನಲ್ಲಿ ಭಗವದನುಗ್ರಹವಾಗುವುದು. ಪರಮಾತ್ಮನಲ್ಲಿ ಮನಸ್ಸನ್ನ ಸ್ಥಿರವಾಗಿ ನಿಲ್ಲಿಸತಕ್ಕದ್ದೇ ಮುಖ್ಯ, ಒಂದುವೇಳೆ ರೋಗಾದಿಗಳಿಂದಲೋ, ಕಾರಣಾಂತರಗಳಿಂದಲೋ, ಏಳಲು, ಕೂಡಲು ಸಾಧ್ಯವಿಲ್ಲದವರು ಯಾವ ಸ್ಥಿತಿಯಲ್ಲಿದ್ದರೂ ಭಕ್ತಿಯಿಂದ ಭಜಿಸಿದರೆ ಅವರಲ್ಲಿ ಭಗವಂತನು ಅನುಗ್ರಹ ಮಾಡುವನು ಇದಕ್ಕೆ ದೃಷ್ಟಾಂತ ಭೀಷ್ಮಾಚಾರ್ಯರು ಶರತಲ್ಪದಲ್ಲಿ ಮಲಗಿಕೊಂಡು ಸ್ತೋತ್ರ ಮಾಡಲು ಪರಮಾತ್ಮನು ಕೃಷ್ಣ ರೂಪದಿಂದ ಕೂತು ಕೇಳಿದನು. ಪುಂಡರೀಕನು ಕೂತು ಸ್ತುತಿಸಲು—ನಿಂತು ಕೇಳಿದನು. ಪ್ರಹ್ಲಾದನು ನಿಂತು

ಸ್ತುತಿಸಲು ನರಸಿಹ್ಮ ರೂಪದಿಂದ ನಲಿದಾಡುತ್ತಾ ಬಂದು ಕೇಳಿದನು. ನಾರದರು ನರ್ತನ ಮಾಡುತ್ತಿರಲು ಅವರಿಗೆ ಪ್ರತ್ಯಕ್ಷನಾದನು, ಎಂಬ ವಿಷಯುವನ್ನ ಈ ಪದ್ಯಕ್ಕೆ ಉದಾಹರಣೆಯನ್ನಾಗಿ ಕೆಲವು ಮಹನೀಯರು ಹೇಳುವರು ಪ್ರಕೃತ ಭೀಷ್ಮಾಚಾರ್ಯರು ಮೊದಲಾದವರ ಉದಾಹರಣೆಗಳಲ್ಲಿ ಇರುವ ಸಾಧಕ ಬಾಧಕಗಳಾವುವೆಂದರೆ ; ‘ ಮಲಗಿ ಪಾಡಿದರದಿ ’ ಎಂಬ ವಾಕ್ಯದಿಂದಲೂ, ಇದಕ್ಕೆ ಮೂಲ ಭೂತವಾದ ಬೃಹನ್ನಾರದೀಯ ಪುರಾಣದ ಶ್ಲೋಕಗಳಿಂದಲೂ (ತೋರಿ ಬರುವ ಅಂಶಗಳೇನು ?) ಮಲಗಿ ಪಾಡಲು (ಕುಳಿತು ಕೇಳುವ, ಕುಳಿತು ಪಾಡಲು ನಿಲುವ) ಎಂಬೀ ವಾಕ್ಯಗಳಿಂದಲೂ ಪಾಡುವವರ ಕಣ್ಣಿಗೆ ಗೋಚರನಾಗಿ ಕೂತು ಕೇಳುವುದೂ, ನಿಂತು ಕೇಳುವುದೂ ಮಾಡುತ್ತಿದ್ದನೆ ? ಅಥವಾ ಕಣ್ಮರೆಯಲ್ಲಿ ಇದ್ದು ಕೇಳುತ್ತಿದ್ದನೆ, ಎಂದರೆ, ಎದುರಿನಲ್ಲಿ ಕಾಣುತ್ತಿದ್ದನೆಂದು ಹೇಳಿದಂತಾಯಿತೆ ? ‘ ನಲಿದರೆ ವಲಿವೆನಿಮಗೆಂಬ ’ ಎಂಬೀ ವಾಕ್ಯಾರ್ಥವೇನು ? ನರ್ತನ ಮಾಡುತ್ತಾ ಗಾನ ಮಾಡಿದರೆ ಅವನಿಗೆ ಪ್ರತ್ಯಕ್ಷನಾಗುವನೆಂದಲ್ಲವೆ ? ಇದರಲ್ಲಿ ನಿಮಗೆ ಸಂಶಯ ತೋರಿದರೆ, “ ಯಃ ಪುನರ್ನೃತ್ಯಮಾನಸ್ಸನ್ ವಿಲಜ್ಜೋಗಾಯತೇಯದಿ | ಸಹರಿಃ ಪರಮಪ್ರೀತೋ ಪ್ರತ್ಯಕ್ಷೋಭವತಿಧೃವಂ || ಎಂಬೀ ವಾಕ್ಯದಲ್ಲಿ ಯಾವನು ನಾಚಿಕೆಯನ್ನು ಬಿಟ್ಟು ನರ್ತನ ಮಾಡುತ್ತಾ ಗಾನ ಮಾಡುವನೋ ಅವನಿಗೆ ಪರಮ ಪ್ರೀತನಾಗಿ ನಿಶ್ಚಯವಾಗಿ ಪ್ರತ್ಯಕ್ಷನಾಗುವನು ಎಂದು ಹೇಳಿರುವರು. ಇದರಿಂದ ತಿಳಿದುಬಂದದ್ದೇನು ? ಮಲಗಿರುವವನಿಗೂ, ಕೂತವನಿಗೂ, ಪರಮಾತ್ಮನು ಕೂತು, ನಿಂತು ಪ್ರತ್ಯಕ್ಷನಾದನು ಎಂಬುದು, ಆದರೆ ‘ ನಲಿದರೆ ವಲಿವೆ ’ ಎಂಬ ವಾಕ್ಯವು ವೃಥಾ ಆಗುವುದು. ಮೇಲೂ ಭೀಷ್ಮಾಚಾರ್ಯರು, ಪುಂಡರೀಕ, ಪ್ರಹ್ಲಾದ, ನಾರದ ಮೊದಲಾದ ಎಲ್ಲರಿಗೂ ಕೃಷ್ಣ, ವಿಠ್ಠಲ, ನರಸಿಂಹಾದಿ ರೂಪಗಳಿಂದ ಪ್ರತ್ಯಕ್ಷವಾಗಿ ಗೋಚರನಾಗಿರುವನು. ಹಾಗಾದಮೇಲೆ ಈ ತಾರತಮ್ಯದಿಂದ ನಮಗೆ ತೋರಿ ಬರುವ

ಉದ್ದೇಶವೇನು ? ಅಂದರೆ ಭೀಷ್ಮಾಚಾರ್ಯರು ಶರತಲ್ಪದಲ್ಲಿ ಶಯನ ಮಾಡಿ ಏಳಲು ಕೂಡಲು ಸಾಧ್ಯವಿಲ್ಲದೆ ಮಲಗಿರುವಾಗಲೇ ಅವರಿಗೆ ದರ್ಶನವನ್ನಿತ್ತನು. ಪುಂಡರೀಕನು ಮಾತಾ ಪಿತೃ ಸೇವಾನಿರತನಾಗಿದ್ದು ಏಳಲು ಸಾಧ್ಯವಿಲ್ಲದ ಕಾಲದಲ್ಲಿ ಪರಮಾತ್ಮನನ್ನು, ಧ್ಯಾನ ಮಾಡಲು ಅವನಿಗೆ ಹಾಗೆಯೇ ವಿಠ್ಠಲ ರೂಪದಿಂದ ಪ್ರತ್ಯಕ್ಷನಾದನು. ಪ್ರಹ್ಲಾದನಿಗೆ ನಿಂತು ಪಾಡಲನುಕೂಲವಿದ್ದುದರಿಂದ ಅವನಿಗೆ ನಾರಸಿಂಹ ರೂಪದಿಂದ ಪ್ರತ್ಯಕ್ಷನಾದನು. ನಾರದರು ನರ್ತನವನ್ನೇ ಮಾಡುತ್ತಿರುವುದರಿಂದ ಅವರು ಯಾವ ಯಾವ ರೂಪಿಯಾದ ಪರಮಾತ್ಮನನ್ನು ನೋಡಬೇಕೆಂದಿಚ್ಛೈಸಿದರೂ ಆ ರೂಪದಿಂದಲೆ ಅವರಿಗೆ ಗೋಚರವಾಗುತ್ತಿದ್ದನು. ಹೀಗೆ ಇವರೆಲ್ಲರಿಗೂ ಪ್ರತ್ಯಕ್ಷನೇ ಆಗಿರುವುದರಿಂದ ಈ ಪದ್ಯವು ಇವರಿಗೆ ಮಾತ್ರವೇ ಸಂಬಂಧಿಸುವುದಿಲ್ಲವೆಂದು ನಮಗೆ ತೋರುವುದು. ಹಾಗಾದರೆ ಇದು ಯಾರ ವಿಷಯ ? ಅಂದರೆ, ಅಪರೋಕ್ಷಾ ಕಾಂಕ್ಷಿಗಳಾದ ಭಗವದ್ಭಕ್ತರು ಅಪರೋಕ್ಷ ಹೊಂದುವುದಕ್ಕೆ ಪೂರ್ವದಲ್ಲಿ ಪರಮ ಭಕ್ತಿಯಿಂದ ಆದರ ಪೂರ್ವಕವಾಗಿ ಮಲಗಿರುವಾಗಲೂ, ಕೂತಿರುವಾಗಲೂ, ನಿಂತಿರುವಾಗಲೂ ಎಡಬಿಡದೆ ಭಗವನ್ಮಹಿಮೆಗಳನ್ನು ಗಾನ ಮಾಡುತ್ತಿದ್ದರೆ ಅವರ ಕಣ್ಣಿಗೆ ಗೋಚರನಾಗದೆ ಶ್ರೀ ಪರಮಾತ್ಮನು ಮಲಗಿ ಪಾಡುವಾಗ ಕೂತು ಕೇಳುತ್ತಲೂ, ಕೂತು ಪಾಡುವಾಗ ನಿಲ್ಲುತ್ತಲೂ, ನಿಂತು ಪಾಡುವಾಗ ನಲಿಯುತ್ತಲೂ ಇದ್ದು ಕಡೆಗೆ ಮಿತಿಮೀರಿದ ಭಕ್ತಿಯಿಂದ ಮೈಮರೆತು ಕುಣಿಯುತ್ತಿದ್ದರೆ ಆಗ ಅವರಿಗೆ ಅಪರೋಕ್ಷದಲ್ಲೂ, ಪ್ರತ್ಯಕ್ಷದಲ್ಲೂ ಗೋಚರನಾಗುವನು. ಹೀಗೆ ಪುರಂದರದಾಸರು, ವಿಜಯದಾಸರು, ಜಗನ್ನಾಥದಾಸರು, ನಾಮದೇವ, ಜ್ಞಾನದೇವ ಮೊದಲಾದ ಒಬ್ಬೊಬ್ಬರ ಚರಿತ್ರೆಯಿಂದ ಆ ಒಬ್ಬೊಬ್ಬರಿಗೆ ಒಂದೊಂದು ಅವಸ್ಥೆಯಲ್ಲಿ ಪ್ರತ್ಯಕ್ಷನಾದನೆಂದು ಗೊತ್ತಾಗುವುದು. 'ಮಲಗಿ ಪರಮಾದರದಿ' ಇತ್ಯಾದಿ ಪದಗಳಿಗೆ ಕೆಲವು ವ್ಯಾಖ್ಯಾನಗಳು ಅಸಂಪ್ರಜ್ಞಾತ ಸಮಾಧಿ ವಿಷಯವೆಂದು

ಸೂಚಿಸುವುವು. ದಾಸರಾಯರಿಗೆ ಅದೇ ಹೃದ್ಯವಾಗಿದ್ದರೆ 'ಸುಲಭನೊ ಹರಿ' ಎಂಬ ವಾಕ್ಯವು ಅನ್ಯಥಾ ಆಗುವುದು ಅದರಂತೆಯೇ 'ಕಲೇರ್ದೋಷನಿಧೇರಾಜನ್ನಸ್ತಿಹ್ಯೇಕೋ ಮಹಾನ್ಗುಣಃ | ಕೀರ್ತನಾದೇವ ಕೃಷ್ಣಸ್ಯಮುಕ್ತಬಂಧಃ ಪರಂವ್ರಜೇತ್' ಕಲಿಯುಗವು ದೋಷನಿಧಿಯಾಗಿದ್ದರೂ ಅದರಲ್ಲಿ ದೊಡ್ಡದಾದ ಒಂದು ಗುಣ ಉಂಟು. ಅದೇನೆಂದರೆ,—ಪರಮಾತ್ಮನನ್ನು ಕೀರ್ತನೆ ಮಾಡಿದರೂ ಮುಕ್ತಬಂಧರಾಗಿ ಪರಮಾತ್ಮನನ್ನು ಹೊಂದಬಹುದು, ಎಂಬ ಭಾಗವತ ವಾಕ್ಯವೂ ವೃಥಾ ಆಗುವುದೆಂದು ಕಾಣುತ್ತದೆ. ಮತ್ತೂ ಷಷ್ಠಮಸ್ಕಂಧದಲ್ಲಿ ಮನುಷ್ಯರು ಮನೋವಾಕ್ಕಾಯಗಳಿಂದ ಮಾಡಿದ ಪಾಪಗಳಿಗೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದೆ ಇದ್ದರೆ ನರಕಾನುಭವ ತಪ್ಪದು, ಎಂದು ಮೊದಲು ಪ್ರಾಯಶ್ಚಿತ್ತವನ್ನು ಹೇಳಿದರೂ, 'ಪ್ರಾಯಶ್ಚಿತ್ತಾನಿ ಚೀರ್ಣಾನಿ ನಾರಾಯಣಪರಾಙ್ಮುಖೈಃ | ನನ್ನೈವುನಂತಿರಾಜೇಂದ್ರ ಸುರಾಕುಂಭಾಮಿ ವಾಪಗಾಃ' || ನಾರಾಯಣನಲ್ಲಿ ಪರಾಙ್ಮುಖರಾದವರು ಪ್ರಾಯಶ್ಚಿತ್ತ ಮಾಡಿಕೊಂಡರೂ ಮದ್ಯ ತುಂಬಿದ ಮಣ್ಣಿನ ಕೊಡವನ್ನು ಹೇಗೆ ಮಹಾ ನದಿಗಳು ಶುದ್ಧಿ ಮಾಡಲಾರವೋ ಹಾಗೆಯೇ ಆ ಪ್ರಾಯಶ್ಚಿತ್ತವು ಅವರನ್ನು ಶುದ್ಧಿ ಮಾಡಲಾರದು. ಮತ್ತೂ 'ನನಿಷ್ಕೃತೈರುದಿತೈರ್ಬ್ರಹ್ಮವಾದಿಭಿಸ್ತಥಾ ವಿಶುದ್ಧತ್ಯಧ್ಯವಾನೂ ವ್ರತಾದಿಭಿಃ || ಯಥಾಹರೇರ್ನಾಮರೂಪೈರುದಾಹೃತೈಸ್ತದುತ್ತಮಶ್ಲೋಕ ಗುಣೋಪಲಂಬಕಂ' ಉತ್ತಮಶ್ಲೋಕನಾದ ಶ್ರೀ ಪರಮಾತ್ಮನ ಆನಂದಾದಿ ಗುಣಗಳಿಂದ ಕೂಡಿದ ನಾಮಗಳನ್ನು ಭಕ್ತಿಯಿಂದ ಸ್ಮರಣೆ ಮಾಡುವವರು ಪಾಪದಿಂದ ಮುಕ್ತರಾಗುವರು. ಇಂತಹ ಪಾಪ ಹರಣ ಶಕ್ತಿಯು ವೇದಾದಿಗಳಿಂದ ಹೇಳಲ್ಪಟ್ಟ ವ್ರತ ನಿಯಮಾದಿ ರೂಪವಾದ ಯಾವ ಪ್ರಾಯಶ್ಚಿತ್ತಗಳಿಗೂ ಇಲ್ಲ, ಎಂದು ಭಾಗವತ ವಾಕ್ಯವಿರುವುದು. ಷಷ್ಟಸ್ಕಂಧದ ಮೂರನೆಯ ಅಧ್ಯಾಯದ ಅವತಾರಿಕೆಯಲ್ಲಿ ವಿಜಯಧ್ವಜಾಚಾರ್ಯರ ವಾಕ್ಯ "ಭಕ್ತಿಪೂರ್ವಕಂ ನಾಮ

ಸಂಕೀರ್ತನಂ ಮುಕ್ತಿಸಾಧನ ಮಿತ್ಯೈತದಸ್ಮಿನ್ನಧ್ಯಾಯೇ ಅಭಿಧೀಯತೆ" "ಭಕ್ತಿಪೂರ್ವಕವಾದ ಭಗವನ್ನಾಮ ಸಂಕೀರ್ತನವೇ ಮುಕ್ತಿ ಸಾಧನವೆಂಬುವುದನ್ನು ಈ ಅಧ್ಯಾಯದಲ್ಲಿ ಹೇಳುತ್ತಾರೆ" ಎಂದು ಇರುವುದು. ಇತ್ಯಾದಿ ಅನೇಕ ಪ್ರಮಾಣಗಳ ಬಲದಿಂದ "ಮಲಗಿ ಪಾಡಲು ಕುಳಿತು ಕೇಳುವ" ಎಂಬ ಯಥಾಸ್ಥಿತ ವ್ಯಾಖ್ಯಾನವೇ ದಾಸರಾಯರ ಹೃದ್ಯವೆಂದು ಕಾಣುತ್ತದೆ. "ಹರಿಯು ಸುಲಭನು" ಎಂದು ದಾಸರಾಯರು ಹೇಳಿರುವರು. ಈ ವಾಕ್ಯದಿಂದಲೂ ಅಸಂಪ್ರಜ್ಞಾತ ಸಮಾಧಿಯಿಂದ ಬಹುಕಾಲ ಕಷ್ಟಸಾಧ್ಯ ಕೆಲಸವು ಬೇಕಿಲ್ಲವೆಂದು ತೋರಿಸಿರುತ್ತಾರೆ. (ಗೀತಾ ಅಧ್ಯಾಯ ೮, ಶ್ಲೋಕ ೧೪) "ಅನನ್ಯ ಚೇತಾಸ್ಸತತಂ ಯೋಮಾಂಸ್ಮರತಿ ನಿತ್ಯಶಃ । ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ" ॥ "ಎಲೈ ಪಾರ್ಥ ! ಯಾವನು ಮನಸ್ಸನ್ನು ಅನ್ಯತ್ರ ಮಾಡದೇ ತದೇಕಚಿತ್ತನಾಗಿ, ನಿತ್ಯದಲ್ಲೂ ನನ್ನನ್ನು ಸ್ಮರಿಸುವನೋ, ಅವನೇ ನನ್ನನ್ನು ಹೊಂದಲು ಸಂಪೂರ್ಣೋಪಾಯವನ್ನು ತಿಳಿದವನು. ಅವನಿಗೆ ನಾನು ಸುಲಭದಿಂದ ಲಭ್ಯನು" ಎಂದು ಹೇಳಿರುವರು. "ಯೋಗಿ" ಎಂಬ ಪದಕ್ಕೆ ಜ್ಞಾನೋಪಾಯವನ್ನು ತಿಳಿದವನೆಂದು ಅರ್ಥವನ್ನು ಮಾಡಿರುವರು. ಆದುದರಿಂದಲೇ "ಒಲಿಸಲರಿಯದೆ, ಪಾಮರರು ಬಳಲುವರು, ಭವದೊಳಗೆ" ಎಂದು ಹೇಳಿರುವರು. ಈ ವಾಕ್ಯದಿಂದ ಗೀತೆಯಲ್ಲಿ ಹೇಳಿದ "ನಿತ್ಯಯುಕ್ತಸ್ಯ ಯೋಗಿನಃ" ಅಂದರೆ "ಸಂಪೂರ್ಣೋಪಾಯವನ್ನು ತಿಳಿದವನಿಗೆ ನಾನು ಸುಲಭನು" ಎಂಬ ಭಗವದ್ವಾಕ್ಯಗಳಿಗೂ, ದಾಸರಾಯರ ವಾಕ್ಯಕ್ಕೂ, ಸರಿಹೋಯಿತೆಂದು ಭಾವಿಸಬೇಕು. "ತನ್ನವರ ನರಘಳಿಗೆ ಬಿಟ್ಟಗಲ" ಎಂಬ ದಾಸರಾಯರ ವಾಕ್ಯಕ್ಕೆ ಬಿಂಬ ರೂಪದಿಂದ ಕೂಡಲೆ ಇರುವನು ಎಂದು ಅರ್ಥ ಮಾಡಿದರೆ, ಭಕ್ತರಲ್ಲೂ, ಅಭಕ್ತರಲ್ಲೂ ಸಹ ಬಿಂಬ ರೂಪದಿಂದ ಇದ್ದೇ ಇರುವನಾದುದರಿಂದ "ತನ್ನವರನ" ಎಂಬ ಪದವು ವೃಥಾ ಆಗುವುದು. ಭಕ್ತರನ್ನು ಕಾಯು

ವುದಕ್ಕಾಗಿ ಕೃಷ್ಣಾದಿ ರೂಪಗಳಿಂದ ಅರ್ಜುನಾದಿಗಳನ್ನು ರಕ್ಷಿಸಿದಂತೆಯೇ, ತನ್ನ ಏಕಾಂತ ಭಕ್ತರನ್ನು ರಕ್ಷಿಸುವುದಕ್ಕೆ ರೂಪಾಂತರದಿಂದ ಅವರ ಕಣ್ಣಿಗೆ ಗೋಚರನಾಗದೆ, ಯಾವಾಗಲೂ ಭಕ್ತರ ಸಮೀಪದಲ್ಲಿ ಇದ್ದು, ರಕ್ಷಿಸುವನು ಎಂಬ ಅರ್ಥವು ಸುಗಮವಾಗಿ ಕಾಣುವುದು. ಇದಕ್ಕೆ ವಾದಿರಾಜ ಸ್ವಾಮಿಗಳು, ತುಳಸೀದಾಸರು, ಪುರಂದರದಾಸರು ಇವರುಗಳ ಚರಿತ್ರೆಗಳೇ ಸಾಕ್ಷಿಯಾಗಿರುವವು.

ಈಗ " ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ " ಎಂಬ ಪ್ರಮಾಣ ರೀತ್ಯಾ ಮನುಷ್ಯರಿಗೆ ಬಂಧನಕ್ಕೂ, ಮೋಕ್ಷಕ್ಕೂ ಮನವೇ ಕಾರಣವು. ಅಂತಹಾ ಮನಸ್ಸನ್ನು ಪರಮಾತ್ಮನ ಪಾದಾರವಿಂದದಲ್ಲಿ ಇರಿಸಿ ಭಕ್ತಿಯಿಂದ ಭಜಿಸಿದವರಿಗೆ ಪರಮಾತ್ಮನು ಅಪರೋಕ್ಷದಲ್ಲಿಯೂ ಪ್ರತ್ಯಕ್ಷದಲ್ಲಿಯೂ ಕಾಣಿಸಿಕೊಳ್ಳುವನು, ಎಂದು " ಮನದೊಳಗೆ ತಾನಿಪ್ಪ " ಎಂಬ ಪದ್ಯದಿಂದ ಹೇಳುತ್ತಾರೆ.

**ಮನದೊಳಗೆ ತಾನಿಪ್ಪ ಮನವೆಂ**
**ದೆನಿಸಿ ಕೊಂಬನು ಮನದ ವೃತ್ತಿಗ**
**ಳನುಸರಿಸಿ ಭೋಗಂಗಳೀವನು ತ್ರಿವಿಧ ಚೇತನಕೆ ||**
**ಮನವನಿತ್ತರೆ ತನ್ನನೀವನು**
**ತನುವ ದಂಡಿಸಿ ದಿನದಿನದಿ ಸಾ**
**ಧನವ ಮಾಳ್ಪರಿಗಿತ್ತಪನು ಸ್ವರ್ಗಾದಿ ಭೋಗಗಳ ||೬||**

ಪದ್ಯಾರ್ಥ.—ಮನದೊಳಗೆ=ಮನಸ್ಸಿನೊಳಗೆ, ತಾನು=ಶ್ರೀ ಪರಮಾತ್ಮನು, ಇಪ್ಪ=ಇರುವನು (ಆದುದರಿಂದ), ಮನವೆಂದು=ಮನಸ್ಸೆಂದು, ಎನಿಸಿಕೊಂಬನು=ಕರೆಸಿಕೊಳ್ಳುವನು, ತ್ರಿವಿಧಚೇತನಕೆ=ಸಾತ್ವಿಕ, ರಾಜಸ, ತಾಮಸರೆಂಬ ಮೂರು ವಿಧ ಜೀವರಾಶಿಗಳಿಗೆ, ಮನದ ವೃತ್ತಿಗಳನುಸರಿಸಿ=ಅವ

ರವರ ಯೋಗ್ಯತಾನುಸಾರವಾದ ಮನೋವೃತ್ತಿಯನ್ನನುಸರಿಸಿ, ಭೋಗಂಗಳ=ಸುಖ, ದುಃಖ, ಸುಖದುಃಖಗಳ ಮಿಶ್ರ ಎಂಬ ಮೂರು ವಿಧದ ಅನುಭವವನ್ನು, ಈವನು=ಕೊಡುವನು, ಮನವನು=ಮನಸ್ಸನ್ನು, ಇತ್ತರೆ=ಕೊಟ್ಟರೆ, ಅಂದರೆ ಪರಮಾತ್ಮನಲ್ಲಿ ಅವಿಚ್ಛಿನ್ನವಾಗಿ ಇಟ್ಟರೆ, ತನ್ನನು = ತನ್ನ ರೂಪವನ್ನೇ, ಈವನು=ಕೊಡುವನು, ಅಂದರೆ ತೋರಿಸುವನು. ತನುವ=ಶರೀರವನ್ನು, ದಂಡಿಸಿ=ಕೃಚ್ಛ್ರಚಾಂದ್ರಾಯಣಾದಿ ವ್ರತಗಳಿಂದ ದಂಡಿಸಿ, ದಿನದಿನದಿ=ಪ್ರತಿ ದಿನವೂ, ಸಾಧನವ ಮಾಳ್ಪರಿಗೆ=ಸಾಧನವನ್ನು ಮಾಡುವವರಿಗೆ, ಸ್ವರ್ಗಾದಿ ಭೋಗಗಳ=ಸ್ವರ್ಗಾದಿ ಭೋಗಗಳನ್ನು, ಇತ್ತಪನು=ಕೊಡುವನು.

ತಾತ್ಪರ್ಯ —ಶ್ರೀ ಪರಮಾತ್ಮನು ಎಲ್ಲರ ಮನಸ್ಸಿನಲ್ಲಿದ್ದು ಮನಸ್ಸೆಂಬ ಹೆಸರಿನಿಂದ ಕರೆಸಿಕೊಳ್ಳುವನು. ಸಾತ್ವಿಕ, ರಾಜಸ, ತಾಮಸರೆಂಬ ತ್ರಿವಿಧ ಜೀವರಾಶಿಗಳಿಗೆ ಅವರವರ ಯೋಗ್ಯತಾನುಸಾರ ಮನಸ್ಸನ್ನು ಪ್ರೇರಿಸಿ, ಕರ್ಮಗಳನ್ನು ಯೋಗ್ಯತಾನುಸಾರ ಮಾಡಿಸಿ ತ್ರಿವಿಧ ಜೀವರಾಶಿಗಳಿಗೂ ಅವರ ಕರ್ಮಾನುಸಾರವಾದ ಫಲಗಳನ್ನು ಕೊಡುವನು. ಮನಸ್ಸನ್ನು ಅವಿಚ್ಛಿನ್ನವಾಗಿ ಪರಮಾತ್ಮನಲ್ಲಿ ನೆಲೆಗೊಳಿಸಿ ಭಜಿಸುವವರಿಗೆ ತನ್ನ ರೂಪವನ್ನು ತೋರಿಸುವನು. ಶರೀರ ಪ್ರಯಾಸಕರವಾದ ಉಪವಾಸಾದಿಗಳಿಂದ ದೇಹವನ್ನೇ ದಂಡಿಸಿದವರಿಗೆ ಸ್ವರ್ಗಾದಿಗಳನ್ನು ಮಾತ್ರವೇ ಕೊಡುವನು. (ಆದುದರಿಂದ ಮನಸ್ಸನ್ನು ಪರಮಾತ್ಮನಲ್ಲಿಟ್ಟು ಭಜಿಸುವವರಿಗೆ ಮಾತ್ರ ಭಗವಂತನ ಸಂಪೂರ್ಣಾನುಗ್ರಹವು ದೊರೆಯುವುದೆಂಬುದೇ ಇದರ ಮುಖ್ಯಾಭಿಪ್ರಾಯವು.)

ವಿಶೇಷಾರ್ಥ.—"ಮನದೊಳಗೆ ತಾನಿಪ್ಪ ಮನನೆಂದೆನಿಸಿಕೊಂಬನು" ಈ ವಿಷಯವಾಗಿ ಭಾಗವತ ತೃತೀಯ ಸ್ಕಂಧದಲ್ಲಿ "ಮನೋಮಯಂ ದೇವಮುಖಂ ವಿಕಾರ್ಯಂ" ಎಂದು ಹೇಳಿರುವರು. ಮನೋಮಯಂ ಅಂದರೆ ಮನಃ ಪ್ರಚುರನೆಂದು ಅರ್ಥ. ಅಂದರೆ ಮನದೊಳಗಿದ್ದು, ತಚ್ಛಬ್ದ ವಾ

ಚ್ಯನಾಗಿ, ಮನಃಪ್ರಧಾನವೆಂದು ಕರೆಸಿಕೊಳ್ಳುವನು. ಅದೇ ಶ್ಲೋಕದ ಭಾಗವತ ತಾತ್ಪರ್ಯದಲ್ಲಿ " ಮನಸ್ಥಿತೋ ಹರಿರ್ನಿತ್ಯಂ ಸರ್ವದೇವೇಷು ಸಂಸ್ಥಿತಃ। ದೇವ ಪ್ರಧಾನಕರ್ತಾ ಲೋಕರ್ತಾ ಕರೋತ್ಯನುಗತಃ ಸದೇತಿವಾರಾಹೇ" ಶ್ರೀ ಹರಿಯು ಮನಸ್ಸಿನಲ್ಲಿದ್ದು ಮನೋನಿಯಾಮಕನಾಗಿ, ಸಕಲ ದೇವತೆಗಳಲ್ಲಿಯೂ ಇರುತ್ತಾ, ದೇವತೆಗಳು ಮೊದಲು ಮಾಡಿ ಸಕಲ ಜನಗಳಿಗೂ ಮನಃಪ್ರೇರಕನಾಗಿ ಕಾರ್ಯಗಳನ್ನು ಮಾಡಿಸುವನು. ಇದಕ್ಕೆ ಆಧಾರವಾಗಿ ವರಾಹ ಪುರಾಣದ ವಾಕ್ಯ ಒಂದು ಈರೀತಿಯಾಗಿ ಹೇಳುವುದು. " ತತ್ತದ್ವಸ್ತುಷು ಸರ್ವೇಷು ತತ್ತದಾಕಾರತಃ ಸ್ಥಿತಃ । ತತ್ತಚ್ಛಬ್ದೈಲಕ್ಷ ಭಗವಾನೋಚ್ಯತೇ ನಿಜಶಕ್ತಿತಃ" ಶ್ರೀ ಪರಮಾತ್ಮನು ಪ್ರತಿಯೊಂದು ಪದಾರ್ಥದಲ್ಲಿಯೂ ತತ್ತದಾಕಾರನಾಗಿದ್ದು ತತ್ತಚ್ಛಬ್ದವಾಚ್ಯನಾಗಿರುವನು. ಅಂದರೆ ಘಟದಲ್ಲಿ ಘಟಾಕಾರನಾಗಿಯೂ, ಪಟದಲ್ಲಿ ಪಟಾಕಾರನಾಗಿಯೂ ಇದ್ದು ಘಟ ಪಟ ಇತ್ಯಾದಿ ಶಬ್ದಗಳಿಂದ ಕರಿಸಿಕೊಳ್ಳುವನು. " ಸರ್ವನಾಮಾ ಸರ್ವಕರ್ಮಾ" ಎಂಬ ಶ್ರುತಿಯನ್ನನುಸರಿಸಿ ಪರಮಾತ್ಮನಿಗೆ ಸರ್ವ ನಾಮವೂ ಕೂಡುತ್ತದೆ. ಮನಸ್ಸಿನಲ್ಲಿ ಮನೋಮಯನಾಗಿರುವುದರಿಂದ ಮನಸ್ಸೆಂಬ ಹೆಸರು ಪರಮಾತ್ಮನಿಗುಂಟಾಯಿತು. ಭಾಗವತ ಏಕಾದಶ ಸ್ಕಂಧ ತಾತ್ಪರ್ಯ—" ವರ್ಣಸ್ಥೋ ವರ್ಣನಾಮಾಸೌಸ್ವರಸ್ಥಃ ಸ್ವರಃ ನಾಮಕಃ। ಮನಸ್ಥಶ್ಚಮನೋನಾಮಾ ತನ್ನಾಮಾ ಚಕ್ಷುರಾದಿಗಃ" ಈ ಪ್ರಮಾಣ ಬಲದಿಂದ ಮೇಲಿನ ಅರ್ಥವು ಸಿದ್ಧವಾಗುವುದು. ಇದಕ್ಕೆ ಪರಮಾತ್ಮನ ಪರಮ ಸಾಮರ್ಥ್ಯವೇ ಕಾರಣವು. " ಮನದ ಮನಃ ದದಾತೀತಿ ಮನದಃ" ಅಂದರೆ ತ್ರಿವಿಧ ಜೀವರ ಕರ್ಮವನ್ನನುಸರಿಸಿ ಮನಸ್ಸನ್ನು ಕೊಡುವವನಾದುದರಿಂದ, ಮನದ–ಮನಸ್ಸನ್ನು ಕೊಡುವ ಪರಮಾತ್ಮನು ಎಂದರ್ಥ. " ತ್ರಿವಿಧ ಚೇತನಕೆ" ಸಾತ್ವಿಕ, ರಾಜಸ, ತಾಮಸರಿಗೆ ಅವರವರ ಯೋಗ್ಯತಾನುಸಾರ ಮನಸ್ಸನ್ನು ಪ್ರೇರಿಸಿ ಅದಕ್ಕನುಸಾರವಾದ ಫಲವನ್ನು ಕೊಡುವವನು.

ಇದರಿಂದ ಸರ್ವರ ಮನಸ್ಸಿಗೂ ಪ್ರೇರಕನು ಪರಮಾತ್ಮನು ಎಂದು ಸಿದ್ಧವಾಯಿತು. ಇಂದ್ರಿಯಗಳೆಲ್ಲವೂ ಮನೋವೃತ್ತಿಯಿಂದಲೇ ಕಾರ್ಯ ಮಾಡುವವು. ಆದುದರಿಂದ, ಸಕಲೇಂದ್ರಿಯ ವ್ಯಾಪಾರಗಳೂ ಪರಮಾತ್ಮನಿಂದಲೇ ಆಗುವುವೆಂದು ಹೇಳಿದಂತಾಯಿತು. ಹಾಗಾದರೆ ತತ್ತ್ವಾಭಿಮಾನಿಗಳ ಕಾರ್ಯವಾವುದು? ತತ್ತ್ವಾಭಿಮಾನಿ ದೇವತೆಗಳು ಇಂದ್ರಿಯ ಪ್ರೇರಕರೆಂದು ಅನೇಕ ಪ್ರಮಾಣಗಳಿರುವುವು. ಹಾಗಿರುವುದರಿಂದಲೇ ನಾವು ನಿತ್ಯದಲ್ಲಿಯೂ ಪ್ರಾತಃಕಾಲದಲ್ಲಿ ಎದ್ದಕೂಡಲೆ ' ನಮೋಸ್ತು ತಾತ್ತ್ವಿಕಾದೇವಾಃ ವಿಷ್ಣುಭಕ್ತಿಪರಾಯಣಾಃ || ಧರ್ಮಮಾರ್ಗ್ಗೇ ಪ್ರೇರಯಂತು ಭವಂತಃ ಸರ್ವ ಏವಹಿ ' ||–ಎಲೈ ವಿಷ್ಣು ಭಕ್ತರಾದ ತತ್ತ್ವಾಭಿಮಾನಿ ದೇವತೆಗಳಿರಾ ! ನಿಮ್ಮನ್ನು ನಮಸ್ಕರಿಸುವೆನು. ನೀವೆಲ್ಲರೂ ನನ್ನ ಇಂದ್ರಿಯಗಳನ್ನು ಅಧರ್ಮಗಳಲ್ಲಿ ಪ್ರೇರಿಸದೆ ಧರ್ಮ ಮಾರ್ಗದಲ್ಲಿಯೇ ಇರಿಸಿರಿ ಎಂದು ಪ್ರಾರ್ಥಿಸಬೇಕೆಂಬ ಸ್ಮೃತಿ ವಾಕ್ಯವಿರುವುದು. ಮತ್ತೂ ಭಾಗವತ ಏಕಾದಶ ಸ್ಕಂಧದಲ್ಲಿ ' ಆತ್ಮನೋ ಭಜನೇ ವೃದ್ಧಿಮುತ್ಪಾದ್ಯ ಫಲದಾಸುರಾಃ। ಉತ್ತಮಾನಾಂ ಜನಾನಾಂತು ನಿಕೃಷ್ಟಾನಾಂ ವಿಪರ್ಯಯಃ ||' ದೇವತೆಗಳು ಉತ್ತಮ ಜೀವರ ವೃದ್ಧಿಗೋಸ್ಕರ, ಅವರು ಪರಮಾತ್ಮನನ್ನು ಸರ್ವೋತ್ತಮತ್ವೇನ ತಿಳಿದು ಭಜನ ಮಾಡುವ ಹಾಗೂ ತಾರತಮ್ಯ ಪ್ರಕಾರ ತಮ್ಮನ್ನು ಭಜಿಸುವ ಹಾಗೂ ಪ್ರೇರಿಸಿ, ಕರ್ಮವನ್ನು ಮಾಡಿಸಿ, ಫಲವನ್ನು ಕೊಡಿಸುವರು. ಅಯೋಗ್ಯರಿಗೆ ಇದಕ್ಕೆ ವಿಪರೀತ, ಅಂದರೆ, ಪರಮಾತ್ಮನಲ್ಲಿಯೂ ತಮ್ಮಲ್ಲಿಯೂ ಸಹ ದ್ವೇಷ ಬುದ್ಧಿಯನ್ನು ಹುಟ್ಟಿಸಿ ಅದಕ್ಕೆ ತಕ್ಕ ಫಲವನ್ನೇ ಕೊಡಿಸುವರೆಂದು ಹೇಳಿರುವರು. ಇದರಿಂದ ತತ್ತ್ವಾಭಿಮಾನಿ ದೇವತೆಗಳಿಗೆ ಶುಭಾಶುಭ ಕರ್ಮಗಳಲ್ಲಿ ಬುದ್ಧಿ ಪ್ರೇರಣ ಸ್ವಾತಂತ್ರ್ಯವು ಕಾಣಬರುವುದು. ಹಾಗಿರಲು, ದಾಸರಾಯರ ಅಭಿಪ್ರಾಯವನ್ನೂ ಅದಕ್ಕೆ ಆಧಾರವಾಗಿ ಹೇಳಿರುವ ಪ್ರಮಾಣಗಳನ್ನೂ ನೋಡಿದರೆ ಇದಕ್ಕೆ ವಿರುದ್ಧವಾಗಿ ಕಾಣುವವು. ಇವಕ್ಕೆ ಪರಿಹಾರವು ಹೇಗೆ ಅಂದರೆ :—ಮನಸ್ಸಿಗೂ, ಚಕ್ಷುಃ ಶ್ರೋತ್ರಾದಿ ಇಂದ್ರಿಯಗಳಿಗೂ, ತತ್ತ್ವಾಭಿಮಾನಿ ದೇವತೆಗಳು ಪ್ರೇರಕರಾದರೂ, ಆ ತತ್ತ್ವಾಭಿಮಾನಿ ದೇವತೆಗಳಲ್ಲಿಯೂ ಇಂದ್ರಿಯಗಳಲ್ಲಿಯೂ ತತ್ತದ್ರೂಪಗಳಿಂದ ಇದ್ದು ಪರಮಾತ್ಮನೇ ಮುಖ್ಯ ಪ್ರೇರಕನಾಗಿರುವನು. ಶ್ರೀ ಪರಮಾತ್ಮನು ತತ್ತ್ವಾಭಿಮಾನಿ ದೇವತೆಗಳಲ್ಲಿದ್ದು ಪ್ರೇರಿಸುವುದರಿಂದ ತತ್ತ್ವಾಭಿಮಾನಿ ದೇವತೆಗಳೇ ಪ್ರೇರಕರೆಂದು ಪ್ರಖ್ಯಾತಿಯಾಗಿರುವುದು.

ರಾಜಕೀಯ ವ್ಯವಹಾರ ಕಾರ್ಯಗಳನ್ನು ಅಧಿಕಾರಿಗಳು ತಮ್ಮ ಆಜ್ಞೆಯಿಂದ ಪ್ರಜೆಗಳ ಮೂಲಕ ಮಾಡಿಸಿದರೂ, ಅವು ರಾಜನಾಜ್ಞೆ ಇಲ್ಲದೆ ಹೇಗೆ ಆಗಲಿಲ್ಲವೋ ಹಾಗೆಯೇ ತತ್ವಾಭಿಮಾನಿ ದೇವತೆಗಳಿಗೆ ಸ್ವತಂತ್ರವಾಗಿ ಪ್ರೇರಣಾ ಮಾಡುವ ಶಕ್ತಿ ಇಲ್ಲವಾದುದರಿಂದ ಪರಮಾತ್ಮನೇ ಸ್ವತಂತ್ರ ಪ್ರೇರಕನೆಂದು ತಿಳಿಯಬೇಕು. ಇವರಲ್ಲಿ ತ್ರಿವಿಧ ಜೀವರಿಗೆ ಪ್ರೇರಣೆಯು ಅವರವರ ಯೋಗ್ಯತಾನುಸಾರ ಆಗುವುದು. ಭಕ್ತರಲ್ಲಿ ಉತ್ತಮರು ಮಧ್ಯಮರು, ಅಧಮರೆಂದು ಮೂರು ಪಂಗಡಗಳುಂಟು. ಅದರಲ್ಲಿ ಉತ್ತಮ ಭಕ್ತರೆಂದರೆ :—ಭಾಗವತ ಏಕಾದಶ ಸ್ಕಂಧದ ತಾತ್ಪರ್ಯದಲ್ಲಿ " ಪೂರ್ಣತ್ವಾದಾತ್ಮಶಬ್ದೋಕ್ತಃ ಕಶ್ಚಿತ್ಸರ್ವ ನರೋತ್ತಮಃ। ಸೋಽಪಿ ನಾರಾಯಣೋ ನಾನ್ಯಃ ಸಚ ಸರ್ವೇಷು ಸಂಸ್ಥಿತಃ ॥ ತದ್ವಶಾ ಇತರೇ ಸರ್ವೇ ಶ್ರೀ ಬ್ರಹ್ಮೇಶ ಪುರಸ್ಸರಾಃ। ಸ ಏವತು ಸ್ವಭಕ್ತೇಷು ಸ್ಥಿತ್ವಾನುಗ್ರಹಕಾರಕಃ ॥ ಅಜ್ಞೇಷ್ವಜ್ಞಾನಯಂತಾಚ ದ್ವಿಷತ್ಸು ದ್ವೇಷಕಾರಕಃ। ಅತಸ್ತ ಪ್ರೇರಣಾ ದೇವ ಪ್ರೇಮಾದ್ಯಾಮ ಮಜಜ್ಞರೇ ॥ ಇತಿ ಪಶ್ಯತಿಯೋ ಬುದ್ಧ್ಯಾಸತು ಭಾಗವತೋತ್ತಮಃ" ಇದರರ್ಥ :—

ಪರಮಾತ್ಮನು ಪೂರ್ಣನಾದುದರಿಂದ, ಆತನಿಗೆ ಆತ್ಮನೆಂದು ಹೆಸರು. ಅವನು ಸರ್ವ ಪ್ರಾಣಿಗಳಿಗಿಂತಲೂ ಉತ್ತಮನು. ಅವನೇ ಶ್ರೀಮನ್ನಾರಾಯಣನು. ಅವನು ಸರ್ವ ಪ್ರಾಣಿಗಳಲ್ಲಿಯೂ ಇರುತ್ತಿರುವನು. ರಮಾ ಬ್ರಹ್ಮಾದಿಗಳೆಲ್ಲರೂ ಅವನ ವಶದಲ್ಲಿರುವರು. ಅವನೇ ತನ್ನ ಭಕ್ತರುಗಳಿಗೆ ಅನುಗ್ರಹ ಮಾಡುವವನು. ಅಜ್ಞಾನಿಗಳಲ್ಲಿ ಅಜ್ಞಾನ ಪ್ರೇರಕನು, ದ್ವೇಷಿಗಳಲ್ಲಿದ್ದು ದ್ವೇಷ ಮಾಡಿಸುವವನೂ ಅವನೇ ಆಗಿರುವನು. ಮತ್ತು ಅವನ ಪ್ರೇರಣೆಯಿಂದಲೇ ಒಬ್ಬರಲ್ಲಿ ತನಗೆ ಪ್ರೀತಿ ಮೊದಲಾದವು ಹುಟ್ಟುವುವು; ಎಂದು ಯಾವನು ತಿಳಿಯುತ್ತಾನೆಯೋ ಅವನೇ ಭಾಗವತೋತ್ತಮನು.

ರಾಜಸ ಭಕ್ತರ ಲಕ್ಷಣ :—ಕ್ಷೀರಸಾಗರ ವಾಸಿಯಾದ ಪರಮಾತ್ಮನು ಸರ್ವೋತ್ತಮನು, ಎಂದು ತಿಳಿದು ಅವನಲ್ಲಿ ಪ್ರೀತಿ ಮಾಡುವುದೂ, ಅವನ ಭಕ್ತರಲ್ಲಿ ಸ್ನೇಹಯುಕ್ತನಾಗಿರುವುದೂ, ಪರಮಾತ್ಮನ ಸ್ವರೂಪವನ್ನರಿಯದ ಜನರಲ್ಲಿ ದಯೆ, ಭಗವದ್ವಿಷಯಗಳಲ್ಲಿ ಶ್ರದ್ಧೆ, ಇಷ್ಟೂ ಇದ್ದರೂ, ಜಗತ್ತೆಲ್ಲವೂ ಭಗವದಧೀನವೆಂದು ತಿಳಿಯದೆ ಇರುವವನು ಮಧ್ಯಮ ಭಕ್ತನು. ಅಧಮ ಭಕ್ತನೆಂದರೆ :—ಪ್ರತಿಮಾದಿಗಳಲ್ಲಿಯೇ ಪರಮಾತ್ಮನಿರುವನೆಂದು

ಭ್ರಾನಿಸಿ, ಇತರ ಸ್ಥಳಗಳಲ್ಲಿ ಪರಮಾತ್ಮನಿರುವುದನ್ನು ತಿಳಿಯದಿರುವಿಕೆ, ಅನ್ಯ ಭಕ್ತರಲ್ಲಿ ತಾರತಮ್ಯವನ್ನು ತಿಳಿಯದಿರುವಿಕೆ. ಪರಮಾತ್ಮನ ಭಕ್ತರನ್ನು ತಾನು ಭಕ್ತನೆಂಬ ಅಹಂಕಾರದಿಂದ ತಿರಸ್ಕರಿಸುವಿಕೆ, ಅಥವಾ ಪರಮಾತ್ಮನ ಮುಖ್ಯ ಭಕ್ತರನ್ನು ಸ್ಮರಣೆ ಮಾಡದೆ ಉಪೇಕ್ಷೆ ಮಾಡುವಿಕೆ, ಬ್ರಹ್ಮಾದಿಗಳನ್ನು ಮನುಷ್ಯರಿಗಿಂತಲೂ ಸ್ವಲ್ಪ ಅಧಿಕರಾಗಿದ್ದರೂ ಇರಬಹುದೆಂದು ತಿಳಿಯುವಿಕೆ, ವಿಷ್ಣುವೂ ಸಹ ನಮಗಿಂತಲೂ ಸ್ವಲ್ಪ ಉತ್ತಮನಾಗಿರಬಹುದೆಂದು ತಿಳಿಯುವಿಕೆ. ಹೀಗೆ ತಿಳಿಯುವವರು ಭಕ್ತಾಧಮರು.

ಇವರ ಭಕ್ತಿಗೆ ಸ್ವರ್ಗಾದಿ ಸುಖವೂ ಉತ್ತಮರಾದ ದೇವತೆಗಳ ಅವಜ್ಞೆಯಿಂದಲೂ, ಉಪೇಕ್ಷೆಯಿಂದಲೂ ನರಕ ವಾಸವೂ ಲಭಿಸುವವು. ಮಧ್ಯಮ ಭಕ್ತನು ನರಕಕ್ಕೆ ಹೋಗುವುದಿಲ್ಲ. ಸ್ವರ್ಗ ಫಲವನ್ನೇ ಭುಂಜಿಸುವನು. ಕೆಲವು ಕಾಲದಲ್ಲಿ ಮನುಷ್ಯನಾಗಿ ಹುಟ್ಟಿ ಸುಖವನ್ನನುಭವಿಸುವನು. ಯಾವನು ಭಾಗವತೋತ್ತಮನೋ ಅವನೇ ಉತ್ತಮವಾದ ಮುಕ್ತಿಯನ್ನು ಹೊಂದುವನು. ಉತ್ತಮ ಭಾಗವತರೆಲ್ಲರೂ ಸಾತ್ವಿಕರೆಂದೆನಿಸಿಕೊಳ್ಳುವರು. ಮಧ್ಯಮ ಭಕ್ತರೇ ರಾಜಸರು. ಅಧಮ ಭಕ್ತರನ್ನು ತಾಮಸ ರಾಜಸರೆಂದು ತಿಳಿಯಬೇಕು. ಅದೇಕೆಂದರೆ. ಬ್ರಹ್ಮಾದಿ ದೇವತೆಗಳನ್ನು ಉಪೇಕ್ಷೆ ಮಾಡುವುದೇ ಆಗಲಿ, ದ್ವೇಷ ಮಾಡುವುದೇ ಆಗಲಿ ಅದು ಮಹಾಪಾಪಸಾಧನವಾದುದು. ಅಂಥವರು ಒಂದುವೇಳೆ ಪರಮಾತ್ಮನಲ್ಲಿ ಭಕ್ತಿ ಮಾಡುತ್ತಿದ್ದರೂ ಆ ಭಕ್ತಿಯನ್ನು ಪರಮಾತ್ಮನೇ ನಾಶ ಮಾಡುವನು. ಈ ರೀತಿಯಾಗಿ ಪರಮಾತ್ಮನಲ್ಲಿಯೂ ದ್ವೇಷವನ್ನಾಚರಿಸಿ ಕೊನೆಗೆ ತಮಸ್ಸಿಗೆ ಹೋಗುವ ಸಂಭವವು ಅವರಿಗೆ ಉಂಟು. ಆದುದರಿಂದ ದೇವತೆಗಳನ್ನು ತಾರತಮ್ಯಾನುಸಾರ ತಿಳಿದು ಪೂಜಿಸಬೇಕು.

ತಾಮಸರು ? ಅವರೇ ತಮೋಯೋಗ್ಯರೆಂದು ಪ್ರಸಿದ್ಧರಾಗಿರುವರು. ಅವರ ಲಕ್ಷಣವಾವುದು ? ಪರಮಾತ್ಮನಿಗೂ ತನಗೂ ಭೇದವಿಲ್ಲವೆಂದು ತಿಳಿದು ತಾವೇ ಅವನೆಂದು ಉಪಾಸನೆ ಮಾಡುವುದು. ಇವರ ಸಹವಾಸವನ್ನು ಕೂಡ ಮಾಡಬಾರದು. ಅವರ ಸಹವಾಸಿಗಳಿಗೂ ತಮಸ್ಸೇ ಆಗುವುದು. ಭಾಗವತ ಪಂಚಮ ಸ್ಕಂಧದಲ್ಲಿ ' ತಮೋದ್ವಾರಂ ಯೋಷಿತಾಂ ಸಂಗಿ ಸಂಗಂ ' ಅಂದರೆ ' ಸ್ತ್ರೀ ' ಸಂಗಿಗಳ ಸಂಗವೇ ತಮಸ್ಸಿಗೆ ಸಾಧನವೆಂದು ಅರ್ಥವಾಗುವುದು. ಮತ್ತು ಏಕಾದಶಸ್ಕಂಧದಲ್ಲಿ ' ಸ್ತ್ರೀ ಸಂಗ

ಸಂಗಿನಾಂ ಸಂಗಂ ತ್ಯಕ್ತ್ವಾ ದೂರತ ಆತ್ಮವಾನ್' ಸ್ತ್ರೀ ಸಂಗವನ್ನು ಮಾಡಿಕೊಂಡಿರುವವರ ಸಹವಾಸವನ್ನು ದೂರಮಾಡಬೇಕೆಂದು ಹೇಳಿರುವರು. ಇದರಿಂದ ಸಾಮಾನ್ಯರಾದ ಗೃಹಸ್ಥಾಶ್ರಮಿಗಳ ಸಹವಾಸಗಳನ್ನೇ ಬಿಡಬೇಕೆಂದು ಅರ್ಥವು ತೋರುವುದು. ಅಥವಾ ಸ್ವಸ್ತ್ರೀ ಅಲ್ಲದೆ ಅನ್ಯ ಸ್ತ್ರೀ ಸಹವಾಸ ಮಾಡುವವರ ಸಹವಾಸವನ್ನು ಬಿಡಬೇಕೆಂದು ಅರ್ಥ ಮಾಡಬಹುದು. ಅದೂ ತಪ್ಪು ಅರ್ಥವೇ ಆಗುವುದು. ಏಕೆಂದರೆ, ಸಾಮಾನ್ಯರಾದ ಪರಸ್ತ್ರೀ ಸಂಗಿಗಳಿಗೆ ಕೆಲವು ಕಾಲ ನರಕಪ್ರಾಪ್ತಿ ಆಗುವುದೇ ಹೊರತು ತಮಸ್ಸಾಗುವುದಿಲ್ಲ. ಹೀಗಿರಲು, ಸ್ತ್ರೀ ಸಂಗಿಗಳ ಸಂಗಕ್ಕೆ ತಮಸ್ಸಾಧನವೆಂದು ಹೇಳಿಬಿಟ್ಟರೆ ಸಿದ್ಧಾಂತ ವಿರುದ್ಧವಾಗುವುದು.

ಇದಕ್ಕೆ ಶ್ರೀಮದಾಚಾರ್ಯರು ತಾತ್ಪರ್ಯದಲ್ಲಿ ವ್ಯಾಖ್ಯಾನವನ್ನು ಮಾಡಿರುವರು. ಅದು ಹೇಗೆಂದರೆ:—ಏಕಾದಶಸ್ಕಂಧದ 'ಸ್ತ್ರೀ ಸಂಗ ಸಂಗಿನಾಂ' ಎಂಬ ಶ್ಲೋಕದ ತಾತ್ಪರ್ಯದಲ್ಲಿ 'ಕೇಶವೇತ್ವನ್ಯಥಾ ಬುದ್ಧಿಃ ಸ್ತೈವ ಸ್ತ್ರೀ ಪರಿಕೀರ್ತಿತಾ' ಪರಮಾತ್ಮನಲ್ಲಿ ಮಾಡುವ ಅನ್ಯಥಾ ಬುದ್ಧಿ, ಅಂದರೆ ಯಥಾ ಸ್ಥಿತವಾಗಿ ಪರಮಾತ್ಮನು ಸ್ವತಂತ್ರನು, ನಾವು ಅಸ್ವತಂತ್ರರು, ಹೀಗೆ ಅನಾದಿ ಕಾಲದಿಂದಲೂ ಜೀವನಿಗೂ ಪರಮಾತ್ಮನಿಗೂ ಭೇದವಿದೆ. ಅದಕ್ಕೆ ಅನ್ಯಥಾ, ಅಂದರೆ ನಾನೇ ಪರಮಾತ್ಮನು ಎಂದು ಅಭೇದ ಚಿಂತನ ಮಾಡುವ ಬುದ್ಧಿಗೆ 'ಸ್ತ್ರೀ' ಎಂದು ಹೆಸರು. ಈ ಬುದ್ಧಿಯು ಯಾರಿಗೆ ಇರುವುದೋ ಅವನು 'ಸ್ತ್ರೀ' ಸಂಗಿ. ಅವನ ಸಹವಾಸವು ತಮಸ್ಸಿಗೆ ಸಾಧನವೆಂದರ್ಥ. ಇಂತಹ ಸ್ತ್ರೀ ಸಂಗಿ ಸಂಗಕ್ಕೆ ತಮಸ್ಸೆಂದ ಮೇಲೆ ಸ್ತ್ರೀ ಸಂಗಿಗೆ ತಮಸ್ಸೆಂದು ಬೇರೆ ಹೇಳಬೇಕೆ? ಪರ ಸ್ತ್ರೀ ಸಂಗಿಗಳಿಗೆ ತಮಸ್ಸಿಲ್ಲವೆಂತಲೂ. 'ಸ್ತ್ರೀ' ಶಬ್ದಕ್ಕೆ ಅನ್ಯಥಾ ಬುದ್ಧಿ ಎಂದು ಶ್ರೀಮದಾಚಾರ್ಯರು ಅರ್ಥ ಮಾಡಿರುದಾಗಿ ಹೇಳಿರುವಿರಿ! ಆಚಾರ್ಯರು, ಪರಸ್ತ್ರೀ ಸಂಗಿಗಳಿಗೆ ನರಕವೇ ಹೊರತು, ತಮಸ್ಸಾಗುವುದಿಲ್ಲವೆಂದು ಯಾವ ಆಧಾರದ ಮೇಲೆ ಹೇಳಿರುವರು. ಅಂದರೆ ಶ್ರೀಮದಾಚಾರ್ಯರು ಧರ್ಮ ತತ್ವದಲ್ಲಿನ ಪ್ರಮಾಣಗಳನ್ನು ಉದಾಹರಿಸಿರುತ್ತಾರೆ. ಅವು ಯಾವುವೆಂದರೆ:—

"ಪರದಾರ ದೃಶಿಪ್ರೋಕ್ತಾ ಕ್ಷುದ್ರಪಾತಕ ಸಂಜ್ಞಿತಾ । ಉಪಪಾತಕಂ ತದ್ಗತಿಶ್ಚ ವರ್ಣ ಬಾಹ್ಯೇಷು ಪಾತಕಂ ॥ ಮಹಾಪಾತಕ ಸಂಜ್ಞಂತು ಪಿತ್ರಾದೇರ್ದಾರ ಧರ್ಷಣಂ। ದಾರದೃಷ್ಟಿಃ ಸ್ವೋತ್ತಮಾನಾಂ ಮಾನುಷಾ

ಣಾಂ ಸ್ವಭಾವತಃ ಸುಮುಖ· ಪಾತಕಂಪ್ರೋಕ್ತಂ ತದ್ಗತಿಃ ಸುಮತ್ತರಃ ಋಷಿದಾರೇಷು ಮನಸೋ ಗತಿರೇವತತೋಧಿಕಾ ದೇವದಾರಾಭಿ ಕಾಮಾನಾಂ ನಂಗ ಸಂಗಸ್ತತೋಧಿಕಃ । ಕಿಮುವಿಷ್ಣೋಸ್ತತೋ ಯೋಷಿತ್ಸಂಗಸ್ವಪ್ನತ್ರಯುಕ್ತಿತೇಃ । ನಸಮಂ ಪಾತಕಂಕ್ವಾಪಿ ನಹಿಸ್ವ ಸ್ತ್ರ್ಯಭಿಗಾಮಿನಃ । ಅವಜ್ಞಾತಾ ವಾಘವಾವೇನ್ತ ಸ್ಮಾತ್ತಂಮೂರತ ಸ್ತ್ಯಜೇತ್ ॥ ಮಾನುಷೇಷುತು ದುಃಖಿತ್ವಂ ಕ್ಷುದ್ರಪಾಪ ಫಲಂಸ್ಮೃತಂ । ಸಹಸ್ರವರ್ಷ ನರಕಂ ಕ್ಷುದ್ರಪಾತಕ ಜಂಫಲಂ । ಉಪಪಾತಕ ತಶ್ಚಾಪಿ ನರಕಂ ಯುಗಮಾತ್ರಕಂ॥ ಚತುರ್ಯುಗಾವ ಸಾನಂತು ಪಾತಕಸ್ಯ ಫಲಂ ಸ್ಮೃತಂ । ಮಹಾಪಾತಕ ಜನ್ಯಂಚ ಕಲ್ಪಾವಧಿ ಸಮೀರಿತಂ ॥ ಸುಮಹಾಪಾತ ಕಾಶ್ಚಾಪಿಯಾವದ್ಬ್ರಹ್ಮಲಯೋಭವೇತ್ । ತತ್ಪರಾಣಾಂ ಪಾತಕಾನಾಂ ಫಲಮಂಧಂ ತಮಃ ಸ್ಮೃತಂ ॥ ಅಧೋಘೋದುಃಖ ಮತುಲಂ ವಿಷ್ಣು ದಾರಾಭಿಮರ್ಶನಂ । ವಧಾದಪಿಹಿದಾರಾಣಾಂ ಧರ್ಷಣಂ ಕೋಪಕಾರಣಂ ॥ ತಸ್ಮಾದ್ದ್ರೇವ್ಯಃ ಸದಾವಂದ್ಯಾ ಅಗ್ನಿವಸ್ನಾಭಿ ಕಾಮತ" ॥ ಇದರ ಅರ್ಥ :—

ಈ ಪ್ರಮಾಣಗಳಿಂದ ನರಕ ಸಾಧನವಾದ ಪಾಪಗಳಾವುವು ? ತಮಸ್ಸಾಧನವಾದ ಪಾಪಗಳಾವುವು ಎಂಬುವುದನ್ನು ವಿಭಾಗಿಸಿ ಹೇಳುತ್ತಾರೆ.—

ಪರಸ್ತ್ರೀಯರನ್ನು ರಮಿಸಬೇಂಬ ಬುದ್ಧಿಯಿಂದ ನೋಡಿದ ಪಾಪವು ಕ್ಷುದ್ರಪಾತಕವೆನಿಸುವುದು. ಪರ ಸ್ತ್ರೀಯನ್ನು ಪರಿಗ್ರಹಿಸಿದ ಪಾಪವು ಉಪ ಪಾತಕವು. ವರ್ಣ ಬಾಹ್ಯರಾದ ಸ್ತ್ರೀ ಅಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದವರನ್ನುಳಿದು ಸುಕ್ಕ ಚಂಡಾಲ ಮ್ಲೇಚ್ಛಾದಿ ಸ್ತ್ರೀಯರುಗಳನ್ನು ಪರಿಗ್ರಹಿಸುವುದು ಪಾತಕವೆಂದೆನಿಸುವುದು. ತಂದೆ ಮೊದಲಾದ ದೊಡ್ಡವರು ಪರಿಗ್ರಹಿಸಿರುವ ಸ್ತ್ರೀಯನ್ನು ತಾನು ಪರಿಗ್ರಹಿಸುವುದು ಮಹಾ ಪಾತಕವೆಂದೆನಿಸುವುದು. ಮನುಷ್ಯರಲ್ಲಿ ಸ್ವಭಾವದಿಂದ ತನ್ನವರಿಗಿಂತಲೂ ಉತ್ತಮರ ಸತಿಯರನ್ನು ಅಪೇಕ್ಷಿಸಿ ಕಣ್ಣಿಂದ ನೋಡುವುದು ಸುಮಹಾಪಾತಕವೆಂದೆನಿಸುವುದು. ಅವರನ್ನು ಪರಿಗ್ರಹಿಸುವುದು ಅವಕ್ಕಿಂತಲೂ ಹೆಚ್ಚಿನ ಪಾಪವು. ಅದಕ್ಕಿಂತಲೂ ಋಷಿ ಸ್ತ್ರೀಯರಲ್ಲಿ ಮನಸ್ಸು ಮಾಡುವುದು ಹೆಚ್ಚಿನದು. ಅದಕ್ಕಿಂತಲೂ ಹೆಚ್ಚಿನ ಪಾಪವು ದೇವತಾ ಸ್ತ್ರೀಯರನ್ನಪೇಕ್ಷಿಸುವುದು. ಅವರ ಸಹವಾಸ ಮಾಡುವುದು. ಹೀಗಾದಮೇಲೆ ಪರಮಾತ್ಮನ ಪತ್ನಿಯಾದ ಲಕ್ಷ್ಮೀಪತಿಯು ತಾನೇ ಆಗುವೆ

ನೆಂಬುವ ಸಹವಾಸವು ಇವೆಲ್ಲಕ್ಕಿಂತಲೂ ಹೆಚ್ಚಿನದೆಂದು ಹೇಳಬೇಕಾದ್ದೇ ನಿವೆ. ಇದಕ್ಕೆ ಸಮವಾದ ಪಾಪವೇ ಜಗತ್ತಿನಲ್ಲಿಲ್ಲ. ಆದುದರಿಂದ, ಸ್ತ್ರೀ ಶಬ್ದಕ್ಕೆ ಅನ್ಯಥಾ ಜ್ಞಾನವೆಂದು ಅರ್ಥ ಮಾಡಿದರು. ಹಾಗಿಲ್ಲವಾದರೆ ಸ್ವಸ್ತ್ರೀ ಸಮಾಗಮನವೂ ಕೂಡ ತಮಸ್ಸಾಧನವೆಂದು ಹೇಳಬೇಕಾಗಿರು ತ್ತದೆ ಎಂದು, ಇದರರ್ಥವನ್ನು ಪ್ರಮಾಣಗಳಿಂದ ತೋರಿಸಿರುವರು. ಮತ್ತು ಈ ಪಾಪಗಳ ಫಲವನ್ನು ತಾರತಮ್ಯದಿಂದ ತೋರಿಸುತ್ತಾರೆ :—

ಕ್ಷುದ್ರ ಪಾತಕದ ಫಲವು ಮನುಷ್ಯ ಜನ್ಮದಲ್ಲಿ ಕೆಲವು ಕಾಲ ದುಃಖ ವನ್ನನುಭವಿಸತಕ್ಕದ್ದು, ಮತ್ತು ಸಹಸ್ರ ವರ್ಷಗಳ ವರೆಗೂ ನರಕವನ್ನನು ಭವಿಸಬೇಕು. ಉಪಪಾತಕಕ್ಕೆ ಒಂದು ಯುಗದಷ್ಟು ಕಾಲದವರೆಗೂ ನರ ಕವಾಸವು. ಪಾತಕಕ್ಕೆ ನಾಲ್ಕು ಯುಗಗಳ ವರೆಗೂ ನರಕವಾಸವು. ಮಹಾ ಪಾತಕಕ್ಕೆ ಬ್ರಹ್ಮದೇವರ ಒಂದು ದಿನ ಕಲ್ಪದವರೆಗೂ ನರಕಯಾತನೆಯನ್ನ ನುಭವಿಸಬೇಕು. ಸುಮಹಾಪಾತಕದ ಫಲವು ಒಂದು ಬ್ರಹ್ಮ ಕಲ್ಪದ ವರೆಗೂ. ಇದಕ್ಕೆ ಮೀರಿದ ಪಾಪಗಳಿಗೆ ಮಾತ್ರ ಹಿಂದಿರುಗದಿರುವ ಅಂಧಂ ತಮಸ್ಸಾಗುವುದು. ಹೀಗಿರುವುದರಿಂದ ಇದಕ್ಕಿಂತಲೂ ಕಮ್ಮಿಯಾದ ಪಾಪ ಗಳಿಗೆ ತಮಸ್ಸಿಲ್ಲವೆಂತ ಸ್ಪಷ್ಟವಾಗಿರುವುದು. ಮತ್ತು ಪಂಚಮಸ್ಕಂಧ ದಲ್ಲಿ "ತಮೋದ್ವಾರಂ ಯೋಷಿತಾಂ ಸಂಗಿ ಸಂಗಂ" ಸ್ತ್ರೀ ಸಂಗಿಗಳ ಸಂಗವು ತಮಸ್ಸಾಧನವೆಂದು ಹೇಳಿರುವುದರಿಂದ ಸ್ತ್ರೀ ಶಬ್ದಕ್ಕೆ ಅನ್ಯಥಾ ಬುದ್ಧಿ ಎಂದು ಅರ್ಥವೆಂದು ತಿಳಿಯಬೇಕು.

ಪಾಪವು ಹೆಚ್ಚಿದಹಾಗೆಲ್ಲಾ ದುಃಖವು ಹೆಚ್ಚುತ್ತಾ ಬರುವುದು. ನಾನೇ ಪರಮಾತ್ಮನೆಂದು ಹೇಳುವುದರಿಂದ ಲಕ್ಷ್ಮಿಗೆ ನಾನೇ ಪತಿಯು ಎಂದು ಹೇಳಿದಂತಾಗಲಿಲ್ಲವೆ? ಲೋಕದಲ್ಲಿ 'ನಿನ್ನ ಹೆಂಡತಿ' ಅಂದರೆ ಎಷ್ಟು ಕೋಪ ಬರುವುದೋ ಅಷ್ಟು ಕೋಪವು ನಿನ್ನನ್ನು ಕೊಲ್ಲುತ್ತೇನೆ ಅಂದರೂ ಬರುವುದಿಲ್ಲ. ಆದುದರಿಂದ ಇದು ಎಲ್ಲಕ್ಕಿಂತಲೂ ಪ್ರಬಲವಾದ ಪಾಪವು. ಆದ್ದರಿಂದಲೇ ಇಂಥವರ ಸಹವಾಸವು ಕೂಡ ತಮಸ್ಸಾಧನ ವೆಂದು ತಿಳಿಯಬೇಕು. ಎಂದು ಭಾಗವತ ತಾತ್ಪರ್ಯದ ಶ್ಲೋಕಾರ್ಥವು.

ಹೀಗೆ ಶ್ರೀ ಪರಮಾತ್ಮನು, ಜೀವನ ಯೋಗ್ಯತೆಯನ್ನೂ ಕರ್ಮವನ್ನೂ ಅರಿತು, ಅವನ ಮನಸ್ಸನ್ನು ಪ್ರೇರಿಸಿ, ಅವನಲ್ಲಿದ್ದು. ಮಾಡಿ, ಮಾಡಿಸಿ, ತ್ರಿವಿಧ ಜೀವರಿಗೆ ಅವರವರ ಕರ್ಮಾನುಸಾರ ಫಲವನ್ನುಣಿಸುವನು. ಜೀವನು

ಹೇಗೆ ಅನಾದಿಯೋ ಅವನ ಕರ್ಮವೂ ಹಾಗೆಯೇ ಅನಾದಿಯಾಗಿರುವುದು. ಹಾಗೆ ಮಾವಿನ ಹಣ್ಣಿನಲ್ಲಿ ಸಿಹಿಯೂ, ಬೇವಿನಕಾಯಿಯಲ್ಲಿ ಕಹಿಯೂ ಸ್ವಭಾವವಾಗಿ ಇರುವುವೋ ಹಾಗೆಯೇ ಸಾತ್ವಿಕರು, ರಾಜಸರು, ತಾಮಸ ರೆಂಬ ತ್ರಿವಿಧ ರಾಶಿಗಳು ಅನಾದಿಯಾಗಿರುವರು. ಆದುದರಿಂದ ಅವರವರ ಯೋಗ್ಯತಾನುಸಾರವಾಗಿ ಯಾರು ಯಾವ ಕುಲದಲ್ಲಿ ಜನಿಸಿದರೆ ಅವರ ಯೋ ಗ್ಯತಾನುಸಾರವಾದ ಭಕ್ತಿ ದ್ವೇಷಾದಿಗಳಿಂದ ಮುಕ್ತಿ, ತಮಸ್ಸು ಮೊದಲಾ ದವುಗಳನ್ನು ಸಾಧಿಸಬಹುದೋ ಅಂತಹಕುಲದಲ್ಲಿಯೇ ಅವರನ್ನು ಜನಿಸು ವಂತೆ ಮಾಡಿ, ಅದರಂತೆಯೇ ಮನಸ್ಸನ್ನು ಪ್ರೇರಿಸಿ, ಕರ್ಮಗಳನ್ನು ಮಾಡಿಸಿ, ಮುಕ್ತಿಯನ್ನೋ, ಮಿಶ್ರಲೋಕವನ್ನೋ, ತಮಸ್ಸನ್ನೋ ಕೊಡಿಸುವನು. ಕರ್ಮಾನುಸಾರವಾಗಿ ಫಲ ಕೊಡಿಸುವುದರಿಂದ ಪರಮಾತ್ಮನಿಗೆ ವೈಷಮ್ಯ ನೈರ್ಘಣ್ಯಾದಿಗಳು ಸಂಭವಿಸುವುದಿಲ್ಲವೆಂದು ತಿಳಿಯಬೇಕು. ' ಮನವನಿ ತ್ತರೆ ತನ್ನನೀವನು ' ಭಾಗವತ ದಶಮಸ್ಕಂಧದಲ್ಲಿ, ಗೋಪಿಕಾಸ್ತ್ರೀಯರು ಶ್ರೀ ಕೃಷ್ಣನ ಅಂಗಸಂಗದಿಂದ ತೃಪ್ತರಾಗಲು, ಪರಮಾತ್ಮನು ಅವರ ದರ್ಪ ವನ್ನು ಪರಿಹರಿಸುವುದಕ್ಕಾಗಿ ಕಣ್ಮರೆಯಾದನು. ಆಗ ಗೋಪಿಯರು ವನ ದಲ್ಲಿ ಎಲ್ಲಿ ಹುಡುಕಿದರೂ ಪರಮಾತ್ಮನನ್ನು ಕಾಣದೆ, ಕೊನೆಗೆ ತಮ್ಮ ಸ್ವಾ ತಂತ್ರ್ಯ ಕರ್ತೃತ್ವವನ್ನು ತೊರೆದು (ತನ್ಮನಸ್ಕಾ ತದಾಲಾಪಾಸ್ತದ್ವಿಚೇಷ್ಟಾಸ್ತ ದಾತ್ಮಿಕಾಃ । ತದ್ಗುಣಾನೇವಗಾಯಂತ್ಯೋ ನಾತ್ಮಾಗಾರಾಣಿ ಸ ಸ್ಮರುಃ ॥) ಆ ಪರಮಾತ್ಮನ ಪಾದಾರವಿಂದದಲ್ಲಿಯೇ ಮನಸ್ಸನ್ನಿಟ್ಟು ಆ ಕೃಷ್ಣನ ವಿಷ ಯವಾದ ಮಾತನ್ನೇ ಆಡುತ್ತಾ, ತತ್ಸಂಬಂಧವಾದ ಕರ್ಮಗಳನ್ನೇ ಆಚರಿ ಸುತ್ತಾ ಪ್ರಾಣವನ್ನು ಅವನಲ್ಲಿ ಒಪ್ಪಿಸಿ ಅವನ ಗುಣಗಳನ್ನೇ ಗಾನ ಮಾಡು ತ್ತಾ ಮನೆ ಬಾಗಿಲುಗಳನ್ನೂ ಬಿಟ್ಟು, ಹೆಚ್ಚಿಗೇಕೆ ? ತಮ್ಮ ದೇಹಗಳನ್ನೂ ಸಹ ಮರೆತು ಪರಮಾತ್ಮನನ್ನು ಸ್ತುತಿಸಲು ಪರಮಾತ್ಮನು ಪ್ರತ್ಯಕ್ಷನಾದನು. ಅಂದರೆ ಅವರಿಗೆ ತನ್ನನ್ನೇ ಕೊಟ್ಟನು. ಐಹಿಕ ಆಲಿಂಗನಾದಿಗಳಿಗಾಗಿ ತನ್ನ ಶರೀರವನ್ನೇ ಅವರಿಗೆ ಕೊಟ್ಟನು. ಪರಲೋಕದಲ್ಲಿ ತನ್ನ ಲೋಕವನ್ನು ಕೊಟ್ಟನು. ಇದೇ ಗೋಪಿಯರಿಗೆ ಪರಮಾತ್ಮನು ತನ್ನನ್ನು ಉಪಾಸನಾ ಮಾಡುವ ಕ್ರಮವನ್ನು ಉಪದೇಶ ಮಾಡಿರುತ್ತಾನೆ.

ಹೇಗೆಂದರೆ ' ಯಥಾ ಅಧನೋಲಬ್ಧಧನೇ ವಿನಷ್ಟೇ ತಚ್ಚಿಂತಯಾ 'ನ್ಯಾನ್ನಿಭೃತಂನವೇದ । ಏವಂ ಮದರ್ಥಾರ್ಪಿತ ಲೋಕವೇದ ಸ್ವಾನಾಂಹಿ

ವೋಮುಮ್ಯುಸು ವೃತ್ತಯೋ ಬಲಾಃ' ಎಂಬ ಸ್ತ್ರೀಯರುಗಳಿರಾ ಹೇಗ ಒಬ್ಬ ದರಿದ್ರನು ಅದೃಷ್ಟವಶದಿಂದ ಬಂದ ದ್ರವ್ಯವು ಇದ್ದಕ್ಕಿದ್ದಹಾಗೆಯೇ ನಾಶ ವಾದರೆ ಅವನು ಅದೇ ಚಿಂತೆಯಿಂದ ಮತ್ತಾವ ವಿಷಯುಗಳನ್ನೂ ಅರಿಯದೆ ಹೋಗುವನೂ ಹಾಗೆಯೇ, ಸರ್ವಸ್ವವನ್ನ ನನಗೋಸ್ಕರ ಒಪ್ಪಿಸಿರುವ ನಿಮ್ಮ ಮನಸ್ಸು ಅನ್ಯ ವಿಷಯುಗಳನ್ನು ಕಾಣಲಾರದು ಎಂದು ಹೇಳಿರುವನು. ಇಂತಹ ಉದಾಹರಣೆಗಳು ಅನೇಕವಾಗಿರುವುವು. ಆದುದರಿಂದ ದಾಸರಾ ಯರು 'ಮನವನಿತ್ತರೆ ತನ್ನನೀವನು' ಎಂದು ಹೇಳಿರುವರು. 'ತನುವ ದಂಡಿಸಿ ದಿನದಿನದಿ ಸಾಧನವ ಮಾಳ್ಪರಿಗಿತ್ತ್ಹನು ಸ್ವರ್ಗಾದಿ ಭೋಗಗಳ'

ಜನರು ಫಲಾಪೇಕ್ಷೆಯಿಂದ ಉಪವಾಸ, ಕೃಚ್ಛ್ರ ಚಾಂದ್ರಾಯಣಾದಿ ವ್ರತನಿಯಮಾದಿಗಳನ್ನೂ, ಯಾಗಾದಿಗಳನ್ನೂ, ಶರೀರದಂಡನ ಪೂರ್ವಕ ಸಾಧನವನ್ನು ಮಾಡಿದರೆ ಸ್ವರ್ಗಾದಿ ಲೋಕವನ್ನು ಮಾತ್ರವೇ ಕೊಡಿಸುವನು. ಅವರ ಯೋಗ್ಯತೆಯು ಅಷ್ಟೇ, ಅವರ ಮನಸ್ಸು ಪರಮಾತ್ಮನಲ್ಲಿ ದೃಢಭಕ್ತಿ ಯಿಂದ ನಿಲ್ಲುವುದಿಲ್ಲ. ಇದೇ ವಿಷಯುದಲ್ಲಿ ಒಂದು ಉದಾಹರಣೆ ಇರುವುದು! ಭಾಗವತ ದಶಮಸ್ಕಂಧದಲ್ಲಿ ಶ್ರೀ ಕೃಷ್ಣನು ಒಂದಾನೊಂದು ದಿವಸ ಗೋ ಪಾಲ ಬಾಲಕರಿಂದೊಡಗೂಡಿ ಗೋವುಗಳನ್ನು ಕಾಯುತ್ತಾ ಗೋಕುಲಕ್ಕೆ ಅತಿದೂರವಾಗಿ ಬಂದಿರಲು ಅಕಸ್ಮಾತ್ತಾಗಿ ಗೋಪಾಲರೆಲ್ಲರು ಬಲವತ್ತರ ವಾದ ಕ್ಷುದ್ಬಾಧೆಯಿಂದ ಪೀಡಿತರಾಗಿ ಕೃಷ್ಣ! ಕೃಷ್ಣ! ನಮ್ಮನ್ನು ಹಸಿವು ಬಹಳವಾಗಿ ಬಾಧಿಸುತ್ತಿರುವುದು. ನಮಗೆಲ್ಲೇ ಎಲ್ಲಾದರೂ ಅನ್ನವನ್ನು ಕೊಡಿಸಬೇಕೆಂದು ಬೇಡಿಕೊಂಡರು. ಆಗ ಶ್ರೀ ಪರಮಾತ್ಮನು ಎಲೈ ಬಾಲಕರುಗಳಿರಾ, ಇಲ್ಲಿಗೆ ಸಮೀಪದಲ್ಲಿ ಕೆಲವು ಬ್ರಾಹ್ಮಣರು ಯಾಗವನ್ನು ಮಾಡುತ್ತಿರುವರು. ಅವರಲ್ಲಿ ನಾನು ಇಲ್ಲಿಗೆ ಬಂದಿರುವುದಾಗಿ ಹೇಳಿ ಅನ್ನ ವನ್ನು ಕೇಳಿರಿ! ಎಂದು ಹೇಳಿ ಕಳುಹಿದನು. ಅದರಂತೆ ಆ ಗೋಪಾಲ ಬಾ ಲಕರು ಹೋಗಿ ಅನ್ನವನ್ನು ಬೇಡಲು, ಆ ಬ್ರಾಹ್ಮಣರು (ಕ್ಷುದ್ರಾಶಾಭೂರಿ ಕರ್ಮಾಣಃ ಬಾಲಿಶಾ ವೃದ್ಧಮಾನಿನಃ। ತದ್ಬ್ರಹ್ಮ ಪರಮಂ ಸಾಕ್ಷಾದ್ಭಗ ವಂತ ಮಧೋಕ್ಷಜಂ॥ ಮನುಷ್ಯ ಬುಧ್ಯಾದುಷ್ಪ್ರಜ್ಞಾ ಮರ್ತ್ಯಾತ್ಮನೋ ನಜಜ್ಞಿರೆ॥) ಅಲ್ಪವಾದ ಆಶೆಯುಳ್ಳವರಾಗಿಯೂ, ಬಹು ಕಷ್ಟ ಸಾಧ್ಯ ವಾದ ಕರ್ಮವನ್ನು ಮಾಡುವವರಾಗಿಯೂ, ಬಾಲ ಬುದ್ಧಿಯುಳ್ಳವರಾಗಿಯೂ ತಾವೇ ದೊಡ್ಡವರೆಂಬ ಭಾವನೆಯುಳ್ಳವರಾಗಿಯೂ ಇದ್ದುದರಿಂದ, ಅಂತಹ

ಪರಬ್ರಹ್ಮ ಸ್ವರೂಪನಾದ ಶ್ರೀ ಕೃಷ್ಣನನ್ನು ಮನುಷ್ಯನೆಂದು ಭಾವಿಸಿ, ಅನ್ನವನ್ನು ಕೊಡಲು ಒಪ್ಪಲಿಲ್ಲ. ಆಗ ಗೋಪಾಲ ಬಾಲಕರು ನಿರಾಶರಾಗಿ ಶ್ರೀ ಕೃಷ್ಣನಿಗೆ ಈ ವೃತ್ತಾಂತವನ್ನು ಅರಿಕೆ ಮಾಡಿದರು. ಪರಮಾತ್ಮನು, ಒಳ್ಳೆಯದಾಯಿತು ! ಇನ್ನೊಂದುಸಲ ಅಲ್ಲಿಗೆ ಹೋಗಿ ಆ ಬ್ರಾಹ್ಮಣರ ಪತ್ನಿಯರಲ್ಲಿ ನಾನು ಬಂದಿರುವುದನ್ನು ತಿಳಿಸಿ, ಅನ್ನವನ್ನು ಬೇಡಿರಿ ಎಂದು ಹೇಳಿದನು. ಅದರಂತೆಯೇ ಗೋಪಾಲ ಬಾಲಕರು ಯಜ್ಞಪತ್ನಿಯರ ಸಮೀಪಕ್ಕೆ ಬಂದು ನಮಸ್ಕರಿಸಿ ಅನ್ನವನ್ನು ಬೇಡಿದರು. " ಶ್ರುತ್ವಾಚ್ಯುತ ಮುಪಾಯಾಂತಂನಿತ್ಯಂ ತದ್ದರ್ಶನೋತ್ಸುಕಾಃ। ತತ್ಕಥಾಕ್ಷಿಪ್ತ ಮನಸೋ ಬಭೂವುರ್ಜಾತ ಸಂಭ್ರಮಾಃ॥ ಚತುರ್ವಿಧಂ ಬಹುಗುಣ ಮನ್ನಮಾದಾಯ ಭಾಜನೈಃ। ಅಭಿಸಸ್ರುಃ ಪ್ರಿಯಂ ಸರ್ವಾಃ ಸಮುದ್ರಮಿವನಿಮ್ನಗಾಃ॥ ನಿಷಿಧ್ಯಮಾನಾಃ ಪತಿಭಿರ್ಭ್ರಾತೃಭಿರ್ಬಂಧುಭಿಸ್ಸುತೈಃ । ಭಗವತ್ಯುತ್ತಮ ಶ್ಲೋಕೇ ದೀರ್ಘ ಶ್ರುತಧೃತಾಶಯಾಃ॥" ಶ್ರೀ ಕೃಷ್ಣನು ಅಲ್ಲಿಗೆ ಸಮೀಪವಾಗಿ ಬಂದಿರುವ ವೃತ್ತಾಂತವನ್ನು ಕೇಳಿದ ಬ್ರಾಹ್ಮಣರ ಪತ್ನಿಯರು ನಿತ್ಯವಲ್ಲಿಯೂ ಅವನನ್ನು ಕಾಣಬೇಕೆಂಬ ಲವಲವಿಕೆಯುಳ್ಳವರಾಗಿದ್ದುದರಿಂದ ತಕ್ಷಣವೇ ಹೊರಡಲು ಸಿದ್ಧರಾದರು. ನಿತ್ಯದಲ್ಲಿಯೂ ಅವನ ಮಹಿಮೆಯನ್ನು ಕೇಳಿ ಕೇಳಿ ಮನಸ್ಸೆಲ್ಲವೂ ಪರಮಾತ್ಮನಲ್ಲಿಯೇ ಲೀನವಾಗಿದ್ದಿತು. ಈ ವೃತ್ತಾಂತವನ್ನು ಕೇಳಿದ ಕೂಡಲೆ ಭಕ್ಷ್ಯ ಭೋಜ್ಯಗಳನ್ನು ತೆಗೆದುಕೊಂಡು ಮಹಾ ನದಿಗಳು ಸಮುದ್ರವನ್ನು ಸೇರುವಂತೆ ಹೊರಟುಬಿಟ್ಟರು. ಪತಿ ಪುತ್ರಾದಿಗಳು ಎಷ್ಟು ತಡೆದರೂ ಯಾರನ್ನೂ ಲಕ್ಷಿಸದೆ ಪುಣ್ಯಕೀರ್ತಿಯಾದ ಪರಮಾತ್ಮನ ಮಹಿಮೆಯನ್ನು ಬಹಳ ದಿವಸಗಳಿಂದ ಕೇಳಿ ಅದರಿಂದುಂಟಾದ ಪೂರ್ಣ ವಿಶ್ವಾಸದಿಂದ ಕೃಷ್ಣನ ಸಮೀಪವನ್ನು ಸೇರಿದರು. ಶ್ರೀ ಪರಮಾತ್ಮನು ಅವರನ್ನು ಆದರಿಸಿ, ಅವರು ತಂದ ಅನ್ನವನ್ನು ಸ್ವೀಕರಿಸಿ ಅವರಲ್ಲಿ ಪರಮಾನುಗ್ರಹವನ್ನು ಮಾಡಿ ಜ್ಞಾನೋಪದೇಶವನ್ನು ಕೊಟ್ಟು ಕಳುಹಿದನು.

ಈ ಸ್ತ್ರೀಯರು ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾಗಿ ಆತನನ್ನು ಕಂಡು ಬಂದುದನ್ನು ನೋಡಿ ಅವರ ಪತಿಗಳು ಪಶ್ಚಾತ್ತಪ್ತರಾಗಿ, ಆಹಾ ! " ಈ ಸ್ತ್ರೀಯರಿಗೆ ಪರಮಾತ್ಮನಲ್ಲಿ ಇರುವ ಭಕ್ತಿಯು ನಮಗೆ ಇಲ್ಲದೆ ಹೋಯಿತಲ್ಲಾ , ಇವರಿಗೆ ಬ್ರಾಹ್ಮಣ ಯೋಗ್ಯವಾದ ಉಪನಯನಾದಿ ಸಂಸ್ಕಾರವು! ಗುರುಕುಲವಾಸವು ! ತಪಸ್ಸು ! ಮೀಮಾಂಸಾದಿ ಶಾಸ್ತ್ರವಿಚಾರವು

ಯಾವುದೂ ಇಲ್ಲದಿದ್ದರೂ ಪರಮಾತ್ಮನಲ್ಲಿ ಪ್ರಕೃಷ್ಟತರವಾದ ಭಕ್ತಿಯು ಮಾತ್ರ ಇವೆ. ನಾವು ಸಂಸ್ಕಾರಾದಿಗಳಿಂದ ಕೂಡಿದವರಾಗಿದ್ದರೂ ನಮಗೆ ಇಂತಹ ಭಕ್ತಿಯು ಇಲ್ಲದೆಹೋಯಿತು. ನಮ್ಮ ಜನ್ಮಕ್ಕೂ, ನಮ್ಮ ವಿದ್ಯೆಗೂ, ನಮ್ಮ ಕರ್ಮಕ್ಕೂ ಧಿಕ್ಕಾರವಿರಲಿ. ಶ್ರೀ ಪರಮಾತ್ಮನು ನಮಗೆ ತನ್ನ ಮಹಿಮೆಯನ್ನು ಜ್ಞಾಪಿಸಿ ನಮ್ಮನ್ನು ಉದ್ಧರಿಸುವುದಕ್ಕಾಗಿಯೇ ಈ ಅನ್ನವನ್ನು ಯಾಚನೆ ಮಾಡಿದ್ದು. ಇಲ್ಲವಾದರೆ ಪೂರ್ಣಕಾಮನಾದ ಪರಮಾತ್ಮನಿಗೆ ನಮ್ಮ ಅನ್ನದಿಂದ ಆಗುವುದೇನು? ಎಂದು ಯೋಚಿಸಿ ಕೃತಾರ್ಥರಾಗಲು ಪ್ರಯತ್ನಿಸಿದರು. ಆದುದರಿಂದ ಬರೇ ದೇಹದಂಡನೆ ಮಾಡಿ ಕಾಮ್ಯ ವ್ರತಾದಿಗಳು ಮಾಡುವುದರಿಂದ ಉಂಟಾಗುವವು ನಶ್ವರವಾದ ಸ್ವರ್ಗಗಳೇ ಎಂದು ಇದರಿಂದ ತಿಳಿಯಿತು. ಆದರೆ ನಿತ್ಯಕರ್ಮಗಳಾದ ಸಂಧ್ಯಾವಂದನ, ಏಕದಶ್ಯಾದಿ ವ್ರತ ಮೊದಲಾದವುಗಳನ್ನು ಬಿಡಬೇಕೆಂದರ್ಥವಲ್ಲ. "ನಕರ್ಮಣಾ ಮನಾರಂಭಾನ್ನೈಷ್ಕರ್ಮ್ಯಂ ಪುರುಷೋಶ್ನುತೇ । ನಚಸನ್ಯಸನಾ ದೇವಸಿದ್ಧಿಂ ಸಮಧಿಗಚ್ಛತಿ ॥ ನಿಯತಂ ಕುರುಕರ್ಮತ್ವಂ ಕರ್ಮಜ್ಯಾಯೋಹ್ಯ ಕರ್ಮಣಃ । ತದರ್ಥಂ ಕರ್ಮಕೌಂತೇಯ ಮುಕ್ತಸಂಗಃ ಸಮಾಚರ" ಎಂದು ಗೀತಾ ವಾಕ್ಯಗಳಿರುವುವು. ಸಕಲ ಕರ್ಮಗಳನ್ನು ಬಿಡುವುದೇ ನೈಷ್ಕರ್ಮ್ಯವೆಂದಲ್ಲ. ಕಾಮ್ಯ ಕರ್ಮತ್ಯಾಗದಿಂದಲೇ ಪುರುಷನು ಸಿದ್ಧಿಯನ್ನು ಹೊಂದುವುದಿಲ್ಲ. ವರ್ಣಾಶ್ರಮ ವಿಹಿತವಾದ ನಿತ್ಯಕರ್ಮವನ್ನು ಮಾಡು. "ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ" ಅಂದರೆ ಕರ್ಮದ ಫಲಾಪೇಕ್ಷೆಯನ್ನು ಬಿಟ್ಟು ಶ್ರೀ ವಿಷ್ಣು ಪ್ರೀತಿಗಾಗಿ ಕರ್ಮವನ್ನು ಮಾಡು ಎಂದರ್ಥ. ಇದು ಗೀತಾ ಶ್ಲೋಕದ ಸಾಮಾನ್ಯ ಅರ್ಥವಾದರೂ ಇದಕ್ಕೆ ಶ್ರೀ ಮಂತ್ರಾಲಯ ಸ್ವಾಮಿಗಳವರ ವ್ಯಾಖ್ಯಾನದಲ್ಲಿ ಈ ರೀತಿ ಅರ್ಥ ಮಾಡಿರುವರು :—

"ನಚೇತಿ-ಸನ್ಯಸನಾತ್=ಕಾಮ್ಯಕರ್ಮಕರಣಾದೇವ । ತನ್ಮಾತ್ರಾದಿತಿ ಯಾವತ್ । ಅನೇನ ನಿವೃತ್ತ ಕರ್ಮಕರಣ ಮುಪಲಕ್ಷ್ಯತೆ। ನಿವೃತ್ತ ಕರ್ಮಕರಣ ಮಾತ್ರಾತ್ಸಿದ್ಧಿಂ ಮೋಕ್ಷಂ ಪುರುಷೋ ನ ಸಮಧಿಗಚ್ಛತಿ। ನಪ್ರಾಪ್ನೋತಿ। ಕಿಂತ ತೇನಾಂತಃಕರಣ ಶುದ್ಧಿ ವಿಷಯ ವೈರಾಗ್ಯಶ್ರವಣ ಮನನಧ್ಯಾನ ಜ್ಞಾನದ್ವಾರೈವ। "ನಚಸನ್ಯ ಸನಾದೇವ" ಕಾಮ್ಯಕರ್ಮಗಳನ್ನ ಬಿಡುವುದರಿಂದಲೇ ಮುಕ್ತಿಯು ಹೊರಕಧು. ಅಂದರೆ ನಿವೃತ್ತ ಕರ್ಮಾಚರಣೆಯನ್ನು ಮಾಡಬೇಕೆಂದು ಸೂಚಿಸಿದಂತಾಯಿತು. ಆದರೂ

ನಿವೃತ್ತ ಕರ್ಮಾಚರಣದಿಂದಲೇ ಪುರುಷನು ಮುಕ್ತಿಯನ್ನು ಹೊಂದುವುದಿಲ್ಲ. ಮತ್ತಾವುದರಿಂದ ಅಂದರೆ, ಅಂತಃಕರಣ ಶುದ್ಧಿಯಿಂದಲೂ, ವಿಷಯಸುಖಗಳಲ್ಲಿ ವೈರಾಗ್ಯದಿಂದಲೂ, ಪರಮಾತ್ಮನ ಕಥಾಶ್ರವಣ, ಅದನ್ನು ಮನನ ಮಾಡುವುದು. ನೈಮರತು ಧ್ಯಾನ ಮಾಡುವುದು, ತಜ್ಜನ್ಯ ಜ್ಞಾನದ್ವಾರದಿಂದಲೇ ಮುಕ್ತಿಯಾಗುವುವೆಂದು ಹೇಳಿರುವರು. ಹೀಗಿರುವುದರಿಂದ ಮುಖ್ಯವಾದ ನಿತ್ಯಕರ್ಮಗಳನ್ನು ಮಾಡುತ್ತಾ, ಪರಮಾತ್ಮನ ಮಹಿಮೆಯನ್ನು ಇತರರು ಗಾನಾದಿಗಳನ್ನು ಮಾಡುವಾಗ ತಾನು ಕೇಳುತ್ತಾ, ಕೇಳಿದುದನ್ನು ಅರ್ಥಾನುಸಂಧಾನ ಮಾಡುತ್ತಾ, ತಾನೂ ಪಾಡುತ್ತಾ, ಮನಸ್ಸಿನಲ್ಲಿ ಧ್ಯಾನಿಸುತ್ತಿರುವುದರಿಂದಲೇ ಮುಕ್ತಿಯಾಗುವುವೆಂಬ ಅಭಿಪ್ರಾಯವೇ ದಾಸರಾಯರದೆಂದು ತಿಳಿಯಬೇಕು. ಇದೇ ಅಭಿಪ್ರಾಯವನ್ನು ಶ್ರೀಮಜ್ಜಗನ್ನಾಥದಾಸರಾಯರು ಮಾಡಿರುವ ಮತ್ತೊಂದು ಪದವಲ್ಲಿ " ಸ್ವೋಚಿತ ಕರ್ಮಗಳಾಚರಿಸುತ" ಎಂದು ಹೇಳಿರುವರು. ಇವುಗಳಿಂದ ತಿಳಿದುಬಂದ ಅಂಶವಾವುದೆಂದರೆ :–ಅಂತಃಕರಣ ಶುದ್ಧಿಯೂ, ವಿಷಯ ವೈರಾಗ್ಯವೂ, ಶ್ರವಣ, ಮನನ, ಧ್ಯಾನಾದಿಗಳಿಂದಲ್ಲದೆ ಬರೀ ದೇಹದಂಡನಾದಿಗಳಿಂದ ಉಂಟಾಗುವುದಿಲ್ಲ. ವ್ರತ ನಿಯಮಾದಿಗಳ ಫಲವು ಸ್ವರ್ಗಾದಿಗಳೇ ಹೊರತು ಮುಕ್ತಿಗೆ ಸಾಧನವಲ್ಲವೆಂದು ತಿಳಿಯಬೇಕು.

ಅವತಾರಿಕೆ.—ಮೇಲಿನ ಪದ್ಯದಲ್ಲಿ ಹೇಳಿದ " ಮನವನಿತ್ತರೆ ತನ್ನನೀವನು " ಎಂಬ ವಿಷಯವನ್ನೇ ಈ ಪದ್ಯದಿಂದ ವಿಶದಪಡಿಸುತ್ತಾರೆ :—

**ಪರಮ ಸತ್ಪುರುಷಾರ್ಥ ರೂಪನು**
**ಹರಿಯು ಲೋಕಕೆಯೆಂದು ಪರಮಾ**
**ದರದಿ ಸದುಪಾಸನೆಯ ಗೈವರಿಗಿತ್ತಪನು ತನ್ನ ॥**
**ಮರೆದು ಧರ್ಮಾರ್ಥಗಳ ಕಾಮಿಸು**
**ವರಿಗೆ ನಗುತತಿ ಶೀಘ್ರದಿಂದಲಿ**
**ಸುರಪತನಯ ಸುಯೋಧನರಿಗಿತ್ತಂತೆ ಕೊಡುತಿಪ್ಪ ॥ ೭ ॥**

ಪದ್ಯಾರ್ಥ.—ಹರಿಯು=ಶ್ರೀ ಪರಮಾತ್ಮನು, ಲೋಕಕೆ=ಲೋಕಕ್ಕೆ, ಪರಮ ಸತ್ಪುರುಷಾರ್ಥರೂಪನು = ಅತ್ಯಂತ ಸುಖಕರವಾದ ಮೋಕ್ಷಾದಿ ಪುರುಷಾರ್ಥಗಳನ್ನು ಕೊಡುವ ಸ್ವತಂತ್ರ ಸ್ವರೂಪ ಉಳ್ಳವನು. ಎಂದು,

ಪರಮಾದರದಿ=ಪರಮಾದರದಿಂದ, ಸದುಪಾಸನೆಯ = ಸಮೀಚೀನವಾದ ಅಂದರೆ ಫಲಾಪೇಕ್ಷೆ ಇಲ್ಲದೆ ಕೇವಲ ಭಗವತ್ಪ್ರೀತಿಗೋಸ್ಕರವೇ ಉಪಾಸನೆಯನ್ನು, ಗೈವರಿಗೆ-ಮಾಡುವವರಿಗೆ, ತನ್ನ=ತನ್ನನ್ನು, ಸರ್ವಕಾಲದಲ್ಲಿಯೂ ನೋಡಬಹುದಾದ ಲೋಕವನ್ನು, ಅಂದರೆ ಮುಕ್ತಿಯನ್ನು, ಇತ್ತಪನು= ಕೊಡುವನು. (ತನ್ನ) ತನ್ನನ್ನು, ಮರೆದು=ಮರೆತು, ಧರ್ಮಾರ್ಥಗಳ=ಧರ್ಮ= ಯಾಗದಾನಾದಿ ಧರ್ಮಗಳಿಂದುಂಟಾಗುವ, ಅರ್ಥಗಳ= ಫಲ ರೂಪವಾದ ಸುಖವನ್ನು ಮಾತ್ರ, ಕಾಮಿಸುವವರಿಗೆ= ಅಪೇಕ್ಷಿಸುವವರಿಗೆ, ನಗುತ್ತಾ, ಅತಿ ಶೀಘ್ರದಿಂದಲಿ, ಸುರಪತನಯ ಸುಯೋಧನರಿಗೆ=ಸುರಪತನಯ=ಇಂದ್ರನ ಮಗನಾದ ಅರ್ಜುನನಿಗೂ, ಸುಯೋಧನರಿಗೆ = ದುರ್ಯೋಧನನಿಗೂ, ಇತ್ತಂತೆ=ಕೊಟ್ಟಂತೆ, ಕೊಡುತಿಪ್ಪ=ಕೊಡುತ್ತಿರುವನು.

ತಾತ್ಪರ್ಯ.—ಶ್ರೀ ಪರಮಾತ್ಮನು ಸ್ವತಂತ್ರನು. ರಮಾ ಬ್ರಹ್ಮಾದಿ ಚರಾಚರಾಖ್ಯವಾದ ಪ್ರಪಂಚಕ್ಕೆ ಅಧಿಪನು ; ಸರ್ವ ಚೇತನರಿಗೂ ಧರ್ಮ, ಅರ್ಥ, ಕಾಮ ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನು ಕೊಡುವವನು. ಸಕಲ ಪ್ರಾಣಿಗಳಿಗೂ ಅವನ ಅಧೀನರೆಂದು ತಿಳಿದು ಉಪಾಸನೆ ಮಾಡುವವರಿಗೆ ಮೋಕ್ಷವನ್ನು, ಇತ್ತು ಸಲಹುವನು. ಪರಮಾತ್ಮನನ್ನು ಮರೆತು ಕೇವಲ ಧರ್ಮಾದಿಗಳನ್ನು ಆಚರಿಸಿ, ಅದರ ಅರ್ಥವನ್ನು ಅಂದರೆ-ಅವರ ಫಲವಾದ ಸುಖವನ್ನು ಬಯಿಸುವವರಿಗೆ ಅರ್ಜುನ ದುರ್ಯೋಧನರಿಗೆ ಕೊಟ್ಟಂತೆ ಭಜನಕ್ಕನುಗುಣವಾದ ಫಲವನ್ನು ಅತಿ ಶೀಘ್ರದಲ್ಲಿ ಕೊಡುವನು.

ವಿಶೇಷಾರ್ಥ.—"ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚರ। ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ ॥ ಮಾಕರ್ಮ ಫಲಹೇತುರ್ಭೂರ್ಮಾತೇ ಸಂಗೋಽಸ್ತ್ವಕರ್ಮಣಿ" ಎಂಬೀ ಗೀತಾ ವಾಕ್ಯಗಳಂತೆ ಫಲಾಪೇಕ್ಷೆಯನ್ನು ಬಿಟ್ಟು ಕರ್ಮವನ್ನು ಮಾಡು. ಎಲೈ ಅರ್ಜುನ! ನಿನಗೆ ಮಾಡುವುದಕ್ಕೆ ಮಾತ್ರ ಅಧಿಕಾರವೇ ಹೊರತು ಫಲವನ್ನು ಹೊಂದುವ ಸ್ವತಂತ್ರವಿಲ್ಲ. (ಫಲವನ್ನು ಕೊಡುವ ಅಧಿಕಾರವು ಪರಮಾತ್ಮನದು ಎಂದು ಭಾವವು). ಆದುದರಿಂದ ಕರ್ಮದ ಫಲಕ್ಕೆ ಅಧಿಕಾರಿ ನೀನೆಂದು ತಿಳಿಯಬೇಡ. ಹಾಗಾದರೆ ಕರ್ಮವನ್ನೇ ಮಾಡುವುದಿಲ್ಲವೆಂದು ಬಿಡಕೂಡದು. ಎಂದು ಶ್ರೀ ಕೃಷ್ಣನು ಅರ್ಜುನನಿಗೆ ಉಪದೇಶ ಮಾಡಿರುವನು. ಇದರಂತೆ

ಫಲಾಪೇಕ್ಷೆ ಇಲ್ಲದೆ ಕರ್ಮ ಮಾಡುವುದಕ್ಕೆ ನೈಷ್ಕರ್ಮ್ಯವೆಂದು ಹೆಸರು. ಇಂತಹ ನಿಷ್ಕಾಮ ಕರ್ಮಾನುಷ್ಠಾನದಿಂದಲೇ ಮುಕ್ತಿಯಾಗುವುದೆಂದು ಗೀತಾ ವಾಕ್ಯಗಳಿಗೆ ಅರ್ಥವು.

ಶ್ರೀ ಮಂತ್ರಾಲಯ ಸ್ವಾಮಿಗಳವರ ಗೀತಾವಿವೃತ್ತಿ ಎಂಬ ವ್ಯಾಖ್ಯಾನದಲ್ಲಿ ಅದರ ಅರ್ಥವನ್ನೂ, ಅಭಿಪ್ರಾಯವನ್ನೂ, ಉಪಾಸನಾ ಕ್ರಮವನ್ನೂ ವಿಶದಮಾಡಿ ತೋರಿಸಿರುತ್ತಾರೆ. ಸ್ಥಳ ಸಂಕೋಚದಿಂದ ಇಲ್ಲಿ ಅವುಗಳನ್ನು ಬರೆಯಲು ಸಾಧ್ಯವಿಲ್ಲ.

ಭಾಗವತ ಪ್ರಥಮ ಸ್ಕಂಧದಲ್ಲಿ "ನೈಷ್ಕರ್ಮ್ಯಮಪ್ಯಚ್ಯುತ ಭಾವ ವರ್ಜಿತಂ ನಶೋಭತೇ ಜ್ಞಾನಮಲಂ ನಿರಂಜನಂ" ನಿಷ್ಕಾಮ ಕರ್ಮಾನುಷ್ಠಾನವನ್ನೇ ಮಾಡುತ್ತಿದ್ದರೂ, ಅದರಿಂದುಂಟಾದ ಜ್ಞಾನವು ನಿರ್ದುಷ್ಟವಾಗಿದ್ದರೂ, ಪರಮಾತ್ಮನಲ್ಲಿ, ದೃಢವಾದ ಭಕ್ತಿ ಇಲ್ಲದಿದ್ದರೆ ಆ ನಿರ್ದುಷ್ಟ ಜ್ಞಾನವೂ ನಿಷ್ಕಾಮ ಕರ್ಮವೂ ಮುಕ್ತಿಗೆ ಸಾಧನವಾಗವು ಎಂದು ಹೇಳಿರುವರು. ಆದುದರಿಂದ ಭಕ್ತಿ ಇಲ್ಲದೆ ಮಾಡುವ ಸಾಧನವು ಪ್ರಯೋಜನಕಾರಿಯಲ್ಲ. ಪರಮಾತ್ಮನನ್ನು ಪರಮ ಭಕ್ತಿಯಿಂದ ಉಪಾಸನೆ ಮಾಡುವುದರಿಂದಲೇ ಮುಕ್ತಿಯಾಗುವುದೆಂಬುವುದನ್ನು "ಪರಮ ಸತ್ಪುರುಷಾರ್ಥ ರೂಪನು ಹರಿಯು" ಎಂಬ ಪದದಿಂದ ತೋರಿಸಿರುವರು. ಇದರರ್ಥವನ್ನು ಪದ್ಯಾರ್ಥದಲ್ಲಿ ಒಂದು ಬಗೆಯಾಗಿ ತೋರಿಸಿದೆ. ಇದಕ್ಕೆ ಮತ್ತೊಂದು ಅರ್ಥ ಉಂಟು. ಪರಮಸತ್ಪುರುಷ=ಮಹಾ ಭಗವದ್ಭಕ್ತ ಶಿಖಾಮಣಿಗೆ, ಅರ್ಥರೂಪನು=ಧನರೂಪನು. ಅಂದರೆ ಭಕ್ತರು ತಾವು ಕುಚೇಲನಂತೆ ಬಡವರಾಗಿದ್ದರೂ ಪರಮಾತ್ಮನೇ ನಮಗೆ ಧನವು, ಅವನಿಗಿಂತಲೂ ಬೇರೆ ದ್ರವ್ಯವನ್ನು ನಾವು ಬೇಡುವುದಿಲ್ಲ ಅನ್ನುವರು. ಭಾಗವತ ಚತುರ್ಥಸ್ಕಂಧದಲ್ಲಿ "ಹರಿರಧನಾತ್ಮ ಧನಪ್ರಿಯೋರಸಜ್ಞಃ" ತನ್ನ ಭಕ್ತರ ಯೋಗ್ಯತೆಯನ್ನು ಅರಿತ-ಪರಮಾತ್ಮನು ಅವರು ದರಿದ್ರರಾಗಿದ್ದರೂ ತನ್ನನ್ನೇ ಧನವೆಂದು ಭಾವಿಸುವವರು ಯಾರೋ-ಅಂದರೆ ಧನದಲ್ಲಿ ಅವರಿಗೆ ಇರುವ ಪ್ರೀತಿಗಿಂತಲೂ ಹೆಚ್ಚಿನ ಪ್ರೀತಿಯನ್ನು ತನ್ನಲ್ಲಿ ಇಟ್ಟು ಧನಾದಿಗಳನ್ನು ಹೆಂಚು, ಕಲ್ಲು ಮೊದಲಾದುವಕ್ಕೆ ಸಮವನ್ನಾಗಿ ಭಾವಿಸುವವರೆಂದು ಅರ್ಥ. ಅಂತಹವರಲ್ಲಿ ಪ್ರೀತಿಯನ್ನು ಮಾಡುವನು. ಈ ಕಾರಣದಿಂದ ಪರಮಾತ್ಮನನ್ನು "ಅಧನಾತ್ಮ ಧನಪ್ರಿಯ" ನೆಂದು ಭಾಗವತದಲ್ಲಿ ಹೇಳಿರುವರು. ಅದೇ ಅರ್ಥ

ವನ್ನೇ ದಾಸರಾಯರು "ಸತ್ಪುರುಷಾರ್ಥರೂಪ" ನೆಂದು ಹೇಳಿದುವರು. ಇದೂ ಅಲ್ಲವೆ ಪರಮಾತ್ಮನು-ಸ್ವತಂತ್ರನು, ಜೀವನು-ಅಸ್ವತಂತ್ರನು, ಪರಮಾತ್ಮನು-ಕ್ಲೇಶರಹಿತನು, ಜೀವನು-ಮರಣಾದಿ ಅನಂತಾನಂತ ದುಃಖ ಯುಕ್ತನು ಎಂಬ ಇವೇ ಮೊದಲಾದ ಭೇದಗಳು ಪರಮಾತ್ಮನಿಗೂ-ಜೀವನಿಗೂ ಇರುವುವೆಂತಲೂ, ರಮಾಬ್ರಹ್ಮಾದಿಗಳೆಲ್ಲರೂ ಪರಮಾತ್ಮನ ವಶದಲ್ಲಿರುವರು ಎಂತಲೂ ತಿಳಿದು. ಉಪಾಸನೆ ಮಾಡುವುದೇ ಸದುಪಾಸನೆ. ಇಂತಹ ಸದುಪಾಸನೆಯನ್ನು ಮಾಡುವವರಿಗೆ ಇಹಪರಂಗಳಲ್ಲಿ ಪರಮಾತ್ಮನು ತನ್ನ ಸಂದರ್ಶನವನ್ನು ಯಾವಾಗಲೂ ದೊರೆಯುವಂತೆ ಮಾಡುವನು.

ಮೇಲಿನ ಪದ್ಯದಲ್ಲಿ ಹೇಳಿದ "ತನುವದಂಡಿಸಿ ದಿನದಿನದಿ ಸಾಧನವ ಮಾಳ್ಪರಿಗಿತ್ತಪನು ಸ್ವರ್ಗಾದಿ ಭೋಗಗಳ" ಎಂಬ ಪದ್ಯದಿಂದಲೂ "ಪರಮಸತ್ಪುರುಷಾರ್ಥ ರೂಪನು ಹರಿ" ಎಂದು ಉಪಾಸನೆಯನ್ನು ಮಾಡುವವರಿಗೆ ತನ್ನ ದರ್ಶನವನ್ನು ಯಾವಾಗಲೂ ಕೊಡುತ್ತಿರುವನು ಎಂಬ ಪದ್ಯಾರ್ಥದಿಂದಲೂ ತಿಳಿಯಬೇಕಾದ ಮುಖ್ಯಾಂಶವೇನೆಂದರೆ :—ದೇಹವನ್ನು ದಂಡಿಸಿ ತಪಸ್ಸನ್ನಾಚರಿಸುವುದು ನಿತ್ಯವಾದ ಫಲಕ್ಕಲ್ಲ. ಏಕೆಂದರೆ ; ಯಾವ ಉದ್ದೇಶ್ಯವಾಗಿ ಇವನು ತಪಸ್ಸನ್ನಾಚರಿಸುವನೋ ಅದರ ಫಲ ಪ್ರಾಪ್ತಿರೂಪವಾದ ವರವನ್ನು ಪಡೆದ ಕೂಡಲೇ ಆ ದೇಹದಂಡನೆಯನ್ನು ನಿಲ್ಲಿಸಿ ತನ್ನ ವಿಷಯಾದಿ ಭೋಗಗಳಲ್ಲಿ ಆಸಕ್ತನಾಗುವನು. ಹಾಗಲ್ಲದೆ ಸರ್ವದಾ ಮನಸ್ಸನ್ನು ಪರಮಾತ್ಮನಲ್ಲೇ ಇಟ್ಟು ತಾನು ಸ್ನಾನ ಮಾಡುವುದು ಭಗವತ್ಸೇವಾ, ಏಳುವುದು, ಕೂಡುವುದು, ಮಾತಾಡುವುದೆಲ್ಲವೂ ಭಗವತ್ಸೇವೆ ಎಂದೇ ಭಾವಿಸಿ, ಸರ್ವದಾ ಚಿಂತನೆಮಾಡುವವರಿಗೆ ಇದು ನಿತ್ಯವಾಗಿರುವುದು.

ಭಾಗವತ ಪ್ರಥಮ ಸ್ಕಂಧದಲ್ಲಿ ನಾರದರು ವೇದವ್ಯಾಸರನ್ನು ಕುರಿತು "ಏತತ್ಸಂಸೂಚಿತಂ ಬ್ರಹ್ಮ ತಾಪತ್ರಯ ಚಿಕಿತ್ಸಿತಂ। ಯದೀಶ್ವರೇ ಭಗವತಿ ಕರ್ಮಬ್ರಹ್ಮಣಿ ಭಾವಿತಂ ॥ ಆಮಯೋಯಂಚ ಭೂತಾನಾಂ ಜಾಯತೇ ಯೇನ ಸುವ್ರತ। ತದೇವಹ್ಯಾಮಯ ದ್ರವ್ಯಂ ತತ್ಪುನಾತಿ ಚಿಕಿತ್ಸಿತಂ ॥ ಏವಂ ನೃಣಾಂ ಕ್ರಿಯಾ ಯೋಗಾಃ ಸರ್ವೇ ಸಂಸೃತಿ ಹೇತವತಿ ॥ ತ ಏವಾತ್ಮ ವಿನಾಶಾಯ ಕಲ್ಪಂತೇ ಕಲ್ಪಿತಾಃ ಪರೇ ॥" ಎಂದು ಹೇಳಿರುವರು. ಇದರ ಅರ್ಥ—ಎಲೈ ಬ್ರಾಹ್ಮಣೋತ್ತಮ! ನನ್ನ ಅನುಭವದಿಂದ ನನಗೆ ತಿಳಿದ ಅಂಶವೇನೆಂದರೆ, ನಾವು ಮಾಡುವ ಸಕಲ ಕರ್ಮಗಳನ್ನೂ ಭಗವತ್ಸೇವೆ

ಎಂದು ಭಾವಿಸುವುದೇ ನಮ್ಮ ತಾಪತ್ರಯಗಳಿಗೆ ಔಷಧವು. ಮನುಷ್ಯ ನನ್ನು ಕೊಲ್ಲಲು ಸಾಧನವಾದ, ಪಾಷಾಣ, ವತ್ಸನಾಭಿ ಮೊದಲಾದ ವಿಷ ಪದಾರ್ಥಗಳನ್ನು ಚನ್ನಾಗಿ ಶುದ್ಧಿ ಮಾಡಿ ಮಾತ್ರೆಗಳನ್ನಾಗಿ ಮಾಡಿಕೊಂಡು ಮಹಾ ರೋಗಗಳಿಗೆ ಅವುಗಳನ್ನು ವೈದ್ಯರು ಉಪಯೋಗಿಸುವುದರಿಂದ ರೋಗಗಳು ಪರಿಹಾರವಾಗುವುವು. ಅದರಂತೆಯೇ ಅನುರಾಗದಿಂದ ದೇಹ ಸುಖಕ್ಕಾಗಿ ನಾವು ಮಾಡುವ ಕರ್ಮಗಳೆಲ್ಲವೂ ನರಕಕ್ಕೆ ಸಾಧನವಾಗುವುವು. ಅವೇ ಕರ್ಮಗಳನ್ನು ಭಗವತ್ಪ್ರೀತಿಗಾಗಿ ಮಾಡಿದರೆ ಶುದ್ಧಿಮಾಡಿದ ಪಾಷಾ ಣಾದಿಗಳಂತೆ ಭವರೋಗವನ್ನು ಪರಿಹರಿಸಿ ಮುಕ್ತಿಯನ್ನು ಕೊಡಿಸುವುವು. ಅದರ ವಿಧಾನ ಹೇಗೆಂದರೆ, ನಾವು ಸ್ನಾನ ಮಾಡುವಾಗ ಮೈ ಕೊಳೆ ಹೋಗುವುದಕ್ಕಾಗಿ ಸ್ನಾನ ಮಾಡುತ್ತೇವೆಂದು ಭಾವಿಸದೆ ದೇಹವು ಪರಮಾ ತ್ಮನು ವಾಸ ಮಾಡಲರ್ಹವಾದ ಒಂದು ರಥವು ಅಂತಹ ರಥವನ್ನು ಶುದ್ಧಿ ಮಾಡುವುದಕ್ಕಾಗಿ ತೊಳೆಯುತ್ತೇವೆ ಎಂದು ಭಾವಿಸುವುದೇ ಮುಕ್ತಿಗೆ ಸಾಧನ. ಹಾಗೆಯೇ ದೇಹವನ್ನು ಅಲಂಕರಿಸುವುದು ಜನಮೆಚ್ಚಿಕೆಗೆ ಎಂದು ಭಾವಿಸಿದರೆ ನರಕಸಾಧನೆ. ಭಗವಂತನು ಕೂಡುವ ರಥವಾದುದರಿಂದ ಪರ ಮಾತ್ಮನ ಪ್ರೀತ್ಯರ್ಥವಾಗಿ ದೇಹವನ್ನು ಅಲಂಕರಿಸುತ್ತೇವೆಂದು ಭಾವಿಸಿದರೆ ಅದು ಮುಕ್ತಿಗೆ ಸಾಧನವು. ಭಕ್ಷ್ಯ ಭೋಜ್ಯಾದಿಗಳನ್ನು ತನಗೋಸ್ಕರವಾಗಿ ಮಾಡಿಸಿದರೆ ನರಕಸಾಧನೆ, ಅವೇ ಭಕ್ಷ್ಯಾದಿಗಳನ್ನು ಪರಮಾತ್ಮನ ನಿವೇದನ ಕ್ಕೆಂದು ಮಾಡಿಸಿದರೆ ಪರಮಾತ್ಮನು ಪ್ರೀತನಾಗಿ ಮುಕ್ತಿಗೆ ಸಾಧನವಾಗು ವುದು. ಹೆಚ್ಚಿಗೇಕೆ! ಹೀಗೆ ತಾನು ಮಾಡುವ ಒಂದಾನೊಂದು ಕಾರ್ಯವ ನ್ನೂ ತನ್ನ ಸುಖಕ್ಕೆಂವೇ ಭಾವಿಸಿದರೆ ನರಕಸಾಧನವಾಗುವುದು. ಭಗವತ್ಪ್ರೀ ತ್ಯರ್ಥವಾಗಿ ಮಾಡಲು ಅದೇ ಮುಕ್ತಿ ಸಾಧನವಾಗುವುದು ಎಂಬುದೇ ನಾರ ದರ ವಾಕ್ಯದ ಅಭಿಪ್ರಾಯವು. ಇದಕ್ಕೆ ಉದಾಹರಣೆ ಧ್ರುವನಿಗೂ, ಪ್ರಹ್ಲಾ ದನಿಗೂ ಇರುವ ಭೇದವೇ ಸಾಕ್ಷಿಯು. ಧ್ರುವನು ದೇಹವನ್ನು ದಂಡಿಸಿ, ೫ ತಿಂಗಳು ದಿವಸ ಬಹಳ ಕಷ್ಟಸಾಧ್ಯವಾದ ತಪಸ್ಸನ್ನು ಮಾಡಿದನು. ಪರ ಮಾತ್ಮನು ಅವನಿಗೆ ಪ್ರತ್ಯಕ್ಷನಾಗಿ ೩೬ ಸಹಸ್ರ ವರ್ಷಗಳವರಿವಿಗೂ ಭೂ ಮಿಯಲ್ಲಿ ರಾಜ್ಯಪರಿಪಾಲನೆಯನ್ನೂ-ತದನಂತರ ಧ್ರುವಾಧಿಪತ್ಯವನ್ನೂ ಕೊ ಟ್ಟನು. ಧ್ರುವಸ್ಥಾನವು ಸ್ವರ್ಗ ಲೋಕಕ್ಕಿಂತಲೂ ಕೆಳಗಡೆ ಇರುವ ಸ್ಥಾನವು ಅದನ್ನಿತ್ತನು. ೫ ತಿಂಗಳು ತಪಸ್ಸಾದಮೇಲೆ ಪರಮಾತ್ಮನು ಪ್ರತ್ಯಕ್ಷನಾಗಿ

ವರ ಕೊಟ್ಟಿದ್ದು ಎಷ್ಟೋ ಅಷ್ಟೇ ಅದರ ಫಲವು. ಪುನಹ ಅವನಿಗೆ ಭಗವದ್ದರ್ಶನವಿಲ್ಲ. ಪ್ರಹ್ಲಾದನು ಇಂತಹ ದೇಹದಂಡನವೇನೂ ಮಾಡಲಿಲ್ಲ. "ಆಸೀನಃ ಪರ್ಯಟನ್ನಶ್ನನ್ ಶಯಾನ ಪ್ರಪಿಬನ್ ಬ್ರುವನ್ । ನಾನು ಸಂಧದ ಏತಾನಿ ಗೋವಿಂದ ಪರಿರಂಭಿತಃ ॥" ಕೂಡುವಾಗಲೂ, ಸಂಚರಿಸುವಾಗಲೂ, ಮಲಗುವಾಗಲೂ, ಪಾನಮಾಡುವಾಗಲೂ, ಮಾತನಾಡುವಾಗಲೂ ಸಹ ಗೋವಿಂದನಲ್ಲಿ ಮನಸ್ಸಿಟ್ಟು, ಮೈಮರತು, ತಾನು ಯಾವ ಸ್ಥಿತಿಯಲ್ಲಿದ್ದನೆಂಬುವುದು ತನಗೇ ಗೊತ್ತಿಲ್ಲದೆ ಇರುತ್ತಿದ್ದನು. ಅವನಿಗೆ ಇಹದಲ್ಲಿ ಒಂದು ಮನ್ವಂತರಕಾಲ ಆಯುಷ್ಯವನ್ನೂ ರಾಜ್ಯವನ್ನೂ ಕೊಟ್ಟು ತದನಂತರ ಮುಕ್ತಿಯನ್ನು ಕೊಟ್ಟನು. ಈ ಲೋಕದಲ್ಲಿ ಒಂದು ಮನ್ವಂತರ ಆಯುಷ್ಯವನ್ನು ಕೊಟ್ಟರೂ ಧ್ರುವನಂತೆ ಇವನಿಗೆ ಭಗವದ್ದರ್ಶನವಿಲ್ಲದೆ ಇರಲಿಲ್ಲ. ವಾಮನ ರೂಪಿಯಾದ ಪರಮಾತ್ಮನನ್ನು ಸರ್ವದಾ ನೋಡುತ್ತಿದ್ದನು. ಈ ವಿಷಯದಲ್ಲಿ ಧ್ರುವ, ಪ್ರಹ್ಲಾದ ಇವರಿಬ್ಬರೇ ಉದಾಹರಣೆಗೆ ಇರುವರೆಂದು ಭಾವಿಸಬಾರದು.

ಧ್ರುವನಂತೆ ದೇಹದಂಡನೆಯಿಂದ, ಬ್ರಹ್ಮದೇವರನ್ನೂ ರುದ್ರದೇವರನ್ನೂ, ಪರಮಾತ್ಮನನ್ನೂ ಕುರಿತು ಕಷ್ಟಸಾಧ್ಯವಾದ ತಪಸ್ಸನ್ನು ಮಾಡಿದ ರಾವಣ, ಹಿರಣ್ಯಕಶಿಪು ಮೊದಲಾದ ಅನೇಕರು, ವರಗಳನ್ನು ಪಡೆದ ಕಥೆಗಳನ್ನು ಕೇಳಿದರೆ ಈ ವಿಷಯವು ಗೊತ್ತಾಗುವುದು. ಮತ್ತು ಸುತಪಸ್ಸೆಂಬುವನು ದೇವಮಾನದಿಂದ ೧೨ ಸಹಸ್ರ ವರ್ಷ ತಪಸ್ಸು ಮಾಡಿ ಪೃಶ್ನಿಗರ್ಭನೆಂಬ ಪುತ್ರನನ್ನು ಪಡೆದನು. ಆ ಸುತನು ಪರಮಾತ್ಮನ ಅವತಾರವೇ. ಆದರೂ ಅವನನ್ನು ಪರಮಾತ್ಮನೆಂದು ಭಜಿಸಲಿಲ್ಲ. ತಿರಗೀ ಇನ್ನೊಂದು ಜನ್ಮದಲ್ಲಿ ಈ ದಂಪತಿಗಳೇ ಕಶ್ಯಪ ಅದಿತಿಗಳಾಗಿ ಹುಟ್ಟಿ, ದೇಹಪ್ರಯಾಸದಿಂದ ಪಯೋವ್ರತವನ್ನು ಮಾಡಿ ವಾಮನರೂಪಿಯಾದ ಪರಮಾತ್ಮನನ್ನು, ಪುತ್ರನನ್ನಾಗಿ ಮಾಡಿಕೊಂಡರು. ಆಗಲೂ ಪುತ್ರವಾತ್ಸಲ್ಯವೇ ಇದ್ದುದರಿಂದ ಅವರು ಮತ್ತೂ ವಸುದೇವ ದೇವಕಿಯರಾಗಿ ಜನ್ಮವೆತ್ತಿದರು. ಆ ಜನ್ಮದಲ್ಲಿಯೂ ಪರಮಾತ್ಮನಲ್ಲಿ ದೃಢವಾದ ಭಕ್ತಿಯು ಹುಟ್ಟಿದಮೇಲೆಯೇ ಅವರಿಗೆ ಮುಕ್ತಿಯನ್ನಿತ್ತನು. ವಿಶ್ವಾಮಿತ್ರರು ತಪಸ್ಸನ್ನು ಮಾಡಿ ಬ್ರಹ್ಮರ್ಷಿಯಾದರು. ಇಂತಃ ಉದಾಹರಣೆಗಳು ಅನೇಕವಿರುವುವು. ನಾರದರು, ಅಂಬರೀಷ ಪ್ರಹ್ಲಾದ ಮೊದಲಾದವರು ಕೇವಲ ಭಕ್ತಿಯಿಂದಲೇ, ಅಂದರೆ ತಪಸ್ಸು

ಮೊದಲಾದ ದೇಹದಂಡನೆ ಇಲ್ಲದೆ ಪರಮಾತ್ಮನನ್ನು ಹೊಂದಿದ ಚರಿತ್ರೆಗಳನ್ನು ಕೇಳಿದರೆ ಇದರ ವಿಷಯವು ಇನ್ನೂ ಚೆನ್ನಾಗಿ ಗೊತ್ತಾಗುವುದು. ಪರೀಕ್ಷಿದ್ರಾಜನು ಬರೇ ಶ್ರವಣ, ಮನನದಿಂದ ಮುಕ್ತಿಯನ್ನು ಪಡೆಯಲಿಲ್ಲವೆ? ಇದನ್ನೆಲ್ಲಾ ಉದ್ದೇಶಿಸಿಯೇ ದಾಸರಾಯರು ತನುವ ದಂಡಿಸಿ ಸಾಧನವ ಮಾಳ್ಪರಿಗೆ ಸ್ವರ್ಗಾದಿ ಭೋಗಗಳೆಂತಲೂ ಹರಿಯು ಸತ್ಪುರುಷಾರ್ಥರೂಪನೆಂದು ಭಜಿಸುವವರಿಗೆ ತನ್ನನ್ನೇ ಕೊಡುವನೆಂತಲೂ, ಹೇಳಿರುವರು. ಈ ರೀತಿಯಾಗಿ ಪರಮಾತ್ಮನು ಮುಕ್ತಿಪ್ರದನೆಂಬುವುದನ್ನು ಮರೆತು "ಧರ್ಮಾರ್ಥಗಳನು ಕಾಮಿಸುವವರಿಗೆ" ಅಂದರೆ ಯಾಗ ದಾನಾದಿ ಧರ್ಮಗಳನ್ನು ಮಾಡಿದವರಿಗೆ ಬರುವ ಫಲವಾವುದು? ಐಶ್ವರ್ಯಾದಿ ಸುಖ ಸಂಪತ್ತಲ್ಲವೆ? ಅಷ್ಟನ್ನು ಮಾತ್ರ ಬೇಡುವವರಿಗೆ ನಗುತ್ತಾ (ಅಂದರೆ ಕುಭೇರನನ್ನು ಹೋಗಿ ದರಿದ್ರನು ಹುರಳಿ ಹೊಟ್ಟನ್ನು ಬೇಡಿದಂತೆ, ಮುಕ್ತಿಪ್ರದನಾದ ತನ್ನನ್ನಾರಾಧಿಸಿ ಈ ನಶ್ವರವಾದ ಫಲವನ್ನು ಬೇಡಿದನಲ್ಲ ಎಂದು ನಗುತ್ತಾ ಎಂದರ್ಥ) ಅತಿ ಶೀಘ್ರದಲ್ಲಿ ದುರ್ಯೋಧನನಿಗೆ ಕೊಟ್ಟಂತೆ ಕೊಡುವನು. ಧರ್ಮಾರ್ಥಗಳನ್ನು ಬೇಡದೆ ನಿನ್ನ ಅನುಗ್ರಹವೇ ನನಗೆ ಬೇಕೆಂದು ಬೇಡುವವರಿಗೆ ಇಂದ್ರನ ಮಗನಾದ ಅರ್ಜುನನಿಗೆ ಕೊಟ್ಟಂತೆ ಕೊಡುವನು, ಎಂದು ಹೇಳಿರುವರು. ಇಲ್ಲಿ ದಾಸರಾಯರು "ಸುರಪತನಯ ಕುಯೋಧನರಿಗಿತ್ತಂತೆ ಕೊಡುತಿಪ್ಪ" ಎಂದು ಹೇಳಿರುವರು. ಇದರ ಅಭಿಪ್ರಾಯವು ಭಾರತ ಉದ್ಯೋಗ ಪರ್ವದ ಒಂದು ಇತಿಹಾಸವನ್ನು ಸೂಚಿಸುವುದು. ಅದೆಂತೆಂದರೆ-

ಪಾಂಡವರು ಅಜ್ಞಾತವಾಸವನ್ನು ಪೂರೈಸಿ ವಿರಾಟರಾಜನ ಪಟ್ಟಣದಲ್ಲಿ ಅಭಿಮನ್ಯುವಿನ ವಿವಾಹವನ್ನು ಮಾಡಿಕೊಂಡು ಉಪಪ್ಲಾವ್ಯ ಪಟ್ಟಣದಲ್ಲಿ ವಾಸಮಾಡುತ್ತಿರುವಾಗ, ತಮ್ಮ ಭಾಗದ ರಾಜ್ಯವನ್ನು ದುರ್ಯೋಧನನು ಕೊಡುವುದಿಲ್ಲವೆಂತಲೂ, ತಮಗೂ ದುರ್ಯೋಧನಾದಿಗಳಿಗೂ ಯುದ್ಧವಾಗುವುದೇ ನಿಜವೆಂತಲೂ ನಿಶ್ಚಯವಾದಮೇಲೆ, ಅರ್ಜುನನು ಶ್ರೀ ಕೃಷ್ಣನನ್ನು ಯುದ್ಧಕ್ಕೆ ಸಹಾಯ ಮಾಡುವುದಕ್ಕಾಗಿ ಕರೆದು ತರುವುದಕ್ಕಾಗಿ ದ್ವಾರವತಿಗೆ ಹೊರಟನು. ಈ ಸಮಾಚಾರವನ್ನು ದುರ್ಯೋಧನನು ಚಾರರ ಮುಖದಿಂದ ತಿಳಿದು ಅರ್ಜುನನಿಗಿಂತಲೂ ತಾನೇ ಮುಂಚಿತವಾಗಿ ಕೃಷ್ಣನನ್ನು ಕಂಡು ಕರೆಯಬೇಕೆಂದು, ತಕ್ಷಣವೇ ಹೊರಟನು. ದುರ್ಯೋಧನಾರ್ಜುನರು ಒಂದೇ ಕಾಲದಲ್ಲಿ ಹೊರಟರೂ ಕಪಟಿಯಾದ ದುರ್ಯೋಧನನು

ಅರ್ಜುನನಿಗಿಂತಲೂ ಮುಂಚಿತವಾಗಿ ತಾನು ಕೃಷ್ಣನನ್ನು ನೋಡಬೇಕೆಂದು ಅತಿ ವೇಗವಾಗಿ ರಥವನ್ನು ಬಿಟ್ಟುಕೊಂಡು ದ್ವಾರವತಿಗೆ ಬಂದನು. ಶ್ರೀ ಕೃಷ್ಣನು ಒಂದೇ ಉದ್ದೇಶ್ಯವಾಗಿ ಇಬ್ಬರೂ ತನ್ನಲ್ಲಿ ಬರುವುದನ್ನು ತಿಳಿದು ಯೋಗ್ಯತಾನುಸಾರವಾಗಿ ಫಲವನ್ನು ಕೊಡುವ ಉದ್ದೇಶ್ಯವಾಗಿ ಮಂಚದ ಮೇಲೆ ಮಲಗಿಕೊಂಡು ನಿದ್ರೆ ಮಾಡುವವನಂತೆ ಕಾಣಿಸಿಕೊಂಡನು.

ಮೊದಲು ಬಂದ ದುರ್ಯೋಧನನು, ಕೃಷ್ಣನು ಮಲಗಿರುವುದನ್ನು ನೋಡಿ, ತಾನು ರಾಜಾಧಿರಾಜನೆಂಬ ಅಹಂಕಾರದಿಂದ ಶ್ರೀ ಕೃಷ್ಣನ ತಲೆಯ ಭಾಗದಲ್ಲಿ ಇವರ ಯೋಗ್ಯತಾ ಪರೀಕ್ಷಾರ್ಥವಾಗಿಯೇ ಸಿದ್ಧಪಡಿಸಿದ್ದ ಉನ್ನತಾಸನದಲ್ಲಿ ದರ್ಪದಿಂದ, ಕುಳಿತನು, ಸ್ವಲ್ಪ ಹೊತ್ತಿನಲ್ಲಿಯೇ ಅರ್ಜುನನು ಬಂದು ಮಲಗಿರುವ ಶ್ರೀ ಕೃಷ್ಣನನ್ನು ಕಂಡು ವಿನಯನಿಂದ ಭವ್ಯನಾಗಿ ಪಾದ ಸ್ಪರ್ಶದಲ್ಲಿ ನಿಂತುಕೊಂಡನು. ಇದರಿಂದ ದುರ್ಯೋಧನಾರ್ಜುನರ ಯೋಗ್ಯತೆಗಳು ಗೊತ್ತಾಯಿತಲ್ಲವೆ? ಆಗಲಿ ಶ್ರೀ ಕೃಷ್ಣನು ನಿದ್ರೆಯಿಂದ ಎಚ್ಚರಗೊಂಡಂತೆ ಕಣ್ದೆರೆದೊಡನೆ ಪಾದ ಪಾರ್ಶ್ವದಲ್ಲಿದ್ದ ಅರ್ಜುನನೇ ಮೊದಲು ಕಣ್ಣಿಗೆ ಬಿದ್ದನು. ಪರಮಾತ್ಮನು ' ಅರ್ಜುನಾ! ಯಾವಾಗ ಬಂದೆ ' ಅಂದನು. ತಕ್ಷಣ ದುರ್ಯೋಧನನು, ಕೃಷ್ಣ! ನಾನು ಮೊದಲೇ ಬಂದಿರುವೆನು ಎಂದನು. ಆಗ ಶ್ರೀ ಕೃಷ್ಣನು ' ಹಾಗೋ! ಬಹಳ ಸಂತೋಷ!' ಆದರೆ, ನೀನು ಮೊದಲು ಬಂದವನೆಂದು ಹೇಳಬೇಕಾದ್ದಿಲ್ಲ. ಏಕೆಂದರೆ ನಿನ್ನಾಸನವೇ ಹೇಳುವುದು. ಅರ್ಜುನನೇ ಮೊದಲು ಬಂದಿದ್ದರೆ ಇದ್ದ ಒಂದಾಸನದಲ್ಲಿ ಅವನು ಕೂತುಕೊಳ್ಳುತ್ತಿದ್ದನು. ನೀನು ನಿಲ್ಲಬೇಕಾದ ಸಂದರ್ಭವಾಗುತ್ತಿತ್ತು. ಇದರಿಂದ ನೀನೇ ಮೊದಲು ಬಂದವನೆಂದು ನಿಶ್ಚಯವಾಯಿತು. ನೀನು ಮೊದಲು ಬಂದವನು. ನಾನು ಅರ್ಜುನನನ್ನು ಮೊದಲು ನೋಡಿರುವೆನು. ಅಂತೂ ಇಬ್ಬರ ಕೋರಿಕೆಯನ್ನೂ ಪೂರ್ಣಗೊಳಿಸುವುದೇ ನನ್ನ ಕರ್ತವ್ಯವಾಗಿರುವುದು. ಆದರೂ ನಾನು ಮೊದಲು ಅರ್ಜುನನನ್ನೇ ನೋಡಿದುದರಿಂರ ಅರ್ಜುನನ ಕೋರಿಕೆಯನ್ನು ಮುಂದಾಗಿಯೂ ನಿನ್ನ ಕೋರಿಕೆಯನ್ನು ಆಮೇಲೂ ಪೂರ್ಣ ಮಾಡುವೆನು ಎಂದು ಹೇಳಿ ಅರ್ಜುನ! ನೀನು ಬಂದ ಕಾರ್ಯವೇನು?

ಅರ್ಜುನ.—ನಮುಗೂ, ಕೌರವರಿಗೂ ಮುಂದೆ ನಡೆಯುವ ಯುದ್ಧದಲ್ಲಿ ನೀನು ಸಹಾಯಕ್ಕೆ ಬರಬೇಕೆಂದು ಬೇಡಿಕೊಳ್ಳುವೆನು.

ಕೃಷ್ಣ.—ದುರ್ಯೋಧನ ನೀನು ಬಂದ ಕಾರ್ಯವಾವುದು ?

ದುರ್ಯೋಧನ.—ಕೃಷ್ಣ ! ನಾನೂ ಅದೇ ವಿಷಯಕ್ಕಾಗಿಯೇ ಬಂದಿರುವೆನು.

ಕೃಷ್ಣ.—ನೀವಿಬ್ಬರೂ ಒಂದೇ ವಿಷಯದಲ್ಲಿ ನನ್ನನ್ನು ಸಿಕ್ಕಿಸಿರುವಿರಿ. ಆದರೂ ಚಿಂತೆಯಿಲ್ಲ. ನಾನು ಇಬ್ಬರ ಕೋರಿಕೆಗಳನ್ನೂ ಪೂರ್ಣ ಮಾಡುವೆನೆಂದು ಮೊದಲೇ ಹೇಳಿರುವೆನು, ಅದರಂತೆಯೇ ಮಾಡುವೆನು. ಅರ್ಜುನ ! ನಿರಾಯುಧನಾದ ನಾನೊಬ್ಬನೇ ಒಂದು ಭಾಗದಲ್ಲಿ ನಿಲ್ಲುವೆನು. ಗೋಪಿಕಾ ಸ್ತ್ರೀಯರಲ್ಲಿ ಹುಟ್ಟಿದ ನನ್ನ ಮಕ್ಕಳಾದ, ಆಯುಧಪಾಣಿಗಳಾದ ೧೦ ಲಕ್ಷ ಮಂದಿ ಯೋಧರನ್ನು ಒಂದು ಭಾಗದಲ್ಲಿ ಇಟ್ಟಿರುವೆನು. ಇವೆರಡರಲ್ಲಿ ನೀನಾವುದನ್ನು ಬೇಡುವೆ ?

ಅರ್ಜುನ.—ನಿರಾಯುಧನಾದ ನೀನೇ ನನಗೆ ಸಾಕು.

ದುರ್ಯೋಧನ.—ನನಗೆ ಬೇಕಾದುದು ಸೈನ್ಯವೇ. ಆದುದರಿಂದ ಕೃತಾರ್ಥನಾದೆನು.

ದುರ್ಯೋಧನನ ಮನಸ್ಸಿನಲ್ಲಿ ನಿರಾಯುಧನಾದ ಈ ಕೃಷ್ಣನಿಂದ ನನಗಾಗುವುದೇನು, ಅರ್ಜುನನೇ ಮೋಸಹೋದನೆಂದು ಭಾವಿಸಿ ತಾನು ಸೈನ್ಯ ಸಹಿತ ಹೊರಟುಹೋದನು. ಸೈನ್ಯದೊಡನೆ ನಾಶವಾದುದೇ ಇದರ ಫಲಿತಾಂಶ. ಶ್ರೀ ಕೃಷ್ಣಾನುಗ್ರಹದಿಂದ ಪಾಂಡವರು ಯುದ್ಧದಲ್ಲಿ ಪಾರಾದರು. ದುರ್ಯೋಧನಾರ್ಜುನರ ಭಕ್ತಿ ಭಾವವನ್ನು ತೋರ್ಪಡಿಸುವುದಕ್ಕಾಗಿಯೇ ಶ್ರೀ ಕೃಷ್ಣನು ಹೀಗೆ ನಟಿಸಿದುದು. ಇದೇ ಅರ್ಥವನ್ನೇ ದಾಸರಾಯರು " ಸುರಪತನಯ ಸುಯೋಧನರಿಗಿತ್ತಂತೆ ಕೊಡುತಿಪ್ಪನು " ಎಂದು ಹೇಳಿರುವುದು.

ಅವತಾರಿಕೆ.—ಮುಂದಿನ ಪದ್ಯದಲ್ಲಿ ಪರಮಾತ್ಮನ ಮಹಾ ಮಹಿಮೆಯನ್ನು ಪೊಗಳುವರು.

**ಜಗವನೆಲ್ಲವ ನಿರ್ಮಿಸುವ ನಾಲ್**
**ಮೊಗನೊಳಗೆ ತಾನಿದ್ದು ಸಲಹುವ**
**ಗಗನ ಕೇಶನೊಳಿದ್ದು ಸಂಹರಿಸುವನು ಲೋಕಗಳ ॥**
**ಸ್ವಗತ ಭೇದ ವಿವರ್ಜಿತನು**
**ಸರ್ವಗಸದಾನಂದೈಕ ದೇಹನು ಬಗೆ**
**ಬಗೆಯ ನಾಮದಲಿ ಕರೆಸುವ ಭಕುತರನು ಪೊರೆವ ॥ ೮ ॥**

ಪದ್ಯಾರ್ಥ.—(ಶ್ರೀ ಹರಿಯು) ಜಗವನೆಲ್ಲವ=ಸಕಲವಾದ ಜಗತ್ತನ್ನು, ನಾಲ್ಮೊಗನೊಳಗೆ=ಚತುರ್ಮುಖ ಬ್ರಹ್ಮದೇವರೊಳಗೆ, ಇದ್ದು, ನಿರ್ಮಿಸುವ=ಸೃಷ್ಟಿಸುವನು, ಸಲಹುವ=ತಾನು (ವಿಷ್ಣುವೇ) ಸಂರಕ್ಷಿಸುವನು, ಗಗನಕೇಶನೊಳಿದ್ದು=ರುದ್ರದೇವರೊಳಿದ್ದು, ಲೋಕಗಳ=ಸಕಲ ಲೋಕಗಳನ್ನು ಸಂಹರಿಸುವನು, ಸ್ವಗತಭೇದವಿವರ್ಜಿತನು=ತನ್ನ ರೂಪಗಳಲ್ಲಿ ಪರಸ್ಪರ ಭೇದವಿಲ್ಲದವನು, ಸರ್ವಗ=ಸರ್ವತ್ರ ಇರುವನು, ಸದಾನಂದೈಕದೇಹನು=ಸರ್ವ ಕಾಲದಲ್ಲೂ ಕೇವಲ ಆನಂದ ಸ್ವರೂಪನು, ಬಗೆಬಗೆಯನಾಮದಲಿ=ಸರ್ವಶಬ್ದ ವಾಚ್ಯನು ಪರಮಾತ್ಮನೆಂದು ಭಾವಿಸಿ, ಬ್ರಹ್ಮ, ರುದ್ರ, ಸೂರ್ಯ ಚಂದ್ರಾದಿ ನಾಮಗಳಿಂದಲೂ, ಮತ್ಸ್ಯ, ಕೂರ್ಮ, ರಾಮ, ಕೃಷ್ಣ, ನಾರಾಯಣಾದಿ ಬಗೆ ಬಗೆಯಾದ ನಾಮಗಳಿಂದಲೂ, ಕರೆಸುವ=ಕರೆಸಿಕೊಳ್ಳಲ್ಪಡುವನು, ಭಕತರನು=ಭಕ್ತರನ್ನು, ಪೊರೆವ=ಸಂರಕ್ಷಿಸುವನು.

ತಾತ್ಪರ್ಯ.—ಶ್ರೀ ಪರಮಾತ್ಮನು ಬ್ರಹ್ಮದೇವರೊಳಗಿದ್ದು ಸಕಲ ಜಗತ್ತನ್ನು ಸೃಷ್ಟಿಸುವನು. ತಾನೇ ವಿಷ್ಣು ರೂಪದಿಂದ ಪಾಲಿಸುವನು. ರುದ್ರದೇವರೊಳಗಿದ್ದು ಸಂಹರಿಸುವನು. ತನ್ನ ಅವತಾರ ರೂಪ ಮೂಲ ರೂಪಗಳಿಗೂ, ಬಿಂಬ ಕ್ರಿಯಾರೂಪಗಳಿಗೂ, ತನ್ನ ದೇಹದೊಳಗಿನ ಕರ ಚರಣಾದ್ಯಂಗಗಳಿಗೂ, ನಖ ರೋಮಾದಿಗಳಿಗೂ ಸಹ ಪರಸ್ಪರ ಭೇದವಿಲ್ಲದವನು. ಸರ್ವತ್ರ ವ್ಯಾಪ್ತನು. ಸಚ್ಚಿದಾನಂದ ಸ್ವರೂಪನು. ಅನೇಕ ಬಗೆಯಾದ ನಾಮಗಳಿಂದ ಕರೆಸಿಕೊಳ್ಳುವವನು. ತನ್ನ ಭಕ್ತರನ್ನು ಸರ್ವ ಪ್ರಕಾರದಿಂದಲೂ ರಕ್ಷಿಸುವವನು.

ವಿಶೇಷಾರ್ಥ.—"ಜಗವನೆಲ್ಲವ ನಿರ್ಮಿಸುವ ನಾಲ್ಮೊಗನೊಳಗೆ ತಾನಿದ್ದು" ಈ ವಿಷಯದಲ್ಲಿ "ಬ್ರಹ್ಮಣಿಸ್ಥೋ ಸೃಜದ್ವಿಷ್ಣು ಸ್ಥಿತ್ವಾ ರುದ್ರೇತ್ವ ಭಕ್ಷಯತ್। ಪೃಥಕ್ ಸ್ಥಿತ್ವಾ ಜಗತ್ಪಾತಿ ತದ್ಬ್ರಹ್ಮಾದ್ಯಾಹ್ವಯೋಹರಿಃ॥" ಶ್ರೀ ಪರಮಾತ್ಮನು ಬ್ರಹ್ಮದೇವರಲ್ಲಿ ಇದ್ದು ಸೃಷ್ಟಿಸುವನು ರುದ್ರದೇವರಲ್ಲಿ ಇದ್ದು ಸಂಹರಿಸುವನು. ತಾನು ಪ್ರತ್ಯೇಕವಾಗಿದ್ದು ಪರಿಪಾಲಿಸುವನು. ಹೀಗೆ ಒಬ್ಬ ವಿಷ್ಣುವೇ ಬ್ರಹ್ಮ ರುದ್ರಾದಿ ವಾಚ್ಯನಾಗಿ ಸೃಷ್ಟ್ಯಾದಿಗಳನ್ನು ಮಾಡುವನು—ಎಂಬ ಬ್ರಹ್ಮಾಂಡ ಪುರಾಣದ ವಾಕ್ಯದಿಂದಲೂ, ಮತ್ತು "ವಿಷ್ಣುರೇವ ಹರಿಸ್ಸಾಕ್ಷಾತ್ತಾವುಭೌನ ಹರಿಃ ಸ್ಮೃತೌ। ಆ ವಿಷ್ಟರೂಪೌ ವಿಜ್ಞೇಯೌ ಬ್ರಹ್ಮರುದ್ರಾಭಿಧಾಯಕೌ ॥" ಎಂಬ ವಿಷ್ಣುರಹಸ್ಯದ ಪ್ರಮಾಣದಿಂದಲೂ

ತಿಳಿದುಬಂದ ಅಂಶವೇನೆಂದರೆ :—ಬ್ರಹ್ಮ ರುದ್ರರೇ ವಿಷ್ಣುವೆಂದು ಭಾವಿಸ ಬಾರದು , ಬ್ರಹ್ಮ, ರುದ್ರ ಇವರು ವಿಷ್ಣುನಾಮಕನಾದ ಪರಮಾತ್ಮನ ವಿಶೇಷಾವೇಶದಿಂದ ಬ್ರಹ್ಮರುದ್ರರೆಂದು ಕರೆಸಿಕೊಳ್ಳುವರು ಎಂದು ಭಾವಿಸಬೇಕು. "ಸ್ವಗತಭೇದ ವಿವರ್ಜಿತನು" ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ "ನಿರ್ದೋಷ ಪೂರ್ಣ ಗುಣವಿಗ್ರಹ ಆತ್ಮತಂತ್ರೋ ನಿಶ್ಚೇತನಾತ್ಮಕ ಶರೀರ ಗುಣೈಶ್ಚಹೀನಃ । ಆನಂದಮಾತ್ರ ಕರಪಾದ ಮುಖೋದರಾದಿಃ ಸರ್ವತ್ರ ಚ ಸ್ವಗತಭೇದ ವಿವರ್ಜಿತಾತ್ಮಾ" ಎಂದು ಹೇಳಿರುವರು. ಇದರ ಅರ್ಥ :— ಶ್ರೀ ಹರಿಯು, ದೋಷರಹಿತವಾದ ಅನೇಕ ಗುಣಗಣ ಪೂರ್ಣನಾದ ಸ್ವರೂಪವುಳ್ಳವನು, ಸ್ವತಂತ್ರನು, ಚೇತನವಿಲ್ಲದಿರುವಿಕೆ ಮೊದಲಾದ ಶರೀರ ಸಂಬಂಧದ ಗುಣಗಳಿಲ್ಲದವನು. ಕೇವಲ ಆನಂದ ಸ್ವರೂಪಗಳಾದ ಕರ,ಹರಣ ಮುಖ ಉದರಾದಿಗಳಿಂದ ಕೂಡಿದವನು. ಸರ್ವತ್ರ ವ್ಯಾಪ್ತವಾದ ರೂಪಗಳಲ್ಲಿ ಭೇದವಿಲ್ಲದವನು. ಮತ್ತು ತನ್ನ ಅಂಗಗಳಲ್ಲಿ, ನಮ್ಮಂತೆ ಕಣ್ಣಿಂದಲೇ ನೋಡಬೇಕು, ಕಿವಿಯಿಂದಲೇ ಕೇಳಬೇಕೆಂಬ ಶಾರೀರ ಧರ್ಮವು ಆ ಪರಮಾತ್ಮನಿಗೆ ಇಲ್ಲ. ನಾವು ಕರಚರಣಾದ್ಯವಯವಗಳಿಂದ ಮಾಡುವ ಎಲ್ಲಾ ಕಾರ್ಯಗಳನ್ನು ಪರಮಾತ್ಮನು ತನ್ನ ಒಂದು ಕೇಶದಿಂದಾಗಲಿ, ನಖದಿಂದಾಗಲಿ ಮಾಡಬಲ್ಲನು. ಆದುದರಿಂದ "ರೋಮಸ್ತು ಪೂರ್ಣಃ ನಖಶ್ಚಪೂರ್ಣಃ" ಇತ್ಯಾದಿ ವಾಕ್ಯಗಳಿಂದ ಪರಮಾತ್ಮನನ್ನು ವೇದವು ಹೊಗಳುವುದು.

"ಸರ್ವಗ" ಸರ್ವತ್ರ ವ್ಯಾಪ್ತನು "ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಸ್ಥಿತಃ" ಎಂಬ ಶೃತಿ ವಾಕ್ಯದಿಂದ ಒಳಗೂ, ಹೊರಗೂ, ಸಕಲ ಸ್ಥಳಗಳಲ್ಲಿಯೂ ಶ್ರೀ ಪರಮಾತ್ಮನು ವ್ಯಾಪ್ತನಾಗಿರುವನು. "ಸದಾನಂದೈಕ ದೇಹನು" ಸರ್ವಕಾಲದಲ್ಲಿಯೂ ಆನಂದವನ್ನೇ ಅನುಭವಿಸುವ ಶರೀರವುಳ್ಳವನೆಂದರ್ಥ. ಇದಕ್ಕೆ ಆಧಾರ, ಭಾಗವತ ಏಕಾದಶ ಸ್ಕಂಧದ ತಾತ್ಪರ್ಯದಲ್ಲಿ "ಅನತ್ತೃತ್ವಂ ಹರೆ ದುಃಖಾನತ್ತೃತ್ವಾದುಚ್ಯತೇ ಸದಾ ವಿಷಯಾನ್ನಿನಾಪಿ ಪೂರ್ಣತ್ವಾತ್ಸ್ವರೂಪಾನಂದ ಭೋಗಿನಃ । ಸುಖಮತ್ತೇ ವಹಿ ಸದಾ ಸರ್ವತ್ರಾಪಿಸ್ಥಿತಂ ವಿಭುಃ ||" ಎಂದು ಹೇಳಿರುವರು. ಮತ್ತು "ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ । ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯ ನಶ್ನನ್ನನ್ಯೋ ಅಭಿಚಾಕಶೀತಿ ||" ಎಂಬ ಶೃತಿಯಲ್ಲಿ ಒಂದು ವೃಕ್ಷದಲ್ಲಿ ಯದೃಚ್ಛೆಯಿಂದ ಎರಡು ಹಕ್ಕಿಗಳು, ಎರಡು ಗೂಡು.

ಗಳನ್ನು ಮಾಡಿಕೊಂಡು ವಾಸಮಾಡುತ್ತಿರುವುವು. ಅದರಲ್ಲಿ ಒಂದು ಹಕ್ಕಿಯು ಆ ವೃಕ್ಷದೊಳಗಿನ ರುಚಿಕರವಾದ ಫಲವನ್ನು ಭಕ್ಷಿಸುತ್ತಿರುವುದು. ಆದರೂ ಅದು ದುರ್ಬಲವಾಗಿರುವುದು. ಮತ್ತೊಂದು ಹಕ್ಕಿಯು ಅದರ ಫಲವನ್ನು ಭಕ್ಷಿಸುವುದಿಲ್ಲ. ಆದರೂ ಅದು ಬಲಾಢ್ಯವಾಗಿರುವುದು. ಎಂದು ಹೇಳಲ್ಪಟ್ಟ ಈ ಶ್ರುತಿಯು ಜೀವ, ಪರಮಾತ್ಮರ ವೈಲಕ್ಷಣ್ಯವನ್ನು ತೋರಿಸುತ್ತದೆ ಇದರಲ್ಲಿ ಜೀವನು ಜಗದ್ವೃಕ್ಷದಲ್ಲಿ ಇರುವ ದೇಹವೆಂಬ ಗೂಡಿನಲ್ಲಿದ್ದು ಪುಣ್ಯಪಾಪಗಳ ಫಲವಾದ ಸುಖದುಃಖಗಳನ್ನು ಭಕ್ಷಿಸುವನು (ಅನುಭವಿಸುವನು).

ಪರಮಾತ್ಮನು ಫಲವನ್ನು ಭಕ್ಷಿಸುವುದಿಲ್ಲ. ಅಂದರೆ ಸುಖದುಃಖಗಳೆರಡೂ ಆತನಿಗೆ ಇಲ್ಲವೆಂದು ಶ್ರುತ್ಯರ್ಥವು. ಆದುದರಿಂದ ಅದಕ್ಕೆ ಶ್ರೀಮದಾಚಾರ್ಯರು ಉದಾಹರಣೆಯಿಂದ ಹೇಳಿರುವುದೇನೆಂದರೆ :—ಪರಮಾತ್ಮನು "ಅನತ್ತಾ" ಅಂದರೆ ಭಕ್ಷಿಸುವವನಲ್ಲ. ದುಃಖವನ್ನು ಅನುಭವಿಸುವುದಿಲ್ಲವಾದುದರಿಂದ "ಅನತ್ತಾ" ಎಂದು ಹೆಸರು. "ಅತ್ತಾ" ಎಂಬ ಹೆಸರೂ ಉಂಟು. ವಿಷಯ ಭೋಗಗಳಿಲ್ಲದಿದ್ದರೂ, ಸ್ವರೂಪಾನಂದವನ್ನು ನಿತ್ಯದಲ್ಲಿಯೂ ಅನುಭವಿಸುತ್ತಿರುವ ಸ್ವಾಮಿಯು, ಸರ್ವ ಜೀವರಲ್ಲಿರುವ ಸುಖವನ್ನು ಮಾತ್ರ ನಿತ್ಯದಲ್ಲಿಯೂ (ಭಕ್ಷಿಸುತ್ತಿರುವನು) ಅನುಭವಿಸುತ್ತಿರುವನು. "ಸ್ವಾದ್ವತ್ತಿ" ಎಂಬ ಪದದಿಂದ ಜೀವನೂ ಸಹ ರುಚಿಕರವಾದ ಫಲವನ್ನೇ ಭುಂಜಿಸುವನೆಂದು ಶ್ರುತಿಯಲ್ಲಿ ಹೇಳಿರುವುದು. ಅದರ ತಾತ್ಪರ್ಯವೇನೆಂದರೆ :—ಜೀವನು ಅಸಾರವಾದ ಪದಾರ್ಥವನ್ನೇ ಸಾರವೆಂದು ಭಾವಿಸಿ ಭುಂಜಿಸುವನು. (ಅವನು ಅಸ್ವತಂತ್ರನಾದುದರಿಂದ ಯತ್ನವಿಲ್ಲದೆ ಭುಂಜಿಸುವನು) ಪರಮಾತ್ಮನು ಸ್ವತಂತ್ರನಾದುದರಿಂದ ಸ್ವಾದು ಪದಾರ್ಥವನ್ನೇ ಭುಂಜಿಸುವನು, ಆದುದರಿಂದ ನಿತ್ಯದಲ್ಲಿಯೂ ಆನಂದ ಸ್ವರೂಪವಾದ ದೇಹದಿಂದ ಕೂಡಿದವನೆಂದು ತಿಳಿಯಬೇಕು, ಎಂಬುವುದೇ ಮೇಲಿನ ಭಾಗವತ ತಾತ್ಪರ್ಯದ ಮುಖ್ಯಾರ್ಥ. ಅದೇ ಅರ್ಥವನ್ನೇ ದಾಸರಾಯರು "ಸದಾನಂದೈಕ ದೇಹನು" ಎಂಬ ಪದದಿಂದ ಹೇಳಿರುವರು.

"ಭಕ್ತರನು ಪೊರೆವ" ಸರ್ವಪ್ರಕಾರದಿಂದಲೂ ಭಕ್ತರನ್ನು ಉದ್ಧರಿಸುವನು. ಅಥವಾ "ಬಗೆಬಗೆಯ ನಾಮದಲಿ ಕರೆಸುವ ಭಕುತರನು" ಎಂದು ಒಂದೇ ಪದ ಮಾಡಬಹುದು. ರಾಮ, ಕೃಷ್ಣ, ವೇದವ್ಯಾಸ, ವಿಠಲ, ಶ್ರೀನಿವಾಸ, ನಾರಸಿಂಹ ಮೊದಲಾದ ನಾನಾ ಹೆಸರುಗಳಿಂದ ಪರಮಾತ್ಮ

ನನ್ನು ಕರೆಯುತ್ತಾ ಪಾಡುತ್ತಾ ಭಜನೆ ಮಾಡುತ್ತಿರುವ ತನ್ನ ಭಕ್ತರನ್ನು (ದಾಸರನ್ನು) "ಪ್ರೊರೆವ" ಸರ್ವಪ್ರಕಾರದಿಂದಲೂ ರಕ್ಷಿಸುವ ಎಂದು ಅರ್ಥ.

ಅವತಾರಿಕೆ.—ಮುಂದಿನ ಪದ್ಯದಿಂದಲೂ ಶ್ರೀ ಪರಮಾತ್ಮನ ಮಹಾ ಮಹಿಮೆಯನ್ನೇ ಕೊಂಡಾಡುತ್ತಾರೆ.

**ಒಬ್ಬನಲಿ ನಿಂತಾಡುವನು ಮ**
**ತ್ತೊಬ್ಬನಲಿ ನೋಡುವನು ಬೇಡುವ**
**ನೊಬ್ಬನಲಿ ನೀಡುವನು ಮಾತಾಡುವನು ಬೆರಗಾಗಿ ||**
**ಅಬ್ಬರದ ಹೆದ್ದೈವನಿವ ಮ**
**ತ್ತೊಬ್ಬರನು ಲೆಕ್ಕಿಸನು ಲೋಕದೊ**
**ಳೊಬ್ಬನೇ ತಾ ಬಾಧ್ಯ ಬಾಧಕನಾಹ ನಿರ್ಭೀತ ||೯||**

ಪದ್ಯಾರ್ಥ.—ಒಬ್ಬನಲಿ ನಿಂತು = ಒಬ್ಬನ ಶರೀರದೊಳಗೆ ಇದ್ದು, ಆಡುವನು = ಆಟವಾಡುವನು, ಮತ್ತೊಬ್ಬನಲಿ = ಮತ್ತೊಬ್ಬನೊಳಗಿದ್ದು, ನೋಡುವನು, ಒಬ್ಬನಲಿ=ಮತ್ತೊಬ್ಬನೊಳಗಿದ್ದು, ಬೇಡುವನು=ಯಾಚಿಸುವನು, ಒಬ್ಬನಲಿ = ಮತ್ತೊಬ್ಬನೊಳಗಿದ್ದು, ನೀಡುವನು = ಕೊಡುವನು, (ಒಬ್ಬನೊಳಗಿದ್ದು) ಬೆರಗಾಗಿ=ಆಶ್ಚರ್ಯಪಡುತ್ತಾ, ಮಾತಾಡುವನು, ಇವ= ಇವನು, ಅಬ್ಬರದ=ಆರ್ಭಟಿ ಉಳ್ಳ, ಹೆದ್ದೈವ=ದೊಡ್ಡ ದೇವನು, (ದೇವೋತ್ತಮನು) ಮತ್ತೊಬ್ಬರನು=ದೇವ, ದೈತ್ಯ ಮೊದಲಾದ ಮತ್ತಾರನ್ನೂ, ಲೆಕ್ಕಿಸನು=ಲಕ್ಷ್ಯೀಕರಿಸನು, ನಿರ್ಭೀತ=ಯಾವ ಕಾಲದಲ್ಲಿಯೂ, ಯಾವ ದೇಶದಲ್ಲಿಯೂ ಮತ್ತಾರಿಂದಲೂ ಭಯಪಡದ ಈ ಪರಮಾತ್ಮನು ಲೋಕದೊಳಗೆ, ತಾನೊಬ್ಬನೇ, ಬಾಧ್ಯ ಬಾಧಕನು=ಬಾಧ್ಯನಾಗಿಯೂ, ಬಾಧಕನಾಗಿಯೂ, ಆಹ=ಆಗಿದ್ದಾನೆ.

ತಾತ್ಪರ್ಯ.—ಶ್ರೀ ಪರಮಾತ್ಮನು ಒಬ್ಬನೊಳಗಿದ್ದು ಆಟಗಳನ್ನಾಡುವನು. ಮತ್ತೊಬ್ಬನೊಳಗಿದ್ದು ನೋಡುವನು. ಮತ್ತೊಬ್ಬನೊಳಗಿದ್ದು ಬೇಡುವನು. ಮತ್ತೊಬ್ಬನೊಳಗಿದ್ದು ಕೊಡುವನು. ಒಬ್ಬನೊಳಗಿದ್ದು ಆಶ್ಚರ್ಯಪಡುತ್ತಾ ಮಾತಾಡುವನು, ಇವನು ಭಯಂಕರವಾಗಿ ಆರ್ಭಟಿಸುವ ಕಾಳಿ ಮೊದಲಾದ ಎಲ್ಲಾ ದೇವತೆಗಳಕಿಂತಲು ದೊಡ್ಡ ದೇವನಾಗಿರುವನು. ಒಬ್ಬರನ್ನೂ ಲಕ್ಷ್ಯಮಾಡನು. ನಿರ್ಭೀತನಾಗಿ ತಾನೊಬ್ಬನೇ ಬಾಧ್ಯನಾಗಿಯೂ ಬಾಧಕನಾಗಿಯೂ ಇರುವನು.

ವಿಶೇಷಾರ್ಥ.—" ಒಬ್ಬನಲಿ ನಿಂತಾಡುವನು " ಮಕ್ಕಳು ಮೊದಲಾದವರಲ್ಲಿದ್ದು ಬಾಲ ಕ್ರೀಡಾದಿಗಳನ್ನು ಮಾಡುವನು. ತಂದೆ ಮೊದಲಾದವರಲ್ಲಿದ್ದು ನೋಡುವನು. ಅಥವಾ ಒಬ್ಬನಲಿ ನಿಂತು ಅಂದರೆ ಕೃಷ್ಣಾದಿ ರೂಪನಾಗಿ ಇದ್ದು ಬಾಲ ಲೀಲಾದಿಗಳನ್ನು ಮಾಡುವನು. ವಸುದೇವಾದಿಗಳೊಳಗಿದ್ದು ನೋಡುವನು. ಯಾಚಕನೊಳಗಿದ್ದು ಬೇಡುವನು. ಕೊಡುವ ಪ್ರಭುವಿನೊಳಗಿದ್ದು ಕೊಡುವನು. ಅಥವಾ ವಾಮನಾದಿ ರೂಪಗಳಿಂದ ಬೇಡುವನು. ಬಲಿಚಕ್ರವರ್ತಿ ಮೊದಲಾದವರಲ್ಲಿದ್ದು ಕೊಡುವನು- ಕೃಷ್ಣಾದಿ ರೂಪದಿಂದ ಗೋವರ್ಧನೋದ್ಧಾರ, ಕಾಳೀಯ ಮರ್ದನಾದಿಗಳನ್ನು ಮಾಡುತ್ತಾ ನಂದ ಗೋಪಿ ಯಶೋದಾ ಮೊದಲಾದ ಗೋಪಿಯರ ವಳಗೂ ಋಷ್ಯಾದಿಗಳೊಳಗೂ ಇದ್ದು ಶ್ಲಾಘಿಸುತ್ತಾ ಬೆರಗಾಗಿ ಮಾತಾಡುವನು. ದೈತ್ಯ ದಾನವರಿಗೆ ಭಯಂಕರವಾದ ನಾರಸಿಂಹಾದಿ ರೂಪಗಳಿಂದ ಆರ್ಭಟ ಮಾಡುತ್ತಾ ಇವನಿಗಿಂತಲೂ ಬೇರೆ ದೊಡ್ಡ ದೇವರಿಲ್ಲವೆಂದೆನಿಸಿಕೊಂಡು ಅವರನ್ನು ಸಂಹರಿಸುವನು. ನಿರ್ಭೀತನಾಗಿ ಒಬ್ಬನಲ್ಲಿದ್ದು ಬಾಧ್ಯನಾಗಿಯೂ, ಒಬ್ಬನಲ್ಲಿದ್ದು ಬಾಧಕನಾಗಿಯೂ ಇರುವನು. ಅಂದರೆ ರಾವಣ ಕಂಸಾದಿಗಳಲ್ಲಿದ್ದು ಕೊಲ್ಲಿಸಿಕೊಳ್ಳಲ್ಪಡುವನು. ರಾಮ ಕೃಷ್ಣಾದಿ ರೂಪಗಳಿಂದ ಕೊಲ್ಲುವನು. ಭಾಗವತ ಸಪ್ತಮಸ್ಕಂಧದ " ಸ್ವಮಾಯಾಗುಣಮಾವಿಶ್ಯ ಬಾಧ್ಯಬಾಧಕತಾಂಗತಃ " ಎಂಬೀ ವಾಕ್ಯದಿಂದ ಮೇಲಿನ ಅರ್ಥವು ಸಿದ್ಧವಾಗುವುದು. ಆದರೆ ಬಾಧ್ಯನಾಗುವವನ ಶರೀರದೊಳಗಿದ್ದು ಬಾಧ್ಯನಾಗುವುದರಿಂದ ಶರೀರ ಸಂಬಂಧವಾದ ದುಃಖವು ಪರಮಾತ್ಮನನ್ನು ಬಾಧಿಸುವುದೋ ಇಲ್ಲವೋ ಎಂಬ ಸಂಶಯವನ್ನು ಪ್ರಮಾಣದಿಂದ ಶ್ರೀಮದಾಚಾರ್ಯರು ಪರಿಹಾರ ಮಾಡಿದ್ದಾರೆ. ಹೇಗೆಂದರೆ :—ಅದೇ ಶ್ಲೋಕದ ತಾತ್ಪರ್ಯದಲ್ಲಿ " ಬಾಧ್ಯಾದಿಸ್ಥೋ ಹರಿರ್ನಿತ್ಯಂ ಬಾಧ್ಯತಾದಿಗತೇಽಪ್ಯಪಿ । ಗೀಯತೇನತು ಬಾಧ್ಯತ್ವಾದ್ಯದೃಢದೋಷಯುತಸ್ತತ ಇತಿಭವಿಷ್ಯತ್ಪರ್ವಣಿ " ಬಾಧ್ಯರಾಗುವ ಅಂದರೆ ಮರಣ ಹೊಂದುವವರ, ಶರೀರದೊಳಗಿದ್ದುದರಿಂದ ಬಾಧ್ಯನಾದವನೆಂದು ಕರೆಸಿಕೊಳ್ಳುವನೇ ಹೊರತು ನಿಜವಾಗಿ ತಾನೇ ಬಾಧಿತನಾಗುವದಿಲ್ಲ. ಏಕೆಂದರೆ ಶಾರೀರಕವಾದ ಯಾವ ವಿಧ ದುಃಖವು ಪರಮಾತ್ಮನನ್ನು ಬಾಧಿಸುವುದಿಲ್ಲ. ಎಲ್ಲರ ದೇಹ ದೊಳಗೂ ನಿರ್ಲಿಪ್ತನಾಗಿ ಪರಮಾತ್ಮನು ಇರುವನು. ಮತ್ತು " ವಧಿಸ್ಥಭೃತವತ್ಕಾಷ್ಠೇವಸ್ಥಿಣಚ್ಚ ಜನಾರ್ದನಃ ದೇಹೇಂದ್ರಿಯಾ.

ಸುಜೀವೇಃಭ್ಯೋ ವಿವಿಚ್ಯ ಜ್ಞಾಯತೇನತ್ರಿಚ ||" ಮೊಸರೊಳಗೆ ತುಪ್ಪವು ಕಾಷ್ಠದೊಳಗೆ ಅಗ್ನಿಯು ಇಪ್ಪರೂ ಹೇಗೆ ಕಾಣಿಸಿಕೊಳ್ಳದೆ ಇರುವುವೋ, ಮಥನವಾಡಿ ಬೆಣ್ಣೆಯನ್ನು ತೆಗೆದು ಕಾಯಿಸಿದರೆ ಹೇಗೆ ತುಪ್ಪವು ಬೇರೆಯಾಗಿ ಕಾಣುವುವೋ, ಮಥನದಿಂದ ಕಾಷ್ಠದೊಳಗಿನ ಅಗ್ನಿಯು ಹೇಗೆ ವ್ಯಕ್ತವಾಗುವುದೋ ಹಾಗೆಯೇ ಪರಮಾತ್ಮನು ಎಲ್ಲರಲ್ಲಿಯೂ ಇದ್ದರೂ ಸಾಮಾನ್ಯವಾಗಿ ಕಾಣಿಸಿಕೊಳ್ಳದೆ, ಧಾನ್ಯಾದಿಗಳಿಂದ ಭಕ್ತರಿಗೆ ಮಾತ್ರ ಕಾಣಿಸಿಕೊಳ್ಳುವನು, ಎಂದು ಹರಿವಂಶದ ಭವಿಷ್ಯತ್ಪರ್ವದ ವಾಕ್ಯವಿರುವುದೆಂದು ಶ್ರೀಮದಾಚಾರ್ಯರು ಹೇಳಿರುವರು. ಆದರೆ ಒಂದು ದೇಹದೊಳಗೆ ಪರಮಾತ್ಮನಿದ್ದ ಮೇಲೆ ಆ ದೇಹ ಸಂಬಂಧವಾದ ದುಃಖಾದಿಗಳು ಪರಮಾತ್ಮನನ್ನು ಹೇಗೆ ಬಾಧಿಸಲಾರವು ಅಂದರೆ:—ತೃತೀಯಸ್ಕಂಧ ತಾತ್ಪರ್ಯದಲ್ಲಿ "ದುರ್ಭಗಾದಿ ಶರೀರಸ್ಥಸ್ಯಾಪಿ ತದ್ದೋಷಾಸ್ಪರ್ಶ ಏವಮ್ಮಹಿಮೇತ್ಯರ್ಥಃ | ಕಥಂ ದೇಹಪರೋದೇವೋ ನ ಲಿಪ್ಯೇತಹಿ ಬಂಧನೈಃ || ಕಥಂ ನದುಃಖೀ ಸಭವೇದ್ದುಃಖೀಚೇದೀಶ್ವರಃ ಕುತಃ ಮಹಿಮಾ ಪರಮಸ್ಯೈಷ ಯದ್ದೇಹಸ್ಥೋ ನಬಾಧ್ಯತೇ | ಯದದುಃಖೀಸ ಈಶಾನೋ ಮಾಯೇತಿ ಮಹಿಮೋಚ್ಯತೇ||" ಎಂದು ಹೇಳಿರುವರು. ಇದರರ್ಥ:—ನಿರ್ಭಾಗ್ಯರಾದ ಜನರ ದೇಹದೊಳಗಿದ್ದರೂ ಆ ದೇಹ ಸಂಬಂಧವಾದ ದೋಷವಿಲ್ಲದಿರುವಿಕೆಯೇ ಅವನ ಮಹಿಮೆಯು. ಹಾಗಿಲ್ಲದಿದ್ದರೆ ಒಂದು ದೇಹದೊಳಗಿದ್ದ ಮೇಲೆ ಆ ದೇಹ ಸಂಬಂಧವಾದ ಬಂಧನಾದಿಗಳಲ್ಲಿ ತಗಲದೆ ಇರುವುದು ಹೇಗೆ? ಹಾಗೆ ಬಂಧನಾದಿಗಳಲ್ಲಿ ತಗಲಿದಮೇಲೆ ಅವನು ದುಃಖಿಸದೆ ಇರುವುದು ಹೇಗೆ? ಅವನೂ ದುಃಖಪಡುವವನಾದರೆ ಈಶ್ವರನು ಹೇಗಾದನು? ಪರಮಾತ್ಮನು ದೇಹಗತನಾಗಿದ್ದರೂ ನಿರ್ಲಿಪ್ತನಾಗಿರುವನೆಂದು ಅನೇಕ ಶ್ರುತಿ ಸ್ಮೃತಿಗಳು ಹೊಗಳುತ್ತಿರುವುವು, ಹೀಗೆ ಪರಮಾತ್ಮನು ದೇಹದೊಳಗಿದ್ದರೂ ಬಾಧ್ಯನಾಗದೆ ಇರುವಿಕೆಯು ಪರಮಾತ್ಮನ ಮಹಾಮಹಿಮೆ ಎಂದು ಮೇಲಿನ ಶ್ಲೋಕಗಳಿಗೆ ಅರ್ಥವು. ಇದೇ ಅರ್ಥವನ್ನೇ ದಾಸರಾಯರು "ತಾನೊಬ್ಬನೇ ಬಾಧ್ಯಬಾಧಕನಾಹ ನಿರ್ಭೀತ" ಎಂಬ ಪದದಿಂದ ಹೇಳಿರುವರು.

ಅವತಾರಿಕೆ.—ಶ್ರೀ ಪರಮಾತ್ಮನು ಭಕ್ತವತ್ಸಲನೆಂಬುವುದನ್ನು "ಶರಣಜನ ಮಂದಾರ" ಎಂಬ ಪದ್ಯದಿಂದ ಹೇಳಿರುವರು:—

**ಶರಣಜನ ಮಂದಾರ ಶಾಶ್ವತ**
**ಕರುಣಿ ಕಮಲಾಕಾಂತ ಕಾಮದ**
**ಪರಮಪಾವನತರ ಸುಮಂಗಳ ಚರಿತ ಪಾರ್ಥಸಖಾ ||**
**ನಿರುಪಮಾನಂದಾತ್ಮ ನಿರ್ಗತ**
**ದುರಿತ ದೇವವರೇಣ್ಯನೆಂದಾ**
**ದರದಿ ಕರೆಯಲು ಬಂದೊದಗುವನು ತನ್ನವರ ಬಳಿಗೆ ||೧೦||**

ಪದ್ಯಾರ್ಥ.—ಶರಣಜನ ಮಂದಾರ=ಶ್ರೀ ಹರಿಯು ಮೊರೆಹೊಕ್ಕ ಜನರಿಗೆ ಕಲ್ಪವೃಕ್ಷದಂತಿರುವನು, ಶಾಶ್ವತ ಕರುಣಿ=ಭಕ್ತರಲ್ಲಿ ಸ್ಥಿರವಾದ ದಯೆಯುಳ್ಳವನು, ಕಮಲಾಕಾಂತ=ಲಕ್ಷ್ಮೀಪತಿಯು, ಕಾಮದ=ಇಷ್ಟ ಪೂರ್ತಿಮಾಡುವವನು, ಪರಮಪಾವನತರ = ಅತ್ಯಂತ ಪವಿತ್ರಸ್ವರೂಪನು ; ಅಥವಾ, ಪರಮಪಾವನತರ ಸುಮಂಗಳಚರಿತ=ಅತ್ಯಂತ ಪವಿತ್ರತರವಾದ ಉತ್ಕೃಷ್ಟವಾದ ಮಂಗಳಕರ ಚರಿತ್ರೆಯುಳ್ಳವನು, ಪಾರ್ಥಸಖಾ=ಅರ್ಜುನನ ಸಖನು, ನಿರುಪಮಾನಂದಾತ್ಮ=ಉಪಮೆಯಿಲ್ಲದ ಆನಂದ ಸ್ವರೂಪನು, ನಿರ್ಗತದುರಿತ=ದುಃಖಗಳಿಲ್ಲದವನು, ದೇವವರೇಣ್ಯನೆಂದು=ಬ್ರಹ್ಮಾದಿ ದೇವತೆಗಳಿಂದ ವಂದ್ಯನು, ಎಂದು, ಆದರದಿ=ಆದರದಿಂದ, ಕರೆಯಲು, ತನ್ನವರಬಳಿಗೆ=ತನ್ನ ಭಕ್ತರ ಸಮೀಪಕ್ಕೆ, ಬಂದು ಒದಗುವನು=ಆಪತ್ಕಾಲದಲ್ಲಿ ಭಕ್ತರನ್ನು ಉದ್ಧರಿಸಲು ಪ್ರಾಪ್ತನಾಗುವನು.

ತಾತ್ಪರ್ಯ.—ಭಕ್ತ ಜನರು ತಮ್ಮ ಆಪತ್ಕಾಲಗಳಲ್ಲಿ ಎಲೈ! ಮೊರೆ ಹೊಕ್ಕವರ ಕಲ್ಪವೃಕ್ಷನೆ! ಸ್ಥಿರವಾದ ದಯೆಯುಳ್ಳವನೆ! ಲಕ್ಷ್ಮೀಪತೆ! ಭಕ್ತರ ಇಷ್ಟಾರ್ಥವನ್ನು ಕೊಡುವವನೆ! ಪರಮಪಾವನತರವಾದ ಮಂಗಳ ಚರಿತ್ರನೆ! ಹೇ ಪಾರ್ಥ ಸಖ! ಉಪಮೆಯಿಲ್ಲದ ಆನಂದ ಸ್ವರೂಪನೆ! ದುರಿತದೂರನೆ! ದೇವತಾ ವಂದ್ಯನೆ! ನನ್ನನ್ನು ಉದ್ಧರಿಸು ಎಂದಾದರದಿಂದ ಕರೆಯಲು, ತಕ್ಷಣ ಭಕ್ತರ ಸಮೀಪಕ್ಕೆ ಬಂದು, ಸಕಾಲಕ್ಕೆ—ಆಪತ್ತಿಗೆ, ಒದಗುವನು.

ವಿಶೇಷಾರ್ಥ.—ಭಕ್ತವತ್ಸಲನಾದ ಶ್ರೀ ಪರಮಾತ್ಮನನ್ನು ಯಾರು ತಮ್ಮ ಆಪತ್ಕಾಲದಲ್ಲಿ ತಮ್ಮ ಸ್ವತಂತ್ರ ಕರ್ತೃತ್ವ ಬುದ್ಧಿಯನ್ನು ತೊರೆದು ನೀನೇ ಗತಿ ಎಂದು ಮೊರೆ ಹೊಗುತ್ತಾರೆಯೋ ಅವರನ್ನು ತಕ್ಷಣ ರಕ್ಷಿಸುವನು, ಇದಕ್ಕೆ ಉದಾಹರಣೆಯು:–ದ್ರೌಪದಿಯು ವಸ್ತ್ರಾಪಹರಣ ಕಾಲದಲ್ಲಿ ದುಃಶಾಸನನು ವಸ್ತ್ರವನ್ನು ಎಳೆಯುತ್ತಿರುವಾಗ ದ್ರೌಪದಿಯು ವಸ್ತ್ರವನ್ನು

ಬಿಡಿಸಿಕೊಳ್ಳಲು ಪ್ರಯತ್ನ ಮಾಡುತ್ತಿದ್ದಾಗ ಶ್ರೀಕೃಷ್ಣನು ಆಕೆಯನ್ನು ರಕ್ಷಿಸಲಿಲ್ಲ. ಯಾವಾಗ ತನ್ನ ಪ್ರಯತ್ನವು ಸಾಗದೆ ಹೋಯಿತೊ, ಆಗ "ಹಾ ಕೃಷ್ಣ! ದ್ವಾರಕವಾಸಿ! ಕ್ವಾಸಿಯಾದವನಂದನ! ಇಮಾಮನ ಸ್ಥಾಂ ಸಂಪ್ರಾಪ್ತಾಮನಾಥಾಂ ಕಿಂ ಮುಪೇಕ್ಷಸೇ" ಎಂದು ವದರುತ್ತಾ, ತನ್ನ ಪ್ರಯತ್ನವನ್ನು ಬಿಟ್ಟು ನಿಶ್ಚೇಷ್ಟಳಾದಳೋ, ಆಗ ಶ್ರೀ ಹರಿಯು ಅವಳ ವಸ್ತ್ರವನ್ನು ಅಕ್ಷಯುವನ್ನಾಗಿ ಮಾಡಿ ಮಾನವನ್ನು ರಕ್ಷಿಸಿದನು. ಗಜೇಂದ್ರನು ಮೊಸಳೆಗೆ ಸಿಕ್ಕಿ ಒಂದು ಸಹಸ್ರ ವರ್ಷಗಳ ವರೆವಿಗೂ ತಾನು ಮಹಾ ಪ್ರಯತ್ನವನ್ನು ಮಾಡಿದರೂ ಬಿಡಿಸಿಕೊಳ್ಳಲು ಸಾಧ್ಯವಾಗದೆ "ನಾರಾಯಣಾಖಿಳ ಗುರೋ ಭಗವನ್ನಮಸ್ತೇ" ಎಂದು ಪರಮಾತ್ಮನನ್ನು ಮೊರೆಹೊಕ್ಕ ತಕ್ಷಣವೇ ಪರಮಾತ್ಮನು ಪ್ರತ್ಯಕ್ಷನಾಗಿ ಬಂದು ಮೊಸಳೆಯನ್ನು ಶೀಳಿ ಗಜೇಂದ್ರನನ್ನುದ್ಧರಿಸಿದನು. ಪ್ರಹ್ಲಾದನನ್ನು ಹಿರಣ್ಯಕಶಿಪು ಖಡ್ಗದಿಂದ ಕೊಲ್ಲಲು ಉದ್ದೇಶಿಸಿ ಮಗನನ್ನು ಕುರಿತು,

ಹಿರಣ್ಯಕಶಿಪು.—ಎಲೈ ದುರಾತ್ಮ! ನನಗಿಂತಲೂ ಈಶ್ವರನೊಬ್ಬನಿರುವನೆಂದು ಬೊಗಳುತ್ತಿರುವೆಯಲ್ಲ "ಕ್ವಾಸೌ" ಅವನೆಲ್ಲಿರುವನು ?

ಪ್ರಹ್ಲಾದ.–ಪಿತನೆ! "ಸಸರ್ವತ್ರ" ಅವನು ಎಲ್ಲೆಲ್ಲಿಯೂ ಇರುವನು.

ಹಿರಣ್ಯ.—"ಯದಿ ಸ ಸರ್ವತ್ರ! ಕಸ್ಮಾಸ್ತಂಭೇ ನದೃಶ್ಯತೆ?" ಹಾಗೆ ಎಲ್ಲೆಲ್ಲಿಯೂ ಇರುವುದೇ ನಿಶ್ಚಯವಾದರೆ ಈ ಸ್ತಂಭದಲ್ಲಿ ಏಕೆ ಕಾಣುವುದಿಲ್ಲ ?

ಪ್ರಹ್ಲಾದ.—"ಸ್ತಂಭೇನ! ದೃಶ್ಯತೇ" ಎಲೈ ಸ್ತಂಭದರಸೇ! ಅಲ್ಲಿಯೂ ಕಾಣುವನು. ("ಸ್ತಂಭದರಸೇ" ಎಂದು ಮಾಡಿರುವ ಸಂಬೋಧನೆಯಿಂದ ಸ್ತಂಭವು ಹೇಗೆ ಜಡವಾದುದರಿಂದ ಭಗವತ್ಸ್ವರೂಪವನ್ನು ತಿಳಿಯಲಾರದೊ ಅದರಂತೆಯೇ ನೀನು ಜಡನಾಗಿರುವೆ! ಅಂದರೆ ಜ್ಞಾನಶೂನ್ಯನಾಗಿರುವೆ! ಆದುದರಿಂದ ನಿನಗೆ ಕಾಣಲಿಲ್ಲವೆಂಬ ಭಾವ).

ಹಿರಣ್ಯ.—ಎಲೈ ಮಂದಮತಿಯೇ! ಮನಬಂದಂತೆ ಬೊಗಳುತ್ತಿರುವ ನಿನ್ನ ತಲೆಯನ್ನು ಇಗೋ ಈ ಖಡ್ಗದಿಂದ ಬೇರ್ಪಡಿಸುವೆನು. ಆ ಹರಿಯು ಇದ್ದುದೇ ನಿಜವಾದರೆ ನಿನ್ನನ್ನು ರಕ್ಷಿಸಲಿ! ಎಂದು ಹೇಳಿ ಖಡ್ಗಪಾಣಿಯಾಗಿ ಹಿರಣ್ಯಕಶಿಪುವು ಬರುತ್ತಿರಲು ಪ್ರಹ್ಲಾದನು ನಿರ್ಭೀತನಾಗಿ ತನ್ನ

ಯೋಗಕ್ಷೇಮವನ್ನು ಪರಮಾತ್ಮನಿಗೆ ಒಪ್ಪಿಸಿ ಧ್ಯಾನಿಸುತ್ತಾ ನಿಂತುಬಿಟ್ಟನು. ಆಗ ಪರಮಾತ್ಮನು ನರಸಿಂಹ ರೂಪದಿಂದ ಹಿರಣ್ಯಕಶಿಪುವನ್ನು ಸಂಹರಿಸಿ ಪ್ರಹ್ಲಾದನನ್ನು ರಕ್ಷಿಸಿದನು. ಇವೆಲ್ಲವೂ ಪುರಾಣದ ಕಥೆಗಳೆಂದು ಉದಾಸೀನ ಮಾಡಬಾರದು, ಈಗ್ಗೆ ೧೦೦–೨೦೦ ವರ್ಷಗಳ ಹಿಂದೆಯೂ ಕೂಡ ಇಂತಹ ಅದ್ಭುತಗಳು ನಡೆದಿರುವುವೆಂದು ಭಕ್ತರ ಜೀವನ ಚರಿತ್ರೆಗಳಿಂದ ಗೊತ್ತಾಗುವುದು, ರಾಮದಾಸನು ರಾಜಕೀಯ ದ್ರವ್ಯದಿಂದ ಭದ್ರಾಚಲದ ರಾಮದೇವರ ದೇವಸ್ಥಾನವನ್ನು ಕಟ್ಟಿಬಿಡಲು ಆ ದೇಶಾಧ್ಯಕ್ಷನಾದ ತುರುಷ್ಕರಾಜನು ಕೋಪಾವೇಶದಿಂದ ರಾಮದಾಸನನ್ನು ಕಾರಾಗೃಹದಲ್ಲಿಟ್ಟು ವಿಚಿತ್ರ ಹಿಂಸೆ ಪಡಿಸುತ್ತಿರಲು ರಾಮ ಲಕ್ಷ್ಮಣರೇ ಆ ರಾಜನೆಡೆಗೆ ಬಂದು ರಾಮದಾಸನು ಖರ್ಚು ಮಾಡಿದ್ದ ದ್ರವ್ಯಗಳೆಲ್ಲವನ್ನೂ ತುರುಷ್ಕ ರಾಜನಿಗೆ ಕೊಟ್ಟು ರಾಮದಾಸನನ್ನು ರಕ್ಷಿಸಿದರೆಂಬೀ ಚರಿತ್ರೆಯನ್ನು ಆಬಾಲ ವೃದ್ಧರೂ ಓದಿ, ಕೇಳಿ, ನೋಡಿ ಆನಂದಪಡುತ್ತಿರುವರು. ಆದ್ದರಿಂದ ಅವನ್ನು ಹೆಚ್ಚಿಗೆ ನಾವು ವರ್ಣಿಸುವ ಆವಶ್ಯಕತೆ ಇರುವುದಿಲ್ಲ.

ಇಂತಹ ಚರಿತ್ರೆಗಳನ್ನು ಭಕ್ತವಿಜಯವೆಂಬ ಗ್ರಂಥದಲ್ಲಿ ಅನೇಕವಾಗಿ ನೋಡಬಹುದು. ಇದೇ ಜಗನ್ನಾಥ ದಾಸರಾಯರು ರೋಗದಿಂದ ನರಳುತ್ತ ಅಶಕ್ತರಾಗಿ ಗುರುಗಳ ಕೂಡ ತಿರುಪತಿಗೆ ಬಂದಿರುವಾಗ ಗುರುಗಳು ಇವರೊಬ್ಬರನ್ನೇ ಮನೆಯಲ್ಲಿ ಬಿಟ್ಟು ದೇವಸ್ಥಾನದಲ್ಲಿ ಭಜನೆ ಮಾಡುತ್ತಾ ಮೈಮರತು ಇದ್ದುಬಿಟ್ಟರು. ಇವರು ಹಸಿವನ್ನು ತಾಳಲಾರದೆ ಭಗವಂತನನ್ನು ಧ್ಯಾನ ಮಾಡುತ್ತಾ ತಲ್ಲಣಿಸುತ್ತಿರಲು ಶ್ರೀ ಶ್ರೀನಿವಾಸನೇ ಇವರ ಗುರುಗಳ ರೂಪದಿಂದ ಬಂದು ಮೃಷ್ಟಾನ್ನವನ್ನು ಇವರಿಗೆ ಉಣಿಸಿ ಸಂಪೂರ್ಣ ಶಕ್ತಿಯನ್ನಿತ್ತು ಹೊರಟು ಹೋದನೆಂದು ಈ ದಾಸರಾಯರ ಜೀವನ ಚರಿತ್ರೆಯಿಂದ ಗೊತ್ತಾಗುವುದು. ಆದುದರಿಂದ ದಾಸರಾಯರು " ಆದರದಿ ಕರೆಯಲು ಬಂದೊದಗುವನು ತನ್ನವರ ಬಳಿಗೆ " ಎಂದು ಹೇಳಿರುವರು. " ಶರಣಜನಮಂದಾರ " ತನ್ನನ್ನು ಮೊರೆಹೊಕ್ಕ ಜನರಿಗೆ ಕಲ್ಪವೃಕ್ಷದಂತೆ ಬೇಡಿದ ವರವನ್ನು ಕೊಡುವವನು ಎಂದರ್ಥ.

ಈ ವಿಷಯದಲ್ಲಿ ಒಬ್ಬ ವ್ಯಾಖ್ಯಾನ ಕರ್ತರು ಸ್ಥಿತಿ ಕಾಲದಲ್ಲಿ ಈ ಅರ್ಥವು ಕೂಡುವುದಿಲ್ಲವೆಂತಲೂ ಮುಕ್ತಿಯಲ್ಲಿ ಮಾತ್ರವೇ ಮುಕ್ತರಿಗೆ ಕಲ್ಪವೃಕ್ಷನಾಗಿ ಇರುವನೆಂತಲೂ ಅಭಿಪ್ರಾಯಪಟ್ಟಿರುವರು. ಈ ವಿಷಯ

ಧಲ್ಲಿ ನಮಗೆ ತೋರುವುದೇನೆಂದರೆ :—ಕಲ್ಪವೃಕ್ಷದಿಂದ ಫಲವನ್ನು ಬೇಡು ವವರು ನಿಷ್ಕಾಮ್ಯರಲ್ಲ, ಅವರು ಕಾಮ್ಯ ಫಲವನ್ನೇ ಬೇಡತಕ್ಕವರು, ಆ ಕಲ್ಪವೃಕ್ಷವೂ ಕೂಡ ಕಾಮ್ಯವಾದ ಇಷ್ಟಾರ್ಥವನ್ನು ಪೂರೈಸುವುದೇ ಹೊ ರತು ಮುಕ್ತಿಯನ್ನಾಗಲಿ ತತ್ಸಮವಾದ ಶಾಶ್ವತ ಸುಖವನ್ನಾಗಲಿ ಕೊಡುವ ಯೋಗ್ಯತೆಯು ಅದಕ್ಕಿಲ್ಲ. ಆದುದರಿಂದ ಈ ಕಲ್ಪವೃಕ್ಷದ ಉಪಮಾನ ದಿಂದ ತೋರುವುದೇನೆಂದರೆ :—“ಕೈವಲ್ಯದಾಯಕ” ಇತ್ಯಾದಿ ಪದಗ ಳಿಂದ ಮೇಲಿನ ಅನೇಕ ಸ್ಥಳಗಳಲ್ಲಿ ಪರಮಾತ್ಮನು ಮುಕ್ತಿಪ್ರದನೆಂದು ತೋ ರಿಸಿ ಇರುವರು. ಇದರಿಂದ ಏನು ತೋರುವುದೆಂದರೆ ಪರಮಾತ್ಮನು ಮು ಕ್ತಿಯನ್ನು ಮಾತ್ರವೇ ಕೊಡುವನು. ಐಹಿಕ ಫಲವನ್ನು ಬೇಡಿದರೆ ಕೊಡು ವುದಿಲ್ಲವೇನೋ ಎಂದು ಜನರಿಗೆ ಸಂಶಯ ಬಂದೀತೆಂಬ ಭಾವನೆಯಿಂದ ದಾಸರಾಯರು ಕಲ್ಪವೃಕ್ಷ ಹೇಗೆ ಬೇಡಿದ್ದನ್ನು ಕೊಡುವುದೋ ಹಾಗೆಯೇ ಕಾಮ್ಯವನ್ನು ಬೇಡುವವರಿಗೆ ಅವುಗಳನ್ನೂ ಕೊಟ್ಟೇ ಕೊಡುವನು ಎಂಬು ವುದನ್ನು ತೋರಿಸುವುದಕ್ಕಾಗಿ “ ಶರಣಜನ ಮಂದಾರ ” ಎಂದು ಹೇಳಿರು ವಂತೆ ತೋರುತ್ತದೆ. ದಾಸರಾಯರ ಅಭಿಪ್ರಾಯವು ಇದೇ ಎಂದು ಹೇಗೆ ಹೇಳಬಹುದೆಂದರೆ ಅದಕ್ಕೆ ಕೆಲವು ಆಧಾರಗಳಿವೆ ಅವು ಯಾವುವೆಂದರೆ:—

ಈ ದಾಸರಾಯರ ಪರಮ ಗುರುಗಳಾದ ವಿಜಯದಾಸರವರು ಮಾಡಿದ ಪದ.

ರಾಗ–ಮೋಹನ–ಆದಿತಾಳ.

ಇಂಥಾ ಪ್ರಭುವ ಕಾಣೆನಾ । ಈ ಜಗದೊಳಗಿಂಥಾ ಪ್ರಭೂವ ಕಾಣೆ ನಾ । ಬೇಡಿದೊರವ (ಬೇಡಿದಿಷ್ಟಾರ್ಥ) ಕೊಡುವ । ಭಕ್ತರ ತಪ್ಪುನೋಡದೆ ಬಂದು ಪೊರೆವಾ । ಗಾಡೀಕಾರನು ಗರುಡಾರೂಢಾ ಗುಣವಂತಾ ಮಹಾ ಪ್ರೌಢ ಪ್ರತಾಪ ಜಗದಿ ಗೂಢಾದಿ ಸಂಚಾರಿಪಾ । ಪಾಡಿ ಪೊಗಳಿ ಕೊಂಡಾ ಡುವರಾ ಮುಂ। ದಾಡುತಲಿಪ್ಪನು ಕಾಡೊಳಗಿದ್ದರು ॥ ಎಂದು ಪಾಡಿರುವರು.

ಜಗನ್ನಾಥದಾಸರಾಯರು ಹೇಳಿರುವ “ಶರಣಜನ ಮಂದಾರ” ಎಂಬ ಪದ್ಯದ ಅರ್ಥವು ಪ್ರಾಯಶಃ ವಿಜಯದಾಸರ ಪದದ ಅರ್ಥವನ್ನೇ ಸೂಚಿ ಸುವುದು ; ಪ್ರಕೃತ ಬೇಡಿದೊರವ ಕೊಡುವ ಎಂಬ ಪದವು ಶರಣಜನಮಂ ದಾರ ಎಂಬ ಅರ್ಥವನ್ನು ಸೂಚಿಸುವುದು. ಹೇಗೆಂದರೆ ಮಂದಾರರವೆಂದರೆ ಕಲ್ಪವೃಕ್ಷವು-ಕಾಮಿತವನ್ನು ಕೊಡುವುದಕ್ಕೆ ಕಲ್ಪವೃಕ್ಷವೆಂದು ಹೆಸರು. ಇದರ ಅರ್ಥವನ್ನೂ ಕೂಡ ಮುಕ್ತರ ಪರವಾಗಿ ಏಕೆ ಮಾಡಬಾರದು?

ಎಂದು ಆಕ್ಷೇಪಿಸಬಹುದು! ಆದರೆ ಅದು ಕೂಡುವುದಿಲ್ಲ. ಏಕೆಂದರೆ :–ಬೇಡಿದ ವರವನ್ನು ಕೊಡುವ ಎಂದು ಹೇಳಿರುವರು. ಮುಕ್ತಿಯಲ್ಲಿ ಇಷ್ಟಾರ್ಥ ಸಿದ್ಧಿಗೆ ಯಾಚಿಸಬೇಕಾದ ಅವಶ್ಯಕವಿಲ್ಲ. ಏಕೆಂದರೆ, "ಯಂಯಂ ಸುಖೀ ಕಾಮಯತೇರ್ಥ ಮತ್ರ ಸಂಕಲ್ಪಮಾತ್ರಾತ್ಸಕಲೋಪಿ ಸಸ್ಯಾತ್" ಮುಕ್ತಿಯಲ್ಲಿರುವ ಆನಂದ ಸ್ವರೂಪರಾದ ಜನರು ಯಾವುಯಾವುದನ್ನು ಇಚ್ಛಿಸುವರೋ ಅವುಗಳೆಲ್ಲವೂ ಅವರ ಇಚ್ಛಾಮಾತ್ರದಿಂದಲೇ ಕೈಗೂಡುವುವು ಎಂದು ವೇದವು ತಿಳಿಸುತ್ತದೆ. (ಮಧ್ವವಿಜಯ ೧೧ನೆಯ ಸರ್ಗದ ೭೬ನೇ ಶ್ಲೋಕ ನೋಡಬಹುದು). ವಿಜಯದಾಸರು ಬೇಡಿದ ವರವನ್ನು ಕೊಡುವ ಎಂದು ಹೇಳಿರುವುದು ಮುಕ್ತರ ವಿಷಯವಲ್ಲ. ಮತ್ತು ಕಲ್ಪವೃಕ್ಷವು ನಶ್ವರವನ್ನೇ ಕೊಡುವದೆಂಬ ವಿಷಯದಲ್ಲಿ ಭಾಗವತ ದಶಮಸ್ಕಂಧದಲ್ಲಿ "ತಥೈವ ಮತ್ತಃ ಫಲಸಂಪದಃಸ್ಯುಃ ಉಚ್ಚಾವಚಾಃ ಕಲ್ಪತರೋರಿವಾರ್ಥಿನಾಂ" (ಗೋಪಿಯರನ್ನು ಕುರಿತು ಶ್ರೀ ಕೃಷ್ಣನು ಹೇಳಿದುದು) ಕಲ್ಪವೃಕ್ಷದ ದೆಶೆಯಿಂದ (ಅರ್ಥಿಗಳಿಗೆ) ಅಪೇಕ್ಷಿಸುವವರಿಗೆ ಯೋಗ್ಯತಾನುಸಾರವಾದ ಫಲ ಪ್ರಾಪ್ತಿಯಾಗುವಂತೆ ನನ್ನಿಂದಲೂ ಅರ್ಥಿಗಳ ಯೋಗ್ಯತಾನುಸಾರ ಉತ್ತಮಾಧಮ ಫಲಗಳು ಪ್ರಾಪ್ತವಾಗುವುವು ಎಂದು ಹೇಳಿರುವರು. ಮುಕ್ತರಿಗೆ ಹೊಸದಾದ ಫಲಪ್ರಾಪ್ತಿಯಾಗುವ ಸಂಭವವೇ ಇಲ್ಲ. ಆದುದರಿಂದ ಇದು ಅಮುಕ್ತರ ವಿಷಯವೆಂದೇ ಹೇಳಬೇಕು. ಮತ್ತು ಅಷ್ಟಮಸ್ಕಂಧದಲ್ಲಿ (ಶುಕಾಚಾರ್ಯರು ಪರೀಕ್ಷಿದ್ರಾಜನನ್ನು ಕುರಿತು ಹೇಳಿದ ವಾಕ್ಯ) "ತತೋ ಭವತ್ಪಾರಿಜಾತಃ ಸುರಲೋಕ ವಿಭೂಷಣಃ। ಪೂರಯತ್ಯರ್ಥಿನೋ ಯೋರ್ಥೈಃ ಶಶ್ವದ್ಭುವಿ ಯಥಾ ಭಗವಾನ್ ॥" ತದನಂತರ ದೇವಲೋಕಕ್ಕೆ ಅಲಂಕಾರಭೂತವಾದ ಪಾರಿಜಾತವು (ಕಲ್ಪವೃಕ್ಷವು) ಉತ್ಪನ್ನವಾಯಿತು. ಆ ವೃಕ್ಷವು, ನೀರು ಹೇಗೆ ಭೂಲೋಕದಲ್ಲಿ ಅರ್ಥಿಗಳ ಅರ್ಥವನ್ನು (ಬೇಡುವವರ ಇಷ್ಟಾರ್ಥವನ್ನು) ಪೂರೈಸುತ್ತಿದ್ದೀಯೋ ಹಾಗೆಯೇ ಸರ್ವ ಲೋಕದಲ್ಲಿರುವ ಅರ್ಥಿಗಳ ಅರ್ಥವನ್ನು ಪೂರೈಸುತ್ತಿರುವುದು. ಇವೆಲ್ಲವನ್ನು ನೋಡಿದರೆ ಬೇಡಿದವರಿಗೆ (ಕುಚೇಲಾದಿಗಳಿಗೆ) ಇತ್ತಂತೆ, ಐಹಿಕಗಳನ್ನೂ ಕೊಡುವನೆಂದು ಅರ್ಥವಾಗುವುದು.

"ಕಾಮದ" ಎಂಬ ಪದವು ಭಕ್ತರ ಕಾಮಿತವನ್ನು (ಅಪೇಕ್ಷಿತವಾದ ವಸ್ತುವನ್ನು) ಕೊಡುವವನೆಂದರ್ಥ. ಇದರಿಂದ ಶರಣಜನ ಮಂದಾರ-ಕಾಮದ-ಇವೆರಡು ಪದಗಳಿಗೂ ಒಂದೇ ಅರ್ಥ ಬರುವುದು. ಆದರೂ ಪುನ

ರುಕ್ತಿ ದೋಷವು ಬಂದೀತೆಂದು ಶಂಕಿಸಬಾರದು. ಶರಣಜನ=ಮೊರೆಹೊಕ್ಕ ಜನರಿಗೆ, ಮಂದಾರ-ಕಲ್ಪವೃಕ್ಷವು ಹೇಗೆ ಕಾಮಿತವೋ ಹಾಗೆ ಪರಮಾತ್ಮನು ಕಾಮಿತಪ್ರದನು ಎಂದು ಅರ್ಥ ಮಾಡುವುದರಿಂದ ಪುನರುಕ್ತಿ ಬಾಧೆಯು ಬರುವುದಿಲ್ಲ. ಮತ್ತು ಪರಮಾತ್ಮನು, ಕಲ್ಪವೃಕ್ಷದಂತೆ ನಶ್ವರ ಫಲವನ್ನು ಮಾತ್ರ ಕೊಡುವವನಲ್ಲ ಎಂಬುವುದನ್ನು ತೋರಿಸುವುದಕ್ಕಾಗಿ "ಶಾಶ್ವತ ಕರುಣಿ" ಎಂದೂ ಹೇಳಿರುವರು. ಈ ರೀತಿ ಹೇಳಿದ್ದರಿಂದ ಬಂದ ಲಾಭವೇನೆಂದರೆ ಕುಚೇಲ ಪ್ರಹ್ಲಾದಾದಿಗಳಿಗೆ ಕೊಟ್ಟಂತೆ ಇಹದಲ್ಲಿ ವಿವಿಧ ಭೋಗಂಗಳನ್ನೂ ಕೊಟ್ಟು ಪರಲೋಕದಲ್ಲಿ ಮುಕ್ತಿಯನ್ನೂ ಕೊಡುವನು ಎಂಬುದು. ಆಮದರಿಂದ ಪರಮಾತ್ಮನ ಪ್ರಸಾದವು ಶಾಶ್ವತವಾದುದು ಎಂದು ಹೇಳಿದಂತಾಯಿತು. "ಪರಮಪಾವನತರ ಸುಮಂಗಳ ಚರಿತ" ಪರಮಾತ್ಮನ ಸುಮಂಗಳಚರಿತ್ರೆಯು ಪರಮಪಾವನತರವಾದುದು ಎಂದರ್ಥ ಇದೇ ಸಂಧಿಯ ಮೊದಲನೆಯ ಪದ್ಯದಲ್ಲಿ "ಭುವನ ಪಾವನವೆನಿಪ ಲಕುಮಿಾಧವನ ಮಂಗಳ ಚರಿತೆ" ಎಂದು ಹೇಳಿದ ಅರ್ಥವನ್ನೇ ಇಲ್ಲಿ ಹೇಳಿರುವರು, ಮತ್ತು ಭಾಗವತ ದಶಮಸ್ಕಂಧದಲ್ಲಿ 'ವಾಸುದೇವ ಕಥಾಪ್ರಶ್ನಂ ಪುರುಷಾಂ ಸ್ತ್ರೀನ್ಪುನಾತಿಹಿ । ವಕ್ತಾರಂ ಪೃಚ್ಛಕಂ ಶ್ರೋತೃಂ ಸ್ತತ್ಪಾದ ಸಲಿಲಂಯಥಾ ॥' ಪರಮಾತ್ಮನ ಕಥಾ ಪ್ರಶ್ನೆಯು, ಪ್ರಶ್ನೆ ಮಾಡುವವರನ್ನೂ, ಹೇಳುವವರನ್ನೂ, ಕೇಳುತ್ತಿರುವರೆಲ್ಲರನ್ನೂ ವಿಷ್ಣು ಪಾದೋದಕವು (ಗಂಗೆಯು ಅಥವಾ ಸಾಲಿಗ್ರಾಮ ತೀರ್ಥವು) ಹೇಗೆ ಸ್ನಾನಪಾನಾದಿಗಳನ್ನು ಮಾಡುವ ಜನರನ್ನು ಪವಿತ್ರರನ್ನಾಗಿ ಮಾಡುವುದೋ, ಹಾಗೆ ಪವಿತ್ರರನ್ನಾಗಿ ಮಾಡುವುವು ಎಂದು ಹೇಳಲ್ಪಟ್ಟಿದೆ. ಅದೇ ಅರ್ಥವನ್ನೇ ದಾಸರಾಯರು "ಪರಮಪಾವನತರ ಸುಮಂಗಳ ಚರಿತ" ಎಂದು ಹೇಳಿರುವರು. "ಪಾರ್ಥಸಖ" ಎಂಬುವುದರಿಂದ ಪರಮಾತ್ಮನು ಭಕ್ತರ ವಶ್ಯನೆಂದು ತೋರಿಸಿರುವರು. ಪರಮಾತ್ಮನ ಭಕ್ತರು ಅನೇಕರಿರಲು ಅರ್ಜುನನಿಗೇ ಸಖನೆಂದು ಏಕೆ ಹೇಳಿದರೆಂದರೆ ಅರ್ಜುನನ ಭಕ್ತಿ ಪಾಶಕ್ಕೆ ಕಟ್ಟುಬಿದ್ದಂತೆ ಮತ್ತಾರ ಪಾಶಕ್ಕೂ ಪರಮಾತ್ಮನು ತಗಲಲಿಲ್ಲ. ಯದ್ಯಪಿ ಪರಮಾತ್ಮನಿಗೆ ಭೀಮಸೇನದೇವರು ಅರ್ಜುನನಿಗಿಂತಲೂ ಹೆಚ್ಚಾಗಿ ಬೇಕಾದವರಾದರೂ ಅವರು ನಿಷ್ಕಾಮ ಭಕ್ತರು. ಆದುದರಿಂದ ಅವರು ಪರಮಾತ್ಮನಿಂದ ಯಾವುದನ್ನೂ ಬೇಡದೆ ಪರಮಾತ್ಮನಿಗೆ ದಾಸರಾಗಿಬಿಟ್ಟರು. ಅರ್ಜುನನು ಬೇಡಿ

ಕೊಂಡ ಪ್ರಯುಕ್ತ ಅವನಿಗೆ ಸಾರಥಿಯಾಗಿಯೂ, ಸ್ನೇಹಿತನಾಗಿಯೂ, ದೂತನಾಗಿಯೂ ಇದ್ದು ತನ್ನ ದೇಹವನ್ನೂ ಅವನಿಗೆ ಒಪ್ಪಿಸಿದನು. ಆದುದರಿಂದಲೇ ಪಾರ್ಥ ಸಖನೆಂದು ಹೇಳಿದರು. ' ನಿರುಪಮಾನಂದ ' ಬ್ರಹ್ಮಾದಿಗಳಿಕಿಂತಲೂ ಹೆಚ್ಚಾದ ಉಪಮಾನರಹಿತವಾದ ಆನಂದವು ರಮಾದೇವಿಯರಿಗೆ ಇದ್ದರೂ, ಅವರೂ ಪರಾಧೀನರೇ ಆಗಿರುವರು. ಪರಮಾತ್ಮನದು ರಮಾದೇವಿಯರ ಆನಂದಕ್ಕಿಂತಲೂ ಅತ್ಯಧಿಕವಾಗಿರುವುದರಿಂದಲೂ, ತಾನು ಸ್ವತಂತ್ರನಾದುದರಿಂದಲೂ, ಈ ಆನಂದವು ಮತ್ತಾರಿಗೂ ಇಲ್ಲ. ಬ್ರಹ್ಮಸೂತ್ರ ಭಾಷ್ಯದಲ್ಲಿ ' ನಾರಾಯಣಂ ಗುಣೈಸ್ಸರ್ವೈರುದೀರ್ಣಂ ದೋಷವರ್ಜಿತಂ ' ಎಂದು ಹೇಳಿರುವರು. ಸರ್ವ ಗುಣಗಳಿಂದಲೂ ಪೂರ್ಣನಾಗಿ ಇರುವವನು ಪರಮಾತ್ಮನೇ. ಆದುದರಿಂದ ನಿರುಪಮವಾದ ಆನಂದ ಸ್ವರೂಪನೆಂದು ಹೇಳಿರುವರು. ಆನಂದಸ್ವರೂಪ ಮಾತ್ರವೇ ಅಲ್ಲ. ' ನಿರ್ಗತ ದುರಿತ ' ದೋಷರಹಿತನು ಎಂದೂ ಹೇಳಿರುವರು. ಬ್ರಹ್ಮಾದಿಗಳಿಗೂ ಕೂಡ ಪರಾಧೀನತೆ ದೇಹನಾಶಾದಿ ದೋಷಗಳುಂಟು. ಇಂತಹ ದೋಷಗಳು ಪರಮಾತ್ಮನಿಗಿಲ್ಲವೆಂದರ್ಥ. ಆದುದರಿಂದಲೇ " ದೇವವರೇಣ್ಯ " ಬ್ರಹ್ಮಾದಿವಂದ್ಯನು, ವರೇಣ್ಯ ಎಂಬ ಪದಕ್ಕೆ (ನಮ್ಮನ್ನು ಪಾಲಿಸುವುದಕ್ಕಾಗಿ ನಮ್ಮಿಂದ ಇವನು) ವರಿಸಲು ಅರ್ಹನು ಎಂದು ಅರ್ಥ. ಒಬ್ಬರನ್ನು ಪಾಲಕತ್ವೇನ ವರಿಸಬೇಕಾದರೆ ಸ್ವೋತ್ತಮರನ್ನೇ ವರಿಸುವರು. ಈ ಅಭಿಪ್ರಾಯದಿಂದಲೇ ವರೇಣ್ಯ ಅಂದರೆ ವಂದ್ಯ ಎಂದು ಅರ್ಥ ಮಾಡಿರುವುದು.

ಹೀಗೆ ಮೇಲಿನ ಪದ್ಯದಿಂದ, ತನ್ನನ್ನು ಆದರದಿಂದ ಪ್ರಾರ್ಥಿಸುವವರನ್ನು ಉದ್ಧರಿಸುವುದಕ್ಕಾಗಿ ಅವರ ಸಮೀಪಕ್ಕೆ ತಾನು ಬರುವೆನೆಂದು ಹೇಳಿ ಈಗ ' ಜನನಿಯನು ಕಾಣದಿಹ ಬಾಲಕ ' ಎಂಬ ಪದ್ಯದಿಂದ ಭಕ್ತರ ಭಕ್ತಿಯನ್ನು ವೃದ್ಧಿಗೊಳಿಸುವುದಕ್ಕಾಗಿ ತಾನು ಕಣ್ಮರೆಯಾಗಿದ್ದು ಅವರು ತನ್ನನ್ನು ಕಾಣದೆ ಹಂಬಲಿಸುವುದನ್ನು ನೋಡಿ ಸಂತೋಷದಿಂದ ಅವರಿದ್ದೆಡೆಗೆ ಬಂದು ಕಾಯ್ವನೆಂದು ಹೇಳುತ್ತಾರೆ :—

**ಜನನಿಯನು ಕಾಣದಿಹ ಬಾಲಕ**
**ನೆನನೆನದು ಹಲವುತಿರೆ ಕತ್ತಲೆ**
**ಮನೆಯೊಳಗಿಪ್ಪವನ ನೋಡುತ ನಗುತ ಹರುಷದಲಿ ||**

**ತನಯನಂ ಬಿಗಿದಪ್ಪಿ ರಂಜಿಸಿ**
**ಕನಲಿಕೆಯ ಕಳೆವಂತೆ ಮಧುಸೂ**
**ದನನು ತನ್ನವರಿದ್ದೆಡೆಗೆ ಬಂದೊದಗಿ ಸಲಹುವನು || ೧೧ ||**

ಪದ್ಯಾರ್ಥ. —ಜನನಿಯನು=ತಾಯಿಯನ್ನು, ಕಾಣದಿಹ = ಕಾಣದೆ ಇರುವ, ಬಾಲಕ=ಮಗುವು, ನೆನನೆನದು = ತಾಯಿಯನ್ನು ನೆನೆಸಿಕೊಂಡು, ಹಲವುತಿರೆ=ಹಂಬಲಿಸುತ್ತಿರಲು, (ಜನನಿಯು) ಕತ್ತಲೆ ಮನೆಯೊಳಗೆ ಅಡಗಿದ್ದು, ಅವನ=ಆ ಮಗುವನ್ನು, ನೋಡುತ, ನಗುತ, ಹರುಷದಲಿ=ಸಂತೋಷದಿಂದ, ತನಯನಂ=ಮಗುವನ್ನು, ಬಿಗಿದಪ್ಪಿ=ಆಲಿಂಗನೆ ಮಾಡಿಕೊಂಡು, ರಂಬಿಸಿ=ಸಮಾಧಾನಗೊಳಿಸಿ, ಕನಲಿಕೆಯ=ತನ್ನ ಮೇಲಿನ ಕಳವಳವನ್ನು, ಕಳೆವಂತೆ=ಪರಿಹರಿಸುವಂತೆ, ಮಧುಸೂದನನು=ಮಧುನಾಮಕ ದೈತ್ಯನನ್ನು ಕೊಂದ ಶ್ರೀ ಪರಮಾತ್ಮನು, ತನ್ನವರು=ತನ್ನ ಭಕ್ತರು, ಇದ್ದೆಡೆಗೆ=ಇರುವ ಸ್ಥಳಕ್ಕೆ ಬಂದು, ಸಲಹುವನು=ಸಂರಕ್ಷಿಸುವನು.

ತಾತ್ಪರ್ಯ.—ತಾಯಿಯು, ಮಗುವು ತನ್ನನ್ನು ಕಾಣದಿದ್ದಾಗ ಏನು ಮಾಡುವುದೆಂಬುವುದನ್ನು ನೋಡುವುದಕ್ಕಾಗಿ ಶಿಶುವನ್ನು ಪಡಶಾಲೆಯಲ್ಲಿ ಬಿಟ್ಟು ತಾನು ಕತ್ತಲೆ ಕೋಣೆಯಲ್ಲಿ ಮರೆಯಾಗಿ ನಿಂತು ನೋಡುತ್ತಿರುವಾಗ ಆ ಮಗುವು ತಾಯಿಯನ್ನು ಕಾಣದೆ ಆಕೆಯನ್ನು ನೆನೆಸಿಕೊಂಡು ಹಂಬಲಿಸುವುದನ್ನು ನೋಡಿ ಸಂತೋಷದಿಂದ ಓಡಿ ಬಂದು ಆ ಮಗುವನ್ನೆತ್ತಿ ಬಿಗಿದಪ್ಪಿ ಸಂತೈಸಿ ತನ್ನನ್ನು ಕಾಣದಿರುವಾಗ ಹಂಬಲಿಸುತ್ತಿದ್ದ ಕಳವಳವನ್ನು ಪರಿಹರಿಸುವಂತೆ ಶ್ರೀ ಪರಮಾತ್ಮನು ತನ್ನ ಭಕ್ತರು ತನ್ನನ್ನು ಕಾಣದೆ ಹಂಬಲಿಸುವುದನ್ನು, ಅಂದರೆ ಭಜಿಸುವುದನ್ನು ನೋಡಿ ಸಂತೋಷದಿಂದ ಅವರ ಸಮೀಪಕ್ಕೆ ಬಂದು ಅವರನ್ನುದ್ಧರಿಸುವನು.

ವಿಶೇಷಾರ್ಥ.—ಸಾಧಾರಣವಾಗಿ ಲೋಕದಲ್ಲಿ ಸಣ್ಣ ಮಕ್ಕಳ ತಾಯಿಯರು ತಮ್ಮ ಮಕ್ಕಳನ್ನು ಕೆಳಗೆ ಮಲಗಿಸಿ ಅವರ ಕಣ್ಣಿಗೆ ತಾವು ಬೀಳದೆ ಮರೆಯಾಗಿ ನಿಲ್ಲುವುದೂ ಅಥವಾ ಕತ್ತಲು ಕೋಣೆಯಲ್ಲಿ ಅಡಗಿಕೊಂಡು ತಾವು ಮಾತ್ರ ಮಗುವನ್ನು ನೋಡುತ್ತಾ ಮಗುವು ತಮ್ಮನ್ನು ಕಾಣದ ಹಾಗೆ ನಿಂತುಕೊಂಡು ನೋಡುತ್ತಿರುವುದೂ, ಮಗುವು ತಾನು ಮಲಗಿದ ಸ್ಥಳದಲ್ಲಿ ಗುಂಡಗೆ ತಿರುಗುತ್ತಾ, ಸುತ್ತಲೂ ನೋಡಿ ತಾಯಿಯನ್ನು ಕಾಣದೆ ಅಳುವುದಕ್ಕೆ ಆರಂಭಿಸುವುದು ತಾಯಿಯರಿಗ ಇದು ಒಂದು ಸಂತೋಷಕರವಾದ ಆಟ. ಮತ್ತು ಅದು ಗಟ್ಟಿಯಾಗಿ ಅಳಲಾರಂಭಿಸಿದರೆ ನಗುತ್ತಾ ಓಡಿ

ಬಂದು ಅದನ್ನು ಸಮಾಧಾನ ಮಾಡುವುದು ಇವೆಲ್ಲವೂ ಮಕ್ಕಳನ್ನು ಹೆತ್ತವರಿಗೆ ಅನುಭವದಲ್ಲಿ ಕಾಣುವುದು. ಇದರಂತೆಯೇ ಪರಮಾತ್ಮನು ತನ್ನ ಭಕ್ತರನ್ನು ಪರೀಕ್ಷಿಸಿ ತದನಂತರ ಉದ್ಧರಿಸುವನು. ಇದಕ್ಕೆ ವ್ಯಾಖ್ಯಾನ ಮಾಡಿದವರಲ್ಲೊಬ್ಬರು "ಕತ್ತಲೆ ಕೋಣೆಯೊಳಗಿದ್ದ ಬಾಲಕನು ಹಂಬಲಿಸುತ್ತಿರೆ ತಾಯಿಯು ಬಂದು ಬಿಗಿದಪ್ಪಿದಳೆಂದು" ಅರ್ಥ ಮಾಡಿರುವರು. ಆ ಅರ್ಥವು ಉಪಮಾನ ಉಪಮೇಯಗಳಿಗೆ ಸರಿಹೋಗುವುದಿಲ್ಲ. ಏಕೆಂದರೆ ಕತ್ತಲೆಯಲ್ಲಿರುವವನು ಬೆಳಕಿನಲ್ಲಿರುವವರನ್ನು ಕಾಣುವುದು ಸ್ವಭಾವ ಸಿದ್ಧವು. ಬೆಳಕಿನಲ್ಲಿದ್ದವರು ಕತ್ತಲಿನಲ್ಲಿರುವವರನ್ನು ಕಾಣುವುದು ಸಾಧ್ಯವಲ್ಲ. ಮಗುವು ಕತ್ತಲೆ ಕೋಣೆಯಲ್ಲಿರುತ್ತಿದ್ದರೆ ಬೆಳಕಿನೊಳಗಿದ್ದ ತಾಯಿಯನ್ನು ಕಾಣಬಹುದು. ಬೆಳಕಿನೊಳಗಿದ್ದ ತಾಯಿಯು ಕತ್ತಲಿನೊಳಗಿದ್ದ ಮಗುವನ್ನು ಕಾಣಲು ಸಾಧ್ಯವಲ್ಲ. ಅಷ್ಟೇ ಅಲ್ಲದೆ ಮಗುವನ್ನೊಂದನ್ನೇ ಕತ್ತಲೆ ಕೋಣೆಯಲ್ಲಿ ಬಿಟ್ಟು ತಾಯಿಯು ಹೊರಗೆ ಬರುವುದೆಂಬುವುದು ಲೋಕವಿರುದ್ಧವಾಗಿರುವುದು. ಕತ್ತಲಲ್ಲಿ ಮಗು ಒಂದೇ ಇದ್ದರೆ ಹೆದರುವುದೆಂಬ ಭಯವು ತಾಯಿಯರಿಗೆ ಇರುವುದು ಸಹಜವು. ಸಣ್ಣ ಮಗುವು ಜ್ಞಾನಪೂರ್ವಕವಾಗಿ ಕತ್ತಲು ಕೋಣೆಯಲ್ಲಿ ಅಡಗಿಕೊಳ್ಳುವ ಸಂಭವವೂ ಲೋಕ ವಿರುದ್ಧವೇ. ಆದುದರಿಂದ "ಕತ್ತಲು ಕೋಣೆಯಲ್ಲಡಗಿದ್ದ ಬಾಲಕನ" ಎಂದು ಪದ ಮಾಡುವುದಕ್ಕಿಂತಲೂ, ತಾಯಿಯು 'ಕತ್ತಲೆ ಕೋಣೆಯಲ್ಲಡಗಿದ್ದವನ' ಎಂದು ಬೇರೆ ಪದ ಮಾಡುವುದು ಸರಿಯೆಂದು ತೋರುತ್ತದೆ.

ಪ್ರಕೃತ ಭಕ್ತರ ವಿಷಯದಲ್ಲಿ ಈ ಉಪಮಾನ ಉಪಮೇಯಗಳು ಹೇಗೆ ಸರಿಹೋಗುವುವೆಂದರೆ :–ಜೀವನಲ್ಲಿರುವ ಅಜ್ಞಾನಾಂಧಕಾರದಲ್ಲಿ ಪರಮಾತ್ಮನು ಅಡಗಿರುವನು. ಅಂದರೆ ಮನುಷ್ಯನು ತನ್ನ ಅಜ್ಞಾನದಿಂದ ಜೀವನಿಗೂ ದೇಹಕ್ಕೂ ಇರುವ ಭೇದವನ್ನು ತಿಳಿಯದೆ, ಜೀವನೇ ದೇಹವೆಂದು ಭಾವಿಸಿ, ಅಹಂಕಾರ ಮಮಕಾರಗಳಿಂದ, ಬೆಳಕಿನಂತೆ ಕಾಣುತ್ತಿರುವ ವಿಷಯಸುಖದಲ್ಲಿ ಮಗ್ನನಾಗಿ, ತನ್ನ ಅಜ್ಞಾನವೆಂಬ ಕತ್ತಲಿನಲ್ಲಿ ಅಡಗಿರುವ ಪರಮಾತ್ಮನನ್ನು ಕಾಣುವುದಿಲ್ಲ. ಶ್ರೀ ಪರಮಾತ್ಮನು, ಇವನ ಅಜ್ಞಾನವೆಂಬ ಕತ್ತಲಿನಲ್ಲಡಗಿದ್ದು, ಯಾವ ಕಾಲದಲ್ಲಿ ಸತ್ಸಹವಾಸದಿಂದ ಮನುಷ್ಯನಚಿತ್ತದಲ್ಲಿ ಜ್ಞಾನವೆಂಬ ಸೂರ್ಯನು ಉದಿಸುವನೋ, ಯಾವ ಕಾಲದಲ್ಲಿ ಈ ಮನುಷ್ಯನು ತನ್ನನ್ನು ಎಡಬಿಡದೆ ಭಜಿಸುವನೋ ಆ ಕಾಲದಲ್ಲಿ ತಾನು ಅಪರೋ

ಕ್ಷದಲ್ಲಿ ಕಾಣುವನು. ಅಥವಾ ಭಕ್ತರಾದರೂ ತಮಗೆ ಕಷ್ಟಬಂದ ಕಾಲ ದಲ್ಲಿ ಪರಮಾತ್ಮನನ್ನು ಪ್ರಾರ್ಥಿಸುತ್ತಿದ್ದರೂ, ಕಷ್ಟ ನಿವೃತ್ತಿಗೋಸ್ಕರ ಸ್ವಕ ತೃತ್ವಾಭಿಮಾನದಿಂದ ಎಷ್ಟುಕಾಲಪರ್ಯಂತರವೂ ತಮ್ಮ ಪ್ರಯತ್ನವನ್ನು ಮಾಡು ತ್ತಿರುವರೋ ಆವರೆವಿಗೂ ಪರಮಾತ್ಮನು ಇವರ ಅಜ್ಞಾನಮೂಲಕವಾದ ಕತೃತ್ವದ ಕತ್ತಲೆಯಲ್ಲಿದ್ದು ಇವರ ಕಣ್ಣಿಗೆ ಬೀಳದೆ ನೋಡುತ್ತಿದ್ದು ಯಾ ವಾಗ ಸಂಪೂರ್ಣವಾಗಿ ಸ್ವಕತೃತ್ವವನ್ನು ಬಿಟ್ಟು ನೀನೇ ಗತಿ ಎಂದು ಶರಣಾ ಗತರಾಗುವರೋ ಆಗ ಸಂತೋಷದಿಂದ ನಗುತ್ತ ಭಕ್ತರೆಡೆಗೆ ಬಂದು, ದ್ರೌ ಪದಿ ಮೊದಲಾದವರನ್ನು ಆಪತ್ಕಾಲದಲ್ಲಿ ರಕ್ಷಿಸಿದಂತೆ ರಕ್ಷಿಸುವನು.

ಈ ವಿಷಯದಲ್ಲಿ ಒಂದು ಇತಿಹಾಸವಿರುವುದು. ಅದೆಂತೆಂದರೆ :— ಪೈಥಣಾ ನಗರದಲ್ಲಿ ಕೂರ್ಮದಾಸನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನು ಜನಿಸುವಾಗಲೇ ಅವನಿಗೆ ಕೈ ಕಾಲುಗಳು ಇರಲಿಲ್ಲ. ಪರಮ ಭಗವದ್ಭಕ್ತ ನಾಗಿದ್ದನು. ಎಲ್ಲಿಯಾದರೂ ಹರಿದಾಸರು ಭಜನಾದಿಗಳನ್ನು ಮಾಡುತ್ತಿದ್ದರೆ ಪ್ರಯಾಸದಿಂದ ದೇಕಿಕೊಂಡು ಅಲ್ಲಿಗೆ ಹೋಗಿ ಮೃದಂಗ ತಾಳ ಮೊದಲಾ ದುವುಗಳನ್ನು ಬಾರಿಸುತ್ತಾ ಆ ಕೀರ್ತನೆಯನ್ನು ಶ್ರವಣಮಾಡುತ್ತಾ ಆನಂದ ದಿಂದ ಕಾಲ ಕಳೆಯುತ್ತಿದ್ದನು. ಹೀಗಿರಲು ಒಂದಾನೊಂದು ದಿವಸ ಹರಿ ದಾಸರೊಬ್ಬರು ಪಂಡರಾಪುರದ ಮಹಾತ್ಮ್ಯೆಯನ್ನು ಹೇಳುತ್ತಿರಲು ಅದನ್ನು ಕೇಳಿ ತಾನೂ ಪಂಡರಾಪುರಕ್ಕೆ ಹೋಗಬೇಕೆಂದು ಯೋಚಿಸಿದನು. ಆಗ ಅಲ್ಲಿದ್ದವರೆಲ್ಲರು, ನಿನಗೆ ಕಾಲಿಲ್ಲವಲ್ಲ, ನೀನು ಹೋಗುವುದೆಂತು ? ಅಂದರು. ಆದರೂ ಕೂರ್ಮದಾಸನು ಧೈರ್ಯಮಾಡಿಕೊಂಡು ಹೊರಟು, ವಿಠಲನನ್ನು ಧ್ಯಾ ನಿಸುತ್ತಾ, ದೇಕಿಕೊಂಡು ಒಂದು ಹರದಾರಿ ದೂರ ಬಂದುಬಿಟ್ಟನು. ಆಗ್ಗೆ ಬಹಳ ಆಯಾಸವೂ ಹಸಿವೂ ಬಾಯಾರಿಕೆಗಳೂ ಆಗಿ ಮುಂದಕ್ಕೆ ಹೋಗಲು ಸಾಧ್ಯವಿಲ್ಲವಾದುದರಿಂದ ಪಾಂಡುರಂಗಾ ! ನಿನ್ನ ಸಂಕಲ್ಪವಿದ್ದಂತೆ ಮಾಡು ಎಂದು ಸ್ವಸ್ಥವಾಗಿ ತನ್ನ ಸ್ವಾತಂತ್ರ್ಯವನ್ನು ಮರೆತು ಕೂತುಬಿಟ್ಟನು. ಆಗ ವಿಠಲನು ಕರುಣದಿಂದ ಒಬ್ಬ ಸಾಹುಕಾರನಂತೆ ವೇಷಧಾರಿಯಾಗಿ ಇವನಿ ದ್ದೆಡೆಗೆ ಬಂದು ಇವನಿಗೆ ಒಂದು ಸ್ಥಳವನ್ನೂ ಆಹಾರವನ್ನೂ ಕಲ್ಪಿಸಿಕೊಟ್ಟು ಹೀಗೆ ಹೇಳಿದನು. ನೀನು ದಿವಸ ಒಂದಕ್ಕೆ ಒಂದು ಹರದಾರಿಯಂತೆ ಹೋ ಗುತ್ತಿರು, ನಾನು ಪಂಡರಪುರದ ಜಾತ್ರೆಗೆ ಹೋಗುವವರಿಗೆ ಸಹಾಯ ಮಾ ಡುವುದೇ ನನ್ನ ಉದ್ಯೋಗವನ್ನಾಗಿ ಇಟ್ಟುಕೊಂಡಿರುವೆನು, ಆದುದರಿಂದ

ಪ್ರತಿ ದಿವಸದಲ್ಲೂ ನೀನಿದ್ದಲ್ಲಿಗೇ ಬಂದು ಸ್ಥಳವಸತಿಯನ್ನೂ ಆಹಾರವನ್ನೂ ಕಲ್ಪಿಸಿ ಕೊಡುವೆನು, ಚಿಂತೆ ಮಾಡಬೇಡ ಎಂದು ಸಮಾಧಾನಗೊಳಿಸಿ ಅಲ್ಲೇ ಕಣ್ಮರೆಯಾದನು. ಕೂರ್ಮದಾಸನು ದಿನ ಒಂದಕ್ಕೆ ಒಂದು ಹರದಾರಿಯಂತೆ ಹೋಗುತ್ತಲೇ ಇದ್ದನು. ನಿತ್ಯದಲ್ಲೂ ಪರಮಾತ್ಮನು ಸಾಹುಕಾರನ ರೂಪದಿಂದ ಬಂದು ಇವನಿಗೆ ತಕ್ಕ ಅನುಕೂಲಗಳನ್ನು ಕಲ್ಪಿಸುತ್ತಿದ್ದನು. ಸಹೋದರರೆ :–ನೋಡಿದಿರಾ ? ಭಕ್ತರಲ್ಲಿ, ಪರಮಾತ್ಮನಿಗೆ ಎಷ್ಟು ವಾತ್ಸಲ್ಯ ! ಅದಂತಿರಲಿ, ಪಂಡರಾಪುರವು ಇನ್ನು ಆರು ಹರದಾರಿ ದೂರವಿತ್ತು. ಕೂರ್ಮದಾಸನು ಅಲ್ಲಿಗೆ ಸೇರಬೇಕಾದರೆ ಇನ್ನೂ ೬ ದಿವಸಗಳು ಬೇಕಾಗಿದ್ದವು. ಅಷ್ಟರಲ್ಲಿ ಆಷಾಢ ಶುದ್ಧ ಏಕಾದಶಿಯು (ಪಂಡರಾಪುರದಲ್ಲಿ ಉತ್ಸವಾದಿಗಳು ನಡೆಯಬೇಕಾದ ದಿನ) ಪ್ರಾಪ್ತವಾಯಿತು. ಆ ದಿವಸ ಎಲ್ಲರೂ ಪಂಡರಾಪುರವನ್ನು ಸೇರಿದ್ದರು, ಇದನ್ನು ಕೂರ್ಮದಾಸನು ತಿಳಿದು ಚಿಂತಾಕ್ರಾಂತನಾಗಿ, ೬ ಹರದಾರಿ ದೂರ ಒಂದೇ ದಿವಸದಲ್ಲಿ ಹೋಗಲು ಸಾಧ್ಯವಿಲ್ಲದುದರಿಂದ, ಹಾ ದೇವ! ನನ್ನನ್ನು ಕುಂಟನನ್ನಾಗಿ ಮಾಡಿ ನಿನ್ನ ದರ್ಶನವನ್ನೀಯದೆ ಈ ರೀತಿ ಮಾಡಿಬಿಟ್ಟೆ. ಇನ್ನು ನಾನು ಬದುಕುವದಿಲ್ಲ. ಇಲ್ಲೇ ಈ ದೇಹವನ್ನು ಬಿಟ್ಟುಬಿಡುವೆನು. ನನ್ನನ್ನು ನಿನ್ನ ಪಾದಾರವಿಂದದಲ್ಲಿ ಸೇರಿಸಿಕೋ ಎಂದು ಹಂಬಲಿಸುತ್ತಿರಲು, ವಿಠಲನು ಕರುಣದಿಂದ ಚತುರ್ಭುಜಗಳಿಂದ ಕೂಡಿ ಪೀತಾಂಬರಧಾರಿಯಾಗಿ ಅವನಿಗೆ ಪ್ರತ್ಯಕ್ಷನಾದನು. ನಿತ್ಯದಲ್ಲಿಯೂ ಸಾಹುಕಾರನ ರೂಪದಿಂದ ರಕ್ಷಿಸುತ್ತಿದ್ದರೂ ಇವನಿಗೆ ಅದು ಗೊತ್ತಿರಲಿಲ್ಲ. ಆ ದಿವಸ ಪ್ರತ್ಯಕ್ಷವಾಗಿ ತನ್ನ ರೂಪವನ್ನು ತೋರಿದನು. ಬಳಿಕ ಕೂರ್ಮದಾಸನ ಕೋರಿಕೆಯಂತೆ ಪಂಡರಾಪುರದಲ್ಲಿ ಯಾವ ರೂಪದಿಂದ ನಿಂತಿರುವನೋ ಅದೇ ರೂಪದಿಂದ ಅವನ ಎದುರಿಗೆ ನಿಂತನು. ಅದ್ಯಾಪಿ ಅಲ್ಲಿಯೂ ಪಂಡರಾಪುರದಂತೆ ಜಾತ್ರೆಯು ನಡೆಯುವುದು. ಹೀಗೆಲ್ಲಾ ಇರುವುದರಿಂದಲೇ " ಭಕ್ತವತ್ಸಲ " ನೆಂಬ ಬಿರುದು ಪರಮಾತ್ಮನಿಗೆ ಇರುವುದು. ಇಂತಹ ಚರಿತ್ರೆಗಳು ಅನೇಕವಾಗಿ ಇರುವುವು. ಉದಾಹರಣೆಗಾಗಿ ಈ ಒಂದು ಚರಿತ್ರೆಯನ್ನು ಮಾತ್ರ ಇಲ್ಲಿ ಹೇಳಿದ್ದೇವೆ. ಇವೆಲ್ಲವನ್ನೂ ತಿಳಿದಿದ್ದುದರಿಂದಲೇ ದಾಸರಾಯರು ' ಜನನಿಯನು ಕಾಣದಿಹ ಬಾಲಕನು ' ಎಂಬೀ ಪದ್ಯವನ್ನು ಉಪಯೋಗಿಸಿದ್ದುಎಂದು ಈ ಪದ್ಯಾರ್ಥದಿಂದಲೇ ವ್ಯಕ್ತವಾಗುವುದು

ಇದರಿಂದ ಪರಮಾತ್ಮನ ಕಾರುಣ್ಯವನ್ನು ಹೊಗಳುತ್ತಾರೆ :—

**ಇಟ್ಟ ಕಲ್ಲನು ಭಕುತಿಯಿಂದಲಿ**
**ಕೊಟ್ಟ ಭಕುತಗೆ ಮೆಚ್ಚಿ ತನ್ನನು**
**ಕೊಟ್ಟ ಬಡಬ್ರಾಹ್ಮಣನ ಒಪ್ಪಿಡಿಯವಲಿಗಖಿಳಾರ್ಥ||**
**ಕೆಟ್ಟ ಮಾತುಗಳಂದ ಚೈದ್ಯನ**
**ಪೊಟ್ಟೆಯೊಳಗಿಂ ಬಿಟ್ಟ ಬಾಣದ**
**ಲಿಟ್ಟ ಭೀಷ್ಮನವಗುಣಗಳೆಣಿಸಿದನೇನೊ ಕರುಣಾಳೂ ||೧೨||**

ಪದ್ಯಾರ್ಥ.—ಇಟ್ಟಕಲ್ಲನು = ಇಟ್ಟಿಕೆಯನ್ನು, ಭಕುತಿಯಿಂದಲಿ = ಭಕುತಿಯಿಂದ, ಕೊಟ್ಟ=ನಿಲ್ಲುವುದಕ್ಕಾಗಿ ಕೊಟ್ಟ, ಭಕುತಗೆ = ಪುಂಡರೀ (ಲೀ) ಕನೆಂಬ ಭಕ್ತನಿಗೆ, ಮೆಚ್ಚಿ=ಪ್ರಸನ್ನನಾಗಿ, ತನ್ನನೇ = ವಿಠ್ಠಲನೆಂಬ ಸ್ವರೂಪವನ್ನೇ, ಕೊಟ್ಟ=ಕೊಟ್ಟನು, ಬಡಬ್ರಾಹ್ಮಣನ = ಕುಚೇಲನೆಂಬ ಬಡಬ್ರಾಹ್ಮಣನು ಕೊಟ್ಟ, ಒಪ್ಪಿಡಿ=ಒಂದು ಓಡಿ, ಅವಲಿಗೆ=ಅವಲಕ್ಕಿಗೆ, ಅಖಿಳಾರ್ಥ=ಚತುರ್ವಿಧ ಪುರುಷಾರ್ಥಗಳನ್ನು (ಕೊಟ್ಟ) ಕೊಟ್ಟನು, ಕೆಟ್ಟ ಮಾತುಗಳಂದ- ತನ್ನ ಮನಬಂದಂತೆ ನಿಂದಿಸಿದ, ಚೈದ್ಯನ=ಶಿಶುಪಾಲನನ್ನು, ಪೊಟ್ಟೆಯೊಳು=ತನ್ನ ಉದರದಲ್ಲಿ, ಇಂಬಿಟ್ಟ=ಸೇರಿಸಿಕೊಂಡನು, ಬಾಣದ ಲಿಟ್ಟ=ಬಾಣಗಳಿಂದ ಪ್ರಹರಿಸಿದ, ಭೀಷ್ಮನ=ಭೀಷ್ಮಾಚಾರ್ಯರ, ಅವಗುಣ ಗಳ=ಅಪರಾಧಗಳನ್ನು, ಎಣಿಸಿದನೇ=ಮನಸ್ಸಿಗೆ ತಂದುಕೊಂಡನೇ? (ಆದು ದರಿಂದ), ಕರುಣಾಳು=(ಶ್ರೀ ಹರಿಯು) ಕರುಣಾಪೂರ್ಣನು.

ತಾತ್ಪರ್ಯ.—ಪುಂಡರೀಕನೆಂಬ ಭಕ್ತನು ನಿಲ್ಲುವುದಕ್ಕಾಗಿ ಭಕ್ತಿ ಯಿಂದ ಕೊಟ್ಟ ಒಂದು ಇಟ್ಟಿಕೆಯಮೇಲೆ ಅವನ ಭಕ್ತಿಗೆ ಮೆಚ್ಚಿ ವಿಠ್ಠಲ ರೂಪದಿಂದ ಶ್ರೀ ಹರಿಯು ಪಂಢರಪುರದಲ್ಲಿ ನಿಂತುಬಿಟ್ಟನು. ಪರಮ ದರಿ ದ್ರನಾದ ಕುಚೇಲನೆಂಬ ಬ್ರಾಹ್ಮಣನು ಬಹು ಭಕ್ತಿಯಿಂದ ತಂದಿದ್ದ ಒಂದು ಮುಷ್ಟಿ ಅವಲಕ್ಕಿಯನ್ನು ಸ್ವೀಕರಿಸಿ ಅವನಿಗೆ ಚತುರ್ವಿಧ ಪುರುಷಾರ್ಥಗ ಳನ್ನು ಕೊಟ್ಟನು. ಶಿಶುಪಾಲನು ಅಸುರಾವೇಶದಿಂದ ಶ್ರೀ ಕೃಷ್ಣನನ್ನು ಮನಬಂದಂತೆ ಬೈಯ್ಯುತ್ತಿರಲು, ಅವನನ್ನು ಸಂಹರಿಸಿ, ಅವನನ್ನು ಉದರ ದಲ್ಲಿ ಸೇರಿಸಿಕೊಂಡನು. ಯುದ್ಧಕಾಲದಲ್ಲಿ ತನ್ನನ್ನು ಬಾಣಗಳಿಂದ ಹೊ ಡೆದ ಭೀಷ್ಮಾಚಾರ್ಯರ ತಪ್ಪನ್ನು ಸ್ಮರಿಸಿದನೇ! (ಇಲ್ಲ, ಅವನನ್ನು ಉದ್ಧರಿಸಿ ದನು) ಆದುದರಿಂದ ಇವನ ಕಾರುಣ್ಯವನ್ನು ಎಷ್ಟು ವರ್ಣಿಸಿದರೂ ಸ್ವಲ್ಪ ವೇ ಎಂದು ತಾತ್ಪರ್ಯ.

ವಿಶೇಷಾರ್ಥ.—ಇಟ್ಟಿಕಲ್ಲನು ಭಕ್ತಿಯಿಂದ ಕೊಟ್ಟವನೆಂದು ದಾಸ ರಾಯರು ಉದಾಹರಿಸಿದ ಭಕ್ತರ ಚರಿತ್ರೆಯನ್ನು ಜನರೆಲ್ಲರೂ ಕೇಳಿರಬಹು ದು. ಆದರೂ ಭಕ್ತರ ಚರಿತ್ರೆಯ ಆವರ್ತನೆಯು ಸಕಲ ಪಾಪನಿವಾರಕವಾ ದುದರಿಂದ ಅದರ ಸ್ಮಾರಕಕ್ಕಾಗಿ ಆ ಚರಿತ್ರೆಯನ್ನು ಸೂಕ್ಷ್ಮವಾಗಿ, ತಿರಗೀ ಇಲ್ಲಿ ಬರೆಯುವೆವು. ಹಿಂದಕ್ಕೆ ಪಂಢರಾಪುರದಲ್ಲಿ ಪುಂಡರೀಕನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನು ಪರಮ ಅಯೋಗ್ಯನೂ, ಕಠಿನ ಚಿತ್ತ ಉಳ್ಳ ವನೂ, ಮಾತಾಪಿತೃಗಳ ದ್ರೋಹಿಯೂ ಆಗಿದ್ದನು. ಸದ್ವಿಷಯವು ಅವ ನಿಗೆ ವಿಷನಾಗಿ ಕಾಣುತ್ತಿತ್ತು. ಹೀಗಿರಲು ಆ ಊರಿನಲ್ಲಿದ್ದ ಆಸ್ತಿಕ ಮಹಾ ಜನರೆಲ್ಲರೂ ಕೂಡಿ ಕಾಶೀ ಕ್ಷೇತ್ರದ ಮಹಿಮೆಯನ್ನು ಕೇಳಬೇಕೆಂದು ನಿಶ್ಚ ಯಿಸಿ, ಚಪ್ಪರ ಮೊದಲಾದುವನ್ನು ಅಲಂಕರಿಸಿ ಒಬ್ಬ ಪುರಾಣೀಕನನ್ನು ಕರೇಕಳುಹಿಸಿ ಅವನ ಮುಖದಿಂದ ಪುರಾಣ ಕೇಳಲು ಸಿದ್ಧರಾದರು. ಆಗ ಪುಂಡರೀಕನ ಮಡದಿಯು ಊರೊಳಗಿದ್ದವರೆಲ್ಲರೂ ಅಲ್ಲಿಗೆ ಹೋಗುವುದನ್ನು ನೋಡಿ ತಾವೂ ಅಲ್ಲಿಗೆ ಹೋಗಬೇಕೆಂದು ಅಂಗಲಾಚಿ ಬೇಡಿಕೊಂಡಳು. ಆ ಮಹಾತ್ಮೆಯನ್ನು ಕೇಳಿದ ಕೂಡಲೆ, ಕಾಶಿಗೆ ಹೋಗಬೇಕೆಂಬ ಇಚ್ಛೆಯು ಆಕೆಗೆ ಹುಟ್ಟಿ ಅಲ್ಲಿಗೆ ಹೋಗಿ ಬರಬೇಕೆಂದು ಆ ಪತಿವ್ರತಾ ಶಿರೋಮಣಿ ಯು ಬೇಡಿಕೊಂಡಳು. ಅದಕ್ಕೊಪ್ಪಿ ಪುಂಡರೀಕನು ಕಾಶಿಗೆ ಪ್ರಯಾಣ ಮಾಡಿದನು. ಆತನ ತಂದೆ ತಾಯಿಗಳು ಈ ಸಮಾಚಾರವನ್ನು ಕೇಳಿ ಪುತ್ರ ವಾತ್ಸಲ್ಯದಿಂದ ತಾವು ಆತನನ್ನು ಬಿಟ್ಟು ಇರಲಾರದೆ ತಾವೂ ಹೊರಡಬೇ ಕೆಂದರು. ಪುಂಡರೀಕನು ಅವರನ್ನು ಧಿಕ್ಕರಿಸಿ ತನ್ನ ಸತಿಯೊಡನೆ ತಾನು ಮಟ್ಟಿಗೆ ಹೊರಟುಬಿಟ್ಟನು. ಅಭಿಮಾನದಿಂದ ಪೀಡಿತರಾಗಿ ತಂದೆ ತಾಯಿ ಗಳು ತಾವೂ ಹಿಂದೆಯೇ ಪ್ರಯಾಣ ಬೆಳಸಿ, ಅವನು ಯಾವ ಯಾವ ಊರಿನಲ್ಲಿ ಇಳಿಯುತ್ತಾನೆಯೋ ಅಲ್ಲಿ ತಾವೂ ಬೇರೆ ಇಳಿಯುತ್ತಾ ಶಿಕ್ಕಿದ ಸ್ವಲ್ಪ ಅನ್ನವನ್ನೇ ತಿಂದುಕೊಂಡು ಗಂಟು ಹೊತ್ತುಕೊಂಡು ನಡೆದುಬರು ತ್ತಿದ್ದರು. ಇವನು ಸತಿ ಸಮೇತ ಮೃಷ್ಟಾನ್ನ ತಿಂದು ಸುಖದಿಂದ ಪ್ರಯಾಣ ಮಾಡುತ್ತಿದ್ದನು. ಹೀಗೆ ಸ್ವಲ್ಪ ದಿವಸಗಳಲ್ಲಿ ಕಾಶಿಗೆ ಸಮೀಪದಲ್ಲಿದ್ದ ಒಂದು ಗ್ರಾಮಕ್ಕೆ ಬಂದು ರಾತ್ರಿ ಒಂದು ಛತ್ರದಲ್ಲಿ ಇಳಿದಿದ್ದನು. ಅಲ್ಲಿಗೆ ಇನ್ನೂ ಬಹುಮಂದಿ ಯಾತ್ರೀಕರು ಬಂದಿದ್ದರು- ಅವರು ಆ ಊರಿನಲ್ಲಿದ್ದ ಕುಕ್ಕುಟ ಮಹರ್ಷಿಗಳ ಚರಿತ್ರೆಯನ್ನು ಬಹಳವಾಗಿ ಕೊಂಡಾಡುತ್ತಿದ್ದು

ದನ್ನು ಕೇಳಿ ಅವರು ಎಲ್ಲಿರುವರೆಂದು ವಿಚಾರಿಸಲು ಆ ಛತ್ರಕ್ಕೆ ಎದುರಿಗಿದ್ದ ಆಶ್ರಮವೇ ಅವರದೆಂದು ಹೇಳಿದರು. ಇವನು ಬಹಳ ಕುತೂಹಲದಿಂದ ಯಾವಾಗ ಬೆಳಗಾಗುವುದು! ಯಾವಾಗ ಅವರನ್ನು ಕಾಣುವೆನು ಎಂದು ಬೆಳಗಾಗುವುದನ್ನು ನಿರೀಕ್ಷಿಸುತ್ತಿದ್ದನು.

ಹೀಗಿರಲು ಅರುಣೋದಯಕಾಲಕ್ಕೆದ್ದು ಬೀದಿಯ ಕಟ್ಟೆಯಮೇಲೆ ಕೂತುಕೊಂಡಿರಲು ಆರೇಳು ಮಂದಿ ಕಾಳ ಕವ್ವಾದ, ಕುರೂಪಿಗಳಾದ ಸ್ತ್ರೀಯರು ಆ ಕುಕ್ಕುಟಾಶ್ರಮವನ್ನು ಪ್ರವೇಶಿಸಿ ಅದನ್ನು ಗುಡಿಸಿ, ಸಾರಿಸಿ, ರಂಗವಲ್ಯಾದಿಗಳಿಂದ ಅಲಂಕಾರ ಮಾಡಿದರು. ಸ್ವಲ್ಪ ಹೊತ್ತಿನ ಒಳಗೆ ಈ ಏಳು ಮಂದಿ ಸ್ತ್ರೀಯರು ದಿವ್ಯವಾದ ದೇವಸ್ತ್ರೀ ರೂಪವುಳ್ಳವರಾದರು. ಇದನ್ನು ನೋಡಿದ ಪುಂಡರೀಕನು ತಕ್ಷಣ ಆ ಸ್ತ್ರೀಯರಿಗೆ ನಮಸ್ಕರಿಸಿ ಕುಕ್ಕುಟ ಮಹರ್ಷಿಗಳು ಎಲ್ಲಿರುವರೆಂದು ಕೇಳಲು ಇಲ್ಲಿಯೇ ಇರುವರು ನೋಡು ಎಂದು ತೋರಿಸಿದರು. ಇವನಿಗೆ ಆಗಲೂ ಕಾಣಲಿಲ್ಲ. ಏನಮ್ಮಾ ಸುಳ್ಳು ಹೇಳುತ್ತೀರಿ, ಇಲ್ಲಿಯೂ ಇಲ್ಲವಲ್ಲ ಅಂದನು. ಆಗ ಆ ಸ್ತ್ರೀಯರು ಎಲೈ ಪಾಪಿ! ನಿನ್ನ ಕಣ್ಣಿಗೆ ಅವರು ಗೋಚರವಾಗುವರೆ? ಅವರು ಅಲ್ಲೇ ಮಾತಾಪಿತೃಗಳ ಸೇವಾ ಮಾಡುತ್ತಿರುವರು. ನೀನು ಪರಮ ಪಾಪಿ. ಮಾತಾಪಿತೃಗಳು ನಿನಗಾಗಿ ಕಷ್ಟವನ್ನನುಭವಿಸುತ್ತಿದ್ದರೆ ನೀನು ಅವರನ್ನು ತಿರಸ್ಕರಿಸಿ, ಮಹಾ ಪಾಪವನ್ನು ಕಟ್ಟಿಕೊಂಡಿರುವೆ. ನಿನ್ನ ಕೂಡ ಮಾತನಾಡಿದರೂ ನಮಗೆ ಪಾಪವು ಸಂಭವಿಸುವುದು. ನಿನ್ನನ್ನು ನಮ್ಮ ಕಣ್ಣಿಂದಲೂ ನೋಡಬಾರದು ಅಂದರು. ಆಗ ಪುಂಡರೀಕನು, ಅಮ್ಮಂದಿರಾ! ನೀವು ಯಾರು? ದೇವಸ್ತ್ರೀಯರಂತೆ ಕಾಣುತ್ತೀರಿ! ಈ ಆಶ್ರಮವನ್ನು ಶುದ್ಧಿ ಮಾಡಲು ಕಾರಣವೇನು? ದಯವಿಟ್ಟು ತಿಳಿಸಬೇಕೆಂದು ಬೇಡಿಕೊಂಡನು. ಆಗ ಆ ಸ್ತ್ರೀಯರು ಇವನೊಂದಿಗೆ ಮಾತನಾಡಲಿಷ್ಟವಿಲ್ಲದಿದ್ದರೂ ಇವನನ್ನುದ್ಧರಿಸಬೇಕೆಂಬ ಉದ್ದೇಶದಿಂದಲೇ ಹೀಗೆ ಹೇಳತೊಡಗಿದರು :—ಎಲೈ ಪಾಪಿ! ಕೇಳು. ನಾವು ಗಂಗಾ, ಗೋದಾವರಿ ಮೊದಲಾದ ಸಪ್ತ ಗಂಗೆಯರು. ನಮ್ಮಲ್ಲಿ ಅನೇಕ ಪಾಪಿಗಳು ಸ್ನಾನವನ್ನು ಮಾಡಿ ಅವರ ಪಾಪಗಳನ್ನೆಲ್ಲಾ ನಮ್ಮಲ್ಲಿ ಬಿಟ್ಟುಬಿಡುತ್ತಾರೆ. ನಾವು ಆ ಪಾಪಗಳನ್ನು ಕಳೆದುಕೊಳ್ಳುವುದಕ್ಕಾಗಿ ಮಾತಾಪಿತೃಗಳ ಸೇವಾನಿರತರಾದ ಈ ಮಹಾನುಭಾವರ ಸೇವಾ ಮಾಡಿ ಪಾಪದಿಂದ ಮುಕ್ತರಾಗಿ ಹೊರಟುಹೋಗುತ್ತೇವೆ. ನಾವು ಪಾಪದಿಂದ ಕೂಡಿ ಇಲ್ಲಿಗೆ ಬರುವಾಗ ಕುರೂಪಿಗಳಾಗಿ ಬರುವೆವು. ಸೇವಾ

ಮಾಡಿದ್ದರಿಂದ ನಮ್ಮ ನಿಜ ಸ್ವರೂಪವು ನಮಗೆ ಬರುವುದು. ಈ ಮಹರ್ಷಿಗಳಿಗೆ ಮಾತಾಪಿತೃಗಳ ಸೇವಾದಿಂದಲೇ ಇಂತಹಾ ಜ್ಞಾನವೂ ಕೀರ್ತಿಯೂ ಬಂದಿರುವುವು. ನೀನು ಮುಖ್ಯವಾದ ಧರ್ಮವನ್ನು ಬಿಟ್ಟು ಕಾಶಿಗೆ ಹೋದರೇನು ? ಮತ್ತೆಲ್ಲಿ ಹೋದರೇನು ? ನಿನ್ನ ಪಾಪವು ಹೋಗಲಾರದು ಎಂದು ಹೇಳಿದರು. ಪುಂಡರೀಕನು ಕೂಡಲೆ ಆ ಸ್ತ್ರೀಯರಿಗೆ ನಮಸ್ಕರಿಸಿ, ಪಶ್ಚಾತ್ತಪ್ತನಾಗಿ, ತಂದೆ ತಾಯಿಗಳ ಬಳಿಗೆ ಬಂದು ನಮಸ್ಕಾರವನ್ನು ಮಾಡಿ, ಅಲ್ಲಿ ನಡೆದುದನ್ನೆಲ್ಲಾ ಹೇಳಿ ಆ ಹೊತ್ತು ಮೊದಲು ತಂದ ತಾಯಿಗಳಿಗಿಂತಲೂ ಬೇರೆ ದೈವವಿಲ್ಲವೆಂದು ಭಾವಿಸಿ ಅವರ ಸೇವಾನಿರತನಾದನು. ಆಗ ಅವನಿಗೆ ಪರಮಾತ್ಮನಲ್ಲಿ ದೃಢವಾದ ಭಕ್ತಿಯು ಹುಟ್ಟಿ ದಿವ್ಯವಾದ ಜ್ಞಾನೋದಯವಾಯಿತು. ಆ ತಂದೆ ತಾಯಿಗಳ ಸೇವಾದಿಂದಲೇ ಅವರಂತರ್ಯಾಮಿಯಾದ ಪರಮಾತ್ಮನು ಪ್ರಸನ್ನನಾಗುವನೆಂಬ ದೃಢವಾದ ನಂಬಿಕೆಯಿಂದ ಅವರನ್ನು ಕರೆದುಕೊಂಡು ಊರಿಗೆ ತಿರುಗಿ ಬಂದು ಸರ್ವದಾ ಅವರ ಸೇವಾ ಮಾಡುತ್ತಿದ್ದನು.

ಹೀಗಿರುತ್ತಿರಲು ಒಂದಾನೊಂದು ದಿವಸ ಆತನು ಚಂದ್ರಭಾಗಾ ನದಿಯಲ್ಲಿ ತಂದೆ ತಾಯಿಗಳಿಗೆ ಸ್ನಾನವನ್ನು ಮಾಡಿಸಿ ಅಲ್ಲೇ ಅವರಿಗೆ ವಸ್ತ್ರಾದಿಗಳನ್ನು ಕೊಟ್ಟು ಉಪಚರಿಸುತ್ತಾ ತದೇಕನಿಷ್ಠನಾಗಿ ಸೇವಿಸುತ್ತಿರುವಾಗ ಶ್ರೀ ಪರಮಾತ್ಮನು ಅವನ ಭಕ್ತಿಯನ್ನು ಪರೀಕ್ಷಿಸುವುದಕ್ಕಾಗಿ, ಅವನು ಕೂತು ಪಿತೃಸೇವಾನಿರತನಾಗಿದ್ದಾಗ ಅವನ ಹಿಂಭಾಗದಲ್ಲಿ ಬಂದು ನಿಂತನು. ಅವನು ಪರಮಾತ್ಮನ ಕಾಲಂದಿಗೀ ಧ್ವನಿಯನ್ನು ಕೇಳಿ, ಆಹಾ ! ಸ್ವಾಮಿ ಬಂದಿರುವನು, ನಿಲ್ಲಲು ಕೂಡ ಅವಕಾಶವಿಲ್ಲ ಎಲ್ಲೆಲ್ಲಿಯೂ ಕೆಸರೇ ಇರುವುದು, ಎಂದು ಯೋಚಿಸಿ, ಕೂತಹಾಗೆಯೇ ಒಂದು ಇಟ್ಟಿಕೆಯನ್ನು ಹಿಂದಕ್ಕೆ ಬಿಸುಟು ಸ್ವಾಮಿ ! ಸ್ವಲ್ಪ ಇದರ ಮೇಲೆ ನಿಲ್ಲು ! ನಾನು ನಮ್ಮ ತಂದೆ ತಾಯಿಗಳನ್ನು ಮನೆಯಲ್ಲಿ ಬಿಟ್ಟು ಶೀಘ್ರವಾಗಿ ಬರುವೆನು ಎಂದು ಹೇಳಿ ತಂದೆ ತಾಯಿಗಳನ್ನು ಕರೆದುಕೊಂಡು ಹೋಗಿ ಮನೆಯಲ್ಲಿ ಬಿಟ್ಟು ಅವರನ್ನು ಭೋಜನಾದಿಗಳಿಂದ ಉಪಚರಿಸಿ ಅವರನ್ನು ದಿವ್ಯಾಸನದಲ್ಲಿ ಕೂಡಿಸಿ, ಅವರ ಅಪ್ಪಣೆಯನ್ನು ಪಡೆದು ಶ್ರೀ ಹರಿಯು ನಿಂತಿದ್ದ ಸ್ಥಳಕ್ಕೆ ಬಂದನು. ಶ್ರೀ ಪರಮಾತ್ಮನು ಪುಂಡರೀಕನ ಹಾದಿಯನ್ನು ನೋಡುತ್ತಾ ನಿಂತುಬಿಟ್ಟಿದ್ದನು. ಪುಂಡರೀಕನು ಅಲ್ಲಿಗೆ ಬಂದು ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಸ್ವಾಮಿ ! ನಿನ್ನನ್ನು ಬಹಳ ಹೊತ್ತು ಕಾಯಿಸಿಬಿಟ್ಟೆನು, ಕ್ಷಮಿಸಬೇಕೆಂದು

ಬೇಡಿಕೊಂಡನು. ಪರಮಾತ್ಮನು ಅವನ ಭಕ್ತಿಗೆ ಮೆಚ್ಚಿ, ನಿನಗೆ ಬೇಕಾದು ದನ್ನು ಬೇಡು, ಕೊಡುವೆನು ಅಂದನು. ಪುಂಡರೀಕನು ಸ್ವಾಮಿ ನಿನ್ನನ್ನು ಅನೇಕ ಭಕ್ತರು ಸೇವಾ ಮಾಡುವಂತೆಯೂ ನನಗೆ ಯಾವಾಗಲೂ ನಿನ್ನ ದರ್ಶನವಾಗುವಂತೆಯೂ ಅನುಗ್ರಹ ಮಾಡುತ್ತಾ ಈಗ ನೀನು ನಿಂತಹಾಗೆ ಯೇ ಸ್ಥಿರವಾಗಿ ಇಲ್ಲಿಯೇ ನಿಲ್ಲಬೇಕೆಂದು ಕೇಳಿಕೊಂಡನು. ಪರಮಾತ್ಮನು ಹಾಗೆಯೇ ಆಗಲೆಂದು ವಿಠ್ಠಲನೆಂಬ ಹೆಸರಿನಿಂದ ಪುಂಡರೀಕನ ಇಷ್ಟದಂತೆ ರುಕ್ಮಿಣೀ ಸಮೇತನಾಗಿ ಅಲ್ಲಿಯೇ ನಿಂತುಬಿಟ್ಟನು. ಆದ್ದರಿಂದಲೇ ದಾಸ ರಾಯರು " ಇಟ್ಟಿಕಲ್ಲನು ಭಕುತಿಯಿಂದಲಿ ಕೊಟ್ಟ ಭಕುತಗೆ ಕೊಟ್ಟ ತನ್ನ ನು " ಎಂದು ಹೇಳಿರುವರು, ಮತ್ತು ಕುಚೇಲನೆಂಬ ಬಡಬ್ರಾಹ್ಮಣನು ಮಹಾ ಭಗವದ್ಭಕ್ತನಾಗಿ ವಿಷಯ ಸುಖವನ್ನು ತೊರೆದು ಸಂಸಾರ ಚಿಂತೆ ಯನ್ನು ಮನಸ್ಸಿಗೆ ತಂದುಕೊಳ್ಳದೆ ಹರಿಧ್ಯಾನ ನಿರತನಾಗಿರಲು ಇವನ ಮಡ ದಿಯಾದ ಸತಿ ಶಿರೋಮಣಿಯು ಹಸಿವೆಯಿಂದ ಅಳುತ್ತಿರುವ ಮಕ್ಕಳ ಬಾಧೆ ಯನ್ನು ತಾಳಲಾರದೆ ಶ್ರೀ ಕೃಷ್ಣನ ದರ್ಶನ ಮಾಡಿ ಬನ್ನಿರೆಂದು ಅನೇಕಾ ವರ್ತಿ ಪತಿಯನ್ನು ಬೇಡಿಕೊಂಡಳು. ಬ್ರಾಹ್ಮಣನು ಹೇಗಾದರೂ ಆಗಲಿ ಈಕೆಯು ಭಗವದ್ದರ್ಶನ ಮಾಡೆಂದು ಹೇಳುತ್ತಿರುವುದು ಒಳ್ಳೆಯದಷ್ಟೆ! ಹೋಗಿ ಬರೋಣವೆಂದು ನಿಶ್ಚಯಿಸಿ ತನ್ನ ಸತಿಯು ಎಲ್ಲಿಂದಲೋ ಯಾಚಿಸಿ ತಂದುಕೊಟ್ಟ ನಾಲ್ಕು ಹಿಡಿ ಅವಲಕ್ಕಿಯನ್ನು ಗಂಟುಕಟ್ಟಿಕೊಂಡು ಪರಮಾ ತ್ಮನ ಸಮೀಪಕ್ಕೆ ಬಂದನು. ಶ್ರೀ ಕೃಷ್ಣನು ಇವನ ಭಕ್ತಿಗೆ ಮೆಚ್ಚಿ ೪ ಹಿಡಿ ಯಲ್ಲಿ ಒಂದು ಹಿಡಿ ಅವಲಕ್ಕಿಯನ್ನು ಮಾತ್ರ ತಾನು ತೆಗೆದುಕೊಂಡು ಅವ ನಿಗೆ ಐಹಿಕದಲ್ಲಿ ಪರಮೈಶ್ವರ್ಯವನ್ನೂ ತನ್ನ ಮನೆಯಂತೆ ದಿವ್ಯವಾದ ಮನೆ ಯನ್ನೂ ಕೊಟ್ಟು ಪರಲೋಕದಲ್ಲಿ ಮುಕ್ತಿಯನ್ನೂ ಕೊಟ್ಟನು. ಅದನ್ನೇ ದಾಸರಾಯರು ' ಕೊಟ್ಟ ಬಡಬ್ರಾಹ್ಮಣ ಗೊಪ್ಪಿಡಿ ಯವಲಿಗಖಿಳಾರ್ಥ ' ಎಂದು ಹೇಳಿರುವರು.

' ಕೆಟ್ಟ ಮಾತುಗಳಿಂದ ಚೈದ್ಯನ ಹೊಟ್ಟೆಯೊಳಗಿಂಬಿಟ್ಟ '—ಧರ್ಮರಾ ಜನು ರಾಜಸೂಯ ಯಾಗವನ್ನು ಮಾಡಿದಾಗ ಶ್ರೀ ಕೃಷ್ಣನಿಗೆ ಅಗ್ರಪೂಜಾ ಮಾಡಿದುದನ್ನು ನೋಡಿ ಶಿಶುಪಾಲನು ಶ್ರೀ ಕೃಷ್ಣನನ್ನು ಬಹಳವಾಗಿ ದೂ ಷಿಸಲು, ಶ್ರೀ ಕೃಷ್ಣನು ಅವನನ್ನು ಚಕ್ರದಿಂದ ಸಂಹರಿಸಿದನು. ತಕ್ಷಣವೇ ಶಿಶುಪಾಲನ ದೇಹದಿಂದ ಎಲ್ಲರಿಗೂ ಕಾಣುವಂತೆ ಒಂದು ಜ್ಯೋತಿಯು

ಹೊರಟು ಕೃಷ್ಣನ ಪಾದಾಂಗುಷ್ಠದಲ್ಲಿ ಲೀನವಾಯಿತು. ಶಿಶುಪಾಲನು ಜೀವಮ್ಮಯಾವೇಶವುಳ್ಳವನಾಗಿದ್ದನು. ಬ್ರಹ್ಮ ಪುತ್ರನಾದ ಆದಿಹಿರಣ್ಯ ನೆಂಬ ದೈತ್ಯನ ಆವೇಶದಿಂದ ಕೂಡಿದ ಜಯನೆಂಬ ವಿಷ್ಣುವಿನ ದ್ವಾರಪಾಲ ಕನೇ ಶಿಶುಪಾಲನು. ಅಸುರನ ಆವೇಶ ಬಲದಿಂದಲೇ ಪರಮಾತ್ಮನನ್ನು ದೂಷಿಸಿದ್ದು, ಇದನ್ನು ತಿಳಿದ ಶ್ರೀ ಪರಮಾತ್ಮನು ತನ್ನ ಭಕ್ತನಾದ ಜಯನು ಅಸುರಾವೇಶದಿಂದ ಮಾಡಿದ ಅಪರಾಧವನ್ನು ಕ್ಷಮಿಸಿ ಅವನನ್ನು ತನ್ನಲ್ಲಿ ಸೇರಿಸಿಕೊಂಡನು. ಎಂಬುದೇ ಇದರ ಅಭಿಪ್ರಾಯವು. ‘ಬಾಣದಲಿಟ್ಟ ಭೀಷ್ಮನವಗುಣಗಳೆಣಿಸಿದನೇ’ ಈ ವಿಷಯವು ಭೀಷ್ಮಾಚಾರ್ಯರು ತಮ್ಮ ನಿರ್ಯಾಣಕಾಲದಲ್ಲಿ ಪರಮಾತ್ಮನನ್ನು ಸ್ತುತಿಸಿದ ಭಾಗವತ ಪ್ರಥಮಸ್ಕಂಧ ೯ನೆಯ ಅಧ್ಯಾಯದ, ಎರಡು ಶ್ಲೋಕಗಳಿಂದ ವ್ಯಕ್ತವಾಗುವುದು. ಆ ಶ್ಲೋಕಗಳನ್ನೇ ಇಲ್ಲಿ ಉದಾಹರಿಸುತ್ತೇವೆ.

“ಸ್ವನಿಯಮ ಮಪಹಾಯ ಮತ್ಪ್ರತಿಜ್ಞಾ ಮೃತಮಧಿ ಕರ್ತುಮ ವಪ್ಲು ತೋರಥಸ್ಥಃ। ಧೃತರಥ ಚರಣೋಽಭ್ಯಯಾಚ್ಚಲಾಗ್ರೇಹರಿ ರಿವಹಂ ತುಮಿಭಂಗತೋತ್ತರೀಯಃ॥ ಶಿತ ವಿಶಿಖಹತೋ ವಿಶೀರ್ಣದಂಶಃ ಕ್ಷತಜ ಪರಿಪ್ಲುತ ಆತ ತಾಯಿನೋಽಮೇ। ಪ್ರಸಭ ಮಭಿಸಸಾರ ಮದ್ವಧಾರ್ಥಂ ಸಭವತುಮೇ ಭಗವಾನ್ಮದೇ ಮುಕುಂದಃ” ॥ ೩೮ ॥

ಇದರ ಪೂರ್ವ ಸಂದರ್ಭದಲ್ಲಿ, ಶ್ರೀ ಕೃಷ್ಣನು ತಾನು ಭಾರತ ಯುದ್ಧ ಕಾಲದಲ್ಲಿ ಆಯುಧವನ್ನು ಹಿಡಿಯುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದನು. ‘ನಿನ್ನ ಕೈಯಿಂದ ಆಯುಧವನ್ನು ಹಿಡಿಸುತ್ತೇನೆಂದು’ ಭೀಷ್ಮಾಚಾರ್ಯರು ಪ್ರತಿಜ್ಞೆಯನ್ನು ಮಾಡಿದ್ದರು. ಪೂರ್ವದ ಪ್ರತಿಜ್ಞೆಗಳು ಈ ರೀತಿ ಇರಲು ಭೀಷ್ಮಾಚಾರ್ಯರಿಗೂ, ಅರ್ಜುನನಿಗೂ ಬಲವತ್ತರವಾದ ಯುದ್ಧವು ನಡೆ ಯಿತು. ಆಗ ಭೀಷ್ಮಾಚಾರ್ಯರು ಕ್ರೂರವಾದ ಬಾಣಗಳಿಂದ ಕೃಷ್ಣಾರ್ಜುನ ರನ್ನು ಹೊಡೆಯುತ್ತಿದ್ದರು. ಅರ್ಜುನನು ವೃದ್ಧರು ಪಿತಾಮಹರು ಎಂಬ ಅಭಿಮಾನದಿಂದ ಮೃದುವಾಗಿ ಯುದ್ಧ ಮಾಡುತ್ತಿರಲು, ಶ್ರೀ ಕೃಷ್ಣನು ಅರ್ಜುನನ ಬಲವನ್ನು ವೃದ್ಧಿಗೊಳಿಸಿ, ಕೋಪೋದ್ರೇಕ ಮಾಡಿಸುವುದ ಕ್ಕಾಗಿ ಚಕ್ರವನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಅತಿ ವೇಗವಾಗಿ ರಥ ದಿಂದ ಧುಮಿಕಿ ಭೀಷ್ಮಾಚಾರ್ಯರನ್ನು ಕೊಲ್ಲುವಂತೆ ಆರ್ಭಟಿಸುತ್ತಾ ಅವರ ಕಡೆಗೆ ಬಂದನು. ಅರ್ಜುನನು ಕೃಷ್ಣನ ಕ್ಷಮಾಪಣೆಯನ್ನು ಬೇಡಿಕೊಂಡು

ಅವನನ್ನು ಹಿಡಿದು ನಿಲ್ಲಿಸಿದನು. ಹೀಗೆ ಭಾರತ ಯುದ್ಧದಲ್ಲಿ ನಡೆದ ವಿಷಯವನ್ನು ನೆನಪಿಗೆ ತಂದು ಈಗ ತಮಗೆ ಅಭಿಮುಖನಾಗಿ ಕೂತಿರುವ ಶ್ರೀಕೃಷ್ಣನನ್ನು ಕುರಿತು ಭೀಷ್ಮಾಚಾರ್ಯರು ಸ್ತೋತ್ರ ಮಾಡುತ್ತಾರೆ.

ಎಲೈ, ಕೃಷ್ಣ! ನೀನು ಮಾಡಿದ ಪ್ರತಿಜ್ಞೆಯನ್ನು ಬಿಟ್ಟು, ನಿನ್ನ ಭಕ್ತನಾದ ನಾನು ಮಾಡಿದ ಪ್ರತಿಜ್ಞೆಯನ್ನು ಪರಿಪಾಲಿಸುವುದಕ್ಕಾಗಿ, ಚಕ್ರವನ್ನು ಕೈಯಲ್ಲಿ ಧರಿಸಿ, ರಥದಿಂದ ಕೆಳಗೆ ಹಾರಿ, ಸಿಂಹವು ಆನೆಯ ಮೇಲೆ ಬೀಳುವುದಕ್ಕೆ ಬರುವಂತೆ, ನನ್ನ ಮೇಲೆ ಬರುತ್ತಾ ನೋಡಿದವರಿಗೆ ನನ್ನನ್ನು ಕೊಲ್ಲುವಂತೆ ಪ್ರಕಟನ ಪಡಿಸುತ್ತಾ ನಿನ್ನ ಮೈಮೇಲಿನ ಪೀತಾಂಬರವು ಕೆಳಗೆ ಬಿದ್ದುದನ್ನೂ ಲಕ್ಷಿಸದೆ ಅತಿ ರಭಸದಿಂದ ನನ್ನೆದುರಿಗೆ ಓಡಿಬಂದೆಯೋ! ಮತ್ತು ನನ್ನ ತೀಕ್ಷ್ಣವಾದ ಬಾಣಗಳಿಂದ ಕತ್ತರಿಸಲ್ಪಟ್ಟ ಕವಚವುಳ್ಳವನಾಗಿ, ರಕ್ತದಲ್ಲಿ ಸ್ನಾನ ಮಾಡಿದಂತೆ ಮೈಯ್ಯಲ್ಲಿ ರಕ್ತವು ಸ್ರವಿಸುತ್ತಿರಲು ಆತತಾಯಿಯಾದ ನನ್ನನ್ನು ಕೊಲ್ಲಲು ಬರುತ್ತಿರುವುದನ್ನು ಅರ್ಜುನನು ತಡೆದು "ಭೀಷ್ಮನನ್ನು ಕೊಲ್ಲಬೇಡ" ವೆಂದು ಬೇಡಿಕೊಳ್ಳುತ್ತಿದ್ದರೂ, ಅದನ್ನೂ ಲಕ್ಷ್ಯಮಾಡದೆ ಓಡಿಬಂದೆಯೊ! ಅಂತಹ ನೀನು ಈಗ ಇಲ್ಲಿಗೆ ಬಂದುದು ನನ್ನ ಮುಕ್ತಿ ಸುಖಕ್ಕೆ ಕಾರಣವಾಯಿತು. ಎಂದು ಭೀಷ್ಮಾಚಾರ್ಯರು ಹೇಳಿದ ವಾಕ್ಯವಿರುವುದು. ಇದರಿಂದ "ಬಾಣದಲಿಟ್ಟ ಭೀಷ್ಮನವಗುಣಗಳೆಣಿಸಿದನೇ" ಎಂಬ ಪದಗಳಿಗೆ ಅರ್ಥ ಹೇಳಿದಂತಾಯಿತು. ಶ್ರೀ ಕೃಷ್ಣನು ಆಯುಧವನ್ನು ಹಿಡಿಯುವುದಿಲ್ಲವೆಂದು ಪ್ರತಿಜ್ಞೆ ಮಾಡಿರಲು, ಆಯುಧವನ್ನು ನಿನ್ನ ಕೈಯಿಂದ ಹಿಡಿಸುತ್ತೇನೆಂದು ಭೀಷ್ಮಾಚಾರ್ಯರು ಪ್ರತಿಜ್ಞೆ ಮಾಡಿದ್ದು ದೊಡ್ಡ ದ್ರೋಹ. ಮತ್ತು ಪರಶುರಾಮರೂಪಿಯಾದ ಶ್ರೀ ಪರಮಾತ್ಮನು ಭೀಷ್ಮಾಚಾರ್ಯರಿಗೆ ಅಂಬೆಯನ್ನು ಸ್ವೀಕರಿಸೆಂದು ಹೇಳಲು, ಅವರು ಆ ಮಾತನ್ನು ಮೀರಿ ಪರಶುರಾಮ ದೇವರ ಸಂಗಡ ಯುದ್ಧವನ್ನೇ ಮಾಡಿದರು. ಭಾರತ ತಾತ್ಪರ್ಯ ನಿರ್ಣಯ, ೧೮ನೆಯ ಅಧ್ಯಾಯದಲ್ಲಿ 'ಭೀಷ್ಮಸ್ತು ಭಾರ್ಗವಂ ರಾಮ ಮವ ಮೇನೇಯುಯೋಧಚ' ಭೀಷ್ಮಾಚಾರ್ಯರು ಪರಶುರಾಮರಿಗೆ ಯುದ್ಧದಲ್ಲಿ ಅವಮಾನವನ್ನು ಮಾಡಿದರೆಂದು ಹೇಳಲ್ಪಟ್ಟಿದೆ.

ದ್ರೌಪದಿಯ ವಸ್ತ್ರಾಪಹರಣ ಕಾಲದಲ್ಲಿ ಆಕೆಯು ಎಷ್ಟು ಮೊರೆಯಿಟ್ಟರೂ ಭೀಷ್ಮಾಚಾರ್ಯರು ನ್ಯಾಯವನ್ನೂ ಕೂಡ ಹೇಳದೆ ಉದಾಸೀನವಾಗಿದ್ದುದು ಶ್ರೀ ಕೃಷ್ಣನಿಗೆ ಅಸಮಾನವಾಗಿದ್ದಿತು. ಈ ವಿಷಯಕ್ಕೆ ನಿರ್ಣಯ-

೨೪ ನೆಯ ಅಧ್ಯಾಯದ ವಾಕ್ಯ ಆಧಾರವಾಗಿರುವುದು. ಮತ್ತು ಶ್ರೀ ಕೃಷ್ಣನು ಪಾಂಡವರಿಗೂ ಕೌರವರಿಗೂ ಸಂಧಿ ಮಾಡಿಸುವ ಉದ್ದೇಶದಿಂದ ತಾನು ಪಾಂಡವರ ರಾಯಭಾರಿಯಾಗಿ ಹಸ್ತಿನಾವತಿಗೆ ಬಂದಾಗ ದುರ್ಯೋಧನನು ಕೃಷ್ಣನನ್ನು ತನ್ನ ಮನೆಗೆ ಭೋಜನಕ್ಕೆ ಕರೆದನು. ಶ್ರೀ ಕೃಷ್ಣನು " ನನಗೆ ಪ್ರಿಯರಾದ ಪಾಂಡವರಿಗೆ ದ್ರೋಹವನ್ನು ಬೆಳಿಸುವ ನಿನ್ನ ಮನೆಯಲ್ಲಿ ಭೋಜನವನ್ನು ಮಾಡುವುದಿಲ್ಲ" ವೆಂದು ಹೇಳಿ ವಿದುರನ ಮನೆಗೆ ಹೋಗುತ್ತಿರಲು, ಭೀಷ್ಮಾಚಾರ್ಯರೇ ಮೊದಲಾದವರು ತಮ್ಮ ಮನೆಗಳಿಗೆ ಭೋಜನಕ್ಕೆ ಬರಬೇಕೆಂದು ಕರೆದರು. ಆ ಸಂದರ್ಭದಲ್ಲಿ, " ಸಭೀಷ್ಮ ಪೂರ್ವೈರಭಿಯಾಚಿತೋಪಿ ಜಗಾಮನ್ಯೈಷಾಂ ಗೃಹಮಾದಿ ದೇವಃ । ಉಪೇಕ್ಷಿತಾ ದ್ರೌಪದೀತ್ಯ ಪ್ರಮೇಯೋ ಜಗಾಮಗೇಹಂ ವಿದುರಸ್ಯ ಶೀಘ್ರಂ " ಭೀಷ್ಮಾಚಾರ್ಯ ಪ್ರಭೃತಿಗಳು ತಮ್ಮ ಮನೆಗಳಿಗೆ ಬರಬೇಕೆಂದು ಬಹಳವಾಗಿ ಬೇಡಿಕೊಂಡರೂ " ನೀವು ದ್ರೌಪದಿಯ ವಸ್ತ್ರಾಪಹರಣ ಕಾಲದಲ್ಲಿ ಉಪೇಕ್ಷಿಸಿದುದರಿಂದ ನಿಮ್ಮ ಮನೆಗಳಿಗೆ ಬರುವುದಿಲ್ಲವೆಂದು ಹೇಳಿ ವಿದುರನ ಮನೆಗೆ ಹೊರಟುಹೋದನು ಎಂದು ಇರುವುದು. ಈ ವಾಕ್ಯದಿಂದ ದ್ರೌಪದಿಯನ್ನು ಉದಾಸೀನ ಮಾಡಿದ್ದು ಶ್ರೀ ಕೃಷ್ಣನಿಗೆ ಅಸಮಾಧಾನಕರವೆಂದು ಸ್ಪಷ್ಟವಾಗುವುದು. ಅಷ್ಟೋ ಅಲ್ಲದೆ ಪಾಂಡವ ವಿರೋಧಿಯಾದ ದುರ್ಯೋಧನನಿಗೆ ಸಹಾಯವಾಗಿ ಪಾಂಡವರ ಕೂಡ ಯುದ್ಧಾದಿಗಳನ್ನು ಮಾಡಿದ್ದು ಮತ್ತೊಂದು ದ್ರೋಹ, ಇವೇ ಮೊದಲಾದ ಅನೇಕ ಅಪರಾಧಗಳು ಭೀಷ್ಮಾಚಾರ್ಯರಲ್ಲಿದ್ದರೂ ಅವನ್ನು ಗಣನೆ ಮಾಡದೆ ಅಂತ್ಯಕಾಲದಲ್ಲಿ ಅವರಿಗೆ ದರ್ಶನವಿತ್ತು, ಅವರಿಂದ ಸ್ತುತ್ಯಮಾನನಾಗಿ, ಮುಕ್ತಿಯನ್ನಿತ್ತನು. ಆದುದರಿಂದಲೇ ದಾಸರಾಯರು " ಕರುಣಾಳು " ಎಂಬ ಪದವನ್ನು ಪ್ರಯೋಗ ಮಾಡಿರುವರು. ಈ ಚರಿತ್ರೆಯಿಂದ ಪರಮಾತ್ಮನು ಕರುಣಾಸಮುದ್ರನೆಂದು ಸ್ಪಷ್ಟವಾಗುವದೆಂಬ ಭಾವ.

ಶ್ರೀ ಪರಮಾತ್ಮನಿಗೆ ಭಕ್ತರಿಂದ ಯಾವ ವಿಧವಾದ ಪ್ರಯೋಜನವೂ ಇಲ್ಲದಿದ್ದರೂ ಭಕ್ತರನ್ನು ಎಡಬಿಡದೆ ಕಾದುಕೊಂಡಿದ್ದು ರಕ್ಷಿಸುವನೆಂಬ ಅರ್ಥವನ್ನು " ಧನವ ಸಂರಕ್ಷಿಸುವ " ಎಂಬ ಪದ್ಯದಿಂದ ಹೇಳುತ್ತಾರೆ.

**ಧನವ ಸಂರಕ್ಷಿಸುವ ಫಣಿತಾ**
**ನುಣದೆ ಮತ್ತೊಬ್ಬರಿಗೆ ಕೊಡದನು**
**ದಿನದಿ ನೋಡುತ ಸುಖಿಸುವಂದದಿ ಲಕುಮಿವಲ್ಲಭನು ॥**

**ಪ್ರಣತರನ ಕಾದಿಹನು ನಿಷ್ಕಾ**
**ಮನದಿ ನಿತ್ಯಾನಂದಮಯ ದು**
**ರ್ಜನರ ಸೇವೆಯನೊಲ್ಲ ನಪ್ರತಿಮಲ್ಲ ಜಗಕೆಲ್ಲ　　　||೧೩||**

ಪದ್ಯಾರ್ಥ.—ಧನವ=ಭೂಮಿಯಲ್ಲಿ ಸ್ಥಾಪನ ಮಾಡಿರುವ ದ್ರವ್ಯ ವನ್ನು, ಸಂರಕ್ಷಿಸುವ=ರಕ್ಷಣ ಮಾಡುತ್ತಾ ಕಾದುಕೊಂಡಿರುವ, ಫಣಿ= ಸರ್ಪವು, ತಾನುಣದೆ=ತಾನು ಅನುಭೋಗಿಸದೆ, ಮತ್ತೊಬ್ಬರಿಗೆ ಕೊಡದೆ, ಅನುದಿನದಿ=ಪ್ರತಿ ದಿವಸದಲ್ಲೂ ನೋಡುತ, ಸುಖಿಸುವಂದದಿ=ಸುಖಪಡು ವಂತೆ, ಲಕುಮಿವಲ್ಲಭನು=ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನು, ಪ್ರಣ ತರನ=ನಮಸ್ಕಾರ ಮಾಡುವವರನ್ನು (ಮೊರೆಹೊಕ್ಕವರನ್ನು), ನಿಷ್ಕಾಮ ನದಿ= ಅವರಿಂದ ಪ್ರತಿಫಲವನ್ನು ಅಪೇಕ್ಷಿಸದೆ, ಕಾದಿಹನು=ಕಾದುಕೊಂಡಿ ಸುವನು, ನಿತ್ಯಾನಂದಮಯ=ನಿತ್ಯಾನಂದ ಪ್ರಚುರನಾದ (ಸ್ಥಿರವಾದ ಅಮಿ ತಾನಂದ ಸ್ವರೂಪನಾದ) ಶ್ರೀ ಪರಮಾತ್ಮನು, ಜಗಕೆಲ್ಲ=ಜಗತ್ತಿನಲ್ಲೆಲ್ಲಾ, ಅಪ್ರತಿಮಲ್ಲ=ಸಮಾನರಿಲ್ಲದ ಜಟ್ಟಿಯೆಂದೆನಿಸಿದ ಶ್ರೀ ಪರಮಾತ್ಮನು, ದುರ್ಜ ನರ=ತಮೋಯೋಗ್ಯರು ಮಾಡುವ, ಸೇವೆಯ=ಸೇವೆಯನ್ನು, ಒಲ್ಲ = ಕೈ ಗೊಳ್ಳನು, (ಸ್ವೀಕರಿಸನು).

ತಾತ್ಪರ್ಯ.—ಭೂಮಿಯಲ್ಲಿ ಸ್ಥಾಪನೆ ಮಾಡಿರುವ ಹಣವನ್ನು ಕಾದು ಕೊಂಡಿರುವ ಸರ್ಪವು, ಅದರಲ್ಲಿನ ಒಂದು ಕಾಸನ್ನಾದರೂ ತಾನು ಮುಟ್ಟದೆ ಮತ್ತೊಬ್ಬರಿಂದ ಹಣಕ್ಕೆ ಹಾನಿ ಬರದಂತೆ ಅದನ್ನು ಹೇಗೆ ಸರ್ವದಾ ಕಾದು ಕೊಂಡಿದ್ದು ಸಂರಕ್ಷಿಸುವುದೋ ಹಾಗೆಯೇ ಜಗತ್ತಿನಲ್ಲಿ ಅಸಮಾನನಾದ ಜಟ್ಟಿಯಾದ, ನಿತ್ಯವಾದ ಅಮಿತಾನಂದ ಸ್ವರೂಪನಾದ ಪರಮಾತ್ಮನು, ಭಕ್ತರಿಂದ ಯಾವ ಪ್ರತಿಫಲವನ್ನೂ ಅಪೇಕ್ಷಿಸದೆ ಸರ್ವದಾ ಮೊರೆಹೊಕ್ಕವ ರನ್ನು, ಕಾದುಕೊಂಡು ಇದ್ದು, ಅವರಿಗೆ ಯಾವ ವಿಧವಾದ ಆಪತ್ತುಗಳೂ ಬಾರವಂತೆ ಸಂರಕ್ಷಿಸುತ್ತಿರುವನು. ತಮೋಯೋಗ್ಯರು ಮಾಡುವ ಸೇವೆ ಯನ್ನು ಸ್ವೀಕರಿಸನು.

ವಿಶೇಷಾರ್ಥ.—ಭೂಮಿಯಲ್ಲಿ ಹಣವನ್ನು ಹೂತಿಟ್ಟದ್ದರೆ ಅವನ್ನು ಸರ್ಪವು ಬಂದು ಕಾಯುವುದೆಂಬುದು ಲೋಕವಾಡಿಕೆಯಲ್ಲಿದೆ. ಆ ಸರ್ಪಕ್ಕೆ ದ್ರವ್ಯದಿಂದ ಯಾವ ಪ್ರಯೋಜನವೂ ಇರುವುದಿಲ್ಲ. ಆ ದ್ರವ್ಯವನ್ನು ಇಟ್ಟ ವನಾಗಲಿ ಅಥವ ತೆಗೆದುಕೊಳ್ಳುವವನಾಗಲಿ ಅದಕ್ಕೇನೂ ಸಹಾಯಮಾಡು

ವಂತಿಲ್ಲ. ಆದರೂ ಫಲಾಪೇಕ್ಷೆ ಇಲ್ಲದೇನೇ ಹೇಗೆ ಆ ಸರ್ಪವು ಹಣವನ್ನು ಕಾದಿರುವುದೋ ಹಾಗೆಯೇ ಪರಮಾತ್ಮನು ತನ್ನ ಭಕ್ತರ ರಕ್ಷಣೆಗಾಗಿ ಕಾದಿರುವನು. ಆ ಭಕ್ತರಿಂದ ಪರಮಾತ್ಮನಿಗೆ ಏನೇನೂ ಆಗಬೇಕಾದುದು ಇಲ್ಲ. ಅವರ ಭಕ್ತಿಗೆ ಮೆಚ್ಚಿ ಅವರನ್ನು ರಕ್ಷಿಸುವನು. "ದೇವಸ್ಯೈಷಃ ಸ್ವಭಾವೋಯಮಾತ್ಮ ಕಾಮಸ್ಯ ಕಾಸ್ಪೃಹಾ" ಪರಮಾತ್ಮನಿಗೆ ಇದು ಸ್ವಭಾವ ಗುಣವೇ ಹೊರತು ಪೂರ್ಣಕಾಮನಾದ ಸ್ವಾಮಿಗೆ ಪರಕೀಯರಿಂದ ಆಗುವುದೇನು? ಎಂದು ಶೃತಿ ಹೇಳುವುದು. ಹಾಗಾದರೆ "ಪರಮಾತ್ಮನು ಭಕ್ತರಿಂದ ಏನನ್ನೂ ತೆಗೆದುಕೊಳ್ಳದೆ, ಯಾರನ್ನು ತಾನೆ ಉದ್ಧಾರ ಮಾಡಿರುವನು? ಎಂದು ಪ್ರಶ್ನೆ ಮಾಡಬಹುದು. ಉದಾಹರಣೆ:–ಕುಚೇಲನು ಅವಲಕ್ಕಿಯನ್ನು ಕೊಟ್ಟನು. ಹೀಗೆಯೇ ಯಾರು ಪರಮಾತ್ಮನನ್ನು ಭಜಿಸಬೇಕಾದರೂ ಪತ್ರ ಪುಷ್ಪ, ಫಲಾದಿಗಳು, ಧೂಪ ದೀಪಾದಿಗಳಿಂದ ಪೂಜೆ ಮಾಡುವರು. "ಪತ್ರಂ ಪುಷ್ಪಂ ಫಲಂ ತೋಯಂ ಯೋಮೇ ಭಕ್ತ್ಯಾ ಪ್ರಯಚ್ಛತಿ। ತದಹಂ ಭಕ್ತ್ಯುಪಹೃತ ಮಶ್ನಾಮಿ ಪ್ರಯತಾತ್ಮನಃ ||" ಪತ್ರವನ್ನಾಗಲಿ, ಪುಷ್ಪವನ್ನಾಗಲಿ, ಫಲವನ್ನಾಗಲಿ, ನೀರನ್ನಾಗಲಿ ಭಕ್ತಿಯಿಂದ ನನಗೆ ಕೊಟ್ಟರೆ ಅದನ್ನು ಪ್ರೀತಿಯಿಂದ ಸ್ವೀಕರಿಸುವೆನು ಎಂದು ಪರಮಾತ್ಮನೇ ಹೇಳಿರುವನು. ಹೀಗಿರುವಲ್ಲಿ ಭಕ್ತರು ಸ್ವಲ್ಪವಾದರೂ ಕೊಟ್ಟರೇನೇ ಅನುಗ್ರಹ ಮಾಡುವನೆಂದು ವ್ಯಕ್ತವಾಗುವುದು.

ಅದರಂತೆಯೇ ಪಾಂಡವರು ವನವಾಸದಲ್ಲಿದ್ದಾಗ ಅವರಲ್ಲಿ ಒಂದು ಅಕ್ಷಯ ಪಾತ್ರೆಯು ಇದ್ದಿತು. ಅದರ ಮಹಾತ್ಮೆ ಏನೆಂದರೆ–ದ್ರೌಪದಿಗೆ ಭೋಜನವಾಗುವುದಕ್ಕೆ ತತ್ಪೂರ್ವ ಅದರಲ್ಲಿ ಹಾಕಿದ ಭಕ್ಷ್ಯ ಭೋಜ್ಯಾದಿಗಳು ಎಲ್ಲವು ಅಕ್ಷಯವಾಗುತ್ತಿದ್ದುವು. ದ್ರೌಪದಿಯು ಭೋಜನವನ್ನು ಮಾಡಿ ಪಾತ್ರೆಯನ್ನು ತೊಳೆದುಬಿಟ್ಟರೆ ಆ ದಿವಸ ಅಕ್ಷಯ ಪಾತ್ರೆಯು ಉಪಯೋಗಕಾರಿಯಾಗುತ್ತಿರಲಿಲ್ಲ. ಈ ಸಮಾಚಾರವನ್ನು ತಿಳಿದಿದ್ದ ದುರ್ಯೋಧನನು ಪರಮ ಕೋಪಿಷ್ಠರಾದ ದೂರ್ವಾಸರನ್ನು ಆರಾಧಿಸಿ ಅವರನುಗ್ರಹಕ್ಕೆ ಪಾತ್ರನಾಗಿ, ಅವರ ದ್ವಾರ ಪಾಂಡವರಿಗೆ ಶಾಪವನ್ನು ಕೊಡಿಸಿ, ಪಾಂಡವರನ್ನು ನಾಶಗೊಳಿಸಲುದ್ದೇಶಿಸಿ, ದೂರ್ವಾಸರನ್ನು ಕುರಿತು ನೀವು ವನದಲ್ಲಿರುವ ಪಾಂಡವರ ಸಮೀಪಕ್ಕೆ ಹೋಗಿ ದ್ರೌಪದಿಯ ಭೋಜನಾನಂತರ ಅನ್ನವನ್ನು ಯಾಚಿಸಿ, ಎಂದು ಬೇಡಿಕೊಂಡನು. ದೂರ್ವಾಸರು ಅದ

ನ್ನಂಗೀಕರಿಸಿ ದ್ರೌಪದಿಯ ಭೋಜನಾನಂತರ ಪಾಂಡವರ ಸಮೀಪಕ್ಕೆಬಂದು ಅನ್ನವನ್ನು ಬೇಡಲು, ಧರ್ಮರಾಜನು ಕೊಡುತ್ತೇನೆ ಎಂದುಬಿಟ್ಟನು. ದ್ರೌಪದಿಯು ಚಿಂತಾಕ್ರಾಂತಳಾಗಿ ಪಾತ್ರೆಯಲ್ಲಿ ಅನ್ನವಿಲ್ಲ, ಕೊಡದಿದ್ದರೆ ಋಷಿಯು ಶಾಪವನ್ನು ಕೊಡುವನು, ಏನು ಮಾಡುವುದೆಂದು ಯೋಚಿಸಿ, ಶ್ರೀ ಕೃಷ್ಣನ ಸ್ಮರಣೆಯನ್ನು ಮಾಡಲು ಶ್ರೀ ಕೃಷ್ಣನು ದ್ರೌಪದಿಯ ಸಮೀಪಕ್ಕೆ ಬಂದು, ನನಗೆ ಬಹಳ ಹಸಿವೆಯಾಗಿರುವುದು. ನಾನು ಭೋಜನಕ್ಕೆ ಕೂಡುವಷ್ಟರಲ್ಲಿ ನೀನು ನನ್ನನ್ನು ಕರೆದುಬಿಟ್ಟೆ, ನಾನು ಹಾಗೆಯೇ ಉಪವಾಸ ಬಂದುಬಿಟ್ಟೆನು ಎನಲು ದ್ರೌಪದಿಯು, " ಏನು ಸ್ವಾಮಿ ಹಾಸ್ಯ ಮಾಡುವೆಯಾ ? ಈಗ ಅನ್ನವಿಲ್ಲದೆ ದೂರ್ವಾಸರ ಭಯದಿಂದ ನಿನ್ನನ್ನು ಸ್ಮರಿಸಿದೆನು. ನೀನೇ ಅನ್ನವನ್ನು ಕೇಳಿದರೆ ನಾನೆಂತು ಕೊಡುವೆ ? " ಅಂದಳು. ಶ್ರೀ ಕೃಷ್ಣನು " ದ್ರೌಪದಿ ! ಹಾಸ್ಯಮಾಡಬೇಡ. ಆ ಪಾತ್ರೆಯನ್ನು ತೆಗೆದುಕೊಂಡು ಬಾ ನೋಡೋಣ " ಅಂದನು. ದ್ರೌಪದಿಯು, ಪಾತ್ರೆಯನ್ನು ತಂದು ತೋರಿಸಲು ಶ್ರೀಕೃಷ್ಣನು ಅದರ ಕತ್ತಿನಲ್ಲಿ ಕಂಡುಬಂದ ಒಂದು ಶಾಕ ಪತ್ರವನ್ನು ತಿಂದು ತೇಗಿದನು. ಅಷ್ಟುಮಾತ್ರದಲ್ಲಿ ಸ್ನಾನಕ್ಕೆಂದು ಹೋಗಿದ್ದ ದೂರ್ವಾಸ ಪ್ರಭೃತಿಗಳಿಗೆ ಮಿತಿಮೀರಿ ಹೊಟ್ಟೆಯು ತುಂಬಿಹೋಯಿತು. ಊಟಕ್ಕೆ ದಯಮಾಡಬೇಕೆಂದು ಕರೆಯಲು ಬರುತ್ತಿದ್ದ ಭೀಮಸೇನ ದೇವರನ್ನು ಕಂಡಕೂಡಲೆ ಭಯಪಟ್ಟು ದೂರ್ವಾಸರು ಶಿಷ್ಯರ ಸಹಿತವಾಗಿ ಓಡಿಹೋದರೆಂದು ಭಾರತ ಕಥಾ ಇರುವುದು. ಹೀಗೆ ದ್ರೌಪದಿಯು ಪತ್ರವನ್ನು ಕೊಟ್ಟು ಕೃತಾರ್ಥಳಾದಳು. ಗಜೇಂದ್ರನು ಮೊಸಳೆಯಿಂದ ಕಷ್ಟಪಡುವಾಗ ಪರಮಾತ್ಮನನ್ನು ಮೊರೆಹೊಕ್ಕು ಪರಮಾತ್ಮನು ಪ್ರತ್ಯಕ್ಷನಾಗಲು, ಒಂದು ಪುಷ್ಪವನ್ನು ಮಾತ್ರ ಸಮರ್ಪಿಸಿದನು. ಶಬರೀ ಎಂಬಾಕೆಯು ರಾಮದೇವರಿಗೆ ಫಲವನ್ನು ಕೊಟ್ಟು ಕೃತಾರ್ಥಳಾದಳು. ಧ್ರುವನು ಬರೀ ನೀರಿನಿಂದಲೇ ಷೋಡಶೋಪಚಾರ ಪೂಜೆಯನ್ನು ಮಾಡಿದನು. ಅವನಿಗೂ ಅನುಗ್ರಹಮಾಡಿದನು. ಆದುದರಿಂದ ' ಪತ್ರಂ ಪುಷ್ಪಂ ಫಲಂ ತೋಯಂ ' ಎಂದು ಪರಮಾತ್ಮನು ಹೇಳಿಕೊಂಡನು. ಇದು ಹೀಗಿರಲು ಭಕ್ತರಿಂದ ಏನೂ ಅಪೇಕ್ಷಿಸದೆ ನಿಷ್ಕಾಮನಾಗಿ ಪರಮಾತ್ಮನು ಕಾದಿರುವನು ಎಂದು ದಾಸರಾಯರು ಸರ್ಪ ದೃಷ್ಟಾಂತವನ್ನು ತೋರಿಸಿರುವುದು ಹೇಗೆ ಸರಿಹೋಗುವುದು ಅಂದರೆ. ಭಾಗವತ ಸಪ್ತಮ ಸ್ಕಂಧದಲ್ಲಿ ಪ್ರಹ್ಲಾದನ ಸ್ತುತಿಯಲ್ಲಿ " ನೈವಾತ್ಮನಃ ಪ್ರಭುರ

ಯಂ ನಿಜಲಾಭ ಪೂರ್ಣೋಮಾನಂ ಜನಾದ ವಿದುಷಃ ಕರುಣೋ ವೃಣೀತೆ। ಯದ್ಯಜ್ಜನೋ ಭಗವತೇ ವಿದಧೀತ ಮಾನಂ ತಚ್ಚಾತ್ಮನೇ ಪ್ರತಿಮುಖಸ್ಯ ಯಥಾ ಮುಖಶ್ರೀಃ ॥" ಈ ಪ್ರಭುವಾದ ಶ್ರೀ ಪರಮಾತ್ಮನು ತನ್ನ ಭಕ್ತರು ಅಜ್ಞಾನಿಗಳೆ ಆಗಲಿ, ಜ್ಞಾನಿ ಜನರೇ ಆಗಲಿ ಅವರು ಮಾಡುವ ಪೂಜಾದಿಗಳನ್ನು ತದಂಗವಾಗಿ ಅವರು ಸಮರ್ಪಿಸುವ ಫಲಾದಿಗಳನ್ನು ತನ್ನ ಸುಖಕ್ಕಾಗಿ ಸ್ವೀಕರಿಸುವುದಿಲ್ಲ. ಹಾಗಾದರೆ ಅದನ್ನೇತಕ್ಕೆ ತೆಗೆದುಕೊಳ್ಳುವನೆಂದರೆ, ಪೂಜೆಯನ್ನು ಮಾಡುವವರ ಕ್ಷೇಮಕ್ಕಾಗಿಯೇ ಅವನು ಅವುಗಳನ್ನು ತೆಗೆದುಕೊಳ್ಳುವುದು. ಹಾಗಿಲ್ಲದಿದ್ದರೆ ಪೂರ್ಣಕಾಮನಾದ ಪರಮಾತ್ಮನಿಗೆ ಇವರು ಕೊಡುವ ಫಲಾದಿಗಳಿಂದ ಆಗುವುದೇನು ? ಹೇಗೆ ನಮ್ಮ ಮುಖವನ್ನು ಅಲಂಕರಿಸಿಕೊಂಡು ಕನ್ನಡಿಯಲ್ಲಿ ನಮ್ಮ ಪ್ರತಿಬಿಂಬವನ್ನು ನೋಡಿದರೆ, ಆ ಪ್ರತಿಬಿಂಬಕ್ಕೆ ಬೇರೆಯಾಗಿ ನಾವು ಅಲಂಕಾರ ಮಾಡದಿದ್ದರೂ ನಮ್ಮ ಅಲಂಕಾರವೇ ಅವರ ಅಲಂಕಾರವಾಗಿ ಹೇಗೆ ಕಾಣುತ್ತದೆಯೋ ಹಾಗೆಯೇ ಬಿಂಬರೂಪಿಯಾದ ಶ್ರೀ ಪರಮಾತ್ಮನನ್ನು ಪೂಜೆ ಮಾಡಲು ಪ್ರತಿಬಿಂಬನಾದ ಜೀವನಿಗೆ ತಾನಾಗಿ ಸುಖವಾಗುವುದು. ಮಹಾರಾಜನನ್ನು ಕಾಣಲು ಹೋದ ಜನರು ಪುಷ್ಪಹಾರ ಫಲಾದಿಗಳನ್ನು ತೆಗೆದುಕೊಂಡು ಹೋದರೆ ಅದನ್ನು ರಾಜನು ಸ್ವೀಕರಿಸುವುದು ಹೇಗೆ ತನ್ನ ಕೊರತೆಗೆಂದಲ್ಲದೆ ಜನರ ಪ್ರೀತಿಗಾಗಿಯೋ ಹಾಗೆಯೇ ಪರಮಾತ್ಮನು ಭಕ್ತರ ಉದ್ಧಾರಕ್ಕಾಗಿ ಅವರ ಸೇವೆಯನ್ನು ಸ್ವೀಕರಿಸುವನು. ತನಗೇನು ಇದರಿಂದ ಪ್ರಯೋಜನವಿಲ್ಲ. ಹೀಗಿರುವುದರಿಂದಲೇ ದಾಸರಾಯರು ನಿಷ್ಕಾಮದಿಂದ ಭಕ್ತರನ್ನು ಕಾದಿರುವನು ಎಂದು ಹೇಳಿರುವರು. 'ದುರ್ಜನರ ಸೇವೆಯನೊಲ್ಲ' 'ಅಭಕ್ತ್ಯೋಪಾಹೃತಂ ನೈವ ಫಲದಾತೃಭವಿಷ್ಯತಿ । ಭೂರ್ಯಪ್ಯಭಕ್ತ್ಯೋಪಹೃತಂನಮೇತೋಷಾಯ ಕಲ್ಪತೇ ॥' ಇತ್ಯಾದಿ ವಾಕ್ಯಗಳಿಂದ ಅಭಕ್ತರು ಮಾಡಿದ ಪೂಜೆಯನ್ನು ಸ್ವೀಕರಿಸುವುದಿಲ್ಲವೆಂದು ಸಿದ್ಧವಾಗುವುದು. ಮತ್ತು ಗೀತಾವಾಕ್ಯ 'ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್।ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು॥ ಆಸುರೀಂ ಯೋನಿಮಾಪನ್ನಾ । ಮೂಢಾ ಜನ್ಮನಿ ಜನ್ಮನಿ ॥ ಮಾಮಪ್ರಾಪ್ಯೈವ ಕೌಂತೇಯತತೋಯಾಂತ್ಯ ಧಮಾಂಗತಿಂ॥' ನನ್ನನ್ನು ಒಂದು ಸಲ ದ್ವೇಷಮಾಡಿದ ಮಾತ್ರದಿಂದ ಅವರನ್ನು ಶಾಶ್ವತ ಅಸುರ ಯೋನಿಗಳಲ್ಲಿ ಹಾಕುವೆನು. ಹೀಗೆಜನ್ಮಜನ್ಮಗಳಲ್ಲಿಯೂ ದೈತ್ಯಕುಲದಲ್ಲೇಹುಟ್ಟಿನನ್ನಲ್ಲಿದ್ವೇಷವನ್ನೇಬೆಳಸಿ

ನನ್ನನ್ನು ಸೇರದೇನೆ ಕಡೆಗೆ ಘೋರವಾದ ತಮಸ್ಸನ್ನೇ ಹೊಂದುವರೆಂದು ಶ್ರೀಕೃಷ್ಣನು ಅರ್ಜುನನನ್ನು ಕುರಿತು ಹೇಳಿರುವನು. ಇದರಿಂದ ತಮೋ ಯೋಗ್ಯರ ಪೂಜೆಯನ್ನು ಶ್ರೀಪರಮಾತ್ಮನು ಸ್ವೀಕರಿಸುವುದಿಲ್ಲವೆಂದು ವ್ಯಕ್ತ ವಾಗುವುದು. ಆದುದರಿಂದ ದಾಸರಾಯರು " ದುರ್ಜನರ ಸೇವೆಯನೊಲ್ಲ" ಎಂದು ಹೇಳಿರುವರು.

ಅವತಾರಿಕೆ.— ಪರಮಾತ್ಮನು ಭಕ್ತವತ್ಸಲನೆಂಬುವುದನ್ನು ಮುಂದಿನ ಪದ್ಯದಿಂದ ವಿಶದಪಡಿಸುತ್ತಾರೆ.—

**ಬಾಲಕನ ಕಲಭಾಷೆ ಜನನಿಯು**
**ಕೇಳಿ ಸುಖಪಡುವಂತೆ ಲಕುಮಿಯ**
**ಲೋಲ ಭಕುತರು ಮಾಡುತಿಹ ಸಂಸ್ತುತಿಗೆ ಹಿಗ್ಗುವನು ||**
**ತಾಳ ತನ್ನವರಲ್ಲಿ ಮಾಡುವ**
**ಹೇಳನವ ಹೆದ್ದೈವ ವಿದುರನ**
**ಆಲಯದಿ ಪಾಲುಂಡು ಕುರುಪನ ಮಾನವನೆಕೊಂಡಾ ||**

ಪದ್ಯಾರ್ಥ.— ಜನನಿಯು-ತಾಯಿಯಾದವಳು, ಬಾಲಕನ-ಮಗುವಿನ, ಕಲಭಾಷೆ=ಮೃದುಮಾತುಗಳನ್ನು, ಕೇಳಿ, ಸುಖಪಡುವಂತೆ, ಲಕುಮಿಯಲೋಲ=ಲಕ್ಷ್ಮೀವಲ್ಲಭನು, ಮಾಡುತಿಹ=ತನ್ನ ಭಕ್ತರು ಮಾಡುತ್ತಿರುವ ಸಂಸ್ತುತಿಗೆ, ಹಿಗ್ಗುವನು-ಸಂತೋಷಪಡುವನು. ತನ್ನವರಲ್ಲಿ=ತನ್ನ ಭಕ್ತರಲ್ಲಿ, ಮಾಡುವ, ಹೇಳನವ=ಅವಮಾನವನ್ನು (ದೂಷಣೆಯನ್ನು) ತಾಳ-ಸಹಿಸನು, ಹೆದ್ದೈವ-ದೇವೋತ್ತಮನು, ವಿದುರನ, ಆಲಯದಿ=ಮನೆಯಲ್ಲಿ ಪಾಲುಂಡು=ಭೋಜನಮಾಡಿ, ಕುರುಪನ=ಕುರುಕುಲಪತಿಯಾದ ದುರ್ಯೋಧನನ, ಅಥವಾ ಧೃತರಾಷ್ಟ್ರನ, ಮಾನವನೆ=ಮಾನವನ್ನು, ಕೊಂಡಾಡು =ಅಪಹರಿಸಿದನು. ( ಕಳೆದನು )

ತಾತ್ಪರ್ಯ.— ಮಗುವಿನ ಮೃದುಮಾತುಗಳನ್ನು ಕೇಳಿ ತಾಯಿಯಾದವಳು ಸಂತೋಷಪಡುವಂತೆ ಲಕ್ಷ್ಮೀವಲ್ಲಭನು ತನ್ನ ಭಕ್ತರು ಮಾಡಿದ ಅಲ್ಪಸ್ತುತಿಗೆ ಸಂತೋಷಪಡುವನು. ತನ್ನ ಭಕ್ತರನ್ನು ಯಾರಾದರೂ ಅವಮಾನಮಾಡಿದರೆ ಸಹಿಸನು. ಆದುದರಿಂದ ಪಾಂಡವರನ್ನು ಅವಮಾನಮಾಡಿದ ದುರ್ಯೋಧನನ ಮನೆಯಲ್ಲಿ ಭೋಜನವನ್ನು ಮಾಡದೆ, ವಿದುರನ ಮನೆಯಲ್ಲಿ ಭೋಜನವನ್ನು ಮಾಡಿ ದುರ್ಯೋಧನನ ಮಾನವನ್ನು ಕಳೆದನು.

ವಿಶೇಷಾರ್ಥ.—" ಲಕುಮಿಾಲೋಲ " ಎಂಬ ಪದವು, ಪರಮಾತ್ಮನ ಉನ್ನತ ಪದವಿಯನ್ನು ಸೂಚಿಸುವುದು. ಯಾವನ ಮಹಿಮೆಗಳನ್ನು ರಮಾ ಬ್ರಹ್ಮಾದಿಗಳು ಸಾಕಲ್ಯೇನ ಅರಿತು ಸ್ತೋತ್ರಮಾಡಲು ಶಕ್ತರಲ್ಲದಿರುವರೋ ಅಂತಹ ಮಹಿಮೆಯುಳ್ಳವನೆಂಬ ಅರ್ಥವನ್ನು ಈ ಪದವು ಸೂಚಿಸುವುದು. ಇಂತಹ ಮಹಿಮೆಯುಳ್ಳವನಾದರೂ, ಸಾಮಾನ್ಯರಾದ ಭಕ್ತರು ಮಾಡುತಿಹ ಅಲ್ಪ ಸ್ತೋತ್ರಗಳಿಗೇನೇ ಸಂತೋಷಪಡುವನು. ಸಣ್ಣ ಮಕ್ಕಳು ಆಡುವ ಅಸ್ಪಷ್ಟ ಮಾತುಗಳಿಗೆ ತಾಯಿಯು ಸಂತೋಷಪಡುವುದು ಲೋಕವಾಡಿಕೆಯಾದ ವಿಷಯವೆ. ತಾಯಿಯರಿಗೆ ಮಕ್ಕಳಲ್ಲಿರುವ ವಾತ್ಸಲ್ಯವೇ ಅದಕ್ಕೆ ಕಾರಣವು. ಹಾಗೆಯೇ ಪರಮಾತ್ಮನಿಗೆ ಭಕ್ತರಲ್ಲಿ ಇರುವ ವಾತ್ಸಲ್ಯವನ್ನು ಈ ಉಪಮಾನವು ವ್ಯಕ್ತಪಡಿಸುವುದು. ಭಕ್ತನಾದ ಪ್ರಹ್ಲಾದನು ಹಿರಣ್ಯಕಶಿಪುವಿನ ಸಂಹಾರಾನಂತರ ಬ್ರಹ್ಮದೇವರ ಅಜ್ಞಾಪ್ರಕಾರ ನರಸಿಂಹದೇವರಲ್ಲಿಗೆ ಬಂದು ನಮಸ್ಕರಿಸಿ ಸ್ತೋತ್ರಮಾಡುತ್ತಿರುವಾಗ ಪರಮಾತ್ಮನು ಆನಂದದಿಂದ ಕೇಳುತ್ತಿದ್ದು ಹೀಗೆ ಹೇಳಿದನು.—" ಪ್ರಹ್ಲಾದ ಭದ್ರ ಭದ್ರಂ ತೇ ಪ್ರೀತೋಽಹಂತೇ ಸುರೋತ್ತಮ | ಯ ಏತತ್ಕೀರ್ತಯೇನ್ಮಹ್ಯಂ ತ್ವಯಾ ಗೀತಮಿದಂ ನರಃ || ತ್ವಾಂಚ ಮಾಂಚ ಸ್ಮರನ್ಕಾಲೇ ಕರ್ಮಬಂಧಾದ್ವಿಮುಚ್ಯತೇ || " " ಎಲೈ ! ಮಂಗಳ ಸ್ವರೂಪನಾದ, ದೈತ್ಯಶ್ರೇಷ್ಠನಾದ ಪ್ರಹ್ಲಾದನೆ, ನೀನು ಮಾಡಿದ ಸ್ತೋತ್ರಕ್ಕೆ ನಾನು ಬಹಳ ಪ್ರೀತನಾದೆನು, ನೀನು ಮಾಡಿದ ಈ ಸ್ತೋತ್ರವನ್ನು ಯಾರು ಪಠಿಸುವರೋ, ಯಾವ ಜನಗು ನನ್ನನ್ನೂ, ನಿನ್ನನ್ನೂ ಪ್ರಾತಃಕಾಲದಲ್ಲಿ ಸ್ಮರಿಸುವರೋ ಅಂತಹವರು ಕರ್ಮ ಬಂಧನದಿಂದ ಮುಕ್ತರಾಗುವರು " ಎಂದು ಪರಮಾತ್ಮನು ಹೇಳಿರುವನು.

ಹೀಗೆಯೇ ಗಜೇಂದ್ರನು ಮಾಡಿದ ಅಲ್ಪ ಸ್ತೋತ್ರಕ್ಕೂ ಮೆಚ್ಚಿ ಸಂತೋಷಪಟ್ಟಿರುವನು. ಈ ರೀತಿಯಾಗಿ ಚಿತ್ರಕೇತುರಾಜ, ಧ್ರುವ, ಅದಿತಿ ಮೊದಲಾದವರು ಸ್ತೋತ್ರಮಾಡಿದಾಗ ಶ್ರೀಪರಮಾತ್ಮನು ಅವರ ಮುಂದೆ ನಿಂತು ಕೇಳಿ ಅದರಿಂದುಂಟಾದ ತನ್ನ ಸಂತೋಷ ಸೂಚನೆಯನ್ನು ಭಕ್ತರಿಗಿತ್ತ ಪ್ರತಿವಾಕ್ಯಗಳಿಂದ ತೋರಿಸಿರುವ ಚರಿತ್ರೆಗಳು ಅನೇಕವಿರುವುವು, ಆದುದರಿಂದಲೇ ಭಕ್ತರು ಮಾಡುತಿಹ ಸಂಸ್ತುತಿಗೆ ಹಿಗ್ಗುವನೆಂದು ದಾಸರಾಯರು ಹೇಳಿರುವರು. " ತಾಳ ತನ್ನವರಲ್ಲಿ ಮಾಡುವ ಹೇಳನವ " —ಶ್ರೀಕೃಷ್ಣನು ಪಾಂಡವರಿಗೆ ದೂತನಾಗಿ, ದುರ್ಯೋಧನನ ಮನೆಗೆ ಬಂದಾಗ

ದುರ್ಯೋಧನನು ಭೋಜನ ಸಾಧನವನ್ನು ಸಿದ್ಧಪಡಿಸಿ ಭೋಜನಕ್ಕೆ ಕೃಷ್ಣನನ್ನು ಕರೆಯಲು ಶ್ರೀಕೃಷ್ಣನು ನಾನು ನಿನ್ನ ಮನೆಯಲ್ಲಿ ಭೋಜನಮಾಡುವುದಿಲ್ಲವೆಂದನು. ಕಾರಣವೇನೆನಲು ಕೃಷ್ಣನು ಹೀಗೆ ಹೇಳಿರುವನು.—" ದ್ವಿಷದನ್ನಂ ನಭೋಕ್ತವ್ಯಂ ದ್ವಿಷಂತಂ ನೈವ ಭೋಜಯೇತ್ " ದ್ವೇಷಿಗಳ ಮನೆಯಲ್ಲಿ ಭೋಜನವನ್ನು ಮಾಡಬಾರದು. ದ್ವೇಷಿಗಳನ್ನು ತನ್ನ ಮನೆಗೆ ಭೋಜನಕ್ಕೆ ಕರೆಯಲೂ ಬಾರದೆಂದು ನೀತಿಶಾಸ್ತ್ರ ಉಂಟು. ಆದುದರಿಂದ ನಿನ್ನ ಮನೆಯಲ್ಲಿ ಭೋಜನ ಮಾಡೆನು ಎಂದು ಹೇಳಿದನು. ಆಗ ದುರ್ಯೋಧನನು ನನಗೂ ನಿನಗೂ ವಿರೋಧವಿಲ್ಲ. ಹಾಗಿರಲು ನನ್ನ ಮನೆಯಲ್ಲಿ ಭೋಜನ ಮಾಡದಿರಲು ಕಾರಣವೇನೆಂದನು. ಕೃಷ್ಣನು, " ಪಾಂಡವಾನ್ ದ್ವಿಷಸೇರಾಜನ್ ಮಮ ಪ್ರಾಣಾಸ್ತು ಪಾಂಡವಾಃ ' ನೀನು ಪಾಂಡವರಲ್ಲಿ ದ್ವೇಷವನ್ನು ಮಾಡುತ್ತಿರುವೆ. ಪಾಂಡವರು ನನ್ನ ಪ್ರಾಣಕ್ಕೆ ಸಮಾನರಾಗಿರುವರು. ಆದ್ಧರಿಂದ ನನಗೂ ನಿನಗೂ ದ್ವೇಷವೇ. " ಯಸ್ತಾನ್ ದ್ವೇಷ್ಟಿ ಸಮಾಂದ್ವೇಷ್ಟಿಯಸ್ತಾ ನನು ಸಮಾನನು " ಯಾರು ಅವರಲ್ಲಿ ದ್ವೇಷ ಮಾಡುವರೋ ಅವರು ನನಗೂ ದ್ವೇಷಿಗಳೇ. ಯಾರು ಅವರನ್ನನುಸರಿಸುವರೋ ಅವರು ನನ್ನನ್ನು ಅನುಸರಿಸಿದವರೆಂದು ತಿಳಿ ! ಎಂದು ಹೇಳಿರುವನು ಆದುದರಿಂದ " ತಾಳ ತನ್ನವರಲ್ಲಿ ಮಾಡುವ ಹೇಳನವ ' ಎಂದು ದಾಸರಾಯರು ಹೇಳಿರುವರು. " ವಿದುರನ ಮನೆಯಲಿ ಪಾಲುಂಡು " ಈ ವಾಕ್ಯದಿಂದ ವಿದುರನ ಮನೆಯಲ್ಲಿ ಹಾಲು ಮಾತ್ರ ಕುಡಿದನೆಂದು ದಾಸರಾಯರ ಅಭಿಪ್ರಾಯವೆಂದು ತೋರುವುದು. ಹಾಗೆ ಅರ್ಥಮಾಡಿದರೆ ಭಾರತ ವಾಕ್ಯಕ್ಕೆ ವಿರೋಧಬರುವುದು.

ಭಾರತ ಉದ್ಯೋಗಪರ್ವದಲ್ಲಿ " ತತಃಕ್ಷತ್ತಾನ್ನ ಪಾನಾನಿ ಶುಚೀನಿ ಗುಣವಂತಿಚ ॥ ಉಪಾಹರೇದನೇಕಾನಿ ಕೇಶವಾಯ ಮಹಾತ್ಮನೇ ॥ ತೈಸ್ತರ್ಪಯಿತ್ವಾ ಪ್ರಥಮಂ ಬ್ರಾಹ್ಮಣಾನ್ಮಧುಸೂದನಃ ॥ ತತೋಽನುಯಾಯಿಭಿಃ ಸಾರ್ಧಂ ಮರುದ್ಭಿರಿವವಾಸವಃ । ವಿದುರಾನ್ನಾನಿ ಬುಭುಜೇ ಶುಚೀನಿ ಗುಣವಂತಿಚ ॥ " ಇದಕ್ಕರ್ಥ.—ವಿದುರನು, ಮಹಾತ್ಮನಾದ ಶ್ರೀಕೃಷ್ಣನಿಗಾಗಿ ಸಿದ್ಧಮಾಡಿದ್ದ ಶುಚಿರ್ಭೂತವಾದ, ಗುಣವತ್ತಾದ ಅನ್ನಪಾನಾದಿ ಅನೇಕ ಪದಾರ್ಥಗಳನ್ನು ಕೊಟ್ಟನು. ಶ್ರೀಕೃಷ್ಣನು ಮೊದಲು ಅನ್ನಾದಿಗಳಿಂದ ಬ್ರಾಹ್ಮಣರುಗಳಿಗೆ ತೃಪ್ತಿಯಾಗಿ ಭೋಜನವನ್ನು ಮಾಡಿಸಿ ತಾನು

ಅನುರಾಗದಿಂದ ಕೊಡಿದ ವಿದುರನ ಗುಣವತ್ತಾದ ಅಂದರೆ, ಉತ್ತಮವಾದ ಪಕ್ವಾನ್ನವನ್ನು ಭುಂಜಿಸಿದನೆಂದು ಹೇಳಿರುವರು. ಹಾಗಾದರೆ ದಾಸರಾಯರ ಉಕ್ತಿಯ ಗತಿಯೇನು ? ಅಂದರೆ ದಾಸರಾಯರ ವಾಕ್ಯದಲ್ಲಿರುವ "ಪಾಲು' ಶಬ್ದಕ್ಕೆ ಸ್ವಾದು ಅಥವಾ ಶುಚಿಯೆಂದು ಅರ್ಥಮಾಡಬೇಕು. ಶುಚಿಕರವಾದ ಎಂಬರ್ಥ. "ಶುಚೀನಿ" ಎಂಬ ಭಾರತ ವಾಕ್ಯವನ್ನು ಪಾಲು ಶಬ್ದವು ಸೂಚಿಸುವುದು. ದಾಸರಾಯರ ವಾಕ್ಯದಲ್ಲಿ "ಉಂಡನು" ಎಂಬ ಶಬ್ಧವು ಭೋಜನ ಪರ್ಯಾಯವು ಇಲ್ಲವಾದರೆ ಹಾಲು ಕುಡಿದನೆಂದು ಹೇಳಬೇಕಾಗಿತ್ತು. ಉಂಡನು ಎಂಬ ಶಬ್ದವು ವಾಡಿಕೆಯಲ್ಲಿ ಭೋಜನಕ್ಕಿಟ್ಟಿರುವುದೇ ಹೊರತು ಹಾಲುಂಡನು ಅನ್ನವನ್ನು ಕುಡಿದನೆಂಬ ವಾಕ್ಯವು ರೂಢಿಯಲ್ಲಿಲ್ಲ. ಆದುದರಿಂದ ದಾಸರಾಯರ ವಾಕ್ಯಕ್ಕೆ ಶುಚಿಯಾದ, ರುಚಿಯಾದ ಪ್ವೃಷ್ಟಾನ್ನವನ್ನು ಉಂಡನೆಂಬ ಅರ್ಥವೇ ಕೂಡುವುದು. ಇದರಿಂದ ಭಾರತ ವಾಕ್ಯಗಳಿಗೂ ನಿರ್ಣಯ ವಾಕ್ಯಕ್ಕೂ ವಿರೋಧವಾಗುವುದಿಲ್ಲ- ಹೀಗೆ ವಿದುರನ ಮನೆಯಲ್ಲಿ ಭೋಜನಮಾಡಿ, ಧೃತರಾಷ್ಟ್ರನ ಅಥವಾ ದುರ್ಯೋಧನನ ಮಾನವನೆ ಕೊಂಡಾ ಎಂಬುದರಿಂದ ಅವರನ್ನು ತಿರಸ್ಕರಿಸಿ ವಿದುರನ ಮನೆಗೆ ಬಂದುದು ಅವರ ಮಾನವನ್ನು ಕಳೆದಂತಾಯಿತೆಂಬ ಭಾವವು.

ಅವತಾರಿಕೆ—ಪರಮಾತ್ಮನು ಭಕ್ತವತ್ಸಲನೆಂಬುವುದನ್ನು ಮುಂದಿನ ಪದ್ಯದಿಂದಲೂ ವಿಸ್ತಾರಮಾಡುತ್ತಾರೆ —

**ಸ್ಮರಿಸುವರ ಅಪರಾಧಗಳ ತಾ**
**ಸ್ಮರಿಸ ಸಕಲೇಷ್ಟಪ್ರದಾಯಕ**
**ಮರಳಿ ತನಗರ್ಪಿಸಲು ಕೊಟ್ಟದನಂತ ಮಡಿಮಾಡಿ ||**
**ಪರಿಪರಿಯಲುಂಡುಣಿಸಿ ಸುಖ ಸಾ**
**ಗರದಿ ಲೋಲಾಡಿಸುವ ಮಂಗಳ**
**ಚರಿತ ಚಿನ್ಮಯಗಾತ್ರ ಲೋಕಪವಿತ್ರ ಸುಚರಿತ್ರ ||**

ಪದ್ಯಾರ್ಥ.—ಸ್ಮರಿಸುವರ – ತನ್ನನ್ನು ಸ್ಮರಣೆ ಮಾಡುತ್ತಿರುವವರ, ಅಪರಾಧಗಳ= ಅಪರಾಧಗಳನ್ನು, ತಾಸ್ಮರಿಸ=ತಾನು ಲಕ್ಷ್ಯ ಮಾಡುವುದಿಲ್ಲ ಅದಲ್ಲದೆ, ಸಕಲೇಷ್ಟಪ್ರದಾಯಕ=ಅವರ ಮನೋಭೀಷ್ಟವನ್ನು ಪೂರ್ಣಮಾಡಿಸುವನು ಭಗವತ್ಪ್ರೀತಿಗೋಸ್ಕರ ಅವರು ಮಾಡುವ ಕರ್ಮಗಳನ್ನು, ಮರಳಿ

=ಪುನಃ, ತನಗರ್ಪಿಸಲು, ಅದ=ಅದನ್ನು, ಅನಂತಮಡಿಮಾಡಿ = ಅನಂತ ಗುಣಗಳಷ್ಟು ಹೆಚ್ಚು ಮಾಡಿಕೊಟ್ಟು, ಪರಿಪರಿಯಲಿ=ನಾನಾ ಬಗೆಯಿಂದ, ಉಂಡು=ಭಕ್ತರಲ್ಲಿದ್ದು ತಾನುಂಡು, ಉಣಿಸಿ-ಭಕ್ತರಿಗುಣಿಸಿ, ಮಂಗಳಚರಿತ=ಮಂಗಳಕರವಾದ ಮಹಿಮೋಪೇತನಾದ, ಚಿನ್ಮಯಗಾತ್ರ=ಚಿದಾನಂದಸ್ವರೂಪನಾದ, ಲೋಕಪವಿತ್ರ=ಲೋಕಪವಿತ್ರನಾದ, ಸುಚರಿತ್ರ – ಉತ್ಕೃಷ್ಟವಾದ ಚರಿತ್ರೆಯುಳ್ಳ ಶ್ರೀಪರಮಾತ್ಮನು, ಸುಖಸಾಗರದಿ – ಸುಖವೆಂಬ ಸಮುದ್ರದಲ್ಲಿ, ಲೋಲಾಡಿಸುವ=ತೇಲಿ ಮುಳುಗುವಂತೆ ಮಾಡುವನು

ತಾತ್ಪರ್ಯ.—ತನ್ನನ್ನು ಸರ್ವದಾ ಸ್ಮರಿಸುತ್ತಿರುವ ಭಕ್ತರೇನು ಅಪರಾಧಗಳನ್ನು ಮಾಡಿದರೂ ಅವನ್ನು ಪರಮಾತ್ಮನು, ಸ್ಮರಣೆಗೆ ತಾರನು. ಪ್ರತಿಯಾಗಿ ಅವರ ಮನೋಭೀಷ್ಟವನ್ನು ಪೂರೈಸುವನು. ಮಂಗಳಕರವಾದ ಮಹಾತ್ಮ್ಯೆಯುಳ್ಳವನೂ, ಚಿದಾನಂದ ಸ್ವರೂಪನೂ, ಲೋಕಪವಿತ್ರನೂ ಉತ್ಕೃಷ್ಟ ಮಹಿಮೆಯುಳ್ಳವನೂ ಆದ ಶ್ರೀಹರಿಯು ತನ್ನ ಭಕ್ತರು ಮಾಡುತ್ತಿರುವ ಪೂಜಾದಿ ಕರ್ಮಗಳನ್ನು ಪುನಃ ಪರಮಾತ್ಮನಿಗೇನೇ ಕೃಷ್ಣಾರ್ಪಣವೆಂದರ್ಪಿಸಲು ಅವನ್ನು ಅನಂತಗುಣ ಅಧಿಕವನ್ನಾಗಿ ಮಾಡಿ ಅದರ ಫಲವನ್ನು ಅವರಲ್ಲಿದ್ದು ತಾನೂ ಉಂಡು, ಅವರಿಗೂ ಉಣಿಸಿ ಸುಖ ಸಮುದ್ರದಲ್ಲಿ ತೇಲಿ ಮುಳುಗುವಂತೆ ಮಾಡುವನು.

ವಿಶೇಷಾರ್ಥ.—"ಸ್ಮರಿಸುವರ ಅಪರಾಧಗಳ ತಾ ಸ್ಮರಿಸ" ತನ್ನ ಏಕಾಂತ ಭಕ್ತರು ಕೆಲವು ಕಾಲಗಳಲ್ಲಿ ಅಸುರಾವೇಶಗಳಿಂದ ತಪ್ಪುಗಳನ್ನು ಮಾಡುವರು. ಶ್ರೀಕೃಷ್ಣನು ಯಾಗವನ್ನು ಮಾಡುತ್ತಿರುವಾಗ ಒಬ್ಬ ಬ್ರಾಹ್ಮಣನು ಬಂದು ತನಗೆ ಹುಟ್ಟಿದ ಮಕ್ಕಳೆಲ್ಲಾ ಹುಟ್ಟಿದ ಕೂಡಲೇ ಕಣ್ಮರೆಯಾಗುವುವು. ಆ ಮಕ್ಕಳು ಹೋಗದೆ ತನ್ನ ಮಕ್ಕಳನ್ನು ತನಗೆ ಕೊಟ್ಟು ರಕ್ಷಿಸಬೇಕೆಂದು ಬೇಡಿಕೊಂಡನು. ಶ್ರೀಕೃಷ್ಣನು ಯಾಗಮಾಡುತ್ತಿದ್ದುದರಿಂದ ಉತ್ತರವನ್ನೀಯದೆ ಸುಮ್ಮನಿದ್ದನು. ಆಗ ಅಲ್ಲಿ ಕೂತಿದ್ದ ಅರ್ಜುನನೆದ್ದು ತಾನು ರಕ್ಷಿಸುವುದಾಗಿ ಹೇಳಿದನು. ಅದಕ್ಕೆ ಶ್ರೀಕೃಷ್ಣನು "ಮಹಾಭೂತ ಒಂದು ಇದೆ- ಅದು ಆ ಶಿಶುವನ್ನು ಅಪಹಾರಮಾಡುವುದು. ರಕ್ಷಿಸುವ ಕಾರ್ಯವು ನಿನ್ನಿಂದಾಗುವುದಿಲ್ಲ- ಯಾಗವಾದಮೇಲೆ ನಾನೂ ನೀನೂ ಇಬ್ಬರೂ ಹೋಗಿ ಆ ಕಾರ್ಯವನ್ನು ಪೂರೈಸೋಣವೆಂದು" ಹೇಳಿದನು. ಆಗ ಅರ್ಜುನನು ಕೃಷ್ಣನ ವಾಕ್ಯವನ್ನು ತಿರಸ್ಕರಿಸಿ ಬ್ರಾಹ್ಮಣನ ಬಳಿಗೆ ಬಂದು

ತಾನು ಮಕ್ಕಳನ್ನು ಬದುಕಿಸಿಕೊಡುವುದಾಗಿಯೂ, ತಪ್ಪಿದರೆ ಅಗ್ನಿಪ್ರವೇಶ ಮಾಡುವುದಾಗಿಯೂ ಪ್ರತಿಜ್ಞೆಮಾಡಿ ಬ್ರಾಹ್ಮಣನು ನಂಬದಿದ್ದರೂ ನಂಬಿಕೆಯನ್ನು ಹುಟ್ಟಿಸಿ ಅವನನ್ನು ಹಿಂಬಾಲಿಸಿ ಹೋಗಿ ಮಗುವನ್ನು ರಕ್ಷಿಸಲಾರದೆ ಅವನಿಂದ ಅವಮಾನಿತನಾಗಿ, ಅಗ್ನಿಪ್ರವೇಶಕ್ಕೆ ಸಿದ್ಧನಾದನು. ಆಗ ಶ್ರೀಕೃಷ್ಣನು ಹೋಗಿ ಅನಂತಾಸನದಲ್ಲಿದ್ದ ಆ ಬ್ರಾಹ್ಮಣನ ಮಕ್ಕಳನ್ನೆಲ್ಲಾ ತಂದಿತ್ತು ಅರ್ಜುನನನ್ನು ಸಮಾಧಾನಗೊಳಿಸಿದನು. ಹೀಗೆ ಅರ್ಜುನನು ಕೃಷ್ಣನನ್ನು ತಿರಸ್ಕಾರಮಾಡಿದ್ದರೂ ಅವನ ಅಪರಾಧವನ್ನು ಸ್ಮರಿಸದೆ ಅವನು ಅಗ್ನಿಪ್ರವೇಶಮಾಡುವ ಕಾಲದಲ್ಲಿ ಅಲ್ಲಿಗೆ ಬಂದು ಅವನನ್ನು ಎಚ್ಚರಗೊಳಿಸಿ ಸಂರಕ್ಷಿಸಿದನು. ಪೂತನಾ ಶಿಶುಪಾಲ ಮೊದಲಾದವರಲ್ಲಿ ಪ್ರವಿಷ್ಟರಾದ ಊರ್ವಶೀ ಜಯ ಮೊದಲಾದವರು ಅಸುರಾವೇಶ ಬಲದಿಂದ ತನ್ನಲ್ಲಿ ಪ್ರಬಲವಾದ ಅಪರಾಧವನ್ನು ಮಾಡಿದರೂ ಅವರಿಗೆ ದಿವ್ಯಗತಿಯನ್ನೇ ಇತ್ತನು. ಇಂತಹ ಉಪಮಾನಗಳು ಅನೇಕವಿರುವವು. ಗ್ರಂಥ ವಿಸ್ತಾರ ಭಯದಿಂದ ಹೆಚ್ಚಿಗೆ ಸೂಚಿಸಲಿಲ್ಲ. ಇಂತಹ ಕಥೆಗಳನ್ನು ಕೇಳಿ ಅವಗವರೇ ಈ ವಿಷಯವನ್ನು ಊಹಿಸಬಹುದು. ಆದುದರಿಂದ ದಾಸರಾಯರು "ಸ್ಮರಿಸುವರ ಅಪರಾಧಗಳ ತಾ ಸ್ಮರಿಸ" ಎಂದು ಹೇಳಿರುವರು. "ಮರಳಿ ತನಗರ್ಪಿಸಲು ಕೊಟ್ಟದನಂತ ಮಡಿಮಾಡಿ' ಭಕ್ತರು ಮಾಡಿದ ಕರ್ಮಗಳನ್ನು ಪರಮಾತ್ಮನಿಗೆ ಅರ್ಪಿಸಲು ಅದನ್ನ ಅನಂತಗುಣವಧಿಕವಾಗಿ ಮಾಡಿ ಸುಖವನ್ನು ಕೊಡುವನೆಂಬುವುದನ್ನು ಜನರಿಗೆ ಸಾದೃಷ್ಟದಿಂದ ತಿಳಿಸುವುದಕ್ಕಾಗಿ ಪ್ರತ್ಯಕ್ಷವಾಗಿ ಕುಚೇಲನಿಂದ ಒಪ್ಪಿಡಿ ಅವಲಕ್ಕಿಯನ್ನು ತೆಗೆದುಕೊಂಡು ಅವನಿಗೆ ಇಹದಲ್ಲಿ ಪರವೈಶ್ವರ್ಯವನ್ನು ಕೊಟ್ಟು ಪರಲೋಕದಲ್ಲಿ ಮುಕ್ತಿಯನ್ನು ಕೊಟ್ಟನು. ಇದರಂತೆ ಪರಮಾತ್ಮನಿಗೆ ನಾವು ಮಾಡಿದ ಕರ್ಮಗಳನ್ನೊಪ್ಪಿಸಲು ಅವನ್ನು ಅನಂತಗುಣವಧಿಕಮಾಡಿ ಫಲವನ್ನು ಕೊಡುವನೆಂಬ ಭಾವ. ಅದಕ್ಕಾಧಾರವಾಗಿ ಶ್ರೀಮದಾಚಾರ್ಯರ ವಾಕ್ಯ ಬಂದಿರುವುದು. ದ್ವಾದಶ ಸ್ತೋತ್ರದಲ್ಲಿ.—"ಅಕ್ಷಯಂ ಕರ್ಮಯ ಸ್ಮಿನ್ಪರೇಸ್ಸಮರ್ಪಿತಂ ಪ್ರತ್ಯಕ್ಷಂ ಯಾಂತಿ ದುಃಖಾನಿಯನ್ನಾಮತಃ' ಯಾವ ಪರಮಾತ್ಮನಲ್ಲಿ ನಾವು ಮಾಡಿದ ಕರ್ಮಗಳನ್ನು ಸಮರ್ಪಿಸುವುದರಿಂದ ಆ ಕರ್ಮಫಲವು ಅಕ್ಷಯವಾಗುವದೋ, ಯಾವ ನಾಮೋಚ್ಚಾರಣ ಮಾತ್ರದಿಂದ ದುಃಖಗಳೆಲ್ಲವೂ ನಾಶವಾಗುವುವೋ ಅಂತಹ ಪರಮಾತ್ಮನ ಪ್ರೀತಿಯನ್ನು ಪಡೆಯೋಣ! ಎಂದು ಹೇಳಿರುವರು

ಇದೇ ಅಭಿಪ್ರಾಯವನ್ನೇ ದಾಸರಾಯರು ಮೇಲಿನ ಪದದಿಂದ ಸೂಚಿಸಿರುವರು. "ಪರಿಪರಿಯಲುಂಡುಣಿಸಿ' ಪರಮಾತ್ಮನು ಜೀವರನ್ನು ಸೃಷ್ಟಿಸಿ ಪಾಲಿಸುತ್ತಾ ಜೀವರೊಳಗಿದ್ದು ಪುನಸಾ ಸಹ ಚಕ್ಷುಃ ಶ್ರೋತ್ರಾದಿ ಇಂದ್ರಿಯ ಜನ್ಯವಾದ ಶಬ್ದ ಸ್ಪರ್ಶಾದಿ ವಿಷಯ ಸುಖಗಳನ್ನುಂಡು ಜೀವರಿಗೆ ಕೊಡುವನೆಂದರ್ಥ. ಭಾಗವತ ಪ್ರಥಮಸ್ಕಂಧದಲ್ಲಿ "ಭೂತೇಷು ಚಾಂತರ್ಹಿತ ಆತ್ಮ ತಂತ್ರಃ ಷಾಡ್ವರ್ಗಿಕಂ ಜಿಘ್ರತಿ ಷಡ್ಗುಣೇಶಃ' ಎಂದು ಹೇಳಿರುವರು. ಈ ಶ್ಲೋಕವು ಮೇಲಿನ ಅರ್ಥವನ್ನೇ ಹೇಳುವುದು. ಆದರೆ ದೇಹದೊಳಗಿದ್ದರೂ ಸ್ವತಂತ್ರನಾದುದರಿಂದ ಶರೀರ ಸಂಬಂಧದಿಂದಾಗುವ ವಿಷಯ ಸುಖಗಳನ್ನು ಬಿಟ್ಟು ಸುಖಗಳನ್ನು ಮಾತವೇ ಸ್ವೀಕರಿಸುವನು. "ಭುಙ್ಕ್ತೇ ಭೂತೇಷು ತದ್ಗುಣಾನ್" ಎಂಬ ವಾಕ್ಯದಿಂದ ಗುಣಗಳನ್ನು ಅಂದರೆ ಶುಭವನ್ನು=ಸುಖವನ್ನು ಮಾತ್ರ ಸ್ವೀಕರಿಸುವನು ಎಂಬರ್ಥವು ಸ್ಪಷ್ಟವಾಗುವುದು. ಸುಖಸಾಗರದಿ ಲೋಲ್ಯಾಡಿಸುವ ಇಹದಲ್ಲೂ ತನ್ನ ಭಕ್ತರಿಗೆ ತನ್ನ ದರ್ಶನವನ್ನು ಅಪರೋಕ್ಷದಲ್ಲಿತ್ತು ಆನಂದಸಾಗರದಲ್ಲಿ ಮುಳುಗಿಸುವನು. ಭಾಗವತ ಪ್ರಥಮಸ್ಕಂಧದಲ್ಲಿ ನಾರದರ ವಾಕ್ಯ.—"ಆನಂದ ಸಂಪ್ಲವೇಲೀನೋ ನಾಪಶ್ಯಮುಭಯಂಮುನೇ' ಆ ಭಗವಂತನನ್ನು ನೋಡಿದ ಕೂಡಲೇ ನಾನು ಆನಂದ ಮಡುವಿನಲ್ಲಿ ಮುಳುಗಿಬಿಟ್ಟೆ. ನನಗೆ ಇಹ ಪರವೆಂಬುದೇ ಗೊತ್ತಾಗಲಿಲ್ಲ. ಎಂದು ವ್ಯಾಸರನ್ನು ನೋಡಿ ನಾರದರು ಹೇಳಿರುವರು. ಆದುದರಿಂದ ಭಕ್ತರಿಗೆ ಇಹದಲ್ಲಿಯೇ ಇಂತಹ ಆನಂದವನ್ನು ಕೊಟ್ಟನೆಂದಮೇಲೆ ಮುಕ್ತಿಯಲ್ಲಿನ ಆನಂದವನ್ನು ಕೇಳಬೇಕೆ? ಅಂತಹದನ್ನು ಕೊಡುವನೆಂದು ಭಾವ. ಲೋಕಪವಿತ್ರ, ಸುಚರಿತ್ರ ಇತ್ಯಾದಿಗಳು 'ಪ್ರಕ್ಷಯಂಯಾಂತಿ ದುಃಖಾನಿಯನ್ನಾಮತಃ' ನಾಮಸ್ಮರಣೆ ಮಾತ್ರದಿಂದ ದುಃಖಗಳನ್ನೆಲ್ಲಾ ನಾಶಮಾಡುವನೆಂಬ ದ್ವಾದಶಸ್ತೋತ್ರ ವಾಕ್ಯದ ಅರ್ಥವನ್ನೇ ಸೂಚಿಸುವುದು.

ಈ ಪದ್ಯದಿಂದ ಪರಮಾತ್ಮನ ಕರುಣಾರಸವನ್ನು ವಿಶದಮಾಡುತ್ತಾರೆ

**ಏನು ಕರುಣಾನಿಧಿಯೋ ಹರಿ ಮು**
**ಕ್ತೇನು ಭಕ್ತಾಧೀನನೋ ಇ**
**ನ್ನೇನು ಈತನ ಲೀಲೆ ಇಚ್ಛಾಮಾತ್ರದಲಿ ಜಗವ ||**

**ತಾನೆ ಸೃಜಿಸುವ ಪಾಲಿಸುವ ನಿ**
**ರ್ವಾಣ ಮೊದಲಾದಖಿಳ ಲೋಕ**
**ಸ್ಥಾನದಲಿ ಮುಕ್ತರ ನಿಟ್ಟಾನಂದಪಡಿಸುವನು ॥೧೬॥**

ಪದ್ಯಾರ್ಥ.—ಹರಿಯು-ಶ್ರೀಪರಮಾತ್ಮನು, ಏನು ಕರುಣಾನಿಧಿಯೋ=ಎಂತಹ ದಯಾಮೂರುತಿಯೋ, ಮತ್ತೇನು ಭಕ್ತಾಧೀನನೋ= ಇನ್ನು ಎಂತಹ ಭಕ್ತರ ಅಧೀನನೋ, ಇನ್ನೇನು ಈತನ ಲೀಲೆ=ಈತನ ಲೀಲೆಯನ್ನು ಏನೆಂದು ಹೇಳುವೆ! ಇಚ್ಛಾಮಾತ್ರದಲಿ=ತನಗೆ ಇಚ್ಛೆ ಹುಟ್ಟಿದ ಕೂಡಲೆ ಜಗವ-ಜಗತ್ತನ್ನು, ತಾನೆ, ಸೃಜಿಸುವ=ಸೃಷ್ಟಿಸುವನು, ಪಾಲಿಸುವ =ಸಂರಕ್ಷಿಸುವನು, ಈ ಲೋಕವನ್ನು ಬಿಟ್ಟ ಬಳಿಕ, ನಿರ್ವಾಣ-ವೈಕುಂಠ ಮೊದಲಾದ, ಲೋಕಸ್ಥಾನಗಳಲ್ಲಿ=ಪ್ರದೇಶಗಳಲ್ಲಿಟ್ಟು ಅವರನ್ನು ಪ್ರಾಣಗಳನ್ನು ಇಟ್ಟು ಆನಂದಪಡಿಸುವನು.

ತಾತ್ಪರ್ಯ.—ಶ್ರೀಹರಿಯು ಸಮರಾದ ಕರುಣಾಪೂರ್ಣರಿಲ್ಲ. ಆತನಂತೆ ಭಕ್ತರ ವಶನಾಗತಕ್ಕ ದೇವರು ಮತ್ತೊಬ್ಬರಿಲ್ಲ. ಈತನ ಲೀಲೆ ವಿವರಿಸಲು ಸಾಧ್ಯವಾಗದು. ದೇವರು ಮನಸ್ಸಿನಲ್ಲಿ ನೆನೆಸಿದ ಕೂಡಲೆ ಸೃಷ್ಟಿ, ಸ್ಥಿತಿ, ಲಯ, ಮೋಕ್ಷಾದಿಗಳು ಜೀವರಾಶಿಗೆ ಲಭಿಸುವುವು.

ವಿಶೇಷಾರ್ಥ.—ಭಕ್ತಾಧೀನನೆಂದರೆ ಭಕ್ತರಭೀಷ್ಟವನ್ನು ಸಲಿಸುವನೆಂದು ತಾತ್ಪರ್ಯ. ಮಧ್ವಾಚಾರ್ಯರು ಬದರಿಕಾಶ್ರಮದಲ್ಲಿ ನಾರಾಯಣ ದೇವರನ್ನು ದರ್ಶನಮಾಡಿದಾಗ " ಅಮರಾಮರಾನುಗನರಾಸುರಾದಿಕಾನ್ ॥ ಸೃಜಸಿ ಪ್ರಪಾಲಯಸಿ ಹಂಸಿ ಸಂತತಂ ಸ್ವಗತಿಂ ಪ್ರಯಾಪಯಸಿ ಚೈತಲೀಲಯಾ " ಎಂದು ಸ್ತೋತ್ರಮಾಡಿರುವರು. ಇದರರ್ಥ.—ಸ್ವಾಮಿ ತಾವು ಅಮರ....ಕಾನ್=ಅಮರ-ದೇವತೆಗಳು, ಅಮರಾನುಗ-ಉಪಾದೇವತೆಗಳು ನರ-ಮನುಷ್ಯರು, ಅಸುರಾದಿಕಾನ್=ರಾಕ್ಷಸರೇ ಮೊದಲಾದವರನ್ನು, ಲೀಲಯಾ-ಆಟಕ್ಕಾಗಿ, ಸೃಜಸಿ=ಸೃಷ್ಟಿಸುತ್ತೀಯೆ, ಪ್ರಪಾಲಯಸಿ=ಸಂರಕ್ಷಿಸುತ್ತೀಯೆ, ಹಂಸಿ=ಕೊಲ್ಲುತ್ತೀಯೆ, ಸ್ವಗತಿಂ-ಜೀವನ ಯೋಗ್ಯತಾನುಸಾರವಾದ ಅಂದರೆ, ಮೋಕ್ಷ, ನಿತ್ಯಸಂಸಾರ, ನಿರಯ ಅಂಧಂತಮಸ್ಸುಗಳನ್ನು ಪ್ರಯಾಪಯಸಿ-ಸೇರಿಸುತ್ತೀಯೆಂದು ಮಧ್ವವಿಜಯದಲ್ಲಿ ಹೇಳಿದೆ. ಈ ವಿಷಯವನ್ನೇ ಈ ಪದ್ಯದಿಂದಲೂ ಧೃಢಪಡಿಸುತ್ತಾರೆ.

**ಜನಪಮೆಚ್ಚಿದರೀವ ಧನವಾ**
**ಹನವಿಭೂಷಣ ವಸನಭೂಮಿಯು**
**ತನುಮನಗಳಿತ್ತಾದರಿಪರುಂಟೇನೋ ಲೋಕದೊಳು।**
**ಅನವರತ ನೆನೆವವರನಂತಾ**
**ಸನವೆ ಮೊದಲಾದಾಲಯದೊಳಿ**
**ಟ್ಟಣುಗನಂದದಲವರ ವಶನಾಗುವ ಮಹಾಮಹಿಮ ॥೧೭॥**

ಪದ್ಯಾರ್ಥ:— ಜನಪ-ಮಹಾರಾಜನು, ಮೆಚ್ಚಿದರೆ=ಪ್ರಸನ್ನನಾದರೆ. ಧನ ವಾಹನ ವಿಭೂಷಣ ವಸನ ಭೂಮಿಯು-ಧನ=ದ್ರವ್ಯಗಳನ್ನು, ವಾಹನ =ಕುದುರೆ ಮೊದಲಾದವುಗಳನ್ನು, ವಿಭೂಷಣ=ಒಡವೆಗಳನ್ನು, ವಸನ-ವಸ್ತ್ರಗಳನ್ನು, ಭೂಮಿಯು=ಭೂಸ್ಥಿತಿಯನ್ನು, ಈವ-ಕೊಡುವನು, ಲೋಕದೊಳು=ಲೋಕದಲ್ಲಿ. ತನು=ತನ್ನ ಶರೀರವನ್ನು, ಮನಗಳ=ತನ್ನ ಮನಸ್ಸನ್ನು ಇತ್ತು = ಕೊಟ್ಟು, ಆದರಿಪರುಂಟೇನೋ-ಆದರಿಸುವರುಂಟೇನೋ ಎಲ್ಲಿ ಮನುಜ. ಆಲೋಚಿಸಿ ನೋಡೆಂದು ಭಾವವು. ಮಹಾಮಹಿಮ-ಪುಣ್ಯಕೀರ್ತಿಯಾದ ಶ್ರೀಪರಮಾತ್ಮನು, ಅನವರತ ನೆನೆವವರ=ಅವಿಚ್ಛಿನ್ನವಾಗಿ ಧ್ಯಾನಿಸುತ್ತಿರುವವರನ್ನು, ಅನಂತಾಸನವೇಮೊದಲಾದಾಲಯದಲಿ-ಅನಂತಾಸನ, ಶ್ವೇತದ್ವೀಪ, ವೈಕುಂಠಗಳೆಂಬ ತನ್ನ ಮನೆಗಳಲ್ಲಿಟ್ಟು, ಅಣುಗನಂದದಿ-ಸಣ್ಣ ಹುಡುಗನಂತೆ ಶ್ರೀಪರಮಾತ್ಮನು, ಅವರವಶನಾಗುವ=ಭಕ್ತರ ವಶನಾಗುವನು.

ತಾತ್ಪರ್ಯ:—ಒಬ್ಬ ಮಹಾರಾಜನು ಸೇವಕನ ಸೇವೆಗೆ ಮೆಚ್ಚಿದರೆ ದ್ರವ್ಯ, ವಾಹನಗಳು, ಆಭರಣಗಳು, ವಸ್ತ್ರಗಳು, ಗ್ರಾಮ, ಭೂಮಿ ಮೊದಲಾದವುಗಳನ್ನು ಕೊಡಬಲ್ಲನು. ಮಹಾಮಹಿಮೆಯುಳ್ಳ ಶ್ರೀಪರಮಾತ್ಮನು ತನ್ನನ್ನು ಸರ್ವದಾ ಭಜಿಸುವವರಿಗೆ, ತನ್ನನ್ನು ನೋಡಿ ಆನಂದ ಪಡುವುದಕ್ಕಾಗಿ ತನ್ನ ದರ್ಶನವನ್ನು ಕೊಡುವನು. ಮುಕ್ತರನ್ನಾಗಿ ಮಾಡಿ ಅನಂತಾಸನವೇ ಮೊದಲಾದ ತನ್ನ ಮನೆಗಳಲ್ಲಿ ಅವರನ್ನಿಟ್ಟು ಆನಂದಗೊಳಿಸುವನು. ಇಂತಹ ಪ್ರಭು ಲೋಕದಲ್ಲಿ ಮತ್ತಾರಿರುವರು. ಆದುದರಿಂದ ಶ್ರೀಹರಿಯೇ ದಯಾಸಮುದ್ರನೆಂದು ಭಾವವು.

ವಿಶೇಷಾರ್ಥ: — "ತನುಮನಗಳಿತ್ತಾದರಿಪರುಂಟೇನೋ" ಇಲ್ಲಿ ತನುವೆಂದರೆ ಸಾತ್ವಿಕ ಜೀವರಿಗೆ ದೇವತಾದಿ ಶರೀರಗಳಡಿಸಿಕೊಟ್ಟು ಮುಕ್ತಿ ಸಾಧನವನ್ನು ಮಾಡಿಸಿ ವೈಕುಂಠಾದಿ ತನ್ನ ಸ್ಥಾನಗಳನ್ನು ಆದರಿಸುವಲ್ಲಿ

ನೆಂದೂ ಒಂದರ್ಥವನ್ನು ಹೇಳಬಹುದು. ಮತ್ತೊಂದರ್ಥವು ಭಕ್ತಾಧೀನ ನಾದುದರಿಂದ ಅರ್ಜುನಾದಿಗಳಿಗೆ ತನ್ನ ಶರೀರವನ್ನೇ ಸಾರಥ್ಯಕ್ಕಾಗಿಯೂ ದೌತ್ಯಕ್ಕಾಗಿಯೂ ಒಪ್ಪಿಸಿದ್ದನು. ನಾರದಾದಿಗಳಿಗೆ ಸ್ಮರಿಸಿದ ಕಡೆಗಳಲ್ಲಿಯೇ ತನ್ನ ರೂಪವನ್ನು ತೋರಿಸುತ್ತಿದ್ದನು. ಅದನ್ನೇ ಪ್ರಥಮಸ್ಕಂಧ ಭಾಗವತ ದಲ್ಲಿ " ಅಹೂತಇವಮೇ ಶೀಘ್ರಂ ದರ್ಶನಂಯಾತಿ ಚೇತಸಿ " ನಾನು ಗಾನ ಮಾಡಲುಪಕ್ರಮಿಸಿದ ಕೂಡಲೇ ಎದುರಿಗೆ ಇರುವ ಪುರುಷನನ್ನು ಕರೆದರೆ ಹೇಗೆ ಬರುವನೋ ಹಾಗೆಯೇ ನನ್ನ ಚಿತ್ತದಲ್ಲಿ ಶ್ರೀಹರಿಯು ದರ್ಶನವನ್ನು ಕೊಡುತ್ತಿರುವನು ಎಂದು ನಾರದರು ಹೇಳಿಕೊಂಡಿರುವರು. ಈಚೆಗೆ ೪೦೦-೫೦೦ ವರ್ಷಗಳಿಗೆ ಹಿಂದಿನ ಕಾಲದಲ್ಲಿಯೂ ಕೂಡ ಭಗವಂತನು ಅದ್ಭುತ ಮಹಿಮೆಯನ್ನು ತೋರಿಸಿರುವನು, ಮಹಾರಾಷ್ಟ್ರದೇಶನಾದ ಕೊಲ್ಲಾಪುರ ದಲ್ಲಿ ವಾಸವಾಗಿದ್ದ " ಸತೀ ಸಖೂಬಾಯಿ " ಎಂಬಾಕೆಯು ವಿಠ್ಠಲನಲ್ಲಿ ಪರಮ ಭಕ್ತಿಯುಕ್ತಳಾಗಿ ಪರಮಾತ್ಮನನ್ನು ಅನವರತ ಆರಾಧಿಸುತ್ತಾ ಇದ್ದು ಪಂಢರಪುರದಲ್ಲಿ ಪ್ರತಿ ವರ್ಷದಲ್ಲೂ ನಡೆಯುವ ಆಷಾಢ ಶುದ್ಧ ಏಕಾದಶೀ ದಿವಸ ಜಾತ್ರೆಗಾಗಿ ಹೋಗುವ ನಾನಾ ಜನರ ಕೂಡ ತಾನೂ ಹೋಗುವ ಪ್ರಯತ್ನವನ್ನು ಮಾಡುತ್ತಿರಲು ಇವಳ ಅತ್ತೆಯು ಆಕೆಯನ್ನು ಬಹಳವಾಗಿ ದಂಡಿಸಿ ಒಂದು ಕೋಣೆಯಲ್ಲಿ ಸ್ತಂಭಕ್ಕೆ ಕಟ್ಟಿಹಾಕಿ ೧೫ ದಿವಸಗಳವರಿವಿಗೂ ಆಕೆಗೆ ಅನ್ನಪಾನ ಕೊಡದೆ ಕೊಲ್ಲಬೇಕೆಂದಿರಲು ಸಖೂಬಾಯಿಯು ಶ್ರೀಹರಿಯಲ್ಲಿ ತನುಮನಗಳನ್ನೊಪ್ಪಿಸಿ ಬೇಡಿಕೊಂಡಳು. ಶ್ರೀಪರಮಾತ್ಮನು ಆಕೆಯಲ್ಲಿ ಕರುಣೆಯಿಂದ ಬಂಧವಿಮೋಚನವನ್ನುಮಾಡಿ ಪಂಢರಪುರಕ್ಕೆ ಆಕೆಯನ್ನು ಕಳುಹಿಸಿ, ಆಕೆಯು ಯಾತ್ರಾಮುಗಿಸಿ ಕೊಂಡು ಬರುವವರೆಗೂ ತಾನು ಸಖೂರೂಪದಿಂದ ಬಂಧನದಲ್ಲಿದ್ದು ಸಖೂ ಬಂದಮೇಲೆ ತಾನು ಅದೃಶ್ಯನಾದನು. ಸಖೂಬಾಯಿಯ ಅತ್ತೆ ಮೊದಲಾದವರು ನಡೆದ ವೃತ್ತಾಂತವನ್ನೆಲ್ಲಾ ತಿಳಿದು ಪಶ್ಚಾತ್ತಾಪದಿಂದ ಸಖೂಬಾಯಿಯನ್ನು ಕ್ಷಮಿಸುವಂತೆ ಬೇಡಿಕೊಂಡು ಅವಳ ಅನುಗ್ರಹದಿಂದ ಎಲ್ಲರೂ ಇಹಪರಗಳಲ್ಲಿ ಸುಖವನ್ನು ಹೊಂದಿದರು, ಹೀಗೆ ಪರಮಾತ್ಮನು ಭಕ್ತರಿಗಾಗಿ ತನ್ನ ಶರೀರವನ್ನೇ ಕೊಡುವುದರಿಂದ " ತನುವ ನಗಳಿತ್ತು " ಎಂದು ದಾಸರಾಯರು ಹೇಳಿರುವರು. ಸಣ್ಣ ಮಗು ಹೇಗೆ ತಂದೆತಾಯಿ ಗಳವಶದಲ್ಲಿರುವುದೋ ಹಾಗೆ ಪರಮಾತ್ಮನು ಭಕ್ತರ ವಶದಲ್ಲಿರುವನೆಂದು

ತಾತ್ಪರ್ಯ. ಆದುದರಿಂದಲೇ ಇವನನ್ನು ಮಹಾಮಹಿಮೆಯುಳ್ಳವನು ಕರುಣಾ ಸಮುದ್ರನು ಎಂದು ಹೇಳಿರುವರು.

ಶ್ರೀಪರಮಾತ್ಮನ ಮಾಯೆಯನ್ನು ಬಿಡಿಸಿಕೊಳ್ಳಲು ಯಾರಿಂದಲೂ ಸಾಧ್ಯವಲ್ಲ. ಹಾಗೆ ಅದನ್ನು ಬಿಡಿಸಿಕೊಳ್ಳುವುದು ಅವನ ಅನುಗ್ರಹದಿಂದ ಆಗಬೇಕಲ್ಲದೆ ಜೀವರ ಪ್ರಯತ್ನದಿಂದ ಸಾಧ್ಯವಿಲ್ಲವೆಂದು " ಭುವನಪಾವನ ಎಂಬ ಪದ್ಯದಿಂದ ಅವನ ಮಹಾಮಹಿಮೆಯನ್ನು ನಿರೂಪಿಸುತ್ತಾರೆ.

**ಭುವನ ಪಾವನ ಚರಿತ ಪುಣ್ಯ**
**ಶ್ರವಣ ಕೀರ್ತನ ಪಾಪನಾಶನ**
**ಕವಿಭಿರೀಡಿತ ಕೈರವದಳಶ್ಯಾಮ ನಿಸ್ಸೀಮ।**
**ಯುವತಿವೇಷದಿ ಹಿಂದೆ ಗೌರೀ**
**ಧವನ ಮೋಹಿಸಿ ಕೆಡಿಸಿ ಉಳಿಸಿದ**
**ಇವನ ಮಾಯವ ಗೆಲುವನಾವನು ಈ ಜಗತ್ರಯದಿ ॥೧೪॥**

ಪದ್ಯಾರ್ಥ.—ಶ್ರೀಪರಮಾತ್ಮನು, ಭುವನಪಾವನ ಚರಿತ=ಭುವನಗಳ ಲೋಕಗಳನ್ನು, ಪಾವನ-ಪವಿತ್ರವನ್ನಾಗಿ ಮಾಡುವ, ಚರಿತ=ಚರಿತ್ರೆಯುಳ್ಳವನು. ಪುಣ್ಯಶ್ರವಣಕೀರ್ತನ=ಪುಣ್ಯಕರವಾದ ಶ್ರವಣಕೀರ್ತನವುಳ್ಳವನು. (ಕಥಾಶ್ರವಣವೂ, ಅವನನ್ನು ಕೀರ್ತಿಸುವುದೂ ಸಹ ಪುಣ್ಯಕರವು. ಅವನ ಮಹಿಮೆಯನ್ನು ಶ್ರವಣಮಾಡುವವರಿಗೂ ಕೀರ್ತನಮಾಡುವವರಿಗೂ ಪುಣ್ಯವನ್ನು ಕೊಡುವವನೆಂಬ ಭಾವ) ಪಾಪನಾಶನ = ಪಾಪಗಳನ್ನು ನಾಶಮಾಡುವವನು, ಕವಿಭಿರೀಡಿತ – ಬ್ರಹ್ಮಾದಿಗಳಿಂದ ಸ್ತುತ್ಯನು, ಕೈರವದಳಶ್ಯಾಮ=(ಕರೆದಾವರೆ) ಕನ್ನೈದಿಲೆ ಪುಷ್ಪದ ದಳಗಳಂತೆ ನೀಲವರ್ಣವಾದ ದೇಹಕಾಂತಿಯುಳ್ಳವನು, ನಿಸ್ಸೀಮ–ಅಪರಿಮಿತವಾದ ಗುಣರೂಪಾದಿಗಳುಳ್ಳವನು. ಹಿಂದೆ = ಹಿಂದಿನ, ಚಾಕ್ಷುಷ ಮನ್ವಂತರದಲ್ಲಿ. ಯುವತಿವೇಷದಿಂದ=ಸ್ತ್ರೀವೇಷದಿಂದ, ಗೌರೀಧವನ = ಉಮಾಪತಿಯಾದ ರುದ್ರದೇವರನ್ನು ಮೋಹಿಸಿ, ಕೆಡಿಸಿ=ಅವನನ್ನು ಕಾಮಾತುರನನ್ನಾಗಿ ಮಾಡಿ ಉಳಿಸಿದನು=ಮತ್ತು ಪಶ್ಚಾತ್ತಾಪವನ್ನುಂಟುಮಾಡಿ ರಕ್ಷಿಸಿದನು. ಆದುದರಿಂದ ಈ ಜಗತ್ರಯದಿ=ಮೂರು ಲೋಕದಲ್ಲಿಯೂ, ಅವನು – ಯಾವ ಪುರುಷನು, ಇವನ ಮಾಯವ=ಇವನ ಮಾಯೆಯನ್ನು, ಗೆಲುವನು=ಬಿಡಿಸಿಕೊಳ್ಳುವನು. ಯಾರಿಂದಲೂ ಸಾಧ್ಯವಿಲ್ಲವೆಂದು ಅರ್ಥವು.

ತಾತ್ಪರ್ಯ.—ಶ್ರೀಪರಮಾತ್ಮನು ೧೪ಲೋಕಗಳನ್ನೂ ಪವಿತ್ರವನ್ನಾಗಿ ಮಾಡುವ ಚರಿತ್ರೆಯುಳ್ಳವನು. ತನ್ನ ಕಥೆಯನ್ನು ಶ್ರವಣಮಾಡುವವರಿಗೂ ಕೊಂಡಾಡುವವರಿಗೂ ಪುಣ್ಯವನ್ನು ಕೊಡುವನು. ಮತ್ತು ಅವರ ಪಾಪಗಳನ್ನು ನಾಶಮಾಡುವನು. ಬ್ರಹ್ಮಾದಿಗಳಿಂದ ಹೊಗಳಿಸಿಕೊಳ್ಳಲ್ಪಡುವನು ಶರದಾವರೆಯಂತೆ ಉತ್ತಮವಾದ ನೀಲವರ್ಣವಾದ ಶರೀರ ಉಳ್ಳವನು. ಅಪರಿಮಿತವಾದ ನಾಮರೂಪಗಳುಳ್ಳವನಾದುದರಿಂದ ನಿಸ್ಸೀಮನೆಂದು ಕರೆಸಿಕೊಳ್ಳಲ್ಪಡುವನು. "ಯುವತಿ ವೇಷದಿ ಹಿಂದೆ ಗೌರೀಧವನನಮೋಹಿಸಿ" ಕೃತಯುಗದಲ್ಲಿ ದೇವ ದೈತ್ಯರೆಲ್ಲರೂ ಕೂಡಿ ಸಮುದ್ರಮಥನ ಮಾಡಿದಾಗ ಸ್ತ್ರೀ ರೂಪದಿಂದ ಶ್ರೀಪರಮಾತ್ಮನು ದೈತ್ಯರನ್ನು ವಂಚಿಸಿ ದೇವತೆಗಳಿಗೆ ಅಮೃತಪ್ರಾಶನ ಮಾಡಿಸಿದನೆಂಬ ಸಮಾಚಾರವನ್ನು ರುದ್ರದೇವರು ಕೇಳಿ ಶ್ರೀಪರಮಾತ್ಮನಲ್ಲಿ ಬಂದು ಸ್ತೋತ್ರಮಾಡಿ ನೀನು ದೈತ್ಯರನ್ನು ವಂಚಿಸಲು ತೆಗೆದುಕೊಂಡ ಸ್ತ್ರೀರೂಪವನ್ನು ನನಗೆ ತೋರಿಸಬೇಕೆಂದು ಬೇಡಿಕೊಂಡರು. ಆಗ ಶ್ರೀಪರಮಾತ್ಮನು, "ಈಶ್ವರ! ದೈತ್ಯರು ದೇವತೆಗಳಿಂದ ಅಮೃತ ಕಲಶವನ್ನು ಅಪಹರಿಸಲು, ಅವರನ್ನು ವಂಚಿಸಿ ದೇವತೆಗಳಿಗೆ ಅಮೃತವನ್ನು ಕೊಡುವುದಕ್ಕಾಗಿ ಆ ರೂಪವನ್ನು ನಾನು ತೆಗೆದುಕೊಂಡೆನು. ಅದು ಕಾಮಿಗಳು ನೋಡಿ ಮೋಹಹೋಗುವ ರೂಪವು. ಹಾಗಿದ್ದರೂ ನೀನು ಅಪೇಕ್ಷಿಸುವುದರಿಂದ ನಿನಗೆ ತೋರಿಸುವೆನು" ಎಂದು ಹೇಳಿ ಶ್ರೀಹರಿಯು ಕಣ್ಮರೆಯಾದನು. ರುದ್ರದೇವರು ಪಾರ್ವತೀ ಸಮೇತರಾಗಿ ನಾಲ್ಕು ಕಡೆಯಲ್ಲಿಯೂ ನೋಡುತ್ತಿದ್ದರು.

ಹೀಗಿರಲು ಅಲ್ಲಿಗೆ ಸಮೀಪವಾಗಿದ್ದ ಉದ್ಯಾನವನದಲ್ಲಿ ಗಾನಮಾಡುತ್ತಾ ಕಾಲಂದಿಗೆಯ ಶಬ್ದದಿಂದ ತಾಳಕ್ಕೆ ಸರಿಯಾಗಿ ನರ್ತನ ಮಾಡುತ್ತಾ, ಕೈಯ್ಯಲ್ಲಿ ಎರಡು ಚೆಂಡುಗಳನ್ನು ತೆಗೆದುಕೊಂಡು ಚೆಂಡಾಡುತ್ತಾ ಒಂದು ಅದ್ಭುತವಾದ ರೂಪದಿಂದ ಕೂಡಿದ್ದ, ನವಯೌವತಿಯಾದ ಒಬ್ಬ ಸ್ತ್ರೀಯು ಬರುತ್ತಿರುವುದನ್ನು ರುದ್ರದೇವರು ನೋಡಿದರು, ಶ್ರೀಹರಿಯ ಮಾಯವನ್ನು ಗೆಲ್ಲುವರ್ಯಾರು? ತಕ್ಷಣವೆ ರುದ್ರದೇವರು ಕಾಮುಕ್ಕವಶರಾದರು ಅಷ್ಟರಲ್ಲಿ ಆ ಸ್ತ್ರೀಯು ರುದ್ರದೇವರ ಸಮೀಪಕೆ ಬರುತ್ತಿರಲು, ಗಾಳಿಯು ಒಂದು ಆಕೆಯ ವಸ್ತ್ರವನ್ನು ಅಪಹರಿಸಿತು "ಭವನ್ಯಾ ಅಪಿಪಶ್ಯಂತ್ಯಾಗತ ಹ್ರೀಸ್ತತ್ಪದಂಯಯೌ" ರುದ್ರದೇವರು ಪಾರ್ವತಿಯು ನೋಡುತ್ತಿರಲು

ನಿರ್ಲಜ್ಜರಾಗಿ ವಸ್ತ್ರಹೀನಳಾದ ಆ ಸ್ತ್ರೀಯನ್ನು ಅನುಸರಿಸಿ ಓಡಿಬಂದು ಕೇಶಪಾಶಕ್ಕೆ ಕೈಹಾಕಿ ಹಿಡಿದು ಆಲಿಂಗನಕ್ಕೆ ಪ್ರಯತ್ನಮಾಡಿದರು. ಆಕೆಯು ಅವರ ಕೈಯ್ಯಿಂದ ಬಿಡಿಸಿಕೊಂಡು ಓಡುವಾಗ ಋದ್ರದೇವರು ಆಕೆಯನ್ನು ಹಿಡಿಯಲು ಎಷ್ಟು ಪ್ರಯತ್ನಮಾಡಿದರೂ ಸಾಧ್ಯವಾಗಲಿಲ್ಲ. ಅತಿ ಸಮೀಪದಲ್ಲಿ ಓಡುತ್ತಿರುವ ಸ್ತ್ರೀಯನ್ನು ನೋಡುತ್ತಿರುವುದರಿಂದ ಮನೋವೈಕಲ್ಯದಿಂದ ಇವರಿಗೆ ವೀರ್ಯಸ್ರಾವವಾಯಿತು. ಈ ಸ್ಥಳಗಳೆಲ್ಲವೂ ಶಿವಕ್ಷೇತ್ರವಾದವು. ತದನಂತರ ಋದ್ರದೇವರಿಗೆ ಈ ಸ್ತ್ರೀರೂಪಧಾರಿಯು ಪರಮಾತ್ಮನೇ ಎಂದು ಜ್ಞಾನೋದಯುವಾಯಿತು. ಸ್ತ್ರೀಯು ಕಣ್ಮರೆಯಾದಳು. ಋದ್ರದೇವರು ನಾಚಿಕೆಯಿಂದ ತಲೆತಗ್ಗಿಸಿಕೊಂಡು ಪಾರ್ವತಿಯ ಸಮೀಪಕ್ಕೆ ಬಂದರು. ಆಗ ಪರಮಾತ್ಮನು ತನ್ನ ನಿಜರೂಪದಿಂದ ಋದ್ರದೇವರಿಗೆ ಪ್ರತ್ಯಕ್ಷನಾಗಿ ಲಜ್ಜಿತರಾದ ಋದ್ರದೇವರನ್ನು ಸಮಾಧಾನಗೊಳಿಸಿ ಅದೃಶ್ಯನಾದನು. ಮಹಾನುಭಾವರಾದ ಮನ್ಮಥನನ್ನೇ ದಹಿಸಿದ ಋದ್ರದೇವರ ಗತಿಯೇ ಹೀಗಾದಮೇಲೆ ಮತ್ತಾರುತಾನೆ ಲೋಕದಲ್ಲಿ ಇವನ ಮಾಯೆಯನ್ನು ಜಯಿಸುವರು ? ಇದೇ ಅಭಿಪ್ರಾಯವನ್ನೇ ದಾಸರಾಯರು ಈ ಪದ್ಯದಲ್ಲಿ ತೋರಿಸಿರುವರು.

ಮತ್ತೂ ಪರಮಾತ್ಮನ ಕಾರುಣ್ಯವನ್ನೇ ವಿಶದಪಡಿಸುತ್ತಾರೆ.—

**ಪಾಪಕರ್ಮವ ಸಹಿಸುವಡೆ ಲ**
**ಕ್ಷ್ಮೀಪತಿಗೆ ಸಮರಾದ ದಿವಿಜರ**
**ನೀಪಯೋಜಭವಾಂಡದೊಳಗಾವಲ್ಲಿ ನಾಕಾಣೆ ||**
**ಗೋಪಗುರುವಿನ ಮಡದಿ ಭೃಗುನಗ**
**ಚಾಪ ಮೊದಲಾದವರು ಮಾಡಿದಮ**
**ಹಾಪರಾಧಗಳೆಣಿಸಿದನೆ ಕರುಣಾಸಮುದ್ರ ಹರೀ ||೧೯||**

ಪದ್ಯಾರ್ಥ.—ಪಾಪಕರ್ಮವ=ಪಾಪಕರ್ಮವನ್ನು, ಸಹಿಸುವಡೆ=ಕ್ಷಮಿಸುವವರಲ್ಲಿ, ಲಕ್ಷ್ಮೀಪತಿಗೆ, ಸಮರಾದ, ದಿವಿಜರನ=ದೇವತೆಗಳನ್ನು, ಈ ಪಯೋಜಭವಾಂಡದೊಳಗೆ=ಈ ಬ್ರಹ್ಮಾಂಡದೊಳಗೆ, ಆವಲ್ಲಿ=ಎಲ್ಲೆಲ್ಲಿಯೂ, ನಾಕಾಣೆ, ಗೋಪ–ಸ್ವರ್ಗಪಾಲಕನಾದ ಇಂದ್ರನೇನು ಅಥವಾ ಚಂದ್ರನು, ಗುರುವಿನ ಮಡದಿ–ಭೃಹಸ್ಪತ್ಯಾಚಾರ್ಯರ ಹೆಂಡತಿಯಾದ ತಾರಾ, ಭೃಗುಋಷಿಗಳು, ನಗಚಾಪ–ಪರ್ವತವನ್ನೇ ಧನುಸ್ಸನ್ನಾಗಿ ಧರಿಸಿದ ಋದ್ರ

ದೇವರು ಮೊದಲಾದವರು ಮಾಡಿದ ಮಹಾಪರಾಧಗಳ=ಪ್ರಬಲವಾದ ಪಾಪಗಳನ್ನು ಎಣಿಸಿದನೆ? ಸ್ಮರಣೆಗೆತಂದನೆ? ಇಲ್ಲ! (ಆದುದರಿಂದಲೇ) ಹರೀ=ಶ್ರೀಹರಿಯು, ಕರುಣಾಸಮುದ್ರ-ಕರುಣಾಸಮುದ್ರ=ಕರುಣಾಸಮುದ್ರನು.

ತಾತ್ಪರ್ಯ.—ಭಕ್ತರು ಮಾಡುವ ಪಾಪಕರ್ಮಗಳನ್ನು ಕ್ಷಮಿಸುವುದರಲ್ಲಿ ಲಕ್ಷ್ಮೀಪತಿಯಾದ, ಕರುಣಾಸಮುದ್ರನಾದ, ಶ್ರೀಹರಿಯನ್ನು ಬಿಟ್ಟರೆ ಈ ಬ್ರಹ್ಮಾಂಡದೊಳಗೆ ಎಲ್ಲಿ ಹುಡುಕಿದರೂ, ಮತ್ತೊಬ್ಬ ದೇವತೆಯನ್ನು ನಾನು ಕಾಣೆನು. ದೇವೇಂದ್ರ, ಚಂದ್ರ, ಬೃಹಸ್ಪತ್ಯಾಚಾರ್ಯರ ಹೆಂಡತಿಯಾದ ತಾರಾ, ಭೃಗುಋಷಿ, ಋದ್ರದೇವರು ಮೊದಲಾದವರು ಮಾಡಿದ ಮಹದಪರಾಧಗಳನ್ನು ಗಣನೆಗೆ ತಂದನೆ? ಆದುದರಿಂದಲೇ ಕರುಣಾಸಮುದ್ರನು ಶ್ರೀಹರಿಯು ಎಂದು ಹೇಳಿರುವರು.

ವಿಶೇಷಾರ್ಥ.—ಗೋಪ ಎಂದರೆ ಇಂದ್ರನಿಗೂ, ಚಂದ್ರನಿಗೂ ಸಹ ಅರ್ಥವಾಗುವುದು. ಹೇಗೆಂದರೆ—"ಗೌರ್ನಾಕೇ ವೃಷಭೇಚಂದ್ರೇವಾಕ್ ಭೂದಿಗ್ಧೇನುಷುಸ್ತ್ರಿಯಾಮಿತ್ಯವಃ" ಗೋಶಬ್ದವು ಸ್ವರ್ಗಕ್ಕೂ ಎತ್ತುಗಳಿಗೂ, ಚಂದ್ರನಿಗೂ, ವಾಕ್ಯಕ್ಕೂ, ಭೂಮಿಗೂ, ದಿಕ್ಕುಗಳಿಗೂ, ಹಸುಗಳಿಗೂ ಸಹಾ ಆಗುವುದು ಎಂದು ಅಮರಕೋಶದಲ್ಲಿರುವುದು. "ದ್ವಯೋಸ್ತು ರಶ್ಮಿದೃಗ್ಬಾಣ ಸ್ವರ್ಗಜ್ರಾಂಬುಲೋಮಸು" ಎಂಬ ವಾಕ್ಯದಿಂದ ಗೋಶಬ್ದವು ರಶ್ಮಿ ಅಂದರೆ ಕಿರಣಗಳಿಗೂ ಆಗುವುದು. "ಗಾಂಪಾತೀತಿಗೋಪಃ ಸ್ವರ್ಗವನ್ನು ಪಾಲಿಸುವವನಾದುದರಿಂದ ಗೋಪನೆಂದು ದೇವೇಂದ್ರನಿಗೆ ಹೆಸರು. ಕಿರಣಗಳಿಂದ ಪ್ರಾಣಿಗಳನ್ನು ಪಾಲಿಸುವವನಾದುದರಿಂದ ಚಂದ್ರನಿಗೂ ಗೋಪನೆಂದು ಹೆಸರು. ಇಂದ್ರನು ಅಹಲ್ಯೆಯನ್ನು ಪರಿಗ್ರಹಿಸಿ ಮಹಾಪಾಪವನ್ನು ಸಂಪಾದಿಸಿದನು. ಪಾರಿಜಾತಾಪಹರಣಕಾಲದಲ್ಲಿ ಕೃಷ್ಣನ ಸಂಗಡ ಯುದ್ಧವನ್ನು ಮಾಡಿದನು. ಗೋಪಾಲಕರು ಮಾಡಬೇಕೆಂದಿದ್ದ ಇಂದ್ರಯಾಗವನ್ನು ಕೃಷ್ಣನು ತಡೆದನೆಂಬ ಕೋಪದಿಂದ ಗೋಕುಲವನ್ನು ಮುಳುಗಿಸಲೆತ್ನಿಸಿದನು. ಖಾಂಡವದಹನ ಕಾಲದಲ್ಲಿ ಕೃಷ್ಣಾರ್ಜುನರಿಗೆ ವಿರೋಧವನ್ನು ಮಾಡಿದನು. ಇತ್ಯಾದಿ ಅನೇಕ ಅಪರಾಧಗಳಿಂದ ಪ್ರಾಪ್ತವಾದ ಪಾಪಗಳನ್ನೂ ಮತ್ತು ವೃತ್ರಾಸುಹನನಾದಿಪಾಪಗಳನ್ನೆಲ್ಲಾ ಪರಿಹರಿಸಿ ಅವನನ್ನು ಉದ್ಧರಿಸಿದನು. ಚಂದ್ರನು ಗುರುಪತ್ನಿಯಾದ ತಾರೆಯನ್ನು ಪರಿಗ್ರಹಿಸಿದರೂ, ಆ ಗುರು ಸ್ತ್ರೀಗಮನಕ್ಕೆ ತಕ್ಕ ನರಕ ದಂಡನೆಯನ್ನು ಚಂದ್ರ

ನಿಗೆ ಸ್ವಾಮಿಯು ವಿಧಿಸಿದನೆ ಇಲ್ಲ. "ಗುರುವಿನಮಡದಿ" ಬೃಹಸ್ಪತಿಯು ಹೆಂಡತಿಯಾದ ತಾರೆಯು ಚಂದ್ರನನ್ನು ಪರಿಗ್ರಹಿಸಿ ಮಹಾ ಪಾತಕವನ್ನು ಸಂಪಾದಿಸಿದ್ದರೂ ಅದನ್ನು ಗಣನೆಗೆ ತಾರದೆ ಪಂಚಕನ್ಯೆಯರಪೈಕಿ ಒಬ್ಬಳ ನ್ನಾಗಿಮಾಡಿ ಆಕೆಯ ಸ್ಮರಣೆಯಿಂದ ಮಹಾಪಾತಕನಾಶನನೆಂದು ಬಿರುದು ಕೊಟ್ಟನು.

ಭೃಗುಋಷಿಯು ಪರಿಕ್ಷಾರ್ಥವಾಗಿ ಪರಮಾತ್ಮನನ್ನು ಒದ್ದು ಮಹಾ ಪಾತಕವನ್ನು ಸಂಪಾದಿಸಿದನು. ವ್ಯಾಧನಾಗಿ ಹುಟ್ಟಿ ಅಂಬಿನಿಂದ ಪರಮಾ ತ್ಮನನ್ನು ಹೊಡೆದನು. ಇವುಗಳಿಗೆ ತಕ್ಕ ಶಿಕ್ಷೆಯನ್ನು ಪರಮಾತ್ಮನು ಕೊ ಟ್ಟನೇ ? ಇಲ್ಲ. "ನಗಚಾಪ" ನಗ ಅಂದರೆ ಅಚಲ=ಪರ್ವತಗಳಿಗೆ ಹೆಸರು ಅಂತಹ ಪರ್ವತಗಳೇ ಧನುಸ್ಸಾಗಿ ಉಳ್ಳವನು ಎಂದರ್ಥ. ಇದೇ ಜಗನ್ನಾಥ ದಾಸರಾಯರು ಮಾಡಿದ ಋದ್ರದೇವರ ಸ್ತೋತ್ರರೂಪವಾದ ಮತ್ತೊಂದು ಪದದಲ್ಲಿ" ಧೃತಡಮರುಗ ಸಾರಂಗ ನಿನ್ನಯಪಾದ ಶತಪತ್ರಾರ್ಜಿಪರಸಂಗ ಸತತಪಾಲಿಸೋ ಜಗನ್ನಾಥವಿಠ್ಠಲರ ಸಂಸ್ತುತಿಸುವೆ ನೀಕ್ಷಿಶಿರಥಭೂಧರಧನ್ವಿ ಎಂದು ಹೇಳಿರುವರು. ಭೂಧರಧನ್ವಿ ಎಂಬ ಪದವು ನಗಚಾಪ ಎಂಬುದರ ಅರ್ಥವನ್ನೇ ಹೇಳುವದು. ತ್ರಿಪುರಾಸುರರ ಸಂಹಾರಕಾಲದಲ್ಲಿ ಋದ್ರದೇ ವರಿಗೆ ಭೂಮಿಯೇ ರಥವಾಯಿತೆಂತಲೂ, ನಾಲ್ಕು ವೇದಗಳೇ ಕುದುರೆಗಳಾ ದವೆಂತಲೂ, ಬ್ರಹ್ಮದೇವರು ಸಾರಥಿಯಾದರೆಂತಲೂ, ಮೇರುಪರ್ವತವೇ ಧನುಸ್ಸೆಂತಲೂ, ಶ್ರೀಹರಿಯು ಬಾಣರೂಪಿಯಾದನೆಂತಲೂ, ಭಾರತದಲ್ಲಿ ಯೂ, ಹರಿವಂಶ ಭವಿಷ್ಯತ್ಪರ್ವದಲ್ಲಿಯೂ ಕಥೆ ಇರುವುದು. ಆದುದರಿಂ ದಲೇ ನಗಚಾಪ ಎಂದು ಹೇಳಿರುವರು. ಇಂತಹ ಋದ್ರದೇವರು ಬಾಣಾ ಸುರನಿಗೂ, ಶ್ರೀಕೃಷ್ಣಪರಮಾತ್ಮನಿಗೂ ಉಷಾನಿಮಿತ್ತ ಯುದ್ಧವಾದಾಗ ಬಾಣಾಸುರನಿಗಾಗಿ ಶ್ರೀಕೃಷ್ಣನಕೂಡ ಬಲವತ್ತರವಾದ ಯುದ್ಧವನ್ನುಮಾಡಿ ದರು. ಇದಲ್ಲದೆ ರಾಮಾವತಾರದಲ್ಲಿ ರಾವಣನ ಸಂಹಾರವಾದಕೂಡಲೇ ಬ್ರಹ್ಮದೇವರು ದೇವತೆಗಳಿಂದೊಡಗೂಡಿ ರಾಮದೇವರನ್ನು ಸ್ತೋತ್ರಮಾಡು ತ್ತಿರಲು, ಋದ್ರದೇವರು ಶ್ರೀರಾಮನನ್ನು ಕುರಿತು "ಅವಧ್ಯನಾಗೆಂದು ನನ್ನಿಂದ ವರವನ್ನು ಪಡೆದಿದ್ದ ರಾಕ್ಷಸನನ್ನು, ನನ್ನ ವರವನ್ನು ಅಲಕ್ಷ್ಯಮಾಡಿ ಸಂಹರಿಸಿರುವೆ. ಆದುದರಿಂದ ನನ್ನ ಸಂಗಡ ಯುದ್ಧಕ್ಕೆ ಬಾ" ಎಂದು ಕರೆದರು. ಈ ವಿಷಯದಲ್ಲಿ ನಿರ್ಣಯವಾಕ್ಯ. "ಇತೀರಿತೇತ್ವಬ್ಜ

ಭವೇನಶೂಲೀಸಮಾಹ್ವಯದ್ರ್ಯಾಘುವಮಾಹವಾಯ। ವರೇಮದೀಯತ್ವಗಣ
ಯ್ಯ ರಘೋಃಹತಂ ತ್ವಯಾ ತೇನರಣಾಯ ಏಮ್ಯೈಹಿ" ಅ. ಲ. ೨ಗಲ ಎಂ
ದಿರುವುದು. ಇದರಿಂದ ಮೇಲಿನ ಅರ್ಥವು ಸಿದ್ಧವಾಗುವುದು. ಪಾರಿಜಾ
ತಾಪಹರಣಕಾಲದಲ್ಲಿ ಇಂದ್ರನಿಗಾಗಿ ಋದ್ರದೇವರು ಕೃಷ್ಣನ ಸಂಗಡ
ಯುದ್ಧವನ್ನು ಮಾಡಿರುವರು. ಹೀಗೆ ಅನೇಕಾವರ್ತಿ ಶ್ರೀಪರಮಾತ್ಮನಿಗೆ
ವಿರೋಧಗಳನ್ನಾಚರಿಸಿ ಇರುವರು. ನಗಚಾಪ ಮೊದಲಾದವರು ಎಂಬುದ
ರಲ್ಲಿ ಮೊದಲಾದವರೆಂಬ ಪದದಿಂದ ಬಲರಾಮ, ಅರ್ಜುನ, ಧೃತರಾಷ್ಟ್ರ
ಭೀಷ್ಮ ದ್ರೋಣಾದಿಗಳನ್ನು ಗ್ರಹಣಮಾಡಬೇಕು.

ಇವರಲ್ಲೊಬ್ಬೊಬ್ಬರೂ ಮಾಡಿರುವ ಅಪರಾಧಗಳು ಮಹತ್ತಾದರೂ
ಅವುಗಳಲ್ಲಾವುದನ್ನೂ ಗಣನೆಗೆತಾರದೆ ಅವರೆಲ್ಲರಿಗೂ ಶ್ರೀಪರಮಾತ್ಮನು ಇಹ
ಪರಗಳಲ್ಲಿ ಸುಖವನ್ನು ಕೊಟ್ಟಿರುವನು. ಆದುದರಿಂದ ಶ್ರೀಹರಿಯು ಕರು
ಣಾಸಮುದ್ರನೆಂದು ಹೇಳಿರುವರು.

ಇವರುಗಳ ಅಪರಾಧಗಳನ್ನು ಕ್ಷಮಿಸಿದಂತೆ ನಮ್ಮಗಳ ಅಪರಾಧಗಳ
ನ್ನೂ (ಪಾಪಗಳನ್ನೂ) ಶ್ರೀಪರಮಾತ್ಮನು ಕ್ಷಮಿಸದಿದ್ದರೆ ಆತನನ್ನು ಪಕ್ಷ
ಪಾತಿ ಎಂದು ಹೇಳಬೇಕಾಗುವುದಿಲ್ಲವೆ ಅಂದರೆ ಸಮಾಧಾನ.—ಪಾಪ
ಮಾಡಿದವರ (ಜೀವನ) ಯೋಗ್ಯತೆ, ದೇವತಾಕಾರ್ಯಸಾಧನೆ, ಪಾಪಮಾ
ಡಿವರ ಆಂತರೀಯಕ ಪಶ್ಚಾತ್ತಾಪ ಇವೇ ಮೊದಲಾದವು ಕ್ಷಮಿಸುವುದಕ್ಕೂ
ಶಿಕ್ಷಿಸುವುದಕ್ಕೂ ಕಾರಣವೇ ಹೊರತು ಶ್ರೀಪರಮಾತ್ಮನಿಗೆ ಪಕ್ಷಪಾತವಿಲ್ಲ.

ಮೇಲಿನ ಪದ್ಯದಲ್ಲಿ ಹೇಳಿದ, ಭಕ್ತರ ಪಾಪಗಳನ್ನು ಕಳೆಯುವ ವಿಷ
ಯದಲ್ಲಿ ಶ್ರೀಪರಮಾತ್ಮನನ್ನು ಬಿಟ್ಟರೆ ಮೂರು ಲೋಕದಲ್ಲಿಯೂ ಮತ್ತಾರ
ನ್ನೂ ನಾನು ಕಾಣೆನು ಎಂದು ಹೇಳಿರುವ ವಾಕ್ಯವನ್ನೇ ಈ ಪದ್ಯದಲ್ಲಿ ವಿಶದ
ಪಡಿಸುತ್ತಾರೆ.

ಅಂಗುಟಾಗ್ರದಿ ಜನಿಸಿದಮರತ
ರಂಗಿಣಿಯೆ ಲೋಕತ್ರಯಗಳ ಘ
ಹಿಂಗಿಸುವಳ ವ್ಯಾಕೃತಾಕಾಶಾಂತ ವ್ಯಾಪಿಸಿದ ॥
ಇಂಗಡಲ ಮಗಳೊಡೆಯನಂಗೋ
ಪಾಂಗಗಳಳಿಪ್ಪಮಲನಂತ ಸು
ಮಂಗಳಪ್ರದನಾಮಪಾವನಮಾಳ್ಪದೇನರಿದು ॥೨೦॥

ಪದ್ಯಾರ್ಥ.—ಅಂಗುಟಾಗ್ರದಿ=ಶ್ರೀಪರಮಾತ್ಮನ ಎಡಗಾಲಿನ ಅಂಗುಷ್ಠದ ಕೊನೆಯಿಂದ, ಜನಿಸಿದ-ಉತ್ಪನ್ನವಾದ, ಅಮರತರಂಗಿಣಿಯೇ=ದೇವನದಿಯಾದ ಗಂಗೆಯೇ, ಲೋಕತ್ರಯಗಳ=ಮೂರು ಲೋಕದ ಜನರ, ಅಘ=ಪಾಪಗಳನ್ನು, ಹಿಂಗಿಸುವಳು=ಪರಿಹರಿಸುವಳು, ಹೀಗಿರಲು ಅವ್ಯಾಕೃತಾಕಾಶಾಂತ=ಬ್ರಹ್ಮಾಂಡದ ಹೊರಭಾಗದಲ್ಲಿರುವ ಲಕ್ಷ್ಮೀಸ್ವರೂಪವಾದ ಸರ್ವತ್ರ ವ್ಯಾಪ್ತವಾದ, ಇಂಗಡಲಮಗಳ=ಕ್ಷೀರಸಾಗರನ ಪುತ್ರಿಯಾದ ರಮಾದೇವಿಯ, ಒಡೆಯನ=ಅರಸನಾದ ಶ್ರೀಪರಮಾತ್ಮನ, ಅಂಗೋಪಾಂಗಗಳಲಿ-ಅಂಗ=ಕರಚರಣಾದಿಗಳು, ಉಪಾಂಗ=ನಖರೋಮಾದಿಗಳು, ಇವುಗಳಲ್ಲಿ, ಇಪ್ಪ-ವ್ಯಾಪಿಸಿಕೊಂಡಿರುವ, ಅಮಲ=ನಿರ್ದುಷ್ಟವಾದ, ಅನಂತ=ಅಪರಿಮಿತವಾದ, ಸುಮಂಗಳಪ್ರದ-ಉತ್ತಮವಾದ ಮಂಗಳವನ್ನು ಕೊಡುವ, ನಾಮ=ಭಗವನ್ನಾಮವು, ಪಾವನಮಾಳ್ಪುದು=ಪವಿತ್ರವನ್ನಾಗಿ ಮಾಡುವುದು, ಯೇನರಿದು=ಏನಾಶ್ಚರ್ಯ?

ತಾತ್ಪರ್ಯ.—ಶ್ರೀಪರಮಾತ್ಮನ ಎಡಗಾಲಿನ ಅಂಗುಷ್ಠಾಗ್ರದಿಂದ ಹುಟ್ಟಿದ ಗಂಗೆಯೇ ಭೂಲೋಕ ಭುವರ್ಲೋಕ ಸ್ವರ್ಗಲೋಕವಾಸಿಗಳಾದ ಎಲ್ಲರ ಪಾಪಗಳನ್ನು ನಾಶಮಾಡುವಳೆಂದು ಪ್ರಸಿದ್ಧಿಯಾಗಿರುವುದು. ಹೀಗಿರಲು ಕ್ಷೀರಸಾಗರನ ಮಗಳಾದ ಲಕ್ಷ್ಮಿಗೆಪತಿಯಾದ ಲಕ್ಷ್ಮೀಸ್ವರೂಪವಾದ ಅವ್ಯಾಕೃತಾಕಾಶದ ಕೊನೆಯವರೆಗೂ ಒಳಗೂ ಹೊರಗೂ ಸಹ ವ್ಯಾಪಿಸಿಕೊಂಡಿರುವ ಶ್ರೀಪರಮಾತ್ಮನಪರಿಮಿತವಾದ ನಾಮವು ಅಂದರೆ ಪರಮಾತ್ಮನ ದೇಹದಲ್ಲಿ ಕರಚರಣಾದ್ಯವಯವಗಳು, ನಖರೋಮಾದಿಗಳು, ಇವುಗಳೊಂದೊಂದು ಭಾಗದಲ್ಲಿಯೂ ಅಪರಿಮಿತವಾದ ಗುಣನಾಮಗಳು ವ್ಯಾಪಿಸಿಕೊಂಡಿರುವುವು. ಈ ವಿಷಯವು ೧ನೆಯ ಸಂಧಿಯ ಎರಡನೆಯ ಪದ್ಯದಲ್ಲಿ, "ಕ್ರಿಯಾ ವಿಶೇಷಗಳ । ಬಗೆಬಗೆಯನೂತನವ ಕಾಣುತ ॥" ಎಂಬ ಪದದ ವ್ಯಾಖ್ಯಾನದಲ್ಲಿ ವಿಸ್ತಾರಮಾಡಲ್ಪಟ್ಟಿರುವುದು. ಪುನಃ ಇಲ್ಲಿ ಬರೆಯುವ ಅವಶ್ಯಕವಿಲ್ಲ. ಇಂತಹ ನಿರ್ದುಷ್ಟವಾದ, ನಿರ್ಮಲವಾದ ಭಗವನ್ನಾಮವು ಮೂರು ಲೋಕವನ್ನೂ ಪವಿತ್ರವನ್ನಾಗಿ ಮಾಡುವುದೆಂದರೆ ಆಶ್ಚರ್ಯವೇನು?

ವಿಶೇಷಾರ್ಥ.—"ಅಂಗುಟಾಗ್ರದಿ ಜನಿಸಿದಮರ ತರಂಗಿಣಿಯು" ಈ ವಿಷಯದಲಿ ಭಾಗವತ ಪಂಚಮಸ್ಕಂಧದಲ್ಲಿ "ತತ್ರ ಭಗವತಃ ಸಾಕ್ಷಾದ್ಯಜ್ಞ ಲಿಂಗಸ್ಯ ವಿಷ್ಣೋರ್ವಿಕ್ರಮತೋ ವಾಮಪಾದಾಂಗುಷ್ಠ ನಖ ನಿರ್ಭಿ

ಸ್ನೋರ್ಧ್ವಾಣ್ಡ ಕಟಾಹ ವಿವರೇಣಾಂತಃ ಪ್ರವಿಷ್ಟಾಯಾಃ" ಎಂದು ಹೇಳಿರುವರು. ಈ ವಾಕ್ಯದಿಂದ, ವಾಮ (ಎಡದ) ಪಾದಾಂಗುಷ್ಟವು ಮೇಲಿನ ಬ್ರಹ್ಮಾಂಡಕ್ಕೆ ತಗಲಿ ಅದು ಒಡೆಯಲು ಬಾಹ್ಯೋದಕವು ಒಳಗೆ ಬಂತು. ಅದಕ್ಕೇನೇ ದೇವನದಿ ಎಂತಲೂ ಗಂಗೆಯೆಂತಲೂ ಹೆಸರಾಯಿತು. "ಗಂಗಾ ಗಂಗೇತಿ ಯೋಬ್ರೂಯಾದ್ಯೋಜನಾನಾಂ ಶತೈರಪಿ || ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸಗಚ್ಛತಿ ||" ಎಂಬೀ ವೇದ ಪ್ರಮಾಣ ಬಲದಿಂದ ಗಂಗೆಯು ಸರ್ವಪಾಪಹರಳೆಂದು ಸ್ಪಷ್ಟವಾಗುವುದು. ಅವ್ಯಾಕೃತಾಕಾಶವೆಂದರ ಈ ನಮ್ಮ ಕಣ್ಣಿಗೆಕಾಣುವ ಪ್ರಾಕೃತಾಕಾಶವಲ್ಲದ, ಬ್ರಹ್ಮಾಂಡದ ಹೊರಭಾಗದಲ್ಲಿ ಪ್ರಳಯಕಾಲದಲ್ಲಿಯೂ ಸಹ ಇರುವ ಆಕಾಶವು. ಆದರೆ ಪ್ರಳಯದಲ್ಲಿ "ನಾಸದಾಸೀನ್ನೋ ಸದಾಸೀತ್ತದಾನೀ" ಎಂಬ ಶ್ರುತಿಯಲ್ಲಿ ಸದಸತ್ತಾದ ಯಾವ ವಸ್ತುವೂ ಇರುವುದಿಲ್ಲವೆಂದು ಹೇಳಲ್ಪಟ್ಟಿರುವುದು. ಹೀಗಿರಲು ಈ ಆಕಾಶವು ಇರುವುದೆಂಬುವುದು ಆ ಶೃತಿಗೆ ವಿರೋಧವಾಯಿತಲ್ಲ ಅಂದರೆ ಪ್ರಳಯಕಾಲದಲ್ಲಿ ಪ್ರಾಕೃತವಾದ ಆಕಾಶವೂ ಉದಕವಾಯಿತಲ್ಲ ಅಂದರೆ ಪ್ರಳಯಕಾಲದಲ್ಲಿ ಪ್ರಾಕೃತವಾದ ಆಕಾಶವೂ ಉದಕಮೊದಲಾದವೂ ಇರುವುದಿಲ್ಲವೆಂದು ಅರ್ಥವೇ ಹೊರತು ಅವ್ಯಾಕೃತಾಕಾಶವೂ ಇರುವುದಿಲ್ಲವೆಂದು ಅರ್ಥವಲ್ಲ- ಅದೇಕೆಂದರೆ ಶ್ರೀಲಕ್ಷ್ಮೀದೇವಿಯು ಪ್ರಳಯಕಾಲದಲ್ಲಿ ಇದ್ದೇ ಇರುವಳು ಎಂಬ ವಿಷಯವನ್ನು "ಜಗದುದರನ" ಎಂಬ ಪದ್ಯದ ವ್ಯಾಖ್ಯಾನದಲ್ಲಿ ವಿಸ್ತಾರಮಾಡಿಯೇ ಇದೆ. ಆ ಲಕ್ಷ್ಮೀದೇವಿಯೇ ಅವ್ಯಾಕೃತಾಕಾಶರೂಪಳಾಗಿಯೂ, ತಮೋರೂಪಳಾಗಿಯೂ, ಜಲರೂಪಳಾಗಿಯೂ ಇರುತ್ತಿರುವಳು. ಆದುದರಿಂದ ಮೇಲಿನ ಶೃತಿಗೆ ವಿರೋಧವಾಗಲಿಲ್ಲವೆಂದು ತಿಳಿಯಬೇಕು. ಹೀಗೆ ಅವ್ಯಾಕೃತಾಕಾಶವು ಬ್ರಹ್ಮಾಂಡದ ಹೊರಗೆ ಎಲ್ಲಾ ಕಡೆಗಳಲ್ಲಿಯೂ ವ್ಯಾಪ್ತವಾಗಿರುವುದು.

ಅದರ ಅಂತವೆಂದರೆ ಅದು ಎಲ್ಲೆಲ್ಲಿ ವ್ಯಾಪ್ತವಾಗಿರುವುದೋ ಅದರ ಕಡೆಯ ಭಾಗದವರೆವಿಗೂ ಪರಮಾತ್ಮನು ವ್ಯಾಪಿಸಿಕೊಂಡಿರುವನು. ಇಂತಹ ಪರಮಾತ್ಮನ ಕರಚರಣಾದ್ಯಂಗಗಳಲ್ಲಿಯೂ ರೋಮನಖಾದಿಗಳಲ್ಲಿಯೂಕೂಡ ಅನಂತಾನಂತವಾಗಿ ಗುಣನಾಮಾದಿಗಳು ತುಂಬಿರುವುವು. ಇಂತಹ ನಾಮಾದಿಗಳಲ್ಲಿ ಒಂದು ರೋಮದ ಅನೇಕ ಭಾಗದೊಳಗಿನ ಒಂದು ಭಾಗದಲ್ಲಿ ತೋರುವ ಗುಣನಾಮಾದಿಗಳನ್ನು ರಮಾದೇವಿಯು ಹುಡುಕುತ್ತಾ ನೂತನವಾದಗುಣಗಳನ್ನು ಕಾಣುತ್ತಲೇ ಇದ್ದರೂ ಪಾರಗಾಣಲು ಆಶೆಯಿಂದ

ಆಗಲಿಲ್ಲವೆಂದಮೇಲೆ ಈ ಪರಮಾತ್ಮನ ನಾಮದ ಮಹಿಮೆಯನ್ನು ಎಷ್ಟೆಂದು ಹೇಳಬಹುದು. ಇಂತಹ ನಾಮವು ಜಗತ್ತನ್ನು ಪವಿತ್ರವನ್ನಾಗಿ ಮಾಡು ವುದು ಏನಾಶ್ಚರ್ಯ ? ಇದನ್ನೇ ದಾಸರಾಯರು ಈ ಪದ್ಯದಲ್ಲಿ ಹೇಳಿರುವರು.

ಪಾಪಪರಿಹಾರಮಾಡುವ ವಿಷಯದಲ್ಲಿ ಪರಮಾತ್ಮನ ನಾಮಕ್ಕೆ ಸರಿ ಯಾದುದು ಇಲ್ಲವೆಂಬ ವಿಷಯವನ್ನೇ ಈ ಪದ್ಯದಿಂದ ವಿಸ್ತಾರಮಾಡುತ್ತಾರೆ

**ಕಾಮಧೇನು ಸುಕಲ್ಪತರು ಚಿಂ**
**ತಾಮಣಿಗಳಮರೇಂದ್ರ ಲೋಕದಿ**
**ಕಾಮಿತಾರ್ಥಗಳೀವವಲ್ಲದೆ ಸೇವೆಮಾಳ್ಪರಿಗೆ ||**
**ಶ್ರೀಮುಕುಂದನ ಪರಮಮಂಗಳ**
**ನಾಮ ನರಕಸ್ಥರನ ಸಲಹಿತು**
**ಪಾಮರರ ಪಂಡಿತರೆಸಿ ಪುರುಷಾರ್ಥಕೊಡುತಿಹುದು ||೨೧||**

ಪದ್ಯಾರ್ಥ.—ಕಾಮಧೇನು=ಕಾಮಿತಾರ್ಥವನ್ನು ಕೊಡುವ ಕ್ಷೀರ ಸಮುದ್ರಲ್ಲಿ ಉತ್ಪನ್ನವಾದ ಗೋವು, ಸುಕಲ್ಪತರು=ಅದೇ ಕ್ಷೀರಸಮುದ್ರ ದಲ್ಲಿಯೇ ಹುಟ್ಟಿದ ಕಾಮಿತಾರ್ಥವನ್ನು ಕೊಡುವ ದೇವಲೋಕದ ಪಾರಿ ಜಾತವೃಕ್ಷವು, ಚಿಂತಾಮಣಿ=ಇದೂ ಕಾಮಿತಾರ್ಥವನ್ನು ಕೊಡುವ ಒಂದು ಮಾಣಿಕ್ಯವು, ಇವುಗಳೆಲ್ಲವು, ಅಮರೇಂದ್ರಲೋಕದಿ=ದೇವೇಂದ್ರನ ಲೋಕ ದಲ್ಲಿ (ಸ್ವರ್ಗದಲ್ಲಿ) ಸೇವೆಮಾಳ್ಪರಿಗೆ=ಸೇವಾದಿಗಳನ್ನು ಮಾಡುವವರಿಗೆ, ಕಾಮಿತಾರ್ಥಗಳ=ಇಷ್ಟಾರ್ಥಗಳಾದ ಅರ್ಥಕಾಮಗಳನ್ನು, ಕೊಡುವವಲ್ಲದೆ –ಕೊಡುವುವೇ ಹೊರತು, ( ಮತ್ತೇನು ಕೊಡುವುವು) ಶ್ರೀಮುಕುಂದನ= ಮೋಕ್ಷಪ್ರದನಾದ ಶ್ರೀಪರಮಾತ್ಮನ, ಪರಮಮಂಗಳ–ಪರಮ ಮಂಗಳಕರ ವಾದ, ನಾಮ=ನಾಮವು, ನರಕಸ್ಥರನ=ನರಕವಾಸಿಗಳನ್ನು, ಸಲಹಿತು= ಉದ್ಧರಿಸಿತು. ಪಾಮರರ=ಅಜ್ಞಾನಿಗಳನ್ನು, ಪಂಡಿತರೆನಿಸಿ–ಪಂಡಿತರೆಂದು ಪ್ರಖ್ಯಾತಿಗೊಳಿಸಿ, ಪುರುಷಾರ್ಥ=ಚತುರ್ವಿಧ ಪುರುಷಾರ್ಥಗಳನ್ನು, ಕೊಡು ತಿಹುದು–ಕೊಡುವುದು.

ತಾತ್ಪರ್ಯ.—ಲೋಕದಲ್ಲಿ ಇಷ್ಟಾರ್ಥವನ್ನು ಪೂರ್ಣಮಾಡುವವೆಂ ದು ಪ್ರಸಿದ್ಧಿ ಪಡೆದಿರುವುವು ಮೂರು ವಸ್ತುಗಳು–ಕಾಮಧೇನು ಎಂಬ ಹಸು ವು ಒಂದು. ಕಲ್ಪವೃಕ್ಷವೊಂದು, ಚಿಂತಾಮಣಿಯೆಂಬ ಮಾಣಿಕ್ಯ ಒಂದು. ಇವು ಮೂರು ಸ್ವರ್ಗದಲ್ಲಿರುವುವು. ಸೇವೆಮಾಡುವ ಸ್ವರ್ಗವಾಸಿಗಳಿಗೆ

ಮಾತ್ರವೇ ಕಾಮಿತಾರ್ಥಗಳನ್ನು ಕೊಡುವುವು. ಆ ಕಾಮಿತಾರ್ಥವು ಸ್ವರ್ಗ ದಲ್ಲಿರುವವರಿವಿಗೂ ಅನುಭವಿಸಲು ಯೋಗ್ಯವಾದ ನಶ್ವರ ಸುಖವನ್ನೇ ಅಂದ ರೆ ಅನಿತ್ಯವಾದ ಐಶ್ವರ್ಯವನ್ನು, ಸ್ತ್ರೀಯಾದಿ ಭೋಗಗಳನ್ನು ಮಾತ್ರಕೊ ಡುವುವು- ಪರಮಾತ್ಮನ ಮಂಗಳಕರವಾದ ನಾಮವು ೧೪ ಲೋಕದಲ್ಲಿ ವಾಸಮಾಡುತ್ತಿರುವ ಎಲ್ಲರಿಗೂ ಕಾಮಿತಾರ್ಥವೆಂದರೆ ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನೂ ಕೊಡುವುದು. ಒಂದಾ ನೊಂದು ಕಾಲದಲ್ಲಿ ನಾರದರು ಯಮಲೋಕಕ್ಕೆ ಹೋಗಿ, ಅಲ್ಲಿ ನರಕಯಾ ತನೆಯನ್ನು ಅನುಭವಿಸುತ್ತಿರುವ ಪಾಪಿಗಳನ್ನು ನೋಡಿ ಬಹಳ ಕನಿಕರದಿಂದ " ನಾರಾಯಣಾನಂತಹರೇ ಮುರಾರೇ ಗೋವಿಂದ ದಾಮೋದರ ಮಾಧವೇತಿ ಎಂದು ಉಚ್ಚಧ್ವನಿಯಿಂದ ಎತ್ತರವಾದ ಒಂದು ಶಿಲೆಯಮೇಲೆ ನಿಂತು ಎಲ್ಲ ರಿಗೂ ಕೇಳಿಬರುವಂತೆ ಗಾನಮಾಡಿದರು. ಈ ಶಬ್ದವು ಕಿವಿಯಲ್ಲಿ ಬಿದ್ದ ಕೂಡಲೆ ಆ ಪಾಪಿಗಳೆಲ್ಲರೂ ಪಾಪದಿಂದ ಮುಕ್ತರಾಗಿ ವಿಮಾನರೂಢರಾಗಿ ಸ್ವರ್ಗಕ್ಕೆ ತೆರಳಿದರು. ನರಕಲೋಕವೇ ಶೂನ್ಯವಾಯಿತು. ಕಾಮಧೇನು ಮೊದಲಾದವುಗಳಿಂದ ಸ್ವರ್ಗಲೋಕದಲ್ಲಿರುವವರಿಗಲ್ಲದೆ ಮತ್ತಾವ ಲೋಕ ದವರಿಗಾದರೂ ಪ್ರಯೋಜನವುಂಟೆ ? ಇಲ್ಲ. ಪರಮಾತ್ಮನ ನಾಮಕ್ಕೆ ಯಾವ ಲೋಕವಾದರೇನು ? ಎಲ್ಲಿದ್ದರೂ ಭಕ್ತಿಯಿಂದ ಉಚ್ಚಾರಣೆಮಾಡಲು ಇಹಪರಂಗಳಲ್ಲಿ ಸುಖವನ್ನು ಕೊಡುವುದು. ಅಜ್ಞಾನಿಗಳನ್ನು ಮಹಾ ಜ್ಞಾ ನಿಗಳನ್ನಾಗಿಯೂ, ಪಂಡಿತರನ್ನಾಗಿಯೂ ಮಾಡುವುದು. ಪ್ರಹ್ಲಾದನು ಯಾ ವ ಗುರುಗಳ ಸೇವೆಮಾಡಿ ಯಾವ ವಿದ್ಯೆಯನ್ನು ಕಲಿತಿದ್ದನು ? ಧ್ರುವನು ಯಾರಲ್ಲಿ ವಿದ್ಯೆಯನ್ನು ಅಭ್ಯಾಸಮಾಡಿದನು ? ಇವರೆಲ್ಲರೂ ಜ್ಞಾನಿಗಳಾಗಿ ಪಂಡಿತರಾದುದು ಯಾವುದರಿಂದ ? ಕೇವಲ ಭಗವದನುಗ್ರಹದಿಂದಲೇ ಅಲ್ಲ ವೇ ? ಆದುದರಿಂದ ಸರ್ವರಿಗೂ ಭಗವನ್ನಾಮವು ಚತುರ್ವಿಧ ಪುರುಷಾರ್ಥ ಗಳನ್ನು ಕೊಡುವುದು ಎಂಬ ವಿಷಯವು ನಿಸ್ಸಂಶಯವಾದುದು.

ಶ್ರೀಪರಮಾತ್ಮನನ್ನು ಪೂಜಿಸಲು ಪೂಜಾದ್ರವ್ಯ ಫಲ ಪುಷ್ಪ ಭಕ್ಷ್ಯ ಭೋಜ್ಯಗಳನ್ನು ಸಮರ್ಪಿಸಿದರೆ ಪೂಜೆಯಂತಲೂ ಇಲ್ಲವಾದರೆ ಪೂಜೆಯ ನ್ನು ಸ್ವೀಕರಿಸುವುದಿಲ್ಲವೆಂತಲೂ ಅಲ್ಲ. ಮನಸ್ಸಿನಲ್ಲಿಯೇ ದ್ರವ್ಯವನ್ನು ಕಲ್ಪಿಸಿ ಮಾನಸಿಕ ಪೂಜೆಮಾಡಿದರೂ ಮಹಾಫಲವನ್ನು ಕೊಡುವನೆಂದು ಈ ಪದ್ಯ ದಿಂದ ಹೇಳುತ್ತಾರೆ.—

**ಮನದೊಳಗೆ ಸುಂದರಪದಾರ್ಥವ**
**ನೆನೆದು ಕೊಡೆ ಕೈಗೊಂಡು ಬಲುನೂ-**
**ತನ ಸುಶೋಭಿತ ಗಂಧಸುರಸೋಪೇತ ಫಲರಾಶೀ ॥**
**ದ್ಯುನದಿ ನಿವಹಗಳಂತೆ ಕೊಟ್ಟವ-**
**ರನು ಸದಾ ಸಂತೈಸುವನು ಸ-**
**ದ್ಗುಣವ ಕದ್ದವರಘವ ಕದಿವನು ಅನಘನೆಂದೆನಿಸಿ ॥ ೨೨ ॥**

ಪದ್ಯಾರ್ಥ—ಮನದೊಳಗೆ= (ಭಕ್ತನು) ತನ್ನ ಮನಸ್ಸಿನಲ್ಲಿ, ಸುಂದರ ಪದಾರ್ಥವ=ಮನೋಹರವಾದ ಪೂಜಾಯೋಗ್ಯವಾದ ಪದಾರ್ಥಗಳನ್ನು, ನೆನೆದು=ಚಿಂತನೆಮಾಡಿ, ಕೊಡೆ=ಕೊಡಲು ಕೈಗೊಂಡು=ಅದನ್ನು ಸ್ವೀಕರಿಸಿ, ಬಲುನೂತನ=ಬಹಳ ಹೊಸದಾದ, ಸುಶೋಭಿತ=ಅತ್ಯಂತ ಶೋಭಾಯಮಾನವಾದ ಗಂಧ=ಸುವಾಸನೆಯಿಂದಲೂ, ಸುರಸ=ಉತ್ತಮ ರಸದಿಂದಲೂ, ಉಪೇತ=ಕೂಡಿದ,ಫಲರಾಶೀ=ಫಲದ ರಾಶಿಗಳನ್ನು, ದ್ಯುನದಿ=ಗಂಗೆಯು, ನಿವಹಗಳಂತೆ=ಉದಕ ಸಮೂಹಗಳಂತೆ, ಕೊಟ್ಟ ಅವರನು ಸದಾ=ಸದಾಕಾಲದಲ್ಲಿಯೂ, ಸಂತೈಸುವನು=ಸಮಾಧಾನಪಡಿಸುವನು (ಸಂತೋಷಪಡಿಸುವನು) ಸದ್ಗುಣವ=ಪರಮಾತ್ಮನ ಸಮಿಚೀನವಾದ ಆನಂದಾದಿಗಳನ್ನು, ಕದ್ದವರ=ಅಪಹರಿಸಿದವರ (ಚಿತ್ತದಲ್ಲಿ ಮುಚ್ಚಿಕೊಂಡು ಇರುವವರ, ಅಂದರೆ ಮನಸ್ಸಿನಲ್ಲಿ ಅವನ ಗುಣಗಳನ್ನು ಧ್ಯಾನಿಸುವವರ ಎಂದರ್ಥ) ಅಘವ=ಪಾಪವನ್ನು ಕದಿವನು=ಪರಿಹರಿಸುತ್ತಾನೆ, ಅನಘನೆಂದೆನಿಸಿ=ತಾನು ಪಾಪರಹಿತನೆಂದೆನಿಸಿಕೊಂಡು (ಕದಿವ=ಕದಿವನು ಪಾಪವನ್ನು ಪರಿಹರಿಸುವನು)

ತಾತ್ಪರ್ಯ—ಪರಮಾತ್ಮನನ್ನು ಪೂಜಿಸಬೇಕಾದರೆ ಭಾಗ್ಯವಂತರೇ ಆಗಬೇಕು. ಪೂಜಾಸಾಮಗ್ರಿಗಳು ಇದ್ದರೇನೇ ಪೂಜೆ ಮಾಡಬಹುದೆಂದು ಇಲ್ಲ. ಯಾರಾದರೂ ಭಕ್ತಿಯಿಂದ ತಮ್ಮ ಮನಸ್ಸಿನಲ್ಲಿ ಪರಮಾತ್ಮನನ್ನು ಚಿಂತಿಸಿ ಧ್ಯಾನ ಆವಾಹನಾದಿ ಷೋಡಶೋಪಚಾರ ಪೂಜೆಗಳನ್ನು ಹೊರಗೆ ಕಾಣುವ ಪ್ರತಿಮಾದಿಗಳನ್ನು ಪೂಜಿಸುವಂತೆಯೇ ತಮ್ಮ ಮನಸ್ಸಿನಲ್ಲಿಯೂ ಪೂಜಿಸುತ್ತಾ ಭಕ್ಷ್ಯಭೋಜ್ಯಾದಿ ಪದಾರ್ಥಗಳನ್ನೂ ಪೂಜಾದ್ರವ್ಯಗಳನ್ನೂ ಮನಸ್ಸಿನಲ್ಲಿಯೇ ಕಲ್ಪಿಸಿ ಸಮರ್ಪಿಸಿ ಮಾನಸ ಪೂಜೆಯನ್ನು ಮಾಡಿದರೆ ಪರಮಾತ್ಮನು ಅದನ್ನು ಸ್ವೀಕರಿಸಿ, ಇದುವರೆವಿಗೂ ನಾವು ಎಲ್ಲಿಯೂ ಕಾಣದ

ಬಲು ಹೊಸದಾದ ಅತ್ಯುತ್ಕೃಷ್ಟವಾದ ವಾಸನೆಯಿಂದಲೂ ಉತ್ಕೃಷ್ಟವಾದ ರುಚಿಯಿಂದಲೂ ಕೂಡಿದ ರಸವತ್ತಾದ ಫಲಗಳನ್ನು ಗಂಗೆಯಲ್ಲಿರುವ ಉದಕ ಬಿಂದುಗಳನ್ನು ಗಣನೆಮಾಡಿದರೆ ಅವು ಎಷ್ಟು ಆಗುವುವೋ ಅಷ್ಟು ಅಂದರೆ ಅಪರಿಮಿತವಾಗಿ ಕೊಟ್ಟು ನಮ್ಮನ್ನು ಸರ್ವಕಾಲದಲ್ಲಿಯೂ ಸಂತೋಷಪಡಿಸುವನು. ತನ್ನ ಆನಂದಾದಿ ಗುಣಗಳನ್ನು ಮನದಲ್ಲಿ ಅಡಗಿಸಿಕೊಂಡು ಧ್ಯಾನ ಮಾಡುವವರ ಪಾಪಗಳನ್ನು ಕಳೆಯುವನು. ಸ್ವಯಂ ತಾನು ಯಾವಾಗಲೂ ಪಾಪರಹಿತನೆಂದೂ ಕೀರ್ತಿಯನ್ನು ಪಡೆದಿರುವನು ಎಂದು ತಾತ್ಪರ್ಯ.

ವಿಶೇಷಾರ್ಥ—''ಮನದೊಳಗೆ ಸುಂದರ ಪದಾರ್ಥವ ನೆನೆದು ಕೊಡೆ'' 'ಸಂಚಿಂತಯೇದ್ಭಗವತಶ್ಚರಣಾರವಿಂದಂ ವಜ್ರಾಂಕುಶಧ್ವಜಸರೋರುಹಲಾಂಛನಾಢ್ಯಂ' 'ಧ್ಯಾಯೇದ್ಧರಿನ್ಮಣಿನಿಭಂ ಜಗದೇಕವಂದ್ಯಂ' 'ಧ್ಯೇಯಸ್ಸದಾ ಸವಿತೃಮಂಡಲಮಧ್ಯವರ್ತೀ' ಇತ್ಯಾದಿ ವಾಕ್ಯಗಳಿಂದ ಯಾವ ರೂಪಿಯಾದ ಶ್ರೀ ಪರಮಾತ್ಮನನ್ನು ತನಗೆ (ಭಕ್ತನಿಗೆ) ಆರಾಧಿಸಬೇಕೆಂದು ಇಚ್ಛೆ ಹುಟ್ಟುವುದೋ, ಆ ರೂಪವನ್ನು ಮನಸ್ಸಿನಲ್ಲಿ ಕಲ್ಪಿಸಿ ಧ್ಯಾನ, ಆವಾಹನಾದಿಗಳಿಂದ ಮಾನಸಿಕವಾದ ಪದಾರ್ಥಗಳಿಂದಲೇ ಪೂಜಿಸಬೇಕು. ಅಥವಾ ತನ್ನ ಉಪಾಸ್ಯ ಮೂರ್ತಿಯಾದ ರಾಮ ಕೃಷ್ಣಾದಿಗಳನ್ನು, ತನ್ನ ಬಿಂಬಮೂರ್ತಿಯಾದ ಶ್ರೀ ಪರಮಾತ್ಮನಲ್ಲಿ ಐಕ್ಯ ಚಿಂತನೆಮಾಡಿ ಆ ರೂಪವನ್ನು ಪಾದಮೊದಲು ಶಿರಃ ಪರ್ಯಂತ ಚಿಂತಿಸಿ, ಮನದಲ್ಲಿಯೇ ಮಂಟಪಾದಿಗಳನ್ನೂ, ಭಕ್ಷ್ಯಭೋಜ್ಯಾದಿ ಉಪಕರಣಗಳನ್ನೂ ಕಲ್ಪಿಸಿಕೊಂಡು ಯಥೇಷ್ಟವಾದ ವನತುಳಸೀ ಪುಷ್ಪಾದಿಗಳನ್ನು ಮನದಲ್ಲಿ ಕಲ್ಪಿಸಿ ಗಂಧ, ಪುಷ್ಪ, ನೈವೇದ್ಯಾದಿಗಳಿಂದ ಮನದಲ್ಲಿಯೇ ಪೂಜಿಸಬೇಕು. ಈ ವಿಷಯವು ತಂತ್ರಸಾರೋಕ್ತ ಪೂಜಾಪದ್ಧತಿಯಲ್ಲಿ 'ಸೌವರ್ಣೈಃ ಸ್ಥಾಲಿವರ್ಯೈರ್ಮಣಿಗಣರಚಿತೈರ್ಗೋಘೃತಾಕ್ತಾನ್ ಸುಪಕ್ವಾನ್ ಭಕ್ಷ್ಯಾನ್ಭೋಜ್ಯಾಂಶ್ಚ ಲೇಹ್ಯಾನಪಿ ಪರಮಹಾಚೋಷ್ಯಮನ್ನಂ ನಿಧಾಯ । ನಾನಾಶಾಖೈರುಪೇತಂ ದಧಿಮಧುಸುಘೃತಂ ಕ್ಷೀರಪಾನೀಯ-ಯುಕ್ತಂ ತಾಂಬೂಲಂ ಚಾಪಿ ವಿಷ್ಣೋಃ ಪ್ರತಿದಿವಸಮಹಂ ಮಾನಸಂ ಚಿಂತಯಾಮಿ' ಎಂದು ಹೇಳಲ್ಪಟ್ಟಿದೆ:

ಮನೆಯಲ್ಲಿ ದೇವರ ಪೂಜೆಯನ್ನು ಮಾಡುವಾಗ ಈ ಶ್ಲೋಕವನ್ನು ಎಲ್ಲರೂ ಹೇಳುತ್ತಿರುವರು. ಆದರೇನು? ನಾವು ಮನಸ್ಸನ್ನು ಬೇರೆ ಸ್ಥಳದಲ್ಲಿಟ್ಟು ಶ್ಲೋಕವನ್ನು ಮಾತ್ರ ಬಾಯಿಯಿಂದ ಅಂದುಬಿಟ್ಟರೆ ಅದು ಫಲಕಾ

ರಿಯಲ್ಲ! ಹಸಿವೆ ಬಹಳವಾಗಿದೆ. ಬೇಗನೆ ಊಟಮಾಡಬೇಕು ಎಂದು ನುಡಿದು ಬಿಟ್ಟರೆ ಹೊಟ್ಟೆ ತುಂಬುವುದೆ? ಭೋಜನವನ್ನು ಮಾಡಿಯೇ ಆಗಬೇಕು. ಭೋಜನವನ್ನು ಮಾಡುತ್ತೇನೆಂದು ಬಾಯಿಯಿಂದ ಹೇಳದಿದ್ದರೂ ಭೋಜನ ವನ್ನು ಮಾಡಿದರೆ ಹೊಟ್ಟೆ ತುಂಬುವುದು. ಹಾಗೆಯೇ ಈ ಶ್ಲೋಕವು ಬಾಯಿಗೆ ಬಂದರೂ ಬಾರದಿದ್ದರೂ ಅದರಲ್ಲಿ ಹೇಳಿದಂತೆ ಮನಸ್ಸನ್ನು ಪರ ಮಾತ್ಮನ ಪಾದಾರವಿಂದದಲ್ಲಿಟ್ಟು ತದೇಕಧ್ಯಾನನಿರತನಾಗಿ ಆ ಪದಾರ್ಥ ಗಳನ್ನು ಚಿಂತಿಸಬೇಕು. ಅದೆಂತೆಂದರೆ— ನವರತ್ನಖಚಿತವಾದ ಭಂಗಾರದ ತಟ್ಟೆ ಬಟ್ಟಲುಗಳಲ್ಲಿ, ಉತ್ತಮವಾದ ಹಸುವಿನ ತುಪ್ಪದಿಂದ ಪಕ್ವಮಾಡಿದ ಭಕ್ಷ್ಯಭೋಜ್ಯಗಳನ್ನು, ಹುಳಿ, ಸಾರು, ಕೂಟು, ನಾನಾವಿಧ ಶಾಕಗಳು ಇವುಗಳಿಂದ ಕೂಡಿದ ದಿವ್ಯ ಶಾಲ್ಯನ್ನವನ್ನು, ಹಾಲು, ಮೊಸರು, ತುಪ್ಪ, ಜೇನುತುಪ್ಪ ಮೊದಲಾದುವುಗಳನ್ನೂ ಸಹ ಇಟ್ಟಿರುವೆನು. ಎಂದು ಮನಸಾ ಆ ಪಾತ್ರೆಗಳಲ್ಲಿ ಈ ಪದಾರ್ಥಗಳನ್ನು ಇಟ್ಟಿರುವುದಾಗಿ ಚಿಂತಿಸಬೇಕು. ನಾವು ಕಣ್ಣುಮುಚ್ಚಿಕೊಂಡು ಹಾಗೆ ಅವುಗಳನ್ನು ಚಿಂತಿಸುವಾಗ ಆ ಪಾತ್ರೆ ಪದಾರ್ಥಗಳು ನಮ್ಮ ದೃಷ್ಟಿಗೆ ಗೋಚರಿಸುವಂತಿರಬೇಕು. ಅಂದರೆ ಒಂದು ಬಟ್ಟಲಿನಲ್ಲಿ ತುಪ್ಪವನ್ನು ಇಟ್ಟದ್ದೇವೆಂದು ನಾವು ಭಾವಿಸಬೇಕಾದರೆ ಆ ಆಕಾರವನ್ನು ಚಿಂತಿಸಬೇಕು. ಈಗ ಯೋಚಿಸೋಣ! ಒಂದು ಸೇರು ಹಿಡಿ ಯುವ ಯಾವುದಾದರೊಂದು ಬಟ್ಟಲು ಹೇಗಿರುವುದೆಂಬುದನ್ನು ನಾವು ಮನಸ್ಸಿ ನಲ್ಲಿ ಚಿಂತಸಿದರೆ ಆ ಬಟ್ಟಲು ಹೀಗೆಯೇ ಇರುವುದೆಂದು ನಮಗೆ ಹೊಳೆಯುವು ದಷ್ಟೆ! ಅದು ಭಂಗಾರದಿಂದ ಮಾಡಲ್ಪಟ್ಟು ಅದರಲ್ಲಿ ವಜ್ರ ಕೆಂಪುಗಳನ್ನು ಕೆತ್ತಿಸಿದ್ದರೆ ಅದು ಹೇಗೆ ಇರುವುದೆಂಬುದನ್ನು ಮೊದಲು ಯೋಚಿಸಿ ಅದರ ಸ್ವರೂಪವು ನಮ್ಮ ಮನಸ್ಸಿಗೆ ಬರುವಂತೆ ಮಾಡಿಕೊಳ್ಳಬೇಕು. ಅನಂತರ ಅದರಲ್ಲಿ ಹೆತ್ತ ತುಪ್ಪವನ್ನು ಹಾಕಿದರೆ ಹೇಗಿರುವುದೆಂಬುದನ್ನು ಚಿಂತಿಸಬೇಕು. ಹೀಗೆ ಚಿರೋಟಿ ಮೊದಲಾದ ಭಕ್ಷ್ಯ ಭೋಜ್ಯ ಶಾಕ ಪಾಕಾದಿ ವಸ್ತುಗಳ ಆಕಾರವನ್ನೆಲ್ಲಾ ಪಾತ್ರೆಗಳಲ್ಲಿ ಚಿಂತಿಸಿ ಒಂದೊಂದು ಪದಾರ್ಥವನ್ನು ಪ್ರತ್ಯೇಕ ಪ್ರತ್ಯೇಕವಾಗಿ ಇತರರಿಗೆ ನಾವು ಬಡಿಸುವಂತೆ ಮನಸ್ಸಿನಲ್ಲಿ ಪರ ಮಾತ್ಮನಿಗೆ ಸಮರ್ಪಿಸಬೇಕು! ತದನಂತರ ತಾಂಬೂಲ ಮೊದಲಾದುವುಗಳನ್ನು ಚಿಂತಿಸಬೇಕು. ಹೀಗೆ ಪ್ರತಿದಿವಸದಲ್ಲಿಯೂ ಮಾಡಬೇಕೆಂದೇ ಶ್ಲೋಕಾರ್ಥ. ಇದರಂತೆ ಅನುಷ್ಠಾನ ಮಾಡಬೇಕಲ್ಲದೆ ಶ್ಲೋಕವನ್ನು ಉಚ್ಚಾರಣೆ ಮಾತ್ರ

ಮಾಡುವುದರಿಂದ ಪ್ರಯೋಜನವಿಲ್ಲ. ಶ್ಲೋಕದಲ್ಲಿ ಬಾಹ್ಯ ಪೂಜಾದಿ ಆಡಂಬರಕ್ಕಿಂತಲೂ ಮಾನಸಿಕ ಪೂಜಾಕ್ಕೆ ಫಲಾಧಿಕ್ಯವಾಗುವದೆಂಬುವುದೇ ದಾಸಾರ್ಯರ ಹೃದಯವು. ಬಾಹ್ಯ ಪೂಜಾಬಿಡಬೇಕೆಂಬ ತಾತ್ಪರ್ಯವಲ್ಲ. ಬಾಹ್ಯ ಪೂಜಾ ಮಾಡಿದರೂ ಮಾನಸಿಕವಾದ ಭಕ್ತಿಯಿಲ್ಲದಿದ್ದರೆ ಪ್ರಯೋಜನವಾಗುವುದಿಲ್ಲ. ಮಾನಸಿಕವಾದ ಪದಾರ್ಥವನ್ನು ಚಿಂತಿಸಿ ಪೂಜೆಯನ್ನು ಮಾಡುವುದರಿಂದ ಗಂಗಾಪ್ರವಾಹದೊಳಗಿನ ಉದಕಬಿಂದುಗಳನ್ನೆಣಿಸಿದರೆ ಹೇಗೆ ಅಪಾರವಾಗಿ ಕಾಣುವುದೋ ಹಾಗೆ ಪರಮಾತ್ಮನ ಅನುಗ್ರಹದಿಂದ ಇಹಪರಗಳಲ್ಲಿ ಬಹು ಸುಖಗಳುಂಟಾಗುವುವು. ಇದಕ್ಕೆ ಉದಾಹರಣೆಯಾಗಿ, ಧ್ರುವಪ್ರಹ್ಲಾದಾದಿಗಳನ್ನು ಹೋಲಿಸಿ ನೋಡಬಹುದು. ಧ್ರುವನು ತಪಸ್ಸು ಮಾಡುವಾಗ ಯಾವ ಪ್ರತಿಮಾದಿಗಳನ್ನು ಆರಾಧಿಸಿದನು? ಭಕ್ಷ್ಯಭೋಜ್ಯಾದಿ ಯಾವ ಸಾಮಗ್ರಿಗಳನ್ನು ಸಮರ್ಪಿಸಿದನು? ಮಾನಸಿಕ ಸಂಕಲ್ಪದಿಂದಲೇ ಇಹಪರಗಳಲ್ಲಿ ಪರಮಸುಖವನ್ನು ಪಡೆಯಲಿಲ್ಲವೆ? ಪ್ರಹ್ಲಾದನಾದರೂ ಹೀಗೆಯೇ ಮಾಡಿ ಪರಮಾನಂದ ಹೊಂದಿರುವನು. ಹೀಗೆ ಅನೇಕರು ಭಗವಂತನನ್ನು ಮನಸ್ಸಿನಲ್ಲಿ ಚಿಂತಿಸಿ ಕೃತಾರ್ಥರಾಗಿರುವರು. ಶುಕಾಚಾರ್ಯ ಪ್ರಭೃತಿಗಳಾದ ಅನೇಕ ಜ್ಞಾನಿಗಳು ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಪರಮಾತ್ಮನ ಗುಣಗಳನ್ನು ಕದ್ದಿದ್ದರು. ಪುರಂದರದಾಸರು, ವಿಜಯದಾಸರು ಮೊದಲಾದವರು ಪರಮಾತ್ಮನ ಗುಣವನ್ನು ಯಥೋಚಿತವಾಗಿ ಕದ್ದವರೇ, ಆದುದರಿಂದ ಪರಮಾತ್ಮನು ಅವರ ಪಾಪಗಳನ್ನು ಕದ್ದಿರುವನು. ಇಲ್ಲದಿದ್ದರೆ ಅವರು ಮುಕ್ತಿಯನ್ನು ಹೊಂದಿದ್ದು ಹೇಗೆ? ಇತ್ಯಾದಿ ವಿಷಯಗಳನ್ನೇ ಈ ಪದ್ಯದಲ್ಲಿ ದಾಸರಾಯರು ಹೇಳಿರುವರು. ॥ ೨೨ ॥

ಪೂರ್ವ ಶ್ಲೋಕಗಳಲ್ಲಿ ಪರಮಾತ್ಮನನ್ನು ಭಕ್ತಿಯಿಂದ ಮಾನಸಪೂಜೆ ಮಾಡಲು ಇಷ್ಟಾರ್ಥವನ್ನು ಕೊಡುವನೆಂದು ಹೇಳಿದರು. ಈ ಕೆಳಗಣ ಶ್ಲೋಕದಿಂದ ಪರಮಾತ್ಮನಲ್ಲಿ ಭಕ್ತಿ ಹುಟ್ಟುವುದಕ್ಕಾಗಿ ಅವನ ಮಹಿಮೆಯನ್ನು ಹೇಳುವರು.

**ಚೇತನಾಚೇತನವಿಲಕ್ಷಣ**
**ನೂತನಪದಾರ್ಥಗಳೊಳಗೆ ಬಲು**
**ನೂತನನೆ ಸುಂದರಕೆ ಸುಂದರ ರಸಕೆ ರಸರೂಪ ॥**

ಯೊವಾಗಲೂ ರಕ್ಷಕನಾಗಿ, ಭಕ್ತರಧೀನನೆಂದೆನಿಸಿ=ಭಕ್ತವಶ್ಯನೆಂದು ಪ್ರಸಿದ್ಧನಾಗಿ, ಒಂದರಕ್ಷಣಬಿಡದೆ, ಯಮ್ಮೊಡನೆ-ನಮ್ಮೊಡನೆ, ತಿರುಗುವ. ದುರಿತೌಘಗಳ-ಕಷ್ಟಪರಂಪರೆಗಳನ್ನು, ತಡೆವ-ಬರದಂತೆ ಮಾಡುವ, ಕಾಮದ=ನಾವು ಅಪೇಕ್ಷಿಸುವ, ಸಕಲೇಷ್ಟಗಳ=ನಮ್ಮ ಯೋಗ್ಯತಾನುಸಾರ ಸಕಲ ಇಚ್ಛೆಗಳನ್ನು ಕೊಡುವ, ನಮ್ಮಂದದಲಿ-ನಮ್ಮಂತೆಯೇ, ಸಂತತ=ಸರ್ವಕಾಲದಲ್ಲಿಯೂ, ನಡೆವ-ನಡೆಯುವ.

ತಾತ್ಪರ್ಯ.—ಹೊಸಹೊಸದಾದ ಮಹಿಮೆಯುಳ್ಳ ಶ್ರೀಹರಿಯು ನಮ್ಮ ದೇಹದ ನೆಳಲು ನಮ್ಮ ಕೂಡಲೇ ಬರುವಂತೆ ನಮಗೆ ಬೆಂಬಲವಾಗಿದ್ದು ನಮಗೆ ಬಂದ ಆಪತ್ತುಗಳನ್ನು ಪರಿಹರಿಸುವನು. ನಮ್ಮ ಯೋಗ್ಯತಾನುಸಾರವಾಗಿ ನಾವು ಬೇಡುವ ಸಕಲೇಷ್ಟಗಳನ್ನು ಪೂರೈಸುವನು.

ವಿಶೇಷಾರ್ಥ.—ಕೃಷ್ಣಾವತಾರದಲ್ಲಿ ಶ್ರೀಪರಮಾತ್ಮನು ಗೋಪಗೋಪಿಯರ ಕೂಡ ಇದ್ದು ಕ್ಷಣ ಬಿಡದೆ ಅವರಿಗೆ ಬಂದ ಆಪತ್ತುಗಳು ಅಂದರೆ "ವಿಷಜಲಾಶಯಾದ್ವ್ಯಾಳ ರಾಕ್ಷಸಾದ್ವರ್ಷ ಮಾರುತಾದ್ವೈದ್ಯುತಾನಲಾತ್ ವೃಷಮಯಾತ್ಮಯಾದ್ವಿಶ್ವತೋ ಮುಖಾದ್ವೃಷಭತೇವಯಂ ರಕ್ಷಿತಾಮುಹುಃ ಕಾಳಿಂದೀ ಮಡುವಿನೊಳಗಿನ ವಿಷೋದಕವನ್ನು ಪಾನ ಮಾಡಿ ಗೋವು ಗೋಪಾಲರುಗಳೆಲ್ಲರೂ ಪ್ರಾಣ ಹೀನರಾಗಲು ಅವರನ್ನು ಬದುಕಿಸಿರುವೆ. ಸರ್ಪದಿಂದ ರಕ್ಷಿಸಿರುವೆ ತೃಣಾವರ್ತನೆಂಬ ಸುಳಿರೂಪಿಯಾದ ರಾಕ್ಷಸನಿಂದಲೂ, ಗಾಳಿಯಿಂದ ಕೂಡಿದ ಮಳೆಯಿಂದಲೂ, ಕಾಡು ಕಿಚ್ಚಿನಿಂದಲೂ, ವತ್ಸಾಸುರ ಮೊದಲಾದವರಿಂದಲೂ, ಹೆಚ್ಚಿಗೇಕೆ ? ನಾಲ್ಕು ಪಾರ್ಶ್ವದಿಂದಲೂ ಬಂದ ಸರ್ವಾಪತ್ತುಗಳಿಂದಲೂ, ನಿನ್ನಿಂದ ನಾವು ರಕ್ಷಿಸಲ್ಪಟ್ಟೆವು' ಎಂದು ಗೋಪಿಕಾಸ್ತ್ರೀಯರು ಶ್ರೀಕೃಷ್ಣನನ್ನು ಸ್ತುತಿ ಮಾಡಿರುವರು. ಮತ್ತು ಭಾಗವತ ಪ್ರಥಮ ಸ್ಕಂಧದ ೮ನೇ ಅಧ್ಯಾಯದಲ್ಲಿ ಕುಂತೀದೇವಿಯು ಶ್ರೀಕೃಷ್ಣನನ್ನು ಸ್ತೋತ್ರಮಾಡಿದಾಗ "ವಿಷಾನ್ಮಹಾಗ್ನೇ ಪುರುಷಾದದಂಶನಾದ ಸಸತ್ಸ ಭಾಯಾವನವಾಸ ಕೃಚ್ಛ್ರತಃ | ಮೃಧೇಮೃಧೇನೇಕ ಮಹಾರಥಾಸ್ತ್ರತೋ ದ್ರೌಣ್ಯಸ್ತ್ರತಶ್ಚಾಸ್ಮ ಹರೇಭಿ ರಕ್ಷಿತಾಃ' ಭೀಮಸೇನನನ್ನು ಕೊಲ್ಲುವುದಕ್ಕಾಗಿ ದುರ್ಯೋಧನನು, ವಿಷಭಕ್ಷ್ಯಗಳನ್ನು ಆತನಿಗೆ ತಿನ್ನಿಸಿದಾಗ ಆ ವಿಷದ ದೆಸೆಯಿಂದಲೂ, ಲಾಕ್ಷಾಗೃಹದಲ್ಲಿ ನಮ್ಮನ್ನು ದಹಿಸಲುದ್ಯುಕ್ತನಾದಕಾಲದಲ್ಲಿ ಅಗ್ನಿಯಿಂದಲೂ ಹಿಡಿಂಬ ಬಕಮೊದಲಾದ ರಾಕ್ಷ

ಷರು ಹೀಡಿಸುವಾಗ ಆ ರಾಕ್ಷಸರ ದೆಶೆಯಿಂದಲೂ ಭೀಮಸೇನನನ್ನು ಸರ್ಪವು ನುಂಗಿದ ಕಾಲದಲ್ಲಿ ಅದರ ದೆಶೆಯಿಂದಲೂ ಅಯೋಗ್ಯನಾದ ದುರ್ಯೋಧನನ ಸಭೆಯಲ್ಲಿ ದ್ರೌಪದಿಗೆ ಸಂಭವಿಸಿದ ಮಾನಭಂಗದಕಾಲದಲ್ಲಿ ಆ ಕಷ್ಟದ ದೆಶೆಯಿಂದಲೂ, ವನವಾಸ, ಅಜ್ಞಾತವಾಸ ಕಾಲಗಳಲ್ಲಿ ಪ್ರಾಪ್ತವಾದ ಕಷ್ಟಗಳ ದೆಶೆಯಿಂದಲೂ ಪ್ರತಿಯೊಂದು ಯುದ್ಧಕಾಲದಲ್ಲಿಯೂ ಶತ್ರುಗಳು ಪ್ರಯೋಗಮಾಡಿದ ಮಹಾಸ್ತ್ರಗಳ ದೆಶೆಯಿಂದಲೂ ಪ್ರಕೃತ ಅಶ್ವತ್ಥಾಮಾಚಾರ್ಯರು ಪ್ರಯೋಗಮಾಡಿದ ಬ್ರಹ್ಮಾಸ್ತ್ರದ ದೆಶೆಯಿಂದಲೂ, ನಿನ್ನ ಅನುಗ್ರಹದಿಂದಲೇ ನಾವು ಬದುಕಿಕೊಂಡಿರುವೆವು, ಎಂದು ಹೇಳಿರುವಳು. ಆದರೆ ಈ ಕಥೆಗಳಲ್ಲಿ ಶ್ರೀಕೃಷ್ಣನೇ ಬಂದು ಆಪತ್ತನ್ನು ಪರಿಹರಿಸಿದುದಾಗಿ ಭಾರತಾದಿಗಳಲ್ಲಿ ಹೇಳಿರುವುದಿಲ್ಲ. ಹೀಗಿರಲು, ಕುಂತೀದೇವಿಯ ಸ್ತೋತ್ರದಲ್ಲಿ "ವಿಷಾದಿಗಳ ದೆಶೆಯಿಂದ ನಿನ್ನಿಂದಲೇ ರಕ್ಷಿತರಾದೆವು' ಎಂದು ಹೇಳಿದ ವಾಕ್ಯವು ಹೇಗೆ ಸರಿಹೋಗುವದೆಂದರೆ ಆಪತ್ತು ಬಂದ ಒಂದೊಂದು ಕ್ಷಣದಲ್ಲಿಯೂ ಪಾಂಡವರು ಶ್ರೀಕೃಷ್ಣನನ್ನು ಸ್ಮರಣೆಮಾಡಿ ಕಾರ್ಯವನ್ನು ಮಾಡಿದುದರಿಂದ ಶ್ರೀಕೃಷ್ಣನು ಅದೃಶ್ಯನಾಗಿದ್ದು ಪ್ರೇರಣಾದಿಂದ ಕೆಲವು ಆಪತ್ತುಗಳನ್ನು, ಕೆಲವು ಆಪತ್ತುಗಳನ್ನು ಪ್ರತ್ಯಕ್ಷನಾಗಿಯೂ ಪರಿಹರಿಸುವನು. ಈ ವಿಷಯುವನ್ನು ಕುಂತೀದೇವಿಯು ಚೆನ್ನಾಗಿ ತಿಳಿದಿದ್ದಳು. ಆದುದರಿಂದಲೇ ಆಕೆಯು ಈ ರೀತಿ ಸ್ತೋತ್ರಮಾಡಿದ್ದು ನ್ಯಾಯುವೆಂದು ತಿಳಿಯಬೇಕು ಈ ರೀತಿ ಇರುವದರಿಂದಲೇ ದಾಸರಾಯರು "ತಡೆವದುರಿತೌಘಗಳ ಕಾಮದಕೊಡುವ" ಎಂದು ಹೇಳಿರುವರು. ಮಹಾಮಹಿಮೆಯುಳ್ಳ ಪರಮಾತ್ಮನು "ನಮ್ಮಂದದಲಿ ನಡೆವ' ನಮ್ಮೊಳಗಿದ್ದು ಕಾರ್ಯಗಳನ್ನು ಮಾಡುವುದಕ್ಕೆ ಪ್ರೇರಿಸಿ ನಾವು ಮಾಡಿದುದನ್ನೂ ಮಾಡುವದನ್ನೂ ಮಾಡಿರುವನು, ಮಾಡುವನು. ಭಾಗವತ ತಾತ್ಪರ್ಯದಲ್ಲಿ "ಅತಸ್ತತ್ಪ್ರೇರಣಾದೇವ ಪ್ರೇಮಾದ್ಯಾಮಮುಜಜ್ಞಿರೇ" ಅವನಲ್ಲಿ ಪ್ರೀತಿಯು ಅವನ ಪ್ರೇರಣೆಯಿಂದಲೇ ನನಗಾಯಿತೆಂದು ಭಾಗವತೋತ್ತಮರು ಚಿಂತಿಸುವರೆಂದು ಹೇಳಿರುವರು. ಮತ್ತೂ "ನಾಹಂಕರ್ತಾ ಹರಿಃ ಕರ್ತಾ' "ಯಾವ ಕಾರ್ಯವನ್ನೂ ನಾನು ಮಾಡುವವನಲ್ಲ ನನ್ನೊಳಗಿದ್ದು ಪರಮಾತ್ಮನೇ ಮಾಡಿಸುವನು" ಹೀಗೆ ಪರಮಾತ್ಮನನ್ನು ಪ್ರಾರ್ಥಿಸಬೇಕೆಂದು ಹೇಳಿರುವರು. ಈ ವಾಕ್ಯಗಳು ನಮ್ಮಂದದಲಿ ನಡೆವ' ಎಂಬ ವಾಕ್ಯಕ್ಕೆ ಆಧಾರವಾಗಿರುವವು.

ಅವತಾರಿಕೆ.—ಮೇಲೆ ಹೇಳಿದುದನ್ನೇ ಪುನಃ ದೃಢಪಡಿಸುತ್ತಾರೆ.—

**ಬಿಟ್ಟವರ ಭವಪಾಶದಿಂದಲಿ**
**ಕಟ್ಟುವನು ಬಹು ಕಠಿಣನಿವ ಶಿ**
**ಷ್ಟೇಷ್ಟನೆಂದರಿದನವರತ ಸದ್ಭಕ್ತಿ ಪಾಶದಲಿ ||**
**ಕಟ್ಟುವರ ಭವಕಟ್ಟು ಬಿಡಿಸುವ**
**ಶಿಟ್ಟಿನವನಿವನಲ್ಲ ಕಾಮದ**
**ಕೊಟ್ಟುಕಾವನು ಸಕಲ ಸೌಖ್ಯವನಿಹಪರಂಗಳಲಿ ||೨೬||**

ಪದ್ಯಾರ್ಥ.-ಶ್ರೀಪರಮಾತ್ಮನು, ಬಿಟ್ಟವರ-ತನ್ನನ್ನು ಭಜಿಸದೆ ಬಿಟ್ಟವರನ್ನು, ಭವಪಾಶದಿಂದಲಿ=ಸಂಸಾರವೆಂಬ ಪಾಶದಿಂದ ಕಟ್ಟುವನು, ಇವ=ಈ ಪರಮಾತ್ಮನು (ತನ್ನನ್ನು ಬಿಟ್ಟವರ ವಿಷಯದಲ್ಲಿ) ಬಹು ಕಠಿಣ ಚಿತ್ತನಂತೆ ಕಾಣುವನು. ಶಿಷ್ಟೇಷ್ಟನೆಂದು=ಶಿಷ್ಟರಾದ ಭಕ್ತ ಜನರ ಇಷ್ಟನೆಂದು, ಅನವರತ=ಸರ್ವಕಾಲದಲ್ಲಿಯೂ, ಸದ್ಭಕ್ತಿ ಪಾಶದಲಿ=ಉತ್ತಮವಾದ ಭಕ್ತಿಯೆಂಬ ಪಾಶದಿಂದ, ಕಟ್ಟುವರ=ತನ್ನನ್ನು ಕಟ್ಟುವರ, ಭವಕಟ್ಟು=ಸಂಸಾರವೆಂಬ ಕಟ್ಟನ್ನು, ಬಿಡಿಸುವ. ಇವನು ಶಿಟ್ಟಿನವನು (ಅವರ ವಿಷಯದಲ್ಲಿ ಕೋಪಮಾಡುವವನು ಅಲ್ಲ. ಇಹಪರಂಗಳಲಿ=ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸಹ, ಕಾಮದ-ಅವರು ಅಪೇಕ್ಷಿಸುವ ಸಕಲ ಸೌಖ್ಯವನ್ನು ಕೊಟ್ಟು, ಕಾವನು-ರಕ್ಷಿಸುವನು.

ತಾತ್ಪರ್ಯ.—ಶ್ರೀಪರಮಾತ್ಮನನ್ನು ಯಾರು ಭಜಿಸದೆ ಬಿಟ್ಟುಬಿಡುವರೋ, ಅವರನ್ನು ಸಂಸಾರವೆಂಬ ಪಾಶದಿಂದ ಕಟ್ಟುವನು. ಅವರ ವಿಷಯದಲ್ಲಿ ಮಹಾ ಕಠಿಣ ಚಿತ್ತವುಳ್ಳವನಹಾಗೆ ಕಾಣುವನು. ಇವನು ಶಿಷ್ಟಜನರ ಆಪ್ತನೆಂದು, ಸರ್ವದಾ ಭಜಿಸುತ್ತಾ ಭಕ್ತಿಪಾಶದಿಂದ ಅವನನ್ನು ಕಟ್ಟಿಕೊಂಡರೆ ಅವರಿಗಿರುವ ಸಂಸಾರ ಬಂಧನವನ್ನು ಬಿಡಿಸಿಬಿಡುವನು. ಅವರಲ್ಲಿ ಲೇಶಮಾತ್ರವೂ ಕೋಪವನ್ನು ತೋರಿಸನು. ಅವರವರ ಯೋಗ್ಯತಾನುಸಾರ ಅವರು ಬೇಡುವ ಸಕಲ ವಿಧವಾದ ಸೌಖ್ಯಗಳನ್ನು ಇಹದಲ್ಲಿಯೂ ಪರಲೋಕದಲ್ಲಿಯೂ ಸಹ ಕೊಟ್ಟು ರಕ್ಷಿಸುವನು.

ವಿಶೇಷಾರ್ಥ.—"ಬಿಟ್ಟವರ ಭವಪಾಶದಿಂದಲಿ ಕಟ್ಟುವನು ಬಹು ಕಠಿಣನಿವ" ಎಂಬ ದಾಸರ ವಾಕ್ಯಕ್ಕೆ ಆಧಾರವಾಗಿ ಭಗವದ್ಗೀತೆಯಲ್ಲಿ, "ತಾನಹಂ ದ್ವಿಷತಃ ಕ್ರೂರಾನ್ಸಂಸಾರೇಷು ನರಾಧಮಾನ್ । ಕ್ಷಿಪಾಮ್ಯಜಸ್ರ

ಮಶುಭಾನಾಸುರೀಷ್ವೇವಯೋನಿಷು || ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ। ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಂ ||" ಎಲೈ ಪಾರ್ಥ ! ನನ್ನನ್ನು ದ್ವೇಷಿಸುವ ಕ್ರೂರರಾದ ಆ ನರಾಧಮರನ್ನು ಶಾಶ್ವತವಾಗಿ ದೈತ್ಯಕುಲದಲ್ಲಿ ಹುಟ್ಟಿಸುವೆನು. ಮೂಢರಾದ ಆ ದ್ವೇಷಿಗಳು ಜನ್ಮ ಜನ್ಮಾಂತರಗಳಲ್ಲಿಯೂ ಅಸುರ ಯೋನಿಗಳಲ್ಲಿಯೇ ಹುಟ್ಟಿ ನನ್ನನ್ನು ದ್ವೇಷಿಸಿ, ನನ್ನನ್ನು ಸೇರದೆ ಕಡೆಗೆ ಘೋರವಾದ ತಮಸ್ಸನ್ನೇ ಹೊಂದುವರು.' ಎಂದು ಹೇಳಿರುವರು. ಇದರಿಂದ ತನ್ನನ್ನು ಬಿಟ್ಟವರನ್ನು ಸಂಸಾರ ಪಾಶದಿಂದ ಕಟ್ಟುವನು. ಅವರ ವಿಷಯದಲ್ಲಿ ಕಠಿನನೆಂದು ಸ್ಪಷ್ಟಪಡಿಸಿದಂತಾಯಿತು. ಭಕ್ತಿಪಾಶದಿಂದ ತನ್ನನ್ನು ಕಟ್ಟಿದ ಪ್ರಹ್ಲಾದ, ಬಲಿ, ಕುಚೇಲ ಮೊದಲಾದವರಿಗೆ ಇಹದಲ್ಲಿ ವಿವಿಧ ಭೋಗಗಳನ್ನಿತ್ತು ಸಂಸಾರ ಬಂಧನಗಳಿಂದ ಬಿಡಿಸಿ ಪರಲೋಕದಲ್ಲಿ ತನ್ನ ಪಾದಾರವಿಂದವನ್ನು ಕೊಡಿಸಿ ವಿವಿಧ ಭೋಗಗಳನ್ನಿತ್ತಿರುವನು. "ಶಿಟ್ಟಿನವನಿವನಲ್ಲ' ತನ್ನ ಭಕ್ತರು ತಪ್ಪನ್ನು ಮಾಡಿದ್ದರೂ ಅವರಮೇಲೆ ಶಿಟ್ಟನ್ನು ಮಾಡನು. ಭಾಗವತ ಪ್ರಥಮಸ್ಕಂಧದ ೧೪ನೇ ಅಧ್ಯಾಯದಲ್ಲಿ (ಅರ್ಜುನನು ಹೇಳಿದುದು) "ಸಖ್ಯುಃಸಖೇವ ಪಿತೃವತ್ತನಯಸ್ಯಸರ್ವಂ ಸೇಹೇಮಹಾನ್ ಮಹಿತಯಾಕುಮತೇರಘಂಮೇ! ಸಖನು ಮಾಡಿದ ಅಪರಾಧವನ್ನು ಸಖನು ಹೇಗೆ ಕ್ಷಮಿಸುವನೋ ಮಗನ ಅಪರಾಧವನ್ನು ತಂದೆಯು ಹೇಗೆ ಕ್ಷಮಿಸುವನೋ ಹಾಗೆ ಕುಮತಿಯಾದ ನಾನು ಮಾಡಿದ ಸರ್ವಾಪರಾಧವನ್ನು ಮಹಾಮಹಿಮೆಯುಳ್ಳ ಸ್ವಾಮಿಯು ಕ್ಷಮಿಸಿರುವನು ಎಂದು ಹೇಳಿರುವನು. ಇದರಿಂದ ಭಕ್ತರ ಮೇಲೆಂದಿಗೂ ಶ್ರೀಪರಮಾತ್ಮನು ಶಿಟ್ಟುಮಾಡನೆಂದರ್ಥ. ಆದರೆ ಕೆಲವೆಡೆಗಳಲ್ಲಿ ಇಂದ್ರಾದಿಗಳ ಮೇಲೆ ಶಿಟ್ಟುಮಾಡಿದಂತೆ ಕಥೆ ಇರುವದು. ಅದರ ತಾತ್ಪರ್ಯವೇನೆಂದರೆ, ಭಕ್ತ ಜನರು ಅಸುರಾವೇಶದಿಂದಲೋ ಅಹಂಕಾರದಿಂದಲೋ ತನ್ನನ್ನು ತಿರಸ್ಕರಿಸಿದಾಗ, ಅದನ್ನು ಪರಿಹರಿಸಿ ಅವರಲ್ಲಿ ಅನುಗ್ರಹಮಾಡುವದಕ್ಕಾಗಿ ಅವರಲ್ಲಿ ಕೋಪಮಾಡಿದಂತೆ ತೋರ್ಪಡಿಸಿರುವನು ಇಂದ್ರನ ಉದ್ದೇಶವಾಗಿ ನಂದಗೋಪಾದಿಗಳು ಮಾಡುತ್ತಿದ್ದ ಯಾಗವನ್ನು ಕೆಡಿಸಿ ಅವನನ್ನು ಅವಮಾನಪಡಿಸಿ ಅವನು ಕೋಪದಿಂದ ಪ್ರಳಯಕಾಲದಂತೆ ಮಳೆಯನ್ನು ಕರೆಯಿಸಿದಾಗ ಗೋವರ್ಧನವನ್ನೆತ್ತಿ ಗೋಪಗೋಪಿಯರನ್ನುದ್ಧರಿಸಿ ಇಂದ್ರನಿಗೆ ಮಾನಭಂಗಮಾಡಿ ಅವನಲ್ಲಿ ಪಶ್ಚಾತ್ತಾಪ ಹುಟ್ಟಿಸಿ

ಅನುಗ್ರಹ ಮಾಡಿದನು. ಗೋಪಿಕಾಸ್ತ್ರೀಯರಿಗೆ ಅಹಂಕಾರ ಬಂದಾಗ ಅವರ ಗುಂಪಿನಿಂದ ಕಣ್ಮರೆಯಾಗಿ ಅವರನ್ನು ಅಲೆದಾಡಿಸಿ ಅಹಂಕಾರವು ಇಳಿದಮೇಲೆ ಅನುಗ್ರಹ ಮಾಡಿರುವನು. ಹೀಗೆ ಭಕ್ತರಲ್ಲಿ ಅನುಗ್ರಹಕ್ಕಾಗಿಯೇ ಅವರನ್ನು ಸ್ವಲ್ಪ ಮಾತ್ರ ಶಿಕ್ಷಿಸುವುದು. ಇದು ನಿಜವಾದ ಕೋಪದ ಕಾರ್ಯವಲ್ಲ. ಆದುದರಿಂದ " ಶಿಟ್ಟಿನವನಿವನಲ್ಲ ' ಎಂದು ಹೇಳಿರುವರು.

ಅವತಾರಿಕೆ:—ಮೇಲೆ ಹೇಳಿದುದನ್ನೇ ದೃಢೀಕರಿಸುತ್ತಾರೆ.—

**ಕಣ್ಣಿಗೆವೆಯುಂದದಲಿ ಕೈಮೈ**
**ತಿಣ್ಣಿಗೊದಗುವ ತೆರದಿ ಪಲ್ಗಳು**
**ಪಣ್ಣು ಫಲಗಳನಗಿದು ಜಿಹ್ವೆಗೆ ರಸವನೀವಂತೆ ।**
**ಪುಣ್ಯಫಲಗಳನೀವುದಕೆ ನುಡಿ**
**ಪೆಣ್ಣಿನಾಣ್ಮಂಡಲದಿ ಅಕ್ಷ್ಮಣ**
**ನಣ್ಣನೊದಗುವ ಭಕ್ತರವಸರ್ಕೆಮರಗಣಸಹಿತ ॥೨೭॥**

ಪದ್ಯಾರ್ಥ.—ಕಣ್ಣಿಗೆವೆಯುಂದದಲಿ=ಕಣ್ಣಿಗೆ ರೆಪ್ಪೆಯು ಸಹಾಯ ಮಾಡುವಂತೆಯೂ, ಕೈ=ಕೈಗಳು, ಮೈತಿಣ್ಣಿಗೆ-ಮೈತನಿಸಿಗೆ, ಒದಗುವಂದದಿ=ಸಹಾಯವಾಗಿರುವಂತೆ, ಪಲ್ಗಳು=ಹಲ್ಲುಗಳು, ಪಣ್ಣು ಫಲಗಳನಗಿದು=ಹಣ್ಣು ಹಂಪಲುಗಳನ್ನು ಅಗಿದು, ಜಿಹ್ವೆಗೆ=ನಾಲಿಗೆಗೆ, ರಸವನೀವಂತೆ-ರಸವನ್ನು ಕೊಡುವಂತೆ, ನುಡಿವೆಣ್ಣಿನ=ವಾಗ್ದೇವತೆಯಾದ ಸರಸ್ವತಿಯನ್ನು, ಅಣ್ಮ-ಆಳುವ ಬ್ರಹ್ಮದೇವರ (ಹೆಸರುಳ್ಳ) ಅಂಡದಿ=ಬ್ರಹ್ಮಾಂಡದೊಳಗೆ, ಪುಣ್ಯಫಲಗಳನೀವದಕೆ-ಭಕ್ತ ಜನರಿಗೆ ಪುಣ್ಯ ಫಲಗಳನ್ನು ಕೊಡುವುದಕ್ಕಾಗಿ, ಲಕ್ಷ್ಮಣನಣ್ಣ-ಶ್ರೀರಾಮದೇವರು ಅಂದರೆ ಶ್ರೀಪರಮಾತ್ಮನು, ಅಮರಗಣಸಹಿತ=ದೇವತಾಗಣ ಸಮೇತನಾಗಿ, ಭಕ್ತರವಸರಕೆ=ಭಕ್ತರ ಸಮಯಕ್ಕೆ ಸರಿಯಾಗಿ ಒದಗುವನು. ಭಕ್ತವತ್ಸಲನೆಂದು ಬಿರುದುಪೊತ್ತಾಮೇಲೆ ಭಕ್ತರಾಧೀನನಾಗಿರಬೇಡವೆ ? ಎಂದು ದಾಸರಾಯರು ಹೇಳಿರುವಂತೆ ಸಿದ್ಧನಾಗುವನು.

ತಾತ್ಪರ್ಯ.—ಕಣ್ಣಿನಲ್ಲಿ ಗಾಳಿಯ ದೆಸೆಯಿಂದ ಕಸ ಮೊದಲಾದವು ಬೀಳುವ ಸಮಯದಲ್ಲಿ ತಕ್ಷಣವೇ ರೆಪ್ಪೆಗಳು ಕಣ್ಣುಗಳನ್ನು ಮುಚ್ಚಿ ರಕ್ಷಿಸುವುವು. ಆ ರೆಪ್ಪೆಗಳು ಕಣ್ಣುಗಳಿಂದ ಯಾವ ಪ್ರತಿ ಫಲವನ್ನು ಅಪೇಕ್ಷಿಸುವುದಿಲ್ಲ. ಮೈಯ್ಯಲ್ಲಿ ನವೆಯಾದರೆ ತಕ್ಷಣವೇ ಕೈ ಆ ಸ್ಥಳದಲ್ಲಿ ತುರಿಸಿ ಆ

ನನೆಯುನ್ನು ಪರಿಹರಿಸುವುದು. ಪ್ರತಿಫಲವನ್ನಪೇಕ್ಷಿಸುವುದಿಲ್ಲ. ಹಣ್ಣು, ಕಬ್ಬು ಮೊದಲಾದವುಗಳನ್ನು ನಾವು ಬಾಯಿಯಲ್ಲಿ ಹಾಕಿಕೊಂಡಕೂಡಲೆ ಹಲ್ಲುಗಳು ಅವುಗಳನ್ನು ಅಗೆದು ನಾಲಿಗೆಗೆ ರಸವನ್ನು ಕೊಡುವುವು. ಅವೂ ಪ್ರತಿ ಫಲವನ್ನಪೇಕ್ಷಿಸುವುದಿಲ್ಲ. ಹಾಗೆಯೇ ಶ್ರೀಪರಮಾತ್ಮನು ಬ್ರಹ್ಮಾಂಡದೊಳಗಿನ ಭಕ್ತಜನರಿಗೆ ಪುಣ್ಯಫಲಗಳನ್ನೊದಗಿಸಲು ದೇವತಾಗಣ ಸಮೇತನಾಗಿ ಭಕ್ತರ ಅವಸರಕೆ ಒದಗುವನು.

**ಕೊಟ್ಟದನು ಕೈಗೊಂಬರಕ್ಷಣ**
**ಬಿಟ್ಟಗಲ ತನ್ನವರ ದುರಿತಗ**
**ಳಟ್ಟುವನು ದೂರದಲಿ ದುರಿತಾರಣ್ಯಪಾವಕನು ||**
**ಬೆಟ್ಟಬೆನ್ನಲಿ ಹೊರಿಸಿದವರೊಳು**
**ಸಿಟ್ಟುಮಾಡಿದನೇನೋ ಹರಿ ಕಂ**
**ಗೆಟ್ಟ ಸುರರಿಗೆ ಸುಧೆಯನುಣಿಸಿದ ಮುರಿದನಹಿತರನಾ ||೨೮||**

ಪದ್ಯಾರ್ಥ.—ದುರಿತಾರಣ್ಯಪಾವಕನು=ದುರಿತ=ಪಾಪಗಳೆಂಬ, ಅರಣ್ಯ=ಅಡವಿಗೆ (ಕಾಡಿಗೆ) ಪಾವಕನು–ಅಗ್ನಿಯಂತಿರುವ ಶ್ರೀಪರಮಾತ್ಮನು ಕೊಟ್ಟದನು–ಭಕ್ತರು ಕೊಟ್ಟದ್ದನ್ನು, ಕೈಗೊಂಬ – ತೆಗೆದುಕೊಳ್ಳುವನು, ಅರಕ್ಷಣಬಿಟ್ಟಗಲ=ಭಕ್ತರನ್ನು ಅರ್ಧ ಕ್ಷಣಮಾತ್ರವಾದರೂ ಬಿಟ್ಟಿರಲಾರ. ತನ್ನವರ–ತನ್ನ ಭಕ್ತರ, ದುರಿತಗಳ=ಪಾಪಗಳನ್ನು (ಕಷ್ಟಗಳನ್ನು) ದೂರದಲಿ, ಅಟ್ಟುವನು=ಓಡಿಸುವನು. ಹರಿ=ಶ್ರೀಹರಿಯು. ಬೆಟ್ಟ=ಮಂದರ ಪರ್ವತವನ್ನು, ಬೆನ್ನಲಿ=ಬೆನ್ನಮೇಲೆ, ಹೊರಸಿದವರೊಳು = ಹೊರಸಿದ ದೇವತೆಗಳಮೇಲೆ, ಸಿಟ್ಟುಮಾಡಿದನೇನೋ ಮಾಡಲಿಲ್ಲ. ಕಂಗೆಟ್ಟಸುರರಿಗೆ=ಖಿನ್ನರಾದ ದೇವತೆಗಳಿಗೆ, ಸುಧೆಯ=ಅಮೃತವನ್ನು, ಉಣಸಿದ–ಪ್ರಾಶನಮಾಡಿಸಿದನು. ಅಹಿತರನ = ಅವರ ಶತ್ರುಗಳಾದ ದೈತ್ಯರನ್ನು, ಮುರಿದನು–ಸಂಹರಿಸಿದನು.

ತಾತ್ಪರ್ಯ.—ತನ್ನ ಭಕ್ತರು ಕೊಡುವ ಅಲ್ಪವಾದ ಪತ್ರ ಪುಷ್ಪಾದಿಗಳನ್ನು ಹರ್ಷದಿಂದ ಸ್ವೀಕರಿಸುವನು. ಅರ್ಧಕ್ಷಣವಾದರೂ ಬಿಟ್ಟಿರಲಾರ. ಭಕ್ತರ ಪಾಪಗಳೆಂಬ ಕಾಡನ್ನು ಸುಡುವ ವಿಷಯದಲ್ಲಿ ಅಗ್ನಿಯಂತಿರುವ ಶ್ರೀಪರಮಾತ್ಮನು ಭಕ್ತರ ಪಾಪಗಳನ್ನು ದೂರದಲ್ಲಿ ಓಡಿಸುವನು. ಅಮೃತ ಮಥನಕಾಲದಲ್ಲಿ ಮಂದರಾಚಲವನ್ನು ಬೆನ್ನಿನಮೇಲೆ ಹೊರುವಂತೆ ಮಾಡಿದ

ದೇವತೆಗಳಲ್ಲಿ ಶಿಟ್ಟು ಮಾಡಿದನೆ (ಇಲ್ಲ) ಮತ್ತು ಖಿನ್ನರಾದ ದೇವತೆಗಳಿಗೆ ಅಮೃತವನ್ನು ಉಣಿಸಿದನು. ಅವರ ಶತ್ರುಗಳಾದ ದೈತ್ಯರನ್ನು ಸಂಹರಿಸಿದನು.

ವಿಶೇಷಾರ್ಥ:—'ಕೊಟ್ಟದನು ಕೈಕೊಂಬ' ಕುಚೇಲನು ಕೊಟ್ಟ ಒಂದು ಹಿಡಿ ಅವಲಕ್ಕಿಯನ್ನು ಕೈಗೊಂಡನು. ಗಜೇಂದ್ರನು ಕೊಟ್ಟ ಒಂ ಕಮಲ ಪುಷ್ಪವನ್ನು ಸ್ವೀಕರಿಸಿದನು. ಶ್ರುತದೇವನೆಂಬ ಬ್ರಾಹ್ಮಣನು ಕೊಟ್ಟ ಪಕ್ವಮಾಡಿದ ಸಾಸಿವೆ ಮುದ್ದೆಯನ್ನು ಪ್ರೀತಿಯಿಂದ ಸ್ವೀಕರಿಸಿದನು. ಹೀಗೆ ಪರಮಾತ್ಮನು ತನ್ನ ಭಕ್ತರು ಕೊಡುವ ಅಲ್ಪವನ್ನೇ ಮಹತ್ತಾಗಿ ಭಾವಿಸಿ ಪ್ರೀತಿಯಿಂದ ಸ್ವೀಕರಿಸುವನು. ನಂಬಿದವರ ಕಷ್ಟಗಳಪರಿಹರಿಸುವನು ಹಿಂದೆ ದೇವತೆಗಳು ದೂರ್ವಾಸರ ಶಾಪದಿಂದ ರಾಜ್ಯಭ್ರಷ್ಟರಾಗಿ ಶ್ರೀಪರಮಾತ್ಮನ ಶರಣಾಗತರಾದರು. ಶ್ರೀಪರಮಾತ್ಮನು ದೇವದೈತ್ಯರಿಗೆ ಸಂಧಿ ಮಾಡಿಸಿ ಕ್ಷೀರಸಮುದ್ರದಲ್ಲಿ ಮಂದರಪರ್ವತನನ್ನು ಇಟ್ಟು ಅಮೃತೋತ್ಪತ್ತಿಗಾಗಿ ಮಥನಮಾಡಿಸುತ್ತಿರಲು ಮಂದರಾಚಲವು ನಿರಾಧಾರವಾಗಿದ್ದುದರಿಂದ ನೀರಿನಲ್ಲಿ ಮುಣುಗಿಹೋಯಿತು. ಆಗ ದೇವತೆಗಳೆಲ್ಲರೂ ಖಿನ್ನರಾಗಿ ಪೂರ್ವದಂತೆ ಪರ್ವತವು ಮೇಲೆ ಬರುವಂತೆ ಮಾಡಬೇಕೆಂದು ಬೇಡಿಕೊಂಡರು ಅವರಿಗೆ ಪ್ರೀತಿಮಾಡುವುದಕ್ಕಾಗಿ ಶ್ರೀಪರಮಾತ್ಮನು ಕೂರ್ಮರೂಪದಿಂದ ಆ ಬೆಟ್ಟವನ್ನು ಬೆನ್ನಿನಮೇಲೆ ಧರಿಸಿದನು. ಹೀಗೆ ಶ್ರೀಪರಮಾತ್ಮನು ಬೆಟ್ಟವನ್ನು ಹೊರಲು ಕಾರಣರು ದೇವತೆಗಳೇ ಆದರೂ ಆ ಅಪರಾಧವನ್ನು ಲೆಕ್ಕಿಸದೆ ಅವರಿಗೆ ಅಮೃತವನ್ನು ಪ್ರಾಶನಮಾಡಿಸಿದನು. ಇದನ್ನೇ ದಾಸರಾಯರು "ಬೆಟ್ಟಬೆನ್ನಲಿ' ಎಂಬ ವಾಕ್ಯದಿಂದ ಹೇಳಿರುತ್ತಾರೆ. ಅದೇ ಅಮೃತ ಮಥನಕಾಲದಲ್ಲಿ ದೇವತೆಗಳನ್ನು ಮೋಸಗೊಳಿಸಲುದ್ದೇಶಿಸಿದ ದೈತ್ಯರನ್ನು ವಂಚಿಸಿ ಯುದ್ಧದಲ್ಲಿ ಅವರನ್ನು ಸಂಹರಿಸಿದನು, ಅದನ್ನೇ ದಾಸರಾಯರು "ಮುರಿದನಹಿತರಸ' ಎಂದು ಹೇಳಿರುವರು.

ಶ್ರೀಪರಮಾತ್ಮನ ಕಾರುಣ್ಯವನ್ನೇ ಕೊಂಡಾಡುತ್ತಾರೆ.

**ಖೇದಮೋದ ಜಯಾಪಜಯ ಮೊದ**
**ಲಾದ ದೋಷಗಳಿಲ್ಲ ಚಿನ್ಮಯಗೆ**
**ಸಾದರದಿ ತನ್ನಂಘ್ರಿ ಕಮಲವ ನಂಬಿತುತಿಪರ**
**ಕಾದುಕೊಂಡಿಹ ಪರಮ ಕರುಣ ಮ**

ಹೋದಧಿಯು ತನ್ನವರು ಮಾಡಿದಪ
ರಾಧಗಳ ನೋಡದೆ ಸಲಹುವ ಸರ್ವಕಾಮದನು ॥೨೯॥

ಪದಾರ್ಥ.--ಶ್ರೀಪರಮಾತ್ಮನಿಗೆ, ಖೇದ=ಖಿನ್ನತೆಯು, ಮೋದ= ಸಂತೋಷಪಡುವಿಕೆಯು, ಜಯ=ಜಯವು, ಅಪಜಯ=ಪರಾಜಯವು ಮೊದಲಾದ=ಇವೇ ಮೊದಲಾದ ದೋಷಗಳಿಲ್ಲ, ಚಿನ್ಮಯ=ಚಿತ್ಸ್ವರೂಪನು ಸಾದರದಿ=ಆದರ ಸಹಿತವಾಗಿ, ತನ್ನಂಘ್ರಿಕಮಲವ=ತನ್ನ ಪಾದಕಮಲಗಳನ್ನು, ನಂಬಿಸ್ತುತಿಪರ=ಸ್ತೋತ್ರ ಮಾಡುವವರ, ಕಾದುಕೊಂಡಿಹ=ಸದಾ ಕಾದುಕೊಂಡಿರುವನು. ಪರಮಕರುಣಮಹೋದಧಿಯು=ಅತ್ಯಂತ ಕರುಣಾಸಮುದ್ರನಾದ, ವ ತ್ತೂ ಸರ್ವಕಾಮದನು-ಸರ್ವಾಭೀಷ್ಟನಾದ ಶ್ರೀ ಪರಮಾತ್ಮನು, ತನ್ನವರು-ತನ್ನ ಭಕ್ತರು, ಮಾಡಿದಪರಾಧಗಳ=ಮಾಡಿದ ತಪ್ಪುಗಳನ್ನ. ನೋಡದಲೆ=ಎಣಿಸದೆ, ಸಲಹುವ-ಸಂರಕ್ಷಿಸುವನು.

ತಾತ್ಪರ್ಯ.--ಚಿದಾನಂದ ಸ್ವರೂಪನಾದ ಶ್ರೀಪರಮಾತ್ಮನಿಗೆ, ಯಾವುದಾದರೊಂದು ಪದಾರ್ಥದ ನಷ್ಟದಿಂದುಂಟಾಗುವ ದುಃಖಗಳಾಗಲೀ ಪದಾರ್ಥ ಲಾಭದಿಂದಾಗುವ ಸಂತೋಷವಾಗಲಿ ಜಯದಿಂದುಂಟಾಗುವ ಸಂತೋಷವಾಗಲೀ ಪರಾಜಯದಿಂದುಂಟಾಗುವ ದುಃಖವಾಗಲೀ ಇಂತಹದೊಂದೂ ಇಲ್ಲ. ಪಾದಕಮಲಗಳನ್ನು ನಂಬಿ ಸ್ತುತಿಸುವವರ ರಕ್ಷಣೆಗಾಗಿ ಸರ್ವದಾ ಅವರ ಸಮೀಪದಲ್ಲಿಯೇ ಕಾದುಕೊಂಡಿರುವನು. ಪರಮಕರುಣಾ ಸಮುದ್ರನೂ ಅಭೀಷ್ಟಪ್ರದನೂ ಆದ ಶ್ರೀಪರಮಾತ್ಮನು, ತನ್ನ ಭಕ್ತರು ಮಾಡಿದ ಅಪರಾಧಗಳನ್ನು ಗಣನೆಗೆ ತಾರದೇನೇ ಸಂರಕ್ಷಿಸುವನು.

ವಿಶೇಷಾರ್ಥ.—' ಖೇದ ಮೋದಜಯಾಪಜಯಮೊದಲಾದ ದೋಷಗಳಿಲ್ಲ " ಎಂದು ದಾಸರಾಯರು ಹೇಳಿರುವರು. ಆದರೆ ಪರಮಾತ್ಮನ ಅವತಾರರೂಪಗಳಲ್ಲಿ ಹರ್ಷ ಶೋಕಾದಿಗಳನ್ನು ಅನುಭವಿಸಿದ ಹಾಗೆ ಭಾಗವತ ರಾಮಾಯಣಗಳಲ್ಲಿ ಬರುವುವು. ಅದೆಂತೆಂದರೆ-ರಾಮಾವತಾರದಲ್ಲಿ ಸೀತೆಯನ್ನು ರಾವಣನು ಅಪಹರಿಸಿದಾಗ ಸೀತಾ ನಿಮಿತ್ತವಾಗಿ ಶ್ರೀರಾಮನು ಬಹಳವಾಗಿ ಪ್ರಳಾಪಿಸಿದಂತೆ ಹೇಳಲ್ಪಟ್ಟಿದೆ. ಹೀಗಿರಲು, ಪರಮಾತ್ಮನಿಗೆ ಹರ್ಷಶೋಕಾದಿಗಳಿಲ್ಲವೆಂದು ದಾಸರಾಯರು ಹೇಗೆ ಹೇಳಿದರೆಂದರೆ, ಇವುಗಳನ್ನು ಅಜ್ಞ ಜನರ ಮೋಹಕ್ಕಾಗಿ ಹಾಗೆ ತೋರಿಸಿದನೇ ಹೊರತು ನಿಜವಾಗಲ್ಲ. ಈ ವಿಷಯದಲ್ಲಿ ನಿರ್ಣಯ ಮೊದಲನೆ ಅಧ್ಯಾಯದಲ್ಲಿ "ಅವ

ತಾರೇಷು ಯತ್ಕಿಂಚಿದ್ದರ್ಶಯೇನ್ನರವದ್ಧರಿಃ । ತಚ್ಚಾಸುರಾಣಾಂ ಮೋಹಾಯ ದೋಷಾ ವಿಷ್ಣೋರ್ನ ಹಿ ಕ್ವಚಿತ್ ॥ ೩೬ ॥ ಅಜ್ಞಾತ್ವಂ ಪಾರವಶ್ಯಂ ವಾ ವೇಧಭೇದಾದಿಕಂ ತಥಾ । ತಥಾ ಪ್ರಾಕೃತದೇಹತ್ವಂ ದೇಹತ್ಯಾಗಾದಿಕಂ ತಥಾ ॥ ೩೮ ॥ ಅನೀಶತ್ವಂ ಚ ದುಃಖಿತ್ವಂ ಸಾಮ್ಯಮನ್ಯೈಶ್ಚ ಹೀನತಾಂ। ಪ್ರದರ್ಶಯತಿ ಮೋಹಾಯ ದೈತ್ಯಾದೀನಾಂ ಹರಿಃ ಸ್ವಯಂ ॥ ೩೯ ॥ ನ ತಸ್ಯ ಕಶ್ಚಿದ್ದೋಷೋಽಸ್ತಿ ಪೂರ್ಣಾಖಿಲಗುಣೋ ಹ್ಯಸೌ ॥ ಶ್ರೀ ಪರಮಾತ್ಮನು ಅವತಾರ ರೂಪಗಳಲ್ಲಿ ಮನುಷ್ಯನಂತೆಯೇ ಕೆಲವು ಸಂದರ್ಭಗಳಲ್ಲಿ ನಟಿಸಿರುವನು. ಅವುಗಳನ್ನು ಕೇವಲ ಅಸುರಜನರ ಮೋಹಕ್ಕಾಗಿ ಹಾಗೆ ತೋರಿಸಿ ಇರುವನೇ ಹೊರತು ಮನುಷ್ಯನಂತೆ ದುಃಖಹರ್ಷಾದಿಗಳು ಅವನಿಗೆ ಎಂದಿಗೂ ಇಲ್ಲ. ಕೆಲವು ಕಾಲದಲ್ಲಿ ತಾನು ತಿಳಿಯದೆ ಇದ್ದವನಂತೆ ಪರರ ಕೂಡೆ ಯೋಚಿಸಿರುವನು. ಈ ಸಂದರ್ಭ ಯಾವುದೆಂದರೆ ಭಾಗವತ ದಶಮಸ್ಕಂಧದಲ್ಲಿ, ಒಂದಾನೊಂದು ದಿವಸ ಸುಧರ್ಮಾಖ್ಯ ಸಭೆಯಲ್ಲಿ ಉದ್ಧವಾದಿ ಮಂತ್ರಿಗಳಿಂದ ಸಮೇತನಾಗಿ ಶ್ರೀಕೃಷ್ಣನು ದಿವ್ಯಾಸನದಲ್ಲಿ ಕುಳಿತಿರುವಾಗ ಹಿಂದೆ ಎಂದೂ ನೋಡದ ಅಪೂರ್ವನಾದ ಒಬ್ಬ ಪುರುಷನು ಬಂದು ಕೃಷ್ಣನ ಆಜ್ಞಾಪ್ರಕಾರ ಸಭಾ ಪ್ರವೇಶವನ್ನು ಮಾಡಿ ಕೃಷ್ಣನನ್ನು ಕುರಿತು, 'ದೇವ! ಪಾಪಿಯಾದ ಜರಾಸಂಧನು ೨೦೮೦೦ ಮಂದಿ ರಾಜರುಗಳನ್ನು ಬಂದಿಗಳನ್ನಾಗಿ ಮಾಡಿ ಗಿರಿವ್ರಜಯೆಂಬ ಪಟ್ಟಣದಲ್ಲಿಟ್ಟಿರುವನು. ಇವರೆಲ್ಲರನ್ನು ಈಶ್ವರನಿಗೆ ಬಲಿಕೊಡಲು ಸಿದ್ಧನಾಗಿರುವನು. ಆ ರಾಜರುಗಳು ನಿನ್ನನ್ನು ಮೊರೆಹೊಕ್ಕಿರುವರು. ನೀನು ಜರಾಸಂಧನನ್ನು ಸಂಹರಿಸಿ ರಾಜರನ್ನು ಬಿಡಿಸಬೇಕು' ಎಂದು ಬೇಡಿಕೊಂಡನು. ರಾಜದೂತನಾದ ಆ ಪುರುಷನು ಹೀಗೆ ಹೇಳುತ್ತಿರುವಾಗ ನಾರದರು ಅಲ್ಲಿಗೆ ಬಂದು ಸತ್ಕೃತರಾಗಿ, ಕೃಷ್ಣನನ್ನು ಕುರಿತು, 'ಕೃಷ್ಣ! ನಿನ್ನ ಸೋದರ ಅತ್ತೆಯ ಮಗನಾದ ಧರ್ಮರಾಜನು ರಾಜಸೂಯ ಯಾಗವನ್ನು ಮಾಡಬೇಕೆಂದಿರುವನು. ಆ ಕಾರ್ಯವು ನಿನ್ನ ಹೊರತು ಆಗುವ ಹಾಗಿಲ್ಲ. ನೀನು ಇಂದ್ರಪ್ರಸ್ಥಕ್ಕೆ ಹೋಗಿ ಆ ಕಾರ್ಯವನ್ನು ಪೂರೈಸಬೇಕು. ಪ್ರಕೃತ ಧರ್ಮರಾಜನಿಗೆ ದೂತನಾಗಿ ನಾನು ಬಂದಿರುವೆನು.' ಎಂದು ಹೇಳಿದರು. ಹೀಗೆ ಏಕಕಾಲದಲ್ಲಿ ಇಬ್ಬರೂ ಬಂದು ಎರಡು ಕಾರ್ಯಗಳಲ್ಲಿ ಪ್ರೇರಿಸುತ್ತಿರಲು, ಶ್ರೀಕೃಷ್ಣನು ಯಾವುದನ್ನು ಮೊದಲು ಮಾಡಬೇಕೆಂಬುದನ್ನು ತೋರದೆ ಯೋಚಿಸಲಾಗಿ, ಉದ್ಧವನು ಸಭಿಕರಿಂದಲೂ ಕೃಷ್ಣನಿಂದಲೂ ಅಪ್ಪಣೆ ಪಡೆದು ಹೇಳಿದುದೇನೆಂದರೆ—

'ಸಭಿಕರೇ, ಪ್ರಕೃತ ಧರ್ಮರಾಜನು ಯೋಚಿಸಿರುವ ರಾಜಸೂಯ ಯಾಗ ವಾಗಬೇಕಾದರೆ ಜರಾಸಂಧನ ವಧ ಹೊರತು ಆಗುವಹಾಗಿಲ್ಲ. ರಾಜರುಗಳನ್ನು ಬಿಡಿಸಬೇಕಾದರೂ ಅದೇ ಕಾರ್ಯವನ್ನು ಮಾಡಬೇಕಾಗಿದೆ. ಹೀಗೆ ಜರಾಸಂಧನ ವಧವು ಎರಡು ಕಾರ್ಯಗಳಿಗೂ ಸಾಧಕವಾಗಿರುವುದು. ಆದುದರಿಂದ ನಾವು ಇಂದ್ರಪ್ರಸ್ಥಕ್ಕೆ ಹೋಗಿ ಪಾಂಡವರು ಮಾಡುವ ರಾಜಸೂಯ ನಿಮಿತ್ತಮಾಡಿ ಭೀಮಸೇನನಿಂದ ಜರಾಸಂಧನನ್ನು ಕೊಲ್ಲಿಸುವುದು ಉತ್ತಮವಾಗಿ ಕಾಣುವುದು' ಅಂದನು. ಆ ವಾಕ್ಯವನ್ನು ಸಂತೋಷದಿಂದ ಸರ್ವರೂ ಅನುಮೋದಿಸಿ ಅದರಂತೆ ನಡಿಸಿದರೆಂದು ಹೇಳಿರುವರು.

ರಾಮಾವತಾರದಲ್ಲಿ, ಶ್ರೀ ರಾಮನು ದಕ್ಷಿಣ ಸಮುದ್ರ ತೀರದಲ್ಲಿ ದರ್ಭಶಯನದಲ್ಲಿದ್ದಾಗ ವಿಭೀಷಣನು ಶ್ರೀರಾಮನ ಶರಣಾಗತನಾಗಲು, ಶ್ರೀರಾಮನು ಇವನನ್ನು ಅಂಗೀಕರಿಸಬಹುದೆ? ಕೂಡದೆ? ಎಂದು ಸುಗ್ರೀವಾದಿಗಳ ಸಂಗಡ ಯೋಚಿಸಿದ್ದಾಗಿಯೂ ಸುಗ್ರೀವಾದಿಗಳು ಕೂಡದೆಂದು ಹೇಳಿದ ಮೇಲೆ ಶ್ರೀ ಹನುಮಂತನು ಅವನನ್ನು ಸ್ವೀಕರಿಸುವುದೇ ನ್ಯಾಯವೆಂದು ಹೇಳಿದನೆಂತಲೂ, ಶ್ರೀ ರಾಮನು, ನಾನು ಶರಣಾಗತರನ್ನು ಎಂದಿಗೂ ಬಿಡೆನೆಂದು ಹೇಳಿ ವಿಭೀಷಣನಿಗೆ ಅಭಯವನ್ನಿತ್ತದ್ದಾಗಿಯೂ ರಾಮಾಯಣದಲ್ಲಿ ಹೇಳಿರುವರು. ಹೀಗೆ ಅಲ್ಲಲ್ಲಿ ಪರಮಾತ್ಮನು ಅಜ್ಞತ್ವವನ್ನು ತೋರಿಸಿ ಇರುವನು. ಇವು ಎಲ್ಲವೂ ಅಸುರರ ಮೋಹಕ್ಕಾಗಿಯೇ ಎಂದು ತಿಳಿಯಬೇಕು. ಕೆಲವು ಕಾಲಗಳಲ್ಲಿ ತಾನು ಪರಾಧೀನದಲ್ಲಿರುವುದಾಗಿ ತೋರಿಸಿಕೊಂಡಿರುವನು. ಅದೆಲ್ಲೆಂದರೆ ಸುಭದ್ರೆಯ ವಿವಾಹದ ಸಂದರ್ಭದಲ್ಲಿ, ಆಕೆಯನ್ನು ಅರ್ಜುನನಿಗೆ ಕೊಡಲು ಬಲರಾಮನಿಗೆ ಇಷ್ಟವಿಲ್ಲದಿರಲು ಶ್ರೀಕೃಷ್ಣನು ಅವರ ಆಧೀನದಲ್ಲಿ ತಾನು ಪ್ರಪಂಚದ ರೀತಿಯನ್ನನುಸರಿಸಿ ಇದ್ದುದರಿಂದ ಅವರ ಮಾತನ್ನು ಮೀರಲು ಸಾಧ್ಯವಿಲ್ಲದೆ ಅರ್ಜುನನನ್ನು ಯತಿವೇಷದಿಂದ ಬರಮಾಡಿಕೊಂಡು ಬಲರಾಮಾದಿ ಯಾದವರೆಲ್ಲರು ರೈವತ ಪರ್ವತಕ್ಕೆ ಹೋಗಿರುವಾಗ ರಹಸ್ಯವಾಗಿ ಸುಭದ್ರಾರ್ಜುನರಿಗೆ ವಿವಾಹವನ್ನು ಮಾಡಿಸಿ ಇಂದ್ರಪ್ರಸ್ಥಕ್ಕೆ ಅವರನ್ನು ಕೊಟ್ಟು ಕಳುಹಿಸಿ ತಾನು ಒಂದೂ ಅರಿಯದವನಂತೆ ಇರುತ್ತಿದ್ದನು. ಇದಲ್ಲದೆ ವಸುದೇವ, ದೇವಕಿ, ನಂದಗೋಪ, ಯಶೋದ, ಸಾಂದೀಪಿನಿ ಮೊದಲಾದವರ ವಶದಲ್ಲಿ ತಾನಿದ್ದುದಾಗಿ ತೋರಿಸಿರುವನು. ಭೀಷ್ಮಾಚಾರ್ಯ ಪ್ರಭೃತಿಗಳು. ಬಾಣ ಹಾಕಿದಾಗ ತನ್ನ ಮೈಯಲ್ಲಿ ಬಾಣ ನೆಟ್ಟು ರಕ್ತಹೊರ

ಟಂತೆ ತೋರಿಸಿರುವನು. ನರಕಾಸುರನ ಸಂಗಡ ಯುದ್ಧಮಾಡುವಾಗ ಅವನು ಪ್ರಯೋಗಮಾಡಿದ ಆಯುಧದಿಂದ ಮೂರ್ಛಿತನಾಗಿ ಸತ್ಯಭಾಮೆಯಿಂದ ಯುದ್ಧ ಮಾಡಿಸಿರುವನು. ತನ್ನ ದೇಹವನ್ನು ಪ್ರಾಕೃತ ಶರೀರವೆಂದು ತೋರಿಸಿ ಕೊಂಡಿರುವನು. ರಾಮಾಯಣದಲ್ಲಿ ರಾವಣನ ಸಂಹಾರವಾದ ನಂತರ ಸೀತೆಯ ಅಗ್ನಿಪ್ರವೇಶ ಸಂದರ್ಭದಲ್ಲಿ ಶ್ರೀರಾಮನನ್ನು ಬ್ರಹ್ಮಾದಿಗಳು ಸ್ತೋತ್ರ ಮಾಡುತ್ತಿರಲು ಶ್ರೀರಾಮನು ತನ್ನನ್ನು ತಾನರಿಯದವನಂತೆ 'ಆತ್ಮಾನಂ ಮಾನುಷಂ ಮನ್ಯೇ ರಾಮಂ ದಶರಥಾತ್ಮಜಮ್' ನಾನು ದಶರಥರಾಜನ ಮಗ ನಾದ ರಾಮನೆಂಬ ಒಬ್ಬ ಮನುಷ್ಯನೆಂದು ಭಾವಿಸಿ ಇರುವೆನು. ಎಂದು ಹೇಳಲು ಬ್ರಹ್ಮದೇವರು, 'ಹಾಗಲ್ಲ' ನೀನು ಶ್ರೀಮನ್ನಾರಾಯಣನು. ಸೀತೆಯು ಶ್ರೀ ಲಕ್ಷ್ಮೀದೇವಿಯು. ನಮ್ಮಗಳಿಂದ ಅರ್ಥಿತನಾಗಿ ರಾವಣಾದಿಗಳ ಸಂಹಾರ ಕ್ಕಾಗಿ ನೀನು ಅವತರಿಸಿರುವೆ' ಎಂದಂತೆ ಹೇಳಿರುವುದು. ಕೃಷ್ಣಾವತಾರದಲ್ಲಿ ದೇಹವನ್ನು ತ್ಯಾಗಮಾಡಿ ಹೋದುದಾಗಿ ಭಾಗವತದಲ್ಲಿ ಹೇಳಿರುವರು. ಪಾಂಡವರ ವನಪ್ರವೇಶಕಾಲದಲ್ಲಿಯೂ ಸತ್ಯಭಾಮೆಯ ತಂದೆಯನ್ನು ಶತ ಧನ್ವನು ಸಂಹಾರಮಾಡಿದನೆಂಬ ವೃತ್ತಾಂತವನ್ನು ಕೇಳಿದ ಕಾಲದಲ್ಲಿಯೂ ರಾಮಾವತಾರದಲ್ಲಿ ಸೀತಾವಿಯೋಗ ಕಾಲದಲ್ಲಿಯೂ ಬಹಳ ದುಃಖಪಟ್ಟಿದು ದಾಗಿ ತೋರಿಸಿರುವನು. ಮತ್ತೂ ರಾಮಕೃಷ್ಣಾದ್ಯವತಾರಗಳಲ್ಲಿ ದಶರಥ ವಸಿಷ್ಠಾದಿಗಳು, ನಂದಗೋಪ, ವಸುದೇವ, ಬಲರಾಮ, ಧರ್ಮರಾಜ, ಕುಂತೀ ಮೊದಲಾದವರಿಗೆ ತಾನು ನಮಸ್ಕಾರಮಾಡುತ್ತಾ ಅವರಿಗಿಂತಲೂ ತಾನು ಚಿಕ್ಕವನೆಂದು ಕಾಣಿಸಿಕೊಂಡಿರುವನು. ಇವುಗಳೆಲ್ಲವು ಅಸುರ ಮೋಹಕ್ಕಾ ಗಿಯೇ ಪರಮಾತ್ಮನು ತೋರಿಸಿದುದೇ ಹೊರತು ಪೂರ್ಣಗುಣಗಳುಳ್ಳ ಶ್ರೀ ಪರಮಾತ್ಮನಿಗೆ ಯಾವ ದೋಷಗಳೂ ಇಲ್ಲವೆಂದು ನಿರ್ಣಯ ವಾಕ್ಯಾರ್ಥವು. ಆದುದರಿಂದ 'ಖೇದ ಮೋದ ಜಯಾಪಜಯಗಳಿಲ್ಲ' ಎಂದು ದಾಸರಾಯರು ಹೇಳಿರುವರು.

'ಸಾದರದಿ ತನ್ನಂಘ್ರಿಕಮಲವ ನಂಬಿ ತುತಿಪರ ಕಾದುಕೊಂಡಿಹ' ಈ ವಿಷಯದಲ್ಲಿ, ಬಲಿಚಕ್ರವರ್ತಿಯು ಸರ್ವಪ್ರಕಾರದಿಂದಲೂ ತನ್ನನ್ನು ನಂಬಿ ರಲು ಅವನನ್ನು ವಾಮನರೂಪದಿಂದ ಮೂರಡಿ ಭೂಮಿಯ ಯಾಚನೆಯ ನೆವದಿಂದ ಸರ್ವಸ್ವವನ್ನೂ ಅಪಹರಿಸಿ ಅವನನ್ನು ಕಟ್ಟಿ ಉರುಳಿಸಿದರೂ ಅವನು ಸತ್ಯ ತಪ್ಪದೆ ದೃಢವಾಗಿ ತನ್ನನ್ನೇ ನಂಬಿರಲು ಅವನನ್ನು ಸುತಲ

ಲೋಕದಲ್ಲಿಟ್ಟು, ಒಂದು ಮನ್ವಂತರದಲ್ಲಿ ಆತನು ಇಂದ್ರಪದವಿಗೆ ಬರಬೇಕೆಂಬ ತನ್ನ ಸಂಕಲ್ಪವನ್ನು ವ್ಯಕ್ತಪಡಿಸಿ ಎಂಟನೆಯ ಮನ್ವಂತರದಲ್ಲಿ ಇಂದ್ರಾಧಿಪತ್ಯವನ್ನು ಬಲಿಚಕ್ರವರ್ತಿಗೆ ಕೊಡುವುದಾಗಿ ವಾಗ್ದಾನಮಾಡಿ ಆ ವರೆವಿಗೂ ಅವನ ಮನೆಯ ಬಾಗಿಲು ತಾನು ಕಾಯುತ್ತಾ ಈಗಲೂ ವಾಮನರೂಪದಿಂದ ಅಲ್ಲಿರುವನೆಂದು ಭಾಗವತದಲ್ಲಿ ಹೇಳಿರುವರು. ಆದುದರಿಂದ ದಾಸರಾಯರು 'ಪರಮ ಕರುಣಮಹೋದಧಿ' ಅಂದರು. 'ತನ್ನವರು ಮಾಡಿದಪರಾಧಗಳ ನೋಡದಲೆ ಸಲಹುವ' ಎಂಬೀ ವಿಷಯವನ್ನು ಹಿಂದೆ ಭೀಷ್ಮಾದಿಗಳ ಉದಾಹರಣೆ ತೋರಿಸಿ ವಿಸ್ತಾರಮಾಡಿರುವೆವು. ಇವಲ್ಲದೆ ಬಲಿಚಕ್ರವರ್ತಿಯು ದಾನವನ್ನು ಕೊಡುವಾಗ ಶುಕ್ರಾಚಾರ್ಯರು ಪ್ರತಿಬಂಧಕ ಮಾಡಿದುದಲ್ಲದೆ ಬಲಿಗೆ ಶಾಪವನ್ನು ಕೊಟ್ಟಿರುವರು. ಆದರೂ ಶ್ರೀ ಪರಮಾತ್ಮನು ಅವರು ಮಾಡಿದ ಅಪರಾಧವನ್ನು ಗಣಿಸದೆ ಅವರಲ್ಲಿ ಅನುಗ್ರಹ ಮಾಡಿದನು.

ಈಗ ಈ ಸಂಧಿಯನ್ನು ಮುಗಿಸುತ್ತಾ ಎರಡು ಪದ್ಯಗಳಿಂದ ಪರಮಾತ್ಮನನ್ನು ಸ್ತುತಿಸುತ್ತಾರೆ.

**ಮೀನ ಕೂರ್ಮ ವರಾಹ ನರಪಂ-**
**ಚಾನನಾತುಳಶೌರ್ಯ ವಾಮನ**
**ರೇಣುಕಾತ್ಮಜ ರಾವಣಾದಿನಿಶಾಚರಧ್ವಂಸಿ ॥**
**ಧೇನುಕಾಸುರಮಥನ ತ್ರಿಪುರವ**
**ಹಾನಿಗೈಸಿದ ನಿಪುಣ ಕಲಿಮುಖ**
**ದಾನವರ ಸಂಹರಿಸಿ ಧರ್ಮದಿ ಕಾಯ್ದ ಸುಜನರನಾ ॥ ೩ ॥**

ಪದ್ಯಾರ್ಥ—ಮೀನ = ಮತ್ಸ್ಯಾವತಾರವೇನು, ಕೂರ್ಮ = ಕೂರ್ಮಾವತಾರವೇನು, ವರಾಹ = ವರಾಹಾವತಾರವೇನು, ಅತುಲ (ಳ) ಶೌರ್ಯ = ಅಮಿತಪರಾಕ್ರಮಯುಕ್ತವಾದ, ನರಪಂಚಾನನ = ನರಸಿಂಹಾವತಾರವೇನು, (ಪಂಚಾನನ ವಿಸ್ತಾರವಾದ ಮುಖವುಳ್ಳ) ವಾಮನ = ವಾಮನಾವತಾರವೇನು, ರೇಣುಕಾತ್ಮಜ = ರೇಣುಕಾ ಮಗನಾಗಿ ಅವತರಿಸಿದ ಪರಶುರಾಮಾವತಾರವೇನು, ರಾವಣಾದಿ ನಿಶಾಚರಧ್ವಂಸೀ = ರಾವಣಾದಿ ರಾಕ್ಷಸರನ್ನು ಸಂಹರಿಸಿದ

ರಾಮಾವತಾರವೇನು ? ಧೇನುಕಾಸುರಮಥನ-ಧೇನುಕಾಸುರನೆಂಬ ದೈತ್ಯ ನನ್ನು ಸಂಹರಿಸಿದ ಬಲರಾಮನೊಳು ಆವಿಷ್ಟನಾದ ಶ್ರೀಕೃಷ್ಣಾವತಾರವೇ ನು ? ತ್ರಿಪುರವಹಾಸಿಗೈಸಿದ ನಿಪುಣ=ಯುಕ್ತಿಯಿಂದ ತ್ರಿಪುರವಾಸಿಗಳಾವ ದೈತ್ಯರ ಸತಿಯರ ವ್ರತಭಂಗವಮಾಡಿ ಅವರಿಗೆ ಹಾನಿಯನ್ನುಂಟುಮಾಡಿದ ಬೌದ್ಧಾವತಾರವೇನು ? ಕಲಿಮುಖದಾನವರ=ಕಲಿ=ಕಲಿಗೆ, ಮುಖ=ಅಭಿ ಮುಖರಾದ ಅಂದರೆ ಕಲಿಯುಗಾನುಗುಣವಾಗಿ ನೀಚತನದಲ್ಲಿ ಕಲಿಯನ್ನು ಅನುಸರಿಸಿದ, ದಾನವರ=ಅಸುರಾವೇಶಗಳಿಂದ ಕೂಡಿದ ಅಯೋಗ್ಯರಾದ ರಾಜರನ್ನು, ಸಂಹರಿಸಿ, ಧರ್ಮದಿ=ಧರ್ಮದಿಂದ, ಸುಜನರನ=ಭಕ್ತಜನರನ್ನು ಕಾಯ್ದ-ರಕ್ಷಿಸಿದ ಕಲ್ಕ್ಯವತಾರವೇನು ? ಹೀಗೆ ಹತ್ತು ಅವತಾರಗಳನ್ನು ಮಾಡಿದ ಮಹಿಮೆಯಿಂದ ಕೂಡಿದ ಶ್ರೀಹರಿಯನ್ನು ನಮಸ್ಕರಿಸುವೆನು.

**ಶ್ರೀಮನೋಹರ ಶಮಲವರ್ಜಿತ**
**ಕಾಮಿತಪ್ರದ ಕೈರವದಳ**
**ಶ್ಯಾಮ ಶಬಲಶರಣ್ಯ ಶಾಶ್ವತ ಶರ್ಕರಾಕ್ಷಸಖಾ ।**
**ಸಾಮಸನ್ನುತ ಸಕಲಗುಣಗಣ**
**ಧಾಮ ಶ್ರೀಜಗನ್ನಾಥವಿಠಲ**
**ಈ ಮಹಿಯೊಳವತರಿಸಿ ಸಲಹಿದ ಸಕಲ ಸುಜನರನಾ ॥೩೧॥**

ಪದ್ಯಾರ್ಥ.—ಶ್ರೀಮನೋಹರ=ಲಕ್ಷ್ಮೀದೇವಿಯ ಮನಸ್ಸನ್ನು ಪರಿ ಹರಿಸುವ, ಶಮಲವರ್ಜಿತ=ದೋಷರಹಿತನಾದ, ಕಾಮಿತಪ್ರದ=ಅಭೀಷ್ಟ ವನ್ನು ಕೊಡುವ, ಕೈರವದಳಶ್ಯಾಮ-ಕರಿದಾವರೆಯದಳದ ವರ್ಣವುಳ್ಳ ದೇ ಹದಿಂದ ಶೋಭಿಸುವ, ಶಬಲಶರಣ್ಯ=ಶಬಲ=ಬ್ರಾಹ್ಮಣಾದಿ ವರ್ಣದವರಿಗೆ ಆಶ್ರಯನಾದ, ಶಾಶ್ವತ=ಶಶ್ವದೇಕಪ್ರಕಾರನಾದ, ಶರ್ಕರಾಕ್ಷಸಖಾ=ದೇವ ತೆಗಳಿಗೆ ಸಖನಾದ, ಸಾಮಸನ್ನುತ=ಸಾಮವೇದದಿಂದ ಸ್ತುತ್ಯನಾದ ಸಕಲ ಗುಣಗಣಧಾಮ=ಸಮಸ್ತವಾದ ಸದ್ಗುಣಸಮೂಹಗಳಿಗೆ ಆಶ್ರಯಭೂತನಾ ದ ಶ್ರೀಜಗನ್ನಾಥವಿಠ್ಠಲ-ನನ್ನ ಬಿಂಬಮೂರ್ತಿಯಾದ ಶ್ರೀಜಗನ್ನಾಥವಿಠ್ಠಲ ನೆಂಬ ಶ್ರೀಪಗವಾತ್ಮನು, ಈ ಮಹಿಯೊಳವತರಿಸಿ=ಈ ಭೂಮಿಯಲ್ಲಿ ಹ ತ್ತು ರೂಪಗಳಿಂದ ಅವತರಿಸಿ, ಸಕಲಸುಜನರನ=ಸಮಸ್ತ ಯೋಗ್ಯ ಜನರ ನ್ನು, ಸಲಹಿದ=ರಕ್ಷಿಸಿರುವನು.

ತಾತ್ಪರ್ಯ.— ಯಾವ ಶ್ರೀಪರಮಾತ್ಮನು ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ರೇಣುಕಾ ಪುತ್ರನಾದ ಪರಶುರಾಮ, ರಾವಣಾದಿಗಳನ್ನು ಸಂಹರಿಸಿದ ದಶರಥರಾಮ, ಧೇನುಕಾಸುರನನ್ನು ಸಂಹರಿಸಿದ ಬಲರಾಮ ಪ್ರವಿಷ್ಟನಾದ ಶ್ರೀಕೃಷ್ಣ, ಬುದ್ಧ, ಕಲ್ಕಿ ಮೊದಲಾದ ಅವತಾರಗಳಿಂದ ಸಜ್ಜನರನ್ನು ಉದ್ಧರಿಸಿರುವನು.

ಮತ್ತೂ ಯಾವ ಪರಮಾತ್ಮನು, ಲಕ್ಷ್ಮೀಮನೋಹರನಾಗಿರುವನೋ ಪಾಪರಹಿತನೋ, ಭಕ್ತರಭೀಷ್ಟಪೂರಕನೋ, ನೀಲೋತ್ಪಲ ಪುಷ್ಪದಂತೆ ಮೈಬಣ್ಣವುಳ್ಳವನೋ, ಬ್ರಾಹ್ಮಣಾದಿ ವರ್ಣಗಳಿಂದ ಶರಣ್ಯನೋ, ಪ್ರಾರ್ಥನೆಮಾಡಿಸಿಕೊಳ್ಳಲ್ಪಡುವನೋ, ಶಬ್ದೇಕಪ್ರಕಾರನಾಗಿರುವನೋ, ದೇವತೆಗಳಿಗೆ ಸಖನಾಗಿರುವನೋ, ಸಾಮವೇದಗಳಿಂದ ಹೊಗಳಿಸಿಕೊಳ್ಳಲ್ಪಡುವನೋ, ಸಮಸ್ತವಾದ ಸದ್ಗುಣಗಣಗಳಿಗೆ ಆಶ್ರಯನಾಗಿರುವನೋ, ಯಾವನು ಈ ಭೂಮಿಯಲ್ಲಿ ಅನೇಕ ರೂಪಗಳಿಂದ ಅವತರಿಸಿ ಸಜ್ಜನರನ್ನು ರಕ್ಷಿಸುವನೋ ಅವನೇ ನನ್ನ ಬಿಂಬಮೂರ್ತಿಯಾದ ಶ್ರೀಜಗನ್ನಾಥವಿಠಲನೆಂಬ ಶ್ರೀಪರಮಾತ್ಮನು ಎಂಬ ಮಂಗಳ ಶ್ಲೋಕಗಳಿಂದ ಸಂಧಿಯನ್ನು ಪೂರೈಸಿರುವರು.

ವಿಶೇಷಾರ್ಥ.—ದಾಸರಾಯರು ಪರಮಾತ್ಮನ ದಶಾವತಾರವನ್ನು ವರ್ಣಿಸುವಾಗ ಕೃಷ್ಣಾವತಾರಕ್ಕೆ ಪ್ರತಿಯಾಗಿ "ಧೇನುಕಾಸುರಮಥನ" ಎಂದು ಹೇಳಿರುವರು. ಭಾಗವತದಲ್ಲಿ ಧೇನುಕಾಸುರನನ್ನು ಬಲರಾಮನು ಸಂಹಾರಮಾಡಿದಂತೆ ಒಪ್ಪಿದೆ. ಕೃಷ್ಣಾವತಾರ ಸೂಚಕವಾದ ಪೂತನಾ, ತೃಣಾವರ್ತ ಕಂಸ ಮೊದಲಾದವರ ಸಂಹಾರಕನೆಂದು ಹೇಳದೆ ಬಲರಾಮ ಮಹಾತ್ಮ್ಯ ಸೂಚಕವಾದ ಧೇನುಕಾಸುರ ಮಥನನೆಂದು, ದಶಾವತಾರದಲ್ಲಿ ಬಲರಾಮನನ್ನು ತೆಗೆದುಕೊಂಡು ಕೃಷ್ಣಾವತಾರವನ್ನು ಬಿಟ್ಟುದಾಗಿ ಕಾಣುತ್ತದೆ. ದಶಾವತಾರ ಮಧ್ಯದಲ್ಲಿ ರಾಮಾನುಜೀಯ ಮತದವರು "ಮತ್ಸ್ಯಃ ಕೂರ್ಮೋವರಾಹಶ್ಚ ನಾರಸಿಂಹಶ್ಚ ವಾಮನಃ ರಾಮೋರಾಮಶ್ಚ ಕೃಷ್ಣಃ ಕಲ್ಕೀಚತೇದಶ" ಎಂದು ಮತ್ಸ್ಯ ಮೊದಲು ವಾಮನಾವತಾರದವರೆವಿಗೂ ೫, ಪರಶುರಾಮ, ದಶರಥರಾಮ ಬಲರಾಮ, ಕೃಷ್ಣ, ಕಲ್ಕೀ ಇವು ೫, ಅಂತು ೧೦ ಅವತಾರಗಳೆಂದು ತೆಗೆದುಕೊಂಡಿರುವರು. ಶ್ರೀಮದಾಚಾರ್ಯರ ಮತದರೀತ್ಯಾ ಭಾರ್ಗವ, ರಾಮ, ಕೃಷ್ಣ, ಕಲೀ ಬುದ ಎಂದು

ರಾಮನನ್ನು ಬಿಟ್ಟು, ಬುದ್ಧಾವತಾರವನ್ನು ಸೇರಿಸಿಕೊಂಡು ಹತ್ತು ಅವತಾರಗಳನ್ನು ಪೂರೈಸಿರುವನು. ದಾಸರಾಯರು ಎರಡು ಮತವನ್ನು ಬಿಟ್ಟು ಬಲರಾಮ, ಬುದ್ಧ, ಕಲ್ಕಿ ಎಂದು ತೆಗೆದುಕೊಂಡು ಮುಖ್ಯವಾದ ಕೃಷ್ಣಾವತಾರವನ್ನೇ ಬಿಟ್ಟಿರುವರು. ಇದು ಶ್ರೀಮದಾಚಾರ್ಯರ ವಾಕ್ಯಕ್ಕೆ ವಿರುದ್ಧವಾಗಿ ಕಾಣುವುದಲ್ಲದೆ ದಾಸಕೂಟ ವ್ಯಾಸಕೂಟಗಳ ಭೇದವನ್ನು ಸೂಚಿಸುವುದು ಎಂದು ತಿಳಿಯಬಾರದು. ದಾಸರಾಯರು ವ್ಯಾಸಕೂಟಕ್ಕೆ ವಿರುದ್ಧವಾಗಿ ಎಂದಿಗೂ ಒಂದಕ್ಷರವನ್ನೂ ಕೂಡ ಹೇಳಲಿಲ್ಲವೆಂದೇ ನಿಶ್ಚಯವು. ಹಾಗೆಂದಮೇಲೆ ಹೀಗೆ ಹೇಳಲು ಕಾರಣವೇನೆಂದರೆ.—ಈ ಮುಂದೆ ಹೇಳುವಂಶಗಳಲ್ಲಿ ಸ್ವಲ್ಪ ಮಟ್ಟಿಗೆ ಚಿತ್ತವನ್ನು ಇಟ್ಟು ಸಾವಧಾನದಿಂದ ನೋಡಿದರೆ ವಿಷಯವು ಗೊತ್ತಾಗುವುದು. ಭಾಗವತ ಪ್ರಥಮಸ್ಕಂಧದಲ್ಲಿ ಪರಮಾತ್ಮನ ಮುಖ್ಯಾವತಾರಗಳನ್ನು ಗಣನಮಾಡಿ ಹೇಳುವಾಗ "ಏಕೋನವಿಂಶೇ ವಿಂಶತಮೇ ವೃಷ್ಣಿಷು ಪ್ರಾಪ್ಯಜನ್ಮನಿ ‖ ರಾಮಕೃಷ್ಣಾವಿತಿ ಭುವೋ ಭಗವಾನ ಹರದ್ಭರಂ ‖" ಹತ್ತೊಂಬತ್ತು ಇಪ್ಪತ್ತನೆಯ ಅವತಾರಗಳಲ್ಲಿ ಬಲರಾಮ ಕೃಷ್ಣ ಎಂಬ ರೂಪಗಳಿಂದ ವೃಷ್ಣಿವಂಶದಲ್ಲಿ ಅವತರಿಸಿ ಭೂಭಾರವನ್ನು ಹರಣಮಾಡಿದರೆಂದು ಹೇಳಿರುವರು. ಈ ವಾಕ್ಯಗಳಿಂದ ರಾಮಕೃಷ್ಣಾದಿರೂಪಗಳಂತೆ ಬಲರಾಮನನವತಾರವೂ ಕೂಡ ಪರಮಾತ್ಮನವತಾರಗಳಲ್ಲಿ ಹತ್ತೊಂಬತ್ತು ಇಪ್ಪತ್ತನೆಯದೆಂದು ಸೇರಿಸಿರುವುದರಿಂದ ಇದೊಂದು ಪರಮಾತ್ಮನ ಅವತಾರವೆಂದೇ ವ್ಯಕ್ತವಾಗುವುದು. ಹೀಗಾದರೆ ನಿರ್ಣಯದಲ್ಲಿ ಹೇಳಿರುವ ಶ್ರೀಮದಾಚಾರ್ಯರ ವಾಕ್ಯಕ್ಕೆ ಇದು ವಿರೋಧವಾಗಿದೆ. ನಿರ್ಣಯದಲ್ಲಿ ೨ನೆಯ ಅಧ್ಯಾಯ ೨೫ನೆಯ ಶ್ಲೋಕ ಪರಮಾತ್ಮನ ಮತ್ಸ್ಯ, ಕೂರ್ಮಾದಿ ಅವತಾರಗಳನ್ನು ಹೇಳುತ್ತಾ ೨೮ನೆಯ ಶ್ಲೋಕದಲ್ಲಿ "ತಥೈವ ಬಡವಾವಕ್ತ್ರಃ ಕಲ್ಕೀ ಧನ್ವಂತರಿಃ ಪ್ರಭುಃ । ಇತ್ಯಾದ್ಯಾಃ ಕೇವಲೋ ವಿಷ್ಣುರ್ನೈಷಾಂ ಭೇದಃ ಕಥಂಚನ ‖' ಎಂದು ಹೇಳಿರುವರು. ಈ ಶ್ಲೋಕಗಳ ತಾತ್ಪರ್ಯವೇನೆಂದರೆ.—ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಭಾರ್ಗವರಾಮ, ಕೃಷ್ಣ, ಬುದ್ಧ, ವೇದವ್ಯಾಸ, ಕಪಿಲ, ದತ್ತಾತ್ರೇಯ, ಋಷಭ, ಶಿಂಶುಮಾರ, ಋಷಿಪುತ್ರರಾದ ನರನಾರಾಯಣರ ಪೈಕಿ ನಾರಾಯಣ, ಹರಿ, ತಾಪಸನೆಂಬ ಮನು, ಮಹಿದಾಸ, ಹಂಸ, ಮೋಹಿನಿ, ಹಯಗ್ರೀವ, ಹೆಣ್ಣುಕುದುರೆಯ ರೂಪ, ಕಲ್ಕೀ, ಧನ್ವಂತರಿ ಈ ಅವತಾರಗಳೆಲ್ಲವು

ಪರಮಾತ್ಮನ ಸಾಕ್ಷಾದವತಾರಗಳು. ಈ ಅವತಾರಗಳಲ್ಲಿ ಪರಸ್ಪರ ಭೇದ ವನ್ನು ಎಣಿಸಬಾರದು ಎಂದು ತಿಳಿಸಿ, ತದನಂತರ, "ಗಯಶ್ಚಲಕ್ಷ್ಮಣಾ ದ್ಯಾಶ್ಚತ್ರಯೋ ರೋಹಿಣಿ ನಂದನಃ | ಪ್ರದ್ಯುಮ್ನೋ ರೌಗ್ಮಿಣೇಯಶ್ಚ ತತ್ಪು ತ್ರಶ್ಚಾನಿರುದ್ಧಕಃ | ನರಃ ಫಲ್ಗುನ ಇತ್ಯಾದ್ಯಾವಿಶೇಷಾವೇಶಿನೋಹರೇಃ ||" ಎಂದು ಪರಮಾತ್ಮನ ವಿಶೇಷಾಂಶಾವತಾರಗಳನ್ನು ಹೇಳಿರುವರು. ಇದರಲ್ಲಿ ಲಕ್ಷ್ಮಣ, ಭರತ, ಶತೃಘ್ನ, ಬಲರಾಮ ಮೊದಲಾದವರೆಲ್ಲರೂ ಪರಮಾ ತ್ಮನ ವಿಶೇಷಾಂಶಿಗಳೆಂದು ವಿಶದವಾಗುತ್ತದೆ. ಇದರಿಂದ ಬಲರಾಮನು ಪರಮಾತ್ಮನ ಶುಕ್ಲಕೇಶಾವೇಶದಿಂದ ಕೂಡಿದ ಶೇಷದೇವರೆಂದು ಭಾಗವತ ವಾಕ್ಯಗಳು ಉದ್ಧೃತವಾದುವು. ಹೀಗೆ ಒಂದು ಕಡೆಯಲ್ಲಿ ಬಲರಾಮನನ್ನು ಪರಮಾತ್ಮನ ಸಾಕ್ಷಾದವತಾರವೆಂತಲೂ ಮತ್ತೊಂದು ಕಡೆಯಲ್ಲಿ ವಿಶೇಷಾಂ ಶದವನೆಂತಲೂ ಹೇಳಿದಂತೆ ತೋರುತ್ತದೆ. ಇವೆರಡು ವಾಕ್ಯಗಳನ್ನು ಏಕ ವಾಕ್ಯವನ್ನಾಗಿ ಮಾಡುವುದಕ್ಕಾಗಿ ದಾಸರಾಯರು "ಧೇನುಕಾಸುರಮಥನ ಎಂದು ಹೇಳಿರುವರು. ಇದರ ತಾತ್ಪರ್ಯವೇನೆಂದರೆ.—ಪ್ರಲಂಬಾಸುರ, ಧೇನುಕಾಸುರ ಮೊದಲಾದವರನ್ನು ಸಂಹರಿಸಿದುದು ಕೇವಲ ಬಲರಾಮನ ವ್ಯಾಪಾರವಲ್ಲ. ಶುಕ್ಲಕೇಶಾವೇಶದಿಂದ ಬಲರಾಮನಲ್ಲಿ ಪ್ರವಿಷ್ಟನಾದ ಪರ ಮಾತ್ಮನೇ ಧೇನುಕ ಮೊದಲಾದವರನ್ನು ಸಂಹರಿಸಿದನೆಂದು ಭಾಗವತ ತಾ ತ್ಪರ್ಯದಿಂದ ವ್ಯಕ್ತವಾಗುವುದು. ಬಲರಾಮ ಪ್ರವಿಷ್ಟನಾದ ಶುಕ್ಲಕೇಶಾ ವೇಶದಿಂದ ಯಾವ ಕೃಷ್ಣನು ಧೇನುಕನನ್ನು ಮರ್ಧಿಸಿದನೋ ಅದೇ ಪರ ಮಾತ್ಮನೇ ಶ್ರೀಕೃಷ್ಣರೂಪದಿಂದ ಕಂಸಾದಿಗಳನ್ನು ಕೊಂದವನೆಂದು ತೋರಿ ಸುವುದಕ್ಕಾಗಿ ಧೇನುಕಾಸುರನನ್ನು ಕೊಂದವನು ಕೃಷ್ಣನೇ ಎಂಬ ಭಾವನೆ ಯಿಂದ ಕೃಷ್ಣಾವತಾರಕ್ಕೆ ಪ್ರತಿಯಾಗಿ ಧೇನುಕಾಸುರ ಮಥನ ಎಂದು ಹೇ ಳಿದರೆಂದು ತಿಳಿಯಬೇಕು. ಬುದ್ಧಾವತಾರವನ್ನು ಹೇಳುವಾಗ "ತ್ರಿಪುರನ ಹಾನಿಗೈಸಿದ ನಿಪುಣ' ಎಂದು ದಾಸರಾಯರು ತಿಳಿಸಿರುವರು. ಲೋಕದ ಲ್ಲಿ ಸರ್ವತ್ರ ತ್ರಿಪುರಾರಿಯೆಂದು ರುದ್ರದೇವರಿಗೆ ಹೆಸರು ಬಂದಿದೆ. ಹರಿ ವಂಶ, ಭಾರತಾದಿಗಳಲ್ಲಿಯೂ ರುದ್ರದೇವರು ತ್ರಿಪುರಾಸುರನನ್ನು ಸಂಹರಿ ಸಿದರೆಂದು ಹೇಳಿರುವರು.

ಹೀಗಿರಲು ಅಪೂರ್ವವಾಗಿ, ತ್ರಿಪುರವ ಹಾನಿಗೈಸಿದವ ಬೌದ್ಧನಾಮ ಕ ಪರಮಾತ್ಮನೆಂದು ಹೇಗೆ ಹೇಳಿದರೆಂದರೆ, ಮೊದಲು ಬ್ರಹ್ಮ ಮೊದಲಾ

ದವರ ಸಹಾಯದಿಂದ ರುದ್ರದೇವರು ತ್ರಿಪುರವನ್ನು ಸುಟ್ಟದ್ದು ನಿಜವಾದರೂ ಆ ದೈತ್ಯರೆಲ್ಲರೂ ಪುನಃ ಭೂಮಿಯಲ್ಲಿ ಹುಟ್ಟಿದರು. ಅದು ಯಾವಾಗ ಅಂದರೆ, ಪಾಂಡವರ ವಂಶೀಯರು ವ್ಯಾಸಾನುಗ್ರಹದಿಂದ ಧರ್ಮದಿಂದ ಪ್ರಜಾಪಾಲನ ಮಾಡುತ್ತಿರುವ ಸಮಯದಲ್ಲಿ ಭೂಮಿಯಲ್ಲೆಲ್ಲರೂ ಸಚ್ಛಾಸ್ತ್ರಗಳನ್ನೋದಿ ಸುಜ್ಞಾನವನ್ನು ಹೊಂದಿದ್ದ ಸಮಯದಲ್ಲಿ ದೈತ್ಯರೂ ಭೂಮಿಯಲ್ಲಿ ಹುಟ್ಟಿ ಋಷಿಗಳಿಗೆ ಗೋಚರವಾಗದೆ ಅವರ ಮಧ್ಯದಲ್ಲಿದ್ದು ಜ್ಞಾನವನ್ನು ಸಂಪಾದಿಸಿ ಕೊಂಡು ಸತ್ಸಂಪ್ರದಾಯವನ್ನು ಅನುಷ್ಠಾನಮಾಡಲಾರಂಭಿಸಿದರು. ವೇದ ವ್ಯಾಸ ದೇವರ ನಂತರವೂ ಸುತತ್ತ್ವ ವಿದ್ಯೆಯಿಂದ ಸದಾಗಮಗಳೆಲ್ಲವೂ ನಾಶ ವಾಗಿದ್ದುದರಿಂದ ದೈತ್ಯರೂ ಕೂಡ ಸದಾಗಮವನ್ನೇ ಅನುಷ್ಠಿಸಬೇಕಾಗಿ ಬಂದಿತು. ನಾಯಿಗೆ ಹವಿರ್ಭಾಗವು ಹೇಗೆ ಯೋಗ್ಯವಲ್ಲವೋ, ಅಂತ್ಯಜರಿಗೆ ವೇದ ವಾಕ್ಯವು ಹೇಗೆ ಅಶ್ರಾವ್ಯವಾದುದೋ ಹಾಗೆ ತಮಸ್ಸಿನಲ್ಲಿ ಅಪಾರದುಃಖಗಳನ್ನು ಅನುಭವಿಸಲರ್ಹರಾದ ದೈತ್ಯರು ಈ ಸದಾಗಮವನ್ನು ಸ್ವೀಕರಿಸಿದುದು ಅಸಂ ಗತವೆಂದು ದೇವತೆಗಳು ಯೋಚಿಸಿ ತಮೋಯೋಗ್ಯರಾದ ದೈತ್ಯರಿಗೆ ತಕ್ಕ ಸಾಧನವನ್ನು ಮಾಡಿಸಿ ಅವರವರ ಯೋಗ್ಯತಾನುಗುಣವಾದ ಗತಿಯನ್ನು ಕೊಡಿಸಬೇಕೆಂದು ಪರಮಾತ್ಮನನ್ನು ಬೇಡಿಕೊಂಡರು. ಪರಮಾತ್ಮನು ದೇವತೆ ಗಳಿಗೆ ಅಭಯವನ್ನಿತ್ತು ಮನೋಹರವಾದ ಶಿಶುರೂಪವನ್ನು ಧರಿಸಿದನು. ಆ ಸಮಯದಲ್ಲಿ ಭೂಮಿಯಲ್ಲಿ ಹುಟ್ಟಿದ್ದ ತ್ರಿಪುರಾಸುರರ ಪೈಕಿ ಒಬ್ಬ ಅಸು ರನು ಶುದ್ಧೋದನ ಎಂಬ ಹೆಸರಿನಿಂದ ಜನಿಸಿದ್ದನು. ಅವನು ತ್ರಿಪುರಾಸುರರ ಮೂಲಪುರುಷನು. ಅಂದರೆ ಭೂಮಿಯಲ್ಲಿ ಅವರೆಲ್ಲರಿಗೆ ಮೊದಲೇ ಹುಟ್ಟಿ ದ್ದನು. ಅವನಿಗೆ ಜಿನ ಎಂತಲೂ ಒಂದು ಹೆಸರುಂಟು. ಇವನಿಗೆ ಗಯೆ ಎಂಬ ಹೆಂಡತಿಯಲ್ಲಿ ಒಂದು ಶಿಶುವು ಹುಟ್ಟಿತು. (ಅಥವಾ ಗಯಾಕ್ಷೇತ್ರದಲ್ಲಿ ಎಂತ ಲೂ ಅರ್ಥವಾಗುವುದು.) ಶ್ರೀ ಪರಮಾತ್ಮನು ಆ ಶಿಶುವನ್ನು ದೂರಮಾಡಿ ಆ ಸ್ಥಳದಲ್ಲಿ ತಾನು ಮಲಗಿಕೊಂಡನು. ಇವನ್ನು ಆ ಶುದ್ಧೋದನನು ಅರಿಯದೆ ತನ್ನ ಮಗುವೆಂದು ಭಾವಿಸಿದನು. ಆ ಸಮಯದಲ್ಲಿ ಈ ದೈತ್ಯರು ವೈದಿಕ ಕರ್ಮವನ್ನು ಅನುಷ್ಠಾನಮಾಡುತ್ತಿದ್ದರು. ಅದನ್ನು ನೋಡಿ ಆ ಮಗುವು ಗಟ್ಟಿಯಾಗಿ ನಗಲು ದೈತ್ಯರು ಆಗಲೇ ಹುಟ್ಟಿದ ಶಿಶುವು ನಗುವುದನ್ನು ನೋಡಿ ಆಶ್ಚರ್ಯದಿಂದ ಕಾರಣವನ್ನು ಕೇಳಿದರು. ಅದಕ್ಕೆ ಶಿಶುವು ನಾನು ಸಮೀಚೀನ ವಾದ ಜ್ಞಾನೋಪದೇಶವನ್ನು ಮಾಡುವವನಾದುದರಿಂದ ನನಗೆ ಬುದ್ಧ

ನೆಂದು ಹೆಸರು. ನೀವು ಭ್ರಾಂತಿಯಿಂದ ಮಾಡುವ ವೈದಿಕ ಕರ್ಮವನ್ನು ನೋಡಿ ನನಗೆ ನಗುವು ಬಂದಿತು. ಈ ಕರ್ಮಗಳು ಎಂದಿಗೂ ಸುಖಕರವಲ್ಲ. ನನ್ನ ಉಪದೇಶದಂತೆ ನೀವು ನಡೆದರೆ ನಿಮಗೆ ಶ್ರೇಯಸ್ಸಾಗುವುದೆಂದು ಹೇಳಿ ಶಾಸ್ತ್ರವಿರುದ್ಧವಾದ ಶೂನ್ಯಮತವನ್ನು ಬೋಧಿಸಿತು. ಅದನ್ನು ದೈತ್ಯರು ನಂಬಲಿಲ್ಲ. ಆಗ ಭಗವದಾಜ್ಞಾ ಪ್ರಕಾರ ರುದ್ರಾದಿ ಸಕಲ ದೇವತೆಗಳೂ ಅಲ್ಲಿಗೆ ಬಂದು ದೈತ್ಯರಿಗೆ ಬುದ್ಧನ ವಾಕ್ಯದಲ್ಲಿ ನಂಬಿಕೆ ಹುಟ್ಟುವುದಕ್ಕಾಗಿ ತಮ್ಮ ತಮ್ಮ ಆಯುಧಗಳನ್ನು ಆ ಮಗುವಿನ ಪ್ರಯೋಗಿಸಲು ಎಲ್ಲವನ್ನೂ ಆ ಮಗುವು ನುಂಗಿಬಿಟ್ಟಿತು. ಅದರ ಮೇಲೆ ಶ್ರೀ ವಿಷ್ಣುವು ತನ್ನ ಚಕ್ರವನ್ನು ಪ್ರಯೋಗಿಸಲು ಅದನ್ನೂ ಹಿಡಿದು ತನ್ನ ಆಸನವನ್ನಾಗಿ ಮಾಡಿ ಅದರ ಮೇಲೆ ಕೂತುಕೊಂಡಿತು. ಆಗ ದೇವತೆಗಳೆಲ್ಲರೂ ಸ್ತುತಿಸಿ ನಮಸ್ಕರಿಸಿ ಹೊರಟುಹೋದರು.

ಆವಾಗ ಅಲ್ಲಿದ್ದ ದೈತ್ಯರೆಲ್ಲರೂ ಬುದ್ಧಮತವನ್ನು ಅಂಗೀಕರಿಸಿ ಪರಮಾತ್ಮನ ಮಾಯೆಯಿಂದ ಮೋಹಿತರಾಗಿ ಸದ್ಧರ್ಮಗಳನ್ನು ಬಿಟ್ಟು ಶೂನ್ಯವಾದಿಗಳಾಗಿ ತಮಸ್ಸನ್ನು ಹೊಂದಿದರು. ಇದಕ್ಕೆ ಆಧಾರವು ನಿರ್ಣಯ ೩೨ನೆಯ ಅಧ್ಯಾಯದಲ್ಲಿ "ದಗ್ಧಾಃ ಪುರಾ ಯೇ ತ್ರಿಪುರಘ್ನತ್ರೈವ ರುದ್ರೇಣ ಜಾತಾಃ ಪೃಥಿವೀತಲೇ ತೇ" ಎಂಬ ೧೪೦ನೆಯ ಶ್ಲೋಕ ಮೊದಲು ೧೫೩ನೆಯ ಶ್ಲೋಕದ ವರೆವಿಗೂ ಇದೇ ಅರ್ಥವನ್ನೇ ಹೇಳಿರುವರು. ಅದರಲ್ಲಿನ ೧೪೭ನೆಯ ಶ್ಲೋಕದಲ್ಲಿ, "ಯಸ್ತ್ರೈಪುರಾಣಾಂ ಪ್ರಥಮೋಽತ್ರ ಜಾತಃ ಶುದ್ಧೋದನೇತ್ಯೇವ ಜಿನೇತಿ ಚೋಕ್ತಃ । ಕ್ಷೇತ್ರೇ ಗಯಾಖ್ಯೇಽಸ್ಯ ಶಿಶುಂ ಪ್ರಜಾತಂ ಸಂಪ್ರಾಪ್ಯ ಮಾರೇಽತ್ರ ಬಭೂವ ವಿಷ್ಣುಃ" ಎಂದಿದೆ. ಹೀಗೆ ಬೌದ್ಧಾವತಾರದಿಂದ ತ್ರಿಪುರಾಸುರನನ್ನು ನಾಶಗೊಳಿಸಿ ಇರುವುದರಿಂದ "ತ್ರಿಪುರವ ಹಾನಿಗೈಸಿದ" ಎಂದು ಬರೆಯಲು ಆಧಾರ ದೊರಕಿತು. ಇದಲ್ಲದೆ ತ್ರಿಪುರಾಸುರರ ಹೆಂಡತಿಯರು ತಮ್ಮ ಪಾತಿವ್ರತ್ಯವನ್ನು ಪಾಲಿಸಿಕೊಂಡು ಪಾರ್ವತಿಯನ್ನು ಆರಾಧಿಸಿ ತಮಗೆ ದೀರ್ಘ ಸೌಮಂಗಲ್ಯವನ್ನು ಬೇಡಲು ಪಾರ್ವತಿಯು ನಿಮ್ಮ ಪಾತಿವ್ರತ್ಯಕ್ಕೆ ಹಾನಿಬರದೆ ಇರುವವರೆವಿಗೂ ನಿಮ್ಮ ಸೌಮಂಗಲ್ಯಕ್ಕೂ ಹಾನಿ ಇಲ್ಲ. ವ್ರತ ಭಂಗವಾದರೆ ನಿಮಗೆ ವೈಧವ್ಯವು ಪ್ರಾಪ್ತವಾಗುವುದೆಂದು ವರವನ್ನಿತ್ತಳು. ಈ ವರದಿಂದ ತ್ರಿಪುರಾಸುರರು ಅವಧ್ಯರಾಗಿರಲು ಶ್ರೀ ಪರಮಾತ್ಮನು ಬೌದ್ಧರೂಪದಿಂದ ಆ ಸ್ತ್ರೀಯರನ್ನು ಮೋಹಿಸಿ ಅವರ ವ್ರತವನ್ನು

ಭಂಗಮಾಡಿದನು. ಅದರಿಂದ ತ್ರಿಪುರವಾಸಿಗಳಾದ ಅಸುರರು ನಾಶಹೊಂದಿದ ರೆಂದು ಒಂದು ಇತಿಹಾಸವಿರುವುದು.

ಇದಕ್ಕೆ ಕನಕದಾಸರು ತಮ್ಮ ಕೀರ್ತನೆಯಲ್ಲಿ ಪರಮಾತ್ಮನ ದಶಾವ ತಾರವನ್ನು ಮೂರು ಚರಣಗಳಿಂದ ಸ್ತುತಿಸಿ ಇರುವರು. ಅದರಲ್ಲಿ ಬೌದ್ಧಾವ ತಾರವನ್ನು ಸ್ತುತಿಸಿದ ಪ್ರಕರಣ ಪದದ ಮೂರನೆಯ ಚರಣ.

ರಾಗ—ಆನಂದ ಭೈರವಿ—ತಾಳ ರೂಪಕ.

"ಚಿತ್ತಜಕೋಟಿ ಲಾವಣ್ಯ ಮುಪ್ಪುರದ ಉತ್ತಮ ಸ್ತ್ರೀಯರ ವ್ರತ ವಳಿದೇ, ಮತ್ತೆ ಕಲ್ಕಿಯಾಗಿ ಮಧುಪರ ಕೆಡಹೀದ ಹತ್ತಾವತಾರದ ಹರಿ ಯೆಂಬೆನಲ್ಲದೆ । ಬತ್ತಲೆ ನಿಂತಿವನೆಂದೆನೆ, ತೇಜಿಯನೇರಿ ವತ್ತಿಹಾರಿದನೆಂದೆನೆ, ಭಾರೀ ಭಾರಿಗೆ ಸತ್ತುಹುಟ್ಟಿದವನೆಂದೆನೇ ಆದಿಕೇಶವ । ಭಕ್ತವತ್ಸಲನೆಂದು ಪೊಗಳುವೆನಲ್ಲದೆ ನಿನ್ನ ನಾನೇನೆಂದೆನೋ ರಂಗಯ್ಯ ರಂಗ ನಿನ್ನ" ಎಂದು ಹೇಳಿರುವರು. ಇದರಲ್ಲಿನ "ಮುಪ್ಪುರದ ಉತ್ತಮ ಸ್ತ್ರೀಯರ ವ್ರತವಳಿದೆ" ಎಂಬ ವಾಕ್ಯವೇ ಮೇಲಿನ ಇತಿಹಾಸವನ್ನು ಸೂಚಿಸುವುದು. ಈ ಕಾರಣ ದಿಂದಲೂ ಬೌದ್ಧಾವತಾರದಿಂದ ತ್ರಿಪುರಾಸುರನನ್ನು ನಾಶಗೈಸಿದನೆಂದು ಹೇಳ ಬಹುದು. "ಕಲಿಮುಖ ದಾನವರ ಸಂಹರಿಸಿ ಧರ್ಮದಿ ಕಾಯ್ದೆ ಸುಜನರನ" ಇದು ಕಲ್ಕ್ಯವತಾರವನ್ನು ಸೂಚಿಸುವುದು.

ಭಾಗವತ ದ್ವಾದಶಸ್ಕಂಧ ೨ನೆಯ ಅಧ್ಯಾಯದಲ್ಲಿ "ಇತ್ಥಂ ಕಲಾ ಗತೇ ಪ್ರಾಯೇ ಜನೇಷು ಪರಧರ್ಮಸು । ಧರ್ಮತ್ರಾಣಾಯ ಸತ್ವೇನ ಭಗವಾ ನವತರಿಷ್ಯತಿ ॥ ಶಂಬಲಾಗ್ರಾಮಮುಖ್ಯಸ್ಯ ಬ್ರಾಹ್ಮಣಸ್ಯ ಮಹಾತ್ಮನಃ । ಭವತೇ ವಿಷ್ಣುಯಶಸಃ ಕಲ್ಕಿಃ ಪ್ರಾದುರ್ಭವಿಷ್ಯತಿ ॥ ಅಶ್ವಮಾಶುಗಮಾ ರುಹ್ಯ ದೇವದತ್ತಂ ಜಗತ್ಪತಿಃ । ಅಸಿನಾ ಸಾಧುದಮನಮಷ್ಟೈಶ್ವರ್ಯಗುಣಾ ನ್ವಿತಃ ॥ ವಿಚರನ್ನಸಿಮಾನ್ ಕ್ಷೋಣ್ಯಾಂ ಹಯೇನಾಪ್ರತಿಮದ್ಯುತಿಃ । ನೃಪ ಲಿಂಗಚ್ಛದೋ ದಸ್ಯೂನ್ಕೋಟಿಶೋ ನಿಹನಿಷ್ಯತಿ" ॥ ಹೀಗೆ ಪಾಪಿಗಳಿಂದ ಕೂಡಿದ ಕಲಿಯುಗವು ಪ್ರಾಯಶಃ ಕೊನೆಗಾಣುತ್ತಿರಲಾಗಿ ಜನರೆಲ್ಲರೂ ಮ್ಲೇಂಚ್ಛಾಚಾರಿಗಳಾಗಿರುವುದನ್ನು ತಿಳಿದು ಶ್ರೀ ಪರಮಾತ್ಮನು ಧರ್ಮವನ್ನು ರಕ್ಷಿಸುವುದಕ್ಕಾಗಿ ಭೂಮಿಯಲ್ಲಿ ಅವತರಿಸುವನು. ಶಂಬಲಗ್ರಾಮವಾಸಿಗಳ ಪೈಕಿ ಮುಖ್ಯಸ್ಥನಾಗಿ ಮಹಾತ್ಮನಾದ ವಿಷ್ಣುಯಶಸ್ಸೆಂಬ ಬ್ರಾಹ್ಮಣನ ಮನೆಯಲ್ಲಿ ಕಲ್ಕೀ ಎಂಬ ಹೆಸರಿನಿಂದ ಪರಮಾತ್ಮನು ಅವತರಿಸಿ ಅತಿ ವೇಗ

ದಿಂದ ಓಡುವ 'ದೇವದತ್ತ' ಎಂಬ ಕುದುರೆಯ ಮೇಲೆ ಕೂತುಕೊಂಡು ಅಷ್ಟೈಶ್ವರ್ಯದಿಂದ ಕೂಡಿ ಖಡ್ಗಪಾಣಿಯಾಗಿ ಭೂಮಂಡಲದಲ್ಲಿ ತಿರುಗುತ್ತಾ ರಾಜವೇಷಧಾರಿಗಳಾದ ಕಳ್ಳರುಗಳ ಕೋಟ್ಯಾನುಕೋಟಿಗಳನ್ನು ಸಂಹರಿಸುವನು. ಆಗ ಕೃತಯುಗವು ಹುಟ್ಟುವುದು. ಕ್ರಮವಾಗಿ ನಾಲ್ಕುಪಾದ ಧರ್ಮವನ್ನು ಸ್ಥಾಪಿಸುವನು ಎಂದು ಹೇಳಿರುವರು.

ದಾಸರಾಯರ 'ಕಲಿಮುಖದಾನವರ ಸಂಹರಿಸಿ' ಎಂಬ ವಾಕ್ಯಗಳನ್ನು ಆಲೋಚಿಸಿದರೆ ಕಲಿ ಮೊದಲಾದ ದೈತ್ಯರನ್ನು ಕೊಂದವನೆಂಬ ಅರ್ಥ ಕಾಣುವುದು. ಮೇಲಿನ ಭಾಗವತ ವಾಕ್ಯದಲ್ಲಿ ರಾಜವೇಷಧಾರಿಗಳಾದ ಕಳ್ಳರನ್ನು ಎಂದರ್ಥವಾಗುವುದು. ಇವೆರಡನ್ನು ಸಮಂಜಸಮಾಡುವುದಕ್ಕಾಗಿ 'ಕಲಿಮುಖ' ಅಂದರೆ ಕಲಿಗೆ ಅಭಿಮುಖರು ಎಂದರ್ಥಮಾಡಲ್ಪಟ್ಟಿತು. ಅಂದರೆ ಕಲಿಯುಗಾನುಗುಣವಾಗಿ ಅಸುರಾವೇಶ ಬಲದಿಂದ ಭೂಮಿಯಲ್ಲಿ ಹುಟ್ಟಿ ಪಾಪನಿರತರಾಗಿ ರಾಜರೆಂದು ಹೆಸರು ಪಡೆದ ಕಳ್ಳರನ್ನು ಸಂಹರಿಸಿದನೆಂದು ತಾತ್ಪರ್ಯ. 'ಶರ್ಕರಾಕ್ಷಸಖ' ಎಂಬಲ್ಲಿ ಶರ್ಕರಾಕ್ಷಸ = ಸೂಕ್ಷ್ಮ ದೃಷ್ಟಿ ಉಳ್ಳವರು (ದೇವತೆಗಳು ಎಂದು) ಭಾಗವತ ಶ್ರುತಿ ಗೀತಾ ತಾತ್ಪರ್ಯದಲ್ಲಿ ಅರ್ಥಮಾಡಿರುವರು. ಆದುದರಿಂದ ಶರ್ಕರಾಕ್ಷಸಖ ಅಂದರೆ ದೇವತೆಗಳ ಸಖನೆಂದು ಅರ್ಥವು. ಎಲ್ಲಾ ವೇದಗಳೂ ಪರಮಾತ್ಮನನ್ನೇ ಸ್ತೋತ್ರ ಮಾಡುತ್ತಿದ್ದರೂ "ಸಾಮಸನ್ನುತ" ಸಾಮವೇದದಿಂದ ಸ್ತುತ್ಯನೆಂದು ಏತಕ್ಕೆ ಹೇಳಿದರೆಂದರೆ, ವೇದಗಳೆಲ್ಲವೂ ತನ್ನನ್ನು ಕೊಂಡಾಡಿದರೂ ಗಾನರೂಪವಾದ ಸಾಮವೇದದಲ್ಲಿ ವಿಶೇಷವಾದ ಭಗವನ್ಮಹಿಮೆ ಇರುವುದರಿಂದ ಸಾಮಗಾನ ಪ್ರಿಯನೆಂದು ಪರಮಾತ್ಮನಿಗೆ ಹೆಸರು ಬಂದಿರುವುದು. ಮತ್ತು ಗೀತೆಯಲ್ಲಿ "ವೇದಾನಾಂ ಸಾಮವೇದೋಽಸ್ಮಿ" ವೇದಗಳ ಪೈಕಿ ಸಾಮವೇದದಲ್ಲಿ ನನ್ನ ವಿಭೂತಿಯನ್ನು ತಿಳಿ ಎಂದು ಶ್ರೀಕೃಷ್ಣವಾಕ್ಯವು.

**ಇಂತು ಎರಡನೆಯ ಸಂಧಿಯ ಟಿಪ್ಪಣಿಯು ಮುಗಿದುದು.**



## ಮೂರನೆಯ ಸಂಧಿ.

### ವ್ಯಾಪ್ತಿಸಂಧಿ

ಎರಡನೆಯ ಸಂಧಿಯಲ್ಲಿ "ಚೇತನಾಚೇತನವಿಲಕ್ಷಣ, ನೂತನ ಪದಾರ್ಥಗಳೊಳಗೆ ಬಲುನೂತನ" ಎಂದು ೨೨ನೆಯ ಪದ್ಯದಲ್ಲಿ ಹೇಳಿದ ವ್ಯಾಪ್ತಿ ವಿಷಯವನ್ನು ಈ ಸಂಧಿಯಲ್ಲಿ ವಿಸ್ತಾರವಾಗಿ ಹೇಳಲಾರಂಭಿಸಿ ಮೊದಲನೆಯ ಪದ್ಯದಿಂದ ಈ ಸಂಧಿಯ ಸಾರಾಂಶವನ್ನು ಹೇಳುತ್ತಾರೆ.

**ಪುರುಷ ರೂಪತ್ರಯ ಪುರಾತನ**
**ಪುರುಷ ಪುರುಷೋತ್ತಮ ಕ್ಷರಾಕ್ಷರ**
**ಪುರುಷಪೂಜಿತಪಾದ ಪೂರ್ಣಾನಂದ ಜ್ಞಾನಮಯ।**
**ಪುರುಷ ಸೂಕ್ತಸುಮೇಯ ತತ್ತ**
**ತ್ಪುರುಷ ಹೃತ್ಪುಷ್ಕರ ನಿಲಯ ಮಹಾ**
**ಪುರುಷ ಜಾಂಡಾಂತರದಿ ವ್ಯಾಪ್ತ ನಿರ್ಲಿಪ್ತ ॥**

**॥ ಸಂಧಿ ಸೂಚನೆ ॥**

ಪದ್ಯಾರ್ಥ:— ಪುರುಷರೂಪತ್ರಯ=ಮೂರು ಪುರುಷ ರೂಪಗಳನು ಧರಿಸಿದ, ಪುರಾತನ ಪುರುಷ=ಆದಿ ಪುರುಷನಾದ, ಪುರುಷೋತ್ತಮ=ಕ್ಷರಾಕ್ಷರ ಪುರುಷರಲ್ಲಿ ಶ್ರೇಷ್ಠನಾದ, ಕ್ಷರಾಕ್ಷರ ಪುರುಷ ಪೂಜಿತಪಾದ=ಕ್ಷರ=ಕ್ಷರಶಬ್ದ ವಾಚ್ಯರು=ಬ್ರಹ್ಮಾದಿಗಳು, ಅಕ್ಷರ=ಅಕ್ಷರ ಶಬ್ದ ವಾಚ್ಯಳು ರಮಾ, ಪುರುಷ=ಈ ಎರಡುವಿಧ ಪುರುಷ ಶಬ್ದ ವಾಚ್ಯರಿಂದಲೂ, ಪೂಜಿತಪಾದ=ಪೂಜಿತವಾದ ಪಾದಗಳುಳ್ಳ, ಪೂರ್ಣಾನಂದ ಜ್ಞಾನಮಯ-ಪೂರ್ಣ=ಪ್ರಚುರವಾದ, ಆನಂದ=ಆನಂದವೇನು, ಜ್ಞಾನ=ಜ್ಞಾನವೇನು ; ಇವುಗಳೇ ಮಯ=ಸ್ವರೂಪವಾಗಿವುಳ್ಳ, ಪುರುಷಸೂಕ್ತ ಸುಮೇಯ-ಪುರುಷಸೂಕ್ತ=ಪುರುಷಸೂಕ್ತದಿಂದ, ಸು=ಚೆನ್ನಾಗಿ, ಮೇಯ=ತಿಳಿಸಿಕೊಳ್ಳಲ್ಪಡುವ, ತತ್ತತ್ಪುರುಷ ಹೃತ್ಪುಷ್ಕರ ನಿಲಯ=ತತ್ತತ್ಪುರುಷ-ಕ್ಷರಾಕ್ಷರ, ಪುರುಷ ಶಬ್ದ ವಾಚ್ಯರಾದ ರಮಾಬ್ರಹ್ಮಾದಿ ಸಕಲ ಪುರುಷರ ಮಧ್ಯದಲ್ಲಿ ಪ್ರತಿಯೊಬ್ಬ ಪುರುಷರುಗಳ ಹೃತ್ಪುಷ್ಕರ=ಹೃದಯ ಕಮಲವೇ, ನಿಲಯ-ಮನೆಯಾಗಿ ಉಳ್ಳ. ಮಹಾಪುರುಷ ಜಾಂಡಾಂತರ=ಮಹಾಪುರುಷ=ಪುರುಷ ಶ್ರೇಷ್ಠನಾದ ಶ್ರೀ ಪರಮಾತ್ಮನಿಂದ, ಜ=ಉತ್ಪನ್ನವಾದ, ಅಂಡ=ಬ್ರಹ್ಮಾಂಡದ (ಅಂತ

ರದಿ)=ಒಳಭಾಗದಲ್ಲಿಯೂ (ಬಹಿರದಿ)=ಹೊರಭಾಗದಲ್ಲಿಯೂ, ವ್ಯಾಪ್ತ=ವ್ಯಾಪ್ತನಾಗಿದ್ದರೂ, ನಿರ್ಲಿಪ್ತ=ಅದರ ಸಂಬಂಧವಿಲ್ಲದೆ ಇರುವವನು ||೧||

ತಾತ್ಪರ್ಯ:—ಶ್ರೀ ಪರಮಾತ್ಮನು ಸೃಷ್ಟಿಕಾಲದಲ್ಲಿ ಮೂರು ಪುರುಷರೂಪಗಳನ್ನ ಸ್ವೀಕರಿಸಿದವನು. ಪುರಾಣ ಪುರುಷನು. ರಮಾ ಬ್ರಹ್ಮಾದಿ ಸಕಲ ದೇವದೈತ್ಯ ಉರಗ ಗರುಡ ಗಂಧರ್ವ ಜೀವರಾಶಿಗಳಿಗಿಂತಲೂ ಉತ್ತಮನು ಕ್ಷರಾಕ್ಷರ ಪುರುಷರಾದ ರಮಾಬ್ರಹ್ಮಾದಿಗಳಿಂದ ಪೂಜಿತವಾದ ಪಾದಗಳುಳ್ಳವನು. ಪೂರ್ಣಾನಂದ ಜ್ಞಾನಸ್ವರೂಪನು. ಪುರುಷ ಸೂಕ್ತದಿಂದ ತಿಳಿದುಕೊಳ್ಳಲು ಅರ್ಹವಾದ ಸ್ವರೂಪಉಳ್ಳವನು. ಆಯಾ ಪುರುಷರ ಹೃದಯಕಮಲದಲ್ಲಿ ವಾಸವಾಗಿರುವನು. ಬ್ರಹ್ಮಾಂಡದ ಒಳಗೂ ಹೊರಗೂ ಸಹ ಸರ್ವತ್ರ ವ್ಯಾಪ್ತನಾಗಿದ್ದರೂ ನಿರ್ಲಿಪ್ತನಾಗಿರುವನು.

ವಿಶೇಷಾರ್ಥ.—'ಪುರುಷರೂಪತ್ರಯ' ಶ್ರೀ ಪರಮಾತ್ಮನು ಮೂರು ಪುರುಷರೂಪಗಳನ್ನು ಸ್ವೀಕರಿಸಿದುದು ಯಾವ ಕಾಲದಲ್ಲಿ ಅಂದರೆ:—ಭಾಗವತ ತೃತೀಯಸ್ಕಂಧದಲ್ಲಿ ಆರನೆಯ ಅಧ್ಯಾಯದಲ್ಲಿ (ಕೆಲವು ಗ್ರಂಥಗಳಲ್ಲಿ ಇದು ಐದನೆಯ ಅಧ್ಯಾಯವಾಗುತ್ತೆ) "ಭಗವಾನೇಕ ಆಸೇದಮಗ್ರ ಆತ್ಮಾತ್ಮನಾಂ ವಿಭುಃ||' ಸಕಲ ಜೀವರಾಶಿಗಳಿಗೂ ಪ್ರಭುವಾದ ಶ್ರೀ ಪರಮಾತ್ಮನು, ಸೃಷ್ಟಿಗೆ ಪೂರ್ವದಲ್ಲಿ ತಾನು ಒಬ್ಬನೇ ಇರುತ್ತಿದ್ದನು. ಎಂದು ಉಪಕ್ರಮಿಸಿ, ಶ್ರೀ ಪರಮಾತ್ಮನು ಜಗತ್ತನ್ನು ಸೃಷ್ಟಿಸಬೇಕೆಂದು ಯೋಚಿಸಿದನೆಂಬ ವಿಷಯವನ್ನು ೨-೩ನೆ ಶ್ಲೋಕಗಳಿಂದ ಹೇಳಿದರು ೪ನೆಯ ಶ್ಲೋಕ 'ಕಾಲವೃತ್ಯಾಂತು ಮಾಯಾಯಾಂ ಗುಣಮಯ್ಯಾ ಮಧೋಕ್ಷಜಃ| ಪುರುಷೇಣಾತ್ಮ ಭೂತೇನ ವೀರ್ಯಮಾಧತ್ತ ವೀರ್ಯವಾನ್ ತತೋಭವನ್ಮಹತತ್ವಮವ್ಯಕ್ತಾತ್ಕಾಲ ಚೋದಿತಾತ್||' ಕಾಲಾನುಗುಣವಾಗಿ ಭಗವತ್ಸೇವಾ ಮಾಡುತ್ತಿರುವ ಸತ್ವರಜಸ್ತಮೋಗುಣಾತ್ಮಕಳಾದ ಮಾಯಾನಾಮಕಳಾದ ಪ್ರಕೃತಿಯಲ್ಲಿ ಸ್ವಯಂ ಪುರುಷರೂಪವನ್ನ ಸ್ವೀಕರಿಸಿದ ಶ್ರೀ ಪರಮಾತ್ಮನು ವೀರ್ಯದಾನ ಮಾಡಿದನು ಆಗ ಕಾಲಪ್ರೇರಿತವಾದ ಅವ್ಯಕ್ತ ತತ್ವ ಭೂತಳಾದ ಪ್ರಕೃತಿಯು ದೆಶೆಯಿಂದ ಮಹತ್ತತ್ವವು ಹುಟ್ಟಿತು ಎಂದು ಹೇಳಿರುವರು. ಹೀಗೆ ಪ್ರಥಮಸೃಷ್ಟಿಕಾಲದಲ್ಲಿ ಮಹತ್ತತ್ವಾದಿಗಳನ್ನು ಸೃಷ್ಟಿಸಲು ತಗೆದುಕೊಂಡ ರೂಪವೇ ಮೊದಲನೆಯ ಪುರುಷರೂಪವು. ತದನಂತರ ಮಹತ್ತತ್ವದ ದೆಶೆಯಿಂದ ವೈಕಾರಿಕ ತೈಜಸ, ತಾಮಸವೆಂಬ ಮೂರು ವಿಧ

ವಾದ ಅಹಂಕಾರ ತತ್ವವು ಹುಟ್ಟಿತು. ಅದರ ದೆಶೆಯಿಂದ ಪಂಚಮಹಾ ಭೂತಗಳು, ತನ್ಮಾತ್ರಾಗುಣಗಳು ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು ಚಿತ್ತಬುದ್ಧಿ, ಮನಸ್ಸು, ಅಹಂಕಾರಗಳೆಂಬ ೨೪ ತತ್ವಗಳೂ ತತ್ವಾಭಿಮಾನಿ ದೇವತೆಗಳೂ ಹುಟ್ಟಿದರು. ಆ ದೇವತೆಗಳು ಎಲ್ಲರೂಕೂಡಿ ಒಂದು ವಾಸ ಸ್ಥಾನವನ್ನು ಸೃಷ್ಟಿಸಲು ಪ್ರಯತ್ನಮಾಡಿ ಸಾಧ್ಯವಾಗದೆ ಪರಮಾತ್ಮನನ್ನು ಸ್ತೋತ್ರಮಾಡಿದ ವಿಷಯವನ್ನು ಈ ಅಧ್ಯಾಯದ ಶೇಷದಿಂದ ಹೇಳಿರುವರು ಆರನೆಯ ಅಧ್ಯಾಯದಲ್ಲಿ ಹೀಗೆ ಶ್ರೀ ಪರಮಾತ್ಮನು ತತ್ವಾಭಿಮಾನಿ ದೇವತೆ ಗಳಿಂದ ಸ್ತುತ್ಯಮಾನನಾಗಿ ಚಿತ್ತಾಭಿಮಾನಿಯಾದ ಶ್ರೀ ವಾಯುದೇವರಿಂದ ಕೂಡಿ ೨೩ ತತ್ವಗಳನ್ನು ಒಂದೇ ಕಾಲದಲ್ಲಿ ಪ್ರವೇಶಿಸಿ ಅವರೊಳಗಿದ್ದು ಪ್ರೇ ರಣೆಮಾಡಿದನು. 'ಪ್ರಬುದ್ಧ ಕರ್ಮಾದ್ಯೈವೇನ ತ್ರಯೋವಿಂಶತಿಕೋಗಣಃ| ಪ್ರೇರಿತೋ ಜನಯತ್ ಸ್ವಾಭಿರ್ಮಾತ್ರಾಭಿರಧಿ ಪೂರುಷಂ ಹಿರಣ್ಮಯಃ ಸಪು ರುಷಃ ಸಹಸ್ರ ಪರಿವತ್ಸರಾ‌ನ್ ಅಂಡಕೋಶ ಉವಾಸಾಪ್ಸು ಸರ್ವ ಸತ್ವೋಪ ಬೃಂಹಿತಃ||' ಪರಮಾತ್ಮನ ಪ್ರವೇಶದಿಂದ ಉದ್ಬೋಧಿತವಾದ ಈ ೨೩ ತತ್ವ ಗಣವು ಭಗವತ್ಪ್ರೇರಣೆಯಿಂದಲೂ. ತಮ್ಮ ಮಾತ್ರಾ ಗುಣಗಳ ಸಹಾಯ ದಿಂದಲೂ ಒಂದು ಪುರುಷರೂಪವನ್ನು ಸೃಷ್ಟಿಸಿತು. ಆ ಬಂಗಾರಮಯವಾದ ಪುರುಷರೂಪವೇ ಬ್ರಹ್ಮಾಂಡವು. ಪರಮಾತ್ಮನು ತಾನೂ ಪುರುಷರೂಪ ವನ್ನು ಧರಿಸಿ ಬ್ರಹ್ಮಾಂಡದೊಳಗಿದ್ದು ಒಂದು ಸಹಸ್ರ ವರ್ಷ ನೀರಿನೊಳಗೆ ವಾಸವಾಗಿದ್ದನು. ತದನಂತರ ಬ್ರಹ್ಮಾಂಡವನ್ನು ೧೪ ಲೋಕಗಳನ್ನಾಗಿ ಭಾಗಮಾಡಿದನು. ಎಂದು ಹೇಳಿರುವರು. ಇದರಿಂದ ಬ್ರಹ್ಮಾಂಡ ಪ್ರವಿ ಷ್ಟವಾದ ಪುರುಷರೂಪವು ಎರಡನೆಯದೆಂದು ಸ್ಪಷ್ಟವಾಯಿತು.

ಮೂರನೆಯ ಪುರುಷರೂಪವಾವುದೆಂದರೆ ಪ್ರಥಮಸ್ಕಂಧದಲ್ಲಿ 'ಜಗೃ ಹೇಪೌರುಷಂ ರೂಪಂ ಭಗವಾನ್ಮಹದಾದಿಭಿಃ | ಸಂಭೂತಂ ಷೋಡಶಕಲ ಮಾದೌ ಲೋಕ ಸಿಸೃಕ್ಷಯಾ | ಯಸ್ಯಾಂಭಸಿ ಶಯಾನಸ್ಯ ಯೋಗನಿದ್ರಾಂ ವಿತನ್ವತಃ| ನಾಭಿ ಹ್ರದಾಂಬುಜಾದಾಸೀದ್ಬ್ರಹ್ಮಾ ವಿಶ್ವಸೃಜಾಂ ಪತಿಃ|| ಪಶ್ಯಂತದೋರೂಪ ಮದಭ್ರಚಕ್ಷುಷಃ ಸಹಸ್ರಪಾದೋರು ಭುಜಾನನಾದ್ಭು ತಂ| ಸಹಸ್ರ ಮೂರ್ಧ ಶ್ರವಣಾಕ್ಷಿನಾಸಿಕಂ ಸಹಸ್ರ ಮೌಲ್ಯಂಬರ ಕುಂಡ ಲೊಲ್ಲಸತ್ ||' ಸೃಷ್ಟಿಕಾಲದಲ್ಲಿ ಸ್ಥೂಲಸೃಷ್ಟಿಯನ್ನು ಮಾಡುವುದಕ್ಕಾಗಿ ಮಹತ್ತತ್ವ ಮಹಾಭೂತಗಳು ೫, ಜ್ಞಾನೇಂದ್ರಿಯಗಳು ೫, ಕರ್ಮೇಂದ್ರಿಯ

ಗಳು ೫, ಮಹತ್ತತ್ವಾದಿ ೧೬ ಕಲೋಪೇತವಾದ ಪುರುಷ ಸಂಬಂಧವಾದ ರೂಪವನ್ನು ಧರಿಸಿದನು. ಯಾವ ಪುರುಷರೂಪಿಯಾದ ಶ್ರೀ ಪರಮಾತ್ಮನು ಪ್ರಳಯೋದಯಕಾಲದಲ್ಲಿ ಶಯನಿಸಿ ಯೋಗನಿದ್ರೆಯನ್ನು ಪ್ರಕಟಿಸಿ ನಿದ್ರೆಯನ್ನು ಮುಗಿಸುತ್ತಿರುವ ಸಮಯದಲ್ಲಿ ನಾಭಿ ಎಂಬ ಮಡುವಿನಿಂದ ಉತ್ಪನ್ನವಾದ ಕಮಲದ ದೆಶೆಯಿಂದ ಪ್ರಜಾ ಸೃಷ್ಟಿಕರ್ತನಾದ ಬ್ರಹ್ಮದೇವರು ಉತ್ಪನ್ನರಾದರೋ ಅಂತಹ 'ಸಹಸ್ರ ಶೀರ್ಷಾಪುರುಷಃ' ಎಂಬ ಪುರುಷ ಸೂಕ್ತದಲ್ಲಿ ಹೇಳಿದಂತೆ ಸಹಸ್ರಾರು ಪಾದಗಳು, ತೊಡೆಗಳು, ಕಿವಿಗಳು ಕಣ್ಣುಗಳು ಮೂಗುಗಳಿಂದ ಕೂಡಿ ಸಹಸ್ರಾರು ಕಿರೀಟಗಳು ವಸ್ತ್ರಗಳು ಕುಂಡಲಾದಿಗಳಿಂದ ಶೋಭಿಸುವ ಶ್ರೀ ಪರಮಾತ್ಮನ ಪುರುಷರೂಪವನ್ನು ಅಲ್ಪಜ್ಞಾನಿಗಳಲ್ಲದ ಮಹಾತ್ಮರಾದ ಬ್ರಹ್ಮಾದಿಗಳು ಈಗಲೂ ನೋಡುತಿರುವರು ಎಂದು ಹೇಳಿರುವರು. ಹೀಗೆ ಮಹತ್ತತ್ವಾದಿಗಳ ಉತ್ಪತ್ತಿಗೆ ಕಾರಣವಾದ ಪುರುಷರೂಪ ೧. ಬ್ರಹ್ಮಾಂಡ ಪ್ರವಿಷ್ಟರೂಪ ೨. ನಾಭಿ ಕಮಲದಿಂದ ಬ್ರಹ್ಮದೇವರನ್ನು ಪಡೆದು ಪದ್ಮನಾಭನೆಂಬ ನಾಮವನ್ನು ಪಡೆದ ಪುರುಷ ಸೂಕ್ತ ಪ್ರತಿಪಾದ್ಯರೂಪ ೩ ಹೀಗೆ ಪುರುಷರೂಪತ್ರಯವನ್ನು ಭಾಗವತದಲ್ಲಿ ಸ್ಪಷ್ಟಮಾಡಿರುವರು. ಇದೇ ವಿಷಯದಲ್ಲಿ 'ಪ್ರಥಮಂವ ಹತಃಸ್ರಷ್ಟು ದ್ವಿತೀಯಂ ತ್ವಂಡ ಸಂಸ್ಥಿತಂ। ತೃತೀಯಂ ದೇಹಿನಾಂದೇಹೇ' ಎಂದು ವಿಷ್ಣು ಪುರಾಣವಚನವಿರುವುದು ಈ ವಾಕ್ಯದಲ್ಲಿ ಮೊದಲನೆಯದು ಮಹತ್ತತ್ವವನ್ನು ಸೃಷ್ಟಿಸಿದ ರೂಪವೆಂತಲೂ ಎರಡನೆಯದು ಬ್ರಹ್ಮಾಂಡ ಪ್ರವಿಷ್ಟವಾದುದೆಂತಲೂ ಹೇಳಿರುವರು ಈ ಎರಡು ರೂಪಗಳ ವಿಷಯವು ಭಾಗವತ ವಾಕ್ಯಕ್ಕೆ ಸರಿಹೋಯಿತು. ಮೂರನೆಯದು ಮಾತ್ರ 'ದೇಹಿನಾಂ ದೇಹೇ' ಎಲ್ಲಾ ದೇಹಿಗಳ ದೇಹದಲ್ಲಿ ಪ್ರವಿಷ್ಟವಾದ ಪುರುಷರೂಪವೆಂದಾಗುವದು. ಭಾಗವತದಲ್ಲಿ ಬ್ರಹ್ಮದೇವರಿಗೆ ಮೂಲಭೂತವಾದ ಶರೀರವೆಂದು ಹೇಳಿರುವರು,

ಈ ವಾಕ್ಯಗಳಿಗೆ ಪರಸ್ಪರ ವಿರೋಧ ಬರುವುದೆಂದರೆ ಈ ವಿಷಯದಲ್ಲಿ ಭಾಗವತ ಪ್ರಥಮಸ್ಕಂಧದ ಇದೇ ಪ್ರಕರಣದಲ್ಲಿ "ಏತನ್ನಾನಾವತಾರಾಣಾಂ ನಿದಾನಂ ಬೀಜಮವ್ಯಯಂ। ಯಸ್ಯಾಂಶಾಂಶೇನ ಸೃಜ್ಯಂತೆ ದೇವತಿಯಜನರಾದಯಃ॥" ನಾಭಿಯಲ್ಲಿ ಕಮಲವಿದ್ದುದರಿಂದ ಪದ್ಮನಾಭನೆಂಬ ಹೆಸರುಳ್ಳ ಈ ಪುರುಷರೂಪವು ಎಲ್ಲಾ ಅವತಾರಗಳಿಗೂ ಬೀಜಭೂತವಾಗಿಯೂ

ಶಾಶ್ವತವಾದುದಾಗಿಯೂ ಆಗಿರುವುದು. ಈ ಪರಮಾತ್ಮನ ಅಂಶಾಂಶಿ ಗಳಿಂದಲೇ ದೇವತೆಗಳು ಪಶು ಪಕ್ಷಿ ಮನುಷ್ಯಾದಿಗಳು ಸೃಷ್ಟರಾಗಿರುವರು ಎಂದು ಹೇಳಿರುವರು. ಇದರಿಂದ ರಮಾಬ್ರಹ್ಮಾದಿ ಸಕಲ ಜೀವರಾಶಿಗಳಲ್ಲಿ ಯೂ ಭಿನ್ನಾಂಶದಿಂದ ಪುರುಷರೂಪಿಯಾದ ಶ್ರೀ ಪರಮಾತ್ಮನು ಪ್ರವಿಷ್ಟನಾ ಗಿರುವನೆಂದು ಸ್ಪಷ್ಟವಾಗುವುದು. ಇದರ ಸಾರಾಂಶವೇನೆಂದರೆ ಯಾವ ಪು ರುಷರೂಪವು ಬ್ರಹ್ಮದೇವರಿಗೆ ಮೂಲಭೂತವಾಗಿ ಪದ್ಮನಾಭನೆಂದು ಹೆಸ ರುಳ್ಳದಾಗಿದ್ದಿತೋ ಅದೇ ರೂಪವೇ ಸಕಲ ಜೀವರಾಶಿಗಳಲ್ಲಿಯೂ ಪ್ರವಿಷ್ಟ ವಾದುದೆಂದು ಗೊತ್ತಾಗುವುದು. ಆದುದರಿಂದ ಭಾಗವತ ವಾಕ್ಯಕ್ಕೂ ವಿಷ್ಣು ಪುರಾಣ ವಾಕ್ಯಕ್ಕೂ ಏಕವಾಕ್ಯತೆ ಬಂತೆಂದು ಭಾವಿಸಬೇಕು. ಅಥವಾ ಪುರುಷರೂಪತ್ರಯ ಎಂಬಲ್ಲಿ ಪುರುಷ, ರೂಪತ್ರಯ ಎಂದು ಬೇರೆ ಪದ ಮಾಡಬಹುದು. ಪುರುಷ ಅಂದರೆ 'ಪೂರ್ಣ ಷಡ್ಗುಣತ್ವಾತ್ಪುರುಷಃ ಷಡ್ಗು ಣೈಶ್ವರ್ಯ ಸಂಪನ್ನನಾದುದರಿಂದ ಪುರುಷನೆಂದು ಹೆಸರು. ಅಥವಾ 'ಪುರು ಪರತೀತ ಪುರುಷಃ' ಪುರು ಅಂದರೆ ಕರ್ಮಫಲವನ್ನು ಜೀವರುಗಳಿಗೆ ಉಣಿಸು ವವನಾದುದರಿಂದ ಪುರುಷನೆಂದು ಹೆಸರು. ಅಥವಾ, ಪುರಾಣಿ ಶರೀರಾಣಿ ಪರತಿಗಚ್ಛತೀತಿ ಪುರುಷಃ' ಪುರ ಅಂದರೆ ದೇಹ. ತಾನು ಉತ್ಪತ್ತಿಶೂನ್ಯ ನಾದರೂ ಮತ್ಸ್ಯ ಕೂರ್ಮ ರಾಮಕೃಷ್ಣಾದಿ ಶರೀರಗಳನ್ನು ಸ್ವೀಕಾರಮಾಡು ವುದರಿಂದ ಪುರುಷನೆಂದು ಹೆಸರು. ರೂಪತ್ರಯ=ಲೋಕಪ್ರಸಿದ್ಧವಾದ ಮೂರು ರೂಪಗಳನ್ನು ಧರಿಸಿದವನು.

ಭಾಗವತ ಪ್ರಥಮಸ್ಕಂಧ ತಾತ್ಪರ್ಯದಲ್ಲಿ 'ಬ್ರಹ್ಮಾ ವಿಷ್ಣುರ್ಮಹೇಶರೂ ಪಾಣಿತ್ರೀಣಿ ವಿಷ್ಣೋರ್ಮಹಾತ್ಮನಃ। ಬ್ರಹ್ಮಣಿ ಬ್ರಹ್ಮರೂಪಸನ್ ಶಿವರೂಪೀ ಶಿವೇಸ್ಥಿತಃ' ಶ್ರೀ ವಿಷ್ಣುವಿಗೆ ಬ್ರಹ್ಮಾ ವಿಷ್ಣು ಮಹೇಶ್ವರ ಎಂದು ಮೂರು ರೂಪಗಳುಂಟು. ಬ್ರಹ್ಮದೇವರಲ್ಲಿ ಬ್ರಹ್ಮರೂಪದಿಂದಲೂ, ರುದ್ರದೇವರಲ್ಲಿ ರುದ್ರರೂಪದಿಂದಲೂ ಇದ್ದು ಸೃಷ್ಟಿಯನ್ನೂ ಸಂಹಾರವನ್ನೂ ಮಾಡುವನು. ಸ್ವಯಂ ವಿಷ್ಣುರೂಪದಿಂದ ಪಾಲನಮಾಡುವನು. ಹೀಗೆ ರೂಪತ್ರಯವು ಪರಮಾತ್ಮನಿಗೇ ಇರುವುದು. ಅಥವಾ ಪರಮಾತ್ಮನ ಅವತಾರಗಳಲ್ಲಿ ಮೂರು ವಿಧಗಳುಂಟು. ಭಾಗವತ ಅಷ್ಟಮಸ್ಕಂಧ ೩ನೇ ಅಧ್ಯಾಯದಲ್ಲಿ "ನಮಃ ಶಾಂತಾಯ ಘೋರಾಯ ಮೂಢಾಯ ಗುಣಕರ್ಮಣೇ" ಎಂಬಿರುವ ಕಾರಣ, ಶಾಂತಾವತಾರ, ಘೋರಾವತಾರ, ಮೂಢಾವತಾರವೆಂದು ಮೂರು ಪ್ರಕಾರ

ವುಂಟಾಯಿತು. ಶಾಂತಾವತಾರಗಳು ವಾಸುದೇವಾದಿ ರೂಪಗಳು ಘೋರಾವತಾರಗಳು ಪರಶುರಾಮಾದಿ ರೂಪಗಳು. ಮೂಢಾವತಾರಗಳು ಮತ್ಸ್ಯ ಕೂರ್ಮಾದಿಗಳು. ಈ ಅವತಾರಗಳಲ್ಲಿ ಪರಸ್ಪರ ಭೇದವಿಲ್ಲದಿದ್ದರೂ ದೇಶ ಕಾಲಕ್ಕನುಗುಣವಾಗಿ ಹೀಗೆ ತೋರಿಸಿರುವನು. ಇಲ್ಲಿ ರೂಪತ್ರಯವೆಂದರೆ ಮೂರೇ ರೂಪಗಳೆಂದು ಅರ್ಥವಲ್ಲ. ಮೂರು ಪಂಗಡವಾಡಬಹುದಾದ ಅನೇಕ ರೂಪಗಳೆಂದು ಭಾವ. ಆದರೂ ವ್ಯೂಹವು ಮೂರಾದುದರಿಂದ ರೂಪತ್ರಯವೆಂದು ಹೇಳಿರುವರು. ಪುರಾತನ ಪುರುಷ ಎಂದರೆ "ಏಕೋ ನಾರಾಯಣ ಆಸೀನ್ನ ಬ್ರಹ್ಮಾನಚ ಶಂಕರಃ॥" ಎಂಬ ವಚನದಿಂದ ಬ್ರಹ್ಮಾದಿಗಳೆಲ್ಲರೂ ಹುಟ್ಟುವುದಕ್ಕೆ ಪೂರ್ವದಲ್ಲಿಯೂ ಕೂಡ ಶ್ರೀ ಪರಮಾತ್ಮನು ಇದ್ದನು ಎಂಬುದರಿಂದ ದಾಸರಾಯರು "ಪುರಾತನ ಪುರುಷ" ಎಂದರು. ಪುರುಷೋತ್ತಮ ಎಂಬ ಪದಕ್ಕೆ ಸಾಮಾನ್ಯವಾಗಿ "ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವಚ। ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ । ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ॥" ಲೋಕದಲ್ಲಿ ಪುರುಷ ಶಬ್ದವಾಚ್ಯರು ಕ್ಷರಪುರುಷ–ಅಕ್ಷರ ಪುರುಷ-ಎಂದು ಇಬ್ಬರು ಇರುವರು. ಕ್ಷರ ಅಂದರೆ ಸ್ಥೂಲ ಶರೀರವನ್ನು ಹೊಂದಿ ಶರೀರವನ್ನು ಕಳೆದುಕೊಳ್ಳುವ ಸ್ವಭಾವಗಳುಳ್ಳ ಬ್ರಹ್ಮಾದಿಗಳೆಲ್ಲರೂ ಕ್ಷರಶಬ್ದ ವಾಚ್ಯರು. ಅಕ್ಷರ ಅಂದರೆ ಶರೀರ ನಾಶವಿಲ್ಲದ ನಿರ್ವಿಕಾರಳಾದ ರಮಾದೇವಿಯು.

ಸ್ತ್ರೀ ಸ್ವರೂಪಳಾದ ರಮಾದೇವಿಗೆ ಪುರುಷ ಶಬ್ದವು ಹೇಗೆ ಒಂದಿತೆಂದರೆ ಛಾಂದೋಗ್ಯಭಾಷ್ಯದಲ್ಲಿ "ಪುಲ್ಲಿಂಗಸ್ಸೋಚ್ಯತೇ ಸ್ತ್ರೀಪುಂಶಕ್ತಿಮತೀಯತಃ" ರಮಾದೇವಿಯು ಸ್ತ್ರೀಯಾದರೂ ಪುರುಷ ಶಕ್ತಿಯುಳ್ಳವಳಾದುದರಿಂದ ಪುಲ್ಲಿಂಗ ಶಬ್ದವು ಕೂಡುತ್ತದೆಂದು ಹೇಳಿರುವರು. ಹೀಗೆ ಕ್ಷರಪುರುಷರಾದ ಬ್ರಹ್ಮಶಿವಾದಿಗಳಿಗಿಂತಲೂ ಅಕ್ಷರಳಾದ ರಮಾದೇವಿಗಿಂತಲೂ ಉತ್ತಮನಾದ ಪುರುಷನು ಇನ್ನೊಬ್ಬನು ಇರುವನು ಅವನೇ ಪುರುಷೋತ್ತಮನು. ಎಂಬ ಗೀತಾವಾಕ್ಯದಂತೆ ಕ್ಷರಾಕ್ಷರ ಪುರುಷರಾದ ರಮಾಬ್ರಹ್ಮಾದಿಗಳಿಗಿಂತ ಉತ್ತಮನಾದುದರಿಂದ ಪುರುಷೋತ್ತಮ ಎಂಬರ್ಥವು ಸಿದ್ಧವಾಯಿತು. ಆದರೂ ಈ ಸ್ಥಳದಲ್ಲಿ ಆ ಅರ್ಥವು ಕೂಡುವುದಿಲ್ಲ. ದಾಸರಾಯರು ಹೇಳಿರುವ "ಕ್ಷರಾಕ್ಷರ ಪುರುಷ ಪೂಜಿತ ಪಾದ" ಎಂಬ ವಾಕ್ಯದಿಂದ ಕ್ಷರಾಕ್ಷರ ಪುರುಷರಾದ ರಮಾ ಬ್ರಹ್ಮಾದಿಗಳಿಂದ ಪೂಜಿತನಾದ

ಪಾದ ಉಳ್ಳವ ಎಂಬ ಅರ್ಥವು ಸಿದ್ಧವಾಗುವುದರಿಂದ ಪುನರುಕ್ತಿ ದೋಷವು ಬರುವದು. ಕ್ಷರಾಕ್ಷರ ಪುರುಷರಿಂದ ಪೂಜಿತವಾದ ಪಾದ ಉಳ್ಳವನೆಂದ ಮೇಲೆ ಕ್ಷರಾಕ್ಷರ ಪುರುಷರಿಗಿಂತಲೂ ಉತ್ತಮತ್ವವು ಸ್ವತಃ ಸಿದ್ಧವಾಗುವುದು. ಆದ್ದರಿಂದ ಪುರುಷೋತ್ತಮನೆಂಬ ಪದವು ವ್ಯರ್ಥವಾಗುವುದು. ಪುರುಷೋತ್ತಮ ಶಬ್ದದಿಂದಲೇ ಕ್ಷರಾಕ್ಷರ ಪುರುಷ ವಂದ್ಯತ್ವವು ಸಿದ್ಧವಾಗಲು ಪುನಃ ಕ್ಷರಾಕ್ಷರ ಪೂಜಿತಪಾದ ಎಂದು ಹೇಳಿದ್ದು ಪುನರುಕ್ತಿಯಲ್ಲವೆ? ಈ ಕಾರಣದಿಂದ ಪುರುಷೋತ್ತಮ ಪದಕ್ಕೆ ಬೇರೆ ಅರ್ಥ ಹೇಳಬೇಕಾಯಿತು. ೨೪ ತತ್ವಾಭಿಮಾನಿ ದೇವತೆಗಳಿಗೆ ಪುರುಷ ಶಬ್ದವು ಉಂಟು. ಹೇಗೆಂದರೆ ಪುರುಷರೂಪಿಯಾದ ಪರಮಾತ್ಮನು ಆದಿಯಲ್ಲಿ ಅವರಲ್ಲಿ ಪ್ರವೇಶಮಾಡಿ ಬ್ರಹ್ಮಾಂಡವನ್ನು ಸೃಷ್ಟಿಸಿದುದರಿಂದ ಪುರುಷರೆಂಬ ಹೆಸರು ಅವರಿಗುಂಟು. ಅಥವಾ ಪುರುಷು ಬಹುಷು ಶೇತೇತಿ ಪುರುಷಃ ಎಂಬ ನಿರ್ವಚನದಿಂದ ಪ್ರತಿಯೊಂದು ಪಾಂಚಭೌತಿಕ ಶರೀರದಲ್ಲಿಯೂ ತತ್ವಾಭಿಮಾನಿಗಳು ಇದ್ದೇ ಇರುವರು. ಆದ್ದರಿಂದ ತತ್ವೇಶರಿಗೆ ಪುರುಷರೆಂದು ಹೆಸರು.

ಶ್ರೀ ಪರಮಾತ್ಮನು ಆ ೨೪ ತತ್ವೇಶರಿಗೆ ಉತ್ತಮನಾಗಿ ತಾನೂ ಇರುವುದರಿಂದ ಪುರುಷೋತ್ತಮನೆಂದು ಪರಮಾತ್ಮನಿಗೆ ಹೆಸರು. ಅಥವಾ ಪುರುಷೋತ್ತಮ ಶಬ್ದಕ್ಕೆ ಗೀತಾವಾಕ್ಯಪ್ರಕಾರ "ಕ್ಷರಸ್ಸರ್ವಾಣಿ ಭೂತಾನಿ" ಎಂಬುವುದರಿಂದ ಬ್ರಹ್ಮ ದೇವರು ಮೊದಲ್ಗೊಂಡು ಸ್ಥಾವರಾಂತವಾಗಿ ಸರ್ವವೂ ಕ್ಷರವಾಗುವುದು. ಅಕ್ಷರ ರಮಾದೇವಿಯರು ಇವರಿಗಿಂತಲೂ ಉತ್ತಮನೆಂದು ಅರ್ಥಮಾಡಿ ಕ್ಷರಾಕ್ಷರ ಪೂಜಿತ ಪಾದ ಎಂಬ ಪದಕ್ಕೆ ಅರ್ಥ ಸಂಕೋಚಮಾಡಿ ಹೇಳಬೇಕು. ಹೇಗೆಂದರೆ ವಿಷ್ಣುತತ್ವ ನಿರ್ಣಯದಲ್ಲಿ "ಬ್ರಹ್ಮಾ ಶಿವಸ್ಸುರೇಶಾದ್ಯಾಃ ಶರೀರ ಕ್ಷರಣಾತ್ಕ್ಷರಾಃ । ಲಕ್ಷ್ಮೀರಕ್ಷರ ದೇಹತ್ವಾದ ಕ್ಷರಾತ್ಪರತೋ ಹರಿಃ॥" ಬ್ರಹ್ಮಾ ರುದ್ರ ಇಂದ್ರಾದಿಗಳು ಶರೀರ ನಾಶವುಳ್ಳವರಾದುದರಿಂದ ಕ್ಷರರೆಂದೆನಿಸಿಕೊಳ್ಳುವರು. ರಮಾದೇವಿಯರಿಗೆ ಶರೀರನಾಶವಿಲ್ಲದುದರಿಂದ ಅಕ್ಷರರೆಂದು ಹೆಸರು. ಇವರಿಗಿಂತಲೂ ಉತ್ತಮನು ಪರಮಾತ್ಮನು. ಈ ಆಧಾರದಿಂದ ಕ್ಷರಶಬ್ದಕ್ಕೆ ಬ್ರಹ್ಮರುದ್ರಾದಿ ಯೋಗ್ಯಜೀವರನ್ನು ಮಾತ್ರ ತೆಗೆದುಕೊಳ್ಳಬೇಕು. ಯದ್ಯಪಿ ಗೀತಾವಾಕ್ಯ ಪ್ರಕಾರ ಕಲಿ ಮೊದಲಾದ ತಮೋಯೋಗ್ಯರಿಗೂ ಕೂಡ ಪರಮಾತ್ಮನು ಉತ್ತಮನೇ ಆದರೂ ಅವರಿಂದ ಪೂಜಿತವಾದ ಪಾದ ಉಳ್ಳವನು ಪರಮಾ

ತ್ಮನು ಅಲ್ಲ. ಪ್ರಕೃತ ದೈತ್ಯರು ಪರಮಾತ್ಮನಲ್ಲಿ ದ್ವೇಷಿಸುವರೇ ಹೊರತು ಪೂಜಿಸುವವರಲ್ಲ. ಆದುದರಿಂದ ರಮಾ ಬ್ರಹ್ಮಾದಿ ಯೋಗ್ಯಜೀವರಿಂದ ಪೂಜಿತವಾದ ಪಾದಗಳುಳ್ಳವನೆಂದರ್ಥ. ಹೀಗೆ ಪುರುಷೋತ್ತಮ ಶಬ್ದಕ್ಕೆ ರಮಾ ಬ್ರಹ್ಮಾದಿ ಯೋಗ್ಯಜೀವರಿಂದ ಮಾತ್ರ ಪೂಜ್ಯನೆಂತ ಅರ್ಥವಾದರೆ ಪುನರುಕ್ತಿ ದೋಷವಾಗಲಿ ಒಂದು ಪದಕ್ಕೆ ವ್ಯರ್ಥತೆಯಾಗಲಿ ಬರುವುದಿಲ್ಲ ವೆಂದು ತಿಳಿಯಬೇಕು. ಪೂರ್ಣಾನಂದ ಜ್ಞಾನಮಯ = ಪೂರ್ಣವಾದ ಆನಂದ ಜ್ಞಾನವುಳ್ಳವನು. ಮಣಿಮಂಜರಿಯಲ್ಲಿ "ವಂದೇ ಗೋವಿಂದ ಮಾನಂದ ಜ್ಞಾನದೇಹಂ ಪತಿಂ ಶ್ರಿಯಃ" ಎಂದು ಹೇಳಿರುವರು.

ಇದಲ್ಲದೆ "ಆನಂದೋ ಬ್ರಹ್ಮೇತಿ ವ್ಯಜಾನಾತ್ ವಿಜ್ಞಾನಂ ಬ್ರಹ್ಮೇತಿ ವ್ಯಜಾನಾತ್" ಎಂಬ ಉಪನಿಷದ್ವಾಕ್ಯಗಳಿಂದ ಆನಂದ ಸ್ವರೂಪನು ಬ್ರಹ್ಮ, ವಿಜ್ಞಾನಸ್ವರೂಪನು ಬ್ರಹ್ಮ ಎಂದು ಬೇರೆ ಬೇರೆಯಾಗಿ ಹೇಳಿರುವ ಬ್ರಹ್ಮ ಸ್ವರೂಪವನ್ನು ಇಲ್ಲಿ ದಾಸರಾಯರು ಒಂದೇ ವಾಕ್ಯದಿಂದ ಪೂರ್ಣಾನಂದ ಜ್ಞಾನಮಯ ಎಂದು ಹೇಳಿರುವರು. ಯದ್ಯಪಿ ಸಕಲ ಸೂಕ್ತಗಳೂ ಪರಮಾತ್ಮನ ಸ್ವರೂಪವನ್ನೇ ತೋರಿಸುವುದಾದರೂ "ಯಥೈವ ಪೌರುಷಂ ಸೂಕ್ತಂ ವಿಷ್ಣೋರೇವಾಭಿದಾಯಕಂ । ನತಥಾ ಸರ್ವವೇದಾಶ್ಚ ವೇದಾಂಗಾನಿಚ ನಾರದ॥" ಹೇಗೆ ಪುರುಷಸೂಕ್ತವು ಕೇವಲ ವಿಷ್ಣುಸ್ವರೂಪವನ್ನೇ ವರ್ಣಿಸು ವುದೋ ಹಾಗೆ ಸಕಲ ವೇದಗಳೂ ವೇದಾಂಗಗಳೂ ಸಹ ಹೇಳುವುದಿಲ್ಲ. ಎಂದು ಬ್ರಹ್ಮಸೂತ್ರ ಭಾಷ್ಯಪ್ರಮಾಣದಿಂದ ಮೇಲಿನ ಅರ್ಥವು ಸಿದ್ಧವಾಗು ವುದು. ಆದುದರಿಂದ ದಾಸರಾಯರು ಪುರುಷಸೂಕ್ತಸುಮೇಯ ಎಂದು ಹೇಳಿದರು. "ತತ್ತತ್ಪುರುಷ ಹೃತ್ಪುಷ್ಕರ ನಿಲಯ" ಆಯಾಪುರುಷರ ಹೃದ ಯಕಮಲದಲ್ಲಿ ವಾಸಮಾಡುತ್ತಿರುವ ಎಂದು ಹೇಳಿರುವರು. ಯದ್ಯಪಿ ಎಲ್ಲರ ಹೃದಯಕಮಲದಲ್ಲಿ ಇದ್ದೇ ಇರುವನು. ಆದರೂ ಪ್ರಥಮ ಸಂಧಿಯ ಕಡೆಯ ಪದ್ಯದಲ್ಲಿ "ಪರಿಮಳವು ಸುಮನದೊಳಗನಲನು ಅರಣಿಯೊಳಗಿಪ್ಪಂತೆ ದಾಮೋದರನು ಬ್ರಹ್ಮಾದಿಗಳ ಮನದಲಿ ತೋರಿತೋರದಲೆ ಇರುತಿಹನು" ಎಂದು ಹೇಳಿದಂತೆ ಬ್ರಹ್ಮಾದಿ ಜ್ಞಾನಿಗಳಿಗೂ ಯೋಗಿಗಳಿಗೂ ತೋರುತ್ತಾ ಇತರರಿಗೆ ಕಾಣದೆಯೆ ಇರುವನು. ಈ ಪದ್ಯಾರ್ಥವನ್ನು ಪೂರ್ವದಲ್ಲಿಯೇ ಸ್ಪಷ್ಟವಾಗಿದೆ. ಜ್ಞಾನಿಗಳೆಲ್ಲರು ಕಂಡೇಕಾಣುವರು. ಭಾಗವತ ಚತುರ್ಥಸ್ಕಂಧ ೯ನೇ ಅಧ್ಯಾಯದಲ್ಲಿ ನಾರದರು ಧ್ರುವನಿಗೆ ಉಪದೇಶ

ಮಾಡಿದ ಪ್ರಕರಣದಲ್ಲಿ "ಶ್ರೀವತ್ಸಾಂಕಂ ಘನಶ್ಯಾಮಂ ಪುರುಷಂ ವನ-ಮಾಲಿಕಂ । ಶಂಖಚಕ್ರಗದಾಪದ್ಮೈರಭಿವ್ಯಕ್ತಚತುರ್ಭುಜಂ । ಕಿರೀಟಿನಂ ಕುಂಡಲಿನಂ ಕೇಯೂರವಲಯಾನ್ವಿತಂ। ಕೌಸ್ತುಭಾಭರಣಗ್ರೀವಂ ಪೀತ-ಕೌಶೇಯವಾಸಸಂ । ಪದ್ಭ್ಯಾಂ ನಖಮಣಿಶ್ರೇಣ್ಯಾ ವಿಲಸದ್ಭ್ಯಾಂ ಸಮ-ರ್ಚತಾಂ । ಹೃತ್ಪದ್ಮಕರ್ಣಿಕಾಧಿಷ್ಣ್ಯಮಾಕ್ರಮ್ಯಾತ್ಮನ್ಯವಸ್ಥಿತಂ । ಸ್ಮಯ-ಮಾನಮಭಿಧ್ಯಾಯೇತ್ಸಾನುರಾಗಾವಲೋಕನಂ ॥" ನಾರದರ ವಾಕ್ಯ, ಎಲೈ ಧ್ರುವನೇ! ಕೇಳು ವಕ್ಷಸ್ಥಳದಲ್ಲಿ ಶ್ರೀವತ್ಸವೆಂಬ ಗುರ್ತಿನಿಂದ ಕೂಡಿದ, ನೀಲಮೇಘಶ್ಯಾಮನಾದ, ಎಲ್ಲರ ಹೃದಯದಲ್ಲಿಯೂ ವಾಸವಾಡುತ್ತಿರುವ ವನಮಾಲಿಕೆಯನ್ನು ಧರಿಸಿರುವ ಶಂಖ ಚಕ್ರ ಗದಾ ಪದ್ಮಗಳಿಂದ ವ್ಯಕ್ತ ವಾಗುತ್ತಿರುವ ನಾಲ್ಕು ಭುಜಗಳಿಂದ ಕೂಡಿದ, ಕಿರೀಟ ಕುಂಡಲಗಳಿಂದಲೂ ಹಸ್ತಾಭರಣಗಳಿಂದಲೂ, ಕೌಸ್ತುಭಾಭರಣದಿಂದ ಶೋಭಿಸುತ್ತಿರುವ ಕುತ್ತಿಗೆಯುಳ್ಳ, ಪೀತಾಂಬರವನ್ನು ಧರಿಸಿದ ನಖಗಳೆಂಬ ಮಣಿಗಳ ಪಂಕ್ತಿ ಯಿಂದ ಶೋಭಿಸುವ ಪಾದಗಳುಳ್ಳ ಶ್ರೀ ಪರಮಾತ್ಮನು ತನ್ನನ್ನರ್ಚಿಸುವ ವರ ಹೃದಯ ಕಮಲಗಳನ್ನಾಕ್ರಮಿಸಿಕೊಂಡು ಮಂದಹಾಸ ವಿಶಿಷ್ಟನಾಗಿ ಅನುರಾಗದಿಂದ ಅವರನ್ನು ನೋಡುತ್ತಿರುವನೆಂದು ಭಾವಿಸಿ ಅವನನ್ನು ಧ್ಯಾನಮಾಡಬೇಕು ಎಂದು ಉಪದೇಶಿಸಿದರು. ಧ್ರುವನು ಹಾಗೆಯೇ ಮಾಡಿ ದುದರಿಂದ ಪರಮಾತ್ಮನನ್ನು ಹೃದಯ ಕಮಲದಲ್ಲಿ ಕಂಡನು. ಅದೇ ಸ್ಕಂಧದ ೯ನೇ ಅಧ್ಯಾಯದಲ್ಲಿ, "ಸ ವೈ ಧಿಯಾ ಯೋಗವಿಪಾಕತೀವ್ರಯಾ ಹೃತ್ಪ-ದ್ಮಕೋಶೇ ಸ್ಫುರಿತಂ ತಡಿತ್ಪ್ರಭಂ । ತಿರೋಹಿತಂ ಸಹಸೈವೋಪಲಕ್ಷ್ಯ ಬಹಿಃ ಸ್ಥಿತಂ ತದವಸ್ಥಂ ದದರ್ಶ ॥" ಆ ಧ್ರುವನು ತನ್ನ ಧ್ಯಾನಬಲದಿಂದ ಪರಿಪಕ್ವ ವನ್ನು ಹೊಂದಿ ಅದರಿಂದ ಚುರುಕಾದ ಬುದ್ಧಿಯುಳ್ಳವನಾಗಿ ತನ್ನ ಹೃದಯ ಕಮಲದಲ್ಲಿ ಮಿಂಚಿನಂತೆ ಪ್ರಕಾಶವಾಗಿ ಶೋಭಿಸುವ, ತಾನು ನೋಡುತ್ತಿದ್ದ ರೂಪವೇ ಎದುರಿಗೆ ನಿಂತಿರುವುದನ್ನು ಕಂಡನು. ಪರಮಾತ್ಮನು ಧ್ರುವನಿಗೆ ವರವನ್ನು ಕೊಡುವುದಕ್ಕಾಗಿ ಸಮ್ಮುಖದಲ್ಲಿ ನಿಂತು, ವತ್ಸ! ಏಳು! ನಿನಗೀ ವರವನ್ನು ಕೊಡಲು ನಾನು ಬಂದಿರುವೆನು ಎಂದು ನುಡಿಯುವಷ್ಟರಲ್ಲಿ ಧ್ರುವನು ಹೃದಯ ಕಮಲದಲ್ಲಿ ಕಾಣುತ್ತಿದ್ದ ಭಗವತ್ಸ್ವರೂಪವು ಕಣ್ಣಿಗೆ ಮರೆಯಾಯಿತು. ತತ್‌ಕ್ಷಣದಲ್ಲಿ ಕಣ್ದೆರೆದು ತಾನು ನೋಡುತ್ತಿದ್ದ ರೂಪವೇ ಎದುರಿಗೆ ನಿಂತಿರುವುದನ್ನು ಕಂಡು ನಮಸ್ಕಾರ ಮಾಡಿದನು ಎಂದು ಹೇಳಿರು

ವರು. ಹೀಗೆ ಪರಮಾತ್ಮನು ತನ್ನನ್ನು ಧ್ಯಾನಿಸುವವರ ಕಣ್ಣಿಗೆ ಬೀಳುತ್ತಾ ಮಿಗಿಲಾದವರಿಗೆ ಕಾಣಿಸಿಕೊಳ್ಳದೆ ಇರುವನೆಂದು ತಾತ್ಪರ್ಯವು.

"ಮಹಾಪುರುಷಜಾಂಡಾಂತರದಿ ಬಹಿರದಿ ವ್ಯಾಪ್ತ" ಮಹಾಪುರುಷನಾದ ಶ್ರೀ ಪರಮಾತ್ಮನಿಂದ ಜನ್ಯವಾದ ಬ್ರಹ್ಮಾಂಡದ ಒಳಗೂ ಹೊರಗೂ ಸರ್ವತ್ರ ಅಣುರೇಣು ತೃಣಕಾಷ್ಠಾದಿಗಳಲ್ಲಿಯೂ, ದೇವ ದೈತ್ಯೋರಗ ಪಶು ಪಕ್ಷಿಗಳಲ್ಲಿಯೂ ವ್ಯಾಪ್ತನಾಗಿರುವನು. "ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ" ಎಂಬ ಶ್ರುತಿಯು ಇದಕ್ಕೆ ಆಧಾರವಾಗಿರುವುದು. ಆದರೂ ತತ್ಸಂಬಂಧವಾದ ಗುಣದೋಷಗಳಿಂದ ನಿರ್ಲಿಪ್ತನಾಗಿರುವನು. ಇದಕ್ಕೆ ಆಧಾರವಾಗಿ ಭಾಗವತ ಏಕಾದಶ ಸ್ಕಂಧದಲ್ಲಿ "ತೇಜೋತ್ಪನ್ನಮಯೈರ್ಭಾರ್ವೈರ್ಮೇಘೌ ಘೈರ್ವಾಯುನೇರಿತೈಃ। ನ ಸ್ಪೃಶ್ಯತೇ ನಭಸ್ತದ್ವತ್ ಕಾಲಸೃಷ್ಟೈರ್ಗುಣೈಃ ಪುಮಾನ್ ॥" ಅಗ್ನಿಯಿಂದಲೂ, ಉದಕದಿಂದಲೂ, ಭೂಸಂಬಂಧದಿಂದಲೂ ಗಾಳಿಯಿಂದ ಚಲಿಸಲ್ಪಟ್ಟ ಮೇಘದ ಗುಂಪುಗಳಿಂದಲೂ ಆಕಾಶವು ಹೇಗೆ ಲೇಪವಿಲ್ಲದಿರುವುದೋ ಹಾಗೆಯೇ ಪರಮಾತ್ಮನು ನರ—ಮೃಗ ಮೊದಲಾದ ಸರ್ವ ಪ್ರಾಣಿಗಳಲ್ಲಿ ವ್ಯಾಪ್ತನಾಗಿದ್ದರೂ ಅವುಗಳ ಸಂಬಂಧವಾದ ಗುಣದೋಷಗಳ ಸಂಪರ್ಕವಿಲ್ಲದಿರುವನು ಎಂದು ತಾತ್ಪರ್ಯವು. ಇದರಿಂದ ನಿರ್ಲಿಪ್ತ ಎಂಬ ಅರ್ಥವು ಸ್ಪಷ್ಟವಾಗುವುದು. ಈ ಸಂಧಿಯಲ್ಲಿ ಯಾವ ಯಾವ ಸ್ಥಳಗಳಲ್ಲಿ ಯಾವ ಯಾವ ರೂಪದಿಂದ ಪರಮಾತ್ಮನು ವ್ಯಾಪ್ತನಾಗಿದ್ದು ಏನೇನು ಮಾಡುವನೆಂಬ ಅಂಶವನ್ನು ಹೇಳುತ್ತಾರೆ. ಆ ವಿಷಯವನ್ನೇ ಈ ಪದ್ಯದಲ್ಲಿ ಸೂಚಿಸಿರುತ್ತಾರೆ.

ಅವತಾರಿಕೆ—ದಾಸರಾಯರು ಪರಮಾತ್ಮನ ವ್ಯಾಪ್ತಿಯ ಮಹಿಮೆಯನ್ನು ಹೇಳುತ್ತಾ ಅದರಿಂದುಂಟಾದ ಭಕ್ತ್ಯುದ್ರೇಕದಿಂದ ಆತನನ್ನು ಈ ಪದ್ಯದಿಂದ ಸ್ತೋತ್ರ ಮಾಡುತ್ತಾರೆ.

**ಸ್ತ್ರೀನಪುಂಸಕ ಪುರುಷ ಭೂಸಲಿ-**
**ಲಾನಲಾನಿಲ ಗಗನ ಮನ ಶಶಿ**
**ಭಾನು ಕಾಲ ಗುಣ ಪ್ರಕೃತಿಯೊಳಗೊಂದು ತಾನಲ್ಲ ॥**
**ಏನು ಇವನ ಮಹಾ ಮಹಿಮೆ ಕಡೆ-**
**ಗಾಣರಜಭವ ಶಕ್ರಮುಖರು ನಿ-**
**ದಾನಿಸಲು ಮಾನವರಿಗಳವಡುವುದೆ ವಿಚಾರಿಸಲು ॥ ೨ ॥**

ಪದ್ಯಾರ್ಥ—ಸ್ತ್ರೀ, ನಪುಂಸಕ, ಪುರುಷ, ಭೂ=ಭೂಮಿ, ಸಲಿಲ=ನೀರು, ಅನಲ=ಅಗ್ನಿ, ಅನಿಲ=ವಾಯು, ಗಗನ=ಆಕಾಶ, ಮನ=ಮನಸ್ಸು ಮನಃಶಬ್ದದಿಂದ ಉಪಲಕ್ಷಣದಿಂದ ಚಿತ್ತ, ಬುದ್ಧಿ, ಅಹಂಕಾರ, ಜ್ಞಾನೇಂದ್ರಿಯಗಳು 5, ಕರ್ಮೇಂದ್ರಿಯಗಳು 5 ಇವೆಲ್ಲವನ್ನು ತೆಗೆದುಕೊಳ್ಳಬೇಕು. ಮತ್ತು ಶಶಿ=ಚಂದ್ರ, ಭಾನು=ಸೂರ್ಯ, ಕಾಲ, ಗುಣ=ಸತ್ವ ರಜಸ್ತಮೋ ಗುಣಗಳು, ಪ್ರಕೃತಿ=ಗುಣಾತ್ಮಕಳಾದ ಪ್ರಕೃತಿ, ಇವುಗಳಲ್ಲಿ ಒಂದು= ಯಾವದೊಂದೂ, ತಾನಲ್ಲ. ಇವುಗಳಿಂದ ಭಿನ್ನನಾಗಿ ತದಂತರ್ಯಾಮಿಯಾಗಿ ಇರುವನು. ಇವನ, ಮಹಾಮಹಿಮೆ=ಮಹಾಮಹಿಮೆಯನ್ನು ಏನೆಂದು ವರ್ಣಿಸೋಣ! (ಅಥವಾ ಏನು ಇವನ ಮಹಾ ಮಹಿಮೆ ಎಂದು ಆಶ್ಚರ್ಯವನ್ನು ಸೂಚಿಸುವುದು.) ಅಜ-ಭವ-ಶಕ್ರ ಮುಖರು=ಅಜ=ಬ್ರಹ್ಮದೇವರು, ಭವ=ರುದ್ರದೇವರು, ಶಕ್ರ=ಇಂದ್ರದೇವರು ಮುಖರು=ಮೊದಲಾದವರು, ನಿದಾನಿಸಲು=ಎಷ್ಟು ಆಲೋಚಿಸಿದರೂ, ಕಡೆಗಾಣರು=ಕೊನೆಗಾಣರು. ವಿಚಾರಿಸಲು=ಯೋಚಿಸಿ ನೋಡಿದರೆ, ಮಾನವರಿಗೆ=ಮನುಷ್ಯರಿಗೆ, ಅಳವಡುವುದೆ=ಗಣನೆಗೆ ಬರುವುದೆ (ಸಾಧ್ಯವಾಗುವುದೆ?) ಎಂದಿಗೂ ಸಾಧ್ಯವಿಲ್ಲವೆಂದು ಭಾವವು.

ತಾತ್ಪರ್ಯ—ಶ್ರೀಪರಮಾತ್ಮನ ಸ್ವರೂಪವು ಎಂತಹದು ಎಂದರೆ-ಅವನು ಸ್ತ್ರೀಯೂ ಅಲ್ಲ, ನಪುಂಸಕನೂ ಅಲ್ಲ, ಪುರುಷನೂ ಅಲ್ಲ, ಪೃಥಿವೀ ಅಪ್ಪು ಮೊದಲಾದ ಪಂಚಭೂತಗಳಲ್ಲಿ ಒಂದೂ ತಾನಲ್ಲ. ತನ್ಮಾತ್ರಗುಣಗಳಲ್ಲಿ ಒಂದು ಗುಣಕ್ಕೂ ಸಂಬಂಧಿಸಿದವನಲ್ಲ. ಚಿತ್ತ, ಬುದ್ಧಿ, ಮನಸ್ಸು, ಅಹಂಕಾರ ಇವುಗಳಲ್ಲಿ ಯಾವುದಕ್ಕೂ ಸಂಬಂಧಿಸಿದವನಲ್ಲ. ಚಂದ್ರನೂ ಅಲ್ಲ, ಸೂರ್ಯನೂ ಅಲ್ಲ. ಕಾಲನೂ ಅಲ್ಲ, ಗುಣ ಪ್ರಕೃತಿಯೂ ಅಲ್ಲ, ಇವುಗಳಿಂದ ವಿಲಕ್ಷಣನು. ಇವುಗಳಲ್ಲದೆ ಯಾವುದು ಉಳಿದಿದೆಯೋ ಅದೇ ಭಗವತ್ಸ್ವರೂಪವು. ಇವನ ಮಹಿಮೆಯನ್ನು ಎಷ್ಟೆಂದು ವರ್ಣಿಸೋಣ! ಎಷ್ಟು ಯೋಚಿಸಿದರೂ ಬ್ರಹ್ಮರುದ್ರೇಂದ್ರಾದಿಗಳೂ ಸಹ ಸಾಕಲ್ಯೇನ ಇವನ ಸ್ವರೂಪವನ್ನು ಕೊನೆಗಾಣಲಾರರು. ಇನ್ನು ವಿಚಾರಿಸಿ ನೋಡಲು ಮನುಷ್ಯರಿಂದ ಸಾಧ್ಯವೆ? ಎಂದಿಗೂ ಅಲ್ಲವೆಂದು ಭಾವವು.

ವಿಶೇಷಾರ್ಥ—ಹಿಂದಿನ ಶ್ಲೋಕದಲ್ಲಿ ಬ್ರಹ್ಮಾಂಡದ ಹೊರಗೂ ಒಳಗೂ ವ್ಯಾಪ್ತನಾಗಿ ನಿರ್ಲಿಪ್ತನಾಗಿರುವನು ಎಂದು ಹೇಳಿ ಈ ಶ್ಲೋಕದಲ್ಲಿ

ಸ್ತ್ರೀಯು ಅಲ್ಲ, ಪುರುಷ ಮೊದಲಾದವಾವುದೂ ಅಲ್ಲವೆಂದು ಹೇಳಿರುವರು. ಇದೇ ಅರ್ಥವನ್ನು ಭಾಗವತ ಅಷ್ಟಮ ಸ್ಕಂಧದಲ್ಲಿ, "ಸ ವೈ ನ ದೇವಾಸುರ ಮರ್ತ್ಯತಿರ್ಯಙ್ನ ಸ್ತ್ರೀ ನ ಷಂಡೋ ನ ಪುಮಾನ್ನ ಜಂತುಃ"ಎಂಬ ಶ್ಲೋಕದಿಂದ ಹೇಳಿರುವರು. ಈ ಎರಡು ವಾಕ್ಯಗಳಿಗೆ ಪರಸ್ಪರ ವಿರೋಧ ಕಾಣುವುದು. ಏಕೆಂದರೆ ಶ್ರೀ ಪರಮಾತ್ಮನು ಸರ್ವತ್ರ ವ್ಯಾಪ್ತನಾಗಿರುವುದರಿಂದ ಸರ್ವಶಬ್ದ ವಾಚ್ಯನಾಗಿರುವನು. ಭಾಗವತ ಏಕಾದಶ ಸ್ಕಂಧದ "ಖಂ ವಾಯುಮಗ್ನಿಂ ಸಲಿಲಂ ಮಹೀಂ ಚ ಜ್ಯೋತೀಂಷಿ ಸತ್ವಾನಿ ದಿಶೋ ದ್ರುಮಾದೀನ್ । ಸರಿತ್ಸ-ಮುದ್ರಾಂಶ್ಚ ಹರೇಃ ಶರೀರಂ ಯತ್ಕಿಂ ಚ ಭೂತಂ ಪ್ರಣಮೇದನನ್ಯಂ ॥ " ಎಂಬ ಶ್ಲೋಕದಲ್ಲಿ, ಆಕಾಶ, ವಾಯು, ಅಗ್ನಿ, ಉದಕ, ಭೂಮಿ, ಮೊದಲಾದವುಗಳೆಲ್ಲವೂ ಭಗವಂತನ ಶರೀರವೆಂದು ಚಿಂತಿಸಬೇಕು ಎಂದು ಹೇಳಿದರು. ಅಷ್ಟಮಸ್ಕಂಧದ "ಸ ವೈ ನ ದೇವಾ" ಎಂಬ ಶ್ಲೋಕದಿಂದಲೂ, "ಸ್ತ್ರೀ ನಪುಂಸಕ" ಎಂಬ ಪದ್ಯದಿಂದಲೂ ಇವು ಒಂದೂ ಪರಮಾತ್ಮನಲ್ಲವೆಂದು ಹೇಳಿರುವರು. ಇವರಲ್ಲಿ ಯಾವುದು ನಿಶ್ಚಯವೆಂದು ತಿಳಿಯಬೇಕು? ಅಂದರೆ ಏಕಾದಶಸ್ಕಂಧದ ಶ್ಲೋಕದ ರೀತಿಯಾಗಿ ಸ್ತ್ರೀಪುರುಷ, ಆಕಾಶ, ವಾಯು ಮೊದಲಾದ ವಸ್ತುಗಳಲ್ಲಿ ತಚ್ಛಬ್ದ ವಾಚ್ಯನಾಗಿ ತದಾಕಾರನಾಗಿ ಅವುಗಳಲ್ಲಿ ಇರುವುದರಿಂದ ಆ ಸ್ಥಳಗಳಲ್ಲಿನ ಭಗವದ್ರೂಪವನ್ನು ಚಿಂತಿಸಿ ಪೂಜಿಸಬೇಕು. ಅಷ್ಟಮಸ್ಕಂಧದ ಶ್ಲೋಕದಿಂದಲೂ ಮತ್ತು ಈ ಪದ್ಯದಿಂದಲೂ ಹೇಳಿರುವ ನಿಷೇಧ ವಾಕ್ಯಗಳ ರೀತ್ಯಾ ಪರಮಾತ್ಮನು ಆಕಾಶಾದಿಗಳಲ್ಲಿದ್ದರೂ, ತದ್ಗತ ವಾದ ಗುಣದೋಷಾದಿಗಳಿಗೆ ಸಂಬಂಧಪಡದೆ ನಿರ್ಲಿಪ್ತನಾಗಿರುವನು. ಅಷ್ಟೇ ಅಲ್ಲದೆ ಆ ಆಕಾಶಾದಿಗಳೇ ಪರಮಾತ್ಮನಲ್ಲ. ಅವುಗಳಿಂದ ಭಿನ್ನನಾಗಿ ಅವುಗಳ ಆಕಾರನಾಗಿ ಮಾತ್ರ ತೋರುವನು. ನಿಜವಾದ ಅವನ ಸ್ವರೂಪವು ಈ ಆಕಾಶಾದಿ ಪ್ರಾಕೃತ ವಸ್ತುಗಳಲ್ಲಿ ಒಂದಾದರೂ ಅಲ್ಲ. ಪರಮಾತ್ಮನು ಅಪ್ರಾಕೃತನೆಂಬುವನ್ನು ತೋರಿಸುವುದು. ಆದುದರಿಂದ ಈ ಎರಡು ವಾಕ್ಯ ಗಳಿಗೂ ವಿರೋಧವಿಲ್ಲವೆಂದು ತಿಳಿಯಬೇಕು.

"ಇವನ ಮಹಾಮಹಿಮೆ ಕಡೆಗಾಣರಜಭವಶಕ್ರಮುಖರು ನಿದಾನಿಸಲು ಹೀಗಿರಲು ಮನುಷ್ಯರು ಇವನ ಮಹಿಮೆಯನ್ನು ಕಾಣುವರೆ ಎಂದು ಹೇಳಿರು ವರು. ಇದೇ ಅರ್ಥವನ್ನೇ ಭಾಗವತ ಸಪ್ತಮಸ್ಕಂಧದ 9ನೆಯ ಅಧ್ಯಾಯ ದಲ್ಲಿ, "ಬ್ರಹ್ಮಾದಯಸ್ಸುರಗಣಾ ಮುನಯೋಽಥ ಸಿದ್ಧಾಃ ಸತ್ವೈಕ-

ತಾನವಮತಯೋ ವಚಸಾಂ ಪ್ರವಾಹೈಃ। ನಾಂತಂಪರಸ್ಯಪರಕೋಪ್ಯಧುನಾ ಪಿಯಾಂತಿ ಕಿಂತೋಷ್ಟುಮರ್ಹತಿ ಸಮೋಹರಿರುಗ್ರಜಾತೇಃ ॥೨೨॥ ಬ್ರಹ್ಮಾದಿ ಸಕಲದೇವತಾ ಗಣಗಳು, ಋಷಿಗಣಗಳು, ಸಿದ್ಧರು, ಮೊದಲಾದ ಮಹನೀಯರು ನಿನ್ನ ಮಹಿಮೆಗಳನ್ನು ಅವರ ಪ್ರವಾಹರೂಪವಾದ ವಾಕ್ಸರಣಿಯಿಂದ ಸ್ತುತಿಸುತ್ತಿದ್ದರೂ ಇನ್ನೂ ಕೊನೆಗಾಣದಿರುವರೋ ಅಂತಹ ನೀನು ಕ್ರೂರ ಜಾತಿಯಾದ ದೈತ್ಯಕುಲದಲ್ಲಿ ಹುಟ್ಟಿದ ನನಗೆ ಪ್ರಸನ್ನನಾದದ್ದು ನಿನ್ನ ಇಚ್ಛೆಯಿಂದಲೇ ಹೊರತು ಬೇರೆಯಲ್ಲವೆಂದು ಪ್ರಹ್ಲಾದನು ಸ್ತುತಿಸಿದನು. ಇದೇ ಅರ್ಥವನ್ನೇ ದಾಸರಾಯರು ಇಲ್ಲಿ ಹೇಳಿರುವರು.

ಅವತಾರಿಕೆ.—ಮೇಲಿನ ಪದ್ಯದಲ್ಲಿ ಭೂಸಲಿಲಾದಿಗಳು ತಾನಲ್ಲವೆಂದು ಹೇಳಿದ ವಿಷಯವನ್ನು ವಿಸ್ತಾರಮಾಡುತ್ತಾರೆ.—

ಗಂಧರಸರೂಪ ಸ್ಪರಿಶ ಶ
ಬ್ದೊಂದು ತಾನಲ್ಲದರದರ ಪೆಸ
ರಿಂದೆ ಕರೆಸುತ ಜೀವರಿಗೆ ತರ್ಪಕನು ತಾನಾಗಿ ॥
ಪೊಂದಿಕೊಂಡಿಹವ ರಮುಕರುಣಾ
ಸಿಂಧು ಶಾಶ್ವತಮನವ ಮೊದಲಾ
ದಿಂದ್ರಿಯಗಳೊಳಗಿದ್ದು ಭೋಗಿಸುತಿಹನು ವಿಷಯಗಳ ॥೩॥

ಪದ್ಯಾರ್ಥ.—ಗಂಧರಸರೂಪಸ್ಪರಿಶಶಬ್ದ=ಗಂಧ, ರಸರೂಪ, ಸ್ಪರ್ಶ, ಶಬ್ಧಗಳೆಂಬ ತನ್ಮಾತ್ರಾ ಗುಣಗಳಪೈಕಿ ಒಂದೂ ತಾನಲ್ಲ, ಶ್ರೀಪರಮಾತ್ಮನು ಯಾವುದಕ್ಕೂ ಸಂಬಂಧಿಸಿದವನಲ್ಲ, ಅದರದರ=ಶಬ್ಧಸ್ಪರ್ಶಾದಿಗಳ, ಪೆಸರಿನಿಂದ=ಹೆಸರಿನಿಂದ, ಕರೆಸುತ=ಕರೆಸಿಕೊಳ್ಳುತ್ತ, ಜೀವಗೆ, ತರ್ಪಕನು=ತೃಪ್ತಿಯನ್ನು ಕೊಡುವನು, ತಾನಾಗಿ, ಪೊಂದಿಕೊಂಡಿಹ=ಸೇರಿಕೊಂಡಿರುವನು, ಶಾಶ್ವತ=ಶಾಶ್ವದೇಕಪ್ರಕಾರನಾಗಿರುವ, ಪರಮಕರುಣಾಸಿಂಧು=ಪರಮಕರುಣಾಸಮುದ್ರನಾದ ಶ್ರೀಹರಿಯು, ಮನವೆ ಮೊದಲಾದಿಂದ್ರಿಯಗಳೊಳಗಿದ್ದು—ಮನಸ್ಸು, ಜ್ಞಾನೇಂದ್ರಿಯ, ಕರ್ಮೇಂದ್ರಿಯ ಮೊದಲಾದವುಗಳಲ್ಲಿದ್ದು, ವಿಷಯಾದಿಗಳ=ವಿಷಯ ಭೋಗಾದಿಗಳನ್ನು, ಭೋಗಿಸುತಿಹನು=ಜೀವರ ಸುಖಕ್ಕಾಗಿ ತಾನೂ ಅನುಭವಿಸುವನು.

ತಾತ್ಪರ್ಯ.—ಗಂಧ, ರಸ, ರೂಪ, ಸ್ಪರ್ಶ, ಶಬ್ದಾದಿಗಳೆಂಬ ಮಾತ್ರಾಗುಣಗಳಲ್ಲಿ ಶ್ರೀಪರಮಾತ್ಮನು ಯಾವುದೂ ತಾನಲ್ಲ ಆದರೂ ಅವುಗಳ

ಲ್ಲಿದ್ದು ಅವುಗಳಿಂದಾಗುವ ಕಾರ್ಯಗಳನ್ನು ತಾನೇ ಮಾಡಿ ಮಾಡಿಸುವುದ ರಿಂದ ಪರಮಾತ್ಮನೇ ಗಂಧ ರಸಾದಿ ಶಬ್ದವಾಚ್ಯನೆಂದು ವೇದಾದಿಗಳು ಹೇಳುತ್ತಿರುವುವು. ಅಂತು ಶಬ್ದ ಸ್ಪರ್ಶಾದಿಗಳಲ್ಲಿದ್ದು ಜೀವರಿಗೆ ಅವುಗ ಳಿಂದಾಗುವ ಸುಖದುಃಖಾದಿಗಳನ್ನು ಉಣಿಸಿ ತೃಪ್ತಿಗೊಳಿಸುವನು. ಕರು ಣಾಸಮುದ್ರನಾದ ಸ್ವಾಮಿಯು ಮನಸ್ಸು, ಚಕ್ಷು, ಶ್ರೋತ್ರ ಮೊದಲಾದ ಇಂದ್ರಿಯಗಳೊಳಗೆ ತದಾಕಾರನಾಗಿದ್ದು, ನೋಡುವದು, ಕೇಳುವದು ಮೊದಲಾದವುಗಳನ್ನು ಜೀವರ ಕರ್ಮಾನುಸಾರವಾಗಿ ಮಾಡಿಸುತ್ತಾ ಸುಖವ ನ್ನು ಮಾತ್ರ ತಾನು ಅನುಭವಿಸುವನು. ಅದೂ ಕೂಡ ಜೀವರ ಕ್ಷೇಮಕ್ಕಾ ಗಿಯೇ ಹೊರತು ಪೂರ್ಣಕಾಮನಾದ ಸ್ವಾಮಿಗೆ ಈ ಅಲ್ಪ ಸುಖದಿಂದ ಆ ಗುವುದೇನು ? ಪರಮಾತ್ಮನು ಆ ಸುಖವನ್ನು ಸ್ವೀಕರಿಸದಿದ್ದರೆ ಜೀವರಿಗೆ ಸುಖವಾಗದು. ಆದ್ದರಿಂದಲೇ ಸ್ವೀಕರಿಸುವನೆಂದು ಭಾವವು.

ವಿಶೇಷಾರ್ಥ.—ಗಂಧ ರಸಾದಿ ಮಾತ್ರಾಗುಣಗಳ ವಿವರ:—ಪಂಚ ಮಹಾಭೂತಗಳ ಪೈಕಿ ಭೂತತ್ವದ ಮಾತ್ರಾಗುಣವು ಗಂಧ, ಈ ಭೂತತ್ವ ವು ಜ್ಞಾನೇಂದ್ರಿಯಗಳಾದ ಐದರಪೈಕಿ ಒಂದಾದ ನಾಸಿಕೆಂಬಲ್ಲಿರುವುದು. ಇದರ ಮಾತ್ರಾಗುಣವೇ ಗಂಧವಾದುದರಿಂದ ಮನುಷ್ಯರು ಸುವಾಸನೆಯ ನ್ನೂ, ದುರ್ವಾಸನೆಯನ್ನೂ ತಿಳಿದುಕೊಳ್ಳುವುದು ಗಂಧ ಗುಣ ವಿಶಿಷ್ಟವಾದ ಭೂತತ್ವದ ಗುಣವೆಂದು ತಿಳಿಯಬೇಕು. ಶ್ರೀಪರಮಾತ್ಮನು ನಾಸಿಕೇಂದ್ರಿ ಯದಲ್ಲಿ ತದಾಕಾರನಾಗಿದ್ದು ನಾಸಿಕೇಂದ್ರಿಯ ಎಂಬ ಹೆಸರಿನಿಂದಲೂ, ಅದರಲ್ಲಿ ಅಡಗಿರುವ ಭೂತತ್ವದಲ್ಲಿಯೂ ತನ್ಮಾತ್ರಾಗುಣವಾದ ಗಂಧದಲ್ಲಿ ತಾನಿದ್ದು ಸುಗಂಧವನ್ನು ತಾನು ಸ್ವೀಕರಿಸಿ ಅವರಿಂದ ಜೀವರನ್ನು ತೃಪ್ತಿ ಪಡಿಸುವನು. ದುರ್ಗಂಧಧಿಂದುಂಟಾಗುವ ಅಸಹ್ಯವಾದ ದುಃಖವನ್ನು ತಾನುಣದೆ ಜೀವರಿಗೆ ಮಾತ್ರ ಕರ್ಮಾನುಸಾರವಾಗಿ ಉಣಿಸುವನು. ಅದೇ ಕೆಂದರೆ ಪರಮಾತ್ಮನಿಗೆ ಯಾವುದಾದರೊಂದು ಪುಣ್ಯವನ್ನು ಕೊಟ್ಟರೆ "ಮ ರಳಿ ತನಗರ್ಪಿಸಲು ಕೊಟ್ಟದನಂತ ಮಡಿಮಾಡಿ" ಎಂದು ದಾಸರಾಯರು ಮೇಲೆ ಹೇಳಿದಂತೆ, ಅದನ್ನು ತಾನು ಭೋಗಿಸಿ ಅನಂತಗುಣವಧಿಕ ಮಾಡಿ ಕೊಡುವನು. ಹೀಗೆ ಭಕ್ತರು ಕೊಟ್ಟ ಪಾಪಗಳನ್ನು ತಾನು ಭೋಗಿಸಿದರೆ ಅದನ್ನು ಅನಂತ ಗುಣಗಳಧಿಕ ಮಾಡಿ ಭಕ್ತ ಜನರಿಗೆ ಕೊಡಬೇಕಾಗುವುದ ರಿಂದ ಶ್ರೀಪರಮಾತ್ಮನು ಭಕ್ತರು ಮಾಡಿದ ಪುಣ್ಯ ಪಾಪಗಳೆಲ್ಲವನ್ನು

ತನಗೆ ಸಮರ್ಪಿಸಿದರೆ ಪಾಪಗಳನ್ನು ತಾನು ಸ್ವೀಕರಿಸದೆ ಭಸ್ಮಮಾಡಿಬಿಡು ವನು, ಇದಲ್ಲದೆ ಪರಮಾತ್ಮನು ಆನಂದ ಸ್ವರೂಪನಾದುದರಿಂದ ಜೀವ ರಿಗಾಗಿ ದೇಹಗತವಾದ ಆನಂದವನ್ನು ಸ್ವೀಕರಿಸುವನು. ದುಃಖಲೇಪ ರಹಿತನಾದುದರಿಂದ ಭಕ್ತರು ತನಗೊಪ್ಪಿಸುವ ಪಾಪರಾಶಿಗಳನ್ನು ಸುಟ್ಟು ಬೂದಿ ಮಾಡಿಬಿಡುವನು. ಆ ಭಕ್ತರು ಮಾಡುವ ಪಾಪಕೃತ್ಯದ ಫಲವನ್ನು ಅವರಿಗೇನೇ ಉಣಿಸುವನು. ದೇಹಗತವಾದ ಸುಖವನ್ನಾದರೂ ಭಕ್ತರ ಕ್ಷೇಮಕ್ಕಾಗಿ ತನ್ನ ಇಚ್ಛೆಯಿಂದ ತಾನಾಗಿ ಸ್ವೀಕರಿಸುವನಲ್ಲದೆ ಪುಣ್ಯಪಾಪ ಗಳು ಸ್ವತಃ ಪರಮಾತ್ಮನನ್ನು ಏನೂ ಮಾಡಲಾರವು.

ನೀರು ಎಲ್ಲವನ್ನೂ ತೋಯಿಸುವ ಶಕ್ತಿಯುಳ್ಳದ್ದಾದರೂ ತಾವರೆ ಎಲೆಗಳನ್ನು ಹೇಗೆ ತೋಯಿಸಲಾರದೋ ಹಾಗೆಯೇ ಚಕ್ಷು ಶ್ರೋತ್ರಾದಿ ಇಂದ್ರಿಯ ಜನ್ಯವಾದ ಸುಖದುಃಖಾದಿಗಳೇ ಪರಮಾತ್ಮನನ್ನು ಮುಟ್ಟಲಾ ರವು. ಪರಮಾತ್ಮನು ನಿರ್ಲಿಪ್ತನಾಗಿರುವನು. ಹೀಗೆಯೇ ಇತರ ಕರ್ಮೇಂ ದ್ರಿಯ ವ್ಯಾಪಾರವೆಂದು ತಿಳಿಯಬೇಕು. ಆದರೆ ಚಕ್ಷುಃ ಶ್ರೋತ್ರಾದಿ ಇಂದ್ರಿಯಗಳ ಪ್ರವೃತ್ತಿಗೆ ಮುಖ್ಯ ಕಾರಣವು ಮನಸ್ಸು. ಮನಸ್ಸನ್ನು ಚ ಕ್ಷು ಶ್ರೋತ್ರಾದಿಗಳಲ್ಲಿ ಇಡದಿದ್ದರೆ ಆ ಇಂದ್ರಿಯ ವ್ಯಾಪಾರಗಳು ಯಾವು ದೂ ನಡೆಯುವುದಿಲ್ಲ. ತಾವು ಅನ್ಯಮನಸ್ಕರಾಗಿದ್ದರೆ ನಮ್ಮೆದುರಿನಲ್ಲಿ ಯಾ ರು ನಿಂತಿದ್ದರೂ ನಮಗೆ ಗೋಚರವಾಗುವುದಿಲ್ಲ. ಯಾರು ಏನು ಹೇಳಿದ ರೂ ನಮಗೆ ಕೇಳಿಸುವುದೂ ಇಲ್ಲ. ಈ ವಿಷಯವು ಒಬ್ಬೊಬ್ಬರಿಗೂ ಅನು ಭವದಲ್ಲಿಯೇ ಇರುವುದು. ಆದುದರಿಂದಲೇ ಭಾಗವತದಲ್ಲಿ "ಮನಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ" ಎಂದು ಹೇಳಿರುವರು. ಆದುದರಿಂದ ಎಲ್ಲಾ ಇಂದ್ರಿಯಗಳಿಗಿಂತಲೂ ಮನಸ್ಸೆಂಬ ಇಂದ್ರಿಯವೇ ದೊಡ್ಡದು. ಶ್ರೀಪರಮಾತ್ಮನು ಮನೋನಾಮಕನಾಗಿ ಮನದೊಳಗಿದ್ದು, ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳಿಂದ ಕರ್ಮಗಳನ್ನು ಮಾಡಿಸಿ ಸುಖ ವನ್ನು ತಾನುಂಡು ಜೀವರನ್ನು ತೃಪ್ತಿಪಡಿಸಿ ಸುಖದುಃಖಗಳನ್ನು ಜೀವರಿಗೆ ಇತ್ತು ತಾನು ನಿರ್ಲಿಪ್ತನಾಗಿರುವನು.

**ಅವತಾರಿಕೆ.**—ಈ ಪದ್ಯದಿಂದ ಜೀವನು ಚಕ್ಷುರಾದಿ ಇಂದ್ರಿಯಗಳಿಂ ದಮಾಡುವ ಕೃತ್ಯಗಳನ್ನು ಶ್ರೀಪರಮಾತ್ಮನು ಯಾವ ರೂಪದಿಂದ ಹಾಗೆ ಮಾಡಿಸುತ್ತಾನೆಂಬುವುದನ್ನು ಹೇಳುತ್ತಾರೆ:—

ಶ್ರವಣನಯನ ಘ್ರಾಣತ್ವಗ್ರಸ
ನಿವಗಳಲಿ ವಾಕ್ಪಾಣಿ ಪಾದಾ
ದ್ಯವಯವಗಳಲಿ ತದ್ಗುಣಗಳಲಿ ತತ್ಪತಿಗಳೊಳಗೆ ||
ಪ್ರವಿತತನು ತಾನಾಗಿ ಕೃತಿಪತಿ
ವಿವಿಧಕರ್ಮವಮಾಡಿ ಮಾಡಿಸಿ
ಭವಕೆಕಾರಣನಾಗಿ ತಿರಿಗಿಸುತಿಹನು ತಿಳಿಸದಲೆ ||೪||

ಪದ್ಯಾರ್ಥ.—ಶ್ರವಣನಯನಘ್ರಾಣತ್ವಗ್ರಸ-ಶ್ರವಣ-ಕಿವಿ, ನಯನ=ಕಣ್ಣು, ಘ್ರಾಣ=ಮೂಗು, ತ್ವಕ್=ಚರ್ಮ, ರಸ=ನಾಲಿಗೆ, ಇವುಗಳಲ್ಲಿ, ವಾಕ್ಪಾಣಿಪಾದಾದ್ಯವಯವಗಳಲಿ=ವಾಕ್=ಬಾಯಿ, ಪಾಣಿ = ಕೈ, ಪಾಣಿ=ಕೈ, ಪಾದ=ಕಾಲು, ಆದಿಶಬ್ದದಿಂದ (ವಾಯು=ಗುದ, ಉಪಸ್ಥ, ಶಿಶ್ನ, ಇವುಗಳನ್ನು ತೆಗೆದುಕೊಳ್ಳಬೇಕು) ಅವಯವಗಳಲಿ, ತದ್ಗುಣಗಳಲಿ=ಕೇಳುವುದು, ನೋಡುವುದು, ಮಾಡುವುದು, ನಡೆಯುವುದು, ಮೊದಲಾದ ಗುಣಗಳಲ್ಲಿ, ತತ್ಪತಿಗಳೊಳಗೆ-ಚಕ್ಷುರಾದಿ ಇಂದ್ರಿಯಾಭಿಮಾನಿ ದೇವತೆಗಳಲ್ಲಿ, ಪ್ರವಿತತನು-ವ್ಯಾಪ್ತನು, ತಾನಾಗಿ, ಕೃತಿಪತಿ=ಕೃತಿನಾಮಕಳಾದ ಲಕ್ಷ್ಮೀದೇವಿಯ ಪತಿಯಾದ, ಪ್ರದ್ಯುಮ್ನನಾಮಕ=ಶ್ರೀಪರಮಾತ್ಮನು ವಿವಿಧಕರ್ಮವನು=ನಾನಾವಿಧ ಕರ್ಮಗಳನ್ನು, ಮಾಡಿ, ಮಾಡಿಸಿ, ಭವಕೆ ಸಂಸಾರಕ್ಕೆ, ಕಾರಣನಾಗಿ=ನಿಮಿತ್ತಕಾರಣನಾಗಿ, ತಿಳಿಸದಲೆ=ಜೀವನಿಗೆ ತಿಳಿಸದಂತೆ ತಿರುಗಿಸುತಿಹನು=ಭೂ, ಸ್ವರ್ಗ, ನರಕಾದಿ ಲೋಕಗಳಲ್ಲಿ ತಿರುಗಿಸುತ್ತಿರುವನು.

ತಾತ್ಪರ್ಯ.—ಕಿವಿ, ಕಣ್ಣು, ಮೂಗು, ಚರ್ಮ, ನಾಲಿಗೆಗಳೆಂಬ ಐದು ಜ್ಞಾನೇಂದ್ರಿಯಗಳಲ್ಲಿಯೂ ಬಾಯಿ, ಕೈ, ಪಾದ, ಗುದ, ಉಪಸ್ಥಗಳೆಂಬ ಐದು ಕರ್ಮೇಂದ್ರಿಯಗಳಲ್ಲಿಯೂ, ಅವುಗಳ ಗುಣಗಳು ಅಂದರೆ ಕೇಳುವುದು, ನೋಡುವುದು, ಆಘ್ರಾಣಿಸುವುದೂ, ಶೀತೋಷ್ಣಗಳನ್ನನುಭವಿಸುವುದು, ಉಪ್ಪು, ಕಾರ ಮೊದಲಾದ ಷಡ್ರಸಗಳ ರುಚಿಯನ್ನರಿಯುವುದು, ಮಾತಾಡುವುದು, ಮೂತ್ರವಿಸರ್ಜನೆ ರೇತೋತ್ಸರ್ಜನೆಗಳನ್ನು ಮಾಡುವುದು, ನಡೆಯುವುದೂ ಮಲವಿಸರ್ಜನೆ ಮಾಡುವುದೂ ಇವುಗಳೇ ದಶೇಂದ್ರಿಯಗಳ ಗುಣಗಳು. ಇವುಗಳಲ್ಲಿಯೂ ತತ್ಪತಿಗಳು ಅಂದರೆ ಕಿವಿಗೆ ಅಭಿಮಾನಿ ದೇವತೆಗಳು ದಿಗ್ದೇವತೆಗಳು ಕಣ್ಣುಗಳಿಗಭಿಮಾನಿ ಸೂರ್ಯ, ಮೂಗಿಗೆ ಅಶ್ವಿನೀದೇವತೆಗಳು, ಚರ್ಮಕ್ಕೆ ವಾಯು, ರಸಕ್ಕೆ ವರುಣ ಮುಖಕ್ಕೆ-

ಅಗ್ನಿ, ಪಾದಗಳಿಗೆ ಜಯಂತ, ಗುದಕ್ಕೆ ಮಿತ್ರ, ಉಪಸ್ಥೆಗೆ ದಕ್ಷ, ಇಂತಹ ತತ್ವಾಭಿಮಾನಿ ದೇವತೆಗಳಲ್ಲಿಯೂ ವ್ಯಾಪ್ತನಾಗಿ ತಾನಿದ್ದು, ಕೃತಿಪತಿಯಾದ ಶ್ರೀಪ್ರದ್ಯುಮ್ನನಾಮಕ ಪರಮಾತ್ಮನು ಜೀವರುಗಳಿಂದ ಅವರವರ ಅನಾದಿ ಕರ್ಮವನ್ನನುಸರಿಸಿ ಸಂಸಾರಕ್ಕೆ ಕಾರಣಭೂತವಾದ ಕರ್ಮಗಳನ್ನು ತಾನೂ ಮಾಡಿ, ಮಾಡಿಸಿ ಸಂಸಾರದಲ್ಲಿ ಜೀವರುಗಳನ್ನು ತಗಲಿಸಿ ಅವರುಗಳಿಗೆ ತಿಳಿಸದೇನೆ, ಕರ್ಮಾನುಸಾರವಾಗಿ ಭೂಮಿಯಲ್ಲಿ ಹುಟ್ಟುವುದೂ, ನರಕಕ್ಕೆ ಹೋಗುವುದೂ, ಸ್ವರ್ಗಕ್ಕೆ ಹೋಗುವುದೂ ಪುನಃ ಸಂಸಾರದಲ್ಲಿ ಹುಟ್ಟುವುದೂ ಸಾಯುವುದೂ ಹೀಗೆ ತಿರುಗಿಸುತ್ತಿರುವನು.

ವಿಶೇಷಾರ್ಥ.—ತತ್ವಾಭಿಮಾನಿ ದೇವತೆಗಳು ಯಾರುಯಾರು ಎಂಬ ವಿಷಯದಲ್ಲಿ ಭಾಗವತ ತೃತೀಯಸ್ಕಂಧ ಏಳನೆಯ ಅಧ್ಯಾಯವಲ್ಲಿ “ ತಸ್ಯಾಗ್ನಿರಾಸ್ಯಂ ನಿರ್ಭಿನ್ನಂ ಲೋಕಪಾಲೋವಿಶತ್ಪದಂ | ನಿರ್ಭಿನ್ನಂ ತಾಲುವರುಣೋ ಲೋಕಪಾಲೋ ವಿಶದ್ಧರೇಃ ||' ಹೀಗೆ ಹನ್ನೆರಡನೆಯ ಶ್ಲೋಕದ ಮೊದಲು “ ಪಾದಾವಸ್ಯ ವಿನಿರ್ಭಿನ್ನೌ ' ಎಂಬ ಇಪ್ಪತ್ತೆರಡನೆಯ ಶ್ಲೋಕದವರೆವಿಗೂ ಹೇಳಿರುವರು. ಅದೇ ಆಧಾರದಮೇಲೆ ತತ್ವಾಭಿಮಾನಿ ದೇವತೆಗಳ ಸ್ಥಾನ ಗುಣಗಳು ಬರೆಯಲ್ಪಟ್ಟಿವೆ. ಹೀಗೆ ಕೃತಿಪತಿಯಾದ ಶ್ರೀಪ್ರದ್ಯುಮ್ನನಾಮಕ ಪರಮಾತ್ಮನು, ಇಂದ್ರಿಯಗಳೊಳಗೂ, ಅವುಗಳ ಗುಣಗಳಲ್ಲಿಯೂ, ತತ್ವಾಭಿಮಾನಿ ದೇವತೆಗಳಲ್ಲಿಯೂ ವ್ಯಾಪ್ತನಾಗಿದ್ದು ಜೀವರ ಅನಾದಿ ಪ್ರಾರಬ್ಧ ಕರ್ಮಾನುಗುಣವಾಗಿ ಬುದ್ಧಿಯನ್ನು ಪ್ರೇರಿಸಿ ಅದರಂತೆ ಕರ್ಮಗಳನ್ನು ಮಾಡಿ ಅವರಿಂದಲೂ ಮಾಡಿಸುವನು. ಅದರಲ್ಲಿ ಸಂಚಿತಕರ್ಮಗಳೆಂತಲೂ, ಆಗಾಮಿಕರ್ಮಗಳೆಂತಲೂ, ನಶ್ವರ ಫಲಗಳನ್ನು ಕೊಡುವ ಎರಡು ವಿಧಕರ್ಮಗಳನ್ನೂ ಸಹಮಾಡಿಸಿ ನಶ್ವರವಾದ ಸ್ವರ್ಗ ನರಕಾದಿಗಳ ಭೋಗಗಳನ್ನು ಕೊಡಿಸುವನು. ಸಂಚಿತವೆಂದರೆ ಅನಾದಿಯಾದ ಪ್ರಾರಬ್ಧಕರ್ಮಗಳನ್ನು ಮಾಡುತ್ತಿರುವಾಗಲೇ ಜೀವನು ಮನೋವಾಕ್ಕಾಯಗಳಿಂದ ಮಾಡುವ ಕರ್ಮಗಳು ದಿವಸ ಒಂದಕ್ಕೆ ಹತ್ತು ಜನ್ಮಗಳನ್ನು ಪಡೆಯುವುದಕ್ಕೆ ಬೇಕಾದಷ್ಟು ಈ ಕರ್ಮಗಳನ್ನು ಮಾಡುವನು. ಕರ್ಮಗಳಲ್ಲಿ ಹಿಂದೆ ಮಾಡಿದ ಕರ್ಮಗಳಿಗೆ ಸಂಚಿತವೆಂತಲೂ, ಮುಂದೆಮಾಡುವ ಕರ್ಮಗಳಿಗೆ ಆಗಾಮಿ ಎಂತಲೂ ಹೆಸರು. ಈಗ ಈ ಜನ್ಮದಲ್ಲಿ ನಾವು ಅನುಭವಿಸುತ್ತಿರುವದು ಸಂಚಿತಕರ್ಮದ ಫಲಗಳೆಂತಲೂ ಈಗ ಮಾಡುತ್ತಿರುವ ಆ

ಗಾಮಿ ಕರ್ಮಗಳ ಫಲಗಳನ್ನು ಮುಂದೆ ಅನುಭವಿಸಬೇಕೆಂತಲೂ ತಿಳಿಯ ಬೇಕು. ಈ ಕರ್ಮಗಳನ್ನೆಲ್ಲ ಮಾಡಿಸಿ ಜೀವರನ್ನು ಸಂಸಾರದಲ್ಲಿ ಪುನಃಪುನಃ ತಿರುಗಿಸುವುದಕ್ಕೆ ಶ್ರೀಪ್ರದ್ಯುಮ್ನನಾಮಕ ಪರಮಾತ್ಮನೇ ಕಾರಣನು ಇದರ ಕಾರಣವನ್ನು ಜೀವರು ಅರಿಯರು. ಶ್ರೀಪರಮಾತ್ಮನೇ ಬಲ್ಲನು. ಆದರೆ ಪರಮಾತ್ಮನೇ ಜೀವರಿಂದ ಸಂಸಾರಕ್ಕೆ ಕಾರಣವಾದ ಕರ್ಮಗಳನ್ನು ಮಾಡಿಸಿದರೂ ಅವರವರ ಅನಾದಿ ಕರ್ಮಗಳನ್ನನುಸರಿಸಿ ಮಾಡಿಸುವುದ ರಿಂದ ಪರಮಾತ್ಮನಿಗೆ ವೈಷಮ್ಯಾದಿಗಳು ಇಲ್ಲವೆಂಬ ತಾತ್ಪರ್ಯ.

ಅವತಾರಿಕೆ.— ಮೇಲೆ ಹೇಳಿದುದನ್ನೇ ವಿಶದಪಡಿಸುತ್ತಾರೆ.—

> **ಗುಣಿಗುಣಗಳೊಳಿದ್ದು ಗುಣಿಗುಣ**
> **ನೆನಿಸುವನು ಗುಣಬದ್ಧನಾಗದೆ**
> **ಗಣಜಪುಣ್ಯಾಪುಣ್ಯಫಲಬ್ರಹ್ಮಾದಿ ಚೇತನಕೆ ||**
> **ಉಣಿಸುತವರೊಳಗಿದ್ದು ಜನಾ**
> **ರ್ದನ ಚಿದಾನಂದೈಕದೇಹನು**
> **ಕೊನೆಗೆ ಸಚರಾಚರ ಜಗದ್ಭುತುವೆನಿಪನವ್ಯಯನು ||೫||**

ಪದ್ಯಾರ್ಥ.—ಗುಣಿಗುಣಗಳೊಳಿದ್ದು=ಗುಣಿ = ಗುಣಗಳುಳ್ಳವರಲ್ಲಿ, (ಸಾತ್ವಿಕರು, ರಾಜಸರು, ತಾಮಸರು ಎಂಬ ಜೀವರೊಳಗೂ ಎಂದರ್ಥ) ಗುಣಗಳೊಳು, ಸತ್ವ, ರಜಸ್ತಮೋ ಗುಣಗಳಲ್ಲಿಯೂ ಇದ್ದು, ಗುಣಬದ್ಧ ನಾಗದೆ=ತಾನು ಗುಣಗಳಿಂದ ಬದ್ಧನಾಗದೆ ಗುಣಿಗುಣನೆನಿಸುವನು=ಗುಣಿ= ಸತ್ವರಜಸ್ತಮಃ ಸ್ವಭಾವಗಳುಳ್ಳ ಸಾತ್ವಿಕ ರಾಜಸ ತಾಮಸರೆಂತಲೂ ಗುಣ ನು-ಸತ್ವಗುಣ, ರಜೋಗುಣ, ತಮೋಗುಣನೆಂತಲೂ, ಎನಿಸುವನು - ಹೆಸರುಳ್ಳವನಾಗಿರುವನು, ಗುಣಜ-ಸತ್ವರಜಸ್ತಮೋ ಗುಣಗಳುಳ್ಳ ಜೀವರು ಮಾಡುವ ಗುಣಜನ್ಯವಾದ, ಪುಣ್ಯಾಪುಣ್ಯಫಲ-ಪುಣ್ಯ=ಪುಣ್ಯಫಲಗಳನ್ನು, ಅಪುಣ್ಯ-ಪಾಪ ಫಲಗಳನ್ನು, ಬ್ರಹ್ಮಾದಿಚೇತನಕೆ=ಬ್ರಹ್ಮದೇವರು ಮೊದಲು ಕಲಿಪರ್ಯಂತವಾದ ಚೇತನ ಸಮೂಹಕ್ಕೆ, ಅವರೊಳಗಿದ್ದು=ಬ್ರಹ್ಮಾದಿ ಜೀವ ರಾಶಿಗಳಲ್ಲಿದ್ದು, ಉಣಿಸುತ=ಸತ್ವಗುಣಜನ್ಯವಾದ ಪುಣ್ಯಫಲಗಳನ್ನು ಸಾತ್ವಿ ಕರಾದ ಬ್ರಹ್ಮಾದಿದೇವತಾಚೇತನಗಳಿಗೂ, ರಜೋಗುಣಜನ್ಯವಾದ, ಸುಖ ದುಃಖಮಿಶ್ರವಾದ ಫಲವನ್ನು ರಾಜಸರಾದ ಮನುಷ್ಯರಿಗೂ, ತಮೋಗುಣ ಜನ್ಯವಾದ ಪಾಪಫಲಗಳನ್ನು ತಾಮಸರಾದ ದೈತ್ಯದಾನವರಿಗೂ ಉಣಿಸುತ್ತ

ವೃಜನಾರ್ದನ=ವೃಜಿನ=ಪಾಪಗಳನ್ನು, ಅರ್ದನ=ನಾಶವಮಾಡುವ, ಚಿದಾನಂದೈಕದೇಹನು=ಚಿತ್=ಜ್ಞಾನವೇನು, ಆನಂದ=ಸಂತೋಷವೇನು ಇವುಗಳೇ, ಏಕ=ಮುಖ್ಯವಾದ, ಅಥವಾ ಸಮರಹಿತವಾದ ದೇಹನು=ದೇಹವುಳ್ಳ ಶ್ರೀಪರಮಾತ್ಮನು, ಕೊನೆಗೆ=ಪ್ರಳಯಾರಂಭಕಾಲದಲ್ಲಿ, (ಸಂಕರ್ಷಣರೂಪದಿಂದ ಋದ್ರಾಂತರ್ಯಾಮಿಯಾಗಿದ್ದು) ಸಚರಾಚರ=ಜಗದ್ಭುಕ್=ಚರಾಚರಪ್ರಾಣಿಗಳಿಂದ ಕೂಡಿದ ಜಗತ್ತನ್ನು ಭಕ್ಷಿಸನು (ಋದ್ರದೇವರ ಫಾಲನೇತ್ರ ಜನ್ಯವಾದ ಅಗ್ನಿಯಿಂದ ಸುಟ್ಟುಬಿಡುವನು ಎಂಬರ್ಥ.) ಎನಿಪ=ಸಚರಾಚರ ಜಗದ್ಭುಕ್‌ಯೆಂದು ಹೆಸರುಪಡೆಯುವನು, ಅವ್ಯಯನೂ=ಪ್ರಳಯಕಾಲದಲ್ಲಿಯೂ ನಾಶವಿಲ್ಲದ ಶ್ರೀಪರಮಾತ್ಮನು, ಕೊನೆಗೆ ಪ್ರಳಯದಲ್ಲಿ, ಸಚರಾಚರಜಗದ್ಭುಕ್=ಚರಾಚರಪ್ರಾಣಿಗಳಿಂದ ಕೂಡಿದ ಈ ಪ್ರಪಂಚವನ್ನು ನುಂಗಿ ತನ್ನುದರದಲ್ಲಿ ಇಟ್ಟುಕೊಂಡು ಶ್ರೀಮನ್ನಾರಾಯಣನು, ಎನಿಪ=ಎನಿಸಿಕೊಳ್ಳುವನು.

ತಾತ್ಪರ್ಯ.—ಗುಣವುಳ್ಳವರಿಗೆ ಗುಣಿಯೆಂದು ಹೆಸರು. ಇದರಲ್ಲಿ ಸತ್ವಗುಣ ಹೆಚ್ಚಾಗಿ ಉಳ್ಳವರು ಸಾತ್ವಿಕರೆನಿಸುವರು. ಇವರು ಬ್ರಹ್ಮಾದಿದೇವತೆಗಳು. ರಾಜಸರಾದ ಮನುಷ್ಯರು ರಜೋಗುಣ ಉಳ್ಳವರು. ತಾಮಸರೆಂದರೆ ತಮೋಗುಣ ಉಳ್ಳ ದೈತ್ಯದಾನವರು. ಇಂತಹ ಗುಣಿಗಳಾದ ದೇವಮನುಷ್ಯ ದೈತ್ಯಾದಿಗಳಲ್ಲಿಯೂ ಸತ್ವರಜಸ್ತಮೋಗುಣಗಳಲ್ಲಿಯೂ ಇದ್ದು ಆಯಾ ನಾಮವನ್ನು ಪಡೆಯುವನು. ಅಂದರೆ ಬ್ರಹ್ಮದೇವರಲ್ಲಿದ್ದು ಬ್ರಹ್ಮನಾಮಕನಾಗಿಯೂ, ಋದ್ರದೇವರಲ್ಲಿದ್ದು ಋದ್ರನಾಮಕನಾಗಿಯೂ, ಹೀಗೆ ಇಂದ್ರಾದಿ ದೇವತೆಗಳಲ್ಲಿದ್ದು ಇಂದ್ರಾದಿನಾಮ ಉಳ್ಳವನಾಗುವನು ಹಾಗೆಯೇ ಮನುಷ್ಯರಲ್ಲಿದ್ದು ಮನುಷ್ಯರ ನಾಮಧೇಯ ಯುಕ್ತನಾಗುವನು ದೈತ್ಯದಾನವರಲ್ಲಿದ್ದು ತನ್ನಾಮಧೇಯವನ್ನು ಪಡೆಯುವನು. ಸತ್ವಗುಣದಲ್ಲಿದ್ದು ಸತ್ವಗುಣನೆಂತಲೂ ರಜೋಗುಣದಲ್ಲಿದ್ದು ರಜೋಗುಣನೆಂತಲೂ, ತಮೋಗುಣದಲ್ಲಿದ್ದು ತಮೋಗುಣನೆಂತಲೂ ಹೆಸರುಪಡೆದಿರುವನು. ಹೀಗೆ ಪ್ರಾಕೃತವಾದ ಸತ್ವಾದಿಗುಣಗಳಲ್ಲಿದ್ದು ಸತ್ವಾದಿಶಬ್ಧವಾಚ್ಯನಾಗುವನೇ ಹೊರತು ಆ ಗುಣಗಳಿಗೆ ತಾನೆಂದಿಗೂ ಒಳಗಾಗನು. ಸಾತ್ವಿಕರಾದ ಬ್ರಹ್ಮಾದಿದೇವತೆಗಳಲ್ಲಿದ್ದು ಸತ್ವಗುಣಜನ್ಯವಾದ ಪುಣ್ಯಫಲಗಳನ್ನು ಅವರವರ ಯೋಗ್ಯತಾನುಸಾರ ಅವರಿಗುಣಿಸುವನು. ರಾಜಸರಾದ ಮನುಷ್ಯರಲ್ಲಿದ್ದು ರಜೋಗುಣ

ಜನ್ಯವಾದ ಮಿಶ್ರಫಲವನ್ನು ಅವರವರ ಯೋಗ್ಯತಾನುಸಾರ ಉಣಿಸುವನು. ತಾಮಸರಾದ ದೈತ್ಯದಾನವರುಗಳಲ್ಲಿದ್ದು ತಮೋಗುಣ ಜನ್ಯವಾದ ಪಾಪ ಫಲವನ್ನು ಅವರ ಯೋಗ್ಯತಾನುಸಾರ ಅವರಿಗೆ ಉಣಿಸುವನು. ತಾನು ಪರಕೀಯರ ಪಾಪಗಳನ್ನು ಪರಿಹರಿಸುವುದರಿಂದ ವೃಜಿನಾರ್ದನನೆಂದು ಪರ ಮಾತ್ಮನಿಗೆ ಹೆಸರು. ತಾನು ಪಾಪಿಯಾದರೆ ಪರರ ಪಾಪಗಳನ್ನು ಪರಿಹ ರಿಸುವದೆಂತು ? ಪರರ ಪಾಪಗಳನ್ನು ಪರಿಹರಿಸುವನೆಂದು ಹೇಳಿದುದರಿಂದ ಸ್ವತಃ ಪಾಪರಹಿತನೆಂದು ಹೇಳಬೇಕಾದುದೇ ಇಲ್ಲ. ಕೇವಲ ಪಾಪರಹಿತನೇ ಅಲ್ಲದೆ ಜ್ಞಾನಾನಂದ ಸ್ವರೂಪನೂ ಆಗಿರುವನು.

ರಮಾಬ್ರಹ್ಮಾದಿಗಳೂ ಕೂಡ ಜ್ಞಾನಾನಂದ ಸ್ವರೂಪರೇ ಆದರೂ ಅವರುಗಳು ಪರಿಮಿತಿಯುಳ್ಳ ಜ್ಞಾನಾನಂದ ಉಳ್ಳವರು. ಪರಮಾತ್ಮನ ಜ್ಞಾನಾನಂದವು ಅಪರಿಮಿತವಾದ ಸಮಾನರಹಿತವಾದುದು. ಅದಲ್ಲದೆ ಪರಾಪೇಕ್ಷೆ ಇಲ್ಲದೆ ಸ್ವತಂತ್ರದಿಂದ ಅನುಭವಿಸುವ ಜ್ಞಾನಾನಂದ ಸ್ವರೂಪವು ಪರಮಾತ್ಮನದು. ರಮಾದಿಗಳ ಜ್ಞಾನಾನಂದವು ಭಗವದಧೀನವಾದುದು. ಆದುದರಿಂದ ಪರಮಾತ್ಮನೊಬ್ಬನೇ ಜ್ಞಾನಾನಂದ ಸ್ವರೂಪಗಳಲ್ಲಿ ಮುಖ್ಯ ನೆಂದು ಭಾವಿಸಬೇಕು. ಶ್ರೀಪರಮಾತ್ಮನು ಪ್ರಳಯಕ್ಕೆ ಆರಂಭಕಾಲದಲ್ಲಿ ಮುದ್ರಾಂತರ್ಗತನಾಗಿದ್ದು ಸಂಕರ್ಷಣ ನಾಮಕನಾಗಿ ಪ್ರಪಂಚವನ್ನೆಲ್ಲಾ ದಹಿಸುವನು. ಇದಕ್ಕೆ ಆಧಾರವು ಭಾಗವತ ದಶಮಸ್ಕಂಧದಲ್ಲಿ " ತತಃ ಸಾಂವರ್ತಕೋ ವಹ್ನಿಃ ಸಂಕರ್ಷಣ ಮುಖೋತ್ಥಿತಃ । ದಹತ್ಯನಿಲವೇಗೋ ತ್ಥಃ ಶೂನ್ಯಾನ್ಭೂವಿವರಾನ್ತಥಾ ॥ " ತದನಂತರ ಸಂಕರ್ಷಣನ ಮುಖದಿಂ ದ ಹೊರಟ ಸಂವರ್ತಾಗ್ನಿಯು ಶೂನ್ಯವಾದ ಭೂವಿವರಗಳನ್ನು ದಹಿಸುವು ದೆಂದು ಬರದಿದೆ. ಚರಪ್ರಾಣಿಗಳೆಂದರೆ ಚಲಿಸುತ್ತಿರುವ ಸುರಾಸುರ ನರ ಪಿಪೀಲಿಕಾದಿ ಸಕಲ ಪ್ರಾಣಿಗಳು. ಅಚಲವೆಂದರೆ ಚಲಿಸದೆ ಇರುವ ಸ್ಥಿರ ವಸ್ತುಗಳು. ಇವುಗಳಿಂದ ಕೂಡಿದ ಎಲ್ಲಾ ಪ್ರಪಂಚವನ್ನೂ ಪ್ರಳಯದಲ್ಲಿ ಪರಮಾತ್ಮನು ನುಂಗಿ ತನ್ನುದರದಲ್ಲಿಟ್ಟುಕೊಂಡು ವಟಪತ್ರಶಾಯಿಯಾಗು ವನು. ಆದುದರಿಂದ ಪರಮಾತ್ಮನು ಸಚರಾಚರ ಜಗದ್ಭುಕ್ ಎನಿಸಿಕೊ ಳ್ಳುವನು. ಆದರೂ ಅವನಿಗೆ ಯಾವ ವಿಧವಾದ ನಾಶವೂ ಇಲ್ಲದಕಾರಣ ಅವ್ಯಯನೆಂದು ತಿಳಿಯಬೇಕು.

ವಿದ್ಯೆ ತಾನೆಂದೆನಿಸಿಕೊಂಬನಿ
ರುದ್ಧದೇವನು ಸರ್ವಜೀವರ
ಬುದ್ಧಿಯೊಳ್ ನೆಲಸಿದ್ದು ಕೃತಿಪತಿ ಬುದ್ಧಿಯನಿಸುವನು ॥
ಸಿದ್ಧಿಯೆನಿಸುವ ಸಂಕರ್ಷಣ ಪ್ರ
ಸಿದ್ಧನಾಮಕ ವಾಸುದೇವನ
ವದ್ಯರೂಪ ಚತುಷ್ಟಯಗಳರಿತವನೆ ಪಂಡಿತನು ॥೬॥

ಪದ್ಯಾರ್ಥ.—ಅನಿರುದ್ಧದೇವನು=ಅನಿರುದ್ಧನಾಮಕ ಪರಮಾತ್ಮನು ತಾನು, ವಿದ್ಯೆಯೆಂದು=ಜೀವ ಪರಮಾತ್ಮರಿಗೆ ಪರಸ್ಪರ ಭೇದವನ್ನು ಹೇಳುವ ವಿದ್ಯೆಯೆಂದೆನಿಸಿಕೊಳ್ಳುವನು, ಕೃತಿಪತಿ=ಕೃತಿದೇವಿಯ ಪತಿಯಾದ ಪ್ರದ್ಯುಮ್ನನು, ಸರ್ವಜೀವರ=ಎಲ್ಲಾ ಜೀವರುಗಳ, ಬುದ್ದಿಯೊಳ್-ಬುದ್ದಿಯೊಳಗೆ, ನೆಲೆಸಿದ್ದು-ವಾಸಮಾಡುತ್ತಿದ್ದು. ಬುದ್ಧಿಯನಿಸುವನು=ಬುದ್ದಿ ಎಂದು ಕರೆಸಿಕೊಳ್ಳುವನು. ಸಂಕರ್ಷಣ=ಸಂಕರ್ಷಣನಾಮಕ ಪರಮಾತ್ಮನು, ಸಿದ್ದಿಯೆನಿಸುವ=ಸಿದ್ಧಿಯೆಂದು ಕರೆಸಿಕೊಳ್ಳುವ, ವಾಸುದೇವ-ವಾಸುದೇವ ನಾಮಕನಾದ ಶ್ರೀಪರಮಾತ್ಮನು, ಪ್ರಸಿದ್ದನಾಮಕ=ಪ್ರಸಿದ್ದನೆಂದು ಕರೆಸಿಕೊಳ್ಳುವನು, ಅನವದ್ಯರೂಪ ಚತುಷ್ಟಯಗಳ=ನಿರ್ದುಷ್ಟವಾದ ಈ ನಾಲ್ಕು ರೂಪಗಳನ್ನು, ಅರಿತವನೆ-ತಿಳಿದವನೇ, ಪಂಡಿತನು.

ತಾತ್ಪರ್ಯ.—ಅನಿರುದ್ಧನು ವಿದ್ಯೆಯೊಳಗಿದ್ದು ವಿದ್ಯೆಯೆನಿಸಿಕೊಂಬನು. ವಿದ್ಯೆ ಎಂದರೆ "ವಿದ್ಯಾತ್ಮ ನಿಭಿದಾಬೋಧಃ' ಎಂಬ ಪ್ರಮಾಣದಿಂದ ಜೀವಪರಮಾತ್ಮರಿಗೆ ಪರಸ್ಪರ ಭೇಧಚಿಂತನೆ (ವಿದ್ಯೆ) ಎಂದು ಸಿದ್ಧವಾಗುವುದು. ಈ ಜ್ಞಾನವು ಸಾಮಾನ್ಯವಾಗಿ ವಾಯು ಮತಾವಲಂಬಿಗಳಾರೋ ಅವರಲ್ಲಿ ಮಾತ್ರವೇ ಇರುವುದು. ಜೀವ ಬ್ರಹ್ಮೈಕ್ಯವನ್ನು ಹೇಳುವುದು ಅವಿದ್ಯೆಯೆಂದು ತಿಳಿಯಬೇಕು. ಗೀತೆಯಲ್ಲಿ "ದೈವೋ ವಿಸ್ತರಶಃ ಪ್ರೋಕ್ತಃ ಆ ಸುರೀಂ ಪಾರ್ಥಮೇಶ್ರುಣು । ಈಶ್ವರೋಽಹ ಮಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ ॥ ಆಢ್ಯೋಭಿಜನ ವಾನಸ್ಮಿಕೋಽನ್ಯೋಽಸ್ತಿ ಸದೃಶೋಮಯಾ ॥ ಯಕ್ಷ್ಯೇ ದಾಸ್ಯಾಮಿ ಮೋದಿಷ್ಯೆ ಇತ್ಯಜ್ಞಾನ ವಿಮೋಹಿತಾಃ ॥" ಇತ್ಯಾದಿ. ಅಸುರವನ್ನು ಹೇಳುವೆನು ಕೇಳು ! ನಾನೇ ಪರಮೇಶ್ವರನು. ನಾನೇ ಭೋಗಿ. ನಾನೇ ಸಿದ್ಧನು, ಬಲಾಢ್ಯನು, ಸುಖಿಯು ಭಾಗ್ಯವಂತನು, ಜನವಂತನು, ನನಗೆ ಸಮಾನರಾರಿರುವರು ? ಯಾಗವನ್ನು

ಮಾಡುವೆನು- ದಾನವನ್ನು ಕೊಡುವೆನು. ಆನಂದಪಡುವೆನೆಂದು ಇಂತಹ ಅಜ್ಞಾನದಿಂದ ಮೋಹಿತರಾಗಿರುವವರೇ ಅಸುರರೆಂಬಿವೇ ಮೊದಲಾದ ವಾಕ್ಯಗಳಿಂದ ಪಾರ್ಥನಿಗೆ ಶ್ರೀಕೃಷ್ಣನು ಉಪದೇಶಮಾಡಿರುವನು. ಇದೇ ಅವಿದ್ಯೆಯು. ಈ ವಿದ್ಯೆ ಅವಿದ್ಯೆಗಳೆರಡೂ ಅಹಂಕಾರದಿಂದಲೇ ಹುಟ್ಟುವುವು. ನಾನು ಸೇವಕನು, ಪರಮಾತ್ಮನು ಸಕಲ ಜಗತ್ಪ್ರಭು. ಸರ್ವ ಜಗದ್ವಿಲಕ್ಷಣನು. ಎಂದು ತಿಳಿಯಬೇಕಾದರೂ ಅಹಂಕಾರವೇ ಕಾರಣವು ನಾನೇ ಪರಬ್ರಹ್ಮನೆಂದು ತಿಳಿಯಲಿಕ್ಕೂ ಅಹಂಕಾರವೇ ಕಾರಣವು. ಅದರಲ್ಲಿ ಜೀವ ಬ್ರಹ್ಮರಿಗೆ ಭೇದವನ್ನು ಹೇಳುವ ವಿದ್ಯದೊಳಗಿದ್ದು ವಿದ್ಯೆಯೆಂಬ ಹೆಸರನ್ನು ಪಡೆಯುವವನು ಅನಿರುದ್ಧನಾಮಕ ಪರಮಾತ್ಮನೆಂದು ತಿಳಿಯಬೇಕು. ಕೃತಿಪತಿಯಾದ ಪ್ರದ್ಯುಮ್ನನು ಸರ್ವ ಜೀವರ ಬುದ್ಧಿಯೊಳಗೆ ವಾಸವಾಗಿದ್ದು ಬುದ್ಧಿಯೆಂಬ ಹೆಸರನ್ನು ಪಡೆದಿರುವನು. ಬುದ್ಧಿಯೆಂದರೆ "ಬುದ್ಧ್ಯಾ ಹ್ಯಾಂಶೇ ನಯೇನಾಸೌ ನಿಶ್ಚಯಂ ಪ್ರತಿಪದ್ಯತೇ" ಎಂಬ ಭಾಗವತ ವಚನದಿಂದ ಇದೋ! ಅದೋ! ಎಂಬ ಸಂಶಯವಿಲ್ಲದೆ ಇದೇ ಅಥವ ಅದೆ ಎಂದು ತೀರ್ಮಾನಿಸುವ ನಿಶ್ಚಯ ಜ್ಞಾನಕ್ಕೆ ಬುದ್ಧಿಯೆಂದು ಹೆಸರು. ಸಂಕರ್ಷಣ ನಾಮಕ ಪರಮಾತ್ಮನು ಸಿದ್ಧಿಯೆಂದು ಹೆಸರು ಪಡೆದಿರುವನು. ಸಿದ್ಧಿ ಅಂದರೆ, ಚಿತ್ತಶುದ್ಧಿಯಿಂದ ಉಂಟಾಗು ಭಗವತ್ಪ್ರಸಾಧವು. ಚಿತ್ತವು ಬುದ್ಧಿಯ ಪ್ರಭೇದವೇ ಆದರೂ ಬುದ್ಧಿಯು ದುರ್ವಿಷಯ ಸದ್ವಿಷಯಗಳಲ್ಲಿಯೂ ಕೂಡ ಪ್ರವೇಶಮಾಡುವುದು. ಸದ್ವಿಷಯದಲ್ಲಿ ಸ್ಥಿರವಾಗಿ ನಿಲ್ಲುವುವೇ ಚಿತ್ತವು. ಇದರಿಂದಾಗುವ ಭಗವತ್ಪ್ರಸಾಧವೇ ಸಿದ್ಧಿಯು. ಇಂತಹ ಸಿದ್ಧಿಯಲ್ಲಿ ಸಂಕರ್ಷಣನಿದ್ದು ಸಿದ್ಧಿಯೆಂಬ ಹೆಸರನ್ನು ಪಡೆದಿರುವನು.

ಎಲ್ಲಾ ಇಂದ್ರಿಯಗಳಿಗೂ ಮನಸ್ಸೇ ಪ್ರಧಾನವಾದುದು. ದಶೇಂದ್ರಿಯಗಳ ವ್ಯಾಪಾರವು ನಡಿಯಬೇಕಾದರೆ ಮನೋವೃತ್ತಿಯಿಂದಲ್ಲದೆ ಯಾವುದೂ ನಡಿಯುವಂತಿಲ್ಲ. ಮನೋನಿಗ್ರಹದಿಂದಲೇ ಮನುಷ್ಯನು ಜಿತೇಂದ್ರಿಯನೆಂದು ಪ್ರಸಿದ್ಧಿಯನ್ನು ಪಡೆಯಬೇಕು. ಮನೋನಿಗ್ರಹ ಮಾಡದೆ ಮನಬಂದಂತೆ ಕಾರ್ಯಮಾಡುವವನು ಪಾಪಿಯಾಗುವನು. ಇಂತಹ ಮನಃಸ್ವಾಧೀನತೆಯೆಂಬ ಜಿತೇಂದ್ರಿಯತ್ವಾದಿ ಪ್ರಸಿದ್ಧವಾದ ಕೀರ್ತಿಯಲ್ಲಿ ವಾಸುದೇವನಾಮಕ ಪರಮಾತ್ಮನಿದ್ದು ಪ್ರಸಿದ್ಧನೆಂಬ ಹೆಸರನ್ನು ಪಡೆಯುವನು.

ಹೀಗೆ ಅಹಂಕಾರ ಜನ್ಯವಾದ ವಿದ್ಯೆ, ಬುದ್ಧಿಯಿಂದಾಗುವ ನಿಶ್ಚಯಜ್ಞಾನ ಚಿತ್ತದಿಂದಾಗುವ ಸಿದ್ಧಿ, ಮನಸ್ಸಿನಿಂದಾಗುವ ಪ್ರಸಿದ್ಧಿ ಎಂಬ ನಾಲ್ಕು ಸ್ಥಳಗಳಲ್ಲಿ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವರೆಂಬ ನಾಲ್ಕು ರೂಪಗಳಿಂದ ಶ್ರೀಪರಮಾತ್ಮನು ವಿದ್ಯೆ. ಬುದ್ಧಿ, ಸಿದ್ಧಿ, ಪ್ರಸಿದ್ಧಿಯೆಂಬ ನಾಲ್ಕು ಹೆಸರುಗಳನ್ನು ಪಡೆಯುವವನಾದರೂ ಅನವದ್ಯನಾಗಿರುವನು. ಮತ್ತು ಅದರ ಸಂಬಂಧವಿಲ್ಲದೆ ನಿರ್ದೋಷನಾಗಿಯೂ ಇರುವನು. ಈ ರೀತಿಯಾದ ನಾಲ್ಕು ರೂಪಗಳನ್ನು ತಿಳಿದವನೇ ಪಂಡಿತನು.

ಅವತಾರಿಕೆ.—ಹೀಗೆ ಮೇಲಿನ ಪದ್ಯದಿಂದ ಅನಿರುದ್ಧಾದಿ ವಾಸುದೇವಪರ್ಯಂತವಾದ ನಾಲ್ಕು ರೂಪಗಳ ವ್ಯಾಪ್ತಿಯನ್ನು ಹೇಳಿ ಈಗ ಐದನೆಯದಾದ ನಾರಾಯಣರೂಪ ವ್ಯಾಪ್ತಿಯನ್ನು ಹೇಳುತ್ತಾರೆ.—

ತನುಚತುಷ್ಟಯಗಳೊಳು ನಾರಾ
ಯಣನು ಹೃತ್ಕಮಲಾಖ್ಯ ಸಿಂಹಾ
ಸನದೊಳನಿರುದ್ಧಾದಿ ರೂಪಗಳಿಂದ ಶೋಭಿಸುತಾ ।
ತನಗೆ ತಾನೇ ಸೇವ್ಯಸೇವಕ
ನೆನಿಸಿ ಸೇವಾಸಕ್ತ ಸುರರೊ
ಳನವರತ ನೆಲೆಸಿದ್ದು ಸೇವೆಯಕೊಂಬನವರಂತೆ ॥೭॥

ಪದ್ಯಾರ್ಥ.—ತನುಚತುಷ್ಟಯಗಳೊಳು=ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವನೆಂಬ ನಾಲ್ಕು ರೂಪಗಳುಳ್ಳ ತನ್ನ ಶರೀರಗಳಲ್ಲಿ, ನಾರಾಯಣನು ಹೃತ್ಕಮಲಾಖ್ಯ ಸಿಂಹಾಸನದೊಳು=ಹೃದಯ ಕಮಲವೆಂಬ ಸಿಂಹಾಸನದಲ್ಲಿ, ಅನಿರುದ್ಧಾದಿ ರೂಪಗಳಿಂದ ಶೋಭಿಸುತೆ=ಅನಿರುದ್ಧಾದಿ ನಾಲ್ಕುರೂಪಗಳ ಮಧ್ಯದಲ್ಲಿ ಶೋಭಿಸುತ್ತಾ, ತನಗೆತಾನೆ=ತನ್ನ ಅನಿರುದ್ಧಾದಿರೂಪಗಳಿಂದ, ತಾನೆ=ನಾರಾಯಣ ರೂಪಿಯಾದ ತಾನೇ, ಸೇವ್ಯ ಸೇವಕನೆನಿಸಿ ನಾರಾಯಣ ರೂಪದಿಂದ ಸೇವ್ಯನಾಗಿಯೂ, ಅನಿರುದ್ಧಾದಿ ರೂಪಗಳಿಂದ ಸೇವಕನಾಗಿಯೂ, ಎನಿಸಿ – ಪ್ರಖ್ಯಾತನಾಗಿ, ಸೇವಾಸಕ್ತಸುರರೊಳು=ತನ್ನ ಸೇವಾನಿರತರಾದ ರಮಾ ಬ್ರಹ್ಮಾದಿ ದೇವತೆಗಳಲ್ಲಿ, ಅನವರತ-ಅವಿಚ್ಛಿನ್ನವಾಗಿ, ನೆಲೆಸಿದ್ದು=ವಾಸವಾಗಿದ್ದು, ಅವರಂತೆ=ರಮಾ ಬ್ರಹ್ಮಾದಿಗಳೋಪಾದಿಯಲ್ಲಿ, ಸೇವೆಯಕೊಂಬ=ಸೇವೆಯನ್ನು ಸ್ವೀಕರಿಸುವನು ಅಥವಾ ಅವರಂತೆ = ರಮಾ ಬ್ರಹ್ಮಾದಿಗಳು ಇಂದ್ರಾದಿಗಳಿಂದ ಸೇವೆ

ಯನ್ನು ತೆಗೆದುಕೊಳ್ಳುವಂತೆ ತಾನು ರಮಾ ಬ್ರಹ್ಮಾದಿ ಸಮಸ್ತ ದೇವತೆಗಳಿಂದಲೂ ಸೇವೆಯನ್ನು ಸ್ವೀಕರಿಸುವನು.

ತಾತ್ಪರ್ಯ.—ಶ್ರೀಪರಮಾತ್ಮನು ನಾರಾಯಣ ರೂಪದಿಂದ ಮಾಡುವ ಕೃತ್ಯವೇನೆಂದರೆ.—

ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವರೆಂಬ ನಾಲ್ಕು ರೂಪಗಳುಳ್ಳ ತನ್ನ ಶರೀರಗಳ ಹೃದಯ ಕಮಲಗಳೆಂಬ ಸಿಂಹಾಸನದಲ್ಲಿ ಕುಳಿತು ಅವುಗಳ ಮಧ್ಯದಲ್ಲಿ ಶೋಭಿಸುತ್ತಿರುವನು, ಅಂದರೆ ಅನಿರುದ್ಧನಾಮಕ ಪರಮಾತ್ಮನ ದೇಹದ ಹೃದಯಕಮಲದಲ್ಲಿ ನಾರಾಯಣನು ಅನಿರುದ್ಧಾದಿ ನಾಲ್ಕು ರೂಪಗಳಿಂದ ಸೇವೆಯನ್ನು ಸ್ವೀಕರಿಸುತ್ತಾ ಶೋಭಿಸುತ್ತಿರುವನು. ಇದರಂತೆ ಪ್ರದ್ಯುಮ್ನ ಸಂಕರ್ಷಣ, ವಾಸುದೇವರೂಪಗಳ ಮಧ್ಯೆ ಒಂದೊಂದು ರೂಪದ ಹೃದಯ ಕಮಲವೆಂಬ ಸಿಂಹಾಸನದಲ್ಲಿಯೂ ನಾರಾಯಣರೂಪದಿಂದಿದ್ದು ಅನಿರುದ್ಧಾದಿ ನಾಲ್ಕು ರೂಪಗಳಿಂದಲೂ ಸೇವ್ಯನಾಗಿ ಶೋಭಿಸುತ್ತಿರುವನೆಂಬ ಭಾವವು. ಹೀಗೆ ಅನಿರುದ್ಧಾದಿ ರೂಪಗಳಿಂದ ಸೇವೆ ಮಾಡುತ್ತಾ ನಾರಾಯಣರೂಪದಿಂದ ಸೇವೆಯನ್ನು ಕೈಗೊಳ್ಳುತ್ತಾ ತಾನೇ ಸೇವ್ಯ ಸೇವಕನೆಂದು ಪ್ರಸಿದ್ಧನಾಗಿರುವನು. ಇದಲ್ಲದೆ ತನ್ನನ್ನು ಸರ್ವದಾ ಸೇವಿಸುತ್ತಿರುವ, ರಮಾ ಬ್ರಹ್ಮಾದಿ ದೇವತೆಗಳ ಹೃದಯಕಮಲದ ಸಿಂಹಾಸನದಲ್ಲಿಯೂ ಅನಿರುದ್ಧಾದಿ ರೂಪಚತುಷ್ಟಯಗಳಿಂದ ಶೋಭಿಸುತ್ತಾ ವಾಸವಾಗಿದ್ದು ರಮಾ ಬ್ರಹ್ಮಾದಿಗಳಿಂದ ಸೇವೆ ಮಾಡುತ್ತಾ ಅಂತರ್ಯಾಮಿರೂಪದಿಂದ ಸೇವೆಯನ್ನು ಸ್ವೀಕರಿಸುವನು.

ವಿಶೇಷಾರ್ಥ.—"ತನುಚತುಷ್ಟಯಗಳೊಳು" ಎಂಬ ಪದಕ್ಕೆ ಅನಿರುದ್ಧಾದಿ ನಾಲ್ಕು ದೇಹಗಳಲ್ಲಿ ಎಂದು ಮೇಲೆ ಹೇಳಿದರ್ಥವಲ್ಲದೆ ಮತ್ತೊಂದು ಪ್ರಕಾರವೂ ಅರ್ಥಮಾಡಬಹುದು. ಒಬ್ಬೊಬ್ಬ ಜೀವನಿಗೂ ದೇಹಾವರಣಗಳುಂಟು. ಅದಾವುದೆಂದರೆ, ಮೊದಲು ಜೀವನ ಸ್ವರೂಪ ದೇಹ ಎರಡನೇಯದು ಲಿಂಗದೇಹ. ಅದು ಜೀವನ ಸ್ವರೂಪ ದೇಹದ ಮೇಲೆ ಆವರಕವಾಗಿರುವುದು. ಅದರಮೇಲೆ ಅನಿರುದ್ಧದೇಹವು ಆವರಣಭೂತವಾಗಿರುವುದು. ಅದರಮೇಲೆ ಈ ಸ್ಥೂಲದೇಹವಿರುವುದು. ಶ್ರೀಮನ್ನಾರಾಯಣನು ಈ ನಾಲ್ಕು ದೇಹಗಳಲ್ಲಿಯೂ ಹೃದಯಕಮಲ ಸಿಂಹಾಸನದ ಮೇಲೆ ಅನಿರುದ್ಧಾದಿ ನಾಲ್ಕು ರೂಪಗಳಿಂದ ಶೋಭಿಸುತ್ತಾ ವಾಸವಾಗಿದ್ದು, ಜೀವ

ರೂಪನಾಗಿ ಜೀವನಲ್ಲಿದ್ದು ಸೇವೆಮಾಡಿ, ಶ್ರೀನಾರಾಯಣರೂಪದಿಂದ ಸೇವೆಯನ್ನು ಸ್ವೀಕರಿಸುವನು. ಮಿಗಲಾದ ಪದಗಳಿಗೆ ಅರ್ಥವು ಮೇಲೆ ಹೇಳಿದಂತೆಯೇ ತಿಳಿಯಬೇಕು.

ಅವತಾರಿಕೆ.—ಜಾಗ್ರದಾದ್ಯವಸ್ಥೆಗಳು ಜೀವರಿಗೆ ಪರಮಾತ್ಮನಿಂದಲೇ ಆಗುವುದೆಂದು ಹೇಳುತ್ತಾರೆ.-

ಜಾಗರ ಸ್ವಪ್ನಂಗಳೊಳು ವರ
ಭೋಗಿಶಯನ ಬಹುಪ್ರಕಾರ ವಿ
ಭಾಗಗೈಸಿ ನಿರಂಶಜೀವರಚಿಚ್ಛರೀರವನು ||
ಭೋಗವಿತ್ತು ಸುಷುಪ್ತಿಕಾಲದಿ
ಸಾಗರವ ನದಿಕೂಡುವಂತೆ ವಿ
ಯೋಗರಹಿತನು ಅಂಶಗಳ ಏಕತ್ರ ಐದಿಸುವ ||೮||

ಪದ್ಯಾರ್ಥ.--ವರಭೋಗಿಶಯನ=ವರ=ಉತ್ತಮನಾದ, ಭೋಗಿ=ಸರ್ಪವೇ ಅಂದರೆ ಶೇಷದೇವರೆ, ಶಯನ=ಹಾಸಿಗೆಯಾಗಿ ಉಳ್ಳ ಶ್ರೀಪರಮಾತ್ಮನು, ಜಾಗರಸ್ವಪ್ನಂಗಳೊಳು=ಜಾಗರ=ಜೀವರ ಜಾಗ್ರದವಸ್ಥೆಗಳಲ್ಲಿಯೂ ಸ್ವಪ್ನಂಗಳೊಳು-ಸ್ವಪ್ನಾವಸ್ಥೆಗಳಲ್ಲಿಯೂ, ನಿರಂಶಜೀವರ-ಅಂಶರಹಿತರಾದ ಮನುಷ್ಯಾದಿ ಜೀವರ ಚಿಚ್ಛರೀರವನು, ಬಹುಪ್ರಕಾರ=ನಾನಾ ವಿಧವಾಗಿ, ವಿಭಾಗಗೈಸಿ=ವಿಭಾಗಗಳನ್ನು ಮಾಡಿ, ಭೋಗವಿತ್ತು-ಭೋಗಗಳನ್ನು ಕೊಟ್ಟು, ಸುಷುಪ್ತಿಕಾಲದಿ=ನಿದ್ರಾವಸ್ಥೆಯಲ್ಲಿ, ವಿಯೋಗರಹಿತನು=ವಿಯೋಗಶೂನ್ಯನಾಗಿದ್ದರೂ, ಸಾಗರವ ನದಿಕೂಡುವಂತೆ=ಸಮುದ್ರವನ್ನು ನದಿಯು ಸೇರುವಂತೆ, ಅಂಶಗಳ=ಜೀವರ ಅಂಶಗಳನ್ನು, ಏಕತ್ರ-ಒಂದೇ ಸ್ಥಳದಲ್ಲಿ, ಐದಿಸುವ=ಸೇರಿಸುವನು.

ತಾತ್ಪರ್ಯ.--ಶೇಷಶಯನನಾದ ಶ್ರೀಪರಮಾತ್ಮನು ಮನುಷ್ಯರಿಗೆ, ಜಾಗ್ರದವಸ್ಥೆಯಲ್ಲಿ ಅಂದರೆ ನಾವು ಎಚ್ಚತ್ತು ವ್ಯವಹಾರಾದಿಗಳನ್ನು ನಡಿಸುತ್ತಿರುವ ಕಾಲದಲ್ಲಿ, ನಿರಂಶರೆಂದರೆ, ಮನುಷ್ಯಾದಿ ತೃಣಾಂತ ಜೀವರೆಂದರ್ಥ. ಇಂತಹಾ ಜೀವರ ಜ್ಞಾನಸ್ವರೂಪವಾದ ಸ್ವರೂಪದೇಹವನ್ನು, ಮನುಷ್ಯ, ಆನೆ, ಕುದುರೆ, ಗೋವು, ಎಮ್ಮೆ ಮೊದಲಾದವುಗಳನ್ನಾಗಿ ವಿಭಾಗಿಸಿ ಜೀವರ ಯೋಗ್ಯತಾನುಸಾರವಾಗಿ ಅವರವರಿಗೆ ಹೆಂಡತಿ, ಮಕ್ಕಳು ಧನಧಾನ್ಯ ಮೊದಲಾದವುಗಳನ್ನು ಕೊಟ್ಟು ಭೋಗಪಡಿಸುವನು. ಅದೇ

ಪರಮಾತ್ಮನು, ಸ್ವಪ್ನಾವಸ್ಥೆಯಲ್ಲಿ ಎಚ್ಚರ ಕಾಲದಲ್ಲಿ ನಾವು ಮಾಡಿರುವ ಸ್ಥಳಗಳನ್ನೂ, ಜನರು, ಆನೆ, ಕುದುರೆ ಮೊದಲಾದ ನಿರಂಶ ಜೀವರ ಸ್ವರೂಪದೇಹಗಳನ್ನೂ ಸ್ಥೂಲದೇಹಗಳನ್ನೂ ಅಂಶಿಗಳನ್ನಾಗಿ ವಿಭಾಗ ಮಾಡುವನು. ಅಂದರೆ, ನಾವು ಸ್ವಪ್ನದಲ್ಲಿ ಯಾವ ಬಂಧು ವರ್ಗವನ್ನು, ಆನೆ, ಕುದುರೆಗಳನ್ನು ಕಾಣುವೆವೋ ಅವುಗಳು ನಿಜವಾದವುಗಳಲ್ಲ. ಆ ಸ್ವಪ್ನ ಕಾಲದಲ್ಲಿ ಮಾತ್ರ ನಿಜವಾಗಿ ಬಂಧುಗಳನ್ನೇ ಕಂಡಂತಿರುವದು. ಅದರ ಕಾರಣವೇನೆಂದರೆ— ಶ್ರೀಪರಮಾತ್ಮನು ನಾವು ಸ್ವಪ್ನದಲ್ಲಿ ಕಾಣುವ ಜನರ ಅಥವಾ ಆನೆ, ಮೊದಲಾದ ಜೀವರುಗಳ ಅಂಶವನ್ನು ಬೇರ್ಪಡಿಸಿ ಅವರ ಸ್ಥೂಲ ದೇಹಗಳಂತೆ ಬೇರೆ ದೇಹಗಳನ್ನು ಸೃಷ್ಟಿಸಿ, ಸ್ವಪ್ನಗಳಲ್ಲಿ ತೋರಿಸಿ ಭೋಗವನ್ನುಂಟುಮಾಡಿಸುವನು. ತಿರಿಗಿ ಗಾಢನಿದ್ರೆ ಬಂದಕೂಡಲೆ ಬೇರ್ಪಡಿಸಿದ ಜೀವರ ಅಂಶಗಳನ್ನು ಎಲ್ಲಿಂದ ಆ ಅಂಶವು ವಿಭಾಗ ಮಾಡಲ್ಪಟ್ಟಿತ್ತೋ ಅಲ್ಲಿಗೇನೇ ಸೇರಿಸಿಬಿಡುವನು. ಅದು ಹೇಗೆಂದರೆ— ಸಮುದ್ರೋದಕವು ಸೂರ್ಯನ ಕಿರಣಗಳಿಂದ ಆವಿಯಾಗಿ ಪರಿಣಮಿಸಿ ಮೇಘದಲ್ಲ ಸೇರಿ ಮಳೆಯಾಗಿ ಕರೆದು ಅದೇ ಉದಕವೇ ನದಿಯಾಗಿ ಪ್ರವಹಿಸಿ ಮತ್ತು ಸಮುದ್ರವನ್ನೇ ಸೇರುವಂತೆ, ಪರಮಾತ್ಮನಿಂದ ಸೃಷ್ಟವಾದ ಅಂಶವು ಮತ್ತೂ ಪೂರ್ವಾಂಶ ಜೀವರಲ್ಲಿಯೇ ಲಯವಾಗುವುದೆಂದು ತಾತ್ಪರ್ಯ.

ವಿಶೇಷಾರ್ಥ.— ಜೀವರಲ್ಲಿ ಸಾಂಶಜೀವರೆಂತಲೂ, ನಿರಂಶಜೀವರೆಂತಲೂ ಎರಡು ಪ್ರಕಾರ ಉಂಟು. ಅದರಲ್ಲಿ ಒಂದಂಶದಿಂದ ತಮ್ಮ ಲೋಕಗಳಲ್ಲಿ ಸ್ಥೂಲದೇಹದಿಂದ ವಾಸಮಾಡುವುದಲ್ಲದೆ ತತ್ವಾಭಿಮಾನಿಗಳಾಗಿ ಸೂಕ್ಷ್ಮರೂಪಗಳಿಂದ ಎಲ್ಲರ ದೇಹದಲ್ಲಿಯೂ ಪ್ರತ್ಯೇಕ ಪ್ರತ್ಯೇಕವಾಗಿ ವಾಸಮಾಡುವುದು, ಅಥವಾ ಒಂದು ರೂಪದಿಂದ ತಮ್ಮ ಲೋಕದಲ್ಲಿದ್ದುಕೊಂಡು ಭೂಮಿಯಲ್ಲಿ ಒಂದು ಅಂಶದಿಂದ ಜನಿಸುವದು. ಈ ಗುಣಗಳಿಂದ ಕೂಡಿದವರೇ ಸಾಂಶರೆಂದು ತಿಳಿಯಬೇಕು.

ಉದಾಹರಣೆ.— ವಾಯುದೇವರು ಮೂಲರೂಪದಿಂದ ತಮ್ಮ ಲೋಕದಲ್ಲಿದ್ದರೂ ಅಂಶದಿಂದ ಹನುಮ ಭೀಮಾದ್ಯವತಾರಗಳನ್ನು ಮಾಡಿ ಭೂಮಿಯಲ್ಲಿಯೂ ಇದ್ದರು. ಅದೇ ಕಾಲದಲ್ಲಿ ಎಲ್ಲರ ಚಿತ್ತದಲ್ಲಿಯೂ ಚಿತ್ತಾಭಿಮಾನಿಗಳಾಗಿ ವಾಸವಾಗಿದ್ದರು. ಹೀಗೆ ಇಂದ್ರದೇವರು ಸ್ವರ್ಗವನ್ನು ಪಾಲಿಸುತ್ತ ಅಲ್ಲಿದ್ದರೂ ಅಂಶದಿಂದ ಅರ್ಜುನನಾಗಿಯೂ ವಾಲಿಯಾಗಿಯೂ

ಜನಿಸಿದ್ದನು. ಇದಲ್ಲದೆ ಎಲ್ಲರ ಕರಗಳಿಗೆ ಅಭಿಮಾನಿಯಾಗಿ ಸಕಲರ ಕರಗಳಲ್ಲಿಯೂ ಸೂಕ್ಷ್ಮರೂಪದಿಂದಿದ್ದು, ಕೈಗಳಿಂದ ಮಾಡುವ ಕೆಲಸಗಳನ್ನು ಮಾಡಿಸುತ್ತಿರುವನು. ಇವರೆಲ್ಲರೂ ಸಾಂಶರೇ. ಮತ್ತು ಕಲಿ ಮೊದಲಾದ ದೈತ್ಯರೂ ಸ್ಥೂಲದೇಹದಿಂದ ತಮ್ಮ ಲೋಕಗಳಲ್ಲಿಯೂ, ಇಂದ್ರಿಯಾಭಿಮಾನಿಗಳಾಗಿ ಎಲ್ಲರ ಇಂದ್ರಿಯಗಳಲ್ಲಿಯೂ ಸೂಕ್ಷ್ಮರೂಪದಿಂದಲೂ ದುರ್ಯೋಧನಾದಿಗಳಾಗಿ ಭೂಮಿಯಲ್ಲಿ ಜನಿಸಿಯೂ ಇರುವರು. ಆದುದರಿಂದ ಇಂತಹ ದೈತ್ಯರೂ ಕೂಡ ಸಾಂಶರೇ. ಮನುಷ್ಯಾದಿ ತೃಣಾಂತರಾದ ಜೀವರು ಮಾತ್ರ ಹೀಗೆ ಸಾಂಶರಲ್ಲ. ಅಲ್ಲಿದ್ದರೆ ಇಲ್ಲಿಲ್ಲ; ಇಲ್ಲಿದ್ದರೆ ಅಲ್ಲಿಲ್ಲ ಆದ್ದರಿಂದ ಇವರೆಲ್ಲರನ್ನು ನಿರಂಶ ಜೀವರೆಂದರಿಯಬೇಕು. ಆದರೆ ಇವರಿಗೂ ಕೂಡ ಕೆಲವು ಕಾಲದಲ್ಲಿಮಾತ್ರ ಸಾಂಶತ್ವವು ಬರುವದು.

ಆಧಾರ.– ವಾಮನಪುರಾಣದಲ್ಲಿ “ ನಿರಂಶಾನಾಂಚ ಜೀವಾನಾಂ ಕ್ವಚಿತ್ಸಾಂಶತ್ವಮಿಷ್ಯತೇ | ಲೋಕಾಂತರೇತು ಸಾಂಶತ್ವಂ ಸುಖಾದೇವ ಭವಿಷ್ಯತಿ || ” ನಿರಂಶರಾದ ಜೀವರಿಗೂ ಕೂಡ ಕೆಲವು ಕಾಲದಲ್ಲಿ ಸಾಂಶತ್ವವು ಅಂಗೀಕರಿಸಲ್ಪಡುವದು. ಇವರು ಪುಣ್ಯಸಾಧನವನ್ನು ಮಾಡಿಕೊಂಡು ಸ್ವರ್ಗಾದಿ ಲೋಕದಲ್ಲಿ ವಾಸಮಾಡುತ್ತಾ ತಮ್ಮ ಪುಣ್ಯ ಫಲವನ್ನು ಭೋಗಿಸುತ್ತಿರುವಾಗ ಸಾಂಶರಾಗುವರು. ಭೂಲೋಕದಲ್ಲಿ ಎಂದಿಗೂ ಸಾಂಶರಾಗುವುದಿಲ್ಲವೆಂದು ಹೇಳಲ್ಪಟ್ಟಿರುವದು. ಆದರೂ ಶ್ರೀಪರಮಾತ್ಮನು ಜೀವರಿಗೆ ಸ್ವಪ್ನಾದಿಗಳಲ್ಲಿ ಸುಖದುಃಖಗಳನ್ನು ಭೋಗಮಾಡಿಸಲಿಚ್ಛಿಸುವಾಗ ನಿರಂಶ ಜೀವರನ್ನು ಕೂಡ ತನ್ನ ಇಚ್ಛೆಯಿಂದ ಸಾಂಶರನ್ನಾಗಿ ಮಾಡುವನು. “ಅನಂಶಸ್ಯಾಪಿ ಜೀವಸ್ಯ ವಿಭಾಗಂ ಬಹುಧಾಹರಿಃ | ಕೃತ್ವಾಭೋಗಾನ್ಪ್ರದಾಯೈವ ಚೈತ್ಯಮಾಪದ್ಯತೇ ಪುನಃ || ” ನಿರಂಶರಾದ ಜೀವರಿಗೆ ಸ್ವಪ್ನಕಾಲದಲ್ಲಿ ಮಲಗಿರುವ ಜೀವನ ಅಂಶವನ್ನು ವಿಭಾಗಿಸಿ ಸ್ಥೂಲದೇಹಾಂತವನ್ನು ಕೊಡಿಸಿ ಸ್ಥಲಾಂತರಕ್ಕೆ ಕರೆದುಕೊಂಡು ಹೋಗಿ ಅಲ್ಲಿರುವ ಗಜ ತುರುಗಾದಿಗಳ ಅಂಶವನ್ನು ವಿಭಾಗಮಾಡಿ ಅವುಗಳ ರೂಪಗಳನ್ನು ಕೊಡಿಸಿ ಪರಸ್ಪರ ಸಂಬಂಧದಿಂದ ಸುಖದುಃಖಾದಿಗಳನ್ನು ಭೋಗಿಸುವಂತೆ ಮಾಡಿ ಪುನಃ ಆಯಾ ಜೀವರ ಅಂಶಗಳನ್ನು ಅಲ್ಲಿಯೇ ಸೇರಿಸಿ ಬಿಡುವನು, ಎಂದು ಮೇಲಿನ ಶ್ಲೋಕದ ತಾತ್ಪರ್ಯವು. ಬಿಂಬಕ್ರಿಯಾರೂಪವಾಗಿ ಸರ್ವದಾ ಜೀವನೊಂದಿಗೆ ಇರುವವನಾದುದರಿಂದ ವಿಯೋಗ ರಹಿತನೆಂದು ಹೇಳಲ್ಪಟ್ಟಿದೆ.

ಅವತಾರಿಕೆ.—ಭಗವನ್ಮಹಿಮೆಯು ಅದ್ಭುತವೆಂದು ಹೇಳುತ್ತಾರೆ.—

ಭಾರ್ಯರಿಂದೊಡಗೂಡಿ ಕಾರಣ
ಕಾರ್ಯವಸ್ತುಗಳಲಿ ಪ್ರೇರಕ
ಪ್ರೇರ್ಯರೂಪಗಳಿಂದ ಪಟತಂತುಗಳವೊಲಿದ್ದು ॥
ಸೂರ್ಯಕಿರಣಗಳಂತೆ ತನ್ನಯ
ವೀರ್ಯದಿಂದಲಿ ಕೊಡುತ ಕೊಳುತಿಹ
ನಾರ್ಯರಿಗೆ ಈತನ ವಿಹಾರವು ಗೋಚರಿಪುದೇನೋ ॥೯॥

ಪದ್ಯಾರ್ಥ.— ಭಾರ್ಯರಿಂದ-ಶ್ರೀ ಭೂ, ದುರ್ಗಾನಾಮಕರಾದ ಹೆಂಡರುಗಳಿಂದ, ಒಡಗೂಡಿ=ಸಮೇತನಾಗಿ, ಕಾರಣಕಾರ್ಯವಸ್ತುಗಳ-ಕಾರಣ=ಸೃಷ್ಟಿಗೆ ಕಾರಣಭೂತಳಾದ ಜಡಪ್ರಕೃತಿಯಲ್ಲಿಯೂ, ಕಾರ್ಯವಸ್ತುಗಳಲಿ=ಕಾರ್ಯಭೂತವಾದ ಜಗತ್ತು ಮೊದಲಾದ ವಸ್ತುಗಳಲ್ಲಿಯೂ, ಪ್ರೇರಕ ಪ್ರೇರ್ಯರೂಪಗಳಿಂದ=ಪ್ರೇರಣೆಮಾಡುವ ರೂಪದಿಂದಲೂ, ಪ್ರೇರಣೆಮಾಡಿಸಿಕೊಳ್ಳುವ ರೂಪಗಳಿಂದಲೂ, ಪಟತಂತುಗಳವೋಲ್=ಪಟ-ವಸ್ತ್ರ, ತಂತು=ದಾರ, ಇವುಗಳಂತೆ ಇದ್ದು, ಸೂರ್ಯ ಕಿರಣಗಳಂತೆ=ಸೂರ್ಯಕಿರಣಗಳು, ಸಮುದ್ರೋದಕವನ್ನು ಪಾನಮಾಡಿ ಮೇಘದಲ್ಲಿಟ್ಟು, ಮತ್ತು ಮಳೆರೂಪದಿಂದ ಸಮುದ್ರಾದಿಗಳನ್ನು ತುಂಬುವಂತೆ, ತನ್ನಯ ವೀರ್ಯದಿಂದಲಿ=ಸಾಮರ್ಥ್ಯದಿಂದಲೇ, ಕೊಡುತ-ಜೀವರಿಗೆ ಪುಣ್ಯ ಪಾಪಗಳ ಫಲಗಳನ್ನು ಕೊಡುತ, ಕೊಳುತಿಹನು=ಸೇವೆಯನ್ನು ಸ್ವೀಕರಿಸುತ್ತಿರುವನು, ಅನಾರ್ಯರಿಗೆ=ನೀಚರಿಗೆ ಇವನ ವಿಹಾರವು=ಆಟವು, ಗೋಚರಿಪುದೇನೋ-ತಿಳಿಯುವುದೇನೋ ಎಲೈ ಮಾನವ ! ಅಥವಾ ಕೊಡುತಿಹನು ಆರ್ಯರಿಗೆ ಎಂದು ಪದಮಾಡಿದರೆ ಆರ್ಯರಾದ ಬ್ರಹ್ಮಾದಿಗಳಿಗಾದರೂ ಸಾಕಲ್ಯವಾಗಿ ಗೋಚರವಾಗುವದೇ ? ಅಂದರೆ ಅವರವರ ಯೋಗ್ಯತಾನುಸಾರವಾಗಿಯೇ ಭಗವನ್ಮಹಿಮೆಯನ್ನು ಬಲ್ಲರು

ತಾತ್ಪರ್ಯ.—ಶ್ರೀಪರಮಾತ್ಮನು, ಶ್ರೀ ಭೂ ದುರ್ಗಾಖ್ಯ ಭಾರ್ಯರಿಂದ ಸಮೇತನಾಗಿ ಕಾರಣ ಕಾರ್ಯವಸ್ತುಗಳಲ್ಲಿ ಅಂದರೆ ಒಟ್ಟು ಪ್ರಪಂಚದ ಸೃಷ್ಟಿಗೆ ಕಾರಣಳು ಜಡಪ್ರಕೃತಿ, ಕಾರ್ಯವು ಜಗತ್ತು ಮನುಷ್ಯಾದಿಗಳ ಉತ್ಪತ್ತಿಗೆ ಶುಕ್ರಶೋಣಿತ ಕಾರಣ, ಮನುಷ್ಯಾದಿಗಳು ಕಾರ್ಯ. ವೃಕ್ಷಾದಿಗಳುತ್ಪತ್ತಿಗೆ ಬೀಜ, ಮಣ್ಣು, ನೀರು ಮೊದಲಾದವು ಕಾರ್ಯ, ಕಾರ್ಯವೃಕ್ಷಾ

ದಿಗಳು. ಹೀಗೆ ಒಂದೊಂದು ವಸ್ತುವಿನಲ್ಲಿಯೂ ಕಾರಣ ಕಾರ್ಯಗಳು ಬೇರೆ ಬೇರೆಯಾಗಿ ಏರ್ಪಡುವುವು. ಕಾರಣ ವಸ್ತುಗಳಲ್ಲಿ ಪ್ರೇರಕರೂಪದಿಂದಲೂ ಕಾರ್ಯವಸ್ತುಗಳಲ್ಲಿ ಪ್ರೇರ್ಯರೂಪದಿಂದಲೂ, ದಾರಗಳನ್ನು ಅಡ್ಡವಾಗಿ ಉದ್ದವಾಗಿ ಹಾಸು-ಹೊಕ್ಕು ನೆಯ್ಯುವುದರಿಂದ ಧಾರಗಳೇ ವಸ್ತ್ರರೂಪವಾಗಿ ಹೇಗೆ ಕಾಣುವುವೋ ಹಾಗೆ ಪರಮಾತ್ಮನು ಕಾರ್ಯಕಾರಣ ವಸ್ತುಗಳಲ್ಲಿ ವ್ಯಾಪ್ತನಾಗಿ ಪ್ರಪಂಚದಿಂದ ಭಿನ್ನನಾಗಿ ಪ್ರಪಂಚರೂಪಿಯಾಗಿ ಕಾಣುವನು. ಮತ್ತು ಸೂರ್ಯನು ರಶ್ಮಿಗಳಿಂದ ಸಮುದ್ರಾದಿಗಳಲ್ಲಿರುವ ಉದಕವನ್ನು ಗ್ರಹಣಮಾಡಿ ಮೇಘಗಳಲ್ಲಿರಿಸಿ ಅವುಗಳ ದ್ವಾರಾ ಮಳೆಗರೆದು ಮತ್ತೂ ಸಮುದ್ರಾದಿಗಳನ್ನು ತುಂಬುವಂತೆ ಪರಮಾತ್ಮನು ತನ್ನ ಸಾಮರ್ಥ್ಯದಿಂದ ಭಕ್ತರ ಸೇವೆಯನ್ನು ಕೈಗೊಂಡು ಅವರಿಗೆ ಅದರ ಫಲಗಳನ್ನು ಕೊಡುತ್ತಿರುವನು. ಸಾಮಾನ್ಯರಾದ ಜನರಿಗೆ ಇವನ ಮಹಿಮೆಯು ಗೋಚರವಾಗುವುದೇ? ಇಲ್ಲ. ಅಥವಾ ಬ್ರಹ್ಮಾದಿ ದೇವತೆಗಳಿಗಾದರೂ ಇವನ ಮಹಿಮೆಯು ಸಾಕಲ್ಯೇನ ಗೋಚರವಾಗುವುದೇ? ಯಥೋಚಿತವಾಗಿಯೇ ಕಾಣುವದು.

**ಜನಕ ತನ್ನಾತ್ಮಜಗೆ ವರಭೂ**
**ಷಣ ದುಕೂಲವ ತೊಡಿಸಿ**
**ವಂದನೆಯ ಕೈಕೊಳುತವನ ಹರಸುತ ಹರುಷವಪಡುವಂತೆ ||**

**ವನರುಹೇಕ್ಷಣ ಪೂಜ್ಯಪೂಜಕ**
**ನೆನಿಸಿ ಪೂಜಾಸಾಧನ ಪದಾ**
**ರ್ಥನು ತನಗೆ ತಾನಾಗಿ ಫಲಗಳನೀವ ಭಜಕರಿಗೆ ||೧೮||**

ಪದ್ಯಾರ್ಥ—ಜನಕ–ತಂದೆಯು, ತನ್ನಾತ್ಮಜಗೆ–ತನ್ನಮಗನಿಗೆ, ವರಭೂಷಣ ದುಕೂಲವ—ವರ–ಉತ್ತಮವಾದ, ಭೂಷಣ–ಒಡವೆಗಳನ್ನು, ದುಕೂಲವ–ವಸ್ತ್ರವನ್ನು, ತೊಡಿಸಿ, ವಂದನೆಯ–ನಮಸ್ಕಾರವನ್ನು, ಕೈಕೊಳುತ–ಸ್ವೀಕರಿಸುತ, ಅವನ–ಆ ಮಗನನ್ನು, ಹರಸುತ–ಆಶೀರ್ವಾದಮಾಡುತ್ತ, ಹರುಷಪಡುವಂತೆ–ಸಂತೋಷಪಡುವಂತೆ, ವನರುಹೇಕ್ಷಣ–ಕಮಲನೇತ್ರನಾದ ಶ್ರೀಹರಿಯು, ಪೂಜ್ಯಪೂಜಕನೆನಿಸಿ–ಒಬ್ಬನಲ್ಲಿದ್ದು ಪೂಜ್ಯನಾಗಿಯೂ ಮತ್ತೊಬ್ಬನಲ್ಲಿದ್ದು ಪೂಜಕನಾಗಿಯೂ ಪೂಜ್ಯಪೂಜಕನೆಂದು ಹೆಸರನ್ನು ಪಡೆದು, ಪೂಜಾಸಾಧನ ಪದಾರ್ಥನು–ಪೂಜಾಸಾಧನವಾದ ಗಂಧ ಪುಷ್ಪಾದಿ

ಸ್ವರೂಪನೂ, ತನಗೆ–ತನ್ನ ಪೂಜಾಕ್ಕೆ, ತಾನಾಗಿ–ತಾನೇ ಆಗಿ, ಭಜಕರಿಗೆ–ತನ್ನನ್ನು ಭಜನಮಾಡುವವರಿಗೆ, ಫಲಗಳನು–ಫಲಗಳನ್ನು, ಈವ–ಕೊಡುವನು ||೧೦||

ತಾತ್ಪರ್ಯ—ತಂದೆಯು ತನ್ನ ಮಕ್ಕಳಿಗೆ ಉತ್ತಮವಾದ ಒಡವೆ ವಸ್ತ್ರಗಳನ್ನು ತೊಡಿಸಿ, ಆ ಮಕ್ಕಳಿಂದ ನಮಸ್ಕಾರವನ್ನು ಕೈಗೊಂಡು ಅವರಿಗೆ ಆಶೀರ್ವಾದವನ್ನು ಮಾಡಿ ಸಂತೋಷಪಡುವಂತೆ, ಶ್ರೀ ಪರಮಾತ್ಮನು ಗುರುಜನರುಗಳಲ್ಲಿದ್ದು ಪೂಜೆಯನ್ನು ಮಾಡಿಸಿಕೊಳ್ಳುವನು. ಶಿಷ್ಯವರ್ಗಾದಿಗಳಲ್ಲಿದ್ದು ಪೂಜಾಮಾಡುವನು. ತನ್ನಿಂದ ಸೃಷ್ಟರಾದ ಮಕ್ಕಳಂತಿರುವ ತನ್ನ ಭಕ್ತರಲ್ಲಿದ್ದು ಪೂಜಾಮಾಡಿ, ಅವರಿಗಿಂತ ಉತ್ತಮ ಜನರಲ್ಲಿಯೂ, ರಾಮ ಕೃಷ್ಣಾದಿ ಪ್ರತಿಮಾರೂಪದಿಂದಲೂ ಪೂಜೆಯನ್ನು ಕೈಗೊಂಡು ಅವರುಗಳಿಗೆ ಅದರ ಫಲರೂಪವಾಗಿ ಅನ್ನವಸ್ತ್ರಾಭರಣಾದಿಗಳಿಂದ ಸೌಖ್ಯಗಳುಂಟು ಮಾಡಿ ತಂದೆಯು ಮಕ್ಕಳಿಂದ ನಮಸ್ಕಾರಮಾಡಿಸಿಕೊಂಡು ಅವರಿಗೆ ಆಶೀರ್ವಾದಮಾಡುವಂತೆ, ಭಕ್ತರಿಗೆ ವರವನ್ನು ಕೊಟ್ಟು ತಾನು ಅವರನ್ನು ನೋಡಿ ಸಂತೋಷಪಡುವನು. ಮತ್ತು ಪೂಜಾಕ್ಕೆ ಬೇಕಾದ ಉಪಕರಣಗಳು, ಫಲ ಪುಷ್ಪ, ಗಂಧಾಕ್ಷತೆ ತಾಂಬೂಲಾಧಿಗಳಲ್ಲಿಯೂ ತದ್ರೂಪಿಯಾಗಿ ತಾನೇ ಇದ್ದು, ತನ್ನ ಪೂಜಾಕ್ಕೆ ತಾನೇ ಸಾಧನೆಯಾಗುವನು. ಪೂಜಾಮಾಡಿದ ಫಲವನ್ನು ಮಾತ್ರ ಜೀವರಿಗೆ ಕೊಡಿಸುವನು.

ವಿಶೇಷಾರ್ಥ—ಈ ಮೇಲಿನ ಎರಡು ಪದ್ಯಗಳಿಂದ ಶ್ರೀ ಪರಮಾತ್ಮನೇ ಪ್ರೇರಕ ಪ್ರೇರ್ಯನಾಗಿಯೂ ಪೂಜ್ಯಪೂಜಕನಾಗಿಯೂ, ಪೂಜಾಸಾಧನ ದ್ರವ್ಯರೂಪನಾಗಿಯೂ ಇದ್ದು, ಪೂಜಾಮಾಡಿ ಮಾಡಿಸಿಕೊಂಡು ಫಲವನ್ನು ಜೀವನಿಗೆ ಕೊಡುವನು, ಎಂದು ಹೇಳಿದ ವಾಕ್ಯಗಳಿಂದ ಜೀವನ ಕರ್ತೃತ್ವವು ಲೇಶಮಾತ್ರವೂ ಇಲ್ಲವೆಂದೇ ದಾಸರಾಯರ ಅಭಿಪ್ರಾಯವೆಂದು ಕಾಣುವುದು ಆದರೂ ಅವರ ಅಭಿಪ್ರಾಯವು ಎಂದಿಗೂ ಹಾಗಲ್ಲ. ಏಕೆಂದರೆ ಅದು ಶ್ರೀಮದಾಚಾರ್ಯರ ಸಿದ್ಧಾಂತಕ್ಕೆ ವಿರುದ್ಧವಾಗುವುದು. ಸಿದ್ಧಾಂತಕ್ಕೆ ವಿರೋಧವಾಗಿ ಅವರೊಂದೂ ಹೇಳಲಿಲ್ಲ. ಭಗವದ್ಗೀತೆ ೧೮ ನೆಯ ಅಧ್ಯಾಯದಲ್ಲಿ "ಅಧಿಷ್ಠಾನಂ ತಥಾ ಕರ್ತಾ ಕಾರಣಂಚ ಪೃಥಗ್ವಿಧಂ | ವಿವಿಧಾಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಂ ಶರೀರ ವಾಙ್ಮನೋಭಿರ್ಯತ್ಕರ್ಮ ಪ್ರಾರಭತೆ ನರಃ | ನ್ಯಾಯ್ಯಂವಾ ವಿಪರೀತಂವಾ ಪಂಚೈತೇ ತಸ್ಯಹೇತವಃ||"

ಸಾಂಖ್ಯಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ಜೀವನು ಪುಣ್ಯಪಾಪಾದಿ ಸರ್ವ ಕರ್ಮಗಳನ್ನೂ ಮಾಡುವುದಕ್ಕೆ ಐದು ಕಾರಣಗಳುಂಟು. ಅವು ಯಾವು ವೆಂದರೆ (೧) ಅಧಿಷ್ಠಾನ, ಅಂದರೆ ದೇಹ, ಭೂಮಿ ಮೊದಲಾದುವು (೨) ಕರ್ತಾ-ವಿಷ್ಣು (೩) ಬೇರೆ ಬೇರೆಯಾದ ಕಾರಣ, ಅಂದರೆ ಇಂದ್ರಿಯಗಳು, ಸ್ರುಕ್ಸ್ರುವಾದಿಗಳು (೪) ನಾನಾ ಪ್ರಕಾರವಾದ ಚೇಷ್ಟಾ, ಅಂದರೆ ಕೈ ಮೊದ ಲಾದ ಇಂದ್ರಿಯಗಳಿಂದ ಮಾಡುವುದು ನಡಿಯುವುದು ಮೊದಲಾದುವು. ಧ್ಯಾನಾದಿ ಮಾನಸಿಕ ಕ್ರಿಯೆ (೫) ದೈವ ಅಂದರೆ ಅದೃಷ್ಟ ಅಥವಾ ಕರ್ತಾ- ಜೀವ, ದೈವ ಅಂದರೆ ವಿಷ್ಣು ಎಂದರ್ಥ.

ಮನುಷ್ಯನು ಮನೋವಾಕ್ಕಾಯಗಳಿಂದ ಮಾಡುವ ಪುಣ್ಯಕರ್ಮಕ್ಕಾ ಗಲಿ ಪಾಪ ಕರ್ಮಕ್ಕೇ ಆಗಲಿ ಇವು ೫ ಕಾರಣವಾಗಿರುವುವು "ತತ್ರೈವಂ ಸತಿಕ ರ್ತಾರಮಾತ್ಮಾನಂ ಕೇವಲಂತುಯಃ। ಪಶ್ಯತ್ಯಕೃತ ಬುದ್ಧಿತ್ವಾನ್ನಸ ಪಶ್ಯತಿ ದುರ್ಮತಿಃ"॥ ಇದು ಹೀಗಿರಲು ಯಾವ ಪುರುಷನು ತಾನೇ ಕೇವಲ ಕರ್ತ ನೆಂದು ತಿಳಿದುಕೊಳ್ಳುವನೋ ಅವನು ಬುದ್ಧಿ ಇಲ್ಲದವನಾದುದರಿಂದ ಆ ದುರ್ಮತಿಯನ್ನು ಏನೂ ಅರಿಯದವನೆಂದು ಭಾವಿಸಬೇಕು. "ಯಸ್ಯನಾಹಂ ಕೃತೋಭಾವೋ ಬುದ್ಧಿರ್ಯಸ್ಯನಲಿಪ್ಯತೇ। ಹತ್ವಾಪಿಸ ಇಮಾನ್ಲೋಕಾನ್ನ ಹಂತಿ ನನಿಬಧ್ಯತೇ"॥ ಯಾವನಿಗೆ ನಾನು ಎಂಬ ಅಹಂಕಾರ ಭಾವವು ಇರುವುದಿಲ್ಲವೋ ಯಾವನ ಬುದ್ಧಿಯು ಫಲರಾಗಾದಿಗಳಿಂದ ನಿರ್ಲಿಪ್ತವಾಗಿರು ವುದೋ ಅವನು ಈ ಲೋಕವನ್ನೇ ಸಂಹರಿಸಿದರೂ ಸಂಹರಿಸಿದ ಪಾಪ ಭಾಗಿ ಯಾಗನು. ಆ ಪಾಪದಿಂದ ಅವನು ಬದ್ಧನಾಗನು. ಹೀಗೆ ಪ್ರಪಂಚವನ್ನೇ ಸಂಹರಿಸಲು ಹುಟ್ಟಿದವರು ರುದ್ರದೇವರು ಯಮದೇವರು. ಇವರಿಗೆ ಸ್ವಕೃತ್ಯತ್ವಾಭಿಮಾನವಿಲ್ಲದಿರುವುದರಿಂದ ಸಂಹರಿಸಿದ ಪಾಪ ಲೇಪವು ಅವರಿ ಗಿಲ್ಲ. ಇಂದ್ರನು ವೃತ್ರಾಸುರನನ್ನು ಕೊಂದು ಪಾಪಲಿಪ್ತನಾದುದಾಗಿ ಭಾರ ತಾದಿಗಳಲ್ಲಿ ಹೇಳುವುದು. ಅದರ ಮೂಲ ಕಾರಣವು ಅವರ ಸ್ವಲ್ಪವಾದ, ತಾತ್ಕಾಲಿಕ ಅಹಂಕಾರವೇ ಎಂದರಿಯಬೇಕು. ಹೀಗೆ ೧೪ ನೆಯ ಶ್ಲೋಕದ ಮೊದಲು ೧೭ನೆಯ ಶ್ಲೋಕದವರೆವಿಗೂ ಭಗವತ್ಕರ್ತೃತ್ವವನ್ನು ತಿಳಿದು ತನ್ನ ಕರ್ತೃತ್ವ ಬುದ್ಧಿಯನ್ನು ಬಿಡಬೇಕೆಂದು ಹೇಳಿದರು. ೧೮ ನೆಯ ಶ್ಲೋಕದ ಅವತಾರಿಕೆ. (ಶ್ರೀ ರಾಘವೇಂದ್ರ ಸ್ವಾಮಿ ಕೃತಗೀತಾವಿವೃತ್ತಿ). "ನನು ಜೀವಸ್ಯಸ್ವತಃ ಕರ್ತೃತ್ವಾಭಾವೇ ಯಜೇತೇತ್ಯಾದಿ ವಿಧೀನಾಂ ವೈಯರ್ಥ್ಯಂ

ಸ್ಯಾತ್ ॥ ಜಡೇಶ್ವರ ಮುಕ್ತಾನಾಂ ತದವಿಷಯತ್ವಾದಿತ್ಯತ ಆಹ ॥ ಜ್ಞಾನ ಮಿತಿ" ಮೇಲಿನ ವಾಕ್ಯಗಳ ಆಧಾರದಿಂದ ಜೀವನಿಗೆ ಕರ್ತೃತ್ವವೇ ಇಲ್ಲದಿದ್ದರೆ "ಸ್ವರ್ಗ ಕಾಮೋಯಜೇತ, ಅಹರಹಸ್ಸಂಧ್ಯಾಮುಪಾಸೀತ" ಸ್ವರ್ಗಾಪೇಕ್ಷೆಯುಳ್ಳವನು ಜ್ಯೋತಿಷ್ಟೋಮವೆಂಬ ಯಾಗವನ್ನು ಮಾಡಬೇಕು. ಪ್ರಾತಸ್ಸಾಯಂಕಾಲಗಳಲ್ಲಿ ಸಂಧ್ಯಾವಂದನೆಯನ್ನು ಮಾಡಬೇಕು, ಎಂಬ ವಿಧಿ ವಾಕ್ಯಗಳು ವ್ಯರ್ಥವಾಗುವುವು. ಜಡಪದಾರ್ಥಗಳಿಗೂ, ಈಶ್ವರನಿಗೂ, ಮುಕ್ತರಿಗೂ ಈ ಯಾಗ ಮಾಡಬೇಕೆಂಬ ವಿಧಿವಾಕ್ಯಗಳು ಪ್ರಯೋಜನಕಾರಿಯಲ್ಲ. ಜೀವರಿಗಾಗಿಯೇ ಈ ವಿಧ ವಾಕ್ಯಗಳು ಹೊರಟಿರಬೇಕು. ಅವರಿಗೂ ಸ್ವತಃ ಕರ್ತೃತ್ವವಿಲ್ಲದಮೇಲೆ ಈ ವಾಕ್ಯಗಳು ಹೊರಡುತ್ತಲೇ ಇರಲಿಲ್ಲ. "ಜ್ಞಾನಂಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮ ಚೋದನಾ । ಕರಣಂ ಕರ್ಮಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ ॥" ಯಾಗಾದಿಗಳನ್ನು ಮಾಡಬೇಕೆಂಬ ಕರ್ಮಚೋದನಾ ಅಂದರೆ ಕರ್ಮಗಳ ಪ್ರೇರಣೆಯು ಜ್ಞಾನವೆಂತಲೂ ಜ್ಞೇಯವೆಂತಲೂ ಪರಿಜ್ಞಾತಾಯಂತಲೂ ಮೂರು ವಿಧವಾಗಿ ಇರುವುದು. ಜ್ಞಾನವೆಂದರೆ ವಿಧಿವಾಕ್ಯಕ್ಕೆ ವಿಷಯೀಭೂತವಾದುದು. ಅಂದರೆ ·ಯಜೇತ ಯಜನಮಾಡಬೇಕು 'ಉಪಾಸೀತ' ಉಪಾಸನಮಾಡಬೇಕು. ಎಂದು ಹೇಳಿದರೆ ಯಜನಕ್ಕೂ ಉಪಾಸನಕ್ಕೂ ವಿಷಯೀಭೂತವಾದ ವಸ್ತುವಾವುದು. ಯಜ್ಞಪುರುಷ ಸವಿತಾ ಮೊದಲಾದ ಭಗವದ್ರೂಪಗಳು. ಅಥವಾ ಯಾಗಾದಿಗಳೂ ಕೂಡ ಜ್ಞಾನವಾಚಕವಾಗಬಹುದು. ಜ್ಞೇಯಂ ಅಂದರೆ (ಚೇಷ್ಟಾ) ವ್ಯಾಪಾರಗಳು. ಅವು ಯಾವು ಅಂದರೆ ಪ್ರಯತ್ನಮಾಡುವುದು. ದೇಹಾದ್ಯಧಿಷ್ಠಾನಗಳು-ಪುರುಷಾರ್ಥ ಲಕ್ಷಣ, ಇವೆಲ್ಲವು ಜ್ಞೇಯವಾಚಕವು. ಪರಿಜ್ಞಾತನು ಯಾರೆಂದರೆ ಸರ್ವಜ್ಞನು ಸರ್ವ ಪ್ರೇರಕನು ಆದ ಶ್ರೀ ಪರಮಾತ್ಮನಿಂದ ಸನ್ನಿಹಿತವಾದ ಜೀವರಾಶಿಯು, ಈ ಮೂರು ನಿಮಿತ್ತಗಳಿಂದಲೇ ಕರ್ಮಪ್ರೇರಣೆಯಾಗುವುದು. ದಧಿತ್ರಪು ಸಂಪ್ರತ್ಯ ಕ್ಷೋಜ್ವರ ಇತ್ಯಾದಾವಿವನಿಮಿತ್ತ ನಿಮಿತ್ತಿನೋರ ಭೇದೋಪಚಾರೇಣ ನಿಮಿತ್ತ ತ್ರೈವಿಧ್ಯೇನ ನೈಮಿತ್ತಿಕ ಚೋದನಾಪಿ ತ್ರಿವಿಧೇತ್ಯುಪಚರ್ಯತೇ ॥ ಯಜತೇತ್ಯಾದಿ ಶ್ರೌತಸ್ಮಾರ್ತವಿಧೌಸತಿ ಸ್ವಾಪ್ರವೃತ್ತಿ ವಿಷಯ ಪ್ರೇರಣಾಜ್ಞಾನಂ ಭವತಿ ॥ ತತಶ್ಚೇಷ್ಟಾಪ್ರಯತ್ನರೂಪ ಪ್ರವೃತ್ತಿರಾತ್ಮ ಸನ್ನಿಹಿತೇಶ್ವರ ಪ್ರೇರಣಯಾಪುಮರ್ಥಮುದ್ದಿಶ್ಯ ಕರ್ಮಣಿ ಜೀವಸ್ಯ ಭವತಿ ಇತಿ ವಿಧಿಜ್ಞಾನಾದೇಃ

ಕರ್ಮಚೋದನಯೋಶ್ಚ ನಿಮಿತ್ತನಿಮಿತ್ತಿ ಭಾವೋಽಧ್ಯೇಯಃ'' ಲೋಕದಲ್ಲಿ ಜ್ವರದಿಂದ ಪೀಡಿತನಾದ ಒಬ್ಬನ ಜ್ವರದ ಕಾರಣವನ್ನು ತಿಳಿದುಕೊಳ್ಳುವಾಗ ಅಧಿಕವಾಗಿ ಮೊಸರನ್ನು ಸೇವಿಸಿದ್ದರಿಂದ ಜ್ವರ ಬಂದಿತು ಎಂದು ತಿಳಿಯುತ್ತಾನೆ ಇದರಲ್ಲಿ ಜ್ಞಾನವಾವುದು? ಮೊಸರು. ಅದಕ್ಕೆ ಜ್ಞೇಯವೆಂದರೆ ಆಧಾರಭೂತವಾದುದು ಯಾವುದು? ಸೀಸದ ಪಾತ್ರೆ. ಮೊಸರು ನಿರಾಧಾರವಾಗಿ ನಿಲ್ಲಲು ಸಾಧ್ಯವಿಲ್ಲದ ಕಾರಣ ಅದಕ್ಕೆ ಆಧಾರವಾದ ಸೀಸವೂ ಒಂದು ನಿಮಿತ್ತವಾಯಿತು. ಹೀಗೆ ಜ್ವರಕ್ಕೆ ನಿಮಿತ್ತವಾದುದು ಮೊಸರಾದರೂ ಅದರ ನಿಮಿತ್ತಭೂತವಾದ ಸೀಸದ ಪಾತ್ರೆಯೂ ನಿಮಿತ್ತವಾಗುವುದು. ಹಾಗೆಯೇ ವಿಧಿವಾಕ್ಯದ ಪ್ರೇರಣೆಯು ಜ್ಞಾನವಾದರೂ ಜ್ಞೇಯವಾದ ದೇಹಾದ್ಯಧಿಷ್ಠಾನವಿಲ್ಲದೆ ಅದರ ಪರಿಜ್ಞಾನ ಹುಟ್ಟದು. ಇದರಿಂದ ನಿಮಿತ್ತ ಸಂಬಂಧವಾದ ಪ್ರೇರಣೆಯು ಕೂಡ ಮೂರು ಪ್ರಕಾರವೆಂದು ಹೇಳಿದಂತಾಯಿತು. 'ಯಜೇತ' ಯಜನಮಾಡಬೇಕು ಮುಂತಾದ ಶ್ರುತಿ ಸ್ಮೃತಿ ವಿಹಿತವಾದ ವಿಧಿಗಳು ಇದ್ದರೇನೇ ಅದನ್ನು ಮಾಡಬೇಕೆಂಬ ಪ್ರೇರಣಾಜ್ಞಾನವು ಹುಟ್ಟುವುದು. ಅದರಮೇಲೆ ಇಚ್ಛಾಪ್ರಯತ್ನರೂಪವಾದ ಪ್ರವೃತ್ತಿಯು, ಆತ್ಮಸನ್ನಿಹಿತನಾದ ಈಶ್ವರನ ಪ್ರೇರಣೆಯಿಂದ ಪುರುಷಾರ್ಥ ಸಿದ್ಧಿಗಾಗಿ ಕರ್ಮದಲ್ಲಿ ಪ್ರವೃತ್ತಿಯು ಜೀವನಿಗೆ ಹುಟ್ಟುವುದು. ಇದರ ಒಟ್ಟುತಾತ್ಪರ್ಯ ಹೀಗೆ:-

ಯಾಗಾದಿಗಳನ್ನು ಮಾಡಬೇಕೆಂದು ವಿಧಿಯು ಇರುವುದರಿಂದ ಜೀವನಿಗೆ ಪರಮಾತ್ಮನು ಸೃಷ್ಟಿಕಾಲದಲ್ಲಿ ಕೊಟ್ಟಿದ್ದ ಈಶದ್ದತ್ತ ಸ್ವಾತಂತ್ರ್ಯದಿಂದ ಮಾಡಬೇಕೆಂಬ ಇಚ್ಛಾ ಮಾತ್ರ ಹುಟ್ಟುವುದು. ಅದರಮೇಲೆ ಜೀವಸನ್ನಿಹಿತನಾದ ಶ್ರೀ ಪರಮಾತ್ಮನು ಜೀವನ ಸಂಸ್ಕಾರಕ್ಕೆ ಅನುಸಾರವಾಗಿ ಹುಟ್ಟಿದ ಇಚ್ಛಾನುಸಾರವಾಗಿ ಇವನ ಕರ್ಮಾನುಸಾರವಾದ ಪುರುಷಾರ್ಥಕ್ಕೆ ಸಾಧನವಾದ ಕರ್ಮವನ್ನು ಮಾಡಲು ಪ್ರೇರಿಸುವನು. ಅಂದರೆ ಜೀವನ ಅನಾದಿ ಕರ್ಮವನ್ನೂ ಜೀವನ ಸಂಸ್ಕಾರವನ್ನೂ ಅನುಸರಿಸಿ ಪ್ರೇರಿಸಲ್ಪಡುವನು. ಆಗ ಜೀವನು ಪರಮಾತ್ಮನ ಪ್ರೇರಣೆಯಿಂದ ಮಾಡಲುದ್ಯುಕ್ತನಾದರೆ ಒಳಗಿನ ತತ್ವಾಭಿಮಾನಿ ದೇವತೆಗಳಿಗೆ ಪರಮಾತ್ಮನು ಪ್ರೇರಿಸಿ ಅವರೊಳಗಿದ್ದು ತಾನು ಮಾಡಿ ಜೀವನಿಂದ ಮಾಡಿಸುವನು. ಹೀಗೆಯೇ, ಜ್ಞಾನವೆಂದರೆ ವಿಧಿವಾಕ್ಯ, ಜ್ಞೇಯವೆಂದರೆ ದೇಹಾದಿಗಳು ಮತ್ತು ಭಗವತ್ಪ್ರೇರಣಾ, ಪರಿಜ್ಞಾತಾ ಜೀವನು. ಹೀಗೆ ಸ್ವತಂತ್ರ ಕರ್ತ ಪರಮಾತ್ಮನು. ಜೀವನಿಗೆ ವಿಧಿವಾ

ಕ್ಯವೂ, ಭಗವತ್ಪ್ರೇರಣೆಯೂ ಸಹ ಕರ್ಮ ಚೋದನಾಕ್ಕೆ ನಿಮಿತ್ತ ನಿಮಿತ್ತೀ ಭಾವವೆಂದರಿಯಬೇಕು. ‘ನಚಸ್ವತಃ ಕತೃತ್ವಾಭಾವಾತ್ಪರಾಧೀನ ಕತೃ ಜೀವಸ್ಯ ವಿಧಿಜ್ಞಾನದ್ವಾರಾಕಥಂ ಪ್ರವೃತ್ತ್ಯಾದ್ಯರ್ಥಂ ವಿಧಿವಿಷಯತ್ವಮಿತಿಂ ಶಕ್ಯಂ। ಅಪರಾಧೀನ ಕತೃತ್ವಸ್ಯ ವಿಧಿವಿಷಯತಾಯಾಂಪ್ರಯೋಜಕತ್ವೇನ ಕ್ವಾಪ್ಯನು ಪಲಂಭೇನಾನ್ವಯ ವ್ಯತಿರೇ ಕಾಬ್ಯಾಂ ಪರಾಧೀನ ಕತೃಶಕ್ತಿಕ ಸ್ಯೇವ ವಿಧಿದಷಯತ್ವಾವಶ್ಯಂ ಭಾವಾತ್’ ಆದರೆ ಜೀವನು ಯಾವುದನ್ನೂ ಸ್ವತಂತ್ರದಿಂದ ಮಾಡಲು ಶಕ್ತನಲ್ಲ. ಪರಾಧೀನನಾಗಿದ್ದು ಪರಮಾತ್ಮನು ಮಾಡಿಸಿದ ಹಾಗೆಲ್ಲಾ ಮಾಡುವ ಜೀವನಿಗೆ ವಿಧಿವಾಕ್ಯದಿಂದ ಪ್ರಯೋಜನ ವೇನೆಂದು ಶಂಕಿಸಬಾರದು. ಏಕೆಂದರೆ ಲೋಕದಲ್ಲಿ ಸ್ವತಂತ್ರಕತೃಗಳಾದ ರಾಜರುಗಳಿಗೆ ವಿಧಿವಾಕ್ಯಗಳು ಎಂದಿಗೂ ಬಂಧಕವಲ್ಲ. ಪರಾಧೀನದಲ್ಲಿ ಅಂದರೆ ತಮ್ಮ ವಶದಲ್ಲಿರುವವರಿಗೇನೇ ಹೀಗೆ ಮಾಡಿ ಹಾಗೆ ಮಾಡಿ ಎಂದು ಹೇಳುವುದಕ್ಕಾಗಿಯೇ ವಿಧವಚನಗಳು ಎಂದು ಜಗತ್ಪ್ರಸಿದ್ಧಿಯಾಗಿರುವುದು. ಅದರಂಯೇ ಜಡರು ಈಶ್ವರ ಮುಕ್ತರು ಇವರು ಮೂವರೂ ವಿಧಿಗೆವಿಷಯ ರಲ್ಲವೆಂದು ಸಿದ್ಧವಾದುದರಿಂದ ಜೀವರೇ ವಿಧಿವಿಷಯರೆಂದು ಸಿದ್ಧಾಂತವಾ ಗುವುದು. ಆದುದರಿಂದ ಜೀವನು ಪರಾಧೀನ ಕತೃವಾದನು. ಅದರಿಂದಲೇ ವಿಧಿಗಳು ಅವನಿಗಾಗಿಯೇ ಹೇಳಲ್ಪಟ್ಟಿರುವುವೆಂದು ಸ್ಪಷ್ಟವಾಯಿತು. ಹೀಗೆ ಯೇ ಗೀತಾವ್ಯಾಖ್ಯಾನ ಕರ್ತರಾದ ಶ್ರೀ ರಾಘವೇಂದ್ರ ಸ್ವಾಮಿಗಳವರ ವಚನ ವನ್ನೇ ಇಲ್ಲಿ ಬರೆದಿರುತ್ತೆ. ಆದುದರಿಂದ ದಾಸರಾಯರ ಅಭಿಪ್ರಾಯವೂ ಜೀವನಿಗೆ ಸ್ವತಂತ್ರ ಕತೃತ್ವ ಮಾತ್ರವಿಲ್ಲವೆಂದೇ ಹೊರತು ಅಕರ್ತನೆಂದು ಅರ್ಥವಲ್ಲವೆಂದು ತಿಳಿಯಬೇಕು.

**ತಂದೆ ಬಹು ಸಂಭ್ರಮದಿ ತನ್ನಯ**
**ಬಂಧುಬಳಗವನೆರಹಿ ಮದುವೆಯ**
**ನಂದನಗೆ ತಾ ಮಾಡಿ ಮನೆಯೊಳಗಿಡುವತೆರನಂತೆ**

**ಇಂದಿರಾಧವ ತನ್ನ ಇಚ್ಛೆಗ**
**ಳಿಂದ ಗುಣಗಳ ಚೇತನಕೆ ಸಂ**
**ಬಂಧಗೈಸಿ ಸುಖಾಸುಖಾತ್ಮಕ ಸಂಸ್ಕೃತಿಯೊಳಿಡುವ ||೧೧||**

ಪದ್ಯಾರ್ಥ—ತಂದೆ–ತಂದೆಯು, ಬಹು ಸಂಭ್ರಮದಿ–ಬಹಳ ಸಂಭ್ರ ಮದಿಂದ, ತನ್ನಯ ಬಂಧುಬಳಗವ-ಬಂಧುಬಳಗವನ್ನು, ನೆರಹಿ--ಕರೆಕಳು

ಹಿಸಿಕೊಂಡು, ನಂದನಗೆ--ತನ್ನ ಮಗನಿಗೆ, ಮದುವೆಯ--ಮದುವೆಯನ್ನು, ತಾ--ತಾನು, ಮಾಡಿ ಮನೆಯೊಳಗಿಡುವತೆರನಂತೆ--ಸಂಸಾರಿಯನ್ನಾಗಿ ಮಾಡಿ ಮನೆಯೊಳಗಿಡುವಂತೆ, ಇಂದಿರಾಧವ--ಲಕ್ಷ್ಮೀಪತಿಯು, ತನ್ನ ಇಚ್ಛೆ ಗಳಿಂದ ಗುಣಗಳ--ಸತ್ವ ರಜ ಸ್ತಮಸ್ಸೆಂಬ ಮೂರು ಗುಣ ಸಂಬಂಧವಾದ ಪ್ರಾಕೃತ ಸ್ಥೂಲ ದೇಹಗಳನ್ನು, ಚೇತನಕೆ--ಸ್ವರೂಪದೇಹ, ಲಿಂಗದೇಹ ಗಳಿಂದ ಕೂಡಿದ ಜೀವರಿಗೆ, ಸಂಬಂಧಗೈಸಿ--ಸಂಬಂಧ ಮಾಡಿ (ಕೊಡಿಸಿ) ಸುಖಾಸುಖಾತ್ಮಕ ಸಂಸ್ಮೃತಿಯಲಿ--ಸುಖದುಃಖ ಮಿಶ್ರವಾದ ಸಂಸಾರ ವಲ್ಲಿ ಇಡುವ.

ತಾತ್ಪರ್ಯ—ತಂದೆಯು ತನ್ನ ಮಗನಿಗೆ ಮದುವೆಯನ್ನು ಮಾಡ ಬೇಕೆಂಬ ಇಚ್ಛೆಯು ತನಗೆ ಬಂದಾಗ ಬಂಧುಬಳಗಗಳನ್ನು ಕರೆಕಳುಹಿಸಿ ಬಹುಸಂಭ್ರಮದಿಂದ ಮದುವೆಯನ್ನು ಮಾಡಿ ಆ ದಂಪತಿಗಳನ್ನು ಮನೆಯಲ್ಲಿ ರಿಸಿ ಸಂಸಾರಿಯನ್ನಾಗಿ ಹೇಗೆ ಮಾಡುವನೋ ಹಾಗೆ ಶ್ರೀ ಲಕ್ಷ್ಮೀಪತಿಯು ತನ್ನ ಇಚ್ಛಾನುಸಾರವಾಗಿ ತನ್ನ ಮಕ್ಕಳಂತಿರುವ ಸಾತ್ವಿಕ, ರಾಜಸ, ತಾಮಸ ರೆಂಬ ಮೂರು ವಿಧ ಜೀವರಾಶಿಗಳಿಗೂ ಬುದ್ಧಿಯೆಂಬ ಹೆಂಡರನ್ನು ಮದುವೆ ಮಾಡಿಸುವನು, ಬಂಧು ಬಳಗಗಳು ತತ್ವಾಭಿಮಾನಿ ದೇವತೆಗಳು. ಸ್ಥೂಲ ಶರೀರವೇ ಮನೆಯು. ಇದರಲ್ಲಿ ಸಾತ್ವಿಕರಿಗೆ ದೇವತಾದಿಶರೀರಗಳನ್ನೂ, ರಾಜಸರಿಗೆ ಮನುಷ್ಯ ಶರೀರವನ್ನೂ, ತಾಮಸರಿಗೆ ದೈತ್ಯಾದಿಶರೀರಗಳನ್ನೂ ಕೊಡಿಸಿ ಅವರವರ ಸಾಧನವನ್ನು ಪೂರ್ತಿ ಮಾಡಿಸುವುದಕ್ಕಾಗಿ ಸುಖದುಃಖ ಮಿಶ್ರವಾದ ಸಂಸಾರದಲ್ಲಿಡುವನು.

ವಿಶೇಷಾರ್ಥ—ಇಲ್ಲಿ ದಾಸರಾಯರು 'ಗುಣಗಳ ಚೇತನಕೆ ಸಂಬಂಧ ಗೈಸಿ ಸುಖಾ ಸುಖಾತ್ಮಕ ಸಂಸ್ಮೃತಿಯೊಲಿಡುವ' ಎಂದು ಹೇಳಿರುವರು. ಇದಕ್ಕೆ ಅರ್ಥವನ್ನು ಸತ್ವ ರಜ ಸ್ತಮೋಗುಣಗಳನ್ನು ಚೇತನರಿಗೆ ಸಂಬಂಧ ಪಡಿಸಿ, ಎಂದು ಮಾಡಿದರೆ ಜೀವರು ಅನಾದಿ ಕಾಲದಿಂದಲೂ ಸತ್ವಾದಿ ಗುಣ ಸಂಬಂಧವಾದ ಸ್ವರೂಪ ದೇಹದಿಂದ ಕೂಡಿಯೇ ಇರುವರು. ಗುಣಗ ಳನ್ನು ಬಿಟ್ಟು ಚೇತನರೇ ಇಲ್ಲವೆಂದು ಶ್ರೀಮದಾಚಾರ್ಯರ ವಾಕ್ಯವಿರುವುದು. ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ 'ದೃಷ್ಟ್ವಾ ಸಜೇತನ ಗಣಾ ಜಠ ರೇಶಯನಾನಾನಂದ ಮಾತ್ರವ ಪುಷಃಸ್ಮೃತಿ ವಿಪ್ರಮುಕ್ತಾ | ಧ್ಯಾನಂಗ ತಾ ಸ್ಮೃತಿಗತಾಂಶ್ಚ ಸುಷುಪ್ತಿ ಸಂಸ್ಥಾ ಬ್ರಹ್ಮಾದಿಕಾ ಕಲಿಪರಾ

ತಾತ್ಪರ್ಯ.—ಶ್ರುತಿ ಸ್ವರೂಪಳಾದ, ದುರ್ಗಾರೂಪಳಾದ ಲಕ್ಷ್ಮೀ ದೇವಿಯೂ ಸಹ ಯಾವನ ಗುಣರೂಪ ಸ್ವರೂಪಗಳನ್ನು ಸಾಕಲ್ಯೇನ ಅರಿಯಳೋ, ಯಾವನು ಸದೃಶರಹಿತನೋ, ಆನಂದಸ್ವರೂಪನೋ, ನಾಶರಹಿತನೋ, ಸರ್ವತ್ರ ವ್ಯಾಪ್ತನೋ, ವಿಶ್ವಕ್ಕೆ ಆಧಾರಭೂತನೋ, ಸಕಲವಿದ್ಯೆಕ್ಕೂ ಅಧೀಶನೋ, ಬ್ರಹ್ಮದೇವರ ತಂದೆ ಎನಿಸುವನೋ ಅಂತಹಾ ಶ್ರೀಪರಮಾತ್ಮನು, ಪ್ರಕೃತಿ ಸಂಬಂಧವಾದ ತ್ರಿಗುಣಬದ್ಧರಾದ ಜೀವರ ಪ್ರಾಕೃತ ದೇಹದೊಳಗೆ ತಾನೂ ಪ್ರಾಕೃತಪುರುಷನಂತೆ ಚಲಿಸುತ್ತಾ ಒಬ್ಬನಲ್ಲಿದ್ದು ಆಜ್ಞಾಮಾಡುವನು. ಮತ್ತೊಬ್ಬನಲ್ಲಿದ್ದು ಆಜ್ಞೆಗೆ ಒಳಪಟ್ಟು ನಡೆಯುವನು. ಹೀಗೆ ರಾಜರುಗಳಲ್ಲಿದ್ದು ಆಜ್ಞೆಯನ್ನುಮಾಡಿ ಆ ಜೀವರಿಗೆ ನನ್ನ ಆಜ್ಞೆಯನ್ನು ಮಾಡಿ ಆ ಜೀವರಿಗೆ ನನ್ನ ಆಜ್ಞೆಯನ್ನು ಜನರೆಲ್ಲರೂ ಪಾಲಿಸುವರೆಂದು ಭಾವಿಸುವಂತೆ ಬುದ್ಧಿಯನ್ನಿತ್ತು ಸಂತೋಷವನ್ನುಂಟುಮಾಡುವನು. ಭೃತ್ಯಾದಿಗಳಲ್ಲಿದ್ದು ಆಜ್ಞೆಯನ್ನು ನೆರವೇರಿಸಿ ರಾಜರುಗಳ ಸನ್ಮಾನವನ್ನು ಕೊಡಿಸಿ ಸಂತೋಷಪಡಿಸುವನು.

ಅವತಾರಿಕೆ.—ರಾಜಸತಾಮಸರಲ್ಲಿ ಪರಮಾತ್ಮನಿದ್ದು ಮಾಡಿಮಾಡಿಸುವ ವಿಷಯಗಳನ್ನು ವಿವರಿಸುತ್ತಾರೆ.—

ಮನವಿಷಯದೊಳಗಿರಿಸಿ ವಿಷಯವ
ಮನದೊಳಗೆ ನೆಲೆಗೊಳಿಸಿ ಬಲು ನೂ
ತನವು ಸುಸಮೀಚೀನವಿದುಸಾದೆಯುವೆಂದರುಪಿ ||
ಕನಸಿಲಾದರು ತನ್ನ ಪಾದದ
ನೆನೆವನೀಯದೆ ಸರ್ವರೊಳಗಿ
ದ್ದನುಭವಿಸುವನು ಸ್ಥೂಲ ವಿಷಯವ ವಿಶ್ವನೆಂದೆನಿಸಿ ||೧೫||

ಪದ್ಯಾರ್ಥ.—ಮನ=ಮನಸ್ಸನ್ನು, ವಿಷಯದೊಳಗೆ=ಇಂಪಾದುದನ್ನು ಕೇಳಬೇಕು, ಸ್ವರೂಪವನ್ನು ನೋಡಬೇಕು, ರುಚಿಯಾದುದನ್ನು ಭುಂಜಿಸಬೇಕೆಂಬಿವೇ ಮೊದಲಾದ ವಿಷಯಸುಖದೊಳಗೆ, ಇರಿಸಿ-ಇಡಿಸಿ, ವಿಷಯವ=ವಿಷಯಸುಖಗಳನ್ನು, ಮನದೊಳಗೆ=ಮನಸ್ಸಿನಲ್ಲಿ, ನೆಲೆಗೊಳಿಸಿ-ಸ್ಥಿರಪಡಿಸಿ, ಇದು=ಈ ವಿಷಯಸುಖವು, ಬಲುನೂತನವು=ಬಲುಹೊಸದಾಗಿರುವುದು, ಸುಸಮೀಚೀನವಾದುದು=ಅತ್ಯುತ್ಕೃಷ್ಟವಾದುದು, ಎಂದರುಪಿ = ಎಂದು ಜೀವರಿಗೆ ತಿಳಿಸಿ, ಕನಸಿಲಾದರೂ = ಸ್ವಪ್ನದಲ್ಲಾದರೂ,

ನೆನೆವನು=ಸ್ಮರಣೆಯನ್ನು (ನೆನಪನ್ನು) ಈಯದೆ=ಕೊಡದೆ, ಸರ್ವರೊಳಗಿದ್ದು=ಎಲ್ಲ ಪ್ರಾಣಿಗಳೊಳಗಿದ್ದು, ವಿಶ್ವನೆಂದು=ವಿಶ್ವನೆಂಬ ಹೆಸರುಳ್ಳವನು, ಎನಿಸಿ=ಕರೆಸಿಕೊಳ್ಳುತ್ತ, ಸ್ಥೂಲವಿಷಯವ=ಸ್ಥೂಲವಾದ ವಿಷಯ ಭೋಗಗಳನ್ನು ಅನುಭವಿಸುವನು.

ಶ್ರೀಪರಮಾತ್ಮನು ಸಾತ್ವಿಕ ಜನರ ಮನಸ್ಸನ್ನು ಮಾತ್ರ ತನ್ನ ಪಾದಾರವಿಂದದ ಸ್ಮರಣೆಯಲ್ಲಿರಿಸಿ, ವಿಷಯ ಸುಖವನ್ನು ಬಲು ನಶ್ವರವೆಂತಲೂ, ತುಚ್ಛವೆಂತಲೂ ಜ್ಞಾನವನ್ನು ಕೊಡಿಸುವನು, ರಾಜಸ, ತಾಮಸ ಜನರನ್ನು ಹಾಗೆ ಮಾಡುವುದಿಲ್ಲ. ಅವರಿಗೆ ಹೇಗೆ ಪ್ರೇರಿಸುವನೆಂಬ ವಿಷಯವನ್ನೇ ಇಲ್ಲಿ ಹೇಳುತ್ತಾಗೆ.

ಮನಸ್ಸನ್ನು ವಿಷಯ ಸುಖದಲ್ಲಿ ಅಂದರೆ ಮೃಷ್ಟಾನ್ನವನ್ನು ಭುಂಜಿಸಬೇಕು. ಸ್ತ್ರೀಯಾದಿ ಭೋಗಗಳನ್ನು ಅನುಭವಿಸಬೇಕು. ಎಂಬಿವೇ ಮೊದಲಾದ ವಿಷಯಭೋಗಗಳಲ್ಲಿ ಇಟ್ಟು, ಅವರ ಮನದಲ್ಲಿ ಈ ಸುಖವು ಹಿಂದೆ ಯಾವಾಗಲೂ ಕಾಣದ ಬಹು ಹೊಸದು, ಉತ್ಕೃಷ್ಟವಾದುದು, ಇದನ್ನೇ ನಾವು ಅನುಭವಿಸಬೇಕೆಂಬ ಬುದ್ಧಿಯನ್ನು ಹುಟ್ಟಿಸಿ, ಮನಸ್ಸಿನಲ್ಲಿ ಅವುಗಳನ್ನೇ ಸ್ಥಿರಪಡಿಸಿ ಜಾಗ್ರದಾವಸ್ಥೆಯಲ್ಲಿ ಅಂದರೆ ಎಚ್ಚತ್ತಿರುವಾಗ ಭಗವತ್ಸ್ಮರಣೆಯನ್ನು ಮಾಡದಿರುವದಂತಿರಲಿ ಸ್ವಪ್ನದಲ್ಲಿಯೂ ಕೂಡ ತನ್ನ ಪಾದಸ್ಮರಣೆಯು ನೆನಪೇ ಅವರಿಗ ಬರದಂತೆ ಮಾಡಿ ವಿಶ್ವನಾಮಕನಾಗಿ ಎಲ್ಲರಲ್ಲಿಯೂ ಇದ್ದು ಸ್ಥೂಲವಾದ ವಿಷಯಸುಖಗಳನ್ನು ತಾನೂ ಅನುಭವಿಸುವನು. "ಸ್ವನಿರ್ಮಿತೇಷು ನಿರ್ವಿಷ್ಟೋ ಭುಂಕ್ತೇ ಭೂತೇಷು ತದ್ಗುಣಾನ್" ತನ್ನಿಂದ ನಿರ್ಮಿತವಾದ ಪ್ರಾಣಿಗಳಲ್ಲಿ ತಾನು ಪ್ರವಿಷ್ಟನಾಗಿ ಆ ದೇಹಸಂಬಂಧಗಳಾದ ಸುಖಗಳನ್ನು ಮಾತ್ರ ಅನುಭವಿಸುವನು, ಎಂಬ ಭಾಗವತ ವಾಕ್ಯವೇ ಇದಕ್ಕೆ ಆಧಾರವಾಗಿರುವುದು.

**ತೋದಕನು ತಾನಾಗಿ ಮನವೊದ**
**ಲಾದ ಕರಣದೊಳಿದ್ದು ವಿಷಯವ**
**ನೈದುವನು ನಿಜಪೂರ್ಣ ಸುಖಮಯಗ್ರಾಹ್ಯಗ್ರಾಹಕನು ।**
**ವೇದವೇದ್ಯನು ತಿಳಿಯದವನೋ**
**ಪಾದಿಭುಂಜಿಸುತೆಲ್ಲರೊಳಗಾ**
**ಹ್ಲಾದಪಡುವನು ಭಕ್ತವತ್ಸಲ ಭಾಗ್ಯಸಂಪನ್ನ ॥೧೭॥**

ಪದ್ಯಾರ್ಥ.— ತೋದಕನು=ಪ್ರೇರಕನು, ತಾನಾಗಿ, ಮನಮೊದಲಾದ=ಮನಸ್ಸು ಮೊದಲಾದ, ಕರಣದೊಳಿದ್ದು=ಇಂದ್ರಿಯಗಳೊಳಗಿದ್ದು, ವಿಷಯಪನು=ತದ್ಗತವಿಷಯ ಸುಖವನ್ನು, ಐದುವನು=ಹೊಂದುವನು, (ಶ್ರೀಪರಮಾತ್ಮನು ತಾನು) ನಿಜಪೂರ್ಣಸುಖಮಯ=ನಿಜ–ಸ್ವಕೀಯವಾದ, ಪೂರ್ಣಸುಖಮಯ=ಪೂರ್ಣಾನಂದ ಸ್ವರೂಪನು (ಆದರೂ) ಗ್ರಾಹ್ಯಗ್ರಾಹಕನು=ಗಂಧರಸ ಮೊದಲಾದ ಗ್ರಾಹ್ಯವಸ್ತುಗಳಲ್ಲಿದ್ದು ಗ್ರಾಹ್ಯನೆಂದೆನಿಸುವನು, ಮೂಗು ನಾಲಿಗೆ ಮೊದಲಾದ ಇಂದ್ರಿಯಗಳೊಳಗಿದ್ದು ಗ್ರಾಹಕನೆಂದೆನಿಸುವನು, ಭಾಗ್ಯಸಂಪನ್ನ=ಷಡ್ಗುಣೈಶ್ವರ್ಯಪೂರ್ಣನಾದ ಭಕ್ತವತ್ಸಲನಾದ ಶ್ರೀಪರಮಾತ್ಮನು, ತಿಳಿಯದವನೋಪಾದಿ=ಒಂದೂ ತಿಳಿಯದವನಂತೆ, ಭುಂಜಿಸುತ = ಅವರವರ ದೇಹಗತ ಸುಖವನ್ನು ಭೋಗಿಸುತ್ತ, ಎಲ್ಲರೊಳಗೂ=ಎಲ್ಲಾ ದೇಹಗಳೊಳಗಿದ್ದು ಆಹ್ಲಾದಪಡುವನು.

ತಾತ್ಪರ್ಯ.— ಶ್ರೀಪರಮಾತ್ಮನು ಮನಮೊದಲಾದ ಇಂದ್ರಿಯಗಳೊಳಗಿದ್ದು ಜೀವರಿಗೆ ವಿಷಯಾದಿಗಳಲ್ಲಿ ಪ್ರೀತಿಯನ್ನು ಹುಟ್ಟಿಸುವವನಾಗಿದ್ದು ಮಾಡುವ ಕೆಲಸವೇನು ? ಅಂದರೆ ಹೇಳುತ್ತಾರೆ.—

ಶ್ರೀಪರಮಾತ್ಮನು ಮನಸ್ಸು ಮೊದಲಾದ ಇಂದ್ರಿಯಗಳೊಳಗಿದ್ದು ಅಂದರೆ ಕಣ್ಣಿನೊಳಗಿದ್ದು ರೂಪವನ್ನು ಗ್ರಹಿಸುವನು. ಕಿವಿಗಳಲ್ಲಿದ್ದು ಶಬ್ದವನ್ನು ಗ್ರಹಿಸುವನು. ಮೂಗಿನಲ್ಲಿದ್ದು ವಾಸನೆಯನ್ನು ಸ್ವೀಕರಿಸುವನು. ನಾಲಿಗೆಯಲ್ಲಿದ್ದು ರುಚಿಯನ್ನು ಸ್ವೀಕರಿಸುವನು. ತ್ವಗಿಂದ್ರಿಯದಲ್ಲಿದ್ದು ಶೀತೋಷ್ಣಾದಿಗಳನ್ನು ಅರಿಯುವನು. ಕಣ್ಣು ಕಿವಿ ಮೊದಲಾದ ಇಂದ್ರಿಯಗಳಭಿಮಾನಿಗಳಾದ ದೇವತೆಗಳಲ್ಲಿದ್ದು ನೋಡುವಂತೆಯೂ, ಕೇಳುವಂತೆಯೂ, ಭುಂಜಿಸುವಂತೆಯೂ, ಆಘ್ರಾಣಿಸುವಂತೆಯೂ, ಶೀತೋಷ್ಣಗಳನ್ನು ತಿಳಿದುಕೊಳ್ಳುವಂತೆಯೂ ಪ್ರೇರಿಸುವನು. ಅವರಲ್ಲಿದ್ದು ಮಾಡುವನು. ಇದರ ತಾತ್ಪರ್ಯವೇನೆಂದರೆ ಕಣ್ಣು ಮೊದಲಾದ ಇಂದ್ರಿಯಾಭಿಮಾನಿ ದೇವತೆಗಳೊಳಗಿದ್ದು ನೋಡುವಂತೆಯೂ ಕೇಳುವಂತೆಯೂ ಪ್ರೇರಿಸುವನು. ಕಣ್ಣು ಮೊದಲಾದ ಇಂದ್ರಿಯಗಳೊಳಗಿದ್ದು ರೂಪಶಬ್ದಾದಿಗಳನ್ನು ಗ್ರಹಿಸುವನೆಂಬ ಭಾವ. ಗ್ರಾಹ್ಯಗ್ರಾಹಕನೆಂದರೆ— ಕಣ್ಣಿನಿಂದ ಗ್ರಹಿಸಲು ಯೋಗ್ಯವಾದುದು ಸುಂದರಾಕಾರವುಳ್ಳ ರೂಪವು. ಇದಕ್ಕೆ ಗ್ರಾಹ್ಯವೆಂದು ಹೆಸರು. ಗ್ರಾಹಕವೆಂದರೆ, ರೂಪಾದಿಗಳನ್ನು ಗ್ರಹಿ

ಸುವ ಕಣ್ಣು ಮೊದಲಾದ ಇಂದ್ರಿಯಗಳು. ಶ್ರೀಪರಮಾತ್ಮನು ತಾನೆ ಗ್ರಾ ಹ್ಯರೂಪಿಯಾಗಿಯೂ, ಗ್ರಾಹಕರೂಪಿಯಾಗಿಯೂ ಇರುವನೆಂಬ ಭಾವ. ಹೀಗೆ ತತ್ವಾಭಿಮಾನಿದೇವತೆಗಳೊಳಗಿದ್ದು ಗ್ರಾಹ್ಯ ವಸ್ತುಗಳನ್ನು ಗ್ರಹಿಸು ವಂತೆ ಪ್ರೇರಿಸಿ, ಇಂದ್ರಿಯಗಳೊಳಗಿದ್ದು ಗ್ರಹಿಸಿ, ವಿಷಯ ಸುಖವನ್ನು ಹೊಂದುವನು. ತಾನೇನೋ ಯಾವಾಗಲೂ ಸಂತತವಾದ ಪೂರ್ಣಾನಂದ ಸ್ವರೂಪನು. ಒಬ್ಬರಲ್ಲಿದ್ದು ಆನಂದವನ್ನು ಅನುಭವಿಸುವ ಸಂಭವವಿಲ್ಲ. ವೇದವೇದ್ಯನು, ಷಡ್ಗುಣೈಶ್ವರ್ಯಸಂಪನ್ನನು. ಪೂರ್ಣನು, ಆದರೂ ಜೀವ ರೊಳಗಿದ್ದು ಏನೊಂದನ್ನೂ ಅರಿಯದವನಂತೆ ತತ್ತದ್ದೇಹಗತ ಸುಖಗಳನ್ನನುಭ ವಿಸುವಂತೆ ಆಹ್ಲಾದಪಡುವನು. ತನಗೆ ಸುಖಾನುಭವದ ಅಪೇಕ್ಷೆಯೇ ಇಲ್ಲದಿದ್ದರೆ ಶ್ರೀಪರಮಾತ್ಮನು ಜೀವರೊಳಗಿದ್ದು ಆ ಸುಖವನ್ನೇ ಅನುಭವಿ ಸಬೇಕು. ಅಂದರೆ, ಭಕ್ತವತ್ಸಲನಾದುದರಿಂದ ಜೀವರನ್ನು ಉದ್ಧರಿಸುವ ಉದ್ದೇಶ್ಯದಿಂದ ತಾನು ಅದನ್ನು ಸ್ವೀಕರಿಸುವನು. ಭಾಗವತ ಸಪ್ತಮಸ್ಕಂಧ ದಲ್ಲಿ " ನೈವಾತ್ಮನಃ ಪ್ರಭುರಯಂ ನಿಜಲಾಭ ಪೂರ್ಣೋಮಾನಂ ಜನಾದ ವಿದುಷಃ ಕರುಣೋವೃಣೀತೇ | ಯದ್ಯಜ್ಜನೋ ಭಗವತೇ ವಿದಧೀತಮಾ ನಂತಚ್ಚಾತ್ಮನೇ ಪ್ರತಿಮುಖಸ್ಯ ಯಥಾ ಮುಖಶ್ರೀಃ " ಎಂದು ಹೇಳಿರುವರು ಈ ಶ್ಲೋಕದರ್ಥವು ಹಿಂದೆ ಒಂದು ಸಲ ಉದಾಹರಿಸಿದೆ. ಆದರೂ ಸಂದ ರ್ಭಾನುಸಾರವಾಗಿ ಇಲ್ಲಿ ಹೇಳಬೇಕಾಗಿ ಬಂದಿತು. ಇದರ ತಾತ್ಪರ್ಯವೇ ನೆಂದರೆ.—ಶ್ರೀಪರಮಾತ್ಮನಿಗೆ ತನ್ನ ಇಚ್ಛೆಯಿಂದಲೇ ತನಗೆ ಪೂರ್ಣವಾದ ಸುಖವಿರುವುದೇ ಹೊರ್ತು ಬೇರಾವುದರಿಂದಲೂ ತನಗೆ ಆಗಬೇಕಾದ್ದಿಲ್ಲ. ಹಾಗಿದ್ದರೂ ಅಜ್ಞರೊಳಗಿದ್ದು ಪೂಜಾಮಾಡಿಸಿಕೊಂಡು ಜೀವರೊಳಗಿದ್ದು ಸ್ವೀಕರಿಸುವನು. ಅದೇಕೆಂದರೆ ಕರುಣಾಸಮುದ್ರನಾದುದರಿಂದ ಭಕ್ತರ ಪೂಜೆಯನ್ನು ಸ್ವೀಕರಿಸದಿದ್ದರೆ ಭಕ್ತರಿಗೆ ತೃಪ್ತಿಯಾಗುವಂತಿಲ್ಲ. ಅವರ ಕ್ಷೇಮಕ್ಕಾಗಿಯೇ ಸ್ವೀಕರಿಸುವನು. ನಮ್ಮ ಮುಖದಲಂಕಾರವನ್ನು ನೋಡಿ ಸಂತೋಷಪಡಬೇಕಾದರೆ ಕನ್ನಡಿಯಲ್ಲಿ ನೋಡಿ ಸಂತೋಷಪಡಬೇಕೇ ಹೊ ರ್ತು ನಮ್ಮ ಮುಖವು ನಮಗೆ ಕಾಣುವಂತಿಲ್ಲ. ಆದರೆ ಕನ್ನಡಿಯಲ್ಲಿ ಕಾ ಣುವ ಮುಖದ ಪ್ರತಿಬಿಂಬಕ್ಕೆ ಅಲಂಕಾರಮಾಡಲು ಸಾಧ್ಯವಿಲ್ಲ. ಆದ್ದ ರಿಂದ ನಮ್ಮ ಮುಖಕ್ಕೆ ಬೇಕಾದ ಅಲಂಕಾರಮಾಡಿಕೊಂಡು ಕನ್ನಡಿಯಲ್ಲಿ ಪ್ರತಿಬಿಂಬವನ್ನು ನೋಡಿ ಸಂತೋಷಪಡುವಂತೆ

ಬಿಂಬನಾದ ಪರಮಾತ್ಮನು ಪೂಜೆಯನ್ನು ಸ್ವೀಕರಿಸಿದರೆ ನಮಗೆ ಸುಖವಾಗುವುದೆಂದು ಶ್ಲೋಕದ ತಾತ್ಪರ್ಯಾರ್ಥವು. ವೃಕ್ಷಗಳ ಬೇರಿಗೆ ನೀರೆರೆಯಲು ಕೊಂಬೆಗಳುಬ್ಬುವಂತೆ ದೇಹಗತನಾಗಿ ಪರಮಾತ್ಮನು ಸುಖವನ್ನು ಅನುಭವಿಸಿದರೆ ಜೀವನಿಗೆ ತೃಪ್ತಿಯಾಗುವುದು. ಇಲ್ಲವಾದರೆ ಜೀವನು ಸುಖಪಡುವಂತಿಲ್ಲ. ಆದ್ದರಿಂದಲೇ ಶ್ರೀಪರಮಾತ್ಮನು ದೇಹಗತನಾಗಿ ವಿಷಯ ಸುಖವನ್ನು ಅನುಭವಿಸಿ, ಜೀವನನ್ನು ತೃಪ್ತಿಪಡಿಸುವನೆಂಬ ಭಾವ.

**ನಿತ್ಯನಿಗಮಾತೀತನಿರ್ಗುಣ**
**ಭೃತ್ಯವತ್ಸಲ ಭಯವಿನಾಶನ**
**ಸತ್ಯಕಾಮ ಶರಣ್ಯ ಶಾಮಲಕೋಮಲಾಂಗ ಸುಖೀ ।**
**ಮತ್ತನಂದದಿ ಮರ್ತ್ಯರೊಳಹೊರ**
**ಗೆತ್ತನೋಡಲು ಸುತ್ತಲಿಪ್ಪನು**
**ಅತ್ಯಧಿಕ ಸಂತೃಪ್ತ ತ್ರಿಜಗದ್ವ್ಯಾಪ್ತ ಪರಮಾಪ್ತಾ ॥೧೭॥**

ಪದ್ಯಾರ್ಥ.— ನಿತ್ಯನಿಗಮಾತೀತ=ನಿತ್ಯವಾದ ವೇದಗಳೂ ಕೂಡ ಹೇಳಲಶಕ್ಯವಾದ ಗುಣರೂಪಗಳುಳ್ಳವನು, ನಿರ್ಗುಣ = ಸತ್ವರಜಸ್ತಮೋ ಗುಣಶೂನ್ಯನು, ಭೃತ್ಯವತ್ಸಲ=ಭೃತ್ಯರ ಭಯಪರಿಹಾರಕನು, ಸತ್ಯಕಾಮ =ಸತ್ಯವಾದ ಇಚ್ಛೆಯುಳ್ಳವನು, ಶರಣ್ಯ=ಮೊರೆಹೊಗಲು ಅರ್ಹನು, ಶಾಮಲಕೋಮಲಾಂಗ=ಶ್ಯಾಮವರ್ಣಗಳಿಂದ ಕೂಡಿದ ಕೋಮಲವಾದ ಅಂಗವುಳ್ಳವನು, ಸುಖಿ=ಸುಖ ಸ್ವರೂಪನು, ಮತ್ತನಂದದಿ=ಮದ್ಯಪಾನಾದಿಗಳನ್ನು ಮಾಡಿ ಸ್ಮಾರಕವಿಲ್ಲದವನು, ನಿರ್ಭೀತನಾಗಿ ಚರಿಸುವಂತೆ, ಮರ್ತ್ಯರ-ಮನುಷ್ಯಾದಿ ಪ್ರಾಣಿಗಳ, ಒಳಹೊರಗೆ, ಎತ್ತನೋಡಲು=ಎಲ್ಲಿ ನೋಡಿದರೂ, ಸುತ್ತಲೂ, ಇಪ್ಪನು-ಇರುವನು, ಅತಿ=ಬಹಳ, ಅಧಿಕ=ಅಧಿಕವಾಗಿ, ಸಂತೃಪ್ತ-ಯಾವಾಗಲೂ ತೃಪ್ತನಾಗಿಯೇ ಇರುವನು; ತ್ರಿಜಗದ್ವ್ಯಾಪ್ತ-ಮೂರು ಲೋಕದಲ್ಲಿಯೂ ವ್ಯಾಪ್ತನಾಗಿರುವನು, ಪರಮಾಪ್ತ = ಭಕ್ತರಿಗೆ ಪರಮ ಆಪ್ತನು.

ತಾತ್ಪರ್ಯ.—ಶ್ರೀಪರಮಾತ್ಮನು ನಿತ್ಯವಾದ ವೇದಗಳಿಂದಲೂ ತಿಳಿಯಲಶಕ್ಯವಾದ ಗುಣರೂಪಗಳುಳ್ಳವನು, ಸತ್ವರಜಸ್ತಮಸ್ಸೆಂಬ ಪ್ರಾಕೃತ ಗುಣರಹಿತನು, ತನ್ನ ದಾಸರಲ್ಲಿ ಪರಮ ವಾತ್ಸಲ್ಯ ಉಳ್ಳವನು, ಭಕ್ತರಿಗೆ ಬರುವ ಭಯಗಳನ್ನು ಪರಿಹರಿಸುವನು, ಅವನ ಸಂಕಲ್ಪವು ಎಂದಿಗೂ ವ್ಯ

ರ್ಥವಾಗುವುದಿಲ್ಲ. ಶರಣು ಹೊಂದಲು ಯೋಗ್ಯನಾದವನು, ಶ್ಯಾಮಲವ ರ್ಣನು, ಕೋಮಲವಾದ ಮನೋಹರವಾದ ಅಂಗಗಳುಳ್ಳವನು, ನಿತ್ಯಾ ನಂದ ಸ್ವರೂಪನು, ಯಾವಾಗಲೂ ತೃಪ್ತನಾಗಿಯೇ ಇರುವವನು, ಮೂರು ಲೋಕದ ಒಳಗೂ ಹೊರಗೂ ವ್ಯಾಪ್ತನಾಗಿರುವವನು ಭಕ್ತರಿಗೆ ಪರಮ ಆಪ್ತ ನು, ಮಧ್ಯವನ್ನು ಪಾನಮಾಡಿ ಮತ್ತನಾದವನು ಹೇಗೆ ಮೈಮೇಲೆ ಸ್ಮೃತಿ ಇಲ್ಲದೆ ನಿರ್ಭೀತನಾಗಿ ಸಂಚರಿಸುತ್ತಿರುವನೋ ಹಾಗೆ ಪ್ರಾಣಿಗಳ ಒಳಗೂ ಹೊರಗೂ ಸುತ್ತಲೂ ಎಲ್ಲಿ ನೋಡಿದರೂ ಅಲ್ಲಿರುವನು. ಪರಮಾತ್ಮನಿಗೆ ಮತ್ತನ ಉಪಮಾನವನ್ನು ಕೊಟ್ಟಿದ್ದರಿಂದ ಪರಮಾತ್ಮನೂ ಮತ್ತನೋ ಎಂಬ ಶಂಕೆಯನ್ನು ಮಾಡಬಾರದು. ದೃಷ್ಟಾಂತದಲ್ಲಿ ಸರ್ವ ಸಾಮ್ಯಬೇ ಕಾಗಿಲ್ಲ. ಚಂದ್ರಮುಖಿ ಎಂಬ ಉಪಮಾನದಲ್ಲಿ ಚಂದ್ರಬಿಂಬ-ಸಾದೃಶ್ಯ ವನ್ನು ಮುಖಕ್ಕೆ ಹೇಗೆ ತೆಗೆದುಕೊಳ್ಳದೆ ಆಹ್ಲಾದ ಗುಣವನ್ನು ಮಾತ್ರ ಗ್ರಹಿಸುವರೋ ಹಾಗೆ ಇಲ್ಲಿಯೂ ಮತ್ತನಲ್ಲಿರುವ ನಿರ್ಭೀತಿ ಗುಣವನ್ನು ಮಾತ್ರ ಉಪಮಾನವನ್ನಾಗಿ ತೆಗೆದುಕೊಳ್ಳಬೇಕೆಂಬ ಭಾವ.

**ಪವಿಹರಿನ್ಮಣಿ ವಿದ್ರುಮದ ಸ**
**ಚ್ಛವಿಗಳಂದದಿ ರಾಜಿಸುತ ಮಾ**
**ಧವನಿರಂತರದೇವ ಮಾನವದಾನವರೊಳಿದ್ದು ।**
**ತ್ರಿವಿಧಗುಣ ಕರ್ಮಸ್ವಭಾವವ**
**ಪವನಮುಖ ದೇವಾಂತರಾತ್ಮಕ**
**ದಿವಸದಿವಸದಲಿ ವ್ಯಕ್ತಿಮಾಡುತಲವರೊಳಿದ್ದುಣಿಸಾ ॥೧೮॥**

ಪದ್ಯಾರ್ಥ.—ಪವಿ-ವಜ್ರವು, ಹರಿನ್ಮಣಿ=ನೀಲಮಣಿಯು, ವಿದ್ರು ಮ=ಹವಳ, ಇವುಗಳಂತೆ, ವಿಚ್ಛವಿಗಂದದಿ=ಉತ್ತಮವಾದ ಕಾಂತಿಗಳಂತೆ ರಾಜಿಸುತ=ಶೋಭಿಸುತ್ತ, ಮಾಧವ=ಶ್ರೀರಮಾಪತಿಯು, ನಿರಂತರ- ನಿತ್ಯವೂ, ದೇವಮಾನವರೊಳಿದ್ದು=ದೇವತೆಗಳಲ್ಲಿಯೂ, ಮನುಷ್ಯರಲ್ಲಿ ಯೂ, ದಾನವರಲ್ಲಿಯೂ ಇದ್ದು, ತ್ರಿವಿಧ=ಮೂರು ವಿಧವಾದ, ಗು ಣ=ಸತ್ವ ರಜ ತಮಸ್ಸೆಂಬ ಗುಣಗಳನ್ನನುಸರಿಸಿ, ಕರ್ಮಸ್ವಭಾವ=ಮೂ ರು ಸ್ವಭಾವಭೂತವಾದ ಮೂರುವಿಧಕರ್ಮಗಳನ್ನು, ಪವನಮುಖದೇವಾಂ ತರಾತ್ಮಕ=ಪವನ=ವಾಯುದೇವರೇ, ಮುಖ-ಮೊದಲಾಗಿ ಉಳ್ಳ, ದೇವ =ತತ್ವಾಭಿಮಾನಿ ದೇವತೆಗಳ, ಅಂತರಾತ್ಮಕ - ಅಂತರ್ಯಾಮಿ ರೂಪಿಯು

ದಿವಸದಿವಸದಿ=ಪ್ರತಿದಿವಸದಲ್ಲಿಯೂ, ವ್ಯಕ್ತಿಮಾಡುತ=ವ್ಯಕ್ತಿಪಡಿಸುತ್ತ, ಅವರೊಳಗಿದ್ದ=ತ್ರಿವಿಧ ಜೀವರುಗಳಲ್ಲಿಯೂ, ತತ್ವದೇವತೆಗಳಲ್ಲಿಯೂ, ಇದ್ದು, ಉಣಿಪ=ತ್ರಿವಿಧಜೀವರಿಗೆ ಸುಖದುಃಖ ಮಿಶ್ರವಾದ ಸುಖದುಃಖಗಳನ್ನು ಉಣಿಸುವನು.

ತಾತ್ಪರ್ಯ.—ಶ್ರೀಪರಮಾತ್ಮನು, ಸಾತ್ವಿಕರಿಗೆ ವಜ್ರದಂತೆ ಶುಭ್ರವಾದ ಕಾಂತಿಯಿಂದಲೂ, ರಾಜಸರಿಗೆ ಬಿಳುಪು ಕಪ್ಪು ಮಿಶ್ರವಾದ ನೀಲಮಣಿಯಂತೆಯೂ, ತಾಮಸಜನರಿಗೆ ಹವಳದಂತೆಯೂ, ಇಂತಹ ಉತ್ತಮ ಕಾಂತಿಯಿಂದ ಶೋಭಿಸುತ್ತ ನಿತ್ಯದಲ್ಲಿಯೂ, ಸಾತ್ವಿಕರಾದ ದೇವತೆಗಳಲ್ಲಿಯೂ, ರಾಜಸರಾದ ಮಾನವರಲ್ಲಿಯೂ, ತಾಮಸರಾದ ದಾನವರಲ್ಲಿಯೂ, ಇದ್ದು ಸಾತ್ವಿಕರಿಂದ ಸತ್ಕರ್ಮಗಳನ್ನೂ, ರಾಜಸರಿಂದ ಮಿಶ್ರಕರ್ಮಗಳನ್ನು ತಾಮಸರಿಂದ ಅಸತ್ಕರ್ಮಗಳನ್ನೂ, ಅವರವರ ಸ್ವಭಾವಾನುಸಾರವಾಗಿ ಮಾಡಿಸಿ, ವಾಯುದೇವರೇ ಮೊದಲಾದ ತತ್ವಾಭಿಮಾನಿದೇವತೆಗಳೊಳಗೆ ತದ್ರೂಪಿಯಾಗಿದ್ದು, ಪ್ರತಿದಿವಸದಲ್ಲಿಯೂ ಅವರವರ ಸ್ವಾಭಾವಿಕ ಕರ್ಮಗಳನ್ನು ವ್ಯಕ್ತಿಪಡಿಸುತ್ತ ಸುಖವನ್ನು ಸಾತ್ವಿಕರಿಗೂ, ರಾಜಸರಿಗೆ ಸುಃದುಃಖ ಮಿಶ್ರವನ್ನೂ, ತಾಮಸರಿಗೆ ದುಃಖವನ್ನೂ ಉಣಿಸುವನು. ಅನುಭವಕ್ಕೆ ತಂದುಕೊಡುವನು,

ಸೂಚನೆ.—ಇದರಲ್ಲಿ ಪವಿ, ಹರಿನ್ಮಣಿ, ವಿದ್ರುಮ ಅಂದರೆ—ವಜ್ರ, ನೀಲ, ಹವಳಗಳೆಂಬ ಮೂರು ಬಣ್ಣಗಳನ್ನು ಸಾತ್ವಿಕ, ರಾಜಸ, ತಾಮಸರಿಗೆ ಹೋಲಿಕೆಯಾಗಿ ತಿಳಿದುಕೊಂಡರೆ ಭಾಗವತಾದಿಗಳಿಗೆ ವಿರೋಧಕಾಣುವದು. ಅದು ಹೇಗಂದರೆ.—ಭಾಗವತ ದಶಮಸ್ಕಂಧದಲ್ಲಿ “ ಸತ್ವಂ ತ್ರಿಲೋಕ ಸ್ಥಿತಯೇ ಸ್ವಮಾಯಯಾಬಿ ಭರ್ಷಿಶುಕ್ಲಂಖಲುವರ್ಣಮಾತ್ಮನಃ || ಸರ್ಗಾಯರಕ್ತಂ ರಜಸೋಪಬೃಂಹಿತಃ ಕೃಷ್ಣಂತವರ್ಣಂ ತಮಸಾಜನಾತ್ಯಯೇ ” ಎಂಬ ಶ್ಲೋಕದಲ್ಲಿ ಪ್ರಪಂಚವನ್ನು ರಕ್ಷಣೆ ಮಾಡುವದಕ್ಕೋಸ್ಕರ ನೀನು ಸತ್ವಗುಣಸೂಚಕವಾದ ಶುಕ್ಲವರ್ಣವನ್ನು ಸ್ವೀಕರಿಸುವೆ. ಸೃಷ್ಟಿಗೋಸ್ಕರ ರಜೋಗುಣದಿಂದ ಉಪಬೃಂಹಿತವಾದ ರಕ್ತವರ್ಣವನ್ನು ಸ್ವೀಕರಿಸುವೆ. ಮನುಷ್ಯರನ್ನು ನಾಶಮಾಡುವ ಕಾಲದಲ್ಲಿ ತಮೋಗುಣ ಸೂಚಕವಾದ ಕೃಷ್ಣವರ್ಣವನ್ನೂ ಸ್ವೀಕರಿಸುವೆಯೆಂದು ಹೇಳಿರುವರು. ಇದರಿಂದ ಸತ್ವಗುಣರೂಪವು ರಕ್ತವರ್ಣವೆಂತಲೂ, ತಮೋಗುಣರೂಪವು ಕೃಷ್ಣವರ್ಣವೆಂತಲೂ ಸ್ಪಷ್ಟವಾಗುವದು.

ಇಲ್ಲಿ ದಾಸರ ವಾಕ್ಯದಿಂದ ಸಾತ್ವಿಕ ರೂಪವು ವಜ್ರಸದೃಶವೆಂತಲೂ, ರಾಜಸ ರೂಪವು ನೀಲವರ್ಣವೆಂತಲೂ, ತಾಮಸ ರೂಪವು ಹವಳ ವರ್ಣವೆಂತಲೂ ಕಾಣುವುದು. ಇಲ್ಲಿ ಹೇಳಿರುವ ನೀಲವರ್ಣವೆಂಬುದು ಕಪ್ಪುವರ್ಣಕ್ಕೂ ಬರುವುದು. ಹೇಗೆಂದರೆ ಶ್ರೀಕೃಷ್ಣನನ್ನು ಕೆಲವು ಕಡೆ ಕೃಷ್ಣವರ್ಣನೆಂತಲೂ, ಕೆಲವು ಕಡೆ ನೀಲವರ್ಣನೆಂತಲೂ ವರ್ಣಿಸಿರುವರು. ಕೆಲವು ಕಡೆಯಲ್ಲಿ ಕೂದಲನ್ನು ವರ್ಣಿಸುವಾಗ 'ನೀಲಕುಂತಲಾ' ಎಂದು ಹೇಳಿರುವುದರಿಂದ ನೀಲವೆಂದು ಕೃಷ್ಣವರ್ಣಕ್ಕೆ ಹೆಸರುಂಟೆಂದು ಸ್ಪಷ್ಟವಾಗುವುದು. ಅಂತು ದಾಸರ ವಾಕ್ಯದಿಂದ ಬಿಳಿಪು, ಕಪ್ಪು, ಕೆಂಪು ವರ್ಣಗಳನ್ನು ಕ್ರಮವಾಗಿ ಹೇಳಿ ದೇವ, ಮಾನವ, ದಾನವ ಎಂದು ಹೇಳಿರುವುದರಿಂದ ಅರ್ಥದಲ್ಲಿ ಭಾಗವತಾದಿಗಳಿಗೆ ವಿರೋಧ ಕಾಣುವುದು. ಆದ್ದರಿಂದ ಇಲ್ಲಿ 'ದೇವ ಮಾನವ ದಾನವ' ಎಂಬ ಪದ್ಯದಲ್ಲಿ "ದೇವ ದಾನವ ಮಾನವ" ಎಂದು ಪಾಠವಿರಬಹುದೆಂದು ಕಾಣುತ್ತದೆ. ಹಾಗಿದ್ದಲ್ಲಿ ಸಾತ್ವಿಕ, ತಾಮಸ, ರಾಜಸರೆಂಬ ಕ್ರಮುವನ್ನು ಇಟ್ಟುಕೊಂಡರೆ ಸರಿಹೋಗುವುದು. ಈ ಪ್ರಕಾರ ಉತ್ತಮಾಧಮಮಧ್ಯಮರೆಂದು ನಿರ್ಣಯಾದಿಗಳಲ್ಲಿ ತೆಗೆದುಕೊಂಡಿರುವರು.

**ಅಣುಮಹತ್ತಿನೊಳಿಪ್ಪ ಘನಪರ-**
**ಮಣುವಿನೊಳಗಡಗಿಸುವ ಸೂಕ್ಷ್ಮತ್ರವ**
**ಮುಣಿಗಿಸುವ ತೇಲಿಸುವ ಸ್ಥೂಲಗಳವನ ಮಾಯವಿದು ।**
**ದನುಜರಕ್ಕಸರೆಲ್ಲರಿವನೊಳು**
**ಮುನಿದು ಮಾಡುವದೇನುಲೂಖಲ**
**ವನಿಕೆಗಳು ಧಾನ್ಯಗಳ ಹಣಿವಂದದಲಿ ಸಂಹರಿಪ ॥ ೧೯ ॥**

ಪದ್ಯಾರ್ಥ—ಅಣು=ಅತ್ಯಂತ ಸಣ್ಣ ವಸ್ತುಗಳಲ್ಲಿ ಅವಕ್ಕಿಂತ ಸಣ್ಣದಾಗಿಯೂ, ಮಹತ್ತಿನೊಳು= ಎಲ್ಲ ವಸ್ತುಗಳಿಗಿಂತಲೂ ದೊಡ್ಡದಾದ ವಸ್ತುವಿನ ಮೇಲೆ ಆವರಣಭೂತನಾಗಿಯೂ, ಒಳಗೆ ದೊಡ್ಡ ವಸ್ತುವಿನಾಕಾರನಾಗಿಯೂ, ಇಪ್ಪ= ಇರುತ್ತಿರುವನು. ಘನ= ದೊಡ್ಡದಾದ ವಸ್ತುವನ್ನು, ಪರಮಣುವಿನೊಳಗೆ=ಪರಮಸೂಕ್ಷ್ಮತ್ರವಸ್ತುವಿನೊಳಗೆ, ಅಡಗಿಸುವ=ಅಡಗಿಸುವನು. ಸೂಕ್ಷ್ಮತ್ರವ = ಬಹಳ ಹಗುರವಾಗಿರುವ ಸಣ್ಣ ಪದಾರ್ಥಗಳನ್ನು, ಮುಣಿಗಿಸುವ=ನೀರಿನೊಳು ಮುಣಿಗಿಸುವನು. ಸ್ಥೂಲಗಳ=ದೊಡ್ಡದಾದ ಭಾರವುಳ್ಳ ವಸ್ತುಗಳನ್ನು ತೇಲಿಸುವ, ಇದು=ಈ ಅಘಟನಘಟನಾಶಕ್ತಿಯು

ಅವನ=ಶ್ರೀಪರಮಾತ್ಮನ ಮಾಯವು. ದನುಜರಕ್ಕಸರೆಲ್ಲರು=ದೈತ್ಯರಾಕ್ಷಸ ರೆಲ್ಲರು ಸೇರಿ, ಇವನೊಳು=ಈ ಪರಮಾತ್ಮನಲ್ಲಿ, ಮುನಿದು=ದ್ವೇಷಿಸಿ ಮಾಡು ವದೇನು? ಉಲೂಖವನಿಕೆಗಳು= ಒರಳು ವನಿಕೆಗಳು, ಧಾನ್ಯಗಳ=ಭತ್ತ ಮೊದಲಾದ ಧಾನ್ಯಗಳನ್ನು, ಹಣಿವಂದದಲಿ=ಹೊಟ್ಟುಗಳನ್ನು ನಾಶಮಾಡಿ ಕಾಳುಗಳನ್ನು ಉಳಿಸುವಂತೆ, ಸಂಹರಿಪ=ದೇಹಗಳನ್ನು ನಾಶಗೊಳಿಸಿ ಜೀವರುಗಳನ್ನು ಉಳಿಸುವನು.

ತಾತ್ಪರ್ಯ— ಅಘಟನಘಟನಾಶಕ್ತಿಯು ಪರಮಾತ್ಮನದೆಂತಲೂ, ಜೀವರಿಗೂ ಪರಮಾತ್ಮನಿಗೂ ಯಾವಾಗಲೂ ಭೇದವಿರುವದೆಂಬುದನ್ನು ಈ ಪದ್ಯದಲ್ಲಿ ದಾಸರಾಯರು ಹೇಳುತ್ತಾ ಜೀವ ಪರಮಾತ್ಮರ ಭೇದಸೂಚಕ ವಾದ ಶ್ರುತ್ಯರ್ಥವನ್ನು ಹೇಳುತ್ತಾರೆ—

ಪರಮಾತ್ಮನು ಅಘಟನಘಟನಾಶಕ್ತಿಯುಳ್ಳವನು. ಹೇಗೆಂದರೆ, 'ಅಣೋರಣೀಯಾನ್ಮಹತೋ ಮಹೀಯಾನ್' ಎಂಬ ಶ್ರುತಿಯಲ್ಲಿ ಹೇಳಿದಂತೆ ಅತಿ ಸೂಕ್ಷ್ಮವಸ್ತುವಿನಲ್ಲಿ ಅದಕ್ಕಿಂತ ಸೂಕ್ಷ್ಮನಾಗಿರುವನು. ಅತಿದೊಡ್ಡ ಪದಾರ್ಥದಲ್ಲಿ ಅದಕ್ಕಿಂತಲೂ ದೊಡ್ಡವನಾಗಿ ಅದನ್ನು ಆವರಿಸಿಕೊಂಡಿರು ವನು. ಭಾಗವತ ತೃತೀಯಸ್ಕಂಧದಲ್ಲಿ, "ಚರಮಸ್ಸದ್ವಿಶೇಷಾಣಾಮನೇಕಾ- ಸ್ಸಂಯುತಸ್ಸದಾ ಯಃ। ಪರಮಾಣುಃ ಸ ವಿಜ್ಞೇಯೋ ನೃಣಾಮೈಕ್ಯಭ್ರಮೋ ಯತಃ ॥ ಸತ ಏವ ಪದಾರ್ಥಸ್ಯ ಸ್ವರೂಪಾವಸ್ಥಿತಸ್ಯ ಯತ್ । ಕೈವಲ್ಯಂ ಪರಮಮಹಾನವಿಶೇಷೋ ನಿರಂತರಃ ॥" ಎಂದು ಹೇಳಿರುವರು. ಇದರ ತಾತ್ಪರ್ಯವೇನೆಂದರೆ, ಒಂದು ವಸ್ತುವನ್ನು ಅಂದರೆ ಒಂದು ಕೂದಲನ್ನು ಸಾಧ್ಯವಾದಷ್ಟು ಮಟ್ಟಿಗೆ ಸೀಳಿ, ಅದನ್ನು ಆದಷ್ಟು ಮಟ್ಟಿಗೆ ತುಂಡುಮಾಡಿ ಅದಕ್ಕಿಂತಲೂ ಸಣ್ಣದು ಮಾಡಲು ಬಾರದಷ್ಟು ತುಣುಕು ಮಾಡಿದರೆ ಅದರ ಒಂದು ತುಣುಕೇ ಚರಮವಸ್ತು. ಅದೇ ಪರಮಾಣುವೆಂದೆನಿಸಿಕೊಳ್ಳುವುದು. ಅಂತಹ ಪರಮಾಣು ವಸ್ತುವಿನಲ್ಲಿ ಅದಕ್ಕಿಂತಲೂ ಅಣುವಾಗಿ ಪರಮಾತ್ಮ ನಿರುವನು. ಅಷ್ಟು ಸೂಕ್ಷ್ಮರೂಪಿಯಾದರೂ, ಶ್ರೀ ಪರಮಾತ್ಮನು ಶಂಖ ಚಕ್ರಗದಾಪದ್ಮಗಳಿಂದ ಕೂಡಿದ ಚತುರ್ಭುಜಗಳಿಂದ ಯುಕ್ತನಾಗಿಯೂ, ಪೀತಾಂಬರಧಾರಿಯಾಗಿಯೂ, ಕಿರೀಟಕುಂಡಲಗಳಿಂದ ಭೂಷಿತನಾಗಿಯೂ ಶ್ರೀ ಲಕ್ಷ್ಮೀದೇವಿಯ ವಾಸಸ್ಥಾನವಾದ ಶ್ರೀವತ್ಸಲಾಂಛನದಿಂದಲೂ, ಕೌಸ್ತುಭಾಭರಣ, ವನಮಾಲಿಕೆಯಿಂದಲೂ ಶೋಭಿಸುತ್ತಿರುವನು. ಲಕ್ಷ್ಮೀ

ದೇವಿಯು ಆ ಪರಮಾತ್ಮನ ವಕ್ಷಃಸ್ಥಳದಲ್ಲಿ ಶೋಭಿಸುತ್ತಿರುವಳು. ಹಾಗೆ ಲಕ್ಷ್ಮೀದೇವಿಯು ಪರಮಾಣುರೂಪಿಯಾದ ಪರಮಾತ್ಮನ ವಕ್ಷಃಸ್ಥಳದಲ್ಲಿ ಅತ್ಯಂತ ಸೂಕ್ಷ್ಮರೂಪದಿಂದ ಇದ್ದ ಮೇಲೆ ಪರಮಾತ್ಮನಿಗಿಂತಲೂ ಅಣು ರೂಪವು ಲಕ್ಷ್ಮೀದೇವಿಗೆ ಹೇಳಬೇಕೇ ಹೊರತು ಪರಮಾತ್ಮನಿಗೆ ಹೇಗೆ ಬಂತೆಂದರೆ, ಪರಮಾತ್ಮನು ತನ್ನ ಇಚ್ಛೆಯಿಂದಲೇ ಲಕ್ಷ್ಮೀದೇವಿಯರಿಗೆ ಇಂತಹ ಸೂಕ್ಷ್ಮರೂಪವನ್ನು ಕೊಟ್ಟು ತನ್ನ ವಕ್ಷದಲ್ಲಿಟ್ಟುಕೊಂಡಿರುವುದ ರಿಂದ ಅದು ಆ ಪರಮಾತ್ಮನ ಸಾಮರ್ಥ್ಯವಾದುದರಿಂದ ಅಸ್ವತಂತ್ರಳಾದ ಲಕ್ಷ್ಮೀದೇವಿಯನ್ನು ಅಣುರೂಪಳೆಂದು ಹೇಳಲಾಗುವುದಿಲ್ಲೆಂದು ತಿಳಿಯ ಬೇಕು. ಇದರಂತೆ ದೊಡ್ಡದಾದ ಎಲ್ಲ ವಸ್ತುಗಳನ್ನೊಳಗೊಂಡು ಇದ ಕ್ಕಿಂತಲೂ ದೊಡ್ಡ ವಸ್ತು ಬೇರೆ ಇಲ್ಲವೆಂದು ಪ್ರಸಿದ್ಧಿಯಾದ ವಸ್ತುವನ್ನು ತನ್ನೊಳಗಡಗಿಸಿಕೊಂಡು ಎಲ್ಲವನ್ನು ತನ್ನೊಳಗಿಟ್ಟುಕೊಂಡು ಕೇವಲ ತಾನೊ ಬ್ಬನೇ ಕಾಣುವುದರಿಂದ ಕೈವಲ್ಯನೆಂದು ಪರಮಾತ್ಮನಿಗೆ ಹೆಸರು. ಅವನಿ ಗಿಂತಲೂ ಮಹತ್ತಾದ ವಸ್ತುವು ಬೇರೆ ಇಲ್ಲವೆಂದು ಅರ್ಥ. ಇದೇ ಅರ್ಥ ವನ್ನೇ ದಾಸರಾಯರು ಇಲ್ಲಿ ವಿಶದಪಡಿಸುವರು. ಮತ್ತು ದೊಡ್ಡ ವಸ್ತುವನ್ನು ಪರಮಾಣುವಿನೊಳಗೆ ಅಡಗಿಸುವನು. ಪ್ರಳಯಕಾಲದಲ್ಲಿ ವಟಪತ್ರದಲ್ಲಿ ಶಿಶುರೂಪನಾಗಿ ಮಲಗಿರುವಾಗ ಮಾರ್ಕಂಡೇಯರು ಶಿಶುವಿನ ಮೂಗಿನ ದ್ವಾರ ಹೊಟ್ಟೆಯೊಳಗೆ ಹೊಕ್ಕು ಬ್ರಹ್ಮಾಂಡದೊಳಗಿನ ಯಾವದ್ವಸ್ತು ವನ್ನು ಕಂಡಿರುವರು. ಕೃಷ್ಣಾವತಾರದಲ್ಲಿ ಕೃಷ್ಣನು ಆಕಳಿಸಿದಾಗಲೂ ಮಣ್ಣುಂಡನೆಂಬ ಕಾರಣದಿಂದ ಪರೀಕ್ಷೆಗೋಸ್ಕರ ಬಾಯಿಯನ್ನು ತೆಗೆಯಿಸಿ ದಾಗಲೂ ಹೀಗೆ ಎರಡು ಸಲ, ಯಶೋದೆಯು ಶ್ರೀಕೃಷ್ಣನ ಉದರದಲ್ಲಿ ಸಮಸ್ತ ಪ್ರಪಂಚವನ್ನು ಕಂಡು ಆಶ್ಚರ್ಯಚಕಿತಳಾದಳೆಂದು ಭಾಗವತದಲ್ಲಿ ಹೇಳಿರುವರು. ಶ್ರೀ ಪರಮಾತ್ಮನು ಪರಮಾಣು ವಸ್ತುವಿನಲ್ಲಿ ಪರಮಾಣು ವಾಗಿದ್ದರೂ ಆ ಪರಮಾತ್ಮನ ಉದರದಲ್ಲಿ ೫೦ ಕೋಟಿ ಗಾವುದ ಉಳ್ಳ ಬ್ರಹ್ಮಾಂಡವು ಇದ್ದೇ ಇರುವುದು. ಆದ್ದರಿಂದಲೇ ದಾಸರಾಯರು 'ಘನಪರಮಾಣುವಿನೊಳಗಡಗಿಸುವ' ಎಂದು ಹೇಳಿರುವರು. ಸೂಕ್ಷ್ಮ ವಸ್ತುವನ್ನಾದರೂ ಮುಣಿಗಿಸುವನು. ಸ್ಥೂಲಪದಾರ್ಥಗಳನ್ನಾದರೂ ತೇಲಿಸುವನು. ಸೂಕ್ಷ್ಮಧಾನ್ಯಗಳಾದ ರಾಗಿ ಮೊದಲಾದವು ಮುಣುಗು ವುವು. ಸ್ಥೂಲವಾದ ಸ್ಥಂಭಾದಿಗಳು ತೇಲುವುವು. ಇವೆಲ್ಲವೂ ಅವನ ಮಾಯವೆಂದು ತಿಳಿಯಬೇಕು. ಒರಳಿನೊಳಗೆ ಧಾನ್ಯಗಳನ್ನು ಹಾಕಿ

ವನಕೆಯಿಂದ ಕುಟ್ಟಲು ಹೇಗೆ ಧಾನ್ಯಗಳ ಹೊಟ್ಟೆಲ್ಲವು ನಾಶವಾಗಿ ಕಾಳುಗಳು ಮಾತ್ರ ಉಳಿಯುವುವೋ ಹಾಗೆಯೇ ಪರಮಾತ್ಮನು ತನ್ನೊಳು ದ್ವೇಷಿಸುವ ಅಸುರ ರಾಕ್ಷಸರ ದೇಹಗಳನ್ನು ನಾಶಗೊಳಿಸಿ ಜೀವರನ್ನು ಉಳಿಸುವನು. ಇದರಿಂದ ತ್ರಿವಿಧ ಜೀವರೂ ಅನಾದಿಕಾಲದಿಂದಲೂ ಪರಮಾತ್ಮನಿಂದ ಭಿನ್ನರಾಗಿರುವರೆಂದು ಸ್ಪಷ್ಟವಾಯಿತು. ಈ ವಿಷಯದಲ್ಲಿ ಭಾಗವತ ದಶಮಸ್ಕಂಧದ ಶ್ರುತಿಗೀತಾ ತಾತ್ಪರ್ಯದಲ್ಲಿ ಶ್ರುತಿಯನ್ನು ಉದಾಹರಿಸಿರುವರು. ಅದು ಯಾವುದೆಂದರೆ–

"ಅಭೀದಮೇಕಮೇಕೋಽಸ್ಮಿ ನಿಃಷಾಢಭಿದ್ವಾ ಕಿಮು ತ್ರಯಃ ಕರಂತಿ ।
ಖಳೇನ ಪರ್ಷಾನ್ ಪ್ರತಿಹನ್ಮಿ ಭೂರಿ ಕಿಂ ಮಾ ನಿಂದಂತಿ ಶತ್ರವೋಽನಿಂದ್ರಾಃ"
ಇದು ಶ್ರೀ ಪರಮಾತ್ಮನ ವಾಕ್ಯವು. ಈ ಪ್ರಪಂಚವೆಲ್ಲವು ನನ್ನ ಕೂಡ ಯುದ್ಧಕ್ಕೆ ಬರಲು ನಾನೊಬ್ಬನೇ ಪ್ರತಿಯಾಗಿ ನಿಲ್ಲುವೆನು. ಇಂತಹ ಪ್ರಪಂಚಗಳು ಎರಡು ನನ್ನ ಕೂಡ ಯುದ್ಧಕ್ಕೆ ಬಂದರೂ ನಾನೇ ಜಯಿಸುವೆನು. ಇಂತಹ ಪ್ರಪಂಚಗಳು ಮೂರಾಗಲಿ ಅಥವಾ ಹೆಚ್ಚಾಗಲಿ ಬಂದರೂ ನನ್ನನ್ನು ಏನೂ ಮಾಡಲಾರವು. ನಾನು ಅವರೆಲ್ಲರನ್ನು ಒರಳಿನಲ್ಲಿ ವನಕೆಯಿಂದ ಕುಟ್ಟಿ ಹೊಟ್ಟುಗಳನ್ನು ನಾಶಮಾಡುವಂತೆ ಅವರ ದೇಹಗಳನ್ನು ಧ್ವಂಸಪಡಿಸುವೆನು. ಕಾಳುಗಳು ಉಳಿಯುವಂತೆ ಅವರ ಜೀವಗಳನ್ನು ಉಳಿಸುವೆನು. ಅವರು ನನ್ನನ್ನು ದೂಷಿಸುವರು. ನಿರ್ದುಷ್ಟನಾದ ನನ್ನನ್ನು ಏನೆಂದು ದೂಷಿಸುವರು? ದೋಷವಿಲ್ಲದಿದ್ದರೂ ಬಲಾತ್ಕಾರದಿಂದ ಆರೋಪಿಸುವರು, ಆದ್ದರಿಂದ 'ಅನಿಂದ್ರಾಃ' ಅಶಕ್ತರು ಎಂದು ಶ್ರುತ್ಯರ್ಥವು. ಈ ಶ್ರುತಿಯನ್ನು ಶ್ರುತಿಗೀತೆಯಲ್ಲಿ ೧೬ ನೆಯ ಶ್ಲೋಕ 'ನ ಹಿ ಪರಮಸ್ಯ' ಎಂಬ ಶ್ಲೋಕದಲ್ಲಿನ 'ಅಪರಿಮಿತಾ ಧ್ರುವಾಸ್ತನುಭೃತೋ ಯದಿ ಸರ್ವ ನ ಹಿ ನ ಶಾಸ್ಯತೇತಿ ನಿಗಮೋ ಬ್ರುವತೇ ಜ ತಥಾ' ಎಂಬ ಉತ್ತರಾರ್ಧಕ್ಕೆ ಶ್ರೀಮದಾಚಾರ್ಯರು ತಾತ್ಪರ್ಯದಲ್ಲಿ ಉದಾಹರಿಸಿರುವರು. ಈ ಶ್ಲೋಕದ ತಾತ್ಪರ್ಯವು ಜೀವರು ವಾಯುದೇವರ ಅಧೀನದಲ್ಲಿ ಅಪರಿಮಿತರಾಗಿಯೂ, ಅನಾದಿಕಾಲದಿಂದಲೂ ಸ್ವರೂಪ ದೇಹಗಳಿಂದ ಕೂಡಿರುವರು. ಅವರೆಲ್ಲರೂ ನಿನ್ನ ಶಾಸನಕ್ಕೆ ಒಳಪಟ್ಟವರಲ್ಲವೆಂಬಂತಿಲ್ಲ. ಎಲ್ಲರೂ ನಿನ್ನ ಶಾಸನಕ್ಕೆ ಒಳಗಾದವರೆಂದು ವೇದವು ಹೇಳುವುದು. ಅವು ಯಾವುವೆಂದರೆ, ಈಗ ಮೇಲೆ ಹೇಳಿದ "ಅಭೀದಂ" ಎಂಬ ಶ್ರುತಿಯೇ. ಈ ವಾಕ್ಯದಿಂದಲೂ ಮತ್ತು ಈ ಶ್ರುತಿವಾಕ್ಯದಿಂದಲೂ, ಜೀವರು

ಅನಾದಿಕಾಲದಿಂದಲೂ ಇದ್ದೇ ಇರುವರು. ಅವರ ದೇಹವನ್ನು ಮಾತ್ರ ನಾಶ ಗೊಳಿಸುವನೆಂದು ಹೇಳಿದುದರಿಂದ ಜೀವರು ಬೇರೆ ಪರಮಾತ್ಮನು ಅವರಿಂದ ಭಿನ್ನನೆಂದು ತೋರಿಸಿರುವರು. ಇದೇ ಅರ್ಥವನ್ನೇ ದಾಸರಾಯರು ಇಲ್ಲಿ ಹೇಳಿ ರುತ್ತಾರೆ. ಇಲ್ಲಿ ಶ್ರುತಿಗೆ ಅರ್ಥ ಬರೆಯುವಾಗ "ಖಳ" ಶಬ್ದಕ್ಕೆ ಒರಳೆಂದು ಅರ್ಥವನ್ನು ಮಾಡಿದೆ. ಆದರೆ ನ್ಯಾಯವಾಗಿ ಖಳ ಅಂದರೆ ಧಾನ್ಯ ಗಳನ್ನು ಹೊಡೆಯುವ ಕಳಗಳಿಗೆ ಹೆಸರಾದರೂ ಧಾನ್ಯಗಳ ಹೊಟ್ಟುಗಳನ್ನು ನಾಶಮಾಡಿ ಕಾಳುಗಳನ್ನು ಬೇರೆಮಾಡುವ ಶಕ್ತಿಯು ಕಳಗಳಿಗಿಲ್ಲ. ಹುಲ್ಲು ರಾಗಿಗಳನ್ನು ಮಾತ್ರ ಬೇರೆಮಾಡುವುದೇ ಹೊರ್ತು ಭತ್ತದ ಹೊಟ್ಟನ್ನು ತೆಗೆದು ಅಕ್ಕಿಯನ್ನು ಮಾಡಲು ಆಗುವುದಿಲ್ಲವೆಂಬ ಭಾವನೆಯಿಂದ ದಾಸ ರಾಯರು ಉಲೂಖಲ ವನಿಕೆಗಳಿಂದ ಎಂದು ಹೇಳಿರುವರು. ಇದರಿಂದಲೂ ಇಲ್ಲಿನ ಖಲಶಬ್ದಕ್ಕೆ ಉಲೂಖಲ ಪರವಾಗಿ ಅರ್ಥಮಾಡಿರುವರೆಂದು ತಿಳಿಯ ಬೇಕು. "ಸಂಹರಿಪಾ" ಎಂಬ ದಾಸರಾಯರ ವಾಕ್ಯಕ್ಕೆ ದೇಹನಾಶವೇ ಸಂಹಾರವಾಚ್ಯವಾದುದರಿಂದ ಮೇಲಿನ ಅರ್ಥವು ಸರಿಹೋಯಿತೆಂದು ಭಾವಿಸ ಬೇಕು. ॥ ೧೯ ॥

ಇದೇ ವಿಷಯವನ್ನೇ ಸ್ಪಷ್ಟಮಾಡುತ್ತಾರೆ—

**ದೇವ ಮಾನವ ದಾನವರು ಎಂ-**
**ದೀವಿಧದಲಾವಾಗಲಿಪ್ಪರು**
**ಮೂವರೊಳಗಿವಗಿಲ್ಲ ಸ್ನೇಹೋದಾಸೀನ ದ್ವೇಷಾ ॥**
**ಜೀವರಧಿಕಾರಾನುಸಾರದ-**
**ಲೀವ ಸುಖಸಂಸಾರ ದುಃಖವ**
**ತಾವುಣದಲವರವರಿಗುಣಿಸುವ ನಿರ್ಗತಾಶನನೂ ॥ ೨೦ ॥**

ಪದ್ಯಾರ್ಥ— ದೇವಮಾನವದಾನವರು=ದೇವತೆಗಳು, ಮನುಷ್ಯರು, ದೈತ್ಯರು ಎಂದು ಈ ವಿಧದಲಿ=ಈ ಪ್ರಕಾರವಾಗಿ, ಆವಾಗಲು ಇಪ್ಪರು - ಇರುತ್ತಿರುವರು. ಮೂವರೊಳು ಈ ಮೂರು ವಿಧದವರಲ್ಲಿ, ಇವಗೆ=ಈ ಪರಮಾತ್ಮನಿಗೆ, ಸ್ನೇಹ=ದೇವತೆಗಳಲ್ಲಿ ಸ್ನೇಹವಾಗಲಿ, ಉದಾಸೀನ=ಮನು ಷ್ಯರಲ್ಲಿ ಉದಾಸೀನತೆಯಾಗಲಿ, ದ್ವೇಷಾ=ದಾನವರಲ್ಲಿ ದ್ವೇಷವಾಗಲಿ ಇಲ್ಲ. ಜೀವರ = ತ್ರಿವಿಧ ಜೀವರ, ಅಧಿಕಾರಾನುಸಾರದಲಿ = ಯೋಗ್ಯತಾನುಸಾರ ವಾಗಿ, ಸುಖ=ದೇವತೆಗಳಿಗೆ ಸುಖವನ್ನೂ, ಸಂಸಾರ=ಮನುಷ್ಯರಿಗೆ ಮಿಶ್ರ ವಾದ ಸುಖದುಃಖವನ್ನೂ, ದೈತ್ಯರಿಗೆ ನಿತ್ಯ ದುಃಖವನ್ನೂ, ತಾ=ತಾನು,

ಉಣವಲಿ=ಭುಂಜಿಸದೆ, ಅವರಿಗೆ, ಉಣಿಸುವ=ಉಣಿಸುವನು (ಸ್ವಯಂ) ನಿರ್ಗತ=ಹೋಗಲ್ಪಟ್ಟ (ಇಲ್ಲದಿರುವ) ಅಶನನು=ಆಹಾರ ಉಳ್ಳವನು ॥ ೨೦ ॥

ತಾತ್ಪರ್ಯ—ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ, 'ತ್ರಿವಿಧಾ ಜೀವಸಂಘಾಸ್ತು ದೇವಮಾನುಷದಾನವಾಃ । ತತ್ರ ದೇವಾ ಮುಕ್ತಿ-ಯೋಗ್ಯಾಃ ಮಾನುಷೇಷೂತ್ತಮಸ್ತಥಾ ॥ ಮಧ್ಯಮಾ ಮಾನುಷಾ ಯೇ ತು ಸೃತಿಯೋಗ್ಯಾಸ್ತಥೈವ ಹಿ । ಅಧಮಾ ನಿರಯಾಯೈವ ದಾನವಾಸ್ತು ತಮೋಽ-ಲಯಾಃ ॥ ಮುಕ್ತಿರ್ನಿತ್ಯಾ ತಮಶ್ಚೈವ ನಾವೃತ್ತಿಃ ಪುನರೇತಯೋಃ । ದೇವಾ-ನಾಂ ನಿರಯೋ ನಾಸ್ತಿ ತಮಶ್ಚಾಪಿ ಕಥಂಚನ ॥ ನಾಸುರಾಣಾಂ ತಥಾ ಮುಕ್ತಿಃ ಕದಾಚಿತ್ಕೇನಚಿತ್ಕ್ವಚಿತ್ । ಮಾನುಷಾಣಾಂ ಮಧ್ಯಮಾನಾಂ ನೈತದ್ದ್ವಯ-ಮವಾಪ್ಯತೇ ॥" ಜೀವರಾಶಿಗಳಲ್ಲಿ ದೇವತೆಗಳೆಂತಲೂ, ಮನುಷ್ಯರೆಂತಲೂ, ರಾಕ್ಷಸರೆಂತಲೂ ಮೂರು ಪ್ರಕಾರ ರಾಶಿಗಳು ಇರುವವು. ಅದರಲ್ಲಿ ದೇವತೆ ಗಳೆಲ್ಲರು ಮತ್ತು ಮನುಷ್ಯೋತ್ತಮರು ಮುಕ್ತಿಯೋಗ್ಯರು. ಮನುಷ್ಯರಲ್ಲಿ ಮಧ್ಯಮರು ಯಾವಾಗಲೂ ನಿತ್ಯಸಂಸಾರಿಗಳು. ಮನುಷ್ಯರಲ್ಲಿ ಅಧಮರು ನರಕಭಾಗಿಗಳಾಗಿರುವರು. ದಾನವರೆಲ್ಲರೂ ತಮೋಯೋಗ್ಯರೇ. ಇದರಲ್ಲಿ ಮುಕ್ತಿಗೆ ಹೋದವರಿಗೂ, ತಮಸ್ಸನ್ನು ಹೊಂದಿದವರಿಗೂ ಪುನರಾವರ್ತಿ ಇಲ್ಲ. ದೇವತೆಗಳಿಗೆ ನರಕವಾಗಲಿ ತಮಸ್ಸಾಗಲಿ ಎಂದಿಗೂ ಆಗುವಂತಿಲ್ಲ. ಅಸುರರಿಗೆ ಮುಕ್ತಿಯು ಯಾವ ಸಾಧನದಿಂದಾಗಲಿ, ಯಾವ ಕಾಲದಲ್ಲಾ ಗಲಿ ಎಂದಿಗೂ ದೊರಕುವಂತಿಲ್ಲ. ಮನುಷ್ಯರಲ್ಲಿ ಮಧ್ಯಮರಿಗೆ ಮುಕ್ತಿ ಯಾಗಲಿ ತಮಸ್ಸಾಗಲಿ ಇವೆರಡೂ ಆಗುವಂತಿಲ್ಲ. ಈ ಅಭಿಪ್ರಾಯವನ್ನೇ ದಾಸರಾಯರು ಪದ್ಯದಲ್ಲಿ ಹೇಳಿರುವರು. ಹೀಗೆ ದೇವ ಮನುಷ್ಯ ದಾನವ ರೆಂಬ ತ್ರಿವಿಧ ಜೀವರಾಶಿಗಳಲ್ಲಿ ದೇವತೆಗಳಲ್ಲಿ ಪರಮಾತ್ಮನಿಗೆ ಸ್ನೇಹವಾಗಲಿ, ಮನುಷ್ಯರಲ್ಲಿ ಉದಾಸೀನವಾಗಲಿ, ದಾನವರಲ್ಲಿ ದ್ವೇಷವಾಗಲಿ ಇಲ್ಲ. ಎಲ್ಲ ರಲ್ಲಿಯೂ ಸಮನಾಗಿಯೇ ಇರುವನು. ಹಾಗಾದರೆ "ಇಂದ್ರಸ್ಯಾರ್ಥೇ ಕಥಂ ದೈತ್ಯಾನವಧೀದ್ವಿಷಮೋ ಯಥಾ" ಎಂಬ ಭಾಗವತ ಸಪ್ತಮಸ್ಕಂಧದಲ್ಲಿ ಪರ ಮಾತ್ಮನು ಎಲ್ಲರಿಗೂ ಸಮನು, ಪ್ರಿಯನು. ಹೀಗಿರಲು ಇಂದ್ರನ ಪ್ರೀತಿ ಗೋಸ್ಕರ ದೈತ್ಯರನ್ನು ಹನನಮಾಡಲು ಕಾರಣವೇನು? ಎಂದು ಪರೀಕ್ಷಿದ್ರಾ ಜನು ಪ್ರಶ್ನೆಮಾಡಲು ಶುಕಾಚಾರ್ಯರು ಈ ರೀತಿಯಾಗಿ ಸಮಾಧಾನ ಹೇಳಿರು ವರು. ಅದೆಂತೆಂದರೆ—

ಪರಮಾತ್ಮನು ಸಮನೇ, ಅಂದರೆ "ದೇಶಕಾಲಗುಣಾಂಶ್ಚೈವ ಭಕ್ತ್ಯಾದೀನಪ್ಯವೇಕ್ಷ್ಯತು । ಯೋಗ್ಯತಾಂ ಚ ತಥಾ ಕರ್ಮ ಸಮ ಇತ್ಯಭಿಧೀಯತೇ" ಎಂದು ಭಾಗವತ ತಾತ್ಪರ್ಯ ವಚನದ ಪ್ರಕಾರ, ದೇಶ, ಕಾಲ, ಗುಣಗಳು ಅವರವರ ಕರ್ಮ, ಯೋಗ್ಯತೆ ಇವುಗಳನ್ನು ಅನುಸರಿಸಿ ಅವರವರು ಮಾಡುವ ಭಕ್ತಿ ದ್ವೇಷಾದಿಗಳಿಗೆ ತಕ್ಕಂತೆ ಫಲಕೊಡುವುದಕ್ಕೆ ಸಮವೆಂದು ಹೆಸರು. ಭಕ್ತಿಮಾಡುವವನಿಗೂ, ದ್ವೇಷಮಾಡುವವನಿಗೂ ಒಂದೇ ಫಲ ಕೊಡುವುದಕ್ಕೆ ಸಮವೆಂದು ಹೇಳುವುದಿಲ್ಲ ಎಂದು ಹೇಳಿರುವರು. ಆದ್ದರಿಂದ ಭಜಕರಿಗೆ ಅವರ ಭಕ್ತಿಗೆ ತಕ್ಕ ಫಲವನ್ನೂ ದ್ವೇಷಿಗಳಿಗೆ ಅವರಿಗೆ ತಕ್ಕ ಫಲವನ್ನೂ ಕೊಡುವುದಕ್ಕೆ ಸಮವೆಂದು ಹೆಸರು. ದೇವತೆಗಳು ಪರಮಾತ್ಮನನ್ನು ಆರಾಧನಮಾಡುವುದರಿಂದ ಅವರಿಗೆ ಸುಖವನ್ನು ಕೊಡುವನು. ದೈತ್ಯರು ದ್ವೇಷಮಾಡುವುದರಿಂದ ದುಃಖಫಲವನ್ನು ಕೊಡುವನೆಂದು ಭಾವವು. ಅದನ್ನೇ ಇನ್ನೂ ವಿಶದವಾಗಿ ವಿಸ್ತರಿಸುತ್ತಾರೆ—ತ್ರಿವಿಧ ಜೀವರ ಅಧಿಕಾರಾನುಸಾರವಾಗಿ ದೇವತೆಗಳಿಗೂ ಮನುಷ್ಯೋತ್ತಮರಿಗೂ ನಿತ್ಯ ಸುಖಮಯವಾದ ಮುಕ್ತಿಯನ್ನೂ ಮಾನವ ಮಧ್ಯಮರಿಗೆ ನಿತ್ಯ ಸಂಸಾರಾಖ್ಯ-ಸಾಂತಾನಿಕ ಲೋಕವನ್ನೂ, ದಾನವರಿಗೆ ನಿತ್ಯ ದುಃಖಮಯವಾದ ತಮಸ್ಸನ್ನೂ ಕೊಟ್ಟು ಭುಂಜಿಸುವಂತೆ ಮಾಡುವನು, ಆಹಾರವರ್ಜಿತನಾದ ಪರಮಾತ್ಮನು, ತ್ರಿವಿಧ ಜೀವರೊಳಗಿದ್ದರೂ ನಿರ್ಲಿಪ್ತನಾಗಿ ಸುಖದುಃಖಗಳ ಸಂಬಂಧವಿಲ್ಲದಿರುವನು. ಆದರೆ ಇದೇ ಸಂಧಿಯಲ್ಲಿ ಹಿಂದೆ "ತೋದಕನು ತಾನಾಗಿ" ಎಂಬ ಪದ್ಯದಲ್ಲಿ "ಕರಣದೊಳಿದ್ದು ವಿಷಯವನ್ನೈದುವನು ತಿಳಿಯದವನೋಪಾದಿ ಭುಂಜಿಸುತ" ಇತ್ಯಾದಿ ಪದಗಳಿಂದ ಪರಮಾತ್ಮನು ಜೀವರೊಳಗಿದ್ದು ಸುಖವನ್ನನುಭವಿಸುವನು ಎಂದು ಹೇಳಿರುವರು. ಈ ವಾಕ್ಯಗಳಿಂದ ಪರಸ್ಪರ ವಿರೋಧ ಬರುವದಿಲ್ಲವೇ ಅಂದರೆ, ಇದರ ಪರಿಹಾರ:—ಜೀವರು ಕರ್ಮಗಳನ್ನು ಮಾಡುತ್ತಾ ಪುಣ್ಯಸಾಧನವನ್ನು ಮಾಡುತ್ತಿರುವಾಗ, ತಮ್ಮ ಸಂಚಿತ ಪುಣ್ಯವನ್ನನುಭವಿಸುವರು. ಆ ಜೀವರಿಗೋಸ್ಕರ ತಾನೂ ಆ ಸುಖವನ್ನು ಅನುಭವಿಸುವನೆಂದು ಹಿಂದಿನ ಪದ್ಯದ ಅಭಿಪ್ರಾಯವು. ಈ ಪದ್ಯದಲ್ಲಿ ಮುಕ್ತರಾದ ಮೇಲೆ ಸುಖಮಯವಾದ ಸ್ವರೂಪವುಳ್ಳ ಜೀವರಿಗೆ ಸುಖವನ್ನು ಉಣಿಸುವನಲ್ಲದೆ ತಾನು ಉಣುವುದಿಲ್ಲವೆಂಬ ಭಾವ. ಇದರಿಂದ ಪೂರ್ವೋತ್ತರಬಾಧೆ ಇಲ್ಲವೆಂದು ತಿಳಿಯಬೇಕು. ॥ ೨೦ ॥

ಪರಮಾತ್ಮನು ಸರ್ವತ್ರದಲ್ಲಿ ವ್ಯಾಪ್ತನಾಗಿರುವನೆಂಬುವದನ್ನು ವಿಸ್ತರಿಸುತ್ತಾರೆ:—

**ಎಲ್ಲಿ ಕೇಳಿದರಲ್ಲಿ ನೋಡಿದ-**
**ರಲ್ಲಿ ಬೇಡಿದರಲ್ಲಿ ನೀಡಿದ-**
**ರಲ್ಲಿ ಓಡಿದರಲ್ಲಿ ಯಾಡಿದರಲ್ಲಿ ಇರುತಿಹನು ॥**
**ಬಲ್ಲಿದರಿಗತಿಬಲ್ಲಿದನು ಸರಿ**
**ಇಲ್ಲ ಇವಗಾವಲ್ಲಿ ನೋಡಲು**
**ಖುಲ್ಲಮಾನವರೊಲ್ಲ ನಪ್ರತಿಮಲ್ಲ ಜಗಕೆಲ್ಲ ॥ ೨೧ ॥**

ಪದ್ಯಾರ್ಥ:—ಎಲ್ಲಿ ಕೇಳಿದರೂ=ಯಾವ ಸ್ಥಳದಲ್ಲಿ ಕಥಾಶ್ರವಣ ಮಾಡುತ್ತಿದ್ದರೂ, ಎಲ್ಲಿ ನೋಡಿದರೂ=ಯಾವ ಜಲಾಜಲ ಪ್ರತಿಮೆಗಳಲ್ಲಿ ನೋಡಿದರೂ, ಎಲ್ಲಿ ಬೇಡಿದರು=ಯಾವ ಬ್ರಹ್ಮರುದ್ರಾದಿ ದೇವತೆಗಳನ್ನು ಆರಾಧನೆ ಮಾಡಿ ವರವನ್ನು ಬೇಡಿದರು, ಎಲ್ಲಿ ನೀಡಿದರು=ಬ್ರಹ್ಮರುದ್ರಾದಿಗಳು ಯಾವನ ತಪಸ್ಸಿಗೆ ಮೆಚ್ಚಿ ವರವನ್ನು ಕೊಟ್ಟರೂ, ಎಲ್ಲಿ ಓಡಿದರೂ=ಸಂಸಾರದ ತಾಪತ್ರಯಕ್ಕೆ ತಾಳಲಾರದೆ ಎಲ್ಲಿ ಓಡಿದರೂ, ಎಲ್ಲಿ ಯಾಡಿದರು=ಯಾವ ಸ್ಥಳದಲ್ಲಿ ಪರಮಾತ್ಮನ ನಾಮೋಚ್ಚಾರಣ ಮಾಡುತ್ತಿದ್ದರೂ, ಅಥವಾ, ಭಗವತ್ಕಥೆಯನ್ನು ಹೇಳುತ್ತಿದ್ದರೂ, ಅಲ್ಲಿ ಇರುತಿಹನು. ಬಲ್ಲಿದರಿಗೆ=ತಿಳಿದವರಿಗೆ, ಅತಿ ಬಲ್ಲಿದನು=ಬಹಳ ತಿಳಿದವನು. ಆವಲ್ಲಿ ನೋಡಲು=ಯಾವ ವಿಧದಲ್ಲಿ ನೋಡಿದರೂ, ಈ ಪ್ರಪಂಚದಲ್ಲಿ ಎಲ್ಲಿ ನೋಡಿದರೂ, ಇವಗೆ=ಈ ಪರಮಾತ್ಮನಿಗೆ, ಸರಿಯಿಲ್ಲ=ಸಮರಿಲ್ಲ ಖುಲ್ಲಮಾನವರ=ದುರಹಂಕಾರಾದಿಗಳಿಂದ ಪೂರ್ಣರಾಗಿ ಭಕ್ತಿಯಿಲ್ಲದೆ, ಡಂಭತನದಿಂದ ಪೂಜಿಸುವವರ ಪೂಜಾದಿಗಳನ್ನು, ಒಲ್ಲನು=ಸ್ವೀಕರಿಸನು, ಜಗಕೆಲ್ಲ=ಜಗದೊಳಗೆಲ್ಲ, ಅಪ್ರತಿಮಲ್ಲ=ಅಸದೃಶ ಶೂರನು. ॥ ೨೧ ॥

ತಾತ್ಪರ್ಯ:—ಶ್ರೀಪರಮಾತ್ಮನ ಮಹಿಮೆಯನ್ನು ಶ್ರವಣಮಾಡುವವರು ಯಾವ ಸ್ಥಳದಲ್ಲಿ ಕೂತು ಶ್ರವಣಮಾಡಿದರೂ ಅಲ್ಲಿ ಶ್ರೀಪರಮಾತ್ಮನು ಶ್ರೋತೃಗಳಲ್ಲಿ ಸನ್ನಿಹಿತನಾಗಿದ್ದು ಶ್ರವಣಮಾಡುತ್ತಿರುವನು. ದೃಢವಾದ ಭಕ್ತಿಯಿಂದ ಪರಮಾತ್ಮನನ್ನೇ ನಂಬಿ ಶ್ರವಣಮಾಡುವವನಿಗೆ ಅಲ್ಲಿಯೇ ಪ್ರಸನ್ನನಾಗುವನು. ಜನಕರಾಜನು ಭಾಗವತ ಸಪ್ತಾಹ ಶ್ರವಣಮಾಡುವುದಕ್ಕಾಗಿ ದಿವ್ಯವಾದ ಚಪ್ಪರವನ್ನು ಗಂಗಾತೀರದಲ್ಲಿ ರಚಿಸಿ ತಾನು ಏಕಾಗ್ರಚಿತ್ತನಾಗಿ ನಿಂತು ಶ್ರವಣಮಾಡುತ್ತಿದ್ದನು. ಚಪ್ಪರವಲ್ಲಿ ಸಹಸ್ರಾರು ಮಂದಿ

ಶ್ರೋತೃಗಳು ನೆರೆದಿದ್ದರು. ಸನತ್ಕುಮಾರರು ಪುರಾಣವನ್ನು ಹೇಳುತ್ತಿದ್ದ ರು. ಈ ಶ್ರೋತೃಗಳ ದಾರಢ್ಯವನ್ನು ಹೊರಪಡಿಸುವುದಕ್ಕಾಗಿ ಶ್ರೀಪರಮಾ ತ್ಮನು ಇದ್ದಕ್ಕಿದ್ದಹಾಗೆಯೇ ಆ ಚಪ್ಪರಕ್ಕೆ ಅಗ್ನಿಸ್ಪರ್ಶ ಮಾಡಿಸಿಬಿಟ್ಟನು. ತಕ್ಷಣದಲ್ಲಿ ಶ್ರವಣಮಾಡುತ್ತಿದ್ದವರೆಲ್ಲರೂ ಗಾಭರಿಪಡುತ್ತಾ ದಿಕ್ಕುದಿಕ್ಕು ಗಳಿಗೆ ಓಡಿದರು. ಸನಕಾದಿಗಳು ಶ್ರವಣಮಾಡುತ್ತಿದ್ದ ಜನಕರಾಜ ಇವ ರಿಬ್ಬರೇ ಉಳಿದರು. ಜನರು ರಾಜನನ್ನು ಕುರಿತು, ರಾಜನೇ ಅಗ್ನಿಯು ಚಪ್ಪರವನ್ನು ಸುಡುತ್ತಿರುವುದು ಏಳು ಎಂದು ರಾಜನಿಗೆ ಬಹುವಿಧವಾಗಿ ಹೇಳಿದರು. ಸನತ್ಕುಮಾರರನ್ನು ಪುರಾಣ ಸಾಕುಮಾಡಿರೆಂದು ಕೇಳಿಕೊಂ ಡರು. ಇಬ್ಬರೂ ಈ ಮಾತನ್ನು ಲಕ್ಷ್ಯದಲ್ಲಿ ತಾರದೆ ಕೂತೇ ಇದ್ದರು. ಜನಕರಾಜನು ಕದಲದೆ ಕೇಳುತ್ತಲೇ ಇದ್ದನು. ದಂದಹ್ಯಮಾನವಾಗಿ ಮಂ ಟಪವೆಲ್ಲವೂ ಉರಿದು ಹೋಯಿತು. ಸನಕಾದಿಗಳೂ ರಾಜನೂ ಸಹ ದಗ್ಧ ರಾದರೆಂದು ಜನರು ಭಾವಿಸಿದ್ದರು. ಕೊಂಚ ಹೊತ್ತಿಗೆ ಅಗ್ನಿಯು ಶಾಂತ ವಾಯಿತು, ಆಗ ಎಲ್ಲರೂ ಬಂದು ನೋಡಲು ಎಥಾಪ್ರಕಾರ ಪುರಾಣ ನಡಿ ಯುತ್ತಲೇ ಇತ್ತು. ಜನಕರಾಜನು ಪೂರ್ವದಂತೆ ಶ್ರವಣಮಾಡುತ್ತ ನಿಂತಿ ದ್ದುದನ್ನು ನೋಡಿ ಜನರೆಲ್ಲರೂ ಪಶ್ಚಾತ್ತಪ್ತರಾಗಿ ನಾವು ಅನ್ಯಾಯವಾಗಿ ಪು ರಾಣವನ್ನು ಬಿಟ್ಟು ಓಡಿದೆವು. ಎಲ್ಲಿ ಕಥಾಶ್ರವಣವೋ ಅಲ್ಲಿ ಪರಮಾತ್ಮನು ಇದ್ದೇ ಇರುವನು, ಆ ಪರಮಾತ್ಮನ ಸನ್ನಿಧಾನದಲ್ಲಿ ಅಗ್ನಿ ಏನು ಮಾಡುವ ನು ? ನಮಗೆ ಇಷ್ಟು ತೋರದೆ ಭ್ರಾಂತರಾದೆವು. ರಾಜನು ದೃಢಮನಸ್ಕನು, ಅವನನ್ನು ಅಗ್ನಿಯು ಏನೂ ಮಾಡಲಿಲ್ಲ. ಆದ್ದರಿಂದ ದಾರಢ್ಯವೇ ಕಾರಣ ವೆಂದು ನಿಶ್ಚಯಿಸಿದರೆಂದು ಗಲ ಉಪಪುರಾಣಗಳಲ್ಲಿ ಒಂದಾದ ಬ್ರಹ್ಮಕೈವರ್ತ ವೆಂಬ ಪುರಾಣದಲ್ಲಿ ಈ ಕಥೆಯನ್ನು ಹೇಳಿರುವರು. ಜನಕರಾಜನು ಅಲ್ಲಿಯೇ ಸಾಕ್ಷಾತ್ತಾಗಿ ಪರಮಾತ್ಮನನ್ನು ನೋಡಿರುವನು. ಮತ್ತು ಎಲ್ಲಿ ನೋಡಿದರಲ್ಲಿ ಇರುವನು. ಶುಕಾಚಾರ್ಯರು ಮೊದಲಾದ ಅವಧೂತರು ಯಾವ ಸ್ಥಳದಲ್ಲಿ ಯಾವ ವಸ್ತುಗಳನ್ನು ನೋಡಿದರೂ ಅವುಗಳೆಲ್ಲವನ್ನೂ ಭಗವತ್ಸ್ವರೂಪವ ವನ್ನಾಗಿ ಕಾಣುತ್ತಿದ್ದರು. ಆದ್ದರಿಂದ ಎಲ್ಲಿ ನೋಡಿದರೂ ಅಲ್ಲಿರುವನೆಂದು ಹೇ ಳಿರುವರು. ಎಲ್ಲಿ ಬೇಡಿದರಲ್ಲಿರುತಿಹನು. ಬಾಣಾಸುರನು ಈಶ್ವರನನ್ನೂ, ರಾ ವಣನು ಬ್ರಹ್ಮದೇವರನ್ನೂ, ಮತ್ತೆ ಕೆಲವರು ಪಾರ್ವತಿ ಮೊದಲಾದವರನ್ನೂ ಆರಾಧಿಸಿ ವರವನ್ನು ಬೇಡಲು ಶ್ರೀಪರಮಾತ್ಮನು ಬ್ರಹ್ಮಾದಿ ದೇವತೆಗಳಲ್ಲಿ

ತದ್ರೂಪದಿಂದ ಪ್ರಸನ್ನನಾಗಿ ವರವನ್ನು ಕೊಟ್ಟಿರುವನು. ಬ್ರಹ್ಮಾದಿಗಳೇ ವರವನ್ನು ಕೊಟ್ಟಿರುವುದಾಗಿ ಪುರಾಣಗಳಲ್ಲಿ ಹೇಳಲ್ಪಟ್ಟಿರಲು ಪರಮಾತ್ಮನೇ ತದ್ರೂಪಿಯಾಗಿ ಬಂದನೆಂಬ ಕಲ್ಪನಗೆ ಆಧಾರವೇನು ?

ಅಂದರೆ ' ಏನ ವಿನಾತೃಣಮಪಿ ನಚಲತಿ ' ಎಂಬ ಪ್ರಮಾಣದಲ್ಲಿ ಪರಮಾತ್ಮನ ಹೊರತು ಬ್ರಹ್ಮಾದಿಗಳಿಗೆ ತೃಣಚಲನಾದಿ ಶಕ್ತಿಯು ಕೂಡ ಇರುವುದಿಲ್ಲವೆಂದು ಹೇಳಲ್ಪಟ್ಟಿರುವುದು. ಇದೇ ಆಧಾರದಮೇಲೆ ಪರಮಾತ್ಮನೇ ಅಪರೋಕ್ಷಗಿದ್ದು ವರಪನ್ನಿತ್ತವನೆಂದು ಸಿದ್ಧವಾಯಿತು. ಮತ್ತು ಭಕ್ತರಿಗೆ ಎಲ್ಲಿ ಬೇಡಿದರೂ ಅಲ್ಲಿಯೇ ಪ್ರಸನ್ನನಾಗುವನೆಂದು ಮತ್ತೊಂದು ಅರ್ಥವೂ ಉಂಟು. ಧೃವನು ಅಡವಿಯಲ್ಲಿ ತಪಸ್ಸುಮಾಡಿ ಬೇಡಲು ಅವನಿಗೆ ಅಲ್ಲಿಯೇ ಗೋಚರನಾದನು. ಕೂರ್ಮದಾಸನು ಕುಂಟನಾದುದರಿಂದ ಆಷಾಢ ಶುದ್ಧ ಏಕಾದಶೀ ದಿವಸ ಪಾಂಡುರಂಗನನ್ನು ನೋಡದೆ ಹೋದೆನಲ್ಲ ಎಂದು ವ್ಯಸನ ಪಡುವಾಗ ಪಾಂಡುರಂಗನು ಅವನಿಗಾಗಿ ಅವನಸಿದ್ಧಲ್ಲಿಯೇ ಬಂದು ನಿಂತನು. ಪುಂಡರೀಕನಿಗೆ ನದೀತೀರದಲ್ಲಿಯೇ ಪ್ರಸನ್ನನಾಗಿ ಅಲ್ಲಿಯೇ ನಿಂತನು. ಪುಂಡರೀಕನಿಗೆ ನದೀತೀರದಲ್ಲಿಯೇ ಪ್ರಸನ್ನನಾಗಿ ಅಲ್ಲಿಯೇ ನಿಂತನು. ಇಂತಹುದೆಷ್ಟೋ ಉದಾಹರಣೆಗಳು ಇರುವುವು. ಜನರು ಯಾವಸ್ಥಳದಲ್ಲಿಯಾದರೂ ಭಕ್ತಿಯಿಂದ ಪತ್ರವನ್ನಾಗಲಿ, ಪುಷ್ಪವನ್ನಾಗಲಿ ಫಲವನ್ನಾಗಲಿ, ಉದಕವನ್ನಾಗಲಿ ಕೊಟ್ಟರೆ ಅವುಗಳನ್ನು ಅಲ್ಲಿಯೇ ಸ್ವೀಕರಿಸುವನು. ಎಲ್ಲಿ ಓಡಿದರೂ ಅಲ್ಲಿ ಇರುವನು. ಅಂದರೆ ಭಾಗವತ ದಶಮದಲ್ಲಿ " ಮರ್ತ್ಯೋಽಗೇ ಮೃತ್ಯುವ್ಯಾಳಭೀತಃ ಪಲಾಯನ್ ಲೋಕಾನ್ಸರ್ವಾನ್ನಿರ್ಭಯಂ ನಾಧ್ಯಗಚ್ಛತ್ । ತ್ವತ್ಪಾದಾಬ್ಜಂಪ್ರಾಪ್ಯಯದೃಚ್ಛಯಾದ್ಯ ಸ್ವಸ್ಥಃ ಸೇತೆ ಮೃತ್ಯುರಸ್ಮಾದಪೈತಿ ॥ " ಮನುಷ್ಯನು ಮೃತ್ಯುವೆಂಬ ಸರ್ಪಕ್ಕೆ ಹೆದರಿ ಈ ಲೋಕದಲ್ಲಿ ಎಲ್ಲಿ ಓಡಿದರೂ ಅಲ್ಲಲ್ಲಿ ಮೃತ್ಯು ಇದ್ದೇ ಇರುವುದು. ಯದೃಚ್ಛೆಯಾ ನಿನ್ನ ಪಾದಾರವಿಂದವನ್ನು ಸೇರಿದರೆ ಆಗ ಮೃತ್ಯುವು ಅವನನ್ನು ಬಿಡುವುದು. ಆಗ ಮನುಷ್ಯನು ನಿರ್ಭೀತಿಯಿಂದ ಸ್ವಸ್ಥನಾಗಿ ಮಲಗುವನು.

ಹೀಗೆ ಮರಣಕ್ಕೆ ಭಯ ಪಟ್ಟು ಮನುಷ್ಯನು ಎಲ್ಲಿ ಓಡಿದರೂಮೃತ್ಯುರೂಪಿಯಾಗಿ ಅಲ್ಲಲ್ಲಿ ಪರಮಾತ್ಮನು ಇದ್ದೇ ಇರುವನು. ಪರಮಾತ್ಮನನ್ನೇ ನಂಬಿದರೆ ಆ ಭಯವು ನಿವೃತ್ತಿಯಾಗುವುದು. 'ಎಲ್ಲಿ ಆಡಿದರಲ್ಲಿ ಇರುತಿಹನು' ಆಡಿದರೆ ಅಂದರೆ ನುಡಿದರೆ ಎಂದು ಒಂದು ಅರ್ಥವೂ, ಆಟವಾಡುವುದೆಂಬ

ಮತ್ತೊಂದರ್ಥವೂ ಆಗುವುದು. ಇಲ್ಲಿ ಎರಡು ಅರ್ಥಗಳೂ ಕೂಡುವುವು. ಸಣ್ಣಸಣ್ಣ ಮಕ್ಕಳು ಮುದ್ದು ಮುದ್ದಾಗಿ ಮಾತನಾಡುತ್ತಾ ಆಟವನ್ನಾಡುತ್ತಿದ್ದರೆ ಆ ಮಕ್ಕಳಲ್ಲಿ ಸನ್ನಿಹಿತನಾಗಿದ್ದು ಆಟವನ್ನಾಡುತ್ತಿರುವನು. ಸಖೂಬಾಯಿಯೆಂಬಾಕೆಯು ಸಣ್ಣ ವಯಸ್ಸಿನಲ್ಲಿ ಬೊಂಬೆ ಆಟವನ್ನಾಡುವಾಗ ಪಾಂಡುರಂಗನ ಪ್ರತಿಮೆಯನ್ನು ಇಟ್ಟುಕೊಂಡು ಅವನನ್ನು ಭಜಿಸುವುದೇ ಆಟವಾಗಿ ಮಾಡಿಕೊಂಡಿರಲು ಆಕೆಗೆ ಇದಿರಿನಲ್ಲಿ ಪಾಂಡುರಂಗನೇ ನಿಂತಂತೆ ಗೋಚರವಾಗುತ್ತಿದ್ದನು. ಆಡಿದರೆ ಎಂಬ ಪದಕ್ಕೆನುಡಿದರೆ ಎಂಬ ಅರ್ಥದಲ್ಲಿ, ಪ್ರಹ್ಲಾದನು ತನ್ನ ತಂದೆಯನ್ನು ಕುರಿತು ಈ ಸ್ತಂಭದಲ್ಲಿಯೂ ಪರಮಾತ್ಮನು ಇರುವನು ಎಂದು ನುಡಿಯಲು "ಸತ್ಯಂ ವಿಧಾತುಂ ನಿಜಭೃತ್ಯಭಾಷಿತಂ" ನಿಜ ಭೃತ್ಯನಾದ ಪ್ರಹ್ಲಾದನಾಡಿದ ವಾಕ್ಯವನ್ನು ಸತ್ಯಮಾಡುವುದಕ್ಕಾಗಿ ಸ್ಥಂಭದಿಂದಲೇ ಅವಿರ್ಭೂತನಾದನು. "ಬಲ್ಲಿದರಿಗತಿ ಬಲ್ಲಿವನು" ವೇದಾಭಿಮಾನಿಯಾದ ರಮಾದೇವಿ, ಬ್ರಹ್ಮಾದಿ ದೇವತೆಗಳು ಬಲ್ಲದರಿಂದು ಹೆಸರು. ಆದರೂ ಭಗವದ್ವಿಷಯವನ್ನು ಸಾಕಲ್ಯೇನ ಯಾರೂ ಅರಿಯರು. ಪರಮಾತ್ಮನಾದರೋ ಇವರೆಲ್ಲರ ಸ್ವರೂಪವನ್ನು ಚೆನ್ನಾಗಿ ಬಲ್ಲನು. ಈ ಜಗತ್ತಿನಲ್ಲಿ ಎಲ್ಲಿ ನೋಡಿದರೂ ಇವನಿಗೆ ಸಮರು ಮತ್ತಾರೂ ಇಲ್ಲ. ನಾನು ನನ್ನದು ಎಂಬ ಅಹಂಕಾರದಿಂದ ಡಂಭಾಚಾರದವರು ಮಾಡುವ ಪೂಜೆಯನ್ನು ಕೈಗೊಳ್ಳನು. ಜಗತ್ತಿನೊಳು ಅಸದೃಶ ಜಟ್ಟಿಯೆನಿಸಿಕೊಳ್ಳುವನು.

**ತಪ್ತಲೋಹವು ನೋಳ್ಪ ಜನರಿಗೆ**
**ಸಪ್ತಜಿಹ್ವನ ತೆರದಿ ತೋರ್ಪುದು**
**ಲುಪ್ತಪಾವಕಲೋಹ ಕಾಂಬುದು ಪೂರ್ವದೋಪಾದೀ ॥**
**ಸಪ್ತವಾಹನ ನಿಖಿಲ ಜನರೊಳು**
**ವ್ಯಾಪ್ತನಾದುದರಿಂದ ಸರ್ವರು**
**ಆಪ್ತರಾಗಿಹರೆಲ್ಲ ಕಾಲದಿ ಹಿತವ ಕೈಗೊಂಡೂ ॥ ೨೨ ॥**

ಪದ್ಯಾರ್ಥ.—ತಪ್ತಲೋಹವು=ಕಾದ ಕಬ್ಬಿಣವು, ನೋಳ್ಪಜನರಿಗೆ=ನೋಡುವ ಜನರಿಗೆ, ಸಪ್ತಜಿಹ್ವನ ತೆರದಿ=ಏಳು ನಾಲಿಗೆಯುಳ್ಳ ಅಗ್ನಿಯೋಪಾದಿಯಲ್ಲಿ, ತೋರ್ಪುದು=ಕಾಣುವುದು, ಲುಪ್ತಪಾವಕ–ಅಗ್ನಿಯು ಶಾಂತವಾದ ಬಳಿಕ, ಲೋಹ=ಕಬ್ಬಿಣವು, ಪೂರ್ವದೋಪಾದಿ–ಮೊದಲಿನಂತೆ ಕಬ್ಬಿಣವಾಗಿ, ಕಾಂಬುದು–ಕಾಣುವುದು, ಅದರಂತೆ, ಸಪ್ತವಾಹನ = ಏಳು

ಕುದುರೆಗಳು ಕಟ್ಟಿದ ರಥವುಳ್ಳ ಸೂರ್ಯರೂಪಿಯಾದ ಉರುಕ್ರಮನಾಮಕ ಶ್ರೀಪರಮಾತ್ಮನು, ನಿಖಿಳಜನರೊಳು-ಸಮಸ್ತವಾದ ಜನರೊಳಗೂ, ವ್ಯಾಪ್ತನಾದುದರಿಂದೆ-ವ್ಯಾಪ್ತನಾಗಿರುವ ಕಾರಣದಿಂದಲೇ, ಸರ್ವರು-ಸಕಲ ಜನರು, ಎಲ್ಲಕಾಲದಿ-ಸರ್ವಕಾಲದಲ್ಲಿಯೂ, ಹಿತವಕ್ಕೈಗೊಂಡು-ಪರಸ್ಪರ ಉಪಕಾರಾದಿಗಳನ್ನು ಹೊಂದಿ, ಆಪ್ತರಾಗಿಹರು = ಪರಸ್ಪರ ಹೆಂಡತಿ ಮಕ್ಕಳು ಬಂಧು ಮಿತ್ರರೆಂದು ಆಪ್ತರಾಗಿರುವರು.

ತಾತ್ಪರ್ಯ.—ಕಾದ ಕಬ್ಬಿಣವು ನೋಡಿದ ಜನರಿಗೆ ಕೆಂಡದಂತೆ ಕಾಣಿಸುವುದು. (ಸಪ್ತಜಿಹ್ವನ ತೆರದಿ ಅಂದರೆ ಅಗ್ನಿಯೆಂದರ್ಥ. "ಅಸ್ಯ ದ್ವಯಂ ಸುತಾ ಪ್ರೋಕ್ತಂ ಸಪ್ತಜಿಹ್ವಾ ಸಮನ್ವಿತಂ । ದಕ್ಷಿಣಾಸ್ಯೇ ಚತುರ್ಜಿಹ್ವಾತಿಸ್ರೋನ್ಯೇ ವಾಮವಕ್ತ್ರಕೇ" ಎಂದು ಅಗ್ನಿರೂಪವನ್ನು ವರ್ಣಿಸುವ ಶ್ರುತಿಯಲ್ಲಿ ಅಗ್ನಿದೇವರಿಗೆ ಎರಡು ಮುಖಗಳು ಏಳು ನಾಲಿಗೆಗಳುಂಟು. ಬಲದ ಮುಖದಲ್ಲಿ ನಾಲ್ಕು ನಾಲಿಗೆಗಳು, ಎಡದ ಮುಖದಲ್ಲಿ ಮೂರು ನಾಲಿಗೆಗಳು ಇರುವುವು). ಅದು ಆರಿಹೋದರೆ ಬರೀ ಕಬ್ಬಿಣವಾಗಿಯೇ ಕಾಣುವುದು. ಹೀಗೆಯೇ ಶ್ರೀ ಪರಮಾತ್ಮನು ಎಲ್ಲರ ದೇಹದಲ್ಲಿ ವ್ಯಾಪ್ತನಾಗಿ ಇರುವುದರಿಂದ ಜನರು ಪ್ರಾಣಿಗಳೆಂದೆನಿಸಿಕೊಂಡು ಎಲ್ಲರಿಗೂ ಬೇಕಾದವರಾಗಿ ಒಬ್ಬರಿಗೊಬ್ಬರು ಉಪಕಾರ ಮಾಡುತ್ತ ಮಾಡಿಸಿಕೊಳ್ಳುತ್ತಾ ಶೋಭಿಸುತ್ತಿರುವರು. ಪರಮಾತ್ಮನು ಶರೀರದಲ್ಲಿಲ್ಲದಿದ್ದರೆ ಬೆಂಕಿ ಆರಿದ ಕಬ್ಬಿಣವು ಹೇಗೆ ಕಾಣುವುದೋ ಹಾಗೆಯೇ ಕುಣಪ (ಶ್ರವ) ವಾಗಿ ಶರೀರವು ಯಾರಿಗೂ ಬೇಡವಾಗುವುದು. ಹೆಂಡತಿಯೂ ಸಹ ಶರೀರವನ್ನು ನೋಡಲಂಜುವಳು. ಆದ್ದರಿಂದ ಆ ಮನುಷ್ಯಾದಿಗಳು ಪರಸ್ಪರ ಗೌರವಾದಿಗಳನ್ನು ಹೊಂದುವುದು ಪರಮಾತ್ಮನು ದೇಹಗತನಾಗಿರುವುದರಿಂದಲೆ ಎಂದು ಭಾವಿಸಬೇಕು.

ಜೀವರಲ್ಲಿ ಕೆಲವರಿಗೆ ಸುಖವನ್ನೂ ಕೆಲವರಿಗೆ ಸುಖದುಃಖ ಮಿಶ್ರವಾದ ಸಂಸಾರವನ್ನೂ ಕೆಲವರಿಗೆ ದುಃಖವನ್ನೂ ಕೊಡುವನೆಂದು ಮೇಲೆ ಕೆಲವು ಪದ್ಯಗಳಲ್ಲಿ ಹೇಳಿರುವರು. ಕರ್ಮವನ್ನು ಪರಮಾತ್ಮನೇ ಮಾಡಿಸಿ ಫಲಗಳನ್ನು ಒಬ್ಬೊಬ್ಬರಿಗೆ ಒಂದೊಂದು ವಿಧವಾಗಿ ಕೊಡುವುದರಿಂದ ಪರಮಾತ್ಮನಿಗೆ ವೈಷಮ್ಯ ದೋಷ ಬಂದೀತೆಂಬ ಶಂಕೆಯನ್ನು ಈ ಪದ್ಯದಿಂದ ಪರಿಹರಿಸುತ್ತಾರೆ.

ವಾರಿದನು ಮಳೆಗರಿಯೆ ಬೆಳದಿಹ
ಭೂರುಹಂಗಳ ಚಿತ್ರಫಲ ರಸ
ಬೇರೆ ಬೇರಿಪ್ಪಂತೆ ಬಹುವಿಧ ಜೀವರೊಳಗಿದ್ದು ||
ಮಾರಮಣನವರವರ ಯೋಗ್ಯತೆ
ಮೀರದಲೆ ಗುಣಕರ್ಮಗಳನನು
ಸಾರನಡೆಸುವ ದೇವನಿಗೆ ವೈಷಮ್ಯವೆಲ್ಲಿಹದೋ ||೨೩||

ಪದ್ಯಾರ್ಥ.—ವಾರಿದನು-ಮೇಘವು, ಮಳೆಗರಿಯೆ-ಮಳೆಕರೆಯಲು ಬೆಳೆದಿಹ=ಬೆಳೆದಿರುವ, ಭೂರುಹಂಗಳ-ವೃಕ್ಷಗಳ, ಚಿತ್ರಫಲರಸ = ವಿಚಿತ್ರವಾದ ಫಲಗಳು ಅವುಗಳ ರಸಗಳು, ಬೇರೆಬೇರಿಪ್ಪಂತೆ=ಬೇರೆಬೇರೆಯಾಗಿರುವಂತೆ, ಬಹು ವಿಧ ಜೀವರೊಳಗಿದ್ದು, ಮಾರಮಣ-ಲಕ್ಷ್ಮೀಪತಿಯು, ಅವರವರ ಯೋಗ್ಯತೆ ಮೀರದಲೆ, ಗುಣಕರ್ಮಗಳನನುಸಾರ=ಗುಣಕರ್ಮಗಳನ್ನನುಸರಿಸಿ, ನಡೆಸುವ-ಫಲಗಳನ್ನು ಕೊಡುತ್ತಿರುವ, ದೇವನಿಗೆ, ವೈಷಮ್ಯವೆಲ್ಲಿಹದೋ=ವೈಷಮ್ಯವು ಎಲ್ಲಿರುವದು ? (ಯಾವಾಗಲೂ ಇಲ್ಲವೆಂದರ್ಥ.)

ತಾತ್ಪರ್ಯ.—ಮೇಘವು ಎಲ್ಲ ಸ್ಥಳಗಳಲ್ಲಿ ಮಳೆಯನ್ನು ವರ್ಷಿಸಲು ಎಲ್ಲ ಸ್ಥಳಗಳಲ್ಲಿ ಬೀಳುವ ನೀರು ಒಂದೇ ರೀತಿಯಲ್ಲಿರುವದು. ಆ ನೀರಿನಿಂದ ಬೆಳೆದ ವೃಕ್ಷಗಳ ಫಲಗಳು ಕೆಲವು ಸಿಹಿ, ಕೆಲವು ಕಹಿ, ಕೆಲವು ಹುಳಿ ಹೀಗೆ ಬೇರೆಬೇರೆಯಾಗಿ ಬಿಡುವವು. ಇದಕ್ಕೆ ಆ ವೃಕ್ಷಗಳ ಸ್ವರೂಪವೇ ಕಾರಣವೇ ಹೊರತು, ಮಣ್ಣು ನೀರು ಮೊದಲಾದವು ಹೇಗೆ ಕಾರಣವಲ್ಲವೋ ಹಾಗೆಯೇ ಶ್ರೀಪರಮಾತ್ಮನು ಸಾತ್ವಿಕಾದಿ ತ್ರಿವಿಧ ಜೀವರೊಳಗಿದ್ದು ಅವರ ಯೋಗ್ಯತೆಯನ್ನು ಮೀರದೆ ಸಾತ್ವಿಕರಿಂದ ಸತ್ಕರ್ಮವನ್ನೂ, ರಾಜಸರಿಂದ ಮಿಶ್ರಕರ್ಮವನ್ನೂ, ತಾಮಸರಿಂದ ತನ್ನಲ್ಲಿ, ದ್ವೇಷಾದಿಗಳನ್ನು ಮಾಡಿಸಿ ಆಯಾ ಕರ್ಮಗಳಿಗೆ ತಕ್ಕಂತೆ ಫಲಗಳನ್ನು ಕೊಡುವನು. ಮುಖ್ಯವಾಗಿ ಜೀವರ ಸತ್ವಾದಿ ಗುಣಗಳು, ಪ್ರಾರಬ್ಧ ಕರ್ಮಗಳು, ಇವುಗಳನ್ನನುಸರಿಸಿ ಕರ್ಮಗಳನ್ನು ಮಾಡಿಸಿ ಫಲಗಳನ್ನು ಕೊಡುವನೇ ಹೊರತು ತನಗೆ ಇವರು ಬೇಕಾದವರು, ಇವರು ಬೇಡದವರು ಎಂಬ ಪಕ್ಷಪಾತದಿಂದ ಫಲವನ್ನು ಕೊಡುವವನಲ್ಲ. ಆದ್ದರಿಂದ ಇಂತಹ ಪರಮಾತ್ಮನಿಗೆ ವೈಷಮ್ಯವೆಲ್ಲಿರುವದು.

ಅವತಾರಿಕೆ.—ಮೇಲೆ ಹೇಳಿದುದನ್ನೇ ವಿಸ್ತರಿಸುತ್ತಾರೆ.—

**ವಾರಿಜಾಪ್ತನಕಿರಣ ಮಣಿಗಳ**
**ಸೇರಿ ತತ್ತದ್ವರ್ಣಗಳನು ವಿ**
**ಕಾರಗೈಸದೆ ನೋಳ್ಪರಿಗೆ ಥಳಿಥಳಿಸುವಂದದಲಿ।**
**ಮಾರಮಣ ಲೋಕತ್ರಯದೊಳಿಹ**
**ಮೂರುವಿಧ ಜೀವರೊಳಗಿದ್ದು ವಿ**
**ಹಾರ ಮಾಡುವನವರ ಯೋಗ್ಯತೆ ಕರ್ಮವನನುಸರಿಸಿ ॥೨೪॥**

ಪದ್ಯಾರ್ಥ.—ವಾರಿಜಾಪ್ತನ=ವಾರಿಜ-ಕಮಲಕ್ಕೆ, ಆಪ್ತನ=ಪ್ರಿಯಕರನಾದ ಸೂರ್ಯನ, ಕಿರಣ=ಕಿರಣವು, ಮಣಿಗಳ=ಕೆಂಪು, ವಜ್ರ, ಪಚ್ಚೆ ನೀಲ, ಮೊದಲಾದ ರತ್ನಗಳ, ಸೇರಿ=ಮೇಲೆ ಬಿದ್ದು, ತತ್ತದ್ವರ್ಣಗಳನು=ವಜ್ರ ಕೆಂಪು ಮೊದಲಾದ ಮಣಿಗಳ ವರ್ಣಗಳನ್ನು, ವಿಕಾರಗೈಸದೆ=ವರ್ಣ ವ್ಯತ್ಯಾಸವನ್ನು ಮಾಡದೆ, ನೋಡುವ ಜನಗಳಿಗೆ, ಥಳಿಥಳಿಸುವಂದದಲಿ=ಥಳಥಳಾಯಮಾನವಾಗಿ ಪ್ರಕಾಶಪಡಿಸುವ ತೆರದಲ್ಲಿ, ಮಾರಮಣ=ಲಕ್ಷ್ಮೀಪತಿಯು, ಲೋಕತ್ರಯದೊಳಿಹ=ಮೂರು ಲೋಕದೊಳಗೆ ಇರುವ, ಮೂರು ವಿಧ ಜೀವರೊಳಗಿದ್ದು-ಸಾತ್ವಿಕ ಮೊದಲಾದ ಮೂರು ವಿಧ ಜೀವರೊಳಗಿದ್ದು, ಅವರ=ಆ ತ್ರಿವಿಧಜೀವರ ಯೋಗ್ಯತೆ ಕರ್ಮವ=ಯೋಗ್ಯತೆಯನ್ನೂ ಕರ್ಮವನ್ನೂ ಅನುಸರಿಸಿ ವಿಹಾರಮಾಡುವನು.

ತಾತ್ಪರ್ಯ.—ಸೂರ್ಯನ ಕಿರಣವು ವಜ್ರ, ಕೆಂಪು, ನೀಲದಮೇಲೆ ಬಿದ್ದು ಅವುಗಳ ಬಿಳಪು, ಕೆಂಪು ಮೊದಲಾದ ವರ್ಣಗಳನ್ನು ವ್ಯತ್ಯಾಸಮಾಡದೆ ಕೆಂಪು, ನೀಲ ಮೊದಲಾದ ವರ್ಣಗಳಿಂದಲೇ ಥಳಿಥಳಸುವಂತೆ ಶ್ರೀಪರಮಾತ್ಮನು ಸಾತ್ವಿಕಾದಿ ಜೀವರಾಶಿಗಳಲ್ಲಿದ್ದು ಅವರ ಸ್ವಭಾವಗಳನ್ನು ವ್ಯತ್ಯಾಸ ಮಾಡದೆ ಅವರವರ ಯೋಗ್ಯತೆಗಳನ್ನನುಸರಿಸಿ ವಿಹಾರಮಾಡುತ್ತಿರುವನು.

**ಜಲವನಪಹರಿಸುವ ಗಳಿಗೆ ಬ**
**ಟ್ಟಲನುಳಿದು ಜೈಗಂಟೆ ಕೈಪಿಡಿ**
**ದೆಳೆದು ಹೊಡೆವಂದದಲಿ ಸಂತತ ಕರ್ತೃತಾನಾಗಿ।**
**ಹಲಧರಾನುಜ ಪುಣ್ಯಪಾಪದ**
**ಫಲಗಳನು ದೇವಾಸುರರಗಣ**
**ದೊಳು ವಿಭಾಗವ ಮಾಡಿವುಣಿಸುತ ಸಾಕ್ಷಿಯಾಗಿಪ್ಪ ॥೨೫॥**

ಪದ್ಯಾರ್ಥ.—ಜಲವನಪಹರಿಸುವ-ನೀರನ್ನು ಸ್ವೀಕರಿಸುವ, ಗಳಿಗೆ ಬಟ್ಟಲನ್ನು-ಗಳಿಗೆಯನ್ನು ಸೂಚಿಸುವ ಬಟ್ಟಲನ್ನು, ಉಳಿದು=ಬಿಟ್ಟು, ಜೈಗಂಟೆ-ಜಾಗಟೆಯನ್ನು, ಕೈಪಿಡಿದೆಳೆದು=ಕೈಯ್ಯಲ್ಲಿ ಹಿಡಿದು ತನ್ನ ಮುಂದಕ್ಕೆ ಎಳೆದುಕೊಂಡು, ಹೊಡೆವಂದದಿ=ಹೊಡೆಯುವ ತೆರದಲ್ಲಿ, ಸಂತತ=ನಿರಂತರದಲ್ಲಿಯೂ, ತಾನು=ಶ್ರೀಪರಮಾತ್ಮನು, ಕರ್ತೃ=ಮಾಡುವವನು, ಆಗಿ ಹಲಧರಾನುಜ=ಬಲರಾಮನ ತಮ್ಮನಾದ ಶ್ರೀಪರಮಾತ್ಮನು, ಪುಣ್ಯಪಾಪದ ಫಲಗಳನ್ನು, ದೇವಾಸುರರಗಣದೊಳು-ದೇವದೈತ್ಯರ ಗಣದೊಳಗೆ, ವಿಭಾಗಮಾಡಿ, ಉಣಿಸುತ ಸಾಕ್ಷಿಯಾಗಿಪ್ಪ.

ತಾತ್ಪರ್ಯ.—ಕಾಲವನ್ನು ಅಳಿಯುವದಕ್ಕಾಗಿ ೪ ಅಂಗುಲ ಅಗಲವಾಗಿಯೂ, ೪ ಅಂಗುಲ ಆಳವಾಗಿಯೂ ಇರುವ ಒಂದು ಬಟ್ಟಲನ್ನು ಮಾಡಿಸಿ ಅದರ ಮಧ್ಯದಲ್ಲಿ ಒಂದು ಸಣ್ಣದಾದ ತೂತನ್ನು ಮಾಡಿರುವರು ಅದಕ್ಕೆ ಗಳಿಗೆ ಬಟ್ಟಲೆಂದು ಹೆಸರು. ಈ ಬಟ್ಟಲನ್ನು ಮಾಡುವ ಕ್ರಮವನ್ನು ಭಾಗವತದಲ್ಲಿ ಹೇಳಿರುವರು. ಹೇಗೆಂದರೆ:—"ದ್ವಾದಶಾರ್ಧಪಲೋನ್ಮಾನಂ ಚತುರ್ಭಿಶ್ಚತುರಂಗುಲೈಃ ‖ ಸ್ವರ್ಣಮಾಷೈಃ ಕೃತಚ್ಛಿದ್ರಂ ಯಾವತ್ಪ್ರಸ್ಥಂಜಲಂವಿಬೇತ್ ‖ " ಆರುಪಲ ಕಾಳು ಅಂದರೆ ೧೮ತೊಲೆ ಅಕ್ಕಿಕಾಳು ಹಿಡಿಯುವ ಒಂದು ಹಿತ್ತಾಳೆ ಅಥವಾ ತಾಮ್ರದ ಗುಂಡು ಬಟ್ಟಲನ್ನು ಸಿದ್ಧಪಡಿಸಬೇಕು. ಅದರ ಮಧ್ಯದಲ್ಲಿ ೨೦ ಗುಂಜಿತೂಕ ಬಂಗಾರವನ್ನು ನಾಲ್ಕು ಅಂಗುಲ ಪ್ರಮಾಣ ಉದ್ದವಾಗಿ ತಂತಿಯನ್ನಾಗಿ ಮಾಡಿ ಅದು ಹಿಡಿಯುವ ಒಂದು ತೂತನ್ನು ಮಾಡಬೇಕು. ದೊಡ್ಡದಾದ ಒಂದು ಗಂಗಾಳದಲ್ಲಿ ನೀರನ್ನು ತುಂಬಿ ಅದರಲ್ಲಿ ಈ ಬಟ್ಟಲನ್ನು ಬಿಟ್ಟರೆ ಅದರ ಮಧ್ಯದ ದ್ವಾರದಿಂದ ನೀರು ತುಂಬುತ್ತಾ ಬಂದರೆ ಸಂಪೂರ್ಣವಾಗಿ ಬಟ್ಟಲು ತುಂಬಿ ಮುಣಗಬೇಕಾದರೆ ಸರಿಯಾಗಿ ಒಂದು ಗಳಿಗೆಹೊತ್ತು ಬೇಕಾಗುವುದು. ಇದಕ್ಕೆ ಗಳಿಗೆಬಟ್ಟಲೆಂದು ಹೇಳುವರು. ಇಂತಹ ಪಾತ್ರೆಯನ್ನು ನೀರೊಳಗೆ ಬಿಟ್ಟು ಅದು ಮುಣಗಿದೊಡನೆ ಜಾಗಟೆಯನ್ನು ಕೈಯ್ಯಲ್ಲಿ ಹಿಡಿದು ಒಬ್ಬ ಘಂಟಾಸೂಚಕನು ಮೊದಲು ಒಂದು ಆಮೇಲೆ ಎರಡು, ಮತ್ತು ೩, ೪, ಹೀಗೆ ಗಳಿಗೆಗಳು ಆದಹಾಗೆಲ್ಲಾ ಗಂಟೆಯನ್ನು ಎಣಿಸಿ ಹೊಡೆಯುವನು. ಇದರಲ್ಲಿ ಘಂಟಾಸೂಚಕನು ಗಂಗಾಳದಲ್ಲಿ ನೀರನ್ನು ತುಂಬಿ ಅದರಲ್ಲಿ ಘಟಿಕಾಪಾತ್ರೆಯನ್ನು ಬಿಡುವನು ಆ ಪಾತ್ರೆಯು ಮಧ್ಯದಲ್ಲಿರುವ ತೂತಿನಿಂದ ಸ್ವತಂತ್ರ

ವಾಗಿ ನೀರು ತೆಗೆದುಕೊಳ್ಳುವದು, ಅದನ್ನು ಸೂಚಕನು ತಿಳಿಯುವನೇ ಹೊರತು ಬಟ್ಟಲಿಗೆ ಗೊತ್ತಿಲ್ಲ. ಅದು ಪೂರ್ಣವಾಗಿ ನೀರನ್ನು ತೆಗೆದುಕೊಂಡು ಮುಳುಗಿದ ಒಡನೆ ಒಂದುಸಲ ಮುಣುಗಿತೆಂದು ಘಂಟೆ ಹೊಡೆಯುವದರ ಮೂಲಕ ಜನರಿಗೆ ಅದನ್ನು ಸೂಚಿಸುವನು. ಮತ್ತು ಆ ಬಟ್ಟಲನ್ನು ನೀರಿನಲ್ಲಿ ಪುನಃ ಬಿಡುವನು. ಹಾಗೆ ಜೀವರ ವಿಷಯದಲ್ಲಿ ಪರಮಾತ್ಮನು ಘಂಟಾಸೂಚಕನಂತೆ ಇರುವನು. ಗಂಗಾಳದೊಳಗಣ ನೀರು ಹೇಗೋ ಹಾಗೆ ಪುಣ್ಯಪಾಪಾದಿಗಳು ರಾಶೀಭೂತವಾಗಿರುವವು. ಘಟಿಕಾಪಾತ್ರೆಯನ್ನು ಸೂಚಕನು ನಿರ್ಮಿಸುವಂತೆ ಜೀವರ ಸ್ವಭಾವವನ್ನರಿತು ಅವರ ಸ್ಥೂಲದೇಹವನ್ನು ಸೃಷ್ಟಿಸಿ, ಪಾತ್ರೆಯ ಮಧ್ಯದಲ್ಲಿ ತೂತುಮಾಡಿ, ಸ್ವತಃ ನೀರು ತೆಗೆದುಕೊಳ್ಳುವಂತೆ ಸೂಚಕನು ಹೇಗೆ ಮಾಡುವನೋ ಹಾಗೆಯೇ ಪರಮಾತ್ಮನು ಜೀವರ ಸ್ಥೂಲದೇಹಗಳಲ್ಲಿ ಅವರಿಗೆ ಕಿಂಚಿತ್ ಸ್ವಾತಂತ್ರ್ಯವೆಂಬ ತೂತನ್ನು ಹೊಡೆಯುವನು. ಅದರಿಂದ ಕಿಂಚಿತ್ ಇಚ್ಛಾಮಾತ್ರ ಹುಟ್ಟುವದು.

ಬಟ್ಟಲು ತಾನಾಗಿ ನೀರು ತೆಗೆದುಕೊಂಡರೂ ಸೂಚಕನು ಹತ್ತಿರದಲ್ಲಿ ಕೂತು ಅದನ್ನು ತೇಲಿಸುವದೂ ಎಷ್ಟು ನೀರನ್ನು ತೆಗೆದುಕೊಂಡು ಇದೆ ಎಂಬುವುದನ್ನು ತಿಳಿಯುವದೂ ಹೇಗೆ ಸೂಚಕನ ಕರ್ತೃಕವೋ ಹಾಗೆ, ಜೀವನು ಅಸ್ವತಂತ್ರವಾಗಿ ಪರಮಾತ್ಮನಿಂದ ರಚಿಸಲ್ಪಟ್ಟ ಶರೀರದೊಳಗಿದ್ದು ಅವನು ಕೊಟ್ಟ ಅಲ್ಪ ಛಿದ್ರದಂತಿರುವ ದತ್ತಸ್ವಾತಂತ್ರ್ಯದಿಂದ ಪುಣ್ಯಪಾಪಗಳ ರಾಶಿಯಲ್ಲಿ ಬಿಡಲ್ಪಟ್ಟು ತನ್ನ ಯೋಗ್ಯತಾನುಸಾರ ಪುಣ್ಯಪಾಪಗಳನ್ನು ತೆಗೆದುಕೊಳ್ಳುವನು. ಸೂಚಕನು ಪಾತ್ರೆಯು ಮುಣುಗಿದುದನ್ನು ತಿಳಿದು ಘಂಟೆಯನ್ನು ಹೊಡೆಯುವಂತೆ ಪರಮಾತ್ಮನು ಜೀವರ ಸಾಧನವು ಪೂರ್ತಿಯಾದುದನ್ನು ತಿಳಿದು ಅವರ ಯೋಗ್ಯತಾನುಸಾರ ಫಲವನ್ನು ಜೀವರಿಗೆ ಉಣಿಸುವನು. ಘಂಟೆ ಹೊಡೆಯಲು ಇಷ್ಟು ಘಂಟೆ ಆಯಿತೆಂದು ಕೇಳಿ ಜನರು ಅನುಭವಕ್ಕೆ ತಂದುಕೊಳ್ಳುವಂತೆ ಜೀವರು ತಮ್ಮ ತಮ್ಮ ಪುಣ್ಯಪಾಪ ಕರ್ಮಗಳ ಫಲಗಳನ್ನು ಅನುಭವಿಸುವರು. ಘಂಟಾಸೂಚಕನು ಪಾತ್ರೆಯಲ್ಲಿ ಬಟ್ಟಲನ್ನು ಬಿಟ್ಟು ಮುಣುಗಿದೊಡನೆ ಘಂಟೆಯನ್ನು ಜನರಿಗೆ ತಿಳಿಸಿ ತಾನು ಹೇಗೆ ಸಾಕ್ಷಿಭೂತನಾಗಿರುವನೋ ಹಾಗೆಯೇ ಪರಮಾತ್ಮನು ಫಲವನ್ನು ದೇವ ದೈತ್ಯರಿಗೆ ಭಾಗಮಾಡಿಸಿ ತಾನು ಸಾಕ್ಷಿಭೂತನಾಗಿರುವನು.

ಕೃಷ್ಣಾದಿ ಪ್ರಾಕೃತರೂಪಗಳನ್ನು ಧರಿಸಿ ಕೌಸಲ್ಯಾ ಮೊದಲಾದವರಿಗೆ ಇವನು ನನ್ನ ಮಗನು ಎಂಬ ಭ್ರಾಂತಿ ಬರುವಂತೆ ವೇಷಭಾಷೆಗಳಿಂದ ಅವರನ್ನು ಸಂತೋಷಪಡಿಸುವಂತೆಯೂ, ಬಿಂಬರೂಪದಿಂದ ಸರ್ವಪ್ರಾಣಿಗಳ ಅಂತರ್ಯಾಮಿಯಾಗಿದ್ದು ಜೀವಜೀವರಿಗೆ ಪರಸ್ಪರ ಸಂಬಂಧವಿಲ್ಲದಿದ್ದರೂ ದೇಹ ಸಂಬಂಧದಿಂದ ಈಕೆಯು ನನ್ನ ಹೆಂಡತಿ, ಇವನೇ ನನ್ನ ಪತಿಯು, ಇವನು ನನ್ನ ಸುತನು ಎಂಬೀ ವಿಧವಾದ ಅಭಿಮಾನವನ್ನು ಹುಟ್ಟಿಸಿ, (ವೇಷ) ರೂಪ ಭಾಷೆಗಳಿಂದ ಒಬ್ಬರಿಗೊಬ್ಬರು ಸಂತೋಷಪಡಿಸುವಂತೆಮಾಡುವನು. ರಾಮಕೃಷ್ಣಾದಿರೂಪಗಳಿಂದ ಭಜಕರಿಗೆ ಇಷ್ಟಾರ್ಥವನ್ನು ಪೂರೈಸುವನು. ಪತಿ ಸತಿ ಮೊದಲಾದವರಲ್ಲಿದ್ದು ಪರಸ್ಪರ ಅವರವರ ಇಷ್ಟಾರ್ಥಗಳನ್ನು ಪೂರೈಸುವನು. ಅಂತೂ ಸರ್ವ ಪ್ರಕಾರದಿಂದಲೂ, ಜನರನ್ನು ಸಂರಕ್ಷಿಸುವನು.

ಅವತಾರಿಕೆ.— ಪರಮಾತ್ಮನು ಸರ್ವರೊಳಗಿದ್ದರೂ ನಿರ್ಲಿಪ್ತನಾಗಿರುವನೆಂಬ ವಿಷಯುವನ್ನು ಲೌಕಿಕೋಪಮಾನದಿಂದ ಧೃಢಪಡಿಸುತ್ತಾರೆ.—

**ಅಧಮಮಾನವನೋರ್ವ ಮಂತ್ರೌ**
**ಷಧಿಗಳನು ತಾನರಿತು ಪಾವಕ**
**ಉದಕಗಳ ಸಂಬಂಧವಿಲ್ಲದೆ ಇಪ್ಪನದರೊಳಗೆ ||**
**ಪದುಮಜಾಂಡೋದರನು ಸರ್ವರ**
**ಹೃಯದೊಳಗಿರೆ ಕಾಲಗುಣ ಕ**
**ರ್ಮಕಲುಷ ಸಂಬಂಧವಾಗುವವೇ ನಿರಂಜನಗೆ ||೩೦||**

ಪದ್ಯಾರ್ಥ.— ಅಧಮಮಾನವನೋರ್ವ= ಅಧಮನಾದ ಮನುಷ್ಯನೊಬ್ಬನು, ಮಂತ್ರೌಷಧಿಗಳನು, ತಾನರಿತು= ತಾನು ತಿಳಿದುಕೊಂಡು, ಪಾವಕ ಉದಕಗಳ= ಅಗ್ನಿ ಉದಕಗಳ, ಸಂಬಂಧವಿಲ್ಲದೆ, ಅದರೊಳಗೆ= ಅಗ್ನಿ ಉದಕಗಳೊಳಗೆ ಅಗ್ನಿಸ್ಥಂಬನಾದಿಗಳನ್ನು ಮಾಡಿಕೊಂಡು ಅವುಗಳ ಮಧ್ಯದಲ್ಲಿ ಇರುವನು. (ಹೀಗಿರಲು) ಪದುಮಜಾಂಡೋದರನು= ಬ್ರಹ್ಮಾಂಡವನ್ನೇ ಉದರದಲ್ಲಿಟ್ಟುಕೊಂಡಿರುವ ಶ್ರೀಪರಮಾತ್ಮನು, ಸರ್ವರ ಹೃದಯದೊಳಗಿರೆ= ಎಲ್ಲರ ಹೃದಯದೊಳಗಿರಲು, ಕಾಲಗುಣಕರ್ಮದ= ಕಾಲ= ಕೃತ= ತ್ರೇತಾದಿಯುಗಕಾಲಗಳು, ಗುಣ= ಸತ್ವ ರಜಸ್ತಮಸ್ಸೆಂಬ ಗುಣಗಳು, ಕರ್ಮದ= ಪುಣ್ಯ ಪಾಪಾದಿ ಕರ್ಮಗಳು, ಅಥವಾ ಕಾಲ= ವಸಂತ ಗ್ರೀಷ್ಮ, ಹಿಮ

ಮೊದಲಾದ ಋತು ಸಂಬಂಧವಾದ ಕಾಲಗಳು, ಗುಣ=ತತ್ಕಾಲ ಗುಣಗಳೆಂದರೆ, ಬಿಸಲು, ಮಳೆ, ಚಳಿ ಮೊದಲಾದ ಕಾಲಗುಣಗಳು, ಕರ್ಮಗಳೆಂದರೆ–ಬಿಸಿಲತಾಪವನ್ನು ನಿವಾರಣಮಾಡಿಕೊಳ್ಳಲು ಕೊಡೆ ಹಿಡಿದುಕೊಳ್ಳುವುದು, ಬೀಸಣಿಗೆಯಿಂದ ಬೀಸಿಕೊಳ್ಳುವುದು, ಚಳಿಗೆ ಹೊದ್ದುಕೊಳ್ಳುವುದು ಮೊದಲಾದ ಕರ್ಮಗಳು, ಇವುಗಳು, ಕಲುಷ=ಯುಗಾನುಗಣವಾಗಿ ಒದಗುವಿಕೆ, ಯುಗಾನುಸಾರವಾಗಿ ಸಾಧನಮಾಡಿಕೊಳ್ಳುವುದು, ಆ ಸಾಧನ ಮಾಡುವಾಗ ಕಷ್ಟವನ್ನನುಭವಿಸುವಿಕೆ ಅಥವಾ ಗ್ರೀಷ್ಮಾದಿ ಋತುಗಳಲ್ಲಿ ಆ ಕಾಲಾನುಗುಣವಾಗಿ ಅತಿ ತಾಪ, ಚಳಿ ಮೊದಲಾದವುಗಳನ್ನು ಅನುಭವಿಸುವುದೂ, ಅದರ ಪರಿಹಾರಕ್ಕಾಗಿ ಕ್ಲೇಶದಿಂದ ಬೀಸಣಿಗೆಯಿಂದ ಬೀಸಿಕೊಳ್ಳುವುದು ಮೊದಲಾದ ಕಾರ್ಯದಲ್ಲಿ ಶ್ರಮಪಡುವಿಕೆ ಮೊದಲಾದ ಕಲ್ಮಷಗಳು ನಿರಂಜನಗೇ–ನಿರ್ದೋಷಿಯಾದ ಶ್ರೀಹರಿಗೆ ಸಂಬಂಧವಾಗುವವೇ ? ಎಂದಿಗೂ ಆಗಲಾರದು.

ತಾತ್ಪರ್ಯ.—ಅಧಮನಾದ ಒಬ್ಬ ಮನುಷ್ಯನು ಮಂತ್ರ ಔಷಧಗಳನ್ನು ತಾನು ಸ್ವಾಧೀನಪಡಿಸಿಕೊಂಡು ಅದರ ಬಲದಿಂದ ಅಗ್ನಿಸ್ಥಂಭವನ್ನು ಮಾಡಿ ಅದರ ಮಧ್ಯದಲ್ಲಿರೋಣ, ಅಥವಾ ಕೆಲವುಔಷಧಿಯ ಸಹಾಯದಿಂದ ಅಗ್ನಿಯನ್ನು ಕೈಯಲ್ಲಿ ಧರಿಸುವುದು, ಜಲಸ್ಥಂಭ ಮಾಡಿಕೊಂಡು ನೀರಿನ ಮೇಲೆ ನಡೆಯುವದು, ಮೊದಲಾದವುಗಳನ್ನು ಜನರಿಗೆ ತೋರ್ಪಡಿಸಿ ಬೆಂಕಿಯಸಂಬಂಧದಿಂದಾಗುವ ಸುಡುವಿಕೆಯು, ನೀರು ಸಂಬಂಧದಿಂದ ತೊಯ್ಯಲ್ಪಡುವಿಕೆಯೂ ಇಲ್ಲದಿರುವನು. ಹೀಗಿರಲು ಬ್ರಹ್ಮಾಂಡವನ್ನೇ ತನ್ನುದರದಲ್ಲಿಟ್ಟುಕೊಂಡಿರುವ ನಿರ್ದೋಷಿಯಾದ ಶ್ರೀಪರಮಾತ್ಮನು ಸರ್ವಜೀವರ ಹೃದಯದೊಳಗಿರಲು, ಪರಮಾಣು ಮೊದಲಾದ ದ್ವಿಪರಾರ್ಧಾವಸಾನದವರೆವಿಗೂ ಇರುವ ಕಾಲವನ್ನು ಸಂಬಂಧಿಸಿ ಜನಿಸಿದನು, ಜನಿಸಿದ ಇಷ್ಟು ವರ್ಷಗಳಿದ್ದನು, ಮುದುಕನಾದನು, ಸತ್ತನು, ಇರುವವರೆವಿಗೂ ರಾಜ್ಯ ಪರಿಪಾಲನೆಮಾಡಿದನು, ಯಾಗಮಾಡಿದನು, ಯುದ್ಧದಲ್ಲಿ ಮೂರ್ಛಿತನಾದನು, ಸೋತುಹೋದನು ಬಿಸಿಲಿನಿಂದ ತಪ್ತನಾದನು, ನೀರಡಿಕೆಯಿಂದ ಬಳಲಿದನು, ಎಂಬಿವೇ ಮೊದಲಾದ ಕಾಲ ಗುಣ ಕರ್ಮದ ಕಲ್ಮಷಗಳು ಆ ಪರಮಾತ್ಮನಿಗೆ ಲೇಪವಾಗುವುವೇ ? ಎಂದಿಗೂ. ಆಗಲಾರವು.

ಒಂದುಗುಣದೊಳಂತ ಗುಣಗಳು
ಒಂದುರೂಪದೊಳಿಹವು ಲೋಕಗ
ಳೊಂದುರೂಪದಿ ಧರಿಸಿ ತದ್ಗತಪದಾರ್ಥದೊಳಹೊರಗೆ ||
ಬಾಂದಳದವೋಲಿದ್ದು ಬಹುಪೆಸ
ರಿಂದೆ ಕರೆಸುತ ಪೂರ್ಣಜ್ಞಾನಾ
ನಂದಮಯ ಪರಿಪರಿವಿಹಾರವ ಮಾಡಿಮಾಡಿಸುವ ||೩೧||

ಪದ್ಯಾರ್ಥ.—ಒಂದುಗುಣದೊಳು=ಪರಮಾತ್ಮನ ಗುಣರಾಶಿಗಳ ಮಧ್ಯದಲ್ಲಿನ ಒಂದು ಗುಣದೊಳಗೆ (ಅನಂತಗುಣಗಳಡಗಿರುವುವು) ಅದರಂತೆ ಪರಮಾತ್ಮನ, ಒಂದುರೂಪದೊಳ್=ಒಂದು ರೂಪದೊಳಗೆ, ಲೋಕಗಳು—ಅನಂತಲೋಕಗಳು, ಇಹವು=ಇರುವುವು, ಆ ಲೋಕಗಳನ್ನು, ವಂದು ರೂಪದಿ ಧರಿಸಿ=ವಂದುರೂಪದಿಂದ ಧಾರಣಮಾಡಿ, ತದ್ಗದಪದಾರ್ಥದೊಳಹೊರಗೆ=ಆ ಧರಿಸಿದ್ದರಲ್ಲಿರುವ ಸರ್ವಪ್ರಾಣಿಗಳ ವಳಹೊರಗೆ, ಬಾಂದಳದವೊಲಿದ್ದು=ಆಕಾಶದಂತೆ ವ್ಯಾಪ್ತನಾಗಿದ್ದ, ಬಹುಪೆಸರಿಂದೆ=ಅನಂತಾನಂತನಾಮಧೇಯಗಳಿಂದ, ಕರೆಸುತ=ಕರೆಸಿಕೊಳ್ಳುತ್ತ, ಪೂರ್ಣಜ್ಞಾನಾನಂದಮಯ=ಪೂರ್ಣ ಜ್ಞಾನಾನಂದ ಸ್ವರೂಪನಾದ ಶ್ರೀಪರಮಾತ್ಮನು, ಪರಿಪರಿಯ ವಿಹಾರಮಾಡಿ—ನಾನಾ ಪ್ರಕಾರವಾಗಿ ವಿಹಾರಮಾಡಿ ಮಾಡಿಸುವ=ಎಲ್ಲರೊಳಗಿದ್ದು ಮಾಡಿಸುವನು.

ತಾತ್ಪರ್ಯ.—ಶ್ರೀಪರಮಾತ್ಮನ ಅನಂತಗುಣಗಳ ಪೈಕಿ ಒಂದೊಂದು ಗುಣವನ್ನು ತೆಗೆದುಕೊಂಡು ನೋಡಿದರೆ ಆ ವಂದುಗುಣದಲ್ಲಿ ಅನಂತಾನಂತಗುಣರೂಪಗಳಡಗಿರುವವು. ಆದರಲ್ಲಿನ ವಂದು ರೂಪವನ್ನು ತೆಗೆದುಕೊಂಡು ಯೋಚಿಸಿದರೆ, ಆದರಲ್ಲಿ ಅನಂತಾನಂತ ಲೋಕಗಳು ಕಾಣುವುವು ಅಂತಹ ಲೋಕಗಳನ್ನು ವಂದುರೂಪದಿಂದ ಧರಿಸಿ, ಆ ಲೋಕಗಳಲ್ಲಿರುವ ಸಕಲ ಪದಾರ್ಥಗಳ ವಳಗೂ ಹೊರಗೂ ಆಕಾಶವು ಸರ್ವತ್ರ ವ್ಯಾಪಿಸಿಕೊಂಡಿರುವಂತೆ ನಿರ್ಲಿಪ್ತನಾಗಿ, ವ್ಯಾಪ್ತನಾಗಿ, ಸ್ವಯಂಪೂರ್ಣಾನಂದ ಜ್ಞಾನಮಯನಾದರೂ ಸಕಲ ಪದಾರ್ಥಗಳ ನಾಮಧೇಯದಿಂದ ನಾನಾಪ್ರಕಾರ ವಿಹಾರವನ್ನು ಮಾಡಿಮಾಡಿಸುವನು. ಅಂದರೆ ಮನುಷ್ಯನಲ್ಲಿ ಮನುಷ್ಯಾಕಾರನಾಗಿದ್ದು ಮನುಷ್ಯನಾಮವನ್ನು ಧರಿಸಿ, ಗಜತುರಗಾದಿಗಳಲ್ಲಿ ಗಜತುರಗಾದಿ ನಾಮದಿಂದ ಇದ್ದು ಮನುಷ್ಯಾದಿಗಳಿಗೆ ವಾಹನಾದಿಗಳಾಗುವನು. ಮನುಷ್ಯನಾಗಿ ಕೂತುಕೊಳ್ಳುವನು, ಗಜತುರಗಾದಿಗಳಲ್ಲಿದ್ದು ಹೊತ್ತುಕೊಳ್ಳುವನು. ಮನುಷ್ಯಾದಿಗಳನ್ನು ಗಜತುರಗಾದಿ

ಗಳಮೇಲೆ ಕೂಡುವಂತೆ ಮಾಡುವನು. ಗಜತುರಗಾದಿಗಳಲ್ಲಿದ್ದು ಹೊರು ವಂತೆ ಮಾಡುವನು. ಹೀಗೆ ನಾನಾ ಪ್ರಕಾರವಾದ ಕಾರ್ಯಗಳನ್ನು ಪ್ರಾಣಿ ಗಳಲ್ಲಿದ್ದು ತಾನೂ ಮಾಡಿ ಅವರಿಂದಲೂ ಮಾಡಿಸುವನು.

ಸಂಧಿಯನ್ನು ಸಮಾಪ್ತಿಮಾಡುತ್ತಾ ಮಂಗಳಾಚರಣರೂಪವಾಗಿ ಪರಮಾತ್ಮನ ಮಹಿಮೆಯನ್ನು ಹೇಳಿ ಸ್ತುತಿಸುತ್ತಾರೆ.—

**ಎಲ್ಲರೊಳು ತಾನಿಪ್ಪ ತನ್ನೊಳ**
**ಗೆಲ್ಲರನು ಧರಿಸಿಹನು ಅಪ್ರತಿ**
**ಮಲ್ಲ ಮನ್ಮಥಜನಕ ಜಗದಾದ್ಯಂತ ಮಧ್ಯಗಳ ||**
**ಬಲ್ಲ ಬಹುಗುಣಭರಿತದಾನವ**
**ದಲ್ಲಣ ಜಗನ್ನಾಥವಿಠ್ಠಲ**
**ಸೊಲ್ಲನಾಲಿಸಿ ಕಂಬದಿಂದಲಿ ಬಂದ ಭಕುತನಿಗೆ ||೩೨||**

ಪದ್ಯಾರ್ಥ.—ಅಪ್ರತಿಮಲ್ಲ=ಅಸದೃಶಶೂರನಾದ, ಮನ್ಮಥಜನಕ= ಮನ್ಮಥನ ತಂದೆಯಾದ, ದಾನವದಲ್ಲಣ–ದಾನವಮರ್ದಕನಾದ, ಜಗನ್ನಾಥ ವಿಠ್ಠಲ=ಜಗನ್ನಾಥದಾಸರಾಯರಹೃತ್ಕಮಲ ನಿವಾಸಿಯಾದ ಬಿಂಬಮೂರುತಿ ಯಾದ ಶ್ರೀವಿಠ್ಠಲನು, ಎಲ್ಲರೊಳು–ಸಕಲ ಪ್ರಾಣಿಗಳಲ್ಲಿಯೂ, ತಾನಿಪ್ಪ– ತಾನಿರುವನು- ತನ್ನೊಳಗೆ ಎಲ್ಲರನ್ನು ಧರಿಸಿಹನು, ಜಗದಾದ್ಯಂತಮಧ್ಯ ಗಳ=ಜಗತ್ತಿನ ಆದಿ, ಅಂತ್ಯ, ಮಧ್ಯಗಳ ಎಲ್ಲಾ ಭಾಗಗಳನ್ನೂ, ಬಲ್ಲ= ತಿಳಿದಿರುವನು, ಬಹುಗುಣಭರಿತ=ಅನಂತಗುಣ ಪರಿಪೂರ್ಣನು, ಭಕತನಿಗೆ =ಭಕ್ತನನ್ನು ಉದ್ಧರಿಸುವದಕ್ಕೋಸ್ಕರ, ಸೊಲ್ಲನಾಲಿಸಿ=ಪ್ರಹ್ಲಾದನು ತಂ ದೆಗೆ ಈ ಸ್ಥಂಭದಲ್ಲಿಯೂ ಹರಿಯು ಇರುವನೆಂದು ಹೇಳಿದ ವಾಕ್ಯವನ್ನು ಕೇಳಿ, ಕಂಭದಿಂದ ಬಂದ–ಕಂಭದಿಂದಲೇ ನೃಸಿಂಹರೂಪದಿಂದ ಬಂದನು. ಅಂತಹ ನೃಸಿಂಹರೂಪಿಯಾದ ಶ್ರೀಪರಮಾತ್ಮನನ್ನು ವಂದಿಸುವೆನು.

ತಾತ್ಪರ್ಯ.—"ಎಲ್ಲರೊಳು ತಾನಿಪ್ಪ ತನ್ನೊಳಗೆಲ್ಲರನು ಧರಿಸಿಹನು" ಎಂದು ದಾಸಾರಾಯರು ಈ ಸಂಧಿಯ ಕಡೆಯಪದ್ಯದಲ್ಲಿ ಹೇಳಿರುವರು. ಇದರಿಂದ ಪರಮಾತ್ಮನನ್ನು ಉಪಾಸನೆಮಾಡಿ ಗತಿಯನ್ನು ಹೊಂದುವವರು ಅಂತ್ಯಕಾಲದಲ್ಲಿ ಹೀಗೆ ಉಪಾಸನೆಮಾಡಿಯೇ ಸದ್ಗತಿಯನ್ನು ಹೊಂದಬೇ

ಕೆಂದು ಸೂಚಿಸುವುದಕ್ಕಾಗಿ ಈ ಪದ್ಯದಲ್ಲಿ ಹೀಗೆ ಹೇಳಿರುವರು. ಭಾಗವತ ತೃತೀಯ ಸ್ಕಂಧದಲ್ಲಿ ಕರ್ದಮರು ಅವಸಾನಕಾಲದಲ್ಲಿ ಧ್ಯಾನಮಾಡಿದಪ್ರಕರಣದಲ್ಲಿ " ಆತ್ಮಾನಂ ಸರ್ವಭೂತೇಷು ಭಗವಂತ ಮವಸ್ಥಿತಂ | ಅಪಶ್ಯತ್ಸರ್ವ ಭೂತಾನಿ ಭಗವತ್ಯಪಿಚಾತ್ಮನಿ || ವಾಸುದೇವೇ ಭಗವತಿ ಸರ್ವಜ್ಞೇ ಪ್ರತ್ಯಗಾತ್ಮನಿ ಪರೇಣ ಭಕ್ತಿಭಾವೇನಲಬ್ಧಾತ್ಮಾ ಮುಕ್ತಬಂಧನಃ || ಇಚ್ಛಾದ್ವೇಷ ವಿಹೀನೇನ ಸರ್ವತ್ರ ಸಮಚೇತಸಾ || ಭಗವದ್ಭಕ್ತಿ ಯೋಗೇನ ಪ್ರಾಪ್ತೋ ಭಗವತೀಂ ಗತಿಂ || " ಸರ್ವ ಪ್ರಾಣಿಗಳಲ್ಲಿ ಶ್ರೀ ಪರಮಾತ್ಮನು ವಾಸವಾಗಿರುವದನ್ನೂ ಮತ್ತು ಸರ್ವ ಪ್ರಾಣಿಗಳೂ ಪರಮಾತ್ಮನಲ್ಲಿ ಇರುವುದನ್ನೂ. ಆ ಪರಮಾತ್ಮನು ತನ್ನೊಳಗಿರುವದನ್ನೂ ಧ್ಯಾನಯೋಗದಿಂದ ತಿಳಿದರು- ಹೀಗೆ ಸರ್ವಜ್ಞನಾದ ತಮ್ಮ ಜೀವನಿಂದ ಭಿನ್ನನಾದ ತನ್ನೊಳಗೆ ವಾಸಮಾಡಿಕೊಂಡಿರುವ ವಾಸುದೇವನಾಮಕ ಶ್ರೀ ಪರಮಾತ್ಮನಲ್ಲಿ ಉತ್ಕೃಷ್ಟವಾದ ಭಕ್ತಿ ಭಾವದಿಂದ ಭಗವತ್ಸ್ವರೂಪವನ್ನು ತಿಳಿದು ಬಂಧ ಮುಕ್ತರಾಗಿ ಇಚ್ಛಾ ದ್ವೇಷಾದಿಗಳನ್ನು ಬಿಟ್ಟು ಸರ್ವತ್ರ ವ್ಯಾಪ್ತನಾದ ಭಗವಂತನ ರೂಪಗಳಲ್ಲಿ ಸಮಬುದ್ಧಿಯನ್ನು ಇಟ್ಟು. ಭಗವಂತನ ಭಕ್ತಿಯೋಗದಿಂದ ಪರಮಾತ್ಮನ ಲೋಕವನ್ನು ಹೊಂದಿದರು ಎಂದು ಹೇಳಿರುವರು. ಆದುದರಿಂದ ಪರಮಾತ್ಮನನ್ನು ಎಲ್ಲರಲ್ಲಿಯೂ ಪರಮಾತ್ಮನೊಳಗೆ ಸರ್ವರನ್ನೂ ಆ ಪರಮಾತ್ಮನನ್ನು ತನ್ನೊಳಗೂ ತಿಳಿಯಬೇಕೆಂದು ಈ ಪದ್ಯದಿಂದ ಹೇಳಿರುವರು.

ಸಮರಹಿತ ಶೂರನೂ, ಮನ್ಮಥನ ತಂದೆಯೂ ಆಗಿ ಈ ಜಗತ್ತಿನಲ್ಲಿ ಆದಿ, ಅಂತ್ಯ, ಮಧ್ಯ ಹೀಗೆ ಎಲ್ಲಾ ಪ್ರದೇಶದಲ್ಲಿಯೂ ಇರತಕ್ಕವನಾಗಿ ಆದಿ. ಅಂತ್ಯ. ಮಧ್ಯ ಮೊದಲಾದ ಎಲ್ಲಾ ಕಾಲವನ್ನೂ ಚೆನ್ನಾಗಿ ತಿಳಿದವನೂ ಆಗಿ ಮತ್ತು ' ಎನ್ನಪಶ್ಯಂತಿ ಪಶ್ಯಂತಂ ಚಕ್ಷುರ್ಯಸ್ಯನರಿಷ್ಯತಿ | ತಂಭೂತ ನಿಲಯಂ ದೇವಂ ಸುಪರ್ಣಮುಪಧಾವತ ' ಎಂಬ ಭಾಗವತ ವಾಕ್ಯಾನುಸಾರವಾಗಿ ಜಗತ್ತನ್ನೆಲ್ಲವನ್ನೂ ಅನೇಕ ಸೂರ್ಯರನ್ನೂ ಸಹ ಒಂದೇ ಕಾಲದಲ್ಲಿ ಶ್ರೀ ಪರಮಾತ್ಮನು ನೋಡುತ್ತಿದ್ದರೂ ಪರಮಾತ್ಮನ ನೇತ್ರವು ಕುಂದಲಾರದು. ಇತರರು ಒಬ್ಬ ಸೂರ್ಯನನ್ನು ನೋಡಲು ಕಣ್ಣು ಮುಚ್ಚಿಹೋಗುವುದು. ಸೂರ್ಯನು ಪರಮಾತ್ಮನನ್ನು ನೋಡಬೇಕಾದರೂ ಅವನಿಗೆ ಕಣ್ಣು ಮುಚ್ಚಿಹೋಗುವುದು. ಪರಮಾತ್ಮನು ಇಂತಹ ಅನೇಕ ಕೋಟಿ ಸೂರ್ಯಪ್ರಕಾಶನಾಗಿರುವನೆಂದು ಭಾವವು. ಮತ್ತು ಅನಂತ ಗುಣ ಪೂರ್ಣನೂ ದಾನವಸಂಹಾರಕನೂ ಆಗಿರುವನು. ದಾಸರಾಯರ ಉಪಾಸ್ಯ

ಮೂರ್ತಿಯು ನಾರಸಿಂಹದೇವರಾದುದರಿಂದ ಸಂಧಿಯ ಕಡೆಯ ಪದ್ಯದಿಂದ ನಾರಸಿಂಹನನ್ನೇ ಕೊಂಡಾಡುತ್ತಾರೆ. ತಮ್ಮ ಬಿಂಬಮೂರುತಿಯಾದ ಜಗನ್ನಾಥವಿಠಲನು ತನ್ನ ಭಕ್ತನಾದ ಪ್ರಹ್ಲಾದನು ಹಿರಣ್ಯಕಶ್ಯಪನ ಪ್ರಶ್ನೆಗುತ್ತರ ರೂಪವಾಗಿ ಹೇಳಿದ ವಾಕ್ಯ .— " ಕ್ವಾಸೌಯದಿ ಸರ್ವತ್ರ ಕಸ್ಮಾತ್ಸ್ತಂಭೇನ ದೃಶ್ಯತೇ " ನನಗಿಂತಲೂ ಈಶ್ವರನಿರುವನೆಂದು ಹೇಳುವಿಯಲ್ಲ ! ಅವನೆಲ್ಲಿರುವನು ? ಎಂದು ಹಿರಣ್ಯಕಶ್ಯಪನು ಕೇಳಲು, ಪ್ರಹ್ಲಾದನು, ಅವನು ಸರ್ವತ್ರ ವ್ಯಾಪ್ತನೆಂದನು. ಹಿರಣ್ಯ.—ಹಾಗೆ ಎಲ್ಲಾ ಕಡೆಯಲ್ಲಿಯೂ ಇರುವುದಾದರೆ ಈ ಸ್ತಂಭದಲ್ಲೇಕೆ ಇಲ್ಲ ? ಪ್ರಹ್ಲಾದ.—ಎಲೈ ಸ್ತಂಭನೆ ! ಅಂದರೆ ಜಡದ ಅರಸನೆ ಎಂದರ್ಥ. ನೀನು ಜಡನಂತಿರುವೆ, ಏಕೆಂದರೆ, ಸರ್ವತ್ರ ಇದ್ದಾನೆಂದು ಹೇಳಿದಮೇಲೆ ಸ್ತಂಭವೂ ಅದರಲ್ಲಿ ಸೇರಿಕೊಂಡಿರಲು, ಸ್ತಂಭದಲ್ಲಿ ಏಕಿಲ್ಲವೆಂದು ಕೇಳಿದುದೇ ಜಡತ್ವಕ್ಕೆ ಕಾರಣವು. ಎಂಬ ಅಭಿಪ್ರಾಯದಿಂದ ಜಡೇಶ ಎಂದು ಸಂಬೋಧನೆಮಾಡಿ ಅಲ್ಲಿಯೂ ಇದ್ದೇ ಇರುವನು ಎಂದನು.

ಹಿರಣ್ಯ.— ನಾನು ಈಗಲೇ ನಿನ್ನನ್ನು ಈ ಖಡ್ಗದಿಂದ ಸಂಹರಿಸುವನು. ಆ ಹರಿಯು ಇದ್ದುದೇ ನಿಜವಾದರೆ ನಿನ್ನನ್ನು ರಕ್ಷಿಸಲಿ ಎಂದು ಪ್ರಹ್ಲಾದನನ್ನು ಸಂಹರಿಸುವ ಉದ್ದೇಶದಿಂದ ಬರುತ್ತಿರಲು, " ಸತ್ಯಂ ವಿಧಾತುಂ ನಿಜಭೃತ್ಯ ಭಾಷಿತಂ ' ನಿಜ ಭೃತ್ಯನಾದ ಪ್ರಹ್ಲಾದನ ವಾಕ್ಯವನ್ನು ಸತ್ಯ ಮಾಡುವುದಕ್ಕಾಗಿ ಸ್ತಂಭದಿಂದಲೇ ನರಸಿಂಹ ರೂಪದಿಂದ ಬಂದನು. ಎಂಬ ಭಾಗವತ ವಾಕ್ಯವನ್ನು ಇಲ್ಲಿ ಸೂಚಿಸಿರುವರು. ಇಂತಹ ಕರುಣಾ ಸಮುದ್ರನಾದ ಶ್ರೀಪರಮಾತ್ಮನನ್ನು ವಂದಿಸುವೆನೆಂದು ಭಾವವು.

ಈ ಸಂಧಿಯಲ್ಲಿ ಪರಮಾತ್ಮನ ವ್ಯಾಪ್ತಿಯನ್ನೇ ವರ್ಣಿಸಿರುವುದರಿಂದ ಈ ಕಡೆಯ ಪದ್ಯದಿಂದಲೂ ಆ ವ್ಯಾಪ್ತಿಯನ್ನು ಹೇಳಿ ಭಗವನ್ಮಹಿಮೆಯನ್ನ ಕೊಂಡಾಡಿ ಸಂಧಿಯನ್ನು ಮುಗಿಸಿರುತ್ತಾರೆ.

ಇಂತು ಮೂರನೆಯ ಸಂಧಿಯ ಟಿಪ್ಪಣವು ಮುಗಿದುದು

—o—

## ೪ ನೆಯ ಸಂಧಿ
## ಭೋಜನ ರಸ ವಿಭಾಗ ಸಂಧಿ.

**ವನಜಜಾಂಡದೊಳುಳ್ಳಖಿಲ ಚೇ**
**ತನರು ಭುಂಜಿಪ ಚತುರವಿಧ ಭೋ**
**ಜನ ಪದಾರ್ಥದಿ ಚತುರವಿಧ ರಸರೂಪ ತಾನಾಗಿ ||**
**ಮನಕೆ ಬಂದದನುಂಡುಣಿಸಿ ಸಂ**
**ಹನನ ಕುಪಚಯುಕರಣಕಾನಂ**
**ದನಿಮಿಷರಿಗಾತ್ಮಪ್ರದರ್ಶನ ಸುಖವನೀವ ಹರಿ ||೧||**

ವನಜಜಾಂಡದೊಳುಳ್ಳ-ಬ್ರಹ್ಮಾಂಡದೊಳಗುಳ್ಳ, ಅಖಿಳಚೇತನರು-ಸಕಲ ಪ್ರಾಣಿಗಳು, ಭುಂಜಿಪ=ತಿನ್ನುವ, ಚತುರವಿಧ=ಖಾದ್ಯ, ಪೇಯ, ಚೋಷ್ಯ, ಲೇಹ್ಯವೆಂಬ ೪ ವಿಧಗಳು, ಖಾದ್ಯವೆಂದರೆ ಅಗಿದು ತಿನ್ನುವ ಭಕ್ಷ್ಯಾದಿಗಳು, ಪೇಯವೆಂದರೆ ಕುಡಿಯುವ ಕ್ಷೀರಾದಿಗಳು, ಚೋಷ್ಯವೆಂದರೆ ಬಾಯಲ್ಲಿ ಹಾಕಿಕೊಂಡು ನುಂಗುವುದು, ಲೇಹ್ಯವೆಂದರೆ ನಾಲಿಗೆಯಿಂದ ಚಪ್ಪರಿಸಿ ನುಂಗುವುದು, ಹೀಗೆ ನಾಲ್ಕು ಬಗೆಯಾದ, ಭೋಜನಪದಾರ್ಥದಿ=ಭೋಜನ ಪದಾರ್ಥದೊಳಗೆ, ಚತುರವಿಧರಸರೂಪ-ನಾಲ್ಕು ಬಗೆಯಾದ ಪದಾರ್ಥಗಳ ರಸರೂಪನು, ತಾನಾಗಿ-ಪರಮಾತ್ಮನೇ ಆಗಿ, ಮನಕೆಬಂದದನು=ಅವರವರ ಮನಸ್ಸಿಗೆ ಬೇಕಾದುದನ್ನು, ಉಂಡು, ಉಣಿಸಿ, ಪ್ರಾಣಿಗಳಲ್ಲಿದ್ದು ಉಂಡು, ಜೀವರಿಗೂ ಉಣಿಸಿ, ಸಂಹನನಕೆ=ಶರೀರಕ್ಕೆ, ಉಪಚಯ=ಪುಷ್ಟಿಯನ್ನು, ಕರಣಕೆ=ಜ್ಞಾನೇಂದ್ರಿಯ ಮನಸ್ಸು ಮೊದಲಾದ ಇಂದ್ರಿಯಗಳಿಗೆ, ಆನಂದ=ಸುಖವನ್ನು, ಅನಿಮಿಷರಿಗೆ-ತತ್ವಾಭಿಮಾನಿ ದೇವತೆಗಳಿಗೆ, ಆತ್ಮಪ್ರದರ್ಶನ=ತನ್ನ ಸ್ವರೂಪದರ್ಶನ ರೂಪವಾದ, ಸುಖವನೀವ-ಸುಖವನ್ನು ಕೊಡುವನು, ಹರಿ-ಶ್ರೀಪರಮಾತ್ಮನು.

ತಾತ್ಪರ್ಯ.—ಈ ಸಂಧಿಯಲ್ಲಿ ಆಹಾರ ಪದಾರ್ಥಗಳಲ್ಲಿ ಯಾವ ಯಾವ ಭಗವದ್ರೂಪಗಳಿವೆ ಎಂಬ ವಿಷಯವನ್ನು ಹೇಳುತ್ತಾ ಅವರಲ್ಲಿ ಬರುವ ವಿಷಯಸೂಚನೆಯನ್ನು ಈ ಪದ್ಯದಿಂದ ಹೇಳುತ್ತಾರೆ.—"ಬ್ರಹ್ಮಾಂಡದೊಳಗುಳ್ಳ ಅಖಿಳ ಪ್ರಾಣಿಗಳು ಭುಂಜಿಸುವ ನಾಲ್ಕು ಪ್ರಕಾರವಾದ ಆಹಾರ ಪದಾರ್ಥಗಳೊಳಗೆ ನಾಲ್ಕು ವಿಧವಾದ ರುಚಿಗಳೂ ತಾನೇ ಆಗಿರುವನು." ಷಡ್ರಸವೆಂದು ಲೋಕ ಪ್ರಸಿದ್ಧಿಯಾಗಿರಲು ದಾಸರಾಯರು

೪ ರಸಗಳೆಂದು ಹೇಳಿದುದರ ಅಭಿಪ್ರಾಯವೇನೆಂದರೆ:—ಷಡ್ರಸವೆಂದರೆ ಉಪ್ಪು. ಕಾರ, ಹುಳಿ, ಸಿಹಿ, ಕಹಿ, ಒಗರುಗಳೆಂಬ ೬ ವಿಧ ರಸವು. ಇಲ್ಲಿನ ನಾಲ್ಕು ವಿಧವಾದ ರಸವು ಮಿಶ್ರವಾದವು. ಭಕ್ಷ್ಯವೆಂದರೆ ಸಿಹಿಯಾದವು ಕೆಲವು, ಸಪ್ಪೆ ಕೆಲವು. ಉಪ್ಪು ಖಾರ ಮಿಶ್ರವಾದವು ಕೆಲವು. ಹೀಗೆ ಲೇಹ್ಯಾದಿಗಳಲ್ಲಿರತಕ್ಕ ಪ್ರತ್ಯೇಕ ಪ್ರತ್ಯೇಕವಾದ ರುಚಿಕರವಾದ ಪದಾರ್ಥಗಳಲ್ಲಿ ರುಚಿರೂಪನು ತಾನಾಗಿಯೇ ಇರುವನು. ಆಯಾ ಚೇತನರೊಳಗಿದ್ದು ಅವರಿಗೆ ರುಚಿಸುವ ಪದಾರ್ಥಗಳನ್ನು ತಾನುಂಡು ಅವರಿಗುಣಿಸಿ, ಶರೀರಕ್ಕೆ ಪುಷ್ಟಿಯನ್ನುಂಟುಮಾಡಿ ಚಕ್ಷುಃ ಶ್ರೋತ್ರಾದಿ ಇಂದ್ರಿಯಗಳಿಗೆ ಆನಂದವನ್ನು ಕೊಡಿಸಿ ತತ್ವಾಭಿಮಾನಿ ದೇವತೆಗಳಿಗೆ ತನ್ನ ಸ್ವರೂಪ ಪ್ರದರ್ಶನವನ್ನು ಸುಖವನ್ನುಂಟುಮಾಡುವನು,

**ನೀಡದಂಡಲಿಪ್ಪ ಲಿಂಗಕೆ**
**ಷೋಡಶಾತ್ಮಕ ರಸವಿಭಾಗವ**
**ಮಾಡಿ ಷೋಡಶ ಕಳೆಗಳಿಗೆ ಉಪಚಯಗಳನೆ ಕೊಡುತಾ ।**
**ಕ್ರೋಡಯಪ್ಪತ್ತೆರಡು ಸಾವಿರ**
**ನಾಡಿಗತ ದೇವತೆಗಳೊಳಗಿ**
**ದ್ದಾಡುತಾನಂದಾತ್ಮ ಚರಿಸುವ ಲೋಕದೊಳು ತಾನು ॥೨॥**

ಪದ್ಯಾರ್ಥ.—ನೀಡದಂದಲಿ=ಪಕ್ಷಿಯ ಗೂಡಿನಂತೆ, ಇಪ್ಪ=ಇರುವ, ಲಿಂಗಕೆ=ಸ್ಥೂಲ ಶರೀರಕ್ಕೆ, ಷೋಡಶಾತ್ಮಕ=ಮನಸ್ಸು ೧, ಪಂಚಭೂತಗಳು ೫, ಜ್ಞಾನೇಂದ್ರಿಯಗಳು ೫, ಕರ್ಮೇಂದ್ರಿಯಗಳು ೫ ಹೀಗೆ ೧೬ ಇಂದ್ರಿಯಗಳಲ್ಲಿಯೂ ತದಭಿಮಾನಿ ದೇವತೆಗಳಲ್ಲಿಯೂ ತದ್ರೂಪಿಯಾಗಿ, ತದಾಕಾರನಾಗಿ ಇದ್ದುದರಿಂದ ಶ್ರೀಪರಮಾತ್ಮನಿಗೆ ಷೋಡಶಾತ್ಮಕನೆಂದು ಹೆಸರು. ಇಂತಹ ಷೋಡಶಾತ್ಮಕನಾದ ಶ್ರೀಪರಮಾತ್ಮನು, ರಸವಿಭಾಗವ = ರಸ= ಖಾದ್ಯ, ಪೇಯ, ಚೋಷ್ಯ. ಲೇಹ್ಯವೆಂಬ ನಾಲ್ಕು ಪದಾರ್ಥಗತ ರಸಗಳನ್ನು ಭಾಗಮಾಡಿ, ಷೋಡಶ ಕಳೆಗಳಿಗೆ, ಮೇಲೆ ಹೇಳಿದ ೧೬ ಇಂದ್ರಿಯಗಳಿಗೆ, ಉಪಚಯಗಳನೆ ಕೊಡುತ=ಪುಷ್ಟಿಯನ್ನು ಮಾಡಿಸುತ್ತ, ಕ್ರೋಡ=ವರಾಹರೂಪಿಯಾದ ಶ್ರೀಪರಮಾತ್ಮನು, ಎಪ್ಪತ್ತೆರಡುಸಾವಿರನಾಡಿಗತ = ೭೨ ಸಾವಿರ ನಾಡಿಗಳಲ್ಲಿರುವ, ದೇವತೆಗಳೊಳಗಿದ್ದು, ಆಡುತ=ವಿಹಾರಮಾಡುತ್ತ,

ಆನಂದಾತ್ಮ= ಆನಂದ ಸ್ವರೂಪನಾಗಿ, ಲೋಕವೊಳು, ತಾನು, ಚರಿಸುವ=ಸಂಚರಿಸುವನು.

ತಾತ್ಪರ್ಯ.— ಪಕ್ಷಿಗಳಿಗೆ ಮೇಲೆ ಆವರಕ ಭೂತವಾಗಿರುವ ಗೂಡಿನಂತೆ ಜೀವರಿಗೆ ಮೇಲೆ ಆವರಕವಾಗಿರುವ ಸ್ಥೂಲ ಶರೀರಕ್ಕೆ ಷೋಡಶಾತ್ಮಕನಾದ ಶ್ರೀಪರಮಾತ್ಮನು ಚತುರ್ವಿಧ ರಸಗಳನ್ನು ವಿಭಾಗಮಾಡಿ ಉಣಿಸುವನು. ೪ ವಿಧ ರಸಗಳೆಂದರೆ, ಖಾದ್ಯವಾದ ಪದಾರ್ಥದಲ್ಲಿ ಉಪ್ಪು ಖಾರ ಮಿಶ್ರವಾದುದು ಕೆಲವು. ಕೆಲವು ಸಿಹಿ ಪದಾರ್ಥಗಳು ಎಲ್ಲವೂ ಸೇರಿ ಖಾದ್ಯರಸವೆಂದೆನಿಸಿಕೊಳ್ಳುವುದು. ಇದರಂತೆ ಪೇಯ್ಯದಲ್ಲೂ ಲೇಹ್ಯದಲ್ಲೂ, ಚೋಷ್ಯದಲ್ಲೂ ಇರುವುದು. ಇವುಗಳ ರುಚಿಗಳು ಬೇರೆಬೇರೆಯಾಗಿರುವುದರಿಂದ ಆದನ್ನೇ ರಸವೆಂದು ಹೇಳಿರುವರು. ಈ ರಸಗಳನ್ನು ವಿಭಾಗಮಾಡಿ ಷೋಡಶಕಳೆಗಳಿಗೆ ಪುಷ್ಟಿಯನ್ನು ಕೊಡುವನು. ಷೋಡಶಕಳೆ ಅಂದರೆ ಭಾಗವತ ಪ್ರಥಮ ಸ್ಕಂಧ ತಾತ್ಪರ್ಯದಲ್ಲಿ " ಕಲಾಶ್ಚ ಪಂಚಭೂತಾನಿ ಜ್ಞಾನಕರ್ಮೇಂದ್ರಿಯಾಣಿಚ | ಪಂಚಪಂಚಮನಶ್ಚೇತಿ ಷೋಡಶೋಕ್ತೋಮನೀಷಿಃ ಎಂಬ ವಾಕ್ಯದಿಂದ ಮನಸ್ಸು, ಪಂಚಭೂತಗಳು, ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳೆಂಬ ಈ ೧೬ ಇಂದ್ರಿಯಗಳಿಗೂ ಪುಷ್ಟಿಯನ್ನು ಕೊಟ್ಟು ವರಾಹರೂಪಿಯಾದ ಶ್ರೀಪರಮಾತ್ಮನು ಸ್ಥೂಲ ಶರೀರದಲ್ಲಿರುವ ೭೨ ಸಾವಿರ ನಾಡಿಗಳಿಗಭಿಮಾನಿ ದೇವತೆಗಳೊಳಗಿದ್ದು ವಿಹಾರ ಮಾಡುತ್ತಾ ಆನಂದ ಸ್ವರೂಪನಾಗಿ ಲೋಕಗಳಲ್ಲಿ ಸಂಚರಿಸುವನು.

**ವಾರಿವಾಚ್ಯನು ವಾರಿಯೊಳಗಿ**
**ದ್ದಾರು ರಸವೆಂದೆನಿಸಿ ಮೂವ**
**ತ್ತಾರುಸಾವಿರ ಸ್ತ್ರೀ ಪುರುಷ ನಾಡಿಯೊಳು ತದ್ರೂಪ |**
**ಧಾರಕನು ತಾನಾಗಿ ಸರ್ವಶ**
**ರೀರಗಳಲಿ ಅಹಶ್ಚ ರಾತ್ರಿ ವಿ**
**ಹಾರಮಾಳ್ಪನು ಬೃಹತಿಯೆಂಬ ಸುನಾಮದಿಂ ಕರಸಿ ||೩||**

ಪದ್ಯಾರ್ಥ.— ವಾರಿವಾಚ್ಯನು=ಉದಕನಾಮಕನಾಗಿ ಶ್ರೀಪರಮಾತ್ಮನು, ವಾರಿಯೊಳಗಿದ್ದು=ಉದಕದೊಳಗಿದ್ದು, ಆರುರಸವೆಂದೆನಿಸಿ=ಷಡ್ರಸಶಬ್ದವಾಚ್ಯನಾಗಿಯೂ, ಮೂವತ್ತಾರುಸಾವಿರ ಸ್ತ್ರೀ ನಾಡಿಗಳಲ್ಲಿಯೂ, ಮೂವತ್ತಾರುಸಾವಿರ ಪುರುಷ ನಾಡಿಗಳಲ್ಲಿಯೂ, ತದ್ರೂಪಧಾರಕನು=ನಾ

ಡಿಗಳ ರೂಪಧಾರಕನು ತಾನಾಗಿ, ಸರ್ವಶರೀರಗಳಲಿ=ಎಲ್ಲಾ ದೇಹಗಳಲ್ಲಿ ಯೂ, ಅಹಸ್ಸು=ಹಗಲು, ರಾತ್ರಿ=ರಾತ್ರಿಕಾಲಗಳಲ್ಲಿಯೂ, ಬೃಹತೀಯೆಂಬ ನಾಮದಿ=ಬೃಹತೀ ಎಂಬ ಛಂದಸ್ಸಿನ ಉತ್ಕೃಷ್ಟವಾದ ನಾಮಧೇಯ ದಿಂದ, ತಪಸೀ-ಪ್ರಾಜ್ಞರಿಂದ ಕರಿಸಿಕೊಳ್ಳುತ್ತಾ, ವಿಹಾರಮಾಳ್ಪನು=ವಿಹಾ ರಮಾಡುವನು.

ತಾತ್ಪರ್ಯ.—ಉದಕ ತತ್ವಗಳಲ್ಲಿ ಉದಕಶಬ್ದ ವಾಚ್ಯನಾಗಿದ್ದು ಆ ಉದಕ ತತ್ವದ ಮಹಾತ್ಮ್ಯಗುಣವಾದ ಆರು ವಿಧ ರಸಗಳು ಅಂದರೆ ಸಿಹಿ, ಕಹಿ, ಉಪ್ಪು, ಹುಳಿ, ಒಗರುಗಳೆಂಬ ಆರು ರಸಗಳ ನಾಮವನ್ನು ಪಡೆ ದಿರುವನು. ಮತ್ತು ೩೬೦೦೦ ಸ್ತ್ರೀನಾಡಿಗಳಲ್ಲಿಯೂ ೩೬ ಸಾವಿರ ಪುರುಷ ನಾಡಿಗಳಲ್ಲಿಯೂ ನಾಡಿಗಳ ರೂಪಗಳನ್ನು ತಾನೇ ಧರಿಸಿರುವನು. ಈ ದೇಹದೊಳಗೆ ಬಲಭಾಗದಲ್ಲಿ ೩೬೦೦೦ ನಾಡಿಗಳೂ, ಎಡಭಾಗದಲ್ಲಿ ೩೬ ಸಾವಿರ ನಾಡಿಗಳಿರುವವು. ಎಡಭಾಗದ ನಾಡಿಗಳು ಸ್ತ್ರೀನಾಡಿಗಳೆಂತಲೂ ಬಲಭಾಗದ ನಾಡಿಗಳಿಗೆ ಪುರುಷ ನಾಡಿಗಳೆಂತಲೂ ಹೆಸರು. ಒಂದುವರ್ಷ ಕ್ಕೆ ೩೬೦ ಹಗಲು, ೩೬೦ ರಾತ್ರಿಗಳಂತೆ ಮನುಷ್ಯರ ಆಯುಃ ಪ್ರಮಾಣಭೂ ತವಾದ ೧೦೦ ವರ್ಷಗಳಿಗೆ (೩೬೦೦೦) ಮೂವತ್ತಾರು ಸಾವಿರ ಹಗಲು, ೩೬೦೦೦ ರಾತ್ರಿಗಳು ಆಗುವವು. ಈ ಹಗಲು ರಾತ್ರಿಗಳಗಭಿಮಾನಿ ದೇವತೆ ಗಳೇ ಈ ನಾಡಿಗಳಿಗೂ ಅಭಿಮಾನಿಗಳಾಗಿರುವರು. ಈ ಸ್ತ್ರೀ ಪುರುಷ ನಾ ಡಿಗಳಿಗೆ ದಿವಾನಾಡಿಗಳೆಂತಲೂ, ರಾತ್ರಿನಾಡಿಗಳೆಂತಲೂ ವ್ಯವಹಾರ ಉಂಟು. ಅದ್ಯಂತ ೭೨ ಸಾವಿರ ನಾಡಿಗತ ದೇವತೆಗಳಲ್ಲಿಯೂ, ತಚ್ಛಬ್ದವಾಚ್ಯನಾಗಿ ದ್ದುದರಿಂದ ಬೃಹತೀ ಎಂಬ ನಾಮವು ಶ್ರೀಪರಮಾತ್ಮನಿಗೆ ಪ್ರಾಪ್ತವಾದುದು. ಇಂತಹ ನಾಮಧೇಯದಿಂದ ಜ್ಞಾನಿಗಳಿಂದ ಕರೆಸಿಕೊಳ್ಳುತ್ತಾ ನಾಡಿಗತನಾ ಗಿ ವಿಹಾರ ಮಾಡುವನು.

**ಆರುರಸ ಸತ್ವಾದಿ ಭೇದದ**
**ಲಾರು ಮೂರಾಗಿಹವು ಸಾರಾ**
**ಸಾರನೀತಾ ಪ್ರಚುರ ಖಂಡಾಖಂಡ ಚಿತ್ಪ್ರಚುರ ।**
**ಈರಧಿಕ ಯೆಪ್ಪತ್ತು ಸಾವಿರ**
**ಮಾರಮಣನ ರಸಾಖ್ಯರೂಪ ಶ**
**ರೀರದಲಿ ಭೋಜ್ಯ ಸುಪದಾರ್ಥದಿ ತಿಳಿದು ಭುಂಜಿಸುವುದು ॥೪॥**

ಪದ್ಯಾರ್ಥ.—ಆರುರಸ=ಹುಳಿ, ಉಪ್ಪು ಮೊದಲಾದ ಆರು ರಸಗಳು ಸತ್ವಾದಿಭೇದದಲಿ=ಸಾತ್ವಿಕ, ರಾಜಸ, ತಾಮಸವೆಂಬ ಮೂರು ಗುಣಗಳಿಂದ ಕೂಡಿ, ಆರು ಮೂರಾಗಿಹವು (೬×೩=೧೮) ಹದಿನೆಂಟು ಆಗಿರುವವು. ಸಾರಾಸಾರ=ಸಾರ ಅಸಾರವೆಂತಲೂ, ನೀತ ಅಪ್ರಚುರವೆಂತಲೂ ಖಂಡ ಅಖಂಡವೆಂತಲೂ ಚಿತ್ ಪ್ರಚುರವೆಂತಲೂ, ಈರಧಿಕ ಎಪ್ಪತ್ತು ಸಾವಿರ-ಎರಡು ಸೇರ್ಚು ೭೦ ಸಾವಿರವೆಂದರೆ ೭೨ ಸಾವಿರಗಳಾಗುವುವು. ಮಾರರಮಣನ-ಲಕ್ಷ್ಮೀಪತಿಯ, ರಸಾಖ್ಯರೂಪ-೭೨ ಸಾವಿರ ರಸಶಬ್ದ ವಾಚ್ಯವಾದ ರೂಪಗಳನ್ನು, ಶರೀರದಲಿ=ನಮ್ಮ ದೇಹದಲ್ಲಿಯೂ ಭೋಜ್ಯ ಸುಪದಾರ್ಥದಿ=ಭೋಜನ ಮಾಡುವ ಉತ್ತಮ ಪದಾರ್ಥಗಳಲ್ಲಿಯೂ, ತಿಳಿದು=ಚಿಂತಿಸಿ, ಭುಂಜಿಪುದು- ಭೋಜನವನ್ನು ಮಾಡಬೇಕು.

ತಾತ್ಪರ್ಯ.—ಷಡ್ರಸಗಳಲ್ಲಿ ಭಗವದ್ರೂಪಗಳನ್ನು ಚಿಂತನಮಾಡಬೇಕಾದ ಕ್ರಮವನ್ನು ಹೇಳುತ್ತಾರೆ.—ರಸಗಳು ಉಪ್ಪು, ಹುಳಿ, ಕಾರ, ಸಿಹಿ ಕಹಿ, ಒಗರು ಎಂದು ಆರು ಪ್ರಕಾರಗಳಿರುವವು. ಇವುಗಳಲ್ಲಿ ಒಂದೊಂದರಲ್ಲಿಯೂ ಸಾತ್ವಿಕ ಭಾಗವೆಂತಲೂ, ರಾಜಸ ಭಾಗವೆಂತಲೂ, ತಾಮಸ ಭಾಗವೆಂತಲೂ ೩ ಭಾಗಗಳಾಗಿರುವವು. ಹೀಗೆ ೬×೩=೧೮ ಭಾಗಗಳಾಗಿರುವವು. ಅದರಲ್ಲಿಯೂ ಸಾರಾಸಾರ, ನೀತಾಪ್ರಚುರ, ಖಂಡಾಖಂಡ, ಚಿತ್ ಪ್ರಚುರಗಳೆಂಬ ನಾಲ್ಕು ದ್ವಂದ್ವಗಳು ಸಂಬಂಧಿಸಿರುವುದು.

ಅದು ಹೇಗೆಂದರೆ, ಸಾತ್ವಿಕಭಾಗವೂ ರಾಜಸದಲ್ಲಿ ಅರ್ಧ ಭಾಗ ಮಿಶ್ರವಾದ ಸಾತ್ವಿಕಭಾಗವೂ ಸೇರಿದ ಭಾಗವು ಸಾರವೆಂದೆನಿಸಿಕೊಳ್ಳುವುದು. ಅಸಾರವೆಂದರೆ ತಾಮಸಭಾಗ, ರಾಜಸ ಮಿಶ್ರವಾದ ತಾಮಸ ಭಾಗವೂ ಸಹ ಅಸಾರವೆನಿಸಿಕೊಳ್ಳುವದು. ಹೀಗೆ ರಜೋಗುಣವನ್ನು ಎರಡು ವಿಧ ಮಾಡಿ ಸತ್ವ ಗುಣದಲ್ಲಿ ಅರ್ಧಭಾಗವನ್ನು ತಮೋಗುಣದಲ್ಲಿ ಅರ್ಧಭಾಗದಲ್ಲಿ ಸೇರಿಸುವುದರಿಂದ ಸಾರ ಅಸಾರವೆಂದು ಎರಡು ವಿಧ ಏರ್ಪಡುವುದು, ಈ ಸಾರಾಸಾರಗಳೆರಡೂ ೧೮ ರಲ್ಲಿ ಒಂದು ಪಾಲಾಯಿತು. ಇದರಲ್ಲಿ ನೀತವೆಂತಲೂ ಅಪ್ರಚುರವೆಂತಲೂ ಎರಡು ಪ್ರಕಾರವಾದ ದ್ವಂದ್ವವು ಮತ್ತೊಂದು ಭಾಗವಾಗಿ ಸೇರುವುದು. ಹೇಗೆಂದರೆ.—ನೀತವೆಂದರೆ ನಾಲಿಗೆಗೆ ಚೆನ್ನಾಗಿ ಗೋಚರವಾಗುವ ಸಿಹಿ ಮೊದಲಾದವು. ಅಪ್ರಚುರವೆಂದರೆ ಸಿಹಿ

ಮೊದಲಾದವುಗಳಲ್ಲಿ ಸಂಬಂಧಿಸಿ ಭುಂಜಿಸುವವರಿಗೆ ಗೋಚರಿಸದಿರುವ ಕಹಿ ಮೊದಲಾದವು ಎಂದರ್ಥ. ಅಂದರೆ, ಕಹಿ ಸಿಹಿ ಮೊದಲಾದ ಒಂದೊಂದು ರಸದಲ್ಲಿಯೂ ಚೆನ್ನಾಗಿ ಗೋಚರಿಸುವ ಉಪ್ಪಿನಲ್ಲಿನ ಉಪ್ಪು ಹುಳಿಯೊಳಗಣ ಹುಳಿ ರಸಗಳ ಹೊರತು ಉಳಿದ ೫ ರಸಗಳೂ ಸಹ ಮಿಶ್ರವಾಗಿಯೇ ಇರುವವು, ಅವು ನಮಗೆ ಗೋಚರವಾಗುವುದಿಲ್ಲ. ಉಪ್ಪಿನಲ್ಲಿರುವ ಉಪ್ಪಿನ ರಸಕ್ಕೆ ನೀತವೆಂತಲೂ, ಅದರಲ್ಲಡಗಿರುವ ಉಳಿದ ೫ ರಸಗಳಿಗೆ ಅಪ್ರಚುರವೆಂತಲೂ ಹೆಸರು. ಇವೆರಡೂ ಒಂದರಲ್ಲಿಯೇ ಅಡಗಿರುವುದರಿಂದ ಈ ಎರಡನ್ನೂ ಒಂದೇ ಭಾಗವೆಂದು ತೆಗೆದುಕೊಳ್ಳಬೇಕು. ಇದರಲ್ಲಿ ಖಂಡವೆಂತಲೂ ಅಖಂಡವೆಂತಲೂ ಒಂದು ದ್ವಂದ್ವ ಭಾಗವು ಏರ್ಪಡುವುದು. ಖಂಡವೆಂದರೆ ಒಂದು ರಸದಲ್ಲಿ ಮತ್ತೊಂದು ರಸವನ್ನು ಸೇರಿಸಿ ಆ ರಸದ ರುಚಿಯನ್ನು ಖಂಡಿಸುವುದಕ್ಕೆ ಹೆಸರಾಗುವುದು. ಸಾರು ಮೊದಲಾದ ಪದಾರ್ಥದಲ್ಲಿ ಹುಳಿಯನ್ನು ಹಾಕಿ ಅದನ್ನು ಖಂಡಿಸುವುದಕ್ಕಾಗಿ ಉಪ್ಪನ್ನೂ ಖಾರವನ್ನೂ ಹಾಕುವರು. ಹೀಗೆ ಪದಾರ್ಥಾಂತರ ಸಮ್ಮೇಳನದಿಂದ ರುಚಿ ಭೇದ ಏರ್ಪಡುವುದಕ್ಕೇನೇ, ಖಂಡವೆನ್ನುವರು. ಒಂದರಲ್ಲಿ ರಸಾಂತರ ಮಿಶ್ರ ಮಾಡದಿರುವ ಸಿಹಿ ಮೊದಲಾದ ರಸಕ್ಕೆ ಅಖಂಡವೆಂದು ಹೆಸರು. ಹೀಗೆ ಇವೆರಡೂ ಸೇರಿ ಒಂದು ಭಾಗವಾಗಿರುವುದು. ಮತ್ತು ಸತ್ವರಜಸ್ಸಂಬಂಧವಾದ ಸಾರಪದಾರ್ಥವು ಭಗವದ್ಭಕ್ತರಿಗೆ ಸುಖಕರವಾಗಿರುವುದರಿಂದ ಚಿತ್ ಎಂದು ಹೆಸರಾಗುವುದು. ತಾಮಸ ರಾಜಸ ಸಂಬಂಧವಾದ ಅಸಾರ ಪದಾರ್ಥವು ನೀಚರಿಗೆ ಚೆನ್ನಾಗಿ ಗೊತ್ತಾಗುವುದರಿಂದ ಪ್ರಚುರವೆನ್ನಿಸಿಕೊಳ್ಳುವುದು. ಅಂತು ಈ ೪ ದ್ವಂದ್ವಗಳು ಆ ೬ ಲ ರಸಗಳಲ್ಲಿ ಅರ್ಧ ಸಾತ್ವಿಕ ರಾಜಸವಾಗಿಯೂ, ಅರ್ಧ ತಾಮಸ ರಾಜಸವಾಗಿಯೂ ಎರಡು ಭಾಗವಾಗಿರುವುದರಿಂದ ಸಾರಾಸಾರಾದಿ ೪ ದ್ವಂದ್ವಗಳಲ್ಲಿ ಸಾರಾದಿಗಳು ಸಾತ್ವಿಕ ರಾಜಸಕ್ಕೂ ಅಸಾರಾದಿಗಳು ರಾಜಸ ತಾಮಸಕ್ಕೂ ಸೇರಿರುವುವು. ಆದ್ದರಿಂದ ಈ ನಾಲ್ಕು ದ್ವಂದ್ವಗಳನ್ನು ನಾಲ್ಕು ಭಾಗವನ್ನಾಗಿ ಭಾಗಿಸಿರುವರು, ಆದುದರಿಂದ ೧೮×೪=೭೨ ಆದವು. ಈ ೭೨ ರಸಗಳಲ್ಲಿ ಒಂದೊಂದರಲ್ಲಿ ವಿಶ್ವಾದಿ ಸಹಸ್ರ ಭಗವದ್ರೂಪಗಳನ್ನು ಚಿಂತಿಸಬೇಕು, ಅಂತು ೭೨×೧೦೦೦= ೭೨೦೦೦ ಹೀಗೆ ಗುಣಾಕಾರ ಮಾಡಲು ೭೨ ಸಹಸ್ರವಾಗುವುದು, ಈ ರೀತಿಯಲ್ಲಿ ಲಕ್ಷ್ಮೀಪತಿಯಾದ ಶ್ರೀಪರಮಾತ್ಮನು ನಮ್ಮ ಶರೀರದಲ್ಲಿ ೭೨

ಸಹಸ್ರ ರಸರೂಪದಿಂದಲೂ ಭೋಜ್ಯವಾದ ಪದಾರ್ಥಗಳಲ್ಲಿಯೂ ರಸರೂಪಿ ಯಾದ ಶ್ರೀಪರಮಾತ್ಮನನ್ನು ಚಿಂತಿಸಿ ಭೋಜನ ಮಾಡಬೇಕು.

**ಕ್ಷೀರಗತರಸರೂಪಗಳು ಮುಂ-**
**ನೂರು ಮೇಲೈವತ್ತು ನಾಲ್ಕು**
**ಚಾರುಘೃತಗತರೂಪಗಳು ಇಪ್ಪತ್ತರೊಂಭತ್ತು ।**
**ಸಾರಗುಡದೊಳಗೈದು ಸಾವಿರ**
**ನೂರು ಒಂದು ಸುರೂಪದ್ವಿಸಹ-**
**ಸ್ರಾರೆರಡು ಶತಪಂಚವಿಂಶತಿ ರೂಪ ಫಲಗಳಲೀ ॥ ೫ ॥**

ಪದ್ಯಾರ್ಥ—ಕ್ಷೀರಗತರಸರೂಪಗಳು=ಹಾಲಿನಲ್ಲಿ ಇರುವ ರಸದೊಳಗಿನ ಭಗವದ್ರೂಪಗಳು, ಮುನ್ನೂರು ಮೇಲೈವತ್ತುನಾಲ್ಕು=೩೫೪, ಚಾರು= ಮನೋಜ್ಞವಾದ, ಘೃತಗತ=ತುಪ್ಪದೊಳಗಿನ, ರೂಪಗಳು=ಭಗವದ್ರೂಪಗಳು, ಇಪ್ಪತ್ತರೊಂಭತ್ತು= ೨೯, ಸಾರ=ಸಾರಭೂತವಾದ, ಗುಡದೊಳಗೆ= ಬೆಲ್ಲದೊಳಗೆ, ಐದುಸಾವಿರನೂರಒಂದು=೫೧೦೧, ಸುರೂಪ=ಉತ್ಕೃಷ್ಟವಾದ ಭಗವದ್ರೂಪಗಳು, ಫಲಗಳಲಿ=ಫಲಗಳಲ್ಲಿ, ದ್ವಿಸಹಸ್ರ=ಎರಡು ಸಾವಿರದ, ಆರೆರಡುಶತ=೬+೨=೮ನೂರ, ಪಂಚವಿಂಶತಿ=೨೫ ಒಟ್ಟು ೨೮೨೫, ರೂಪ= ಭಗವದ್ರೂಪಗಳು ಇರುವದೆಂದು ಚಿಂತಿಸಬೇಕು.

ತಾತ್ಪರ್ಯ—ಮೇಲಿನ ಪದ್ಯದಿಂದ ಸಾಮಾನ್ಯವಾಗಿ ಷಡ್ರಸಗತ ಭಗವದ್ರೂಪಗಳನ್ನು ಹೇಳಿ ಈಗ ಕ್ಷೀರಾದಿಗತ ಭಗವದ್ರೂಪಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಹೇಳುತ್ತಾರೆ. ಕ್ಷೀರದಲ್ಲಿನ ಮಧುರ ರಸದಲ್ಲಿ ೩೫೪ ಭಗವದ್ರೂಪಗಳನ್ನು ಚಿಂತಿಸಬೇಕು. ಉತ್ತಮವಾದ ತುಪ್ಪದೊಳಗೆ ಇಪ್ಪತ್ತೊಂಭತ್ತು ಭಗವದ್ರೂಪಗಳನ್ನೂ, ಬೆಲ್ಲದೊಳಗೆ ೫೧೦೧ ರೂಪಗಳನ್ನೂ ಫಲಗಳಲ್ಲಿರುವ ರಸಗಳಲ್ಲಿ ೨೮೨೫ ರೂಪಗಳನ್ನೂ ಚಿಂತಿಸಬೇಕು.

**ವಿಶದ ಸ್ಥಿರ ತೀಕ್ಷ್ಣವು ನಿರ್ಹರ**
**ರಸಗಳಲಿ ಮೂರೈದು ಸಾವಿರ**
**ತ್ರಿಶತನವ ರೂಪಗಳ ಚಿಂತಿಸಿ ಭುಂಜಿಪುದು ವಿಷಯ ।**
**ಶ್ವಸನ ತತ್ವೇಶರೊಳಗಿದ್ದೀ**
**ಹೆಸರಿನಿಂದಲಿ ಕರೆಸುವನು ಧೇ-**
**ನಿಸಿದರೀಪರಿ ಮನಕೆ ಪೊಳೆವನು ಬಲ್ಲ ವಿಬುಧರಿಗೆ ॥ ೬ ॥**

ಪದ್ಯಾರ್ಥ—ರಸಗಳಲಿ=ಮೇಲೆ ಹೇಳಿದ ಕ್ಷೀರ, ಘೃತ, ಬೆಲ್ಲ, ಫಲ ಇವುಗಳ ರಸಗಳಲ್ಲಿ (ಕ್ರಮವಾಗಿ ವಿಶದ=೩೫೪, ಸ್ಥಿರ=೨೯, ತೀಕ್ಷ್ಣ=೫೧೦೧ ನಿರಹರ=೨೮೨೫ ಹೀಗೆ ಇರುವ ಭಗದ್ರೂಪಗಳನ್ನು ಒಟ್ಟು ಕೂಡಿ) ಮೂರೈದು ಸಾವಿರ ತ್ರಿಶತನವ=೩+೫=೮, ತ್ರಿಶತ=೩೦೦ ನವ=೯ ಅಂತು ೮೩೦೯, ರೂಪಗಳ=ಭಗವದ್ರೂಪಗಳನ್ನು ಚಿಂತಿಸಿ, ವಿಷಯ=ಭೋಜನಕ್ಕೆ ವಿಷಯ ವಾದ ಭೋಜ್ಯ ಪದಾರ್ಥವನ್ನು, ಭುಂಜಿಪುದು=ಭೋಜನವನ್ನು ಮಾಡ ಬೇಕು. ಶ್ವಸನತತ್ವೇಶರೊಳಗಿದ್ದು=ಚಿತ್ತಾಭಿಮಾನಿಯಾದ ವಾಯುದೇವರು ಮೊದಲಾದ ತತ್ವಾಭಿಮಾನಿ ದೇವತೆಗಳೊಳಗಿದ್ದು, ಈಪೆಸರಿನಿಂದಲಿ=ವಿಶ ದಸ್ಥಿರ ಮೊದಲಾದ ನಾಮದಿಂದ, ಕರೆಸುವನು=ಕರೆಸಿಕೊಳ್ಳಲ್ಪಡುವನು. ಈ ಪರಿ=ಈ ರೀತಿಯಾಗಿ, ಧೇನಿಸಿದರೆ=ಧ್ಯಾನಮಾಡಿದರೆ, ಬಲ್ಲ=ತಿಳಿದ, ವಿಬುಧ ರಿಗೆ = ಜ್ಞಾನಿಗಳಿಗೆ, ಮನಕೆ = ಮನಸ್ಸಿಗೆ, ಪೊಳೆವನು = ತೋರಿಬರುವನು.

ತಾತ್ಪರ್ಯ—ಅಕ್ಷರಗಳ ಮೇಲೆ ಸಂಖ್ಯಾ ಸೂಚಿಸುವ ಸಂಪ್ರದಾಯ ವು ಜ್ಯೋತಿಷಕಾರರು, ಶಾಸ್ತ್ರಕಾರರು ಸಹ ಹೇಳಿರುವರು. ಅದರ ಕ್ರಮ ಹೇಗೆಂದರೆ—ಕಾದಿನವ, ಟಾದಿ ಪಂಚ, ತಾದಿ ಪಂಚ, ಪಾದಿ ಪಂಚ, ಯಾದಿ ದಶ, ಇದರರ್ಥ 'ಕ' ಮೊದಲು 'ಜ' ಎಂಬ ಅಕ್ಷರ ಬಿಟ್ಟು 'ಞ' ವರೆಗೂ ಎಣಿಸಿದರೆ ೯ ಅಕ್ಷರಗಳು ಆಗುವುವು. 'ಟ' ಮೊದಲು 'ಣ' ವರೆಗೂ ೫ ಅಕ್ಷರಗಳು. 'ತ' ಮೊದಲು 'ನ' ವರೆಗೂ ೫ ಅಕ್ಷರಗಳು. 'ಪ' ಮೊದಲು 'ಮ' ವರೆಗೂ ೫ ಅಕ್ಷರಗಳು. 'ಯ' ಮೊದಲು 'ಕ್ಷ' ವರೆಗೂ ೧೦ ಅಕ್ಷರ ಗಳು. ಹೀಗೆ ಸಂಖ್ಯಾಮಾಡುವ ಪದ್ಧತಿ ಇರುವುದು. "ಅಂಕಾನಾಂ ವಾಮತೋ ಗತಿಃ" ಎಂಬ ಪ್ರಮಾಣದಿಂದ ಕ್ರಮವಾಗಿ ಅಕ್ಷರ ಸಂಖ್ಯೆ ಯನ್ನು ಬರೆದು ಎಡದಿಂದ ಗಣನೆಮಾಡಬೇಕು. ಹಾಗೆ ಇಲ್ಲಿ ವಿಶದ, ಸ್ಥಿರ, ತೀಕ್ಷ್ಣ, ನಿರಹರ ಎಂದು ಹೇಳಿರುವರು. ಇದರಲ್ಲಿ 'ವಿಶದ' ಎಂಬ ಪದ ದಲ್ಲಿ ವಿ = ೪, ಶ = ೫, ದ = ೩ ಹೀಗೆ ೪೫೩ ಆಯಿತು. ಇದನ್ನು ಎಡದಿಂದ ಓದಿದರೆ ೩೫೪ ಬರುವುದು. ಇವು ಕ್ಷೀರಗತ ರೂಪಗಳೆಂದು ಮೇಲಿನ ಪದ್ಯ ದಿಂದ ಹೇಳಿರುವರು. ಮತ್ತು ಸ್ಥಿರ = ಇವರಲ್ಲಿ 'ಸ' ಎಂಬ ಅಕ್ಷರವನ್ನು ಗ್ರಹಣಮಾಡಿದರೆ ೭ ಆಯಿತು, 'ಥ' ೨, 'ಸ್ಥಿ' ಒತ್ತಕ್ಷರವಾದುದರಿಂದ ಎರ ಡನ್ನು ಒಂದಾಗಿ ಸೇರಿಸಬೇಕು. ಅಂದರೆ ೭+೨ = ೯ ಎಂದು ಭಾವ, ರ ೨ ಅಂತು ೯೨ ಎಂತಾಯಿತು. ಇದನ್ನು ಎಡದಿಂದ ಓದಿದರೆ ೨೯ ಆಗುವುದು.

ಇವು ಘೃತದಲ್ಲಿನ ಭಗವದ್ರೂಪಗಳು. ತೀಕ್ಷ್ಣ = ತೀ = ೧, 'ಕ್ಷ' = ೧೦ 'ಣ' = ೫ ಇದನ್ನು ಎಡಮಾಡಬೇಕು. ಇದರಲ್ಲಿ ೧೦ ಎರಡು ಸ್ಥಾನ ಉಳ್ಳದಾದುವರಿಂದ ಅದನ್ನು ಎಡದಿಂದ ಓದಿದರೆ ೦೧ ಹೀಗಾಗುವದು. ಅಂತು ೧೦೧೫ ಇವು ಒಟ್ಟು ಎಡದಿಂದ ಓದಿದರೆ ೫೧೦೧ ಆಗುವುದು. ಇವು ಗುಡಗತ ರಸರೂಪಗಳು, ನಿರಹರ = ನಿ = ೫, ರ = ೨, ಹ = ೮, ರ = ೨, ಅಂತು ೫೨೮೨ ಇವು ಎಡದಿಂದ ಎಣಿಸಿದರೆ ೨೮೨೫ ಆಗುವುದು. ಇವು ಫಲಗತ ರಸವೆಂದು ಭಾವಿಸಬೇಕು, ಹೀಗೆ ಮೇಲಿನ ಸಂಖ್ಯೆಯನ್ನು ಒಟ್ಟುಕೂಡಿಸಿದರೆ ೮೩೦೯ ಆಗುವುದು. ಭೋಜನಕ್ಕೆ ಯೋಗ್ಯವಾದ ಪದಾರ್ಥಗಳನ್ನು ಭುಂಜಿಸುವಾಗ ಈ ರೂಪಗಳನ್ನು ಆಯಾ ರಸಗಳಲ್ಲಿ ಚಿಂತಿಸಿ ಭುಂಜಿಸಬೇಕು, ಈ ದೇಹದೊಳಗೆ ಇರುವ ಚಿತ್ತಾಭಿಮಾನಿಯಾದ ವಾಯುದೇವರು ಮೊದಲಾದ ೨೪ ತತ್ವೇಶರೊಳಗಿದ್ದು ವಿಶದಾದಿ ನಾಮಗಳಿಂದ ಕರೆಸಿಕೊಳ್ಳಲ್ಪಡುವನು. ಹೀಗೆ ಧ್ಯಾನಮಾಡಿದರೆ ತಿಳಿದ ಜ್ಞಾನಿಗಳಿಗೆ ಮನಸ್ಸಿನಲ್ಲಿ ಅಲ್ಲಲ್ಲಿ ಆ ರೂಪಗಳು ಗೋಚರವಾಗುವವು.

**ಕಪಿಲ ನರಹರಿ ಭಾರ್ಗವತ್ರಯ**
**ವಪುಷ ನೇತ್ರದಿ ನಾಶಿಕಾಸ್ಯದಿ**
**ಶಫರನಾಮಕ ಜಿಹ್ವೆಯಲಿ ದಂತದಲಿ ಹಂಸಾಖ್ಯಾ ॥**
**ತ್ರಿಪದಿಪಾದ್ಯ ಹಯಾಸ್ಯ ವಾಚ್ಯದೊ-**
**ಳಪರಿಮಿತ ಸುಖಪೂರ್ಣ ಸಂತತ**
**ಕೃಪಣರೊಳಿದ್ದವರವರ ರಸ ಸ್ವೀಕರಿಸಿ ಕೊಡುವಾ ॥ ೭ ॥**

ಪದ್ಯಾರ್ಥ—ಕಪಿಲ = ಕಪಿಲನಾಮಕ ಪರಮಾತ್ಮನು, ನರಹರಿ = ನರಸಿಂಹರೂಪಿಯಾದ ಪರಮಾತ್ಮನು, ಭಾರ್ಗವ = ಪರಶುರಾಮನು, ತ್ರಯ = ಈ ಈ ಮೂರು ರೂಪಗಳು, ವಪುಷ = ಶರೀರದ, ನೇತ್ರದಿ = ಕಣ್ಣುಗಳಲ್ಲಿಯೂ, ನಾಸಿಕ = ಮೂಗಿನಲ್ಲಿಯೂ, ಆಸ್ಯದಿ = ಬಾಯಿಯಲ್ಲಿಯೂ, ಶಫರನಾಮಕ= ಮತ್ಸ್ಯನಾಮಕನಾದ ಪರಮಾತ್ಮನು, ಜಿಹ್ವೆಯಲಿ = ನಾಲಿಗೆಯಲ್ಲಿಯೂ, ಹಂಸಾಖ್ಯ = ಹಂಸನಾಮಕ ಪರಮಾತ್ಮನು, ದಂತದಲಿ=ಹಲ್ಲುಗಳಲ್ಲಿಯೂ, ತ್ರಿಪದಿಪಾದ್ಯ=ತ್ರಿ=ವೇದಗಳ, ಪದಿಪಾದ್ಯ=ಪ್ರತಿಪಾದ್ಯನಾದ, ಹಯಾಸ್ಯ= ಹಯಗ್ರೀವನಾಮಕನು, ವಾಚ್ಯದೊಳು=ವಾಕ್ಯದೊಳಗೂ, ಹೀಗೆ ಅಪರಿಮಿತ= ಪರಿಮಿತಿ ಇಲ್ಲದ, ಸಂತತ=ನಿರಂತರವಾದ, ಸುಖಪೂರ್ಣ=ಆನಂದಪೂರ್ಣ

ನಾದ ಶ್ರೀ ಪರಮಾತ್ಮನು, ಕೃಪಣರೊಳ್=ಅಜಿತೇಂದ್ರಿಯರಾದ ಜನರೊಳಗೆ ಇದ್ದು, ಅವರವರ = ಆಯಾ, ಜೀವರ = ತತ್ತದಿಂದ್ರಿಯಗಳಿಂದ ಸ್ವೀಕರಿಸಲು ಯೋಗ್ಯವಾದ ವಿಷಯಗಳನ್ನು, ಸ್ವೀಕರಿಸಿ = ತಾನು ಸ್ವೀಕರಿಸಿ ಕೊಡುವ = ಜೀವರಿಗೆ ತೃಪ್ತಿಪಡಿಸುವನು.

ತಾತ್ಪರ್ಯ—ಕಪಿಲನಾಮಕನಾದ ಪರಮಾತ್ಮನು ಈ ಶರೀರದ ನೇತ್ರಗಳಲ್ಲಿಯೂ, ನರಸಿಂಹರೂಪಿಯಾದವನು ಮೂಗಿನೊಳಗೂ, ಭಾರ್ಗವ = ಪರಶುರಾಮನು, ಆಸ್ಯತಿ = ಬಾಯಿಯೊಳಗೂ, ಹೀಗೆ ಮೂರು ಮೂರ್ತಿಗಳು ಈ ಮೂರು ಇಂದ್ರಿಯಗಳಲ್ಲಿರುವರು. ಮತ್ಸ್ಯನಾಮಕ ಪರಮಾತ್ಮನು ನಾಲಿಗೆಯಲ್ಲಿಯೂ, ಹಂಸನಾಮಕನು ದಂತಗಳಲ್ಲಿಯೂ ಇರುವನು. ತ್ರಿ ಎಂದರೆ ವೇದಗಳಿಗೆ ಹೆಸರು. ಭಾಗವತ ಪ್ರಥಮ ಸ್ಕಂಧದಲ್ಲಿ "ಸ್ತ್ರೀ-ಶೂದ್ರದ್ವಿಜಬಂಧೂನಾಂ ತ್ರಯೀ ನ ಶ್ರುತಿಗೋಚರಾ" ಸ್ತ್ರೀಯರು. ಶೂದ್ರರು ಬ್ರಾಹ್ಮಣಾಭಾಸರು ಇವರುಗಳಿಗೆ, ತ್ರಯೀ= ವೇದವೂ ಶ್ರುತಿಗೋಚರವಲ್ಲವೆಂದು ಹೇಳಿರುವರು. ಅದೇ ತ್ರಯೀ ಶಬ್ದವನ್ನು ಇಲ್ಲಿ 'ತ್ರಿ' ಎಂದು ಉಪಯೋಗಿಸಿರುವರು. ಇಂತಹ ವೇದಪ್ರತಿಪಾದ್ಯನಾದ ಹಯಗ್ರೀವನು ವಾಕ್ಯದೊಳಗೆ ಇರುವನು. ಹೀಗೆ ಶಾಶ್ವತವಾದ ಅಪರಿಮಿತಾನಂದ ಪೂರ್ಣನಾದ ಶ್ರೀಪರಮಾತ್ಮನು "ಕೃಪಣೋ ಯೋಽಜಿತೇಂದ್ರಿಯಃ" ಎಂಬ ಭಾಗವತ ವಾಕ್ಯಾನುಸಾರವಾಗಿ ಕೃಪಣನೆಂದರೆ ಇಂದ್ರಿಯನಿಗ್ರಹಮಾಡಲು ಶಕ್ತನಲ್ಲದವನು. ಇಂತಹ ಜನನೊಳಗಿದ್ದು ಅವರವರ ರಸ ಸ್ವೀಕರಿಸುವನು, ಅಂದರೆ ವಿಷಯಭೋಗವೆಂದರ್ಥ.

ಕಣ್ಣೊಳಗಿದ್ದು ನೋಡುವನು ,ಮೂಗಿನೊಳಗಿದ್ದು ಆಘ್ರಾಣಿಸುವನು. ಬಾಯೊಳಗಿದ್ದು ಭುಂಜಿಸುವನು. ಈ ಕಾರ್ಯಗಳನ್ನು ಶ್ರೀಪರಮಾತ್ಮನು ಮಾಡಿ ಅವರನ್ನು ತೃಪ್ತಿಪಡಿಸುವನು. ಅಜಿತೇಂದ್ರಿಯರೊಳಗಿದ್ದು ಎಂದು ಏಕೆ ಹೇಳಿದರೆಂದರೆ, ಜಿತೇಂದ್ರಿಯರಿಗೆ ಭಗವದ್ವ್ಯತಿರಿಕ್ತ ವಸ್ತುಗಳಲ್ಲಿ ಅಭಿಲಾಷೆ ಇರುವದಿಲ್ಲವಾದುದರಿಂದ ಅಜಿತೇಂದ್ರಿಯರೊಳಗಿದ್ದು ಆ ವಿಷಯಗಳನ್ನು ಸ್ವೀಕರಿಸುವನು, ತಾನು ಸ್ವೀಕರಿಸುವುದರಿಂದ ಜೀವರಿಗೆ ತೃಪ್ತಿಯಾಗುವದು.

**ನಿರುಪಮಾನಂದಾತ್ಮ ಹರಿ ಸಂ-**
**ಕರುಷಣ ಪ್ರದ್ಯುಮ್ನ ರೂಪದಿ**
**ಇರುತಿಹನು ಭೋಕ್ತೃಗಳೊಳಗೆ ತಚ್ಛಕ್ತಿದನು ಎನಿಸೀ ।**

**ಕರೆಸುವನು ನಾರಾಯಣನಿರು-**
**ದ್ಧೆರಡು ನಾಮದಿ ಭೋಜ್ಯವಸ್ತುಗ**
**ನಿರುತ ತರ್ಪಕನಾಗಿ ತೃಪ್ತಿಯನೀವ ಚೇತನಕೆ ॥ ೮ ॥**

ಪದ್ಯಾರ್ಥ—ನಿರುಪಮಾನಂದಾತ್ಮ=ಉಪಮಾನ ರಹಿತವಾದ ಆನಂದ ಸ್ವರೂಪನಾದ, ಹರಿ=ಶ್ರೀಪರಮಾತ್ಮನು, ಸಂಕರ್ಷಣ ಪ್ರದ್ಯುಮ್ನ ರೂಪ ಗಳಿಂದ, ಭೋಕ್ತೃಗಳೊಳಗೆ=ಭೋಜನಮಾಡುವವರೊಳಗೆ, ಇರುತಿಹನು= ವಾಸವಾಗಿರುವನು,ತಚ್ಛಕ್ತಿದನು=ಭೋಜನಮಾಡುವ ಶಕ್ತಿಯನ್ನು ಕೊಡು ವವನು ಎಂದು ಪ್ರಖ್ಯಾತನಾಗಿ, ಕರೆಸುವನು=ಸರ್ವಭೋಕ್ತನೆಂದು ಜ್ಞಾನಿ ಗಳಿಂದ ಕರೆಸಿಕೊಳ್ಳಲ್ಪಡುವನು. ನಾರಾಯಣನಿರುದ್ಧೆರಡು ನಾಮದಿ= ನಾರಾಯಣ ಅನಿರುದ್ಧರೆಂಬ ಎರಡು ನಾಮಗಳಿಂದ, ಭೋಜ್ಯವಸ್ತುಗ= ಭೋಜನ ಪಾನಮಾಡಲು ಯೋಗ್ಯನಾದ ವಸ್ತುಗಳಲ್ಲಿದ್ದು, ನಿರುತ=ನಿತ್ಯ ದಲ್ಲಿಯೂ, ತರ್ಪಕನಾಗಿ=ಜೀವರುಗಳು ಭೋಜನಮಾಡುವಂತೆ ಮಾಡಿ, ಚೇತನಕೆ=ಜೀವರಿಗೆ, ತೃಪ್ತಿಯನು, ಈವ=ಕೊಡುವನು.

ತಾತ್ಪರ್ಯ—ಉಪಮಾನರಹಿತವಾದ ಆನಂದಸ್ವರೂಪಿಯಾದ ಶ್ರೀ ಪರಮಾತ್ಮನು ಸಂಕರ್ಷಣ ಪ್ರದ್ಯುಮ್ನ ಎರಡು ರೂಪಗಳಿಂದ ಭೋಜನ ಮಾಡುವವರೊಳಗಿದ್ದು ಭೋಜನಮಾಡುವ ಶಕ್ತಿಯನ್ನು ಜೀವರಿಗೆ ಕೊಟ್ಟು ಭೋಜನಶಕ್ತಿಪ್ರದನೆಂಬ ಹೆಸರನ್ನು ಪಡೆದಿರುವನು. ನಾರಾಯಣ ಅನಿರುದ್ಧ ಈ ಎರಡು ರೂಪಗಳಿಂದ ಭೋಜನ ಪಾನಾದಿಗಳನ್ನು ಮಾಡಲರ್ಹವಾದ ಅನ್ನೋದಕಗಳಲ್ಲಿದ್ದು ಜೀವರನ್ನು ಭುಂಜಿಸುವಂತೆ ಮಾಡಿ ಆ ಜೀವರನ್ನು ತೃಪ್ತಿಪಡಿಸುವನು.

**ವಾಸುದೇವನು ಒಳ ಹೊರಗೆ ಅವ-**
**ಕಾಶ ಕೊಡುವ ನಭಸ್ಥನಾಗಿ ರ-**
**ಮಾ ಸಮೇತ ವಿಹಾರಮಾಳ್ಪನು ಪಂಚರೂಪದಲಿ ।**
**ಆ ಸರೋರುಹಸಂಭವಾ ಭವ**
**ವಾಸವಾದ್ಯಮರಾದಿ ಚೇತನ**
**ರಾಶಿಯೊಳಗಿಹನೆಂದು ಅರಿತವನವನೆ ಕೋವಿದನು ॥ ೯ ॥**

ಪದ್ಯಾರ್ಥ—ವಾಸುದೇವನು=ವಾಸುದೇವಾತ್ಮಕನಾದ ಶ್ರೀ ಪರಮಾ ತ್ಮನು, ಒಳಹೊರಗೆ=ಶರೀರಗಳ ಒಳಗಿನ ಭಾಗಗಳಲ್ಲಿಯೂ ಹೊರಗೂ ಸಹ

ಇರುವ, ನಭಸ್ಥನಾಗಿ=ಆಕಾಶದೊಳಗಿದ್ದು, ಅವಕಾಶಕೊಡುವನು=ಒಳಭಾಗ ದಲ್ಲಿ ಶ್ವಾಸಾದಿಗಳನ್ನು ಸೆಳೆದುಕೊಳ್ಳುವುದು, ಹೊರಗೆ ಶ್ವಾಸಾದಿಗಳನ್ನು ಬಿಡುವುದು ಮೊದಲಾದ ವಿಷಯಗಳಲ್ಲಿ ಅವಕಾಶವನ್ನು ಕೊಡುವನು, ಹೀಗೆ ಶ್ರೀ ಪರಮಾತ್ಮನು, ಪಂಚರೂಪದಲಿ=ಅನಿರುದ್ಧಾದಿ ಐದು ರೂಪಗಳಿಂದ, ರಮಾಸಮೇತ=ಶಾಂತಿ ಕೃತಿ ಮೊದಲಾದ 5 ರೂಪಗಳುಳ್ಳ ಲಕ್ಷ್ಮೀಸಮೇತ ನಾಗಿ, ವಿಹಾರಮಾಳ್ಪನು=ಈ ಶರೀರದೊಳಗಿದ್ದು ವಿಹರಿಸುವನು. ಆ ಸರೋ ರುಹಸಂಭವ=ಪರಮಾತ್ಮನ ನಾಭಿಕಮಲದಿಂದ ಉತ್ಪನ್ನರಾದ ಬ್ರಹ್ಮದೇವರು ಮೊದಲುಗೊಂಡು, ಭವ=ರುದ್ರದೇವರು, ವಾಸವಾದಿ=ಇಂದ್ರನೇ ಮೊದ ಲಾದ ಅಂದರೆ, ದೇವದೈತ್ಯೋರಗ ಮನುಷ್ಯಾದಿ ಸಮಸ್ತವಾದ, ಚೇತನ ರಾಶಿಯೊಳಗೆ = ಜೀವರಾಶಿಗಳೊಳಗೆ, ಇಹನೆಂದು = ಇರುವನೆಂದು, ಅರಿತ ವನು = ಯಾವ ಪುರುಷನು ತಿಳಿಯುವನೋ ಅವನೇ ಜ್ಞಾನಿಯು.

ತಾತ್ಪರ್ಯ—ವಾಸುದೇವನಾಮಕ ಪರಮಾತ್ಮನು ಈ ದೇಹಗಳ ಪಾಂಚಭೌತಿಕ ಸಂಬಂಧವಾದ ಆಕಾಶದಲ್ಲಿಯೂ ಹೊರಗಣ ಆಕಾಶದಲ್ಲಿ ಯೂ ಇದ್ದು ಒಳಗೆ ಅನ್ನೋದಕಗಳನ್ನು ಸ್ವೀಕರಿಸಲಿಕ್ಕೂ ಶ್ವಾಸೋಚ್ಛ್ವಾಸ ಬಿಡಲಿಕ್ಕೂ, ಹೊರಗಿನ ಗಾಳಿಯನ್ನು ಸ್ವೀಕಾರಮಾಡಲಿಕ್ಕೂ ಅವಕಾಶ ಕೊಡುತ್ತಿರುವನು. ಹೀಗೆ ಶ್ರೀ ಪರಮಾತ್ಮನು ಶಾಂತಿ, ಕೃತಿ, ಜಯಾ, ಮಾಯಾ, ಲಕ್ಷ್ಮೀ ಎಂಬ ೫ ರಮಾರೂಪಗಳಿಂದ ಸಮೇತನಾಗಿ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ ಎಂಬ ೫ ರೂಪಗಳಿಂದ ಈ ಶರೀರಗಳೊಳಗಿದ್ದು ಲೀಲಾ ಮಾಡುತ್ತಿರುವನು. ಹೀಗೆ ಬ್ರಹ್ಮದೇವರ ಮೊದಲು ರುದ್ರ ಇಂದ್ರಾದಿ ಸಕಲ ದೇವತೆಗಳಲ್ಲಿಯೂ, ಕಲಿ ಮೊದಲಾದ ದೈತ್ಯರಲ್ಲಿಯೂ ಮನುಷ್ಯ ಪಕ್ಷಿಮೃಗಾದಿ ಸಕಲ ಚೇತನರಲ್ಲಿಯೂ ಇದ್ದು ವಿಹಾರಮಾಡುವನೆಂದು ತಿಳಿದಿರುವ ಮನುಷ್ಯನೇ ಜ್ಞಾನಿಯೆಂದು ತಿಳಿಯ ಬೇಕು.

**ವಾಸುದೇವನು ಅನ್ನದೊಳು ನಾ-**
**ನಾ ಸುಭಕ್ಷ್ಯದಿ ಸಂಕರುಷಣ ಕೃ-**
**ತೀಶ ಪರಮಾನ್ನದೊಳು ಘೃತದೊಳಗಿಪ್ಪನನಿರುದ್ಧ ।**

**ಆ ಸುಪರ್ಣಾಂಸಗನು ಸೂಪದಿ**
**ವಾಸವಾನುಜ ಶಾಖದೊಳು ಮೂ-**
**ಲೇಶ ನಾರಾಯಣನು ಸರ್ವತ್ರದಲಿ ನೆಲಸಿಹನು ॥ ೧೦ ॥**

ಪದ್ಯಾರ್ಥ—ವಾಸುದೇವನು = ವಾಸುದೇನಾಮಕ ಪರಮಾತ್ಮನು, ಅನ್ನದೊಳು = ಅನ್ನದೊಳಗೂ, ನಾನಾಸುಭಕ್ಷ್ಯದಿ = ನಾನಾ ವಿಧವಾದ ಉತ್ತಮ ಭಕ್ಷ್ಯಗಳಲ್ಲಿ, ಸಂಕರ್ಷಣ = ಸಂಕರ್ಷಣಮೂರ್ತಿಯೂ, ಕೃತೀಶ = ಪ್ರದ್ಯುಮ್ನನಾಮಕ ಪರಮಾತ್ಮನು, ಪರಮಾನ್ನದೊಳು = ಪಾಯಸದೊಳಗೂ, ಅನಿರುದ್ಧ = ಅನಿರುದ್ಧನಾಮಕ ಪರಮಾತ್ಮನು, ಘೃತದೊಳಗೆ = ತುಪ್ಪದೊಳಗೂ, ಇಪ್ಪನು = ಇರುವನು. ಆ ಸುಪರ್ಣಾಂಸಗನು = ಗರುಡವಾಹನನಾದ ಶ್ರೀಕೃಷ್ಣನು, (ಸುಪರ್ಣ = ಗರುಡ, ಅವನ ಅಂಸಗ = ಹೆಗಲಮೇಲೆ ಕೂತಿರುವವನು) ಸೂಪದಿ = ತೊವ್ವೆಯೊಳಗೂ, ವಾಸವಾನುಜ = ಇಂದ್ರನ ತಮ್ಮನಾದ ಉಪೇಂದ್ರನು, (ವಾಮನನು) ಶಾಖದೊಳು = ಪಲ್ಯಗಳಲ್ಲಿಯೂ, ಮೂಲೇಶ = ಮೂಲಪ್ರಕೃತಿಗೆ ಈಶನಾದ ನಾರಾಯಣನು, ಸರ್ವತ್ರದಲಿ = ಸರ್ವಭೋಜ್ಯ ಪದಾರ್ಥಗಳಲ್ಲಿಯೂ, ನೆಲಸಿಹನು = ವಾಸಮಾಡುತ್ತಿರುವನು.

ತಾತ್ಪರ್ಯ—ಅನ್ನದೊಳಗೆ ವಾಸುದೇವಮೂರ್ತಿಯೂ, ನಾನಾವಿಧ ಭಕ್ಷ್ಯಗಳಲ್ಲಿ ಸಂಕರ್ಷಣಮೂರ್ತಿಯೂ, ಕೃತಿಪತಿಯಾದ ಪ್ರದ್ಯುಮ್ನ ಮೂರ್ತಿಯು ಪರಮಾನ್ನದೊಳಗೂ, ತುಪ್ಪದೊಳಗೆ ಅನಿರುದ್ಧಮೂರ್ತಿಯೂ ಇರುವನು. ಗರುಡವಾಹನನಾದ ಶ್ರೀಕೃಷ್ಣನು ತೊವ್ವೆಯಲ್ಲಿಯೂ, ಉಪೇಂದ್ರನು ಪಲ್ಯದೊಳಗೂ, ಲಕ್ಷ್ಮೀಪತಿಯಾದ ಶ್ರೀ ನಾರಾಯಣನು ಸಕಲ ಭೋಜ್ಯ ಪದಾರ್ಥಗಳಲ್ಲಿಯೂ ವ್ಯಾಪ್ತನಾಗಿರುವನು. ಈ ಸಂಧಿಯ ಪ್ರಥಮ ಪದ್ಯಾರಂಭ ಈ ವರೆವಿಗೂ ಇನ್ನು ಮುಂದೆ ಹೇಳಿರುವ ಎಲ್ಲಾ ವ್ಯಾಪ್ತಿ ವಿಷಯವನ್ನೂ ಐತರೇಯ ಭಾಷ್ಯದಲ್ಲಿ ವಿಸ್ತಾರವಾಗಿ ಹೇಳಿರುವರು. ಅದೇ ಅಭಿಪ್ರಾಯವನ್ನೇ ಇಲ್ಲಿ ಹೇಳಿರುವರು. ಅವರಲ್ಲಿ "ನಿರುಪಮಾನಂದಾತ್ಮ" ಎಂಬ ೮ನೆಯ ಪದ್ಯ ಮೊದಲು ೧೦ನೆಯ ಪದ್ಯದ ವರೆಗೂ ಹೇಳಿರುವ ಆಧಾರಭೂತವಾದುದು ಐತರೇಯೋಪನಿಷದ್ವಾಕ್ಯಗಳು—"ಸಂಕರ್ಷಣಸ್ಯ ಪ್ರದ್ಯುಮ್ನಾ ತತ್ರ ಭೋಕ್ತೃಷು ಸಂಸ್ಥಿತಾ । ಭೋಕ್ತೃಶಕ್ತಿಪ್ರದಾ ನಿತ್ಯಂ ಭೋಕ್ತಾರಾ ಚ ವಿಶೇಷತಃ ॥ ನಾರಾಯಣಾನಿರುದ್ಧಾ ಚ ಭೋಜ್ಯವಸ್ತುಷು ಸಂಸ್ಥಿತಾ । ತರ್ಪಕೋ ಸರ್ವಜೀವಾನಾಂ" (ಇತ್ಯಾದಿಗಳಿಗೆ ೮ನೆಯ ಪದ್ಯವು ವ್ಯಾಖ್ಯಾನರೂಪ

ವಾದುದು.) 'ಅವಕಾಶಪ್ರದೋ ನಿತ್ಯಂ ವಾಸುದೇವೋ ನಭಃಸ್ಥಿತಃ । ಪಂಚ-ರೂಪಾತ್ಮಕಂ ವಿಷ್ಣುಂ ಯ ಉಪಾಸ್ತೇ ಸದೈವ ಹಿ ॥" (ಇದು ೯ನೆಯ ಪದ್ಯದ ವ್ಯಾಖ್ಯಾನರೂಪವಾದುದು.) ವಾಸುದೇವಸ್ತು ಚಾನ್ನಸ್ಥೋ ಹ್ಯನಿರುದ್ಧೋ ಘೃತೇ ಸ್ಥಿತಃ । ನಾರಾಯಣಸ್ತು ಸರ್ವತ್ರ (ಇದು ಹತ್ತನೆಯ ಪದ್ಯದ ವ್ಯಾಖ್ಯಾನರೂಪವಾದುದು. ಇದರರ್ಥಗಳೇ ಮೇಲಿನ ಪದ್ಯಗಳಲ್ಲಿ ಬಂದಿರುವದರಿಂದ ಈ ಶ್ಲೋಕಗಳಿಗೆ ಅರ್ಥ ವಿವರಿಸಲಿಲ್ಲ.)

**ಅಗಣಿತಾತ್ಮ ಸುಭೋಜನ ಪದಾ-**
**ರ್ಥಗಳೊಳಗೆ ಅಖಂಡ ಒಂದೊಂ-**
**ದಗಳಿನೊಳನಂತಾಂಶದಿಂದಲಿ ಖಂಡನೆಂದೆನಿಸಿ ।**
**ಜಗದಿ ಜೀವರ ತೃಪ್ತಿಪಡಿಸುವ**
**ಸ್ವಗತಭೇದ ವಿವರ್ಜಿತನ ಈ**
**ಬಗೆಯ ರೂಪವನರಿತು ಭುಂಜಿಸಿ ಅರ್ಪಿಸವನಡಿಗೆ ॥ ೧೧ ॥**

ಪದ್ಯಾರ್ಥ—ಅಗಣಿತಾತ್ಮ = ಲೆಖ್ಖವಿಲ್ಲದ ರೂಪಗಳುಳ್ಳ (ಅನಂತಾನಂತರೂಪಗಳುಳ್ಳ) ಸುಭೋಜನ ಪದಾರ್ಥಗಳ = ಭೋಜನಮಾಡಲು ಅರ್ಹವಾದ ಪದಾರ್ಥಗಳ, ಒಳಗೆ, ಅಖಂಡ = ಅಖಂಡವೆಂತಲೂ, ಒಂದೊಂದಗಳಿನೊಳ್ = ಒಂದೊಂದು ಅಂಶದೊಳಗೂ, ಅನಂತಾಂಶದಿಂದಲಿ = ಅನಂತವಾದ ಅಂಶಗಳಿಂದ ಇದ್ದು, ಖಂಡನೆಂದೆನಿಸಿ = ಖಂಡನೆಂಬ ನಾಮಧೇಯದಿಂದ ಜಗದಿ = ಜಗತ್ತಿನಲ್ಲಿ, ಜೀವರ ತೃಪ್ತಿಪಡಿಸುವ = ಜೀವರುಗಳನ್ನು ತೃಪ್ತಿಪಡಿಸುವ, ಸ್ವಗತಭೇದವಿವರ್ಜಿತನ = ತನ್ನ ರೂಪಗಳಲ್ಲಿ ಪರಸ್ಪರ ಭೇದವಿಲ್ಲದಿರುವ ಶ್ರೀಪರಮಾತ್ಮನ, ಈ ಬಗೆಯ = ಖಂಡಾಖಂಡಗಳೆಂಬ ಎರಡು ವಿಧಗಳಾದ, ರೂಪವನು = ರೂಪಗಳನ್ನು, ಅರಿತು = ತಿಳಿದು, ಭುಂಜಿಸಿ= ಭೋಜನವನ್ನು ಮಾಡಿ, ಅವನಡಿಗೆ= ಆ ಪರಮಾತ್ಮನ ಪಾದಾರವಿಂದಗಳಿಗೆ, ಅರ್ಪಿಸು= ಸಮರ್ಪಣಮಾಡು.

ತಾತ್ಪರ್ಯ— ಅನಂತಾನಂತರೂಪಗಳುಳ್ಳ ಶ್ರೀ ಪ ರ ಮಾ ತ್ಮ ನು, ಭೋಜನಮಾಡುವ ಭಕ್ಷ್ಯ, ಪಲ್ಯ ಮೊದಲಾದ ಪದಾರ್ಥಗಳಲ್ಲಿ ಚಿರೋಟಿ ಮೊದಲಾದ ನಾಮಗಳಿಂದ ಅಖಂಡರೂಪನಾಗಿಯೂ, ಅನ್ನದ ಪ್ರತಿಯೊಂದು ಅಗಳಿನಲ್ಲಿಯೂ, ಪಲ್ಯದ ಒಂದೊಂದು ಹೋಳಿನಲ್ಲಿಯೂ ಖಂಡರೂಪನಾಗಿಯೂ ಇರುವನು. ಚಿರೋಟಿ ಮೊದಲಾದ ಭಕ್ಷ್ಯ ಸಮುದಾಯಗಳಲ್ಲಿಯೂ ಸ ಮು ದಾ ಯ ರೂಪದಿಂದ ಅಖಂಡನಾಗಿರುವನು. ಅಂದರೆ ೧೦೦

ಚಿರೋಟಿ ಒಟ್ಟುಕೂಡಿದ್ದಾಗ ಚಿರೋಟಿ ಸಮುದಾಯದಲ್ಲಿ ಅಖಂಡನಾಗಿರುವನು. ಒಂದೊಂದು ಚಿರೋಟಿಯನ್ನು ಬೇರ್ಪಡಿಸಲು ಒಂದೊಂದರಲ್ಲಿಯೂ ಖಂಡರೂಪಿಯೆಂದೆನಿಸುವನು. ಹೀಗೆ ಖಂಡಾಖಂಡ ರೂಪಗಳಿಂದ ಭೋಜ್ಯ ವಸ್ತುಗಳಲ್ಲಿದ್ದರೂ ಭಗವದ್ರೂಪಗಳಲ್ಲಿ ಪರಸ್ಪರ ಭೇದವಿಲ್ಲದಿರುವನು. ಚಿರೋಟಿ, ಜಿಲೇಬಿ, ಅನ್ನ, ಸಾರು ಮೊದಲಾದ ಪದಾರ್ಥಗಳಿಗೆ ಪರಸ್ಪರ ಭೇದಗಳಿದ್ದರೂ ಅವುಗಳಲ್ಲಿ ಆಯಾ ಆಕಾರಗಳಿಂದ ಇರುವ ಭಗವದ್ರೂಪ ಗಳಿಗೆ ಗುಣಾದಿಗಳಲ್ಲಿ ಪರಸ್ಪರ ಭೇದವಿಲ್ಲವೆಂಬ ಭಾವ. ಈ ಪ್ರಕಾರ ಖಂಡ ಅಖಂಡಗಳೆಂಬ ರೂಪಗಳಿಂದ ಭೋಜ್ಯವಸ್ತುವಾಗಿ ಜಗತ್ತಿನಲ್ಲಿ ಸಕಲ ಪ್ರಾಣಿಗಳನ್ನು ತೃಪ್ತಿಪಡಿಸುವನೆಂದು ಭಾವಿಸಿ ಭೋಜನವನ್ನು ಮಾಡಿ ಭುಂಜಿಸಿದ ಕೃತ್ಯವನ್ನು ಪರಮಾತ್ಮನಿಗೆ ಸಮರ್ಪಿಸಬೇಕು. ಇದನ್ನು ಶ್ರವಣಮಾಡುವವರು ಅನುಷ್ಠಾನಕ್ಕೆ ತರುವವರು ಬಹುಜನವಿರಲು ಸಮರ್ಪಿಸು, ಮಾಡು ಎಂದು ಏಕವಚನವಾಗಿ ಒಬ್ಬನನ್ನೇ ಸಂಬೋಧಿಸಿ ಹೇಳಲು ಕಾರಣವೇನೆಂದರೆ "ಸಮುದಾಯೈಕವಚನಂ" ಎಂಬ ನ್ಯಾಯದಿಂದ ತಮ್ಮ ಶಿಷ್ಯಮಂಡಲಿಯನ್ನು ಒಂದೇ ಸಮುದಾಯವೆಂದು ದಾಸರಾಯರು ಬೋಧಿಸುತ್ತಾರೆಂದು ತಿಳಿಯಬೇಕು.

**ಈ ಪರಿಯಲರಿತುಂಬ ನರ ನಿ-**
**ತ್ಯೋಪವಾಸಿ ನಿರಾಮಯನು ನಿ-**
**ಷ್ಪಾಪಿ ನಿತ್ಯ ಮಹತ್ಸುಯಜ್ಞಗಳಾಚರಿಸಿದವನು. ।**
**ಪೋಪದಿಪ್ಪದು ಬಪ್ಪುದೆಲ್ಲ ರ-**
**ಮಾಪತಿಗಧಿಷ್ಠಾನವೆನ್ನು ಕೃ-**
**ಪಾಪಯೋನಿಧಿ ಮಾತನಾಲಿಸುವನು ಜನನಿಯಂತೆ ॥ ೧೨ ॥**

ಪದ್ಯಾರ್ಥ—ಈ ಪರಿಯಲಿ=ಮೇಲೆ ಹೇಳಿದ ಪ್ರಕಾರವಾಗಿ, ಅರಿತು= ತಿಳಿದು, ಉಂಬ=ಭುಂಜಿಸುವ, ನರ=ಮನುಷ್ಯನು, ನಿತ್ಯೋಪವಾಸಿ= ನಿತ್ಯೋಪವಾಸ ವ್ರತಾಚರಣೆ ಮಾಡಿದವನ ಫಲವನ್ನು ಹೊಂದುವನು. ನಿರಾಮಯನು=ರೋಗರಹಿತನು, ನಿಷ್ಪಾಪಿ=ಪಾಪರಹಿತನು, ನಿತ್ಯ=ನಿರಂತರದಲ್ಲಿಯೂ, ಮಹತ್=ದೊಡ್ಡದಾದ, ಸು= ಉತ್ತಮವಾದ, ಯಜ್ಞಗಳ=ಯಾಗಗಳನ್ನು, ಆಚರಿಸಿದವನು= ಆಚರಿಸಿದ ಫಲವನ್ನು ಹೊಂದುವನು. ಪೋಪುದು= ತನ್ನ ಕೈಬಿಟ್ಟು ಹೋಗುವ ಪದಾರ್ಥಗಳು, ಇಪ್ಪುದು=ತನ್ನಲ್ಲಿಯೇ ಇರು

ವುವು, ಬಪ್ಪುದು=ತನಗೆ ಕೈಗೂಡುವ ಪದಾರ್ಥಗಳು ಬರುವುವು, ಎಲ್ಲ=ಇವೆಲ್ಲ ವನ್ನು, ರಮಾಪತಿಗೆ,ಅಧಿಷ್ಠಾನವೆನ್ನು=ವಾಸಸ್ಥಾನವೆಂದು ತಿಳಿ, ಕೃಪಾ ಪಯೋನಿಧಿ= ಕೃಪಾಸಮುದ್ರನು, ಜನನಿಯಂತೆ=ತಾಯಿಯಂತೆ ಮಾತನು= ನಮ್ಮ ವಾಕ್ಯಗಳನ್ನು, ಆಲಿಸುವನು=ಪ್ರೀತಿಯಿಂದ ಕೇಳುವನು.

ತಾತ್ಪರ್ಯ—ಮೇಲೆ ಹೇಳಿದಂತೆ ಖಂಡಾಖಂಡ ರೂಪಗಳಿಂದ ಶ್ರೀ ಹರಿಯು ಭೋಜ್ಯ ಪದಾರ್ಥಗಳಲ್ಲಿ ವ್ಯಾಪ್ತನಾಗಿರುವನೆಂದು ತಿಳಿದು ಭೋಜ ನವನ್ನು ಮಾಡುವವನು ನಿತ್ಯೋಪವಾಸ ವ್ರತಾಚರಣೆಯಿಂದ ಬರುವ ಫಲ ವನ್ನು ಹೊಂದುವನು, ನಿರೋಗಿಯಾಗುವನು, ಪಾಪರಹಿತನು, ನಿತ್ಯದಲ್ಲಿ ಯೂ ಅಶ್ವಮೇಧಾದಿ ಮಹಾಯಜ್ಞಾಚರಣೆಯಿಂದ ಬರುವ ಫಲವನ್ನು ಹೊಂದುವನು. (ಇದಲ್ಲದೆ ನನ್ನನ್ನು ಬಿಟ್ಟುಹೋದ ಪ್ರಿಯವಸ್ತುಗಳಲ್ಲಿ ಇದ್ದ ಪರಮಾತ್ಮನೇ ತದಾಕಾರನಾಗಿ ನನ್ನಲ್ಲಿದ್ದು ನನ್ನ ಕರ್ಮಾನುಸಾರ ನನಗೆ ಭೋಗವನ್ನು ಕೊಡುತ್ತಿದ್ದನು. ಈಗಲೂ ನನ್ನ ಕರ್ಮದಿಂದಲೇ ನನಗೂ ಆ ಪದಾರ್ಥಗಳಿಗೂ ವಿಯೋಗ ಮಾಡಿಸಿವನು. ಇದು ಅವನ ಲೀಲೆಯೆಂದು ಭಾವಿಸಬೇಕು. ಇರುವುದನ್ನು ತನ್ನದೆಂದು ಹೆಚ್ಚು ಅಭಿಮಾನದಿಂದ ನೋಡದೆ ಪರಮಾತ್ಮನೇ ದಾರಾಗಾರಾದಿ ರೂಪದಿಂದ ನನಗೆ ಭೋಗವನ್ನು ಕೊಡುತ್ತಿರುವನು. ಅವನ ಸಂಕಲ್ಪದಲ್ಲಿ ಯಾವಾಗ ಸಾಕೆಂದು ತೋರು ವದೋ ಆಗ ವಿಯೋಗಪಡಿಸುವನು. ಇವುಗಳೆಲ್ಲವೂ ಅವನ ಇಚ್ಛೆಯೆಂದು ಭಾವಿಸಬೇಕು. ಇನ್ನೂ ಅವನ ಸಂಕಲ್ಪದಿಂದಲೇ ನನಗೆ ಸುಖವನ್ನು ಕೊಡುವುದಕ್ಕಾಗಿ ಭೋಗ್ಯ ವಸ್ತುರೂಪದಿಂದ ನನಗೆ ಸಂಬಂಧಪಡಿಸುವನು. ಅಂತು ಇವೆಲ್ಲವೂ ದಾರಾಗಾರಾದಿಗಳು ಭಗವದ್ರೂಪಗಳೇ ಎಂದು ಭಾವಿಸಿ ಭಾರವನ್ನು ಪರಮಾತ್ಮನ ಮೇಲೆ ಹಾಕಿದರೆ ಆತನು ತಾಯಿಯು ಮಕ್ಕಳ ಮಾತನ್ನು ಆಲಿಸಿ ಪ್ರೀತಿಯಿಂದ ಅವರನ್ನು ಸಾಕುವಂತೆ ನಮ್ಮ ಮಾತುಗಳನ್ನು ಪರಮಾತ್ಮನು ಆಲಿಸಿ ನಮ್ಮನ್ನು ಪಾಲಿಸುವನು.)

**ಆರೆರಡು ಸಾವಿರದ ಮೇಲಿ-**
**ನ್ನೂರು ಐವತ್ತೊಂದು ರೂಪದಿ**
**ಸಾರಭೋಕ್ತನಿರುದ್ಧದೇವನು ಅನ್ನಮಯನೆನಿಪ ।**
**ಮೂರೆರಡುವರೆ ಸಾವಿರದ ಮೇಲೆ**
**ಮೂರಧಿಕ ನಾಲ್ವತ್ತು ರೂಪದಿ**
**ತೋರುತಿಹ ಪ್ರದ್ಯುಮ್ನ ಜಗದೊಳು ಪ್ರಾಣಮಯನಾಗಿ ॥೧೩**

ಪದ್ಯಾರ್ಥ—ಆರೆರಡು ಸಾವಿರದ=೬+೨=೮, ಎಂಟುಸಾವಿರದ ಮೇಲೆ ಇನ್ನೂರು ಐವತ್ತೊಂದು=೨೫೧ ರೂಪದಿ, ಅನಿರುದ್ಧದೇವನು=ಅನಿರುದ್ಧ ನಾಮಕ ಶ್ರೀಪರಮಾತ್ಮನು, ಸಾರಭೋಕ್ತೃ=ಭೋಜ್ಯ ಪದಾರ್ಥಗಳ ಸರ್ವಸಾರಭೋಕ್ತನಾಗಿ, ಅನ್ನಮಯನು, ಎನಿಪ=ಎಂದೆನಿಸಿಕೊಳ್ಳುವನು. ಮೂರೆರಡು ಸಾವಿರದ=೩+೨=೫ ಸಾವಿರ, ವರೆ=ಅರ್ಧಸಾವಿರ ಎಂದರೆ ೫೦೦, ಒಟ್ಟು ೫೫೦೦ರ ಮೇಲೆ, ಮೂರಧಿಕ ನಾಲ್ವತ್ತು =೪೩,ರೂಪದಿ=ರೂಪದಿಂದ, ಪ್ರದ್ಯುಮ್ನರೂಪಿಯಾದ ಶ್ರೀಪರಮಾತ್ಮನು, ಜಗದೊಳು=ಜಗತ್ತಿನಲ್ಲಿ, ತಾನು ಪ್ರಾಣಮಯನಾಗಿ, ತೋರುತಿಹ =ಕಾಣುತ್ತಿರುವನು.

ತಾತ್ಪರ್ಯ—ಅನಿರುದ್ಧದೇವನು ಅನ್ನಮಯನೆನಿಸಿ ೮೨೫೧ ರೂಪ ಗಳಿಂದ ಸರ್ವಸಾರಭೋಕ್ತನಾಗಿರುವನು. ಮೇಲಿನ ಸಂಖ್ಯೆಯು "ಅನಿ ರುದ್ಧ" ಎಂಬ ಅಕ್ಷರಸಂಖ್ಯೆಯಿಂದುಂಟಾದುದು. ಹೇಗೆಂದರೆ ಅ=೧, ನಿ=೫, ರು=೨, ದ್ಧ=೮ ಇವುಗಳನ್ನು ಬಲದಿಂದ ಎಡಕ್ಕೆ ಗಣನಮಾಡಿದರೆ, ೮೨೫೧ ಆಗುವುದು. "ದ್ಧ" ಎಂಬ ಅಕ್ಷರವು 'ಟಾದಿಜತುಃ ತಾದಿಪಂಚ' ಎಂಬ ಆಧಾ ರದ ಮೇಲೆ ಟ ಠ ಡ ಢ ತ ಥ ದ ಧ ಹೀಗೆ ಅಕ್ಷರಗಳನ್ನು ಗಣಿಸಿದರೆ ಧ ಎಂದರೆ ೮ ಆಗುವುದು. ಆ ಸಂಖ್ಯೆಯನ್ನೇ ಇಲ್ಲಿ ಹೇಳಿರುವರು. ಪ್ರದ್ಯು ಮ್ನನು ಜಗತ್ತಿನೊಳಗೆ ಪ್ರಾಣಮಯನಾಗಿ ೫೫೪೩ ರೂಪಗಳಿಂದ ತೋರು ತ್ತಿರುವನು. ಇಲ್ಲಿಯೂ ಸಂಖ್ಯೆಯು ಪ್ರದ್ಯುಮ್ನ ಎಂಬ ಅಕ್ಷರಗಳಿಂದ ಉಂಟಾದುದು. ಪ್ರ=ಇದರಲ್ಲಿ ಪ-ರ ಹೀಗೆ ಎರಡು ಸೇರಿರುವುವು. ಪ=೧, ರ=೨=೩ (೧+೨) ಹೀಗೆ ಪ್ರ=೩, ದ್ಯು=೪ (ಇದರಲ್ಲಿ ದ್+ಯು, ಈ ಎರಡ ರಿಂದ ದ್=೩, ಯು=೧, (೩+೧=೪) ಈ ಪ್ರಕಾರ ಎಂದರೆ ೪, ಮ=೫, ನ=೫ ಹೀಗೆ ಬಲದಿಂದ ಎಣಿಸಿದರೆ ೫೫೪೩ ಆಗುವುದು.

**ಎರಡುಕೋಶದ ವಳಹೊರಗೆ ಸಂ-**
**ಕರುಷಣೈದುಸುಲಕ್ಷದರವ-**
**ತ್ತೆರಡುಸಾವಿರದೇಳಧಿಕ ಶತರೂಪಗಳ ಧರಿಸಿ ।**
**ಕರೆಸಿಕೊಂಬ ಮನೋಮಯನು ಯಂ-**
**ದರವಿದೂರನು ಈರೆರಡು ಸಾ-**
**ವಿರದ ಮುನ್ನೂರಾದ ಮೇಲ್‌ನಾಲ್ಕಧಿಕಯುಪ್ಪತ್ತು ॥ ೧೪ ॥**

ಪದ್ಯಾರ್ಥ—ಎರಡುಕೋಶದ=ಪ್ರಾಣ ಮತ್ತು ಅನ್ನಕೋಶಗಳೆಂಬ ಎರಡು ಕೋಶಗಳ, ವಳಹೊರಗೆ=ಒಳಭಾಗದಲ್ಲಿಯೂ ಹೊರಭಾಗದಲ್ಲಿಯೂ ಅರವಿದೂರನು=ದೋಷರಹಿತನಾದ, ಸಂಕರುಷಣ=ಸಂಕರ್ಷಣರೂಪಿಯಾದ ಶ್ರೀಪರಮಾತ್ಮನು, ಐದುಸುಲಕ್ಷದರವತ್ತೆರಡುಸಾವಿರದೇಳಧಿಕ ಶತರೂಪಗಳ= ೫೬೨೧೦೭ ರೂಪಗಳನ್ನು ಧರಿಸಿ ಮನೋಮಯನು ಎಂದು, ಕರೆಸಿಕೊಂಬ= ಕರೆಸಿಕೊಳ್ಳುವನು. (ಇದರ ಮುಂದಿನ ಈರೆರಡು ಸಾವಿರಗಳೆಂಬ ಪದಗಳು ಮುಂದಿನ ಪದ್ಯದಲ್ಲಿ ಅನ್ವಯಿಸುವುವು.)

ತಾತ್ಪರ್ಯ—ನಮ್ಮ ದೇಹಗಳಲ್ಲಿ ಅನ್ನಕೋಶವೆಂತಲೂ ಪ್ರಾಣಕೋಶ ವೆಂತಲೂ ಎರಡು ಕೋಶಗಳಿರುವುವು. ಭೋಜ್ಯ ಪದಾರ್ಥಗಳೆಲ್ಲವೂ ಅನ್ನ ಕೋಶದಲ್ಲಿ ಸೇರುವುವು. ಪ್ರಾಣಕೋಶದಲ್ಲಿ ಗಾಳಿಯು ಸಂಚರಿಸುವುದು. ಈ ಎರಡು ಕೋಶಗಳ ಒಳಗೂ ಹೊರಗೂ ಸಂಕರ್ಷಣರೂಪಿಯಾದ ಶ್ರೀಪರಮಾ ತ್ಮನು ಪೂರ್ವೋಕ್ತ ಅಕ್ಷರಸಂಖ್ಯಾಪ್ರಕಾರ ಸ=೭, ಙ=೦, ಕ=೧, ರು=೨, ಷ=೬, ಣ=೫ ಈ ಸಂಖ್ಯೆಯನ್ನು ಬಲದಿಂದ ಎಣಿಸಿದರೆ ೫೬೨೧೦೭ ಆಗುವುದು. ಇಷ್ಟು ರೂಪಗಳನ್ನು ಧರಿಸಿ, ಮನೋಮಯನೆಂದು ಕರೆಸಿಕೊಂಡು ವ್ಯಾಪ್ತ ನಾಗಿರುವನು.

**ರೂಪದಿಂ ವಿಜ್ಞಾನಮಯನೆಂ-**
**ಬೀ ಪೆಸರಿನಿಂ ವಾಸುದೇವನು**
**ವ್ಯಾಪಿಸಿಹ ಮಹದಾದಿತತ್ವ ತತ್ಪತಿಗಳೊಳಗೆ ।**
**ಈ ಪುರುಷನಾಮಕನ ಶುಭ ಸ್ವೇ-**
**ದಾಪಳೆನಿಸಿ ರಮೂಂಬ ತಾ ಬ್ರ-**
**ಹ್ಮಾಪರೋಕ್ಷಿಗಳಾದವರ ಲಿಂಗಾಂಗ ಕೆಡಿಸುವಳು. ॥೧೫॥**

ಪದ್ಯಾರ್ಥ—ಈರೆರಡುಸಾವಿರದ ಮುನ್ನೂರಾದ ಮೇಲೆ ನಾಲ್ಕಧಿಕ ಯುಪ್ಪತ್ತು =೪೩೭೪, ರೂಪದಿಂ=ರೂಪಗಳಿಂದ, ವಿಜ್ಞಾನಮಯನೆಂಬ, ಈ ಪೆಸರಿನಿಂದ=ಈ ಹೆಸರಿನಿಂದ ವಾಸುದೇವನು, ಮಹದಾದಿತತ್ವ=ಮಹತ್ತತ್ವ ಮೊದಲಾದ ತತ್ವಗಳಲ್ಲಿಯೂ, ತತ್ಪತಿಗಳೊಳಗೆ=ಮಹತ್ತತ್ವಾದಿ ತತ್ವಾಭಿ ಮಾನಿಗಳಾದ ಬ್ರಹ್ಮಾದಿ ದೇವತೆಗಳ ಒಳಗೂ, ವ್ಯಾಪಿಸಿಹ=ವ್ಯಾಪಿಸಿಕೊಂಡಿ ರುವನು. ಈ ಪುರುಷನಾಮಕನ=ಈ ಪುರುಷವಾಚ್ಯನಾದ ವಾಸುದೇವನ, ಶುಭ=ಮಂಗಳಕರವಾದ, ಸ್ವೇದಾಪಳೆನಿಸಿ=ಬೆವರಿನಿಂದ ಜನಿಸಿದ

ವಿರಜಾನದಿಯೆಂದೆನಿಸಿ, ರಮಾಂಬ = ರಮಾನಾಮಕಳಾದ ಜಗನ್ಮಾತೆಯು, ತಾ = ತಾನು, ಬ್ರಹ್ಮಾಪರೋಕ್ಷಿಗಳಾದವರ = ಬ್ರಹ್ಮಾಪರೋಕ್ಷವನ್ನು ಪಡೆದು ಸಂಪೂರ್ಣ ಸಾಧನೆಯಾದವರಿಗೆ ಮುಕ್ತಿ ಕಾಲದಲ್ಲಿ, ಲಿಂಗಾಂಗ= ಲಿಂಗಶರೀರವನ್ನು, ಕೆಡಿಸುವಳು= ಭಂಗಪಡಿಸುವಳು.

ತಾತ್ಪರ್ಯ--ವಾಸುದೇವ ಎಂಬ ಅಕ್ಷರಸಂಖ್ಯೆ ಮಾಡಿದರೆ ವಾ= ೪, ಸು = ೭. ದೇ = ೩, ವ = ೪ ಇವುಗಳನ್ನು ಬಲಗಡೆಯಿಂದ ಎಣಿಸಿದರೆ ೪೩೭೪ ಆಗುವುವು. ಇಷ್ಟು ರೂಪಗಳಿಂದ ಶ್ರೀ ವಾಸುದೇವ ನಾಮಕನಾದ ಪರಮಾತ್ಮನು, ವಿಜ್ಞಾನಮಯನೆಂಬ ನಾಮದಿಂದ ಮಹತ್ತತ್ವ, ಅಹಂಕಾರ ತತ್ವ ಮೊದಲಾದ ತತ್ವಗಳಲ್ಲಿಯೂ, ತತ್ವಾಭಿಮಾನಿ ದೇವತೆಗಳಲ್ಲಿಯೂ ವ್ಯಾಪಿಸಿಕೊಂಡಿರುವನು. ಇಂತಹ ಪುರುಷನಾಮಕನಾದ ವಾಸುದೇವರೂಪಿ ಶ್ರೀ ಪರಮಾತ್ಮನ ಪತ್ನಿಯಾದ ಜಗಜ್ಜನನಿಯಾದ ರಮಾದೇವಿಯು ಪರಮಾತ್ಮನ ಬೆವರಿನಿಂದ ವಿರಜಾನದಿಯೆಂಬ ಹೆಸರಿನಿಂದ ಜನಿಸಿರುವಳು. ಈಕೆಯು ಮುಕ್ತಿಯೋಗ್ಯರಾದ ಸಕಲ ಜೀವರುಗಳ, ಬ್ರಹ್ಮಾಪರೋಕ್ಷವನ್ನು ಪಡೆದು ಸಾಧನ ಪೂರ್ತಿಯಾದ ಮೇಲೆ ಬ್ರಹ್ಮಲೋಕವನ್ನು ಹೊಂದಿ ಕೆಲವು ಕಾಲ ಅಲ್ಲಿ ಇದ್ದು ಮುಕ್ತಿಕಾಲ ಬಂದಾಗ ಬಹ್ಮದೇವರಿಂದ ಕೂಡಿ ಮೇಲೆ ಹೇಳಿದ ವಿರಜಾನಾಮಕಳಾದ ತನ್ನಲ್ಲಿ ಸ್ನಾನಮಾಡಲು, ಆಗ ಅವರುಗಳ ಲಿಂಗ ಶರೀರವನ್ನು ಭಂಗಪಡಿಸುವಳು

**ಐದುಸಾವಿರ ನೂರ ಇಪ್ಪ-**
**ತ್ತೈದು ನಾರಾಯಣನ ರೂಪವ**
**ತಾ ಧರಿಸಿಕೊಂಡನುದಿನದಲಾನಂದಮಯನೆನಿಪ ।**
**ಐದುಲಕ್ಷದ ಮೇಲೆ ಯಂಭ-**
**ತ್ತೈದು ಸಾವಿರ ನಾಲ್ಕುಶತಗಳ**
**ಐದು ಕೋಶಾತ್ಮಕ ವಿರಿಂಚಾಂಡದೊಳು ತುಂಬಿಹನು ॥೧೬॥**

ಪದ್ಯಾರ್ಥ—ನಾರಾಯಣನು= ನಾರಾಯಣರೂಪಿಯಾದ ಶ್ರೀಪರಮಾತ್ಮನು, ಐದುಸಾವಿರ ನೂರ ಇಪ್ಪತ್ತೈದು = ೫೧೨೫, ರೂಪವ = ರೂಪಗಳನ್ನು, ತಾ = ತಾನು, ಧರಿಸಿಕೊಂಡು, ಅನುದಿನದಿ=ಪ್ರತಿದಿವಸವೂ, ಆನಂದ ಮಯನೆನಿಪ =ಆನಂದಮಯ ಎಂದೆನಿಸಿಕೊಂಬುವನು, ಐದುಕೋಶಾತ್ಮಕ= ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದ

ಮಯ ಎಂಬ ಐದು ಕೋಶಸ್ವರೂಪನಾಗಿ, ಅನಿರುದ್ಧ, ಪ್ರದ್ಯುಮ್ನ ಸಂಕರ್ಷಣ, ವಾಸುದೇವ, ನಾರಾಯಣನೆಂಬ ೫ ರೂಪಗಳಿಂದ ಐದುಲಕ್ಷದ ಮೇಲೆ ಎಂಭತ್ತೈದುಸಾವಿರ ನಾಲ್ಕು ಶತಗಳ = ೫೮೫೪೦೦ ರೂಪಗಳಿಂದ, ವಿರಿಂಚಾಂಡದೊಳಗೆ = ಬ್ರಹ್ಮಾಂಡದೊಳಗೆ, ತುಂಬಿಹನು = ವ್ಯಾಪಿಸಿಕೊಂಡಿರುವನು.

ತಾತ್ಪರ್ಯ—ನಾರಾಯಣಯೆಂಬುವುದನ್ನು ಅಕ್ಷರಸಂಖ್ಯೆ ಮಾಡಿದರೆ ನಾ= ೫, ರಾ= ೨, ಯ =೧, ಣ= ೫ ಇದನ್ನು ಬಲದಿಂದ ಎಣಿಸಿದರೆ ೫೧೨೫ ಆಗುವುವು. ಶ್ರೀಪರಮಾತ್ಮನು ಇಷ್ಟು ನಾರಾಯಣ ರೂಪಗಳನ್ನು ಧರಿಸಿ ಆನಂದಮಯನೆನಿಸಿಕೊಳ್ಳುವನು, ಅಂತು ಶ್ರೀ ಪರಮಾತ್ಮನು ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಎಂಬ ಹೆಸರುಗಳಿಂದ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ನಾರಾಯಣನೆಂಬ ೫ ರೂಪಗಳುಳ್ಳ ಪರಮಾತ್ಮನು ಒಟ್ಟು ೫೮೫೪೦೦ ರೂಪಗಳಿಂದ ಈ ಬ್ರಹ್ಮಾಂಡದಲ್ಲಿ ಎಲ್ಲಾ ಸ್ಥಳಗಳಲ್ಲಿಯೂ ವ್ಯಾಪಿಸಿಕೊಂಡಿರುವನು.

**ನೂರ ಒಂದು ಸ್ವರೂಪದಿ ಶಾಂ-**
**ತೀರಮಣ ತಾ ನನ್ನ ನೆನಿಪ್ಪೆ-**
**ನೂರುಮೇಲೆ ಮೂರಧಿಕ ದಶಪ್ರಾಣಾಖ್ಯ ಪ್ರದ್ಯುಮ್ನ ।**
**ತೋರುತಿಹನೈವತ್ತು ಐದು ವಿ-**
**ಕಾರಮನದೊಳು ಸಂಕರುಷಣೈ-**
**ನೂರುಚತುರಾಶೀತಿ ವಿಜ್ಞಾನಾತ್ಮ ವಿಶ್ವಾಖ್ಯ ॥ ೧೭ ॥**

ಪದ್ಯಾರ್ಥ— ಮೇಲಿನ ಪದ್ಯಗಳಿಂದ ಅನ್ನಕೋಶಾದಿಗಳ ಒಳಗ ಅನ್ನಾದಿಗಳ ಪ್ರಾಚುರ್ಯಗಳಿಗೆ ಮಯಯೆಂದು ಹೇಳುವರು. ಕೋಶವೆಂದರೆ ಚೀಲದಂತಿರುವುದು ಎಂದರ್ಥ. ಅದರ ತುಂಬ ಅನ್ನಾದಿಗಳನ್ನು ತುಂಬಿದರೆ ಅದನ್ನು ಅನ್ನಮಯವೆಂದು ತಿಳಿಯಬೇಕು. ಖಂಡರೂಪದಿಂದ ಅನ್ನಕೋಶಾದಿಗತ ಭಗವದ್ರೂಪಗಳನ್ನು ಹೇಳಿರುವರು. ಈಗ ಅನ್ನಪ್ರಾಣ ಇತ್ಯಾದಿ ಶಬ್ದವಾಚ್ಯನಾಗಿ ಅಖಂಡರೂಪವಾಗಿರುವ ಭಗವದ್ರೂಪಗಳನ್ನು ಹೇಳುತ್ತಾರೆ. ಶಾಂತೀರಮಣ = ಶಾಂತಿನಾಮಕಳಾದ ಲಕ್ಷ್ಮೀದೇವಿಯ ಪತಿಯಾದ ಅನಿರುದ್ಧನು, ನೂರುಒಂದು ಸ್ವರೂಪದಿ =೧೦೧ ಸ್ವರೂಪಗಳಿಂದ ಅನ್ನಮಯವಾದ ಕೋಶಕ್ಕೆ ಅನ್ನಯೆಂಬ ಹೆಸರಿನಿಂದ ಆಧಾರಭೂತನಾಗಿರು

ವನು, ಪ್ರದ್ಯುಮ್ನ = ಪ್ರದ್ಯುಮ್ನ ನಾಮುಕನು, ಐನೂರಮೇಲೆ ಮೂರಧಿಕ ದಶ= ೫೧೩ ರೂಪಗಳಿಂದ, ಪ್ರಾಣಾಖ್ಯ =ಪ್ರಾಣಯೆಂಬ ಹೆಸರಿನಿಂದ ಪ್ರಾಣ ಕೋಶಧಾರಕನಾಗಿರುವನು, ಸಂಕರ್ಷಣ =ಸಂಕರ್ಷಣನು, ಐವತ್ತೈದು= ೫೫ ರೂಪಗಳಿಂದ, ವಿಕಾರಮನದೊಳು =ಚಂಚಲಭೂತವಾದ ಮನಸ್ಸೆಂಬ ಕೋಶಕ್ಕೆ ಆಧಾರನಾಗಿ ಮನಸ್ಸುಯೆಂಬ ಹೆಸರಿನಿಂದ ತೋರುತಿಹನು. ವಿಶ್ವಾಖ್ಯ =ಪ್ರಪಂಚವನ್ನು ಆವರಿಸಿಕೊಂಡಿರುವ ವಾಸುದೇವನು, ನೂರು ಚ ತು ರಾ ಶೀ ತಿ = ೧೮೪ ರೂಪಗಳಿಂದ, ವಿಜ್ಞಾನಕೋಶಾಧಾರಕನಾಗಿ ವಿಜ್ಞಾನಸ್ವರೂಪನಾಗಿರುವನು.

ತಾತ್ಪರ್ಯ— ಶಾಂತೀಪತಿಯಾದ ಅನಿರುದ್ಧನು ಅನೇಕ ಅಗಳು ಗಳಿಂದ ಕೂಡಿದ ಶರೀರಭೂತವಾದ ಅನ್ನದ ಚೀಲದ ರೂಪವಾಗಿ ಅನ್ನವೆನಿಸು ವನು. ಅಂದರೆ ಒಂದೊಂದು ಅಗಳುಗಳನ್ನು ಬೇರೆ ಬೇರೆಯಾಗಿ ತೆಗೆದು ಕೊಂಡರೆ ಅವು ಖಂಡವೆಂದೆನಿಸುವವು. ಹೀಗೆ ಅನೇಕ ಖಂಡಪದಾರ್ಥಗಳು ಕೂಡಿರುವ ರಾಶಿಗೆ ಅಖಂಡವಾಗಿ ಅನ್ನವೆಂದು ಹೆಸರಾಗುವುದು. ಮೇಲಿನ ಪದ್ಯದಲ್ಲಿ ಖಂಡರೂಪವನ್ನು ಹೇಳಿ ಈಗ ಅನ್ನಪ್ರಾಣಯೆಂಬ ಅಖಂಡರೂಪ ಗಳನ್ನು ಹೇಳುತ್ತಾರೆ. ಅನ್ನಯೆಂಬುದನ್ನು ಅಕ್ಷರಸಂಖ್ಯೆ ಮಾಡಿದರೆ ಅ= ೧, ನ್ನ =೧೦, ಬಲದಿಂದ ಎಣಿಸಿದರೆ ೧೦೧ ರೂಪಗಳಾಗುವುವು. ಈ ರೂಪಗಳಿಂದ ಅನಿರುದ್ಧನು ಅನ್ನವೆನಿಸುವನು. ಇದರಂತೆಯೇ ಪ್ರದ್ಯು ಮ್ನನು ಪ್ರಾಣ ಎಂಬುದನ್ನು ಅಕ್ಷರಸಂಖ್ಯೆ ಮಾಡಿದರೆ ಪ್ರ=೩, ಅ=೧, ಣ=೫ ಹೀಗೆ ೫೧೩ ಆಗುವುವು. ಇಷ್ಟು ರೂಪಗಳಿಂದ ಪ್ರಾಣಕೋಶಾಧಾರಕನಾಗಿ ಪ್ರಾಣನೆನಿಸಿರುವನು. ಸಂಕರ್ಷಣನು ಮನುಷ್ಯರಿಗೆ ಕ್ಷಣ ಕ್ಷಣದಲ್ಲಿಯೂ ವಿಕಾರವನ್ನು ಹುಟ್ಟಿಸುತ್ತಿರುವ ಮನೋಕೋಶಕ್ಕೆ ಆಧಾರನಾಗಿ "ಮನ" ಎಂಬ ಶಬ್ದದ ಅಕ್ಷರಸಂಖ್ಯೆ, ಮ =೫, ನ =೫ ಹೀಗೆ ೫೫ ಆಗುವುವು. ೫೫ ರೂಪಗಳಿಂದ ಮನಸ್ಸೆನ್ನಿಸಿಕೊಳ್ಳುವನು. ವಿಶ್ವಾಧಾರನಾದ ವಾಸುದೇವನು ವಿಜ್ಞಾನಕೋಶಾಧಾರಕನಾಗಿ, ವಿ =೪, ಜ್ಞಾ =೮, ನ= ೫ =೫೮೪ ರೂಪ ಗಳಿಂದ ವಿಜ್ಞಾನನೆನ್ನಿಸಿಕೊಳ್ಳುವನು.

**ಮೂರು ಸಾವಿರದರ್ಧ ಶತಮೇ-**
**ಲೀರಧಿಕ ರೂಪಗಳಧರಿಸಿ ಶ-**
**ರೀರದೊಳಗಾನಂದಮಯ ನಾರಾಯಣಾಹ್ವಯನು ।**

**ಈರೆರಡು ಸಾವಿರದ ಮೇಲೆ ಮು-**
**ನ್ನೂರು ಐದು ಸುರೂಪದಿಂದಲಿ**
**ಭಾರತೀಶನೊಳಿಪ್ಪ ನವನೀತಸ್ಥ ಘೃತದಂತೆ ॥ ೧೮ ॥**

ಪದ್ಯಾರ್ಥ— ನಾರಾಯಣಾಹ್ವಯನು = ನಾರಾಯಣ ನಾಮಕನು, ಮೂರುಸಾವಿರದರ್ಧಶತಮೇಲೀರಧಿಕ=೩೦೫೨ ರೂಪಗಳ ಧರಿಸಿ, ಶರೀರ ದೊಳಗೆ ಆನಂದಮಯ=ಆನಂದಮಯ ಕೋಶಾಧಾರಕನಾಗಿ, ಆನಂದಶಬ್ದ ವಾಚ್ಯನಾಗಿರುವನು. ಈರೆರಡು ಸಾವಿರದ ಮೇಲೆ ಮುನ್ನೂರೈದು=ಹೀಗೆ ಅನ್ನಾದಿ ಹೆಸರಿನಿಂದ ಅನಿರುದ್ಧಾದಿ ರೂಪಿಯಾದ ಪರಮಾತ್ಮನು, ೪೩೦೫, ಸುರೂಪಗಳಿಂದ=ಸಮಾಚೀನವಾದ ರೂಪಗಳಿಂದ, ನವನೀತಸ್ಥ=ಬೆಣ್ಣೆಯೊಳ ಗಿನ, ಘೃತದಂತೆ= ತುಪ್ಪದಂತೆ, ಭಾರತೀರಮಣನಾದ ಮುಖ್ಯಪ್ರಾಣ ದೇವ ರಲ್ಲಿ, ಇಪ್ಪ=ಇರುತಿರುವನು.

ತಾತ್ಪರ್ಯ—ಆನಂದ ಎಂಬ ಅಕ್ಷರ ಸಂಖ್ಯೆಯು, ಅ=೨, ನಂ=೫೦, ದ=೩, ಬಲದಿಂದ ಎಣಿಸಿದರೆ ೩೦೫೨ ಆಗುವುವು. ಶ್ರೀ ನಾರಾಯಣನು ಹೀಗೆ ೩೦೫೨ ರೂಪಗಳನ್ನು ಧರಿಸಿ ಶರೀರದೊಳಗೆ ಆನಂದಕೋಶಾಧಾರಕನಾಗಿ ಆನಂದಯೆಂಬ ಹೆಸರಿನಿಂದ ಇರುವನು. ಅದೇ ರೀತಿಯಾಗಿ ಅನಿರುದ್ಧಾದಿ ೫ ರೂಪಿಯಾದ ಪರಮಾತ್ಮನು, ಅನ್ನ=೧೦೧, ಪ್ರಾಣ=೫೧೩, ಮನ=೫೫, ವಿಜ್ಞಾನ=೫೮೪, ಆನಂದ=೩೦೫೨ ಇಷ್ಟು ಒಟ್ಟುಗೂಡಿಸಿದರೆ, ೪೩೦೫ ರೂಪಗಳಾಗುವವು. ಇಷ್ಟು ರೂಪಗಳಿಂದ ಬೆಣ್ಣೆಯೊಳಗಿನ ತುಪ್ಪದಂತೆ ಭಾರತೀರಮಣ ಮುಖ್ಯಪ್ರಾಣನಲ್ಲಿ ಮುಖ್ಯಪ್ರಾಣರೂಪಿಯಾಗಿ ಕಾಣುವನು. ಬೆಣ್ಣೆಯೊಳಗೆ ತುಪ್ಪವಿದ್ದರೂ ತುಪ್ಪವಾಗಿ ಕಾಣದೆ ಕಾಯಿಸಿದರೆ ಮಾತ್ರ ಗೊತ್ತಾಗುವುದು. ಹೀಗೆಯೆ ಪ್ರಾಣದೇವರಲ್ಲಿ ಪರಮಾತ್ಮನಿದ್ದರೂ ಮುಖ್ಯ ಪ್ರಾಣರೂಪಿಯಾಗಿಯೇ ತೋರುತ್ತಿರುವನು.

**ಮೂರಧಿಕ ಐವತ್ತು ಪ್ರಾಣಶ-**
**ರೀರದೊಳಗನಿರುದ್ಧನಿಪ್ಪೈ**
**ನೂರು ಹನ್ನೊಂದಧಿಕಪಾನನೊಳಿಪ್ಪ ಪ್ರದ್ಯುಮ್ನ ।**
**ಮೂರನೇ ವ್ಯಾನನೊಳಗೈದರೆ**
**ನೂರುರೂಪದಿ ಸಂಕರುಷಣೈ-**
**ನೂರುಮೂವತ್ತೈದುದಾನನೊಳಿಪ್ಪ ವಾಯೇಶ ॥ ೧೯ ॥**

ಪದ್ಯಾರ್ಥ :—ಈಗ ಪ್ರಾಣಾಪಾನಾದಿ ಪಂಚಪ್ರಾಣರೊಳಗಿನ ಭಗವದ್ರೂಪಗಳನ್ನು ಹೇಳುತ್ತಾರೆ:—ಅನಿರುದ್ಧ =ಅನಿರುದ್ಧರೂಪಿಯು, ಪ್ರಾಣಶರೀರದೊಳಗೆ= ಪ್ರಾಣನಾಮಕ ವಾಯುವಿನ ಸ್ವರೂಪದೇಹದೊಳಗೆ, ಮೂರಧಿಕ ಐವತ್ತು= ೫೩ ರೂಪಗಳಿಂದ, ಇಪ್ಪ =ಇರುವನು, ಪ್ರದ್ಯುಮ್ನ = ಪ್ರದ್ಯುಮ್ನ ನಾಮಕನು, ಐನೂರಹನ್ನೊಂದಧಿಕ= ೫೧೧ ರೂಪಗಳಿಂದ, ಅಪಾನನೊಳು= ಅಪಾನನಾಮಕ ಪ್ರಾಣಶರೀರದೊಳಗೆ, ಇಪ್ಪ =ಇರುತ್ತಿರುವನು. ಸಂಕರ್ಷಣ = ಸಂಕರ್ಷಣನು, ಮೂರನೆವ್ಯಾನನೊಳಗೆ = ಮೂರನೆ ವ್ಯಾನನಾಮಕ ಪ್ರಾಣಶರೀರದೊಳಗೆ, ಐದರೆನೂರು ೫+೫೦= ೫೫ ರೂಪದಿ = ರೂಪಗಳಿಂದ ಇರುವನು, ಮಾಯೇಶ= ಮಾಯಾಪತಿಯಾದ ವಾಸುದೇವನು, ಐನೂರ ಮೂವತ್ತೈದು= ೫೩೫ ರೂಪಗಳಿಂದ ಉದಾನನೊಳು = ಉದಾನನಾಮಕ ಪ್ರಾಣನೊಳಗೆ, ಇಪ್ಪ= ಇರುತ್ತಿರುವನು

ತಾತ್ಪರ್ಯ:—ಪ್ರಾಣಯೆಂಬ ಅಕ್ಷರಸಂಖ್ಯೆಯು, ಪ್ರಾ= ೩, ಣ= ೫, ಅನಿರುದ್ಧನು ಪ್ರಾಣಿಗಳ ಶರೀರದೊಳಗಿನ ಪಂಚಪ್ರಾಣರಪ್ಪೈಕಿ ಪ್ರಾಣಶರೀರದೊಳಗೆ ಪ್ರಾಣನಾಮಧೇಯದಿಂದ ೫೫ ರೂಪಗಳಿಂದ ವಾಸಿಪನು. ಪ್ರದ್ಯುಮ್ನನು ಅಪಾನನೊಳಗೆ ಸಂಖ್ಯಾಕ್ರಮದಿಂದ= ಅ = ೧, ಪಾ= ೧, ನ= ೫, ಹೀಗೆ ೫೧೧ ರೂಪಗಳಿಂದ ಇರುವನು. ಮೂರನೆಯ ಪ್ರಾಣವಾದ ವ್ಯಾನಶರೀರದಲ್ಲಿ ವ್ಯಾನನೆಂಬ ಹೆಸರಿನಿಂದ. ಸಂಕರ್ಷಣನು ವಾಸಿಪನು. ವಾಸುದೇವನು ಉದಾನನಾಮಕ ಪ್ರಾಣನಲ್ಲಿ ಅಕ್ಷರ ಸಂಖ್ಯಾಕ್ರಮದಿಂದ ಉ= ೫, ದ= ೩, ನ= ೫ ಹೀಗೆ ೫೩೫ ರೂಪಗಳಿಂದ ಇರುತ್ತಿರುವನು || ೧೯ ||

ಮೂಲ ನಾರಾಯಣನು ಐವ
ತ್ತೇಳಧಿಕ ಐನೂರು ರೂಪವ
ತಾಳಿ ಸರ್ವತ್ರದಿ ಸಮಾನನೊಳಿಪ್ಪ ಸರ್ವೇಶ ||
ಲೀಲೆ ಗೈವನು ಸಾವಿರದ ಮೇ
ಲೇಳು ನೂರ್ಹನ್ನೊಂದು ರೂಪವ
ತಾಳಿ ಪಂಚ ಪ್ರಾಣರೊಳು ಲೋಕಗಳ ಸಲಹುವನು || ೨೦ ||

ಪದ್ಯಾರ್ಥ :—ಮೂಲ ನಾರಾಯಣನು= ಮೂಲ ರೂಪಿಯಾದ ಶ್ರೀ ನಾರಾಯಣನು, ಐವತ್ತೇಳಧಿಕ ಐನೂರು ರೂಪವ= ೫೫೭ ರೂಪಗಳನ್ನು,

**ತಾಳಿ**= ಸ್ವೀಕರಿಸಿ, **ಸರ್ವತ್ರದಿ**= ಎಲ್ಲಾ ಪ್ರಾಣಿಗಳಲ್ಲಿಯೂ, **ಸಮಾನನೊಳ್** = ಸಮಾನ ಪ್ರಾಣ ದೇವರ ಒಳಗೆ, **ಇಪ್ಪ**= ಇರುವನು. ಹೀಗೆ, **ಸರ್ವೇಶ**= ಸರ್ವರಿಗೂ ಈಶ್ವರನಾದ ಶ್ರೀ ಪರಮಾತ್ಮನು, **ಪಂಚಪ್ರಾಣರೊಳು**= ಪ್ರಾಣಾ ಪಾನಾದಿ ಪಂಚ ಪ್ರಾಣರಲ್ಲಿ, **ಸಾವಿರದಮೇಲೇಳುನೂರ್ಹನ್ನೊಂದು ರೂಪವ**= ೧೭೧೧ ರೂಪವ, **ತಾಳಿ**= ಸ್ವೀಕರಿಸಿ, **ಲೀಲೆಗೈವನು**= ಅನಿರುದ್ಧಾದಿ ರೂಪ ಗಳಿಂದ ವಿಹರಿಸುತ್ತಿರುವನು, ಮತ್ತು **ಲೋಕಗಳ**= ಸಕಲ ಲೋಕದ ಪ್ರಾಣಿ ಗಳನ್ನು, **ಸಲಹುವನು**= ಸಂರಕ್ಷಿಸುವನು || ೨೦ ||

ತಾತ್ಪರ್ಯ:—ಶ್ರೀಮನ್ನಾರಾಯಣನು ಸಮಾನನಾಮಕ ಪ್ರಾಣ ದೇವರೊಳಗೆ ಸಮಾನವೆಂಬ ಅಕ್ಷರ ಸಂಖ್ಯಾಕ್ರಮದಿಂದ ಸ=೭, ಮಾ=೫, ನ=೫ ಬಲದಿಂದ ಎಣಿಸಿದರೆ ೫೫೭ ಆಗುವುವು. ಇಷ್ಟು ರೂಪಗಳನ್ನು ಧರಿಸಿ ಸಕಲರಲ್ಲಿಯೂ ವಾಸಮಾಡುತ್ತಿರುವನು. ಹೀಗೆ ಸರ್ವೇಶನಾದ ಶ್ರೀ ಪರ ಮಾತ್ಮನು ಅನಿರುದ್ಧಾದಿ ಪಂಚ ರೂಪಗಳಿಂದ ಪ್ರಾಣಾಪಾನಾದಿ ೫ ರೂಪ ಗಳಲ್ಲಿ ಸಂಖ್ಯಾಕ್ರಮದಿಂದ ಪ್ರಾಣನಲ್ಲಿ ೫೩, ಅಪಾನನನಲ್ಲಿ ೫೧೧, ವ್ಯಾನನಲ್ಲಿ ೫೫, ಉದಾನನಲ್ಲಿ ೫೩೫, ಸಮಾನನಲ್ಲಿ ೫೫೭ ಇವೆಲ್ಲವೂ ಒಟ್ಟುಕೂಡಿಸಿದರೆ ೧೭೧೧ ರೂಪಗಳನ್ನು ಧರಿಸಿ ಲೀಲೆಯಿಂದಲೇ ಲೋಕ ಜನರನ್ನು ಪಾಲಿಸು ವನು. "ಪ್ರಾಣಾಪಾನಾ ವಿಡಾಯಾಂಚ ಪಿಂಗಳಾಯಾಂಚ ಸರ್ವಶಃ" ಎಂಬ ಭಾಗವತ ದ್ವಿತೀಯ ತಾತ್ಪರ್ಯ ವಾಕ್ಯಾನುಸಾರವಾಗಿ ಮನುಷ್ಯರು ಗಳ ಇಳಾ ಪಿಂಗಳ ಎಂಬ ಪಾರ್ಶ್ವನಾಡಿಗಳಲ್ಲಿ, ಪ್ರಾಣ, ಅಪಾನನಾಮಕ ವಾಯುದೇವರೂ ಮಧ್ಯಗತನಾದ ಸುಷುಮ್ನಾ ನಾಡಿಯಲ್ಲಿ, ಉದಾನ ವಾಯುದೇವರೂ, ಶರೀರ ಸಂಧಿ ನಾಡಿಗಳಲ್ಲಿ ಸಮಾನ ಪ್ರಾಣದೇವರೂ ಸರ್ವ ಶರೀರಗಳನ್ನು ವ್ಯಾಪಿಸಿಕೊಂಡಿರುವ ನಾಡಿಗಳಲ್ಲಿ ವ್ಯಾನ ಪ್ರಾಣದೇವರೂ ಇರುವರೆಂದು ತಿಳಿಯಬೇಕು || ೨೦ ||

ತ್ರಿನವತಿ ಸುರೂಪಾತ್ಮಕನಿರು
ದ್ಧನು ಸದಾ ಯಜಮಾನನಾಗಿ
ರ್ದನಲ ಯಮ ಸೋಮಾದಿ ಪಿತೃದೇವತೆಗಳಿಗೆ ಯಂತಾ ||
ನೆನಿಪನಾ ಪ್ರದ್ಯುಮ್ನ ಸಂಕರು
**ಷಣ ವಿಭಾಗವ ಮಾಡಿಕೊಂ**
**ಡುಣಿಪ ನಿತ್ಯಾನಂದ ಭೋಜನದಾಯಿ ತುರ್ಯಾಂಹ್ವಾ** || ೨೧ ||

ಪದ್ಯಾರ್ಥ :—ತ್ರಿನವತಿಸುರೂಪಾತ್ಮಕ = ತ್ರಿನವತಿ = ೯೩ ಸ್ವರೂಪ ಗಳಿಂದ ಕೂಡಿದ ಅನಿರುದ್ಧನಾಮಕನಾದ ಶ್ರೀ ಪರಮಾತ್ಮನು, ಸದಾ= ಸರ್ವ ಕಾಲದಲ್ಲಿಯೂ, ಯಜಮಾನನಾಗಿ = ಶ್ರಾದ್ಧಾದಿಗಳಲ್ಲಿ ಕರ್ತೃರೂಪನಾಗಿ ಇದ್ದು, ಕರ್ತೃವಿನೊಳಗಿದ್ದು, ಪ್ರದ್ಯುಮ್ನ = ಪ್ರದ್ಯುಮ್ನ ರೂಪದಿಂದ, ಅನಲ= ಅಗ್ನಿ, ಯಮ, ಸೋಮ = ಚಂದ್ರ ಇವರೇ, ಆದಿ= ಮೊದಲಾದವರೇ ಅಧಿಪತಿಗಳಾಗುಳ್ಳ ಪಿತೃದೇವತೆಗಳಿಗೆ, ಎಂತನು= ಪ್ರೇರಕನೆಂದು, ಎನಿಪ= ಅನಿಸಿಕೊಳ್ಳುವ, ಸಂಕರ್ಷಣ - ಸಂಕರ್ಷಣನು, ವಿಭಾಗವಮಾಡಿ = ಪಿತೃ ಪಿತಾಮಹಾದಿಗಳಿಗೆ, ಭಾಗವನ್ನು ಮಾಡಿ, ಕೊಂಡು = ತಾನು ಸ್ವೀಕರಿಸಿ, ಉಣಿಪ = ಪಿತೃಗಳಿಗೆ ಉಣಿಸುವನು, ತುರ್ಯಾಂಶ = ನಾಲ್ಕನೆಯ ವಾಸು ದೇವನು, ನಿತ್ಯಾನಂದ ಭೋಜನದಾಯಿ = ನಿತ್ಯದಲ್ಲಿಯೂ ಆನಂದಕರವಾದ ಭೋಜನವನ್ನು ಕೊಡುವವನು ॥ ೨೧ ॥

ತಾತ್ಪರ್ಯ:—ಪಿತೃದೇವತೆಗಳಿಗೆ ಅನ್ನರಸ ವಿಭಾಗ ಕ್ರಮವನ್ನು. ಹೇಳುತ್ತಾರೆ :—ಅನಿರುದ್ಧನಾಮಕ ಪರಮಾತ್ಮನು ೯೩ ಸ್ವರೂಪಾತ್ಮಕನು ಅದು ಹೇಗೆಂದರೆ, ವಿಶ್ವೇ ದೇವತೆಗಳು ೧೦ ಮಂದಿಗಳು. ಶ್ರಾದ್ಧಾದಿಗಳಲ್ಲಿ ಸ್ವಾಹಾಕಾರದಿಂದ ಆರಾಧಿತರಾಗುವರು. ಪುರೂರುವ, ಆದ್ರಾ ಮೊದಲಾದ ೫ ಮಂದಿಯರಲ್ಲಿ ಅನಿರುದ್ಧ ರೂಪವೂ ನಾರಾಯಣ ರೂಪವೂ ಇರುವುವು. ಪಿತೃ ಗಣಗಳಲ್ಲಿ ಅಮೂರ್ತ ಗಣಗಳು ೩, ಮೂರ್ತ ಗುಣಗಳು ೪, ಹೀಗೆ ೭ ಗಣಗಳು ಉಂಟು. ಈ ಒಂದೊಂದು ಗಣದಲ್ಲಿಯೂ ಪ್ರದ್ಯುಮ್ನ, ಸಂಕ ರ್ಷಣ, ವಾಸುದೇವ ರೂಪಗಳು ಇರುವವು. ಹೀಗೆ ೭×೩=೨೧ ಆದವು. ಇದಕ್ಕೆ ವಿಶ್ವೇ ದೇವತೆಗಳು ೧೦ ಜನರನ್ನು ಸೇರಿಸಿದರೆ ೩೧ ಜನರಾದರು. ಈ ಒಬ್ಬೊಬ್ಬರಿಗೂ ಯಜಮಾನರೆಂದರೆ ಅಧಿಪತಿಗಳಾದವರು ಅಗ್ನಿ, ಯಮ, ಚಂದ್ರ ಇವರು ಮೂವರು. ಅಂತು ಒಟ್ಟು ೩೧×೩=೯೩ ಸ್ವರೂಪಗಳಿಂದ ಅನಿರುದ್ಧಾದಿ ಪಂಚ ರೂಪವುಳ್ಳ ಪರಮಾತ್ಮನು, ಅನಿರುದ್ಧ ರೂಪದಿಂದ ಶ್ರಾದ್ಧ ಕರ್ತೃವಿನಲ್ಲಿ ಇರುವನು. ವಿಶ್ವೇ ದೇವತೆಗಳಲ್ಲಿ ಅನಿರುದ್ಧ ನಾರಾಯಣ ರೂಪಗಳಿಂದ ಇರುವನು. ಪ್ರದ್ಯುಮ್ನ ಪಿತೃದೇವತೆಗಳಿಗೆ ಅಭಿಮಾನಿಯಾದ, ಅಗ್ನಿ, ಯಮ ಚಂದ್ರಾದಿಗಳಲ್ಲಿದ್ದು ಪಿತೃದೇವತೆಗಳಿಗೆ ಪ್ರೇರಕನಾಗಿರುವನು. ಸಂಕರ್ಷಣನು, "ಅಮೂರ್ತಾನಾಂಚ ಮೂರ್ತಾನಾಂ ಪಿತೃಣಾಂ ದೀಪ್ತ ತೇಜಸಾಂ" ಎಂಬ ಪ್ರಮಾಣದಿಂದ ದೇವತೆಗಳು ಮಾಡುವ ಶ್ರಾದ್ಧಾದಿ

ಗಳನ್ನು ಅಮೂರ್ತ ಪಿತೃಗಣಗಳಿಗೂ, ಮೂರ್ತರಾದ ೪ ಗಣಗಳಿಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರರೆಂಬ ೪ ವರ್ಣದವರು ಮಾಡುವ ಶ್ರಾದ್ಧಗಳನ್ನೂ ವಿಭಾಗಿಸಿ, ಈ ಪಿತೃ ಗಣಗಳಲ್ಲಿಯೂ ವಿಶ್ವೇ ದೇವತೆಗಳಲ್ಲಿಯೂ ಇದ್ದು, ತಾನು ಸ್ವೀಕರಿಸುವನು. ವಾಸುದೇವನು ವಿಶ್ವೇ ದೇವತೆಗಳಿಗೂ, ಪಿತೃ ಗಣ ಗಳಿಗೂ ನಿತ್ಯಾನಂದಕರವಾದ ಭೋಜನಗಳನ್ನು ಮಾಡಿಸಿ ತೃಪ್ತಿಪಡಿಸುವನು.

ಷಣ್ಣವತಿ ನಾಮಕನು ವಸುಮೂ<br>
ಗಣ್ಣ ಭಾಸ್ಕರರೊಳಗೆ ಪ್ರ<br>
ಪನ್ನರನುದಿನದಿ ನಿಷ್ಕಪಟ ಸದ್ಭಕ್ತಿಯಲಿ ಮಾಳ್ಪ ||<br>
ಪುಣ್ಯಕರ್ಮವ ಸ್ವೀಕರಿಸಿ ಕಾ<br>
ರುಣ್ಯಸಾಗರನಾ ಪಿತೃಗಳಿಗ<br>
ಗಣ್ಯ ಸುಖವಿತ್ತವರ ಪೊರೆವನು ಎಲ್ಲ ಕಾಲದಲಿ || ೨೨ ||

ಪದ್ಯಾರ್ಥ :—ಷಣ್ಣವತಿನಾಮಕನು=೯೬ ಸ್ವರೂಪಗಳಿಂದ ಕೂಡಿ ಷಣ್ಣವತಿಯೆಂದು ಕರೆಸಿಕೊಳ್ಳುವ, ಶ್ರೀ ಪರಮಾತ್ಮನು, ವಸುಮೂಗಣ್ಣ ಭಾಸ್ಕರರೊಳಗೆ=ವಸುಗಣ, ರುದ್ರಗಣ, ಸೂರ್ಯಗಣಗಳೊಳಗೆ, ನಿಂತು= ಇದ್ದು, ಪ್ರಪನ್ನರನು=ಶರಣು ಹೊಕ್ಕವರನ್ನು, ಅನುದಿನ=ನಿತ್ಯದಲ್ಲಿಯೂ, ನಿಷ್ಕಪಟ=ಕಪಟವಿಲ್ಲದ, ಸದ್ಭಕ್ತಿಯಲಿ = ಸಮೀಚೀನವಾದ ಭಕ್ತಿಯಿಂ ದಲೂ, ಮಾಳ್ಪ=ಮಾಡುವ, ಪುಣ್ಯಕರ್ಮವ=ಪುಣ್ಯ ಕರ್ಮಗಳನ್ನು, ಸ್ವೀಕ ರಿಸಿ, ಕಾರುಣ್ಯಸಾಗರ=ಕರುಣಾ ಸಮುದ್ರನು, ಆ ಪಿತೃಗಳಿಗೆ, ಅಗಣ್ಯಸುಖ ವಿತ್ತು=ಅಪರಿಮಿತವಾದ ಸುಖವನ್ನು ಕೊಟ್ಟು, ಎಲ್ಲಕಾಲದಲಿ=ಯಾವಾ ಗಲೂ, ಅವರ=ಆ ಪಿತೃಗಳನ್ನು, ಪೊರೆವನು=ಸಂರಕ್ಷಿಸುವನು || ೨೨ ||

ತಾತ್ಪರ್ಯ:—ಪರಮಾತ್ಮನು ಷಣ್ಣವತಿನಾಮಕನು ಎಂದು ಹೇಳಿ ರುವ ಕ್ರಮ ಹೇಗೆಂದರೆ:—

೧ ವರ್ಷದಲ್ಲಿ ೯೬ ಶ್ರಾದ್ಧಗಳು ಬರುವವು. ಅವು ಯಾವುವೆಂದರೆ ಮನ್ವಾದಿಗಳು ೧೪, ಯುಗಾದಿಗಳು ೪, ಭಾದ್ರಪದ ಬಹುಳ ಪ್ರತಿಪದ ಮೊದಲು ಬಹುಳ ಅಮಾವಾಸ್ಯೆಯವರೆವಿಗೂ ಮಹಾಲಯ ಶ್ರಾದ್ಧ ೧೫, ಮೇಷಾದಿ ಸಂಕ್ರಮಣಗಳು ೧೨, ಅಮಾವಾಸ್ಯೆಗಳು ೧೨, ವ್ಯತೀಪಾತಗಳು ೧೩, ವೈಧೃತಿಗಳು ೧೩, ತ್ರಿಸ್ಪೃಷ್ಟಕಗಳು ೧೨, ಮೃತ ತಿಥಿ ೧, ಹೀಗೆ ೯೬ ಶ್ರಾದ್ಧ ಭೋಕ್ತನಾದುದರಿಂದ ಷಣ್ಣವತಿ ಸ್ವರೂಪಿಯೆಂಬ ಹೆಸರು ಪಡೆದಿರು

ವಸು. ಮತ್ತು ಪಿತೃ ಪಿತಾಮಹ, ಪ್ರಪಿತಾಮಹರಲ್ಲಿ ವಸು ರುದ್ರಾದಿತ್ಯ ರೂಪ ಗಳಿಂದ ಇರುವನು ಪ್ರದ್ಯುಮ್ನನು ವಸುರೂಪನಾಗಿಯೂ, ಸಂಕರ್ಷಣನು ರುದ್ರರೂಪನಾಗಿಯೂ, ವಾಸುದೇವನು ಆದಿತ್ಯರೂಪನಾಗಿಯೂ ಇರುವನು. ವಸುಗಳು ೮, ರುದ್ರರು ೧೧, ಆದಿತ್ಯರು ೧೨ ಅಂತು ೩೧, ಹೀಗೆ ೩೧ ರೂಪ ಗಳಿಂದ ವಸುರುದ್ರಾದಿತ್ಯರುಗಳ ದೇಹದೊಳಗೆ ಅಹಂಕಾರ ಜನ್ಯ ಅಂದರೆ ವೈಕಾರಿಕಾಹಂಕಾರ ಜನ್ಯ ಮನಸ್ಸು ತೈಜಸಾಹಂಕಾರ ಜನ್ಯ ಇಂದ್ರಿಯ ಗಳು, ತಾಮಸಾಹಂಕಾರ ಜನ್ಯ ಪಂಚಭೂತಗಳು ಹೀಗೆ ವೈಕಾರಿಕಾದಿ ೩ ವಿಧವಾದ ಅಹಂಕಾರಗಳಲ್ಲಿ ವ್ಯಾಪಿಸಿಕೊಂಡಿರುವುದರಿಂದ ೩೧×೩=೯೩, ಪಿತೃ ಪಿತಾಮಹ ಪ್ರಪಿತಾಮಹ ೩ ಅಂತು ೯೬ ರೂಪಗಳಿಂದ ಪಿತೃಗಳಲ್ಲಿದ್ದು ತನ್ನನ್ನು ಶರಣು ಹೊಂದಿರುವ, ಅಂದರೆ ವಂಶೀಯರು ಪಿತೃಗಳ ಉದ್ದೇಶ ವಾಗಿ ನಿಷ್ಕಪಟದಿಂದಲೂ, ಭಕ್ತಿಯಿಂದಲೂ, ಶ್ರಾದ್ಧಾದಿಗಳನ್ನು ಮಾಡಿ ದರೆ ಅವುಗಳನ್ನು ಸ್ವೀಕರಿಸಿ ಕರುಣಾ ಸಮುದ್ರನಾದ ಹರಿಯು ಆ ಪಿತೃ ಗಳಿಗೆ ಅನಂತ ಸುಖವನ್ನು ಕೊಟ್ಟು, ಸರ್ವಕಾಲದಲ್ಲಿಯೂ ಆ ಪಿತೃಗಳನ್ನೂ, ಶ್ರಾದ್ಧಮಾಡುವವರನ್ನೂ ಸಹ ಸಂರಕ್ಷಣೆ ಮಾಡುವನು. ‖ ೨೨ ‖

ಸುತಪ ಏಕೋತ್ತರಸುಪಂಚಾ
ಶತವರಣ ಕರಣದಿ ಚತುರ್ವಿಂ
ಶತಿ ಸುತತ್ವದಿ ಧಾತುಗಳೊಳಗಿದ್ದುವಿರತಾನಿರುದ್ಧ ।
ಜತನಮಾಳ್ಪನು ಜಗದಿಜೀವ
ಪ್ರತತಿಗಳ ಷಣ್ಣವತಿನಾಮಕ
ಚತುರಮೂರ್ತಿಗಳರ್ಚಿಸುವದರಿಂದ ಬಲ್ಲವರು ‖ ೨೩ ‖

ಪದ್ಯಾರ್ಥ :—ಸುತಪ=ಸೂರ್ಯನೊಳಗಿದ್ದು, ಚೆನ್ನಾಗಿ ಜಗತ್ತಿನಲ್ಲಿ ತಾಪವನ್ನುಂಟುಮಾಡುವವನಾದುದರಿಂದ ಸುತಪಃ ಎಂದು ಹೆಸರುಳ್ಳ ಶ್ರೀ ಪರಮಾತ್ಮನು, ಏಕೋತ್ತರಸುಪಂಚಾಶತ=೫೧ ಸಂಖ್ಯಾಕವಾದ, ವರಣ =ಅಕಾರಾದಿ ಅಕ್ಷರಗಳಲ್ಲಿಯೂ, ಕರಣದಿ=ಮನೋ ಇಂದ್ರಿಯಕ್ಕೆ ಸ್ಥಾನ ಭೂತವಾದ ಹೃದಯ ಕಮಲದ ೧೨ ದಳಗಳಲ್ಲಿಯೂ, ಚತುರವಿಂಶತಿಸುತ ತ್ವದಿ=೨೪ ತತ್ವಗಳಲ್ಲಿಯೂ, ಧಾತುಗಳೊಳು=ಮಜ್ಜಾ ಮಾಂಸಾದಿ ೭ ಧಾತುಗಳಲ್ಲಿಯೂ (ಜೀವನಲ್ಲಿ ತನ್ನ ಸ್ವರೂಪದಿಂದಲೂ) ಇದ್ದು, ಅನಿರುದ್ಧ= ಅನಿರುದ್ಧನಾಮಕ ಶ್ರೀ ಪರಮಾತ್ಮನು, ಅವಿರತ=ಅವಿಚ್ಛಿನ್ನವಾಗಿ, ಜಗದಿ=

ಜಗತ್ತಿನೊಳಗೆ, ಜೀವ ಪ್ರತತಿಗಳ=ಜೀವ ಸಮೂಹಗಳನ್ನು, ಜತನಮಾಳ್ಪನು=ರಕ್ಷಿಸುವನು, ಅದರಿಂದ=ಆ ಕಾರಣದ ದೆಶೆಯಿಂದ, ಷಣ್ಣವತಿ ನಾಮಕ=ಮೇಲೆ ಹೇಳಿದ ಪ್ರಕಾರ ೯೬ ರೂಪಗಳನ್ನು ಧರಿಸಿ ೯೬ ನಾಮಗಳಿಂದ ಕರೆಸಿಕೊಳ್ಳುವ ಅನಿರುದ್ಧನ, ಚತುರಮೂರ್ತಿಗಳ=ಅನಿರುದ್ಧ ಅನಿರುದ್ಧ, ಅನಿರುದ್ಧ ಪ್ರದ್ಯುಮ್ನ, ಅನಿರುದ್ಧ ಸಂಕರ್ಷಣ, ಅನಿರುದ್ಧ ವಾಸುದೇವ ಎಂಬ ಅನಿರುದ್ಧನ ನಾಲ್ಕು ರೂಪಗಳನ್ನು ಬಲ್ಲವರು ಜ್ಞಾನಿಗಳು ಅರ್ಚಿಸುವರು.

ತಾತ್ಪರ್ಯ :—ಮೇಲೆ ಹೇಳಿದ ೯೬ ರೂಪಗಳನ್ನು ಪ್ರಕಾರಾಂತರ ಹೇಳಿ ಅನಿರುದ್ಧನ ವ್ಯಾಪ್ತಿಯನ್ನು ಹೇಳುತ್ತಾರೆ 'ಸಮ್ಯಕ್ತ ಪತೀತಿ ಸುತಪಃ' ಎಂಬ ನಿರ್ವಚನದಿಂದ ಸೂರ್ಯನೊಳಗಿದ್ದು ಜಗತ್ತಿನ ಅಂಧಕಾರವನ್ನು ನಿವೃತ್ತಿಮಾಡುವನಾದುದರಿಂದ ಸುತಪನೆಂದು ಪರಮಾತ್ಮನಿಗೆ ಹೆಸರು. ಅಕಾರ ಮೊದಲು ಕ್ಷಕಾರದವರೆವಿಗೂ ೫೧ ವರ್ಣಗಳು. ವರ್ಣಪ್ರತಿಪಾದ್ಯನಾದ ಪರಮಾತ್ಮನ ರೂಪಗಳು ೫೧. ಅವು ಹೇಗೆಂದರೆ, ಅಜ, ಆನಂದ, ಇಂದ್ರ ಈಶಾನ, ಉಗ್ರ, ಊರ್ಜ, ಋತಂಭರ, ೠಘ, ಌಶ, ೡಜ, ಏಕಾತ್ಮ, ಐರ, ಓಜೋಭೃತ, ಔರಸ, ಅಂತ, ಅರ್ಧಗರ್ಭ, ಕಪಿಲ, ಖಪತಿ, ಗರುಡ, ಘರ್ಮ, ಙಸಾರ, ಚಾರ್ವಂಗ, ಛಂದೋಗಮ್ಯ, ಜನಾರ್ಧನ, ಝೂಟಿತಾರಿ, ಞಮ, ಟಂಕಿ, ಠಕಲ, ಡರಕ, ಢರಿಣ, ಣಾತ್ಮ, ತಾರ, ಥಸ, ದಂಡೀ, ಧನ್ವೀ, ನಮ್ಯ, ಪಾರ, ಫಲೀ, ಬಲೀ, ಭಗ, ಮನು, ಯಜ್ಞ, ರಾಮ, ಲಕ್ಷ್ಮೀಪತಿ, ವರಾಹ, ಶಾಂತ, ಸಂವಿತ್, ಷಡ್ಗುಣ, ಸಾರಾತ್ಮ, ಹಂಸ, ಳಾಳುಕ, ನರಸಿಂಹ ಹೀಗೆ ೫೧ ರೂಪಗಳು, ಅ ಮೊದಲು ಕ್ಷ ವರೆಗೂ ಇರುವ ಅಕ್ಷರ ಪ್ರತಿಪಾದ್ಯನೆಂದು ತಿಳಿಯಬೇಕು. ಹೃದಯ ಕಮಲದಲ್ಲಿರುವ ೧೨ ದಳಗಳಲ್ಲಿ ೧೨ ರೂಪಗಳು ಅವು ಶಕ್ತಿ ಪ್ರತಿಷ್ಠಾ, ಸಂವಿತ್, ಸ್ಫೂರ್ತಿ, ಪ್ರವೃತ್ತಿ, ಪರಾ ವಿದ್ಯಾ, ಮತಿ, ನಿಯತಿ, ಮಾಯಾ, ಕಾಲ, ಪುರುಷ, ಹೀಗೆ ೧೨ ರೂಪಗಳು. ಈ ವಿಷಯಗಳೆಲ್ಲ ತಂತ್ರಸಾರ ಸಂಗ್ರಹದಲ್ಲಿ ವಿಸ್ತಾರವಾಗಿ ಓದಬಹುದು. ಪೃಥಿವ್ಯಾದಿ ಪಂಚಭೂತಗಳು ೫. ತನ್ಮಾತ್ರಾಗುಣಗಳು ೫. ಜ್ಞಾನೇಂದ್ರಿಯಗಳು ೫. ಕರ್ಮೇಂದ್ರಿಯಗಳು ೫. ಚಿತ್ತ, ಬುದ್ಧಿ, ಮನಸ್ಸು, ಅಹಂಕಾರ, ಅಂತು ೨೪ ತತ್ವಗಳು. ಈ ತತ್ವಗಳಲ್ಲಿ ಕೇಶವ ನಾರಾಯಣಾದಿ ೨೪ ರೂಪಗಳು ಇರುವವು. ತ್ವಕ್, ಚರ್ಮ ಮಾಂಸ, ರುಧಿರ ಮೇದಸ್, ಮಜ್ಜಾ,

ಅಸ್ತಿಯೆಂಬ ೭ ಧಾತುಗಳಲ್ಲಿ ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ, ವಾಸುದೇವ ನಾರಾಯಣ, ಹಂಸ, ವಶಿಷ್ಟ ಎಂಬ ೭ ರೂಪಗಳು, ಭಗವದ್ರೂಪ ೧, ಜೀವ ೧, ಅಂತು ಒಟ್ಟು ೯೭. ಹೀಗೆ ಅನಿರುದ್ಧನು ೯೭ ರೂಪಗಳಿಂದ ಸಕಲ ಜೀವರಾಶಿಗಳ ದೇಹದೊಳಗಿದ್ದು ಜೀವರನ್ನು ರಕ್ಷಿಸುವನು. ಜ್ಞಾನಿ ಗಳು ಈ ಅನಿರುದ್ಧನ ಸ್ವರೂಪವನ್ನೇ ಅನಿರುದ್ಧಪ್ರದ್ಯುಮ್ನ ಇತ್ಯಾದಿ ೪ ವಿಭಾಗಮಾಡಿ ಅರ್ಚಿಸುವರು.

ಅಬುಜಜಾಂಡೋದರನು ವಿಪಿನದಿ
ಶಬರಿಯೆಂಜಲನುಂಡು ಗೋಕುಲ
ದಬಲೆಯರನೊಲಿಸಿದನು ಋಷಿಪತ್ನಿಯರು ಕೊಟ್ಟನ್ನ ||
ಸುಭುಜ ತಾ ಭುಂಜಿಸಿದ ಸ್ವರಮಣ
ಕುಭುಜೆ ಗಂಧಕೆ ವಲಿದು ಮುನಿಗಣ
ವಿಬುಧಸೇವಿತ ಬಿಡುವನೇ ನಾವಿತ್ತ ಕರ್ಮಫಲ || ೨೪ ||

ಪದ್ಯಾರ್ಥ:—ಅಬುಜಜಾಂಡೋದರನು=ಬ್ರಹ್ಮಾಂಡವನ್ನು ಉದರ ದಲ್ಲಿ ಧರಿಸಿದ ಶ್ರೀ ಪರಮಾತ್ಮನು, ವಿಪಿನದಿ=ಅಡವಿಯಲ್ಲಿ, ಶಬರಿಯಂಜಲ ನುಂಡ=ಶಬರಿಯೆಂಬ ತಾಪಸಿಯು ಕೊಟ್ಟ ಎಂಜಲು ಫಲಗಳನ್ನು ಭಕ್ಷಿಸಿ ದನು. ಗೋಕುಲದಬಲೆಯರನೊಲಿಸಿದನು=ಗೋಕುಲದಲ್ಲಿರುವ ಗೋಪಿ ಕಾಸ್ತ್ರೀಯರಿಗೆ ಮೆಚ್ಚಿ ತನ್ನ ಅಂಗಸಂಗವನ್ನು ಕೊಟ್ಟನು. ಋಷಿಪತ್ನಿ ಯರು=ಸತ್ರವನ್ನು ಮಾಡುತಿದ್ದ ಬ್ರಾಹ್ಮಣ ಪತ್ನಿಯರು, ಕೊಟ್ಟನ್ನ= ಕೊಟ್ಟ ಅನ್ನವನ್ನು, ಸುಭುಜ=ಮಿಷ್ಟಾನ್ನ ಭುಂಜಿಸುವ ಶ್ರೀ ಪರಮಾತ್ಮನು, ಭುಂಜಿಸಿದ=ಉಂಡನು, ಸ್ವರಮಣ=ಸ್ವರಮಣನಾದರೂ ಕುಭುಜೆ=ತ್ರಿವ ಕ್ರೆಯು, ಕೊಟ್ಟ, ಗಂಧಕೆ=ಗಂಧಕ್ಕೆ, ಒಲಿದ=ಮೆಚ್ಚಿ ಅವಳಿಗೆ ಅಂಗಸಂಗ ವನ್ನು ಕೊಟ್ಟನು (ಹೀಗಿರಲು) ಮುನಿಗಣ ವಿಬುಧಸೇವಿತ=ಋಷಿಗಣಗ ಳಿಂದಲೂ ದೇವಗಣಗಳಿಂದಲೂ ಸೇವಿತನಾದ ಶ್ರೀ ಪರಮಾತ್ಮನು, ನಾವಿತ್ತ ಕರ್ಮಫಲ=ನಾವು ಸಮರ್ಪಿಸುವ ಕರ್ಮಫಲಗಳನ್ನು ಬಿಡುವನೇ?

ತಾತ್ಪರ್ಯ:—ಶ್ರೀ ಪರಮಾತ್ಮನು ಭಕ್ತವಶ್ಯನೆಂದು ಹೇಳುತ್ತಾರೆ:- ಶ್ರೀ ಪರಮಾತ್ಮನು ರಾಮಾವತಾರದಲ್ಲಿ ಸೀತಾಲಕ್ಷ್ಮಣ ಸಮೇತನಾಗಿ ಅಡವಿ ಯಲ್ಲಿ ವಾಸಮಾಡುವಾಗ ಶಬರಿ ಎಂಬ ತಾಪಸಿಯಾದ ವೃದ್ಧಳೊಬ್ಬಳು ರಾಮನ ಬರುವಿಕೆಯನ್ನು ಮೊದಲೇ ತಿಳಿದು ಗಿಡದಿಂದ ಉದುರಿದ ಒಳ್ಳೆಯ

ಫಲಗಳನ್ನು ತೆಗೆದುಕೊಂಡು ಅವನ್ನು ಕಚ್ಚಿ ತಿಂದು ರುಚಿನೋಡಿ ಚೆನ್ನಾಗಿದ್ದರೆ ಇದು ರಾಮನಿಗೆ ಎಂದು ಇಟ್ಟುಬಿಡುತ್ತಿದ್ದಳು. ಹೀಗೆ ರುಚಿನೋಡಿಟ್ಟ ಅನೇಕ ಫಲಗಳನ್ನು ಶ್ರೀರಾಮನು ಬಂದಾಗ ಸಮರ್ಪಿಸಿದಳು. ಶ್ರೀರಾಮನು ಆಕೆಯ ಭಕ್ತಿಗೆ ಮೆಚ್ಚಿ ಆ ಹಣ್ಣುಗಳನ್ನು ಭಕ್ಷಿಸಿದನು. ಸ್ವರಮಣನಾದರೂ ಗೋಕುಲದ ಗೊಲ್ಲತಿಯರಿಗೆ ಕೃಷ್ಣಾವತಾರದಲ್ಲಿ ಮೆಚ್ಚಿದನು. ಋಷಿಗಣಗಳಿಂದಲೂ, ಬ್ರಹ್ಮಾದಿ ದೇವ ಗಣಾರಾಧಿತನಾದರೂ ಋಷಿಪತ್ನಿಯರು ಕೊಟ್ಟ ಸಾಮಾನ್ಯವಾದ ಅನ್ನವನ್ನುಂಡನು. ತ್ರಿವಕ್ರಳಾದ ಸ್ಯೆರಂಧ್ರಿಯು ಗಂಧ ಕೊಡಲು ಪ್ರೀತಿಯಿಂದ ಸ್ವೀಕರಿಸಿ ಅವಳಿಗೆ ಅಂಗಸಂಗವನ್ನಿತ್ತನು. ಹೀಗೆ ಜಾತಿ ಮೊದಲಾದವುಗಳಿಗೆ ದೃಷ್ಟಿಕೊಡದೆ ಭಕ್ತಿಗೆ ಮೆಚ್ಚಿ ಮೇಲೆ ಹೇಳಿದವರಿಗೆ ಒಲಿದಮೇಲೆ ನಾವು ಭಕ್ತಿಯಿಂದ ಕರ್ಮಗಳ ಫಲಗಳನ್ನು ಒಪ್ಪಿಸಿದರೆ ಪರಮಾತ್ಮನು ಕೈಗೊಳ್ಳನೆ? ಸಂಶಯವಿಲ್ಲದೆ ತೆಗೆದು ಕೊಳ್ಳುವನು ॥ ೨೪ ॥

ಗಣನೆ ಇಲ್ಲದ ಪರಮ ಸುಖ ಸದ್
ಗುಣಂಗಳ ಲೇಶಲೇಶಕೆ
ಯಣೆಯನಿಸದು ರಮಾಬ್ಜಭವ ಶಕ್ರಾದಿಗಳ ಸುಖವು ॥
ಉಣುತುಣುತ ಮೈಮರದು ಕೃಷ್ಣಾ
ರ್ಪಣವೆನಲು ಕೈಕೊಂಬ ನರ್ಭಕ
ಜನನಿ ಭೋಜನ ಸಮಯದಲಿ ಕೈವಡ್ಡುವಂದದಲಿ ॥ ೨೫ ॥

ಪದ್ಯಾರ್ಥ :—ಗಣನೆ ಇಲ್ಲದ=ಗಣನಮಾಡಲು ಶಕ್ಯವಲ್ಲದ, ಪರಮ ಸುಖ ಸದ್ಗುಣಂಗಳ=ಪರಮಾನಂದ ಮೊದಲಾದ ಸದ್ಗುಣಗಳ, ಲೇಶಕೇಶಕೆ =ಅನೇಕಾಂಶಗಳ ಪೈಕಿ ಒಂದಂಶಕ್ಕಾದರೂ, ಅಬ್ಜಭವ=ಬ್ರಹ್ಮದೇವರು, ಶಕ್ರಾದಿಗಳ=ಇಂದ್ರಾದಿಗಳು ಇವರುಗಳ ಸುಖವು ಎಣೆಯನಿಸದು=ಸಮವೆಂದು ಹೇಳಲಾಗದು. ಉಣುತುಣುತ=ತಾನು ಭೋಜನಮಾಡುತ್ತಿರುವಾಗ, ಮೈಮರದು=ಭಕ್ತಿಯಿಂದ ಮೈಮರತು, ಆ ತುತ್ತುಗಳನ್ನು, ಕೃಷ್ಣಾರ್ಪಣವೆನಲು=ಕೃಷ್ಣಾರ್ಪಣವೆಂದು ಪರಮಾತ್ಮನಿಗೆ ಅರ್ಪಿಸಲು, ಅರ್ಭಕ=ಬಾಲಕನು, ಜನನಿ ಭೋಜನಸಮಯದಲಿ=ತಾಯಿಯು ಭೋಜನಮಾಡುವ ಸಮಯದಲಿ, ಕೈವಡ್ಡುವಂದದಲಿ=ಕೈನೀಡುವಂತೆ, ಕೈಗೊಂಬನು=ಸ್ವೀಕರಿಸುವನು ॥ ೨೫ ॥

ತಾತ್ಪರ್ಯ :—ಅಪರಿಮಿತವಾದ ಸುಖ ಸ್ವರೂಪನಾದ ಶ್ರೀ ಪರಮಾತ್ಮನ ಸದ್ಗುಣಗಣಗಳ ಲೇಶಾಂಶದಲ್ಲಿ ಒಂದು ಅಂಶಕ್ಕಾದರೂ ರಮಾಬ್ರಹ್ಮಾದಿಗಳ ಸುಖವನ್ನು ಈಡುಗಟ್ಟಲು ಆಗುವುದಿಲ್ಲ. ಇಂತಹ ಪರಮಾತ್ಮನ ಸೇವೆಯೆಂದು ಭಾವಿಸಿ ತಾನು ಭೋಜನವನ್ನು ಮಾಡುತ ಮಾಡುತ್ತ ಮೈ ಮರತು ಭಕ್ತಿಯಿಂದ ತುತ್ತು ತುತ್ತಿಗೂ ಪರಮಾತ್ಮನ ಸ್ಮರಣೆಮಾಡುತ್ತ ಆ ತುತ್ತುಗಳನ್ನು ಪರಮಾತ್ಮನಿಗೆ ಕೃಷ್ಣಾರ್ಪಣವೆಂದು ಸಮರ್ಪಿಸಿದರೆ ತಾಯಿ ಭೋಜನಕ್ಕೆ ಕೂತಿರುವಾಗ ಮಗುವು ಹತ್ತಿರದಲ್ಲಿ ಕೂತು ಎಂಜಲು ಅನ್ನಕ್ಕೆ ಕೈನೀಡುವಂತೆ ನಾವು ಕೊಟ್ಟುದುದನ್ನು ಸ್ವೀಕರಿಸುವನು.

**ಜೀವ ಕೃತಕರ್ಮಗಳ ಬಿಡದೆರ**
**ಮಾವರನು ಸ್ವೀಕರಿಸಿ ಫಲಗಳ**
**ನೀವನಧಿಕಾರಾನುಸಾರದಲವರಿಗನವರತಾ ।**
**ಪಾವಕನು ಸರ್ವಸ್ವಭುಂಜಿಸಿ**
**ತಾ ವಿಕಾರವನೈದ ನೊಮ್ಮೆಗೆ**
**ಪಾವನಕೆ ಪಾವನನೆನಿಪ ಹರಿ ಉಂಬುದೇನರಿದು** ॥ ೨೬ ॥

ಪದ್ಯಾರ್ಥ :—ಜೀವಕೃತಕರ್ಮಗಳ=ಜೀವರು ಮಾಡುವ ಕರ್ಮಗಳನ್ನು ಬಿಡದೆ, ರಮಾವರನು=ಲಕ್ಷ್ಮೀಗಿಂತಲೂ ಉತ್ತಮನಾದ ಪರಮಾತ್ಮನು, ಸ್ವೀಕರಿಸಿ, ಅವರಿಗೆ=ಆ ಜೀವರಿಗೆ, ಅಧಿಕಾರಾನುಸಾರದಲಿ=ಆ ಜೀವರ ಯೋಗ್ಯತಾನುಸಾರವಾಗಿ, ಅನವರತ=ನಿತ್ಯದಲ್ಲಿಯೂ, ಫಲಗಳನೀವ=ಫಲಗಳನ್ನು ಕೊಡಿಸುವನು. ಪಾವಕನು=ಅಗ್ನಿಯು, ಸರ್ವಸ್ವಭುಂಜಿಸಿ=ನೀಚೋಚ್ಚವಿಲ್ಲದೆ ಎಲ್ಲಾ ಪದಾರ್ಥಗಳನ್ನು ಭುಂಜಿಸಿದರೂ, ಒಮ್ಮೆಗೆ=ಒಂದು ಕಾಲದಲ್ಲಿಯೂ, ವಿಕಾರವನೈದನು=ವಿಕಾರವನ್ನು ಹೊಂದುವುದಿಲ್ಲ. ಹೀಗಿರಲು, ಪಾವನಕೆ ಪಾವನನೆನಿಪ=ಪವಿತ್ರ ವಸ್ತುಗಳಾದ ಗಂಗಾದಿಗಳನ್ನು ಪವಿತ್ರತರವನ್ನಾಗಿ ಮಾಡುವವನೆಂದು ಕೀರ್ತಿಯನ್ನು ಪಡೆದಿರುವ, ಹರಿ=ಶ್ರೀ ಪರಮಾತ್ಮನು, ಉಂಬುದೇನರಿದು=ನಾವು ಕೊಡುವ ಕರ್ಮ ಫಲಗಳನ್ನು ಕೈಗೊಳ್ಳುವದೇನಾಶ್ಚರ್ಯ?

ತಾತ್ಪರ್ಯ :—ರಮಾಪತಿಯಾದ (ಅಥವಾ ರಮಾಗಿಂತಲೂ ಶ್ರೇಷ್ಟನಾದ) ಪರಮಾತ್ಮನು ದೇವ ಮನುಷ್ಯಾದಿ ಜೀವರು ಮಾಡುವ ಪುಣ್ಯಪಾಪಾದಿ ಕರ್ಮಗಳನ್ನು ಸರ್ವಕರ್ತ ಭಗವಂತನೆಂದು ಭಾವಿಸಿ, ಅವನಿಗೆ

ಸಮರ್ಪಿಸಲು ಶ್ರೀ ಹರಿಯು ಅವುಗಳನ್ನು ಬಿಡದೆ ಸ್ವೀಕರಿಸಿ, ತನ್ನ ಭಕ್ತರು ಮಾಡಿದ ಪಾಪ ಕರ್ಮಗಳನ್ನು ಭಸ್ಮಮಾಡಿ ಅವರವರು ಮಾಡಿದ ಪುಣ್ಯವನ್ನನುಸರಿಸಿ ಅವರವರ ಯೋಗ್ಯತಾನುಸಾರವಾಗಿ ಅವರವರಿಗೆ ಫಲಗಳನ್ನು ಕೊಡುವನು. ಆದರೆ, ಅಪ್ರಾಕೃತನಾದ ರಮಾ ವಲ್ಲಭನು ಪ್ರಾಕೃತರು ಮಾಡುವ ಪೂಜಾದಿಗಳನ್ನೂ, ಇವರು ಕೊಡುವ ಪ್ರಾಕೃತಾನ್ನಗಳನ್ನೂ ಹೇಗೆ ಸ್ವೀಕರಿಸುವನೆಂದರೆ, ಹೇಳುತ್ತಾರೆ. ಅಗ್ನಿಯು ಸರ್ವವನ್ನೂ ಭಕ್ಷಿಸುವನು. ಆದರೂ ಯಾವ ಪದಾರ್ಥವನ್ನು ಭಕ್ಷಿಸಿದರೂ ವಿಕಾರ ಹೊಂದುವುದಿಲ್ಲ. ದೇವತೆಗಳ ತಾರತಮ್ಯದಲ್ಲಿ 'ವಿಷ್ಣುಃ ಪರಮೋ ಅಗ್ನಿರವಮಃ' ಎಂದು ಅಗ್ನಿಯನ್ನು ಕಡೆಯವನೆಂದು ಹೇಳಿರುವರು ಇಂತಹ ಅಗ್ನಿಯೇ ಸರ್ವಭಕ್ಷಕನಾಗಿ ವಿಕಾರ ಹೊಂದದಿರಲು, ಗಂಗಾದಿ ಪಾವನ ವಸ್ತುಗಳನ್ನು ಪಾವನವನ್ನಾಗಿ ಮಾಡುವ ಪರಮಾತ್ಮನು ಪ್ರಾಕೃತಾನ್ನವನುಂಡು, ಪವಿತ್ರವನ್ನಾಗಿ ಮಾಡುವುದೇನಾಶ್ಚರ್ಯ?

ಕಲುಷಜಿಹ್ವೆಗೆ ಸುಷ್ಟುಭೋಜನ
ಜಲ ಮೊದಲು ವಿಷದೋರುವುದು ನಿ
ಷ್ಕಲುಷಜಿಹ್ವೆಗೆ ಸುರಸತೋರುವುದೆಲ್ಲಕಾಲದಲಿ ।
ಸುಲಲಿತಾಂಗಗೆ ಸಕಲರಸಮಂ
ಗಳವೆನಿಸುತಿಹದನ್ನಮಯ ಕೈ
ಕೊಳದೆಬಿಡುವನೆ ಪೂತನಿಯ ವಿಷಮೊಲೆಯನುಂಡವನು ॥ ೨೭ ॥

ಪದ್ಯಾರ್ಥ :—ಕಲುಷ ಜಿಹ್ವೆಗೆ=ಪಿತ್ತಾದಿಗಳಿಂದ ಕೆಟ್ಟಿರುವ ನಾಲಿಗೆಗೆ, ಜಲಮೊದಲು=ನೀರು ಮೊದಲ್ಗೊಂಡು, ಸುಷ್ಟುಭೋಜನ=ಉತ್ತಮವಾದ ಮಿಷ್ಟಾನ್ನವು, ವಿಷದೋರುವುದು=ಕಹಿಯಾಗಿ ತೋರುವುದು. ನಿಷ್ಕಲುಷ ಜಿಹ್ವೆಗೆ=ದೋಷರಹಿತವಾದ ನಾಲಿಗೆಗೆ, ಸುರಸತೋರುವುದು=ಉತ್ತಮರಸವತ್ತಾಗಿ ತೋರುವುದು, ಎಲ್ಲಕಾಲದಲಿ=ಸರ್ವಕಾಲಗಳಲ್ಲೂ, ಸುಲಲಿತಾಂಗಗೆ=ಸು=ಉತ್ಕೃಷ್ಟವಾದ, ಲಲಿತ = ಸೌಂದರ್ಯದಿಂದ ಕೂಡಿದ, ಅಂಗಗೆ=ಸ್ವರೂಪವುಳ್ಳ ಪರಮಾತ್ಮನಿಗೆ, ಸಕಲರಸ=ಎಲ್ಲಾವಿಧ ರಸಗಳೂ, ಮಂಗಳವೆನಿಸುತಿಹವು=ಮಂಗಳಕರವಾಗಿಯೇ ಇರುವುದು, ಪೂತನಿಯ=ಪೂತನಿಯೆಂಬ ರಾಕ್ಷಸಿಯು, ವಿಷಮೊಲೆಯನು=ವಿಷಪೂರ್ಣವಾದ ಸ್ತನವನ್ನು, ಉಂಡವನು=ಪಾನಮಾಡಿದ, ಅನ್ನಮಯ=ಅನ್ನಮ

ಯನೆಂದು ಹೆಸರುಳ್ಳ ಶ್ರೀ ಪರಮಾತ್ಮನು, ಕೈಕೊಳದೆ= ನಾವು ಕೊಟ್ಟದ್ದನ್ನು ಸ್ವೀಕರಿಸದೆ ಬಿಡುವನೆ=ಎಂದಿಗಾದರೂ ಬಿಟ್ಟಾನೆ?

ತಾತ್ಪರ್ಯ :—ನಾವು ಕೊಡುವ ಪದಾರ್ಥಗಳು ರುಚಿಯಿಲ್ಲದಿದ್ದರೂ ಪರಮಾತ್ಮನಿಗೆ ಅವು ರುಚಿಯಾಗಿಯೇ ಇರುವುವು. ಅದೂ ಭಗವನ್ಮಹಿಮೆ ಯೇ ಹೊರತು ಬೇರೆಯಲ್ಲವೆಂದು ಹೇಳುತ್ತಾರೆ. ಪಿತ್ತ ಹೆಚ್ಚಾಗಿ ನಾಲಿಗೆ ಕೆಟ್ಟಿರುವವರಿಗೆ ಎಂತಹ ಮಿಷ್ಟಾನ್ನವನ್ನು ಕೊಟ್ಟರೂ ನೀರೂ ಸಹ ಕಹಿಯಾ ಗಿಯೇ ತೋರುವುದು. ರೋಗಾದಿಗಳಲ್ಲಿದ್ದವರ ನಾಲಿಗೆಗೆ ರುಚಿಯು ಚೆನ್ನಾಗಿ ತಿಳಿಯದು. ಒಂದೇ ಪದಾರ್ಥವು ಹೇಗೆ ಕೆಲವರಿಗೆ ರುಚಿಯಾಗಿಯೂ, ಕೆಲ ವರಿಗೆ ಕಹಿಯಾಗಿಯೂ ಇರಲು ನಾಲಿಗೆ ಕಾರಣವೇ ಹೊರತು ಪದಾರ್ಥವು ಕಾರಣವಲ್ಲವೋ, ಹಾಗೆ ನಮ್ಮ ದೇಹಾಭಿಮಾನಾದಿ ದೋಷಗಳಿಂದ ನಮಗೆ ರುಚಿಸುವುದಿಲ್ಲ. 'ಯೇದೋಷಾ ಇತರತ್ರಾಪಿತೇಗುಣಾಃ ಪರಮೇಮತಾಃ' ಎಲ್ಲರಿಗೂ ಯಾವುದು ದೋಷವಾಗಿ ಕಾಣುವುದೋ ಅದು ಪರಮಾತ್ಮನಿಗೆ ಗುಣವಾಗಿಯೇ ಇರುವದೆಂಬ ಬ್ರಹ್ಮಸೂತ್ರ ಭಾಷ್ಯಾನುಸಾರವಾಗಿ, ನಮಗೆ ರುಚಿಸದ ಪದಾರ್ಥಗಳು ಪರಮಾತ್ಮನಿಗೆ ರುಚಿಕರವಾಗಿಯೇ ಇರುವವು, ಭಗ ವದ್ಭಕ್ತನಾದ ಒಬ್ಬ ಬ್ರಾಹ್ಮಣನು ತನ್ನ ಮನೆಯಲ್ಲಿ ಶ್ರಾದ್ಧ ಬರಲು, ಬ್ರಾಹ್ಮ ಣರಿಗೆ ಭೋಜನ ಮಾಡಿಸಲು ಯಾವ ಪದಾರ್ಥವೂ ದೊರಕದಿರಲು ಸಾಸಿವೆ ಮುದ್ದೆಯನ್ನು ಬ್ರಾಹ್ಮಣರಿಗೆ ಭೋಜನ ಮಾಡಿಸಿದನು. ಬ್ರಾಹ್ಮಣರಿಗೆ ಆ ಸಾಸಿವೆ ಮುದ್ದೆಯೇ ಅಮೃತದಂತೆ ಇದ್ದಿತೆಂದು ವರಾಹ ಪುರಾಣದ ವಾಕ್ಯ ವಿರುವುದು. ಭಗವದ್ಭಕ್ತರಿಗೇನೇ ಸಾಸಿವೆ ಮುದ್ದೆಯು ಅಮೃತವಾದಮೇಲೆ ಪರಮಾತ್ಮನ ವಿಷಯದಲ್ಲಿ ಹೇಳುವುದೇನು? ವಿದೇಹ ದೇಶವಾಸಿಯಾದ ಶ್ರುತದೇವನೆಂಬ ಬ್ರಾಹ್ಮಣನು ಭಕ್ತಿಯಿಂದ ಕೃಷ್ಣನನ್ನು ಪ್ರಾರ್ಥಿಸುತ್ತಿ ರಲು ಶ್ರೀ ಕೃಷ್ಣನು ಅವನ ಭಕ್ತಿಗೆ ಮೆಚ್ಚಿ ಆ ಬ್ರಾಹ್ಮಣನ ಮನೆಗೆ ಬಂದನು ಆಗ ಬ್ರಾಹ್ಮಣನು ಸಾಸಿವೆ ಮುದ್ದೆಯಿಂದಲೇ ಕೃಷ್ಣನನ್ನು ತೃಪ್ತಿಪಡಿಸಿದನು. ಶ್ರೀ ಕೃಷ್ಣನು ಅದನ್ನು ಅಮೃತದಂತೆ ಸ್ವೀಕರಿಸಿದನೆಂದು ಭಾಗವತ ದಶಮ ಸ್ಕಂಧದಲ್ಲಿ ಹೇಳಿರುವರು. ಅದೂ ಅಂತಿರಲಿ ಪೂತನಿಯೆಂಬ ರಾಕ್ಷಸಿಯು ಶ್ರೀ ಕೃಷ್ಣನನ್ನು ಕೊಲ್ಲುವುದಕ್ಕಾಗಿ ತನ್ನ ಸ್ತನದಲ್ಲಿ ವಿಷವನ್ನು ತುಂಬಿ ಕೊಂಡು ಬಂದು ಶ್ರೀ ಕೃಷ್ಣನಿಗೆ ಪಾನ ಮಾಡಿಸಲು ಅದನ್ನೂ ಕೂಡ ಪರ ಮಾತ್ಮನು ಬಿಡದೆ ಪಾನಮಾಡಿದನು. ಹೀಗಿರುವಾಗ ನಾವು ಕೊಡುವ

ಪದಾರ್ಥಗಳನ್ನು ಎಂದಿಗಾದರೂ ಬಿಡುವನೆ? ಸ್ವೀಕರಿಸದೆ ಬಿಡನೆಂದು ಭಾವವು. || ೨೭ ||

ಪೇಳಲೇನು ಸಮೀರದೇವನು
ಕಾಲಕೂಟವನುಂಡ ಲೋಕವ
ಪಾಲಿಸಿದತದ್ದಾಸನೋರ್ವನು ಅಮೃತನೆನಿಸಿದನು |
ಶ್ರೀಲಕುಮಿವಲ್ಲಭ ಶುಭಾಶುಭ
ಜಾಲಕರ್ಮಗಳುಂಬನುಪಚಯ
ದೇಳಿಗೆಗಳವಗಿಲ್ಲವೆಂದಿಗು ಸ್ವರಸಗಳ ಬಿಟ್ಟು || ೨೮ ||

ಪದ್ಯಾರ್ಥ :—ಸಮೀರದೇವನು = ವಾಯುದೇವರು, ಕಾಲಕೂಟ ವನು = ಕಾಲಕೂಟವೆಂಬ ವಿಷವನ್ನು, ಉಂಡು = ಪಾನಮಾಡಿ, ಲೋಕ = ಲೋಕಗಳನ್ನು, ಪಾಲಿಸಿದನು = ರಕ್ಷಿಸಿದನು. ತದ್ದಾಸನೋರ್ವನು = ಹೀಗೆ ಭಗವದ್ದಾಸರಲ್ಲಿ ಒಬ್ಬರಾದ ವಾಯುದೇವರು, ವಿಷವನ್ನು ಪಾನಮಾಡಿ, ಅಮೃತನೆನಿಸಿದನು = ಅಮೃತನೆಂದು ಕೀರ್ತಿಯನ್ನು ಪಡೆದಿರುವನು, ಪೇಳ ಲೇನು = ಹೀಗಿರಲು ಪರಮಾತ್ಮನ ವಿಷಯದಲ್ಲಿ ಹೇಳುವುದೇನು? ಶ್ರೀ ಲಕು ಮಿವಲ್ಲಭ = ಶ್ರೀ ಲಕ್ಷ್ಮೀಪತಿಯು, ಶುಭಾಶುಭ ಜಾಲಕರ್ಮಗಳ = ಜನರು ಮಾಡುವ ಪುಣ್ಯ ಪಾಪಕರ್ಮ ಸಮೂಹಗಳನ್ನು, ಉಂಬನು = ಜನರಿಗೆ ಫಲಗ ಳನ್ನು ಕೊಡುವುದಕ್ಕಾಗಿ ಸ್ವೀಕರಿಸುವನು. ಅವಗೆ = ಆ ಪರಮಾತ್ಮನಿಗೆ, ಉಪಚಯ = ದೇಹವೃದ್ಧಿಯಾಗಲಿ, ಏಳಿಗೆ = ಹ್ರಾಸವಾಗಲಿ, ಎಂದಿಗೂ ಇಲ್ಲ. ಸ್ವರಸಗಳ ಬಿಟ್ಟು = ಸ್ವರೂಪ ಸಂಬಂಧವಾದ ಆನಂದ ರೂಪವಾದ ರಸವನ್ನು ಬಿಟ್ಟು ಬೇರೆ ಪದಾರ್ಥಗಳನ್ನು ತನ್ನ ವೃದ್ಧಿ ಹ್ರಾಸಕ್ಕಾಗಿ ಸ್ವೀಕರಿಸುವುದಿಲ್ಲ.

ತಾತ್ಪರ್ಯ :—ಜನರು ಪೂಜಿಸಿ ನೈವೇದ್ಯಕೊಡುವುದನ್ನು ಪರಮಾ ತ್ಮನು ಸ್ವೀಕರಿಸುವುದು ಜೀವರ ಉದ್ಧಾರಕ್ಕಾಗಿಯೇ ಹೊರತು ತನ್ನ ದೇಹ ಪುಷ್ಟಿಗೋಸ್ಕರವಲ್ಲವೆಂದು ಹೇಳುತ್ತಾರೆ.

ದೇವದೈತ್ಯರು ಸೇರಿ ಕ್ಷೀರಸಮುದ್ರವನ್ನು ಮಥನಮಾಡಿದಾಗ ಕಾಲ ಕೂಟ ವಿಷವು ಹುಟ್ಟಿ ಜಗತ್ತೆಲ್ಲವನ್ನು ದಹಿಸುತ್ತಿರಲು ದೇವತೆಗಳೆಲ್ಲರೂ ಭೀತರಾಗಿ ರುದ್ರದೇವರನ್ನು ಮೊರೆ ಹೊಕ್ಕು ವಿಷವನ್ನು ಪರಿಹರಿಸಬೇಕೆಂದು ಬೇಡಿಕೊಂಡರು. ಆಗ ರುದ್ರದೇವರು ವಿಷಪ್ರಾಶನ ಮಾಡಲು ಹೊರಟು ಬರುತ್ತಿದ್ದರು. ಆದರೆ ಶ್ರೀ ಪರಮಾತ್ಮನು ಅಮೃತ ಮಥನ ಮಾಡುತ್ತಿದ್ದ

ವರಿಗೆ ಸಹಾಯಭೂತನಾಗಿ ಅಲ್ಲಿಯೇ ಇರಲು ತಾನೇಕೆ ವಿಷವನ್ನು ಪರಿಹರಿಸ ಲಿಲ್ಲವೆಂದರೆ, ಭಾಗವತ ಅಷ್ಟಮಸ್ಕಂಧ ತಾತ್ಪರ್ಯದಲ್ಲಿ 'ರುದ್ರಸ್ಯಯಶ ಸೋರ್ಥಾಯ ಸ್ವಯಂ ವಿಷ್ಣುರ್ವಿಷಂವಿಭುಃ || ನಸಂಜಹ್ರೇ ಸಮರ್ಥೋ ಪಿವಾಯುಂಚೋಚೆ ಪ್ರಶಾಂತಯೇ ||' ಶ್ರೀ ಪರಮಾತ್ಮನಿಗೆ ವಿಷವನ್ನು ಪರಿ ಹಾರಮಾಡುವ ಶಕ್ತಿ ಇದ್ದರೂ ರುದ್ರದೇವರಿಗೆ 'ನೀಲಕಂಠ' ಎಂಬ ಹೆಸ ರನ್ನು ಕೊಡಿಸಬೇಕೆಂತಲೂ, ರುದ್ರದೇವರಿಗೂ ವಾಯುದೇವರಿಗೂ ಇರುವ ತಾರತಮ್ಯವನ್ನು ತೋರಿಸುವ ಉದ್ದೇಶದಿಂದಲೂ ತಾನು ವಿಷವನ್ನು ಪರಿ ಹರಿಸಲಿಲ್ಲ.

ಮೇಲೆ ಹೇಳಿದ ರೀತಿಯಲ್ಲಿ ಭಾರತ ತಾತ್ಪರ್ಯ ನಿರ್ಣಯ ೧೦ ನೆಯ ಅಧ್ಯಾಯ ೧೪ ನೆಯ ಶ್ಲೋಕ 'ಕಲೇಃಸ್ವರೂಪಂತದತೀವದುಃ ಸಹಂವರಾ ದ್ವಿಧಾತುಃ ಸಕಲೈಶ್ಚದುಸ್ಪೃಶಂ | ಕರೇವಿಮಥ್ಯಾಸ್ತಬಲಂ ವಿಧಾಯದದೌಸ ಕಿಂಚಿದ್ಗಿರಿಶಾಯವಾಯುಃ || ಹರೇಃಕರಸ್ಪರ್ಶ ಬಲಾತ್ಸ ಸಂಜ್ಞಾಮವಾಪ ನೀಲೋಸ್ಯಗಲಸ್ತದಾಸೀತ್ ||' ಅಮೃತ ಮಥನಕಾಲದಲ್ಲಿ ಹುಟ್ಟಿದ ವಿಷವು ಎಂತಹುದೆಂದು ಹೇಳುತ್ತಾರೆ :—

ಅದು ಕಲಿಯ ಸ್ವರೂಪಭೂತವಾದುದು, ಯಾರಿಂದಲೂ ತಡೆಯಲಶ ಕ್ಯವಾದುದು. ಬ್ರಹ್ಮದೇವರ ವರದಿಂದ ಮತ್ತೊಬ್ಬರು ಸ್ಪರ್ಶಮಾಡಲು ಯೋಗ್ಯವಲ್ಲದಾಗಿದ್ದಿತು. ಇಂತಹ ವಿಷವನ್ನು ವಾಯುದೇವರು, ಸ್ವಲ್ಪ ಮಾತ್ರ ಕೈಯಲ್ಲಿ ಹಾಕಿಕೊಂಡು ಚೆನ್ನಾಗಿ ಉಜ್ಜಿ ಅದರ ವೇಗವನ್ನು ಕಮ್ಮಿ ಮಾಡಿ ರುದ್ರದೇವರ ಕೈಯಲ್ಲಿ ಹಾಕಿದರು. ರುದ್ರದೇವರು ಅದನ್ನು ಪಾನ ಮಾಡಿದಕೂಡಲೇ ಅದು ಗಂಟಲವಳಗೆ ನಿಂತು ರುದ್ರದೇವರು ಮೂರ್ಛಿತ ರಾಗಿ ಬಿದ್ದುಬಿಟ್ಟರು ಶ್ರೀ ಪರಮಾತ್ಮನು ರುದ್ರದೇವರನ್ನು ಕೈಯಿಂದ ನೇವರಿ ಸಲು ಅವರು ಸಂಜ್ಞೆಯನ್ನು ಹೊಂದಿದರು. ಅವರ ಕಂಠದಲ್ಲಿ ಕಪ್ಪು ಹಾಗೆ ಯೇ ನಿಂತು ನೀಲಕಂಠನೆಂದು ಹೆಸರಾಗಲು ಕಾರಣವಾಯಿತು. 'ಅಥತ ದಾಜ್ಞಾಂ ಪುರತೋನಿಧಾಯ ನಿಧಾಯಪಾತ್ರೇ ತಪನೀಯರೂಪೇ || ಸ್ವ ಯಂತವನಿರ್ಮಥ್ಯ ಬಲೋಪ ಪನ್ನಂಪಪೌಸವಾಯುಸ್ತದುತಾಸ್ಯಜೀರ್ಣಂ||' ತದನಂತರದಲ್ಲಿ ಪರಮಾತ್ಮನ ಆಜ್ಞಾಪ್ರಕಾರ ವಾಯುದೇವರು ಆ ವಿಷವೆಲ್ಲ ವನ್ನು ಬಂಗಾರದ ಪಾತ್ರೆಯಲ್ಲಿ ಹಾಕಿಕೊಂಡು ಮಥನಾದಿಗಳಿಂದ ವೇಗ ವನ್ನು ಕಮ್ಮಿ ಮಾಡದೆ ಹಾಗೆಯೇ ಕುಡಿದುಬಿಟ್ಟರು. ಅದು ಅವರಿಗೆ ಜೀರ್ಣ

ವಾಯಿತು. ಅಲ್ಪ ವಿಷಪಾನದಿಂದ ರುದ್ರದೇವರನ್ನು ಶ್ರೀ ಹರಿಯು ರಕ್ಷಿಸ ಬೇಕಾಯಿತು. ಉಳಿದ ವಿಷವೆಲ್ಲವನ್ನೂ ಪಾನಮಾಡಿದ ವಾಯುದೇವರು ಯಾವ ವಿಧವಾದ ವಿಕಾರವನ್ನೂ ಹೊಂದದೆ ಅಮೃತ ಎಂಬ ಹೆಸರನ್ನು ಪಡೆ ದರು. ಅದೇ ಅಭಿಪ್ರಾಯವನ್ನೇ ದಾಸರಾಯರು ಇಲ್ಲಿ ಉದಹರಿಸಿದರು. ಈ ಪ್ರಕಾರವಾಗಿ ವಾಯುದೇವರು ಕಾಲಕೂಟವೆಂಬ ವಿಷವನ್ನು ಪಾನ ಮಾಡಿ ಲೋಕವನ್ನು ಪಾಲಿಸಿರುವರು. ಪರಮಾತ್ಮನ ದಾಸರಲ್ಲಿ ಒಬ್ಬರಾದ ವಾಯುದೇವರೇ ವಿಷಪ್ರಾಶನದಿಂದ ಅಮೃತನೆಂಬ ಬಿರುದು ಪಡೆದರೆಂದ ಮೇಲೆ ಲಕ್ಷ್ಮೀವಲ್ಲಭನಾದ ಶ್ರೀ ಪರಮಾತ್ಮನ ವಿಷಯದಲ್ಲಿ ಹೇಳುವುದೇನು? ಜನರ ಪುಣ್ಯ ಪಾಪಾದಿ ಕರ್ಮಗಳನ್ನು ತಾನು ಸ್ವೀಕರಿಸಿ ದ್ವೇಷಿಗೆ ದ್ವೇಷ ಫಲ ವನ್ನೂ ಭಕ್ತರಿಗೆ ಪುಣ್ಯ ಫಲಗಳನ್ನೂ ಕೊಡುವನು 'ಶುಭಂಪಿಬತ್ಯಸೌನಿತ್ಯಂ ನಾಶುಭಂಸರಿಃಪಿಬೇತ್' ಎಂಬ ಬ್ರಹ್ಮಸೂತ್ರ ಭಾಷ್ಯದ ವಾಕ್ಯಾನುಸಾರ ವಾಗಿ ಪಾಪಿಗಳ ಪಾಪ ಕರ್ಮಗಳಿಗೆ ತಕ್ಕಂತೆ ಅವರಿಗೆ ಫಲಗಳನ್ನು ಉಣಿಸು ವನು. ಭಕ್ತರು ಮಾಡುವ ಪಾಪ ಕರ್ಮಗಳನ್ನು ಭಸ್ಮಮಾಡುವನು. ಪುಣ್ಯ ಫಲವನ್ನು ತಾನುಂಡು ಅವರಿಗೆ ಉಣಿಸುವನು. ಆದರೆ ನಿಜ ಭಕ್ತರು ಪೂಜಾದಿಗಳನ್ನು ಮಾಡಿ ಷಡ್ರಸೋಪೇತವಾದ ಅನ್ನ ಭಕ್ಷ್ಯ ಫಲಾದಿಗಳನ್ನು ಸಮರ್ಪಿಸಲು ಪರಮಾತ್ಮನು ಅವನ್ನು ಸ್ವೀಕರಿಸುವನು. ಆದರೆ ಇದು ತನ್ನ ಇಂದ್ರಿಯ ಪ್ರೀತಿಗೋಸ್ಕರವಲ್ಲ.

'ಅನ್ನವನ್ನು ಭೋಜನ ಮಾಡಿದುದರಿಂದ ಶರೀರ ಪುಷ್ಟಿಯಾಯಿತು. ದೇಹದಲ್ಲಿ ಬಲ ಬಂದಿತು ಎಂದಾಗಲಿ ಭೋಜನ ಮಾಡದಿದ್ದರೆ ಶರೀರ ಕೃಶ ವಾಯಿತು. ದೇಹದಲ್ಲಿ ದೌರ್ಬಲ್ಯ ಉಂಟಾಯಿತೆಂದಾಗಲಿ ಇಲ್ಲ.' ಯಥಾ ತರೋರ್ಮೂಲ ನಿಷೇಚನೇನ ತೃಪ್ಯಂತಿ ತತ್ಸ್ಕಂಧ ಭುಜೋಪ ಶಾಖಾಃ' ಎಂಬ ಭಾಗವತ ಚತುರ್ಥಸ್ಕಂಧ ವಾಕ್ಯದಂತೆ ವೃಕ್ಷದ ಬೇರಿಗೆ ನೀರೆರೆಯಲು ಹೇಗೆ ಶಾಖೆಗಳೆಲ್ಲವೂ ಪುಷ್ಟಿಯಾಗುವುವೋ ಹಾಗೆಯೇ ನಮಗೆ ಮೂಲಭೂ ತನಾದ ಪರಮಾತ್ಮನು ನಮ್ಮ ದೇಹದಲ್ಲಿದ್ದು ಸ್ವೀಕರಿಸಿದರೇನೆ ನಮಗೆ ತೃಪ್ತಿ ಯಾಗುವುದು. ಆದ್ದರಿಂದ ನಮ್ಮ ಕ್ಷೇಮಕ್ಕಾಗಿಯೇ ಪರಮಾತ್ಮನು ಸ್ವೀಕ ರಿಸುವನು. ತಾನೆ ಅನ್ನಮಯನು. ಅನ್ನಾದಿ ರೂಪಿಯಾಗಿ ತಾನೆ ಇದ್ದು ಅದೇ ಅನ್ನರಸದಿಂದ ತಾನೆ ತೃಪ್ತನಾಗುವ ಪರಮಾತ್ಮನಿಗೆ ನಮ್ಮ ಅನ್ನದಿಂದ

ಆಗುವದೇನು? ಭಾಗವತ ಪ್ರಥಮಸ್ಕಂಧದ ೧೦ ನೆಯ ಅಧ್ಯಾಯ 'ಪ್ರತ್ಯು ದ್ಯಯುಃ ಪ್ರಜಾಸ್ಸರ್ವಾಃ ಭರ್ತೃದರ್ಶನಲಾಲಸಾಃ ॥೪೦॥ ನತ್ವೋಪ್ ನೀತವಲಯೋರವೇರ್ದೀಪಮಿವಾದೃತಾಃ ॥ ಆತ್ಮಾರಾಮಂ ಪೂರ್ಣಕಾಮಂ ನಿಜಲಾಭೇನ ನಿತ್ಯದಾ' ॥೪೧॥ (ಶ್ರೀ ಕೃಷ್ಣನು ಹಸ್ತಿನಾಪುರದಿಂದ ಪ್ರಯಾಣಮಾಡಿ ತಮ್ಮ ದೇಶವಾದ ಆನರ್ತ ದೇಶಕ್ಕೆ ಬಂದು ಶಂಖಧ್ವನಿ ಯನ್ನು ಮಾಡಿದರು ಎಂಬ ಕಥಾಸಂದರ್ಭ)-ಶ್ರೀ ಕೃಷ್ಣನ ಬರುವಿಕೆಯನ್ನು ತಿಳಿದು ಪ್ರಜೆಗಳೆಲ್ಲರೂ ತಮ್ಮ ಸ್ವಾಮಿಯನ್ನು ನೋಡಬೇಕೆಂಬ ಲವಲವಿಕೆ ಯಿಂದ ಬೇಕಾದ ಭಕ್ಷ್ಯ ಭೋಜ್ಯಾದಿ ಪದಾರ್ಥಗಳಿಂದಲೂ, ಫಲಾದಿಗ ಳಿಂದಲೂ ಕೂಡಿ ಕೃಷ್ಣನ ಸಮೀಪಕ್ಕೆ ಬಂದು ನಮಸ್ಕರಿಸಿ, ತಾವು ತಂದು ದನ್ನು ಪರಮಾತ್ಮನಿಗೆ ಸಮರ್ಪಿಸಿದರು. ಶ್ರೀ ಪರಮಾತ್ಮನು ಸ್ವರಮಣನು, ಪೂರ್ಣಕಾಮನು. ತನಗೆ ಯಾವುದು ಬೇಕಾಗುವುದೋ ಆ ವಸ್ತುವಾಗಿ ತಾನೇ ಆಗುವನು. ಹೀಗೆ ತನ್ನಿಂದ ತಾನೆ ಸುಖಪಡುವ ಪರಮಾತ್ಮನಿಗೆ ಇವರು ಕೊಟ್ಟ ಪದಾರ್ಥಗಳಿಂದ ಆಗುವ ಪ್ರಯೋಜನವು ಏನೆಂದು ಹೇಳ ಬೇಕು. ಅಂದರೆ 'ರವೇರ್ದೀಪಮಿವ' ಸೂರ್ಯ ನಮಸ್ಕಾರ ಮಾಡುವವರು ಜಗತ್ಪ್ರಕಾಶನಾದ ಸೂರ್ಯನಿಗೆ ಅಲ್ಲಿ ಒಂದು ದೀಪವನ್ನು ಹಚ್ಚುವರು. ಅದ ರಿಂದ ಸೂರ್ಯನಿಗೆ ಎಷ್ಟು ಪ್ರಯೋಜನವೋ ಅಷ್ಟೇ ಪ್ರಯೋಜನವು. ಇವರು ಕೊಡುವ ಪದಾರ್ಥಗಳಿಂದ ಪರಮಾತ್ಮನಿಗಾಗುವದೆಂದು ಹೇಳಿರುವರು ಆದ್ದ ರಿಂದ ಶ್ರೀ ಪರಮಾತ್ಮನು ಭಕ್ತರನ್ನು ಸಂತೋಷಪಡಿಸುವುದಕ್ಕಾಗಿ ತಂದೆ ತಾಯಿಗಳು ಮಗುವಿನ ಕೈಯಲ್ಲಿ ವೀಳ್ಯವನ್ನು ಕೊಟ್ಟು ಅದನ್ನು ತಮ್ಮ ಬಾಯಲ್ಲಿ ಹಾಕಿಸಿಕೊಂಡು ಮಗುವನ್ನು ಸಂತೋಷಪಡಿಸುವಂತೆ ನಾವು ಕೊಟ್ಟದುದನ್ನು ತಾನು ಸ್ವೀಕರಿಸಿ ನಮ್ಮನ್ನು ಸಂತೋಷಪಡಿಸುವನು ಎಂದು ತಿಳಿಯಬೇಕು.

ಈ ಪರಿಯಲಚ್ಯುತನ ತತ್ತ
ದ್ರೂಪ ತನ್ನಾಮಗಳಸಲೆ ನಾ
ನಾಪದಾರ್ಥದಿ ನೆನನೆನದು ಭುಂಜಿಸುತಲಿರುವಿಷಯ |
ಪ್ರಾಪಕಸ್ಥಾಪಕ ನಿಯಾಮಕ
ವ್ಯಾಪಕನು ಯೆಂದರಿದು ನೀನಿ
ರ್ಲೇಪನಾಗಿರು ಪುಣ್ಯಪಾಪಗಳರ್ಪಿಸವನಡಿಗೆ ॥ ೨೯ ॥

ಪದ್ಯಾರ್ಥ :—ಈ ಪರಿಯಲಿ= ಮೇಲೆ ಹೇಳಿದ ಪ್ರಕಾರವಾಗಿ, ಅಚ್ಯುತನ= ನಾಶರಹಿತನಾದ ಶ್ರೀ ಪರಮಾತ್ಮನ, ತತ್ತದ್ರೂಪ= ಅನಿರುದ್ಧ ಪ್ರದ್ಯುಮ್ನಾದಿ ರೂಪಗಳನ್ನು, ತನ್ನಾಮಗಳ= ಅನ್ನಾದಿಗತ ಅನ್ನಮಯಾದಿ ನಾಮಗಳನ್ನು, ಸಲಿ= ಒಂದು ಗೂಡಿಸಿ, ನಾನಾ ಪದಾರ್ಥದಿ= ಭಕ್ಷ್ಯಭೋಜ್ಯಾದಿ ನಾನಾಬಗೆಯಾದ ಪದಾರ್ಥಗಳಲ್ಲಿ, ನೆನನೆನದು= ಆಯಾ ಪದಾರ್ಥಗತ ಆಯಾರೂಪಗಳನ್ನು ಸ್ಮರಿಸುತ್ತ, ಭುಂಜಿಸುತಲಿರು= ಭೋಜನವನ್ನು ಮಾಡುತ್ತಿರು. ವಿಷಯ= ವಿಷಯ ಸುಖಾದಿಗಳನ್ನು, ಪ್ರಾಪಕ ಜೀವರಿಗೆ ಸಂಬಂಧಪಡಿಸುವವನೂ, ಸ್ಥಾಪಕ= ಜೀವರಲ್ಲಿ ನಿಲ್ಲಿಸುವವನೂ, ನಿಯಾಮಕ= ಪ್ರೇರಕನೂ, ವ್ಯಾಪಕನು= ವಿಷಯಗಳಲ್ಲಿ ವ್ಯಾಪಕನೂ, ಎಂದರಿತು= ಶ್ರೀ ಪರಮಾತ್ಮನೇ ಎಂದು ತಿಳಿದು, ಅವನಡಿಗೆ= ಪರಮಾತ್ಮನ ಪಾದಕಮಲಗಳಿಗೆ, ಪುಣ್ಯ ಪಾಪಗಳ= ನೀಮಾಡಿದ ಪುಣ್ಯಪಾಪಾದಿಗಳನ್ನು, ಅರ್ಪಿಸಿ= ಸಮರ್ಪಣೆಮಾಡಿ, ನೀ= ನೀನು ನಿರ್ಲೇಪನಾಗಿರು.

ತಾತ್ಪರ್ಯ:—ಮೇಲೆ ಹೇಳಿದ ಪ್ರಕಾರ ನಮ್ಮ ದೇಹದೊಳಗೆ ಅನ್ನಮಯನಾಗಿ ಖಂಡರೂಪಿಯಾಗಿಯೂ, ಅನ್ನನಾಗಿ ಅಖಂಡ ರೂಪಿಯಾಗಿಯೂ, ಇದರಂತೆ ಪ್ರಾಣಮಯಾದಿ ರೂಪಗಳಿಂದ ಆಯಾ ನಾಮಗಳಿಂದ ಕೂಡಿ ನಾನಾಪದಾರ್ಥಗಳಲ್ಲಿ ಪರಮಾತ್ಮನಿರುವನೆಂದು ತಿಳಿದು ಭೋಜನವನ್ನು ಮಾಡುತ್ತಿರು. ಎಲೈ ಅಧಿಕಾರಿಯೆ! ವಿಷಯಾದಿ ಭೋಗಗಳನ್ನು ಕೊಡಿಸುವವನೂ, ಸ್ಥಿರಪಡಿಸುವವನೂ, ನಿಯಾಮಕನೂ, ವ್ಯಾಪಕನೂ, ಶ್ರೀ ಪರಮಾತ್ಮನೇ ಆಗಿರುವನು ಎಂದು ತಿಳಿದು ನೀನು ಮಾಡಿದ ಪುಣ್ಯಪಾಪಾದಿ ಎಲ್ಲಾ ಕರ್ಮಗಳನ್ನೂ ಪರಮಾತ್ಮನಿಗೆ ಸಮರ್ಪಿಸು. ಶ್ರೀ ಪರಮಾತ್ಮನು ನಿನ್ನ ಪಾಪಕರ್ಮಗಳನ್ನು ಸುಟ್ಟು ಪುಣ್ಯಕ್ಕೆ ಫಲಗಳನ್ನು ಕೊಡುವನು. ನೀನು ಸಕಲವೂ ಪರಮಾತ್ಮನ ಕರ್ತೃಕವೆಂದು ಭಾವಿಸಿ ನಿರ್ಲೇಪನಾಗಿರು. ಆಗ ನಿನಗೆ ಕರ್ಮ ಲೇಪವಾಗುವುದಿಲ್ಲವೆಂದು ತಾತ್ಪರ್ಯ.

ಐದುಲಕ್ಷೆಂಭತ್ತರೊಂಭ
ತ್ತಾದ ಸಾವಿರದೇಳನೂರರ
ಐದು ರೂಪವಧರಿಸಿ ಭೋಕ್ತೃಗ ಭೋಜ್ಯನೆಂದೆನಿಸಿ ।
ಶ್ರೀಧರಾದುರ್ಗಾರಮಣ ಪಾ
ದಾದಿ ಶಿರಪರ್ಯಂತವ್ಯಾಪಿಸಿ
ಕಾದುಕೊಂಡಿಹ ಸಂತತ ಜಗನ್ನಾಥವಿಠ್ಠಲನು ॥ ೩೦ ॥

|| ಅಂತು ಸಂಧಿ ೪ಕ್ಕೆ ಮಂಗಳಂ ||

ಪದ್ಯಾರ್ಥ :—ಐದುಲಕ್ಷೆಂಭತ್ತೊಂಭತ್ತಾದ ಸಾವಿರದೇಳನೂರರ ಐದುರೂಪವ=೫೯೯೭೨೫ ರೂಪಗಳನ್ನು, ಧರಿಸಿ - ಸ್ವೀಕರಿಸಿ, ಭೋಕ್ತೃಗ ಭೋಜ್ಯನೆಂದೆನಿಸಿ=ಭೋಜನ ಮಾಡುವವನೆಂತಲೂ, ಭೋಜ್ಯವಾದ ಅನ್ನ ಮಯಾದಿ ರೂಪನೆಂತಲೂ, ಯೆನಿಸಿ=ಪ್ರಖ್ಯಾತಿಗೊಂಡು, ಶ್ರೀಧರಾ ದುರ್ಗಾರಮಣ=ಶ್ರೀದೇವಿ, ಭೂದೇವಿ, ದುರ್ಗಾದೇವಿಯರಿಗೆ ಪತಿಯಾದ, ಜಗನ್ನಾಥವಿಠ್ಠಲನು=(ದಾಸರಾಯರ) ಬಿಂಬ ರೂಪಿಯಾದ ಜಗನ್ನಾಥವಿಠ್ಠಲನು, ಪಾದಾದಿ ಶಿರಪರ್ಯಂತ=ಕಾಲುವೊದಲು ತಲೆ ಪರ್ಯಂತ, ವ್ಯಾಪಿಸಿ= ಮನುಷ್ಯಾದಿ ಶರೀರಗಳಲ್ಲಿ ವ್ಯಾಪಿಸಿಕೊಂಡು, ಕಾದುಕೊಂಡಿಹ=ನಮ್ಮನ್ನು ರಕ್ಷಿಸುವನು.

ತಾತ್ಪರ್ಯ :—ಶ್ರೀ ಭೂ ದುರ್ಗಾರಮಣನಾದ, ನಮ್ಮ (ದಾಸರಾಯರ) ಬಿಂಬ ರೂಪಿಯಾದ ಶ್ರೀ ಜಗನ್ನಾಥವಿಠ್ಠಲನು ಅನ್ನಮಯಾದಿ ಖಂಡ ರೂಪಗಳು ೫೮೫೪೦೦. ಅನ್ನಾದಿ ಅಖಂಡರೂಪಗಳು ೪೩೦೫ (೫೯೯೭೨೫) ಹೀಗೆ ಭೋಜನ ಮಾಡುವವರಲ್ಲಿ ಅಂದರೆ ಪಂಚಪ್ರಾಣಗಳಲ್ಲಿಯೂ ತತ್ವಾಭಿಮಾನಿದೇವತೆಗಳಲ್ಲಿಯೂ, ಜೀವರಲ್ಲಿಯೂ, ಸರ್ವೇಂದ್ರಿಯಗಳಲ್ಲಿಯೂ, ವ್ಯಾಪ್ತನಾಗಿರುವನು. ಅಲ್ಲದೆ, ಭೋಜ್ಯ ಪದಾರ್ಥಗಳಲ್ಲಿ ಒಟ್ಟು ೫೯೯೭೨೫ ರೂಪಗಳನ್ನು ಧರಿಸಿಕೊಂಡು ಪ್ರಾಣಿಗಳ ಆ ಪಾದ ಶಿರಃ ಪರ್ಯಂತವಾಗಿ ವ್ಯಾಪಿಸಿಕೊಂಡು ಸರ್ವದಾಪ್ರಾಣಿಗಳನ್ನು ಕಾದುಕೊಂಡಿರುವನು. ಹೀಗೆ ಪರಮಾತ್ಮನನ್ನು ಧ್ಯಾನಿಸಿದರೆ ನಾವು ನಿರ್ಲಿಪ್ತರಾಗಿ ಪರಮಾತ್ಮನನ್ನು ಹೊಂದಬಹುದೆಂದು ತಾತ್ಪರ್ಯ. || ೩೧ ||

ಇಲ್ಲಿಗೆ ೪ನೆಯ ಸಂಧಿಯ ಟಿಪ್ಪಣವು ಮುಗಿದುದು.

## ೫ ನೆಯ ಸಂಧಿ

### ವಿಭೂತಿ ಸಂಧಿ

ಶ್ರೀ ತರುಣಿವಲ್ಲಭನ ಪರಮ ವಿ
ಭೂತಿ ರೂಪವ ಕಂಡಕಂಡ
ಲ್ಲೀತೆರದಿ ಚಿಂತಿಸುತ ಮನದಲಿ ನೋಡು ಸಂಭ್ರಮದಿ |
ನೀತ ಸಾಧಾರಣ ವಿಶೇಷ ಸ

ಜಾತಿ ನೈಜಾಹಿತವು ಸಹಜ ವಿ
ಜಾತಿ ಖಂಡಾಖಂಡ ಬಗೆಗಳನರಿತು ಬುಧರಿಂದ ॥ ೧ ॥

(ಸಂಧಿ ಸೂಚನೆ)

ಪದ್ಯಾರ್ಥ :—ಶ್ರೀ ತರುಣಿವಲ್ಲಭನ=ಶ್ರೀ=ಲಕ್ಷ್ಮೀದೇವಿಯ, (ತರುಣಿ=ಸರ್ವದಾ ಯೌವನಾವಸ್ಥೆಯಲ್ಲಿಯೇ ಇರುವ), ವಲ್ಲಭನ=ಪತಿಯಾದ ಶ್ರೀ ಪರಮಾತ್ಮನ, ಪರಮ ವಿಭೂತಿ ರೂಪವ=ಉತ್ಕೃಷ್ಟವಾದ ವಿಭೂತಿ ರೂಪಗಳನ್ನು, ಕಂಡ ಕಂಡಲ್ಲಿ, ನೀತ, ಸಾಧಾರಣ, ವಿಶೇಷಣ, ಸಜಾತಿ, ನೈಜ, ಅಹಿತ, ಸಹಜ, ವಿಜಾತಿ, ಅಖಂಡ, ಖಂಡಗಳೆಂಬ, ಬಗೆಗಳ=೧೦ ಬಗೆಗಳಾದ ವಿಭೂತಿ ರೂಪಗಳನ್ನು, ಬುಧರಿಂದ=ಜ್ಞಾನಿಗಳಿಂದ, ಅರಿತು=ತಿಳಿದು, ಈ ತೆರದಿ=ಈ ಪ್ರಕಾರವಾಗಿ, ಮನದಲಿ=ಮನಸ್ಸಿನಲ್ಲಿ, ಚಿಂತಿಸುತ=ಧ್ಯಾನಮಾಡುತ್ತ, ಸಂಭ್ರಮದಿ=ಸಂತೋಷದಿಂದ, ನೋಡು.

ತಾತ್ಪರ್ಯ :—ಹಿಂದಿನ ಸಂಧಿಯಲ್ಲಿ ಭೋಕ್ತೃ ಭೋಜ್ಯಾದಿಗಳಲ್ಲಿ ಚಿಂತಿಸಬೇಕಾದ ಭಗವದ್ರೂಪಗಳನ್ನು ಹೇಳಿ ಈ ಸಂಧಿಯಲ್ಲಿ ಪರಮಾತ್ಮನನ್ನು ಧ್ಯಾನಮಾಡಬೇಕಾದರೆ ವಿಶೇಷವಾದ ಭಗವದ್ವಿಭೂತಿ ರೂಪಗಳನ್ನು ತಿಳಿಯುವುದು ಅವಶ್ಯಕವೆಂದು ವಿಭೂತಿ ರೂಪಗಳನ್ನು ಹೇಳುತ್ತಾ ಪ್ರಥಮ ಪದ್ಯದಿಂದ ಈ ಸಂಧಿಯಲ್ಲಿ ಹೇಳುವ ವಿಭೂತಿ ರೂಪಗಳ ಸಾರಾಂಶವನ್ನು ತಿಳಿಸುವರು. ಆದ್ದರಿಂದ ಈ ಪದ್ಯಕ್ಕೆ ಸಂಧಿ ಸೂಚನೆಯೆಂದು ಹೆಸರಾಯಿತು. ಸಂಸಾರ ಬಂಧನದಿಂದ ಮುಕ್ತಿಯಾಗಬೇಕಾದರೆ ವಿಭೂತಿ ರೂಪಗಳನ್ನು ತಿಳಿದೇ ಆಗಬೇಕು. ಈ ವಿಷಯದಲ್ಲಿ ಭಗವದ್ಗೀತೆಯ ಹತ್ತನೆಯ ಅಧ್ಯಾಯದ ಕಡೆಯ ಭಾಗದಲ್ಲಿ ಶ್ರೀ ರಾಘವೇಂದ್ರ ಸ್ವಾಮಿ ಕೃತಗೀತಾವಿವೃತ್ತಿಯೆಂಬ ವ್ಯಾಖ್ಯಾನದಲ್ಲಿ 'ಅಜ್ಞಾತ್ವೈನಂ ಸರ್ವವಿಶೇಷ ಯುಕ್ತಂ ದೇವಂ ಪರಂಕೋವಿಮುಚ್ಯೇತ ಬಂಧನಾತ್' ಇತಿ ಶ್ರುತ್ಯಾ ಪ್ರಾಗುಕ್ತ ಜ್ಞಾನಸ್ಯ ಅವಶ್ಯಕತ್ವಾತ್' ಎಂದು ಹೇಳಿರುವರು. ಹೀಗೆ ಒಂದೊಂದು ವಸ್ತುವಿನಲ್ಲಿಯೂ ವಿಶೇಷ ಯುಕ್ತವಾದುದು, ಭಗವದ್ವಿಭೂತಿ ರೂಪವೆಂದು ತಿಳಿಯದೆ ಯಾವ ಪುರುಷನು ತಾನೆ ಬಂಧಮುಕ್ತನಾದಾನು? ಎಂಬ ಶ್ರುತಿವಾಕ್ಯಾನುಸಾರವಾಗಿ ವಿಭೂತಿ ರೂಪಜ್ಞಾನವು ಅವಶ್ಯಕವು ಎಂದು ಮೇಲಿನ ವಾಕ್ಯದ ಅರ್ಥ. ಆದುದರಿಂದ ದಾಸರಾಯರು ವಿಭೂತಿ ರೂಪಗಳನ್ನು ಈ ಸಂಧಿಯಿಂದ ತಿಳಿಸುತ್ತಾರೆ. ಪ್ರಥಮ ಪದ್ಯದಿಂದ ವಿಭೂತಿ ರೂಪಗಳನ್ನೂ

ತಿಳಿದುಕೊಳ್ಳಬೇಕಾದ ವಿವರವನ್ನೂ ಅವು ಎಷ್ಟು ಪ್ರಕಾರವೆಂಬುವುದನ್ನೂ ವಿಭೂತಿ ಶಬ್ದಾರ್ಥವನ್ನೂ ಸಹ ಸೂಚಿಸುತ್ತಾರೆ:—

ವಿಭೂತಿ ಶಬ್ದಾರ್ಥವೇನು? ಗೀತಾ ಹತ್ತನೆಯ ಅಧ್ಯಾಯದ ೧೬ ನೆಯ ಶ್ಲೋಕದ ಗೀತಾ ವಿವೃತ್ತಿಯೆಂಬ ವ್ಯಾಖ್ಯಾನದಲ್ಲಿ 'ವಿಭೂತಯೋ ನಾಮ ವಿವಿಧತಯಾ ನಾನಾರೂಪತಯಾ, ರಾಮ ಕೃಷ್ಣಾದಿತಯಾ, ಭೂತಾ ನಿರೂಪಾಣಿ || ಯದ್ವಾಯೇಷಾಂ ವಿಷ್ಣು ಸ್ವರೂಪಾಣಾಂ ಸನ್ನಿಧೇರನ್ಯವಸ್ತುಷು ವಿಶಿಷ್ಟತ್ವಂಸ್ವಜಾತೇಃ, ಸ್ಯಾದ್ವಿಭೂತ್ಯಾಖ್ಯಾನಿ ತಾನಿತು' ವಿಭೂತಿ, ವಿವಿಧತಯಾ, ಭೂತಯಃ, ವಿಭೂತಯಃ, ನಾನಾವಿಧವಾಗಿ ರಾಮಕೃಷ್ಣಾದಿ ರೂಪಗಳನ್ನು ಸ್ವೀಕರಿಸುವುದಕ್ಕೆ ವಿಭೂತಿಯೆಂದು ಹೆಸರು. ಅಥವಾ, ಸ್ವಜಾತಿವಸ್ತುಗಳಲ್ಲಿ, ಒಂದು ವಸ್ತುವಿಗೆ ಮಾತ್ರ ಆಧಿಕ್ಯ ಬಂದಿದ್ದರೆ ಅದು ವಿಷ್ಣುವಿನ ವಿಭೂತಿಯೆಂದು ತಿಳಿಯಬೇಕು. 'ಮನುಷ್ಯಾಣಾಂಚ ಭೂಪತಿಃ' ಮನುಷ್ಯರೆಲ್ಲರೂ ಸಮರಾಗಿರಲು ರಾಜರ ಕೈಕೆಳಗೆ ಮಿಗಲಾದವರು ಇರಲು ಕಾರಣವೇನು? 'ನಾವಿಷ್ಣುಃ ಪೃಥಿವೀ ಪತಿಃ' ಎಂಬ ಪ್ರಮಾಣದಿಂದ ವಿಷ್ಣುವಿನ ಅಂಶ ಇದ್ದ ಹೊರತು ಅವನು ಪೃಥಿವೀಪತಿಯಾಗಲಿಲ್ಲವೆಂದು ತಿಳಿಯಬೇಕು. ಹೇಗೆ ಒಂದೇ ಜಾತಿ ವಸ್ತುಗಳಲ್ಲಿ ವಿಶೇಷ ಸಾಮರ್ಥ್ಯ ಕಾಣುವುದನ್ನು ವಿಭೂತಿಯೆಂದು ತಿಳಿಯಬೇಕೆಂದು ಹೇಳಿರುವರು. ಈ ವಿಭೂತಿಗಳಲ್ಲಿ ೧೦ ವಿಧಗಳುಂಟು, ಸಾಮಾನ್ಯವಾಗಿ ಸ್ವಭಾವವಿಂದಲೂ, ಸ್ವಯಂ ವ್ಯಕ್ತವಾಗಿ ಭಗವದ್ರೂಪಗಳೆಂದು ಪ್ರಸಿದ್ಧಿ ಪಡೆದ ಸಾಲಿಗ್ರಾಮಗಳು ನೀತ ವಿಭೂತಿಯೆಂದು ಹೇಳಬೇಕು. ಸಾಧಾರಣ ವಿಭೂತಿಗಳು ಅಂದರೆ ಬ್ರಾಹ್ಮಣಾದಿಗಳಲ್ಲಿಯೂ, ಗೃಹಸ್ಥಾಶ್ರಮಿಗಳಲ್ಲಿಯೂ, ಇರುವ ಭಗದ್ರೂಪಗಳು. ಯತಿಗಳಲ್ಲಿರುವ ಭಗವದ್ರೂಪಗಳನ್ನು ವಿಶೇಷ ವಿಭೂತಿಯೆಂದು ಭಾವಿಸಬೇಕು. 'ದೇವಾನಾಮಸ್ಮಿವಾಸವಃ' ರುದ್ರಾಣಾಂ ಶಂಕರಶ್ಚಾಸ್ಮಿ' ಎಂಬ ಗೀತಾವಾಕ್ಯಗಳಿಂದ ದೇವತೆಗಳಲ್ಲಿ ದೇವೇಂದ್ರನನ್ನೂ ಏಕಾದಶ ರುದ್ರರುಗಳಲ್ಲಿ ಶಂಕರನನ್ನೂ ನನ್ನ ವಿಭೂತಿಯನ್ನಾಗಿ ತಿಳಿಯೆಂದು ಹೇಳಿರುವ ವಿಭೂತಿಗಳು ಸಜಾತಿಯವೆಂದು ತಿಳಿಯಬೇಕು. ಅಂದರೆ ದೇವತೆಗಳೆಲ್ಲರೂ ಒಂದೇ ಜಾತಿಯವರಾದರೂ ಅವರಲ್ಲಿ ಇಂದ್ರನನ್ನೂ, ರುದ್ರರೆಲ್ಲರು ಸಜಾತೀಯರಾದರೂ ಅವರಲ್ಲಿ ಶಂಕರನನ್ನೂ ವಿಭೂತಿಯನ್ನಾಗಿ ಹೇಳಿದುದರಿಂದ ಇದಕ್ಕೆ ಸಜಾತಿ ವಿಭೂತಿಯೆಂದು ಹೆಸರಾಯಿತು. ನೈಜವೆಂಬುದು ಪರಮಾತ್ಮನ

ಸ್ವಾಂಶವಾದ ನೈಜಿಕರೂಪಗಳು-ರಾಮ ಕೃಷ್ಣಾದಿಗಳು. 'ಮೇರುಃ ಶಿಖರಿಣಾಮಹಂ, ಸ್ಥಾವಿರಾಣಾಂ ಹಿಮಾಲಯಃ' ಶಿಖರ ಉಳ್ಳ ಪರ್ವತಗಳಲ್ಲಿ ಮೇರು ಪರ್ವತವನ್ನು ವಿಭೂತಿಯನ್ನಾಗಿ ತಿಳಿಯಬೇಕು. ಸ್ಥಾವಿರ ಪದಾರ್ಥಗಳಲ್ಲಿ ಹಿಮಾಲಯವನ್ನು ವಿಭೂತಿಯನ್ನಾಗಿ ತಿಳಿಯಬೇಕು ಎಂದು ಹೇಳಿರುವರು. ಇಂತಹ ಸ್ಥಾವಿರದಲ್ಲಿ ವಿಭೂತಿಯನ್ನು ಚಿಂತಿಸುವುದಕ್ಕೆ ಆ ಹಿತ ವಿಭೂತಿಯೆಂದು ಭಾವಿಸಬೇಕು. ಚಲಾಚಲ ಪ್ರತಿಮಾದಿಗಳಲ್ಲಿ ಚಿಂತಿಸುವ ವಿಭೂತಿ ರೂಪಗಳಿಗೆ ವಿಜಾತಿ ವಿಭೂತಿ ಅಂದರೆ 'ನಕ್ಷತ್ರಾಣಾಮಹಂಶಶೀ' ಅಶ್ವತ್ಥಃ ಸರ್ವ ವೃಕ್ಷಾಣಾಂ, ಮೃಗಾಣಾಂ ಮೃಗೇಂದ್ರೋಽಹಂ' ಇತ್ಯಾದಿ ವಾಕ್ಯಗಳಲ್ಲಿ ನಕ್ಷತ್ರಗಳಿಗೂ ಚಂದ್ರನಿಗೂ ಪರಸ್ಪರ ವಿಜಾತಿಯೇ ಹೊರತು ಸಜಾತಿ ಅಲ್ಲ. ಹಾಗೆ ವೃಕ್ಷಗಳಲ್ಲಿ ಅಶ್ವತ್ಥವೆಂತಲೂ, ಮೃಗಾದಿಗಳಲ್ಲಿ ಸಿಂಹವೆಂತಲೂ ವಿಭೂತಿಯನ್ನು ಹೇಳಿರುವರು. ವೃಕ್ಷಗಳಲ್ಲಿ ಬೇವು, ಮಾವು ಮೊದಲಾದ ಅನೇಕ ಜಾತಿಗಳ ಪೈಕಿ ಅಶ್ವತ್ಥದಲ್ಲಿ ವಿಭೂತಿಯನ್ನು ಹೇಳಿರುವರು. ಅನೇಕ ಜಾತಿ ಮೃಗಗಳಲ್ಲಿ ಸಿಂಹವನ್ನು ವಿಭೂತಿಯೆಂದು ಹೇಳಿರುವರು. ಹೀಗೆ ಹೇಳಿರುವ ವಿಭೂತಿಗಳಿಗೆ ವಿಜಾತಿ ವಿಭೂತಿಯೆಂದು ಹೆಸರು. ಈ ಪ್ರಕಾರ ಒಂದೊಂದು ಜಾತಿಯಲ್ಲಿಯೂ ಹೆಚ್ಚು ಮಹಿಮೆಯುಳ್ಳ ವಸ್ತುವಿನಲ್ಲಿ ಪ್ರತ್ಯೇಕ ಪ್ರತ್ಯೇಕ ಭಗವದ್ರೂಪವನ್ನು ತಿಳಿಯುವುದೇ ಖಂಡ ವಿಭೂತಿಯೆಂದು ಹೆಸರು. (ಗೀತಾ ೧೦ ನೆಯ ಅಧ್ಯಾಯ ೪೧ ನೆ ಶ್ಲೋಕ). 'ಯದ್ಯದ್ವಿಭೂತಿ ಮತ್ಸತ್ವಂ ಶ್ರೀಮದೂರ್ಜಿತ ಮೇವವಾ | ತತ್ತದೇವಾವಗಚ್ಛತ್ವಂ ಮಮತೇಜೋಂಶ ಸಂಭವಂ'|| ಎಲೈ ಅರ್ಜುನಾ! ಯಾವ ಯಾವ ಪದಾರ್ಥಗಳು ಸಜಾತಿ ವಿಜಾತಿಗಳಲ್ಲಿ, ಐಶ್ವರ್ಯಾದಿಗಳಿಂದಲೂ, ಕಾಂತಿ ಬಲಗಳಿಂದಲೂ ಹೆಚ್ಚಾಗಿ ಕಂಡುಬರುವವೋ ಅವುಗಳೆಲ್ಲಾ ನನ್ನ ತೇಜೋಂಶವೆಂದು ತಿಳಿ' ಎಂದು ಹೇಳಿರುವರು. ಹೀಗೆ ಪ್ರತ್ಯೇಕ ಪ್ರತ್ಯೇಕ ತಿಳಿಯುವುದೇ ಖಂಡ ವಿಭೂತಿಗಳು.

ಅಖಂಡವೆಂದರೆ:—(ಗೀತೆ ಅಧ್ಯಾಯ ೧೦ ಶ್ಲೋಕ ೪೨) 'ಅಥವಾ ಬಹು ನೈತೇನಕಿಂಜ್ಞಾನೇನತವಾರ್ಜುನ | ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ || ೪೨ || ಎಲೈ ಅರ್ಜುನ! ಮೇಲೆ ಹೇಳಿದಂತೆ ಖಂಡರೂಪಗಳನ್ನು ತಿಳಿದು ನಿನಗೆ ಆಗುವುದೇನು? ಮುಖ್ಯವಾದ ಒಂದಂಶವನ್ನು ತಿಳಿ! ನನಗಿರುವ ರೂಪಗಳ ಅನಂತಾಂಶಗಳ ಪೈಕಿ ಒಂದಂಶದಿಂದ

ಈ ಜಗತ್ತಿನ ಎಲ್ಲಾ ಸ್ಥಳಗಳಲ್ಲಿಯೂ ವ್ಯಾಪ್ತನಾಗಿರುವೆನೆಂದು ತಿಳಿ, ಒಂದೇ ಅಂಶದಿಂದ ಸರ್ವತ್ರ ವ್ಯಾಪ್ತರೂಪವನ್ನು ಚಿಂತಿಸುವುದು ಅಖಂಡ ವಿಭೂತಿಯೆಂದು ತಿಳಿಯಬೇಕು. ಹೀಗೆ ೧೦ ಪ್ರಕಾರ ವಿಭೂತಿಗಳನ್ನು ಕಂಡ ಕಂಡಲ್ಲಿ ಸಂಭ್ರಮದಿಂದ ಮನಸ್ಸಿನೊಳಗೆ ತಿಳಿದು ಚಿಂತಿಸುಯೆಂದು ದಾಸ ರಾಯರು ಒಂದೇ ಪದ್ಯದಿಂದ ವಿಭೂತಿಯ ಸಾರವನ್ನೆಲ್ಲಾ ಹೇಳಿರುವರು. ಗೀತೆಯಲ್ಲಾದರೂ ಅರ್ಜುನನಿಗೆ ಕಡೆಯ ಶ್ಲೋಕದಿಂದ 'ಖಂಡರೂಪಗ ಳುಳ್ಳ ವಿಭೂತಿಯನ್ನು ತಿಳಿದು ನಿನಗಾಗುವುದೇನು' ಎಂದು ಅಖಂಡರೂ ಪೋಪಾಸನೆಯನ್ನೇ ತೋರಿಸಿದುದನ್ನು ನೋಡಿದರೆ ಗೀತೆಯಲ್ಲಿ ಹೇಳಿದ ವಿಭೂತಿ ಅಧ್ಯಾಯವೂ ದಾಸರಾಯರು ಹೇಳಿದ ವಿಭೂತಿ ಸಂಧಿಯೂ ಕೂಡ ವ್ಯರ್ಥವೆಂದು ತೋರುತ್ತದೆ.

ಆದರೆ, ಇದಕ್ಕೆ ಪರಿಹಾರವು—ಗೀತಾವಿವೃತ್ತಿಯಲ್ಲಿ "ನತ್ವೈತಜ್ಞಾ ನಾದೇವ ಮೋಕ್ಷ ಸಿದ್ಧೌಪ್ರಾಗುಕ್ತ ಪರಿಚ್ಛಿನ್ನ ವಿಭೂತಿ ರೂಪಾಣಾಂ ಜ್ಞಾ ನಂ ವ್ಯರ್ಥಮಿತಿ ತದುಕ್ತಿ ವ್ಯರ್ಥೇತಿಶಕ್ಯಂ' ಅಜ್ಞಾತ್ವೈನಂ ಇತಿ ಶ್ರುತ್ಯಾಪ್ರಾ ಗುಕ್ತಜ್ಞಾನಸ್ಯಾವಶ್ಯಕತ್ವಾತ್ ॥ ಮಹಾ ಫಲಾಧಿಕಾರಿತ್ವಾತ್ತ್ವೋಭಯಜ್ಞಾ ನಮವಶ್ಯಕಂ । ನವಿಶೇಷಜ್ಞಾನಮಾತ್ರೇಣ ಅಲಮಿತಿಕ್ವೈತೇನಜ್ಞಾತೇನ ಕಿಮಿತಿಭಾವೇನ ತವೇತ್ಯುಕ್ತಂ' ಈಗ ಹೇಳಿದ ಅಖಂಡ ರೂಪೋ ಪಾಸನೆ ಯಿಂದಲೇ ಮೋಕ್ಷಪ್ರಾಪ್ತಿಯು ಸಿದ್ಧವಾದರೆ ಮೇಲೆ ಹೇಳಿದ ಖಂಡ ರೂಪೋಪಾಸನೆಯಿಂದೇನು? ಈ ವರೆವಿಗೂ ಹೇಳಿದ ವಿಭೂತಿ ಅಧ್ಯಾಯವು ವ್ಯರ್ಥವಾಯಿತೆಂದು ಶಂಕಾ ಮಾಡಬಾರದು. 'ಅಜ್ಞಾತ್ವೈನಂ' ಎಂಬ ಶ್ರುತಿಯಲ್ಲಿ ಖಂಡ ರೂಪೋಪಾಸನೆ ಮಾಡಿದ ಹೊರತು ಮುಕ್ತಿಯಾಗುವು ದಿಲ್ಲವೆಂದು ಹೇಳಿರುವರು. ಆದುದರಿಂದ ಖಂಡ ರೂಪೋಪಾಸನೆಯೂ ಅವಶ್ಯಕವೇ. ನೀನು ಮಹಾ ಫಲಾಧಿಕಾರಿಯಾದುದರಿಂದ ನಿನಗೆ ಖಂಡಾ ಖಂಡ ರೂಪಗಳೆರಡರ ಜ್ಞಾನವೂ ಆವಶ್ಯಕವೆಂದು ಹೇಳಿದುದೇಹೊರತು ಆಜ್ಞಾನ ಅನಾವಶ್ಯವೆಂಬ ಅರ್ಥದಿಂದ ಹೇಳಲಿಲ್ಲ' ಎಂಬುದು ಶ್ರೀ ಕೃಷ್ಣನ ಅಭಿಪ್ರಾಯವೆಂದು ಮೇಲಿನ ವಾಕ್ಯದ ಅರ್ಥ. ಆದ್ದರಿಂದ ಉತ್ತಮಾಧಿ ಕಾರಿಗಳಿಗೆ ಖಂಡಾಖಂಡ ರೂಪಗಳೆರಡರ ಜ್ಞಾನವು ಆವಶ್ಯಕವೆಂತಲೂ ಸಾಮಾನ್ಯಾಧಿಕಾರಿಗಳಿಗೆ ಖಂಡರೂಪೋಪಾಸನೆ ಒಂದಾದರೂ ಅತ್ಯಾವಶ್ಯಕ ವೆಂತಲೂ ಭಾಪಿಸಿ ೧೦ ವಿಧಸ್ಥಾನಗಳಲ್ಲಿ ತುಂಬಿರುವ ಭಗವದ್ವಿಭೂತಿಯನ್ನು

ಚಿಂತಿಸೆಂದು ಮೊದಲಿನ ಪದ್ಯದಿಂದ ಹೇಳಿ ಮುಂದಿನ ಪದ್ಯಗಳಿಂದ ಖಂಡ ರೂಪಗಳನ್ನೂ ತೋರಿಸುತ್ತಾರೆ. || ೧ ||

ಜಲಧರಾಗಸದೊಳಗೆ ಚರಿಸುವ
ಹಲವು ಜೀವರ ನಿರ್ಮಿಸಿಹನದ
ರೊಳು ಸಜಾತಿ ವಿಜಾತಿ ಸಾಧಾರಣ ವಿಶೇಷಗಳ |
ತಿಳಿದುತತ್ತ ಸ್ಥಾನದೊಳುವೆ
ಗ್ಗಳಿಸಿ ಹಬ್ಬಿದ ಮನದಿಪೂಜಿಸು
ತಲವ ವ್ಯಾಪ್ತನ ರೂಪಗಳ ನೋಡುತಲಿ ಹಿಗ್ಗುವದು || ೨ ||

ಪದ್ಯಾರ್ಥ :—ಜಲಧರಾಗಸದೊಳಗೆ= ಜಲ= ನೀರೊಳಗೂ, ಧರ= ಭೂಮಿಯೊಳಗೂ ಆಗಸದೊಳಗೆ= ಆಕಾಶದೊಳಗೂ, ಚರಿಸುವ= ಸಂಚಾರ ಮಾಡುವ. ಹಲವು ಜೀವರ= ನಾನಾವಿಧ ಜೀವರಾಶಿಗಳನ್ನು, ನಿರ್ಮಿಸಿಹನು =ಸೃಷ್ಟಿಮಾಡಿರುವನು. ಅದರೊಳಗೆ, ಸಜಾತಿ, ವಿಜಾತಿ, ಸಾಧಾರಣ ವಿಶೇಷಗಳನ್ನು ತಿಳಿದು ತತ್ತತ್ಸ್ಥಾನದೊಳು (ಸಜಾತಿಯಾದ ಮನುಷ್ಯರಲ್ಲಿನ ಭೂಪತಿಯನ್ನೂ ವಿಜಾತಿಯವಾದ ಮೃಗಗಳಲ್ಲಿ ಸಿಂಹದಲ್ಲಿಯೂ ಅತಿಥಿ ಅಭ್ಯಾಗತ ಮೊದಲಾದ ಸಾಧಾರಣ ಜನರಲ್ಲಿ ಯತಿ ಮೊದಲಾದ ವಿಶೇಷರೂಪಗಳಲ್ಲಿಯೂ ಹೀಗೆ ಆಯಾ ಸ್ಥಾನಗಳಲ್ಲಿ, ವೆಗ್ಗಳಿಸಿ= ಹೆಚ್ಚಾಗಿ, ಹಬ್ಬಿದ= ವ್ಯಾಪಿಸಿಕೊಂಡಿರುವ, ಅಲವ ವ್ಯಾಪ್ತನ= ಸರ್ವತ್ರ ವ್ಯಾಪ್ತನಾದ ಶ್ರೀ ಪರಮಾತ್ಮನ, ರೂಪಗಳ= ರೂಪಗಳನ್ನು, ಮನದಿ=ಮನಸ್ಸಿನಲ್ಲಿ, ಪೂಜಿಸು. ನೋಡುತಲಿ= ಸಾಧಾರಣ ವಿಶೇಷ ಸಜಾತಿ ವಿಜಾತಿ ವಸ್ತುಗಳಲ್ಲಿ ವಿಭೂತಿ ರೂಪಗಳನ್ನು ಕಾಣುತ, ಹಿಗ್ಗುವದು= ಸಂತೋಷಪಡಬೇಕು.

ತಾತ್ಪರ್ಯ :—ನೀರೊಳಗೂ, ಭೂಮಿ ಅದರ ಕೆಳಗಿನ ಲೋಕಗಳಲ್ಲಿಯೂ ಆಕಾಶ, ಅದರ ಮೇಲಿನ ಸ್ವರ್ಗಾದಿ ಲೋಕಗಳಲ್ಲಿಯೂ ಸಂಚರಿಸುವ ಸಕಲ ಪ್ರಾಣಿಗಳನ್ನು ಶ್ರೀ ಪರಮಾತ್ಮನು ಸೃಷ್ಟಿಸಿರುವನು. ಇವುಗಳಲ್ಲಿ ಸಜಾತಿ ವಿಜಾತಿ ವಿಭೂತಿಗಳನ್ನು ತಿಳಿಯಬೇಕು. (ಸಜಾತಿ ವಿಜಾತಿ, ಸಾಧಾರಣ, ವಿಶೇಷಗಳಿಗೆ ಅರ್ಥವು ಮೇಲಿನ ಪದ್ಯದ ವ್ಯಾಖ್ಯಾನದಲ್ಲಿ ಬರೆದಿರುತ್ತೆ) ಈ ಪ್ರಕಾರ ಆಯಾವಸ್ತುಗಳಲ್ಲಿ ಉತ್ತಮವಾದುದು ಯಾವುದೋ ಅದರಲ್ಲಿ ಭಗವಂತನ ವಿಭೂತಿಯಿದೆಯೆಂದು ತಿಳಿದು ಮನಸ್ಸಿನಲ್ಲಿ ಪೂಜಿಸಬೇಕು. ವಿಭೂತಿಯೆಂದರೆ ಗೀತೆಯಲ್ಲಿ ಹೇಳಿದ ಸ್ಥಳದಲ್ಲಿ ಮಾತ್ರವೆ ಎಂದು

ಭಾವಿಸಬಾರದು ಎಂಬ ಅಭಿಪ್ರಾಯದಿಂದಲಿ ದಾಸರಾಯರು 'ವೆಗ್ಗಳಿಸಿ ಹಬ್ಬಿದ' ಅಂದರು. ನಮ್ಮ ಮನಸ್ಸಿನಲ್ಲಿ ನಾವೆಯೋಚಿಸಿ ಅಲ್ಲಲ್ಲಿನ ವಿಭೂತಿಯನ್ನು ಚಿಂತಿಸಬೇಕು. ಗೀತೆಯಲ್ಲಿ ಹೇಳಿದಷ್ಟೆ ಅಲ್ಲದೆ ಸಾಧಾರಣವಿಭೂತಿಗಳನ್ನು ನಾವಾಗಿಯೇ ಚಿಂತಿಸಬಹುದು. ಸಾಧಾರಣ ಒಂದುವರ್ಷ ಎರಡು ವರ್ಷದ ಮಕ್ಕಳು ಆಟವಾಡುತ್ತಿದ್ದರೆ ನೋಡುವವರಿಗೆ ಮುದ್ದಾಗಿ ಕಾಣುವುದು. ಶ್ರೀ ಪರಮಾತ್ಮನು ಅಲ್ಲಿ ಆ ಮಕ್ಕಳರೂಪದಿಂದ ಆಟವಾಡುತ್ತಾನೆಂದು ಭಾವಿಸಿ ಸಜಾತಿ ಸಾಧಾರಣ ವಿಭೂತಿಯನ್ನು ತಿಳಿಯಬೇಕು. ಆ ಮಕ್ಕಳ ಪೈಕಿ ಯಾವ ಮಗುವು ಎಲ್ಲವುಗಳಿಗಿಂತಲೂ ಹೆಚ್ಚಿನ ಆಟಪಾಟಗಳನ್ನಾಡುವುದು ಮತ್ತು ಮನುಷ್ಯಾದಿಗಳಲ್ಲಿ ಸಾಮಾನ್ಯ ಮನುಷ್ಯರಿಂದ ಆಗದ ಅಸಾಧ್ಯಕಾರ್ಯವನ್ನು ಒಬ್ಬನು ಮಾಡಿದರೆ ಅಲ್ಲಿ ಸಜಾತಿಯ ವಿಶೇಷ ವಿಭೂತಿ ರೂಪವನ್ನು ತಿಳಿಯಬೇಕು. ಅಲವವ್ಯಾಪ್ತಿ ಅಂದರೆ ಸ್ವಲ್ಪವಲ್ಲದೆ ಬಹು ಸ್ಥಳಗಳಲ್ಲಿ ವ್ಯಾಪಿಸಿಕೊಂಡಿರುವ ಎಂದರ್ಥ. ಇಂತಹ ಭಗವದ್ರೂಪಗಳನ್ನು ನೋಡಿ ಸಂತೋಷಪಡಬೇಕು. || ೨ ||

ಪ್ರತಿಮಸಾಲಗ್ರಾಮ ಗೋಭ್ಯಾ
ಗತ ಅತಿಥಿ ಶ್ರೀ ತುಲಸಿಪಿಪ್ಪಲ
ಯತಿವನಸ್ಥ ಗೃಹಸ್ಥವಟು ಯಜಮಾನ ಸ್ವಪರಜನ |
ಪೃಥಿವಿಜಲ ಶಿಖಿಪವನ ತಾರಾ
ಪಥನವಗ್ರಹ ಯೋಗ ಕರ್ಣಭ
ತಿಥಿಸಿತಾಸಿತಪಕ್ಷಸಂಕ್ರಮಣವನಧಿಷ್ಠಾನ || ೩ ||

ಪದ್ಯಾರ್ಥ :—ಪ್ರತಿಮ=ಚಲಾಚಲ ಪ್ರತಿಮೆಗಳು, ಸಾಲಗ್ರಾಮಗಳು, ಗೋ=ಗೋವುಗಳು, ಅಭ್ಯಾಗತ=ಮನೆಗೆ ಬಂದವರು, ಅತಿಥಿ=ವೈಶ್ವದೇವಕಾಲಕ್ಕೆ ಮನೆಗೆ ಬಂದ ಅಪರಿಚಿತನು, ಶ್ರೀ ತುಳಸಿ, ಪಿಪ್ಪಲ=ಅಶ್ವತ್ಥವೃಕ್ಷ, ಯತಿ, ವನಸ್ಥ=ವಾನಪ್ರಸ್ಥಾಶ್ರಮಿ, ಗೃಹಸ್ಥ=ಗೃಹಸ್ಥಾಶ್ರಮಿ, ವಟು=ಬ್ರಹ್ಮಚಾರಿ, ಯಜಮಾನ=ಅಧಿಪತಿ, ಸ್ವಪರಜನ=ತನ್ನವರು ಪರಜನರು, ಪೃಥಿವಿ=ಭೂಮಿ, ಜಲ=ನೀರು, ಶಿಖಿ=ಅಗ್ನಿ, ಪವನ=ವಾಯು, ತಾರಾಪಥ=ಆಕಾಶ, ನವಗ್ರಹ=ನವಗ್ರಹಗಳು, ಯೋಗ, ಕರ್ಣ, ಭ=ನಕ್ಷತ್ರಗಳು, ತಿಥಿ, ಸಿತಾಸಿತಪಕ್ಷ=ಶುಕ್ಲಪಕ್ಷ, ಕೃಷ್ಣಪಕ್ಷ, ಸಂಕ್ರಮಣ=ಮೇಷಾದಿ ಸಂಕ್ರಮಣಗಳು, ಅವನ=ಶ್ರೀ ಪರಮಾತ್ಮನ, ಅಧಿಷ್ಠಾನ=ಸನ್ನಿಧಾನ ಸ್ಥಳಗಳು. || ೨ ||

ತಾತ್ಪರ್ಯ :—ಪರಮಾತ್ಮನ ವಿಭೂತಿಯುನ್ನು ತಿಳಿಯುವುದಕ್ಕಾಗಿ, ಅವನ ಅಧಿಷ್ಠಾನಗಳಲ್ಲಿ ನೀತ, ಸಾಧಾರಣ, ಸಜಾತಿ ಮೊದಲಾದ ರೂಪ ಗಳನ್ನು ಹೇಳುತ್ತಾರೆ :—

ಸ್ವಯಂವ್ಯಕ್ತ ಪ್ರತಿಮೆಗಳು ಸಾಲಿಗ್ರಾಮಗಳು ಇವುಗಳಲ್ಲಿ ನೀತ ವಾದ ವಿಭೂತಿಯನ್ನು ಚಿಂತಿಸಬೇಕು. ಗೋವುಗಳು, ಮೊದಲೇ ಮನೆಗೆ ಬಂದಿರುವವರು ಅಭ್ಯಾಗತರು, ವೈಶ್ವದೇವಕಾಲಕ್ಕೆ ಸರಿಯಾಗಿ ಮನೆಗೆ ಭೋಜನಕ್ಕೆ ಬಂದವರು ಅತಿಥಿ, ಶ್ರೀ ತುಳಸಿ ಅಶ್ವತ್ಥ, ಯತಿ ವಾನಪ್ರಸ್ಥ ಇವರಲ್ಲಿ ವಿಶೇಷ ವಿಭೂತಿಯನ್ನು ತಿಳಿಯಬೇಕು. ಗೃಹಸ್ಥ, ಬ್ರಹ್ಮಚಾರಿ, ಪ್ರಭು, ಸ್ವಪರಜನ ಅಂದರೆ, ತಮ್ಮವರು, ಪರಕೀಯರು ಇವರೆಲ್ಲರೂ ಭಗವ ದ್ಭಕ್ತರಾಗಿದ್ದರೆ ಅವರಲ್ಲಿ ಸಾಧಾರಣ ವಿಭೂತಿಯನ್ನು ತಿಳಿಯಬೇಕು. ಅಥವಾ ಮೇಲೆ ಹೇಳಿದ ವನಸ್ಥ, ಗೃಹಸ್ಥ, ಬ್ರಹ್ಮಚಾರಿ, ಯಜಮಾನ ಇವರೆಲ್ಲರೂ ಸ್ವಪರರಾಗಿರಬೇಕೆಂದು ಒಂದರ್ಥ, 'ಸ್ವತಂತ್ರ್ಯಾತ್ಸ್ವಃ ಪರಮಾತ್ಮಾತಸ್ಮಿನ್ಪರಾಃ, ಆಸಕ್ತಾಃ, ಸ್ವಪರಾಃ,' ಸ್ವ ಅಂದರೆ ಸ್ವತಂತ್ರ ನಾದ ಪರಮಾತ್ಮನಿಗೆ ಹೆಸರು. ಅವನಲ್ಲಿ ಆಸಕ್ತರಾಗಿರುವವರು ಸ್ವಪ ರರು. ಮೇಲೆ ಹೇಳಿದವರೆಲ್ಲರೂ ಭಗವತ್ಪರರಾಗಿದ್ದರೆ ಅವರನ್ನು ಪೂಜಿಸಬೇ ಕೆಂದರ್ಥ. ಪೃಥ್ವಿ, ಜಲ ಅಗ್ನಿ, ವಾಯು, ಆಕಾರ, ಇವುಗಳಲ್ಲಿ ಪರಮಾ ತ್ಮನ ಅಖಂಡ ವಿಭೂತಿಯನ್ನು ಚಿಂತಿಸಬೇಕು. 'ಪೃಥ್ವೀ ವಾಯುರಾಕಾಶ ಆಪೋಜ್ಯೋತಿರಹಂಮಹಾ' ಎಂಬ (ಭಾಗವತ ಏಕಾದಶಸ್ಕಂಧ ೧೬ನೆ ಅಧ್ಯಾಯ ೩೭ನೆಯ ಶ್ಲೋಕ) ವಾಕ್ಯದಿಂದ ಪೃಥಿವ್ಯಾದಿ ಪಂಚ ಭೂತಗ ಳಲ್ಲಿ ಅಖಂಡವಾಗಿ ತನ್ನನ್ನು ತಿಳಿ ಎಂದು ಉದ್ಧವನಿಗೆ ಶ್ರೀಕೃಷ್ಣನು ಹೇಳಿ ರುವನು. ಇವುಗಳಲ್ಲಿಯೇ ಖಂಡರೂಪಗಳನ್ನು ತಿಳಿಯಬೇಕು. (ಭಾಗ-ಅ- ೩೭ ಶ್ಲೋ ೩೩) 'ಗಂಧಮಾತ್ರಮಹಂಭುವಃ|| ಅಪಾಂರಸಶ್ಚ ಪರಮಃ ಶಬ್ದೋ ಹಂನಭಸಃಪರಃ' ಇತ್ಯಾದಿ ವಾಕ್ಯಗಳಿಂದ, ಭೂಮಿಯಲ್ಲಿ ಗಂಧ ಗುಣ, ಉದಕದಲ್ಲಿ ರಸ, ತೇಜಸ್ಸಿನಲ್ಲಿ-ರೂಪ, ವಾಯುವಿನಲ್ಲಿ ಸ್ಪರ್ಶ, ಆಕಾಶದಲ್ಲಿ ಶಬ್ದ ಇಂತಹ ವಸ್ತುಗಳಲ್ಲಿ ಖಂಡರೂಪಗಳನ್ನು ಚಿಂತಿಸಬೇಕು. ನವಗ್ರಹ ಗಳಲ್ಲಿ ವಿಜಾತೀಯ ಖಂಡ ರೂಪಗಳನ್ನು ಚಿಂತಿಸುವುದಲ್ಲದೆ ನವಗ್ರಹ ವಿಜಾತೀಯರಲ್ಲಿ ಸೂರ್ಯನಲ್ಲಿ ಅಖಂಡ ರೂಪವನ್ನು ಚಿಂತಿಸಬೇಕು. ಯೋಗಗಳಲ್ಲಿ ಸಜಾತೀಯ ಖಂಡರೂಪಗಳನ್ನು ವ್ಯತೀಪಾತದಲ್ಲಿ ಅಖಂಡ

ರೂಪವನ್ನು ಚಿಂತಿಸಬೇಕು. ಹೀಗೆ ಕರಣಗಳಲ್ಲಿ ಖಂಡರೂಪ, ವಿಷ್ಕಂಭದಲ್ಲಿ ಅಖಂಡರೂಪ, ನಕ್ಷತ್ರಗಳಲ್ಲಿ ಖಂಡರೂಪ, ಅಭಿಜಿತ್ ಎಂಬ ನಕ್ಷತ್ರದಲ್ಲಿ ಅಖಂಡರೂಪವನ್ನು ಚಿಂತಿಸಬೇಕು. 'ನಕ್ಷತ್ರಾಣಾಂ ತಥಾಬಿಜಿತ್' ಎಂಬ ಭಾಗವತ ವಾಕ್ಯವು ಇದಕ್ಕೆ ಆಧಾರವು. ತಿಥಿಗಳಲ್ಲಿ ಖಂಡರೂಪವನ್ನು, ದ್ವಾದಶಿಯಲ್ಲಿ ಅಖಂಡರೂಪವನ್ನು ಚಿಂತಿಸಬೇಕು. ಶುಕ್ಲಪಕ್ಷ ಕೃಷ್ಣಪಕ್ಷಗಳಲ್ಲಿ ಖಂಡ ರೂಪಗಳನ್ನೂ, ಪೌರ್ಣಿಮಾ ಅಮಾವಾಸ್ಯೆಗಳಲ್ಲಿ ಅಖಂಡರೂಪಗಳನ್ನೂ ಚಿಂತಿಸಬೇಕು. ಮೇಷಾದಿ ೧೨ ಸಂಕ್ರಮಣಗಳಲ್ಲಿ ಖಂಡರೂಪಗಳನ್ನೂ ಮಕರ ಕಟಕ ಸಂಕ್ರಾಂತಿಗಳಲ್ಲಿ ಅಖಂಡರೂಪವನ್ನೂ ಚಿಂತಿಸಬೇಕು.

ಕಾದ ಕಾಂಚನದೊಳಗೆ ಶೋಭಿತ
ಮಾದಿತೇಯಾಸ್ಯನ ತೆರದಿ ಲಕು
ಮಿಾಧವನು ಪ್ರತಿದಿನದಿ ಶಾಲಿಗ್ರಾಮದೊಳಗಿಪ್ಪ ।
ಐದು ಸಾವಿರ ಮೇಲೆ ಮೂವ
ತ್ತ್ರೈದಧಿಕ ವೈನುರು ರೂಪದಿ
ಭೂಧರಗಳಭಿಮಾನಿ ದಿವಿಜರೊಳಿಪ್ಪನನವರತ ॥ ೪ ॥

ಪದ್ಯಾರ್ಥ :—ಕಾದ ಕಾಂಚನದೊಳಗೆ = ಚೆನ್ನಾಗಿ ಕಾಯಿಸಿದ ಬಂಗಾರದೊಳಗೆ, ಶೋಭಿತ = ಪ್ರಕಾಶಿಸುತ್ತಿರುವ, ಆದಿತೇಯ = ಅದಿತಿ ಮಕ್ಕಳಾದ ದೇವತೆಗಳಿಗೆ, ಆಸ್ಯನತೆರದಿ = ಮುಖಸ್ಥಾನೀಯನಾದ ಅಗ್ನಿಯಂತೆ, ಲಕುಮಿಾಧವನು = ಲಕ್ಷ್ಮೀಪತಿಯು, ಪ್ರತಿದಿನವು = ಸರ್ವಕಾಲಗಳಲ್ಲಿಯೂ, ಐದು ಸಾವಿರ ಮೇಲೆ ಮೂವತ್ತ್ರೈದಧಿಕ ವೈನೂರು ರೂಪದಿ = ೫೫೩೫ ರೂಪಗಳಿಂದ, ಶಾಲಿಗ್ರಾಮದೊಳಗೆ, ಇಪ್ಪ = ಇರುವನು. ಮತ್ತು, ಅನವರತ = ಅವಿಚ್ಛಿನ್ನವಾಗಿ, ಭೂಧರಗಳಭಿಮಾನಿ = ಪರ್ವತಾಭಿಮಾನಿಗಳಾದ, ದಿವಿಜರೊಳು = ಗರುಡ, ಶೇಷ, ರುದ್ರರೊಳು, ಇಪ್ಪನು = ಇರುತ್ತಿರುವನು.

ತಾತ್ಪರ್ಯ: —ಮೇಲಿನ ಪದ್ಯದಲ್ಲಿ ಹೇಳಿದ ಪ್ರತಿಮಾ, ಸಾಲಿಗ್ರಾಮ ಮೊದಲಾದವುಗಳಲ್ಲಿರುವ ಭಗವದ್ವಿಭೂತಿಗಳನ್ನು ವಿಸ್ತಾರಮಾಡುತ್ತಾರೆ. ಈ ಪದ್ಯದಲ್ಲಿ ಸಾಲಿಗ್ರಾಮದಲ್ಲಿನ ಭಗವದ್ರೂಪಗಳನ್ನು ಹೇಳುತ್ತಾರೆ:—

ಸಾಮಾನ್ಯವಾಗಿ ಬಂಗಾರವು ಬಹು ಶೋಭಿತವಾದುದು. ಅಗ್ನಿಯಿಂದ ಚೆನ್ನಾಗಿ ಕಾಯಿಸಿರುವಾಗ ಆ ಚಿನ್ನದಲ್ಲಿ ಶೋಭಿಸುವ ಅಗ್ನಿಯಂತೆ ಸಾಲಿ

ಗ್ರಾಮದಲ್ಲಿ, ಪರಮಾತ್ಮನ ವಿಭೂತಿಯನ್ನು ತಿಳಿಯಬೇಕು. ಆದಿತೇಯಾಸ್ಯ ಎಂದು ಅಗ್ನಿಗೆ ಹೆಸರು. ಹೇಗೆಂದರೆ, ಇಂದ್ರಾದಿಗಳಿಗೆ ಕೊಡಬೇಕಾದ ಆಹುತಿಯನ್ನು ಅಗ್ನಿಯಲ್ಲಿ ಕೊಡುವರು. ದೇವತೆಗಳು ಅಗ್ನಿಯ ದ್ವಾರ ಆಹುತಿಯನ್ನು ಸ್ವೀಕರಿಸುವರು. ಆದ್ದರಿಂದ ಅಗ್ನಿಗೆ ದೇವಮುಖನೆಂದು ಹೆಸರಾಯಿತು. ಶಾಲಿಗ್ರಾಮ ಎಂಬ ಅಕ್ಷರ ಸಂಖ್ಯೆಯು, ಶಾ=೫, ಲಿ=೩, ಗ್+ರಾ=೩+೨=೫, ಮ=೫ ಇವು ಬಲದಿಂದ ಎಣಿಸಿದರೆ ೫೫೩೫ ಆಗುವವು. ಇಷ್ಟು ರೂಪಗಳಿಂದ ಶಾಲಿಗ್ರಾಮಗಳಲ್ಲಿ ಅವಿಚ್ಛಿನ್ನವಾಗಿರುವನು. ಇದರಂತೆ ಪರ್ವತಾಭಿಮಾನಿಗಳಾದ ಗರುಡ, ಶೇಷ, ರುದ್ರರಲ್ಲಿಯೂ ಕೂಡ ಇರುವನು. ಪರ್ವತಾಭಿಮಾನಿಗಳು, ಗರುಡಾದಿಗಳೆಂಬ ವಿಷಯದಲ್ಲಿ, (ಭಾರತ ತಾತ್ಪರ್ಯ ನಿರ್ಣಯ ೨೦ ನೆಯ ಅಧ್ಯಾಯ ಶ್ಲೋಕ ೬೮) " ಶಿವಂ ಶೇಷಂ ಗರುಡಂಚಾಹಸಾಪಿ ಪರಾವನಾತ್ಪರ್ವತ ನಾಮಧೇಯಾ್" ಎಂಬ ವಾಕ್ಯವೇ ಪ್ರಮಾಣವಾಗಿರುವುದು. ಹೀಗೆ ನೀತ ವಿಭೂತಿಗಳನ್ನು ಶಾಲಿಗ್ರಾಮಗಳಲ್ಲಿಯೂ, ವಿಶೇಷ ವಿಭೂತಿಗಳನ್ನು ಗರುಡಾದಿಗಳಲ್ಲಿಯೂ ಚಿಂತಿಸಬೇಕು.

ಶ್ರೀರಮಣ ಪ್ರತಿಮೆಗಳೊಳಗೆ ಹದಿ
ಮೂರಧಿಕವಾಗಿಪ್ಪ ಮೇಲೈ
ನೂರು ರೂಪವ ಧರಿಸಿ ಇಪ್ಪನು ತಾ ಹಿತಾಚಲದಿ ||
ದಾರು ಮಥನವಗ್ನಿಯೆ ಪಾವಕ
ತೋರುವಂತೆ ಪ್ರತೀಕ ಸುರರೊಳು
ತೋರುತಿಪ್ಪನು ತತ್ತದಾಕಾರದಲಿ ನೋಳ್ಪರಿಗೆ || ೫ ||

ಪದ್ಯಾರ್ಥ :—ಶ್ರೀರಮಣ=ಲಕ್ಷ್ಮೀಪತಿಯು, ಪ್ರತಿಮೆಗಳೊಳಗೆ=ಬಂಗಾರ ಬೆಳ್ಳಿ ಮೊದಲಾದ ಲೋಹಗಳಿಂದ ರಚಿಸಿದ ಸಣ್ಣದಾದ ಬಲಪ್ರತಿಮಾಗಳಲ್ಲಿ, ಹದಿಮೂರಧಿಕವಾಗಿ=೧೩ ಹೆಚ್ಚಾದ, ಐನೂರು ರೂಪವ=೫೦೦ ರೂಪಗಳ ಧರಿಸಿ, ಒಟ್ಟು ೫೧೩ ರೂಪಗಳನ್ನು ಸ್ವೀಕರಿಸಿ, ಇಪ್ಪ=ಇರುವನು. ಆಹಿತಾಚಲದಿ=ದೇವಾಲಯಗಳಲ್ಲಿ, ಅಷ್ಟಬಂಧನಮಾಡಿ ಸ್ಥಾಪಿಸಿರುವ ಅಚಲ ಪ್ರತಿಮೆಯಲ್ಲಿ, ಇಪ್ಪನು=ಯಾವಾಗಲು ಇರುವನು. ಚಲ ಪ್ರತಿಮೆಗಳಲ್ಲಿರುವ ಭಗವದ್ವಿಭೂತಿಗಳಿಗೆ ಆಹಿತ ವಿಭೂತಿಯೆಂದು ಹೆಸರು. ದಾರುಮಥನವಗ್ನಿಯೆ=ಅರಣಿಕಾಷ್ಠವನ್ನು ಮಥನಮಾಡಲು, ಪಾವಕತೋರುವಂತೆ=ಅಗ್ನಿ ಕಾಣುವಂತೆ, ಪ್ರತೀಕ ಸುರರೊಳು=ಪ್ರತಿಮಾರೂಪಗಳಾದ

ದೇವರುಗಳೊಳಗೆ, ತದಾಕಾರದಲ್ಲಿ=ಪ್ರತಿಮಾ ದೇವತಾಕಾರದಲ್ಲಿ, ನೋಳ್ಪರಿಗೆ=ನೋಡುವ ಜನರಿಗೆ, ತೋರುತಿಪ್ಪನು=ಕಾಣುತ್ತಿರುವನು || ೫ ||

ತಾತ್ಪರ್ಯ:—ಮನೆಗಳಲ್ಲಿಪೂಜಿಸಲರ್ಹವಾದ ಪಂಚಲೋಹಪ್ರತಿಮೆಗಳಲ್ಲಿ ಪ್ರತಿಮಾ ಎಂಬ ಅಕ್ಷರ ಸಂಖ್ಯೆಯಿಂದ ಪ್+ರ=೧+೨=೩, ತಿ=೧, ಮ=೫, ಬಲದಿಂದ ನೋಡಿದರೆ ೫೧೩ ಆಗುವವು ಇಷ್ಟು ರೂಪಗಳಿಂದ ಸಹಜ ವಿಭೂತಿಯೆಂದೆನಿಸಿ ಯಾವಾಗಲು ವಾಸವಾಗಿರುವನು. ಆಹಿತ ವಿಭೂತಿಯೆಂದು ಆಚಲವಾಗಿ ದೇವಾಲಯದಲ್ಲಿ ಸ್ಥಾಪಿತವಾದ ಶಿಲಾ ಪ್ರತಿಮಾದಿಗಳಲ್ಲಿಯೂ ಅಷ್ಟೇ ವಿಭೂತಿ ರೂಪದಿಂದ ವಾಸಮಾಡುವನು. ಯಾಗಶಾಲೆಯಲ್ಲಿ ಅಗ್ನಿ ಹುಟ್ಟುವುದಕ್ಕಾಗಿ ಇಟ್ಟಿರುವ ಅರಣಿ ಎಂಬ ಕಾಷ್ಠವನ್ನು ಮತ್ತೊಂದು ಕಾಷ್ಠದಿಂದ ಮಥನಮಾಡಿದರೆ ಅಗ್ನಿಯು ಕಾಣುವಂತೆ ರಾಮಕೃಷ್ಣಾದಿ ಪ್ರತಿಮೆಗಳೊಳಗೆ ಅದೇ ಆಕಾರದಿಂದ ಜ್ಞಾನಿಗಳಿಗೆ ಗೋಚರನಾಗುವನು. ಕಾಷ್ಠದೊಳಗೆ ಅಗ್ನಿ ಇದ್ದರೂ ಕಾಣುವದಿಲ್ಲ. ಮಥನಮಾಡಿದರೆ ಹೇಗೆ ಕಂಡುಬರುವುದೋ ಹಾಗೆಯೇ ಸಾಧಾರಣ ಜನರಿಗೆ ಸಾಧಾರಣ ಪಂಚಲೋಹಾದಿ ಪ್ರತಿಮೆಗಳಂತೆ ತೋರುವನು. ಭಕ್ತಿಯಿಂದ ಧ್ಯಾನ ಮಾಡುವ ಜ್ಞಾನಿಗಳಿಗೆ ತೇಜೋಮಯನಾಗಿ ಪ್ರತಿಮ ದೇವತಾರೂಪನಾಗಿ ಅಂದರೆ ರಾಮ ಪ್ರತಿಮೆಯಲ್ಲಿ ರಾಮರೂಪಿಯಾಗಿಯೂ ಕೃಷ್ಣಾದಿ ಪ್ರತಿಮೆಯಲ್ಲಿ ತದ್ರೂಪಿಯಾಗಿಯೂ ಕಾಣುವನು. || ೫ ||

ಕರಣನಿಯಾಮಕನು ತಾವುಪ
ಕರಣದೊಳಗೈವತ್ತೆರಡು ಸಾ
ವಿರದ ಹದಿನಾಲ್ಕಧಿಕ ಶತರೂಪಗಳನೆ ಧರಿಸಿ ||
ಇರುತಿಹನು ತದ್ರೂಪ ನಾಮಗ
ಳರಿತು ಪೂಜಿಸುತಿಹರ ಪೂಜೆಯ
ನಿರುತ ಕೈಗೊಂಬನು ತೃಷಾರ್ತನು ಜಲವ ಕೊಂಬಂತೆ || ೬ ||

ಪದ್ಯಾರ್ಥ :—ಕರಣನಿಯಾಮಕನು=ಇಂದ್ರಿಯ ಪ್ರೇರಕನಾದ ಶ್ರೀ ಪರಮಾತ್ಮನು, ತಾ=ತಾನು, ಉಪಕರಣದೊಳಗೆ=ಪೂಜಾ ಸಾಮಗ್ರಿಗಳೊಳಗೆ, ಐವತ್ತೆರಡುಸಾವಿರ ಹದಿನಾಲ್ಕಧಿಕ ಶತರೂಪಗಳನೆ=೫೨೧೧೪ ರೂಪಗಳನ್ನು, ಧರಿಸಿ=ಸ್ವೀಕರಿಸಿ, ಇರುತಿಹನು, ತದ್ರೂಪನಾಮಗಳನರಿತು=ಕರ ಚರಣಾದಿಗಳಲ್ಲಿ ತದ್ರೂಪಿಯಾಗಿಯೂ, ತದಂತರ್ಯಾಮಿಯಾಗಿ ಮೇಲೆ ಹೇಳಿ

ದಷ್ಟು ರೂಪಗಳಿಂದಲೂ, ಇರುವನೆಂದು ತಿಳಿದು, ಪೂಜಿಸುತಿಹರ=ಪೂಜೆಯನ್ನು ಮಾಡುವವರ, ಪೂಜೆಯ=ಪೂಜೆಯನ್ನು, ನಿರುತ=ನಿತ್ಯದಲ್ಲಿಯೂ, ಕೃಷಾರ್ತನು=ನೀರಡಿಕೆಯುಳ್ಳವನು, ಜಲವ=ನೀರನ್ನು, ಕೊಂಬಂತೆ=ತೆಗೆದುಕೊಳ್ಳುವಂತೆ, ಕೈಕೊಂಬನು=ಸ್ವೀಕರಿಸುವನು. || ೬ ||

ತಾತ್ಪರ್ಯ :—ಜ್ಞಾನೇಂದ್ರಿಯ ಕರ್ಮೇಂದ್ರಿಯ ಪ್ರೇರಕನಾದ ಶ್ರೀ ಪರಮಾತ್ಮನು, ಉಪಕರಣವೆಂದರೆ ಪೂಜಾಸಾಧನ ಪದಾರ್ಥಗಳು ಇವುಗಳಲ್ಲಿ ಅಕ್ಷರ ಸಂಖ್ಯೆಯಿಂದ ಉ=೪, ಪ=೧, ಕ=೧, ರ=೨, ಣ=೫ ಇವುಗಳನ್ನು ಬಲದಿಂದ ಎಣಿಸಿದರೆ ೫೨೧೧೪ ಆಗುವುವು. ಇಷ್ಟು ಭಗವದ್ವಿಭೂತಿ ರೂಪಗಳನ್ನು ಪೂಜಾಸಾಧನ ದ್ರವ್ಯಗಳಲ್ಲಿ ತಿಳಿದು ಪೂಜಿಸುವವರ ಪೂಜೆಯನ್ನು ನೀರಡಿಕೆಯುಳ್ಳವನು ನೀರನ್ನು ತೆಗೆದುಕೊಳ್ಳುವಂತೆ ಪರಮಾತ್ಮನು ಸ್ವೀಕರಿಸುವನು. || ೬ ||

ಬಿಂಬರೂಪನು ಈ ತೆರದಿ ಜಡ
ಪೊಂಬಸರ ಮೊದಲಾದ ಸುರರೊಳ
ಗಿಂಬುಕೊಂಡಿಹನೆಂದರಿದು ಧರ್ಮಾರ್ಥ ಕಾಮಗಳ ||
ಹಂಬಲಿಸದನುದಿನದಿ ವಿಶ್ವಕು
ಟುಂಬಿ ಕೊಟ್ಟಕಣಾನ್ನ ಕುತ್ಸಿತ
ಕಂಬಳಿಯ ಸೌಭಾಗ್ಯವೆಂದವನಂಘ್ರಿಗಳ ಭಜಿಸು || ೭ ||

ಪದ್ಯಾರ್ಥ :—ಬಿಂಬರೂಪನು=ಬಿಂಬರೂಪಿಯಾದ ಶ್ರೀ ಪರಮಾತ್ಮನು, ಈ ತೆರದಿ=ಮೇಲೆ ಹೇಳಿದ ಪ್ರಕಾರ, ಜಡ=ಜಡಭೂತವಾದ ಚಲಾಚಲ ಪ್ರತಿಮೆಗಳಲ್ಲಿಯೂ, ಪೊಂಬಸರ=ಪೊನ್ನು=ಬಂಗಾರದ, ಬಸರ=ಗರ್ಭವುಳ್ಳ, ಅಂದರೆ ಹಿರಣ್ಯಗರ್ಭನೆಂಬ ಬ್ರಹ್ಮದೇವರು ಮೊದಲಾದ, ಸುರರೊಳಗೆ, ಇಂಬುಕೊಂಡಿಹನು=ಸಹಜ ರೂಪಗಳಿಂದ ವ್ಯಾಪಿಸಿಕೊಂಡಿರುವನೆಂದು, ಅರಿದು=ತಿಳಿದು, ಧರ್ಮಾರ್ಥಕಾಮಗಳ=ಧರ್ಮಾರ್ಥ ಕಾಮಗಳನ್ನು, ಹಂಬಲಿಸದೆ=ಅಪೇಕ್ಷಿಸದೆ, ಅನುದಿನದಿ=ಪ್ರತಿ ದಿವಸದಲ್ಲಿಯೂ, ವಿಶ್ವಕುಟುಂಬಿ=ಜಗತ್ಕುಟುಂಬಿಯಾದ ಶ್ರೀ ಪರಮಾತ್ಮನು, ಕೊಟ್ಟಕಾರಣನ್ನ=ಕೊಟ್ಟಕದನ್ನವನ್ನು, ಕುತ್ಸಿತಕಂಬಳಿಯ=ಅತ್ಯಲ್ಪ ಬೆಲೆ ಬಾಳುವ ಜನರಿಗೆ ಆಭಾಸವಾಗಿ ಕಾಣುವ, ಕಂಬಳಿಯನ್ನೂ, ಸೌಭಾಗ್ಯವೆಂದು=ಇದೇ ನಮಗೆ ಮಹಾ ಭಾಗ್ಯವೆಂದು ತಿಳಿದು, ಅವನ=ಪರಮಾತ್ಮನ ಅಂಘ್ರಿಗಳ ಭಜಿಸು.

ತಾತ್ಪರ್ಯ :—ಬಿಂಬರೂಪಿಯಾದ ಶ್ರೀ ಪರಮಾತ್ಮನು ಮೇಲಿನ ಪದ್ಯಗಳಲ್ಲಿ ಹೇಳಿದಂತೆ ಚಲಾಚಲ ಪ್ರತಿಮೆಗಳಲ್ಲಿ ಅಹಿತ ಸಹಜಾದಿ ವಿಭೂತಿಯಿಂದಲೂ, ಬ್ರಹ್ಮಾದಿಗಳಲ್ಲಿ ಸಹಜವಾದ ವಿಭೂತಿಯಿಂದಲೂ ಇರುವನೆಂದು ಚಿಂತಿಸಿ, ಧರ್ಮಾರ್ಥಕಾಮಗಳನ್ನು ಬೇಡದೆ ನಿಷ್ಕಾಮದಿಂದ ನಿತ್ಯದಲ್ಲಿಯೂ ಭಜಿಸುತ್ತಾ ವಿಶ್ವಕುಟುಂಬಿಯಾದ ಪರಮಾತ್ಮನು ಕೊಟ್ಟ ಕದನ್ನವನ್ನಾದರೂ ಬಹಳ ಕುತ್ಸಿತವಾದ ಕಂಬಳಿಯನ್ನಾದರೂ ತೆಗೆದುಕೊಂಡು ಅಸಂತುಷ್ಟನಾಗದೆ ಇವೇ ಮಹಾಭಾಗ್ಯವೆಂದೆಣಿಸಿ ಎಡಬಿಡದೆ ಪರಮಾತ್ಮನ ಪಾದಾರವಿಂದಗಳನ್ನು ಸೇವಿಸು. ಇದೇ ನಿನಗೆ ಮುಕ್ತಿಗೆ ಸಾಧನವು.

ವಾರಿಯೊಳಗಿಪ್ಪತ್ತನಾಲ್ಕು
ಮೂರೆರಡು ಸಾವಿರದಮೇಲೆ ಮು
ನ್ನೂರು ಹದಿನೇಳೆನಿಪ ರೂಪನು ಶ್ರೀ ತುಳಸಿದಳದಿ ||
ನೂರರವತ್ತೊಂದು ಪುಷ್ಪದಿ
ಮೂರಧಿಕ ದಶದೀಪದೊಳು ನಾ
ನೂರು ಮೂರು ಸುಮೂರ್ತಿಗಳು ಗಂಧದೊಳಗಿರುತಿಹವು || ೮ ||

ಪದ್ಯಾರ್ಥ :— ವಾರಿಯೊಳಗೆ= ಉದಕದೊಳಗೆ, ಇಪ್ಪತ್ತು ನಾಲ್ಕು = ೨೪ ರೂಪಗಳು, ಶ್ರೀ ತುಳಸಿದಳದಿ = ಶ್ರೀ ತುಳಸೀದಳದಲ್ಲಿ, ಮೂರೆರಡು ಸಾವಿರದ ಮೇಲೆ ಮುನ್ನೂರು ಹದಿನೇಳೆನಿಪ = ೩+೨ = ೫ ಸಾವಿರದ ಮೇಲೆ ೩೧೭ ಎನಿಸುವ ರೂಪವೂ, ನೂರ ಅರವತ್ತೊಂದು = ೧೬೧ ರೂಪಗಳು, ಪುಷ್ಪದಿ = ಹೂವಿನೊಳಗೂ, ಮೂರಧಿಕದಶ = ೧೩ ರೂಪಗಳು, ದೀಪದೊಳು = ದೀಪದೊಳಗೂ, ನಾನೂರು ಮೂರು ಸುಮೂರ್ತಿಗಳು = ೪೦೩ ಉತ್ತಮ ಮೂರ್ತಿಗಳು, ಗಂಧದೊಳಗೆ = ಚಂದನದಲ್ಲಿಯೂ, ಇರುತಿಹವು.

ತಾತ್ಪರ್ಯ :—ಪೂಜಾಸಾಮಗ್ರಿಗಳಲ್ಲಿರುವ ಅಖಂಡವಾದ ಭಗವದ್ರೂಪಗಳನ್ನು ೭ ನೆಯ ಪದ್ಯದಲ್ಲಿ ಹೇಳಿದರು. ಈ ಪದ್ಯದಿಂದ ಯಾವ ಯಾವ ದ್ರವ್ಯದಲ್ಲಿ ಎಷ್ಟೆಷ್ಟು ರೂಪದಿಂದಿದ್ದಾನೆಂಬುವದನ್ನು ಹೇಳುತ್ತಾರೆ:-

ಉದಕದಲ್ಲಿ, ವಾರಿಶಬ್ದದ ಅಕ್ಷರ ಸಂಖ್ಯಾಕ್ರಮದಿಂದ ವಾ = ೪, ರಿ = ೨ ಬಲದಿಂದ ಬರಿಸಿದರೆ ೨೪ ಆದವು. ಇಷ್ಟು ರೂಪಗಳು ಇರುವವು. ಶ್ರೀ ತುಳಸಿಯ ಅಕ್ಷರ ಸಂಖ್ಯಾ = ಶ್ರೀ (ಶ್ = ೫ ರೀ = ೨ = ೭) ೭, ತು = ೧—ಲ = ೩—ಶಿ = ೫ ಅಂತು ೫೩೧೭ ಆದವು. ಪುಷ್ಪದಲ್ಲಿ ಪು = ೧ ಷ್ = ೬,

ಪ=೧ ಅಂತು ೧೬೧. ದೀಪದೊಳಗೆ=ದೀ=೩ ಪ=೧ ಅಂತು ೧೩, ಗಂಧದೊಳಗೆ=ಗ=೩, ೦=೦, ಧ=೪ ಅಂತು ೪೦೩ ರೂಪಗಳು ಇರುವವೆಂದು ಚಿಂತಿಸಬೇಕು.

ಅಷ್ಟದಳ ಸದ್ಧೃದಯ ಕಮಲಾ
ಧಿಷ್ಠಿತನು ತಾನಾಗಿ ಸರ್ವೋ
ತ್ಕೃಷ್ಟಮಹಿಮನು ದಳಗಳಲಿ ಸಂಚರಿಸುತೊಳಗಿದ್ದು ।
ದುಷ್ಟರಿಗೆ ದುರ್ಬುದ್ಧಿ ಕರ್ಮವಿ
ಸಿಷ್ಟರಿಗೆ ಸುಜ್ಞಾನ ಧರ್ಮ ಸಂ
ಪುಷ್ಟಿಗೈಸುತ ಸಂತಯಿಪ ನಿರ್ದುಷ್ಟಸುಖಪೂರ್ಣ ॥ ೯ ॥

ಪದ್ಯಾರ್ಥ :—ನಿರ್ದುಷ್ಟ=ನಿರ್ದೋಷಿಯಾದ, ಸುಖಪೂರ್ಣ=ಪೂರ್ಣಾನಂದ ಸ್ವರೂಪಿಯಾದ, ಸರ್ವೋತ್ಕೃಷ್ಟಮಹಿಮನು=ಸರ್ವ ಶ್ರೇಷ್ಠಮಹಿಮೆಯುಳ್ಳವನಾದ ಶ್ರೀ ಪರಮಾತ್ಮನು, ಅಷ್ಟದಳ=ಎಂಟು ದಳಗಳುಳ್ಳ, ಸದ್ಧೃದಯ ಕಮಲ=ಸಮೀಚೀನವಾದ ಹೃದಯಕಮಲದಲ್ಲಿ, ಅಧಿಷ್ಠಿತನು =ಇರತಕ್ಕವನು, ತಾನಾಗಿ, ದಳಗಳಲಿ=ಎಂಟು ದಳಗಳಲ್ಲಿ ಸಂಚರಿಸುತ ಒಳಗಿದ್ದು=ಹೃದಯ ಕಮಲದೊಳಗಿದ್ದು, ದುಷ್ಟರಿಗೆ=ಅಯೋಗ್ಯರಿಗೆ, ದುರ್ಬುದ್ಧಿಯನ್ನೂ, ಕರ್ಮ ವಿಸಿಷ್ಟರಿಗೆ=ಸತ್ಕರ್ಮಾನುಷ್ಠಾನ ನಿರತರಾದ ಭಕ್ತರಿಗೆ, ಸುಜ್ಞಾನಧರ್ಮ=ಉತ್ತಮವಾದ ಜ್ಞಾನವನ್ನೂ ಧರ್ಮ ಬುದ್ಧಿಯನ್ನೂ ಸಂಪುಷ್ಟಿಗೈಸುತ=ಚೆನ್ನಾಗಿ ವೃದ್ಧಿಗೊಳಿಸುತ್ತಾ ಸಂತೈಪ=ಸಮಾಧಾನಗೊಳಿಸುವನು.

ತಾತ್ಪರ್ಯ :—ಮೇಲಿನ ಪದ್ಯದಲ್ಲಿ ಪೂಜೋಪಕರಣ ಪದಾರ್ಥಗಳಲ್ಲಿರುವ ವಿಭೂತಿಯನ್ನು ಹೇಳಿ ಪ್ರಸಕ್ತಿಯಿಂದ ಹೃದಯ ಕಮಲವಾಸಿಯಾದ ಭಗವದ್ವಿಭೂತಿ ರೂಪವನ್ನು ಹೇಳುತ್ತಾರೆ. ಹೃದಯಕಮಲದ ಅಷ್ಟದಳಗಳಲ್ಲಿ ೮ ರೂಪಗಳಿಂದ ಸಂಚರಿಸುತ್ತಾ, ನಿರ್ದುಷ್ಟನಾದ, ಪೂರ್ಣಾನಂದಮಯನಾದ ಸರ್ವೋತ್ಕೃಷ್ಟಮಹಿಮೆಯುಳ್ಳ ಶ್ರೀ ಹರಿಯು ಕಮಲದ ಒಳಗಿದ್ದು ತಮೋ ಯೋಗ್ಯರಿಗೆ ದುರ್ಬುದ್ಧಿಯನ್ನು ಸತ್ಕರ್ಮನಿರತರಿಗೆ ಸುಜ್ಞಾನ ಧರ್ಮಗಳನ್ನು ವೃದ್ಧಿಮಾಡಿ ಜನರನ್ನು ಸಮಾಧಾನಗೊಳಿಸುವನು.

ವಿತ್ತದೇಹಾಗಾರದಾರಾ
ಪತ್ಯಮಿತ್ರಾದಿಗಳೊಳಗೆ ಗುಣ
ಚಿತ್ತಬುಧ್ಯಾದಿಂದ್ರಿಯಗಳೊಳು ಜ್ಞಾನ ಕರ್ಮದೊಳು ।

ತತ್ತ್ವದಾಹ್ವಯನಾಗಿ ಕರೆಸುತ
ಸತ್ಯಸಂಕಲ್ಪಾನುಸಾರದಿ
ನಿತ್ಯದಲಿ ತಾ ಮಾಡಿ ಮಾಡಿಪನೆಂದು ಸ್ಮರಿಸುವುದು || ೧೦ ||

ಪದ್ಯಾರ್ಥ :—ವಿತ್ತದೇಹಾಗಾರದಾರಾಪತ್ಯ ಮಿತ್ರಾದಿಗಳೊಳಗೆ – ವಿತ್ತ = ದ್ರವ್ಯ, ದೇಹ, ಅಗಾರ = ಮನೆ, ದಾರಾ = ಹೆಂಡರು, ಅಪತ್ಯ = ಮಕ್ಕಳು, ಮಿತ್ರಾದಿಗಳೊಳಗೆ = ಸ್ನೇಹಿತರು ಮೊದಲಾದವರುಗಳವಳಗೆ, ಮತ್ತು ಗುಣಚಿತ್ತ ಬುಧ್ಯಾದಿಂದ್ರಿಯಗಳೊಳು = ಗುಣ = ಸತ್ವಾದಿಗುಣಗಳಲ್ಲಿಯೂ, ಆದಿ ಶಬ್ದದಿಂದ, ಮನಸ್ಸು, ಅಹಂಕಾರಗಳೆಂಬ ಇಂದ್ರಿಯಗಳೊಳು, ಜ್ಞಾನ ಕರ್ಮದೊಳು = ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಲ್ಲಿಯೂ, ತತ್ವದಾಹ್ವಯ ನಾಗಿ ಕರೆಸುತ = ಆಯಾ ಹೆಸರಿನಿಂದ ಕರೆಸಿಕೊಳ್ಳುತ್ತ, ಸತ್ಯಸಂಕಲ್ಪಾನು ಸಾರದಿ = ತನ್ನ ಸತ್ಯ ಸಂಕಲ್ಪವನ್ನನುಸರಿಸಿ, ನಿತ್ಯದಲಿ, ತಾ = ತಾನು, ಮಾಡಿ, ಮಾಡಿಪನೆಂದು = ಮಾಡಿಸುವನೆಂದು, ಸ್ಮರಿಸುವುದು.

ತಾತ್ಪರ್ಯ:—ಪ್ರಸಕ್ತಿಯಿಂದ ತನ್ನ ದೇಹ, ಹೆಂಡತಿ, ಮಕ್ಕಳು ಮೊದಲಾದವರಲ್ಲಿಯೂ ಪೂಜಾ ಸಾಧನತ್ವೇನ ಭಗವದ್ವಿಭೂತಿಯನ್ನು ತಿಳಿಯಬೇಕೆಂದು ಹೇಳುತ್ತಾರೆ. ತನ್ನ ಮನೆಯಲ್ಲಿರುವ ದ್ರವ್ಯ, ತನ್ನ ದೇಹ, ಮನೆ, ಹೆಂಡರು ಮಕ್ಕಳು ಸ್ನೇಹಿತರು ಮೊದಲಾದ ಒಬ್ಬೊಬ್ಬರಲ್ಲಿಯೂ ಅಖಂಡ ರೂಪದಿಂದ ಪರಮಾತ್ಮನಿದ್ದು ಪೂಜೋಪಕರಣನಾಗಿರುವನೆಂದು ಭಾವಿಸಬೇಕು. ಮತ್ತು ಸಾತ್ವಿಕ, ರಾಜಸ ತಾಮಸರಲ್ಲಿ ಸತ್ವರಜಸ್ತಮೋರೂಪನಾಗಿಯೂ, ತಾನು, ತನ್ನ ಹೆಂಡತಿ ಮೊದಲಾದ ಎಲ್ಲರ ಚಿತ್ತ ಬುದ್ಧಿ ಮನಸ್ಸು ಅಹಂಕಾರಗಳಲ್ಲಿಯೂ ಜ್ಞಾನೇಂದ್ರಿಯಗಳಲ್ಲಿಯೂ ಕರ್ಮೇಂದ್ರಿಯಗಳೊಳಗೂ ಆಯಾ ಹೆಸರಿನಿಂದ ಕರೆಸಿಕೊಳ್ಳುತ್ತಾ 'ಸತ್ಯಸಂಕಲ್ಪತೋ ವಿಷ್ಣುರ್ನಾನ್ಯಥಾತುಕರಿಷ್ಯತಿ' ಎಂಬ ಪ್ರಮಾಣದಂತೆ ನಿತ್ಯದಲ್ಲಿಯೂ ಮೇಲೆ ಹೇಳಿದ ಜನರೊಳಗೂ ಇಂದ್ರಿಯಗಳೊಳಗೂ ಇದ್ದು ಕರ್ಮಗಳನ್ನು ತಾನು ಮಾಡಿ ಆ ಜನರಿಂದಲೂ ಮಾಡಿಸುವನೆಂದು ಚಿಂತಿಸಬೇಕು. ತನ್ನಲ್ಲಿಯೂ ಹೆಂಡತಿ ಮೊದಲಾದವರಲ್ಲಿ ಅಖಂಡರೂಪವನ್ನು ಅವರುಗಳ ಕರಚರಣಾದಿ ಇಂದ್ರಿಯಗಳಲ್ಲಿಯೂ ಖಂಡರೂಪಗಳನ್ನು ಚಿಂತಿಸಬೇಕು. || ೧೦ ||

ಭಾವದ್ರವ್ಯಕ್ರಿಯಗಳೆನಿಸುವ
ಈ ವಿಧಾದ್ವೈತತ್ರಯಂಗಳ

ಭಾವಿಸುತ ಸದ್ಭಕ್ತಿಯಲಿ ಸರ್ವತ್ರಮರಿಯದಲೆ |
ತಾವಕನು ತಾನೆಂದು ಪ್ರತಿದಿನ
ಸೇವಿಸುವ ಭಕ್ತರಿಗೆ ತನ್ನನು
ಈವಕಾವ ಕೃಪಾಳು ಕರಿವರಗೊಲಿದತೆರದಂತೆ || ೧೧ ||

ಪದ್ಯಾರ್ಥ:—ಬಾವದ್ರವ್ಯಕ್ರಿಯಗಳೆನಿಸುವ=ಭಾವಾದ್ವೈತ, ದ್ರವ್ಯಾದ್ವೈತ ಕ್ರಿಯಾದ್ವೈತಗಳೆಂದು ಪ್ರಸಿದ್ಧಿಯಾಗಿರುವ, ಈ ವಿಧ=ಈ ಪ್ರಕಾರವಾದ, ಅದ್ವೈತತ್ರಯಂಗಳ=ಮೂರು ಅದ್ವೈತಗಳನ್ನು ಭಾವಿಸುತ=ಚಿಂತಿಸುತ್ತ, ಸದ್ಭಕ್ತಿಯಲಿ=ಸಾತ್ವಿಕ ಭಕ್ತಿಯಿಂದ (ನಿಷ್ಕಾಮ ಭಕ್ತಿಯಿಂದ) ಸರ್ವತ್ರ=ಸರ್ವ ದೇಶಕಾಲಗಳಲ್ಲಿಯೂ ಮರಿಯದಲೆ, ತಾವಕನು ನಾನೆಂದು= ನಿನ್ನವನು ನಾನೆಂದು, ಪ್ರತಿದಿವಸವೂ ಸೇವಿಸುವ=ಭಕ್ತರಿಗೆ, ತನ್ನನ್ನು= ತನ್ನ ನಿಜರೂಪವನ್ನು ಈವ=ಅಪರೋಕ್ಷದಲ್ಲಿ ತೋರುವ, ಕರಿವರಗೆ= ಗಜೇಂದ್ರನಿಗೆ, ಒಲಿದ ತೆರದಂತೆ=ಸಮಯದಲ್ಲಿ ರಕ್ಷಿಸಲು ಬಂದೊದಗಿದಂತೆ ಕೃಪಾಳು=ಕರುಣಾಸಮುದ್ರನಾದ ಶ್ರೀ ಹರಿಯು ಕಾವ=ರಕ್ಷಿಸುವನು.

ತಾತ್ಪರ್ಯ :—ಮೇಲಿನ ಪದ್ಯದಲ್ಲಿ ಹೇಳಿದುದನ್ನೇ ವಿಸ್ತರಿಸುತ್ತಾರೆ.

ಭಾವಾದ್ವೈತ, ದ್ರವ್ಯಾದ್ವೈತ, ಕ್ರಿಯಾದ್ವೈತವೆಂಬ ಮೂರು ಅದ್ವೈತಗಳನ್ನು ಭಾವಿಸಬೇಕು. ದಾರಗಳನ್ನು ನೆಯಿದು ವಸ್ತ್ರಗಳನ್ನಾಗಿ ಹೇಗೆ ಮಾಡುವರೋ, ಬೇರೆಯಾದರೆ ದಾರವೆನ್ನುವರು, ನೆಯಿದು ವಸ್ತ್ರವಾದ ಮೇಲೆ ದಾರಗಳೇ ಅಡ್ಡವಾಗಿಯೂ ಉದ್ದವಾಗಿಯೂ ಹೆಣದಿದ್ದರೂ ಹೇಗೆ ಅದನ್ನು ವಸ್ತ್ರವೆನ್ನುವರೋ, ವಸ್ತ್ರಕ್ಕೂ ಧಾರಗಳಿಗೂ ಹೇಗೆ ಭೇದವೋ ಅದರಂತೆಯೇ ವಿಶ್ವರೂಪನಾದ ಶ್ರೀ ಪರಮಾತ್ಮನೇ ಜಗತ್ತನ್ನು ಧಾರಗಳಂತೆ ಖಂಡರೂಪಿಯಾಗಿ ವ್ಯಾಪಿಸಿಕೊಂಡು ಅಖಂಡ ರೂಪದಿಂದ ಪ್ರಪಂಚವಾಗಿ ತೋರುವನು. ಆದುದರಿಂದಲೇ ಪರಮಾತ್ಮನಿಗೆ ವಿಶ್ವನೆಂದು ಹೆಸರು. ಜೀವರಿಗೂ ಪರಮಾತ್ಮನಿಗೂ, ಧಾರಗಳಿಗೂ ವಸ್ತ್ರಗಳಿಗೂ ಭೇದವಿದ್ದಂತೆ, ಭೇದವುಂಟೆಂದು ಭಾವಿಸುವುದೇ ಭಾವಾದ್ವೈತ. ತಾನೂ, ತನ್ನ ಹೆಂಡತಿ ಮಕ್ಕಳೂ ಮೊದಲಾದವರು ಮಾಡುವುದೂ, ನೋಡುವುದೂ ಮೊದಲಾದ ಎಲ್ಲಾ ಕಾರ್ಯಗಳೂ, ಒಬ್ಬರಿಂದೊಬ್ಬರಿಗೆ ಉಪಕಾರ ಪ್ರತ್ಯುಪಕಾರವಾದ ಕ್ರಿಯೆಗಳನ್ನೆಲ್ಲಾ ಶ್ರೀ ಪರಮಾತ್ಮನೇ ಮಾಡಿಸುವವನು ಎಂದು ಎಲ್ಲಾ ಕಡೆಯಲ್ಲಿಯೂ ಇರುವ ಭಗವದ್ರೂಪಗಳನ್ನು ಒಂದಾಗಿ ಭಾವಿಸುವುದಕ್ಕೆ

ದ್ರವ್ಯಾದ್ವೈತವೆಂದು ಹೆಸರು. ತಾನು ಮಾಡುವ ಸರ್ವ ಕರ್ಮಗಳನ್ನು ತನ್ನೊಳಗಿದ್ದ ಪರಮಾತ್ಮನೇ ಮಾಡಿ ಮಾಡಿಸಿದನೆಂದು ಭಾವಿಸಿ, ತನ್ನ ಸ್ವಾತಂತ್ರ್ಯ ಕರ್ತೃತ್ವವನ್ನು ಬಿಟ್ಟು ಸರ್ವ ಕರ್ಮಗಳನ್ನು ಪರಮಾತ್ಮನಿಗೆ ಅರ್ಪಿಸುವುದೇ ಕ್ರಿಯಾದ್ವೈತವು (ಈ ಭಾವಾದ್ವೈತ ಮೊದಲಾದವುಗಳಿಗೆ ಮೊದಲನೆಯ ಸಂಚಿಕೆಯಲ್ಲಿ "ಸುಲಭಾವಲ್ಲವೋ ಮಹಾನಂದ" ಎಂಬ ಪದಕ್ಕೆ ಅರ್ಥ ಬರೆದ ಸಂದರ್ಭದಲ್ಲಿ ಅರ್ಥವು ಸಪ್ರಮಾಣವಾಗಿ ವಿಸ್ತಾರಮಾಡಲ್ಪಟ್ಟದೆ—ಅಲ್ಲಿ ನೋಡತಕ್ಕದ್ದು) ಈ ಪ್ರಕಾರ ಮೂರು ವಿಧ ಅದ್ವೈತಗಳನ್ನು ಚಿಂತಿಸುತ್ತ ನಿಷ್ಕಾಮವಾದ ಮತ್ತು ಅವಿಚ್ಛಿನ್ನವಾದ ಭಕ್ತಿಯಿಂದ ಸರ್ವಕಾಲದಲ್ಲಿಯೂ ಪರಮಾತ್ಮನನ್ನು ಮರಿಯದೆ, ಸ್ವಾಮಿ! ನಾನು ನಿನ್ನ ದಾಸರಲ್ಲೊಬ್ಬನು! ಎಂದು ಪರಮಾತ್ಮನನ್ನು ಪ್ರತಿ ದಿವಸದಲ್ಲಿಯೂ ಸೇವಿಸುತ್ತ ಬಂದರೆ ಪರಮಾತ್ಮನು ಅವರಿಗೆ ಅಪರೋಕ್ಷದಲ್ಲಿ ಗೋಚರನಾಗುತ್ತಾನೆ. ರೂಪಾಂತರದಿಂದ ಪ್ರತ್ಯಕ್ಷವಾಗಿ ಬಂದು ಜಗನ್ನಾಥ ದಾಸರಾಯರು ಮೊದಲಾದವರಿಗೆ ಗೋಚರನಾದಂತೆ ಗೋಚರನಾಗುವನು. ಮೊಸಳೆಯನ್ನು ಸೀಳಿ ಗಜೇಂದ್ರನನ್ನು ರಕ್ಷಿಸಿದಂತೆ ಆಪತ್ಕಾಲದಲ್ಲಿ ಅಂತಃ ಭಕ್ತರನ್ನು ಸಂರಕ್ಷಿಸುವನು. ಆದುದರಿಂದಲೇ ಕರುಣಾಳು ಅಂದರು. || ೧೧ ||

ಬಾಂದಳವೆ ಮೊದಲಾದವರೊಳೊಂ
ದೊಂದರಲಿ ಪೂಜಾ ಸುಸಾಧನ
ವೆಂದೆನಿಸುವ ಪದಾರ್ಥಗಳು ಬಗೆಬಗೆಯ ನೂತನದಿ ||
ಸಂದಣಿಸಿಕೊಂಡಿಹವು ಧ್ಯಾನಕೆ
ತಂದಿನಿತು ಚಿಂತಿಸಿ ಸದಾ ಗೋ
ವಿಂದನರ್ಚಿಸಿ ನೋಡು ನಲಿದಾಡು ಕೊಂಡಾಡು || ೧೨ ||

ಪದ್ಯಾರ್ಥ:—ಬಾಂದಳವೆ=ಆಕಾಶವೆ, ಮೊದಲಾದರೊಳು=ಮೊದಲಾದ ಪಂಚಭೂತಗಳೊಳಗೆ, ಒಂದೊಂದರಲಿ=ಆಕಾಶ, ವಾಯು, ತೇಜಸ್ಸು, ಉದಕ, ಪೃಥಿವೀ ಈ ಐದರ ಪೈಕಿ ಒಂದೊಂದರೊಳಗೂ, ಪೂಜಾ ಸುಸಾಧನವೆಂದೆನಿಸುವ=ದೇವರ ಪೂಜಾಕ್ಕೆ ಉತ್ತಮವಾದ ಸಾಧನವೆನಿಸುವ ಪದಾರ್ಥಗಳು, ಬಗೆ ಬಗೆಯ=ನಾನಾವಿಧವಾಗಿ, ನೂತನದಿ=ಹೊಸದಾಗಿ, ಸಂದಣಿಸಿಕೊಂಡಿಹವು=ತುಂಬಿಕೊಂಡಿರುವವು. ಧ್ಯಾನಕೆ ತಂದು=ಆ ಪದಾರ್ಥಗಳನ್ನು ಧ್ಯಾನಕ್ಕೆ ತಂದು, ಇನಿತು ಚಿಂತಿಸಿ=ಈ ಪ್ರಕಾರ ಚಿಂತಿಸಿ, ಸದಾ=

ಸರ್ವಕಾಲದಲ್ಲಿಯೂ, ಗೋವಿಂದನ= ವೇದಪ್ರತಿಪಾದ್ಯನಾದ ಶ್ರೀ ಪರಮಾತ್ಮನನ್ನು, ಅರ್ಚಿಸಿ= ಪೂಜಿಸಿ, ನೋಡುತಲಿ, ನಲಿದಾಡು= ನರ್ತನ ಮಾಡು ಕೊಂಡಾಡು= ಸ್ತೋತ್ರಮಾಡು.

ತಾತ್ಪರ್ಯ:—೧೦ ನೆಯ ಪದ್ಯದಿಂದ ವಿತ್ತದೇಹಾಪತ್ಯ ಮೊದಲಾದವರಲ್ಲಿ ಅಖಂಡ ವಿಭೂತಿಯನ್ನು ಚಿಂತಿಸಬೇಕೆಂತಲೂ, ಚಿತ್ತ ಬುದ್ಧ್ಯಾದಿಗಳಲ್ಲಿಯೂ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಲ್ಲಿಯೂ ಸಹ ಭಗವದ್ವಿಭೂತಿಯನ್ನು ತಿಳಿದು ಪೂಜಿಸಬೇಕೆಂದು ಹೇಳಿ, ೧೧ ನೆಯ ಪದ್ಯದಿಂದ ಭಾವಾದ್ವೈತ, ಕ್ರಿಯಾದ್ವೈತ, ದ್ರವ್ಯಾದ್ವೈತಗಳ ವ್ಯಾಜದಿಂದ ೧೦ ನೆ ಪದ್ಯಾರ್ಥವನ್ನು ವಿಸ್ತಾರ ಮಾಡಿದರು. ಈಗ ೧೦ ನೆ ಪದ್ಯದಲ್ಲಿ ಬಿಟ್ಟಿದ್ದ ಪಂಚಮಹಾಭೂತಗಳಲ್ಲಿ ತಿಳಿಯಬೇಕಾದ ವಿಭೂತಿಯನ್ನು ಹೇಳುತ್ತಾರೆ.

ಬಾಂದಳವೆಂದರೆ ಆಕಾಶ, ಮೊದಲಾದ ಶಬ್ದದಿಂದ ಉಳಿದ ವಾಯು ಅಗ್ನಿ, ಉದಕ, ಭೂಮಿ ಈ ೪ ಭೂತಗಳನ್ನು ಗ್ರಹಣಮಾಡಬೇಕು. ಇವುಗಳ ಒಂದೊಂದರಲ್ಲಿಯೂ ಅನೇಕ ವಿಧವಾದ ಹೊಸ ಹೊಸ ಪೂಜಾಸಾಧನ ದ್ರವ್ಯಗಳಿರುವವೆಂದು ಧ್ಯಾನಕ್ಕೆ ತಂದುಕೊಳ್ಳಬೇಕು. ಪೂಜೆಯೆಂದರೆ ಪ್ರತಿಮೆಯನ್ನು ಮುಂದಿಟ್ಟುಕೊಂಡು ಪುಷ್ಪಾದಿಗಳು ಕೈಯಿಂದ ಅರ್ಚಿಸುವುದು ಮಾತ್ರವೇ ಅಲ್ಲ. ಪೂಜಾಸಾಧನ ದ್ರವ್ಯವೆಂದರೆ, ಗಂಧ, ಪುಷ್ಪ, ನೈವೇದ್ಯಗಳೆಂದೇ ಅರ್ಥವಲ್ಲ. ಮನಸ್ಸಿನಲ್ಲಿ ಆಕಾಶಾದಿ ಪಂಚಮಹಾಭೂತಗಳ ಸಹಾಯದಿಂದ ಕಲ್ಪಿಸುವ ಸಾಧನ ಪದಾರ್ಥಗಳು ಬಹಳ ಉಂಟು ಅವು ಹೊಸ ಹೊಸದಾಗಿ ಕಲ್ಪನಾಕ್ಕೆ ಬರುವವು. ಅದೆಂತೆಂದರೆ:—ಆಕಾಶತತ್ವವು ನಮ್ಮ ಶ್ರೋತ್ರೇಂದ್ರಿಯವನ್ನು ಆಶ್ರಯಿಸಿರುವುದು. ಅದರ ಮಾತ್ರಾಗುಣ ಶಬ್ದವು ಕಿವಿಯಿಂದ ನಾವು ಕೇಳುವಾಗ ಉತ್ತಮವಾದ ಕಥಾಶ್ರವಣ, ದೊಡ್ಡವರು ಮಾಡಿರುವ ಪ್ರಾಕೃತ ಕೀರ್ತನಾದಿಗಳೇ ಆಗಲಿ ಇವೇ ಮೊದಲಾದ ಕರ್ಣಾನಂದ, ಹೊಂದುವಾಗ ಇವುಗಳೆಲ್ಲವೂ ಭಗವತ್ಪೂಜೆಯೆಂದು ಭಾವಿಸಬೇಕು. ವಾಯುಸ್ಥಾನವು ನಮ್ಮ ತ್ವಗಿಂದ್ರಿಯವು. ಅದರ ಗುಣವು ಸ್ಪರ್ಶ. ಇದರಲ್ಲಿ ವನಿತಾದಿ ವಿಷಯ ಸ್ಪರ್ಶದಿಂದ ಸುಖವೆಂದು ಭಾವಿಸುವವರು ಈಗ ಅಲ್ಪ ಸುಖವನ್ನನುಭವಿಸಿ ಮುಂದೆ ಕಷ್ಟಪಡುವರು. ಇದನ್ನು ಅಪೇಕ್ಷಿಸದೆ ತ್ವಗಿಂದ್ರಿಯವು ಅವನ ಭಕ್ತರ ಆಲಿಂಗನಕ್ಕೆ ಎಂದು ಭಾವಿಸುವುದು, ಅಥವಾ ಗ್ರಹಸ್ಥಾಶ್ರಮಿಯು ಋತುಕಾಲದಲ್ಲಿ ಸ್ವಸ್ತ್ರೀ ಅಂಗಸಂಗ

ವನ್ನೂ ಸಹ ಇಂದ್ರಿಯ ಪ್ರೀತಿಗೆಂದು ಭಾವಿಸದೆ ಭಗವತ್ಪ್ರೀತ್ಯರ್ಥವಾಗಿಯೂ, ಸಂತಾನ ಪ್ರಾಪ್ತಿದ್ವಾರಾಪಿತೃಋಣಪರಿಹಾರಕ್ಕೋಸ್ಕರವೆಂದೂ ತಿಳಿದು ಅದೂ ಒಂದು ಪೂಜಾಸಾಧನವೆಂದು ಭಾವಿಸಬೇಕು. ತೇಜಸ್ತತ್ವದ ಸ್ಥಾನವು ನೇತ್ರವು. ಅದರ ಗುಣರೂಪ ಭಗವಂತನ ಚಲಾಚಲ ಪ್ರತಿಮೆಗಳನ್ನು ನೋಡುವುದು, ಭಗವದ್ಭಕ್ತರನ್ನು ನೋಡುವುದು ಇವುಗಳಿಗೆ ಉಪಯೋಗಿಸುವುದರಿಂದ ರೂಪಗುಣವಿಶಿಷ್ಟನಾದ (ಅಗ್ನಿ) ತೇಜಸ್ತತ್ವವು ಪೂಜಾಸಾಧನವಾಯಿತು. (ಅಪ್ಪು) ಉದಕತತ್ವದಸ್ಥಾನ ನಾಲಿಗೆ. ಇದರ ಗುಣ ರಸ. ಭಗವನ್ನಿವೇದಿತ ಪದಾರ್ಥವನ್ನು ಭಕ್ಷಿಸುವುದೊಂದು ಪೂಜಾರೂಪವು. ಇದಕ್ಕೆ ಸಾಧನವು ರಸವಿಶಿಷ್ಟನಾದ ಉದಕ ತತ್ವನೆಂದು ತಿಳಿಯಬೇಕು. ಪೃಥಿವೀತತ್ವದಸ್ಥಾನವು ಮೂಗು. ಇದರ ಗುಣವು ಗಂಧ. ಭಗವಂತನಿಗೆ ಅರ್ಚಿಸಿದ ನಿರ್ಮಾಲ್ಯಾದಿಗಳನ್ನು ಆಘ್ರಾಣಿಸುವುದೊಂದು ಭಗವತ್ಪೂಜಾ. ಇದಕ್ಕೆ ಸಾಧನವು ಭೂತತ್ವವು. ಇನ್ನು ಹೆಚ್ಚಿಗೆ ಬೆಳಿಸುವುದರಿಂದೇನು? ಸ್ವಲ್ಪಮಟ್ಟಿಗೆ ಇಲ್ಲಿ ಸೂಚಿಸಲ್ಪಟ್ಟಿದೆ. ಇದರಂತೆ ಆಕಾಶಾದಿ ಒಂದೊಂದು ಭೂತದೊಳಗೂ, ಅನೇಕ ವಿಧ ಪೂಜಾಸಾಧನಗಳನ್ನೂ ತಮ್ಮ ತಮ್ಮ ಯೋಗ್ಯತಾನುಸಾರ ಹೊಸ ಹೊಸದಾಗಿ ಕಲ್ಪಿಸಿಕೊಂಡು ಧ್ಯಾನಕ್ಕೆ ಭಾಗವತ ನವಮಸ್ಕಂಧದಲ್ಲಿ ಅಂಬರೀಷೋಪಾಖ್ಯಾನದಲ್ಲಿ ಇದೇಪ್ರಕಾರ ಅನುಷ್ಠಾನಕ್ಕೆ ತಂದಿರುವುದಾಗಿ ಹೇಳಿರುವರು

ಅದೆಂತೆಂದರೆ :—'ಸವೈಮನಃ ಕೃಷ್ಣಪದಾರವಿಂದ ಯೋರ್ವಚಾಂಸಿ ವೈಕುಂಠಗುಣಾನುವರ್ಣನೇ || ಕರೌಹರೇರ್ಮಂದಿರ ಮಾರ್ಜನಾದಿಷುಶ್ರುತೀ ಚಕಾರಾಚ್ಯುತ ಸತ್ಕಥೋದಯೇ || ಮುಕುಂದ ಲಿಂಗಾಲಯದರ್ಶನೇದೃಶೌತದ್ಭೃತ್ಯಗಾತ್ರಸ್ಪರ್ಶೇಂಗಸಂಗಂ || ಘ್ರಾಣಂಚತತ್ಪಾದಸರೋಜಸೌರಭಶ್ರೀ ಮತ್ತು ಲಸ್ಯಾಂ ರಸನಾಂತದರ್ಪಿತೇ || ಪಾದೌಹರೇಃಕ್ಷೇತ್ರಪಥಾನುಸರ್ಪಣೆ ಶಿರೋಹೃಷೀಕೇಶ ಪದಾಭಿವಂದನೇ || ಕಾಮಂತು ದಾಸ್ಯೇ ನತುಕಾಮಕಾಮ್ಯಯಾ ತಥೋತ್ತಮ ಶ್ಲೋಕಜನಾಶ್ರಯಾಂರತಿಂ ||' ಅಂಬರೀಷನು ತನ್ನ ಮನಸ್ಸನ್ನು ಶ್ರೀ ಪರಮಾತ್ಮನ ಪಾದಾರವಿಂದಗಳಲ್ಲಿಯೂ, ವಾಕ್ಕುಗಳನ್ನು ವೈಕುಂಠಪ್ರದನಾದ ಶ್ರೀಹರಿಯ ಗುಣಗಳನ್ನು ವರ್ಣಿಸುವುದಕ್ಕೂ, ಕರಗಳನ್ನು ಹರಿಯ ಮನೆಯಲ್ಲಿ ಕಸತೆಗೆದು ಸಾರಣೆ ಮೊದಲಾದ ಕಾರ್ಯಗಳು ಮಾಡುವುದಕ್ಕೂ, ಕಿವಿಗಳನ್ನು ಭಗವತ್ಕಥೆಯನ್ನು ಕೇಳುವು

ದಕ್ಕೂ, ನೇತ್ರಗಳನ್ನು ಪರಮಾತ್ಮನ ಪ್ರತಿಮಾದಿಗಳ ದರ್ಶನಕ್ಕೂ ತ್ವಗಿಂದ್ರಿಯವನ್ನು ಭಕ್ತರ ಆಲಿಂಗನಕ್ಕೂ ಮೂಗನ್ನು ಶ್ರೀ ಪರಮಾತ್ಮನ ಪಾದಕಮಲಕ್ಕರ್ಪಿಸಿದ ಸುಗಂಧವಾದ ಶ್ರೀ ತುಳಸಿ ಮೊದಲಾದವುಗಳನ್ನು ಆಘ್ರಾಣಿಸುವುದಕ್ಕೂ ನಾಲಿಗೆಯನ್ನು ಪರಮಾತ್ಮನ ನೈವೇದ್ಯ ಭಕ್ಷಣಕ್ಕೂ, ಪಾದಗಳನ್ನು ತೀರ್ಥ ಕ್ಷೇತ್ರ ಸಂಚಾರಕ್ಕೂ, ಶಿರಸ್ಸನ್ನು ಪರಮಾತ್ಮನ ನಮಸ್ಕಾರಕ್ಕೂ ಉಪಯೋಗಪಡಿಸಿದ್ದನು. ಕಾಮ ಅಂದರೆ ಇಚ್ಛೆ. ಇಂತಹಾ ಕಾಮವನ್ನು ಪರಮಾತ್ಮನಿಗೆ ತಾನು ದಾಸನಾಗಬೇಕೆಂಬ ವಿಷಯದಲ್ಲಿ ಮಾತ್ರ ಇಟ್ಟಿದ್ದನು. ರತಿ ಅಂದರೆ ಉತ್ತಮ ಶ್ಲೋಕನ ಭಕ್ತರ ಸಂಗವೇ ಸುಖವೆಂದು ಭಾವಿಸಿದ್ದನು. ಆದ್ದರಿಂದಲೇ ಶ್ರೀಹರಿಯು, ಅಂಬರೀಷನ ರಕ್ಷಣೆಗೋಸುಗ ಯಾರಿಗೂ ಕೊಡದ ಚಕ್ರಾಯುಧವನ್ನೇ ಅವನಿಗೆ ಕೊಟ್ಟಿದ್ದನು.

ಪೂಜೆಯೆಂದರೆ ಇದಕ್ಕಿಂತಲೂ ಪೂಜೆ ಮತ್ತಾವದು. ಪೂಜಾಸಾಧನವಾದರು ಇದಕ್ಕಿಂತಲು ಹೆಚ್ಚಿನದು ಮತ್ತಾವದುಂಟು? ಆದ್ದರಿಂದಲೇ ದಾಸರಾಯರು ಹೊಸ ಹೊಸದಾದ ಪೂಜಾಸಾಧನಗಳು ಆಕಾಶಾದಿಗಳಲ್ಲಿ ಚಿಂತಿಸಬೇಕೆಂದು ಹೇಳಿದರು. ಹೀಗೆ ಸರ್ವ ಕಾಲಗಳಲ್ಲಿಯೂ ಚಿಂತಿಸುತ್ತಾ ಪರಮಾತ್ಮನನ್ನು ಪೂಜಿಸಿದರೆ ಈ ಆನಂದವು ಹೇಗಿರುತ್ತದೆಂಬುವದನ್ನು ಅನುಭವಕ್ಕೆ ಬಂದವರಿಗೆ ಗೊತ್ತೇ ಹೊರತು ವರ್ಣಿಸಲು ಸಾಧ್ಯವಿಲ್ಲ. ಆದ್ದರಿಂದ ದಾಸರಾಯರು ಅರ್ಚಿಸಿನೋಡೆಂದರು. ಆನಂದದಿಂದ ಕುಣಿ. ಸ್ತೋತ್ರಮಾಡು. ಇದಕ್ಕಿಂತಲೂ ದೊಡ್ಡಸಾಧನ ಮತ್ತಾವುದೂ ಇಲ್ಲ.

ಜಲಜನಾಭನ ಮೂರ್ತಿ ಮನದಲಿ
ನೆಲೆಗೊಳಿಸಿ ನಿಶ್ಚಲ ಸುಭಕುತಿಯಲಿ
ಛಳಿಬಿಸಲು ಮಳೆಗಾಳಿಗಳ ನಿಂದಿಸದೆ ನಿತ್ಯದಲಿ |
ನೆಲದಲಿಹಗಂಧವೆ ಸುಗಂಧವು
ಜಲವೆರಸರೂಪವೆ ಸುದೀಪವು
ಯಲರುಚಾಮರ ಶಬ್ದವಾದ್ಯಗಳರ್ಪಿಸಲು ವಲಿವ ||೧೩||

ಪದ್ಯಾರ್ಥ :—ಜಲಜನಾಭನ=ಪದ್ಮನಾಭನ, ಮೂರ್ತಿ=ರಾಮಕೃಷ್ಣಾದಿ ರೂಪಗಳನ್ನು, ಮನದಲಿ=ಮನಸ್ಸಿನಲ್ಲಿ, ನೆಲೆಗೊಳಿಸಿ=ಸ್ಥಿರವಾಗಿ ನಿಲ್ಲಿಸಿ, ನಿಶ್ಚಲ ಸುಭಕುತಿಯಲಿ=ಅವಿಚ್ಛಿನ್ನವಾದ ಸದ್ಭಕ್ತಿಯಿಂದ, ಛಳಿ ಬಿಸಲು ಮಳೆಗಾಳಿಗಳ ನಿಂದಿಸದೆ=ಬಿಸಿಲುತಾಪ ಮೊದಲಾದವುಗಳನ್ನು

**ಸಹನೆ ಮಾಡಿಕೊಂಡು, ನಿತ್ಯದಲಿ, ನೆಲದಲಿ**= ಭೂಮಿಯಲ್ಲಿ, **ಇಹ**= ಇರುವ, **ಗಂಧವೆ**= ಸಹಜವಾದ ಗಂಧಗುಣವೆ, **ಸುಗಂಧವು**= ಪರಮಾತ್ಮನ ಪೂಜಾ ಸಾಧನವಾದ ಸುಗಂಧವು, **ಜಲವೆ**= ಉದಕದಲ್ಲಿರುವ ರಸಗುಣವೇ ಷಡ್ರಸ ಪದಾರ್ಥಗಳು. **ರೂಪವೆ**= ಅಗ್ನಿಯಲ್ಲಿರುವ ರೂಪಗುಣವೆ ಸಮೀಚೀನವಾದ ಪೂಜಾಸಾಧನವಾದ **ದೀಪವು**. **ಯಲರು**= ವಾಯುವೆ ಅಂದರೆ ವಾಯುವಿನಲ್ಲಿರುವ ಸ್ಪರ್ಶಗುಣವೆ, **ಚಾಮರವು**= ಪೂಜೋಪಯುಕ್ತ ಚಾಮರವು, **ಶಬ್ದ**= ಆಕಾಶದಲ್ಲಿರುವ ಶಬ್ದ ಗುಣವೇ ವಾದ್ಯಗಳು, **ಅರ್ಪಿಸಲು**= ಹೀಗೆ ಭಾವಿಸಿ ಸಮರ್ಪಿಸಿದರೆ, **ಒಲಿವ**= ಪ್ರೀತನಾಗುವನು.

ತಾತ್ಪರ್ಯ :—ಪ್ರಕಾರಾಂತರವಾಗಿ ಪಂಚ ತನ್ಮಾತ್ರಾಗುಣಗಳಲ್ಲಿ ಭಗವತ್ಪೂಜಾಸಾಧನವನ್ನು ಹೇಳುತ್ತಾರೆ :—ಕಮಲನಾಭನ, ರಾಮ ಕೃಷ್ಣಾದಿ ರೂಪಗಳನ್ನು ನಿಶ್ಚಲವಾದ ಭಕ್ತಿಯಿಂದ ಮನಸ್ಸಿನಲ್ಲಿ ಸ್ಥಿರವಾಗಿ ನಿಲ್ಲಿಸಿ ಮಾತ್ರಾಸ್ಪರ್ಶಗಳಿಂದಾಗುವ ಛಳಿ, ಗಾಳಿ, ಬಿಸಲು, ಮಳೆ ಮೊದಲಾದವುಗಳ ದೋಷಗಳನ್ನು ದೂಷಿಸದೆ ಆಯಾಕಾಲದಲ್ಲಿ ಈಶ್ವರ ಸಂಕಲ್ಪದಿಂದ ಪ್ರಾಪ್ತವಾದುದನ್ನು ಸಹನಮಾಡಿಕೊಂಡು ಮನಸ್ಸಿನಲ್ಲಿಯೇ ಪರಮಾತ್ಮನನ್ನು ಪೂಜಿಸುತ್ತಾ ಪೃಥ್ವಿ ಅಪ್ಪು ತೇಜಸ್ಸು, ವಾಯು, ಆಕಾಶವೆಂಬ ಪಂಚ ಭೂತಗಳ ಮಾತ್ರಾ ಗುಣಗಳಲ್ಲಿನ ಗಂಧವೇ ಸುಗಂಧವೆಂತಲೂ, ರಸವೇ, ಷಡ್ರಸಯುಕ್ತ ನೈವೇದ್ಯವೆಂತಲೂ, ರೂಪವೇ ದೀಪವೆಂತಲೂ, ಸ್ಪರ್ಶವೇ ಚಾಮರವೆಂತಲೂ, ಶಬ್ದವೇ ವಾದ್ಯಗಳೆಂದು ಭಾವಿಸಿ ಪೂಜಿಸಿದರೆ ಶ್ರೀ ಪರಮಾತ್ಮನು ಅನುಗ್ರಹ ಮಾಡುವನು. ಒಟ್ಟು ಅಭಿಪ್ರಾಯವೇನೆಂದರೆ ಈ ಭೂಮಿಯಲ್ಲಿ ಯಾವ ಸ್ಥಳದಲ್ಲಿ ನಾವಿದ್ದರೂ ಯಾವ ವಿಧವಾದ ಸುವಾಸನೆಯನ್ನು ನಮ್ಮ ಘ್ರಾಣೇಂದ್ರಿಯದಿಂದ ನಾವು ಆಘ್ರಾಣಿಸಿದರೂ, ಆಹಾ! ಎಂತಹಸುವಾಸನೆ! ಏನಾನಂದ! ಎಂದು ತನ್ನೊಳು ತಾನೇ ತೃಪ್ತನಾಗದೆ ಆ ಸುವಾಸನೆಯನ್ನು ಘ್ರಾಣಾಂತರ್ಯಾಮಿ, ಗಂಧಗುಣವಿಶಿಷ್ಟಭೂತತ್ವ ರೂಪಿಯಾದ ಶ್ರೀ ಪರಮಾತ್ಮನಿಗೆ ಇದೇ ಸುಗಂಧವಾಗಿ ಅರ್ಪಿಸುವೆನು ಎಂದು ಸಮರ್ಪಿಸಬೇಕು. ಷಡ್ರಸಗಳೊಳಗಿನ ರುಚಿಯನ್ನು ನಾವು ಜಿಹ್ವೇಂದ್ರಿಯದಿಂದ ಸ್ವೀಕರಿಸುವಾಗ ಆ ರುಚಿಯನ್ನು ರಸದಲ್ಲಿ ರಸರೂಪದಿಂದ ನಮ್ಮ ನಾಲಿಗೆಯಲ್ಲಿರುವ ಪರಮಾತ್ಮನಿಗೆ ಈ ಷಡ್ರಸಗಳ ರುಚಿಯನ್ನು ಸಮರ್ಪಿಸುವೆನು, ಎಂದು ಸಮರ್ಪಣೆ ಮಾಡಬೇಕು. ಇದರಂತೆ ಯಾವ ರೂಪ

ಗಳನ್ನು ನೋಡಿದರೂ ರೂಪಗುಣದಲ್ಲಿ ತನ್ನಾಮಕನಾಗಿರುವ ಪರಮಾತ್ಮನಿಗೆ ನಮ್ಮ ಕಣ್ಣಿಗೆ ಗೋಚರಿಸುವ ತೇಜೋಮಯ ರೂಪಗಳೆಲ್ಲವನ್ನೂ ದೀಪವನ್ನಾಗಿ ಸಮರ್ಪಿಸುವೆನು ಎಂದೆನ್ನಬೇಕು ಬಿಸಲು ತಾಪದಿಂದ ನಾವು ತಪ್ತರಾದಾಗ ಸುಖವಾದ ತಂಗಾಳಿ ಬೀಸಿದರೆ ಆ ಸ್ಪರ್ಶಸುಖವನ್ನು ಸ್ಪರ್ಶಗುಣದಲ್ಲಿರುವ ಪರಮಾತ್ಮನಿಗಿದು ಚಾಮರವೆಂದು ಸಮರ್ಪಿಸಬೇಕು. ಕಿವಿಯಲ್ಲಿ ಬೀಳುವ ಎಲ್ಲಾ ಸುಶಬ್ದಗಳನ್ನೂ ಪರಮಾತ್ಮನಿಗೆ ವಾದ್ಯಗಳೆಂದು ಸಮರ್ಪಿಸಿ ಪೂಜಿಸಿದರೆ ಶೀತೋಷ್ಣಾದಿ ದ್ವಂದಗಳು ಜೀವನಿಗೆಲ್ಲಿಹುದು? ಅವನು ಶೀಘ್ರದಲ್ಲಿ ಭಗವದನುಗ್ರಹಕ್ಕೆ ಪಾತ್ರನಾಗುವನು.

ಗೋಳಕಗಳು ರಮಾರಮಣನ ನಿ
ಜಾಲಯಗಳನುದಿನದಿ ಸಂಪ್ರ
ಕ್ಷಾಲನೆಯೆ ಸಂಮಾರ್ಜನವು ಕರಣಗಳೆ ದೀಪಗಳು ||
ಸಾಲು ತತ್ತದ್ವಿಷಯಗಳ ಸಂ
ಮೇಳನವೇ ಪರಿಯಂಕ ತತ್ಸುಖ
ದೋಳಿಗೆಯೆ ಸುಪ್ಪತ್ತಿಗಾತ್ಮನಿವೇದನವೆ ವಸನ || ೧೪ ||

ಪದ್ಯಾರ್ಥ :—ಗೋಳಕಗಳು = ಕರಚರಣಾದ್ಯವಯವಗಳಿಂದ ಕೂಡಿದ ಮೇಲಿನ ಸ್ಥೂಲದೇಹ, ಅದರ ಒಳಗಿನ ಅನಿರುದ್ಧದೇಹ ಲಿಂಗದೇಹ ಮೊದಲಾದವು, ರಮಾರಮಣನ = ರಮಾಪತಿಯ, ನಿಜಾಲಯಗಳು = ದೇವಾಲಯಗಳು, ಅನುದಿನದಿ = ಪ್ರತಿದಿನದಲ್ಲಿಯೂ, ಪ್ರಕ್ಷಾಲನೆಯೆ = ದೇಹವನು ತೊಳೆಯುವುದು, (ಸ್ನಾನಮಾಡುವದೆ) ಸಂಮಾರ್ಜನವು = ಪರಮಾತ್ಮನ ಗುಡಿಗಳನ್ನು ಬಳಿದು ಸಾರಿಸುವುದು, ಕರಣಗಳೆ = ಕರಚರಣಾದಿ ಇಂದ್ರಿಯಗಳೆ ದೀಪಗಳ ಸಾಲು, ತತ್ತದ್ವಿಷಯಗಳ ಸಮ್ಮೇಳನವೆ = ವಿಷಯೀಭೂತವಾದ ಕಣ್ಣು ಕಿವಿ ಮೊದಲಾದ ಇಂದ್ರಿಯಗಳಿಗೂ ರೂಪ ರಸ ಮೊದಲಾದ ಮಾತ್ರಾಗುಣಗಳನ್ನು ಸೇವಿಸುವುದೇ, ಅಂದರೆ, ಕಣ್ಣಿನಿಂದ ನೋಡುವುದು, ಕಿವಿಯಿಂದ ಕೇಳುವುದು ಮೊದಲಾದವುಗಳೆಂದು ಅರ್ಥ. ಇವುಗಳೆ, ಪರಿಯಂಕ = ಮಂಚವು ಅಥವಾ ಹಾಸಿಗೆ, ತತ್ಸುಖದೋಳಿಗೆಯೆ = ನೋಡಿ ಕೇಳಿ ಅನುಭವಿಸುವ ಸುಖವೃದ್ಧಿಯೆ, ಸುಪ್ಪತ್ತಿಗೆ = ಹೊದ್ದಿಕೆ. ಆತ್ಮನಿವೇದನವೆ = ದಾರಾಗಾರಸುತಾದಿಗಳಿಂದ ಸಹಿತವಾದ ತನ್ನ ಶರೀರವನ್ನು ಪರಮಾತ್ಮನಿಗೆ ಸಮರ್ಪಣೆ ಮಾಡುವುದೇ, ವಸನ = ವಸ್ತ್ರವು || ೧೪ ||

ತಾತ್ಪರ್ಯ:—ತನ್ನ ದೇಹೇಂದ್ರಿಯಗಳಿಂದ ತಾನು ಮಾಡುವ ಕರ್ಮ ಗಳೆಲ್ಲವೂ ಪರಮಾತ್ಮನ ಪೂಜೆಯೆಂದು ಭಾವಿಸಬೇಕೆಂಬ ವಿಷಯವನ್ನು ವಿಸ್ತ ರಿಸುತ್ತಾರೆ. ಕೆಲವು ಪದಾರ್ಥಗಳಿಂದ ವಿಭೂತಿ ಸಂಧಿಯೆಂದು ಉಪಕ್ರಮಿಸಿ ಇದಕ್ಕೆ ಸಂಬಂಧವಿಲ್ಲದ ಈ ವಿಷಯಗಳನ್ನು ದಾಸರಾಯರು ಇಲ್ಲಿ ಹೇಳಲು ಕಾರಣವೇನೆಂದು ಆಕ್ಷೇಪಿಸಬಾರದು. ಅದೇಕೆಂದರೆ, ಮೇಲಿನ ಪದ್ಯಗಳಲ್ಲಿ ಇಂದ್ರಿಯಗಳಲ್ಲಿಯೂ, ಪಂಚ ಮಹಾ ಭೂತಗಳಲ್ಲಿಯೂ, ತನ್ಮಾತ್ರಾ ಗುಣ ಗಳಲ್ಲಿಯೂ, ವಿಭೂತಿಯನ್ನು ಚಿಂತಿಸಿ ಪೂಜಿಸುವ ಪ್ರಕಾರವನ್ನು ಹೇಳಿದರು. ''ಸಂಕೋಚ ವಿಸ್ತರಾಭ್ಯಾಂಚ ಕಥಯಂತಿ ಮನೀಷಿಣಃ'' ಎಂಬ ಪ್ರಮಾ ಣಾನುಸಾರ ಮೊದಲು ಸಂಕೋಚವಾಗಿ ದಿಕ್‌ಪ್ರದರ್ಶನಮಾಡಿ ಆಮೇಲೆ ಅವುಗಳನ್ನೇ ವಿಸ್ತರಿಸುವುದು ಜ್ಞಾನಿಗಳ ಸಂಪ್ರದಾಯವು. ಅದರಂತೆ ದಾಸ ರಾಯರು 'ಬಾಂದಳವೆ ಮೊದಲಾದ' ಎಂಬ ಪದ್ಯದಿಂದ ಆಕಾಶಾದಿ ಒಂದೊಂದರೊಳಗೂ ನೂತನವಾದ ಅನೇಕ ವಿಧ ಪೂಜಾಸಾಧನ ದ್ರವ್ಯಗ ಳನ್ನು ಚಿಂತಿಸಬೇಕು ಎಂದು ಹೇಳಿದ್ದರು. ಪೂಜಾಸಾಧನಗಳನ್ನೇ ಈ ಪದ ಗಳಿಂದ ಹೇಳುತ್ತಾ ಬರುತ್ತಿದ್ದಾರೆ. ಅದೇ ವಿಷಯವಾಗಿ ದೇಹೇಂದ್ರಿಯಾದಿ ಗಳಿಂದ ಮಾಡುವ ಎಲ್ಲಾ ವಿಷಯಗಳೂ ಪೂಜೆಯೆಂದೇ ಭಾವಿಸಬೇಕೆಂದು ಹೇಳಿದುದು ಅಸಂಬಂಧವಲ್ಲವೆಂದು ತಿಳಿಯಬೇಕು. ರಮಾಪತಿಯಾದ ಶ್ರೀ ಪರಮಾತ್ಮನಿಗೆ, ನಮ್ಮ ಸ್ಥೂಲದೇಹ, ಅನಿರುದ್ಧದೇಹ, ಸೂಕ್ಷ್ಮಲಿಂಗ ಶರೀರ ಮೊದಲಾದವು ದೇವಾಲಯವೆಂದು ಭಾವಿಸಬೇಕು. ಸ್ನಾನಾದಿಗಳನ್ನು ಮಾಡಿ ನಾವು ದೇಹವನ್ನು ಶುದ್ಧಿಮಾಡಿಕೊಳ್ಳುವುದೇ, ಪರಮಾತ್ಮನ ಗುಡಿಯನ್ನು ಕಸ ಬಳಿದು ಸಾರಿಸುವುದೆಂದು ಭಾವಿಸಬೇಕು. ಕರಚರಣಾದಿಗಳೇ ದೀಪ ಗಳ ಸಾಲು, ನೋಡುವದು, ಹೇಳುವುದು ಮೊದಲಾದ ವಿಷಯಾನುಭವವೇ ಹಾಸಿಕೆ, ವಿಷಯಾನುಭವದಿಂದ ಅನುಭವಿಸುವ ಸುಖವೇ ಹೊದ್ದಿಕೆ. ತನ್ನ ಶರೀರ ತನ್ನ ಹೆಂಡತಿ ಮಕ್ಕಳು ಮೊದಲಾದ ಸಕಲವನ್ನು ಪರಮಾತ್ಮನಿಗೆ ಒಪ್ಪಿಸುವುದೇ ವಸ್ತ್ರವು ॥ ೧೪ ॥

ಪಾಪ ಕರ್ಮವು ಪಾದುಕಗಳನು
ಲೇಪನವು ಸತ್ಪುಣ್ಯ ಶಾಸ್ತ್ರಾ
ಲಾಪವೇ ಶ್ರೀ ತುಲಸಿ ಸುಮನೋವೃತ್ತಿಗಳೆ ಸುಮನಾ ॥
**ಕೋಪ ಧೂಪವು ಭಕ್ತಿಭೂಷಣ**

ವ್ಯಾಪಿಸಿದ ಸುಬುದ್ಧಿ ಛತ್ರವು
ದೀಪವೆ ಸುಜ್ಞಾನ ಆರ್ತಿಗಳೆ ಗುಣಕಥನ ||೧೫||

ಪದ್ಯಾರ್ಥ:—ಪಾಪಕರ್ಮವು=ಅಜ್ಞಾನ ಪೂರ್ವಕ ದೈವ ಸಂಕಲ್ಪದಿಂದ ನಡೆದುಹೋದ ಪಾಪ ಕರ್ಮಗಳು, ಪಾದುಕಗಳು=ಚೆಪ್ಪಲಿಗಳು, ಸತ್ಪುಣ್ಯ ಶಾಸ್ತ್ರಾಲಾಪವೇ ಉತ್ತಮವಾದ = ಪುಣ್ಯಕರವಾದ ಶಾಸ್ತ್ರಪ್ರವಚನವೆ ಅಥವಾ ಶಾಸ್ತ್ರವಿಷಯಕವಾದ ಮಾತುಗಳೇ, ಅನುಲೇಪನವು=ಸುಗಂಧವು. ಸುಮನಸ್ಸು=ಉತ್ಕೃಷ್ಟ ಕರ್ಮಗಳಲ್ಲಿ, ಅಥವಾ ಭಗವಂತನಲ್ಲಿ ಪ್ರವಿಷ್ಟವಾದ ಮನಸ್ಸೇ ಶ್ರೀ ತುಳಸಿ, ವೃತ್ತಿಗಳು=ಇಂದ್ರಿಯ ವೃತ್ತಿಗಳು, ಸುಮನಾ =ಪುಷ್ಪಗಳು, ಕೋಪವು=ಭಗವದ್ವೇಷಿಗಳಲ್ಲಿ ಮಾಡುವ ಕೋಪವು, ಧೂಪವು=ಸುಧೂಪವು, ಭಕ್ತಿ=ಅವಿಚ್ಛಿನ್ನವಾದ ಭಕ್ತಿಯೇ, ಭೂಷಣ= ಆಭರಣಗಳು, ವ್ಯಾಪಿಸಿದ ಸುಬುದ್ಧಿ=ಸದ್ವಿಷಯಗಳಲ್ಲಿ ವ್ಯಾಪಿಸಿ ಇರುವ ಉತ್ತಮ ಬುದ್ಧಿಯು, ಛತ್ರವು=ಛತ್ರಿಯು, ಸುಜ್ಞಾನವೆ= ಉತ್ತಮವಾದ ಜ್ಞಾನವೆ, ದೀಪವು=ಬೆಳಕು, ಗುಣಕಥನ=ಪರಮಾತ್ಮನ ಗುಣಗಳನ್ನು ಹೇಳುವುದೇ, ಆರ್ತಿಗಳು=ಮಂಗಳಾರತಿಗಳು ||೧೫||

ತಾತ್ಪರ್ಯ:—ನಮ್ಮ ಮನಃಪೂರ್ವಕವಾಗಿ ಪಾಪಗಳನ್ನು ಮಾಡದೆ ದೈವ ಸಂಕಲ್ಪದಿಂದ ಅಜ್ಞಾನ ವಶಾತ್ ಪಾಪಗಳು ನಡೆದರೆ ಅವುಗಳನ್ನು ಪರಮಾತ್ಮನಿಗೆ ಪಾದುಕಗಳೆಂದು ಸಮರ್ಪಿಸಬೇಕು. ಉತ್ತಮ ಪುಣ್ಯಪ್ರದವಾದ ಸಚ್ಛಾಸ್ತ್ರಪಾಠ ಪ್ರವಚನಾದಿಗಳೇ ಸುಗಂಧವು ಎಂದು ಭಾವಿಸಬೇಕು. ಪರಮಾತ್ಮನ ಪಾದಾರವಿಂದದಲ್ಲಿರುವ ಮನಸ್ಸೇ ಶ್ರೀ ತುಳಸಿ. ಇಂದ್ರಿಯ ವೃತ್ತಿಗಳೇ ಪುಷ್ಪಗಳು. ಭಗವದ್ವೇಷಿಗಳಲ್ಲಿ ನಾವು ಮಾಡುವ ಕೋಪವು ಪರಮಾತ್ಮನಿಗೆ ಧೂಪವೆಂದು ಭಾವಿಸಬೇಕು. ಸದ್ಭಕ್ತಿಯೇ ಆಭರಣಗಳು. ಸರ್ವತ್ರ ವ್ಯಾಪ್ತನಾದ ಪರಮಾತ್ಮನಲ್ಲಿ ವಿಸ್ತಾರವಾಗಿ ವ್ಯಾಪಿಸಿದ ಬುದ್ಧಿಯೇ ಛತ್ರಿಯು. ಸುಜ್ಞಾನವೇ ದೀಪವು. ಪರಮಾತ್ಮನ ಗುಣಗಳನ್ನು ವರ್ಣಿಸುವುದೇ ಮಂಗಳಾರತಿಗಳೆಂದು ಭಾವಿಸಬೇಕು ||೧೫||

ಮನವಚನಕಾಯಕ ಪ್ರದಕ್ಷಿಣೆ
ಯನುದಿನದಿ ಸರ್ವತ್ರ ವ್ಯಾಪಕ
ವನರುಹೇಕ್ಷಣಗರ್ಪಿಸುತ ಮೋದಿಸುತಲಿರು ಸತತ ||
ಅನುಭವಕೆ ತಂದುಕೊ ಸಕಲ ಸಾ

ಧನಗಳೊಳಗಿದು ಮುಖ್ಯ ಪಾಮರ
ಮನುಜರಿಗೆ ಪೇಳಿದರೆ ತಿಳಿಯದು ಬುಧರಿಗಲ್ಲದಲೆ || ೧೬ ||

ಪದ್ಯಾರ್ಥ:—ಸರ್ವತ್ರವ್ಯಾಪಕ=ಸರ್ವತ್ರ ವ್ಯಾಪ್ತನಾದ, ವನರುಹೇಕ್ಷಣಗೆ=ಕಮಲಾಕ್ಷನಾದ ಶ್ರೀ ಪರಮಾತ್ಮನಿಗೆ, ಅನುದಿನದಿ=ಪ್ರತಿ ದಿವಸದಲ್ಲಿಯೂ, ಮನವಚನಕಾಯಕ=ಮನೋವಾಕ್ಕಾಯ ಸಂಬಂಧವಾದ ವ್ಯಾಪಾರಗಳನ್ನೇ, ಪ್ರದಕ್ಷಿಣೆ=ಪ್ರದಕ್ಷಿಣೆಯೆಂದು ಭಾವಿಸಿ, ಅರ್ಪಿಸುತ=ಆ ಪರಮಾತ್ಮನಿಗೆ ಸಮರ್ಪಣೆಮಾಡುತ್ತ, ಸತತ=ಸರ್ವಕಾಲದಲ್ಲಿಯೂ, ಮೋದಿಸುತಲಿರು=ಆನಂದಪಡುತ್ತಿರು, ಅನುಭವಕೆ ತಂದುಕೊ! ಎಲೈ ಅಧಿಕಾರಿಯಾದ ಮಾನವನೇ; ನಾವು ಹೇಳಿದುದನ್ನು ಅನುಭವಕ್ಕೆ ತಂದುಕೋ! (ಹೇಳಿದ ರೀತಿಯಲ್ಲಿ ಮಾಡು) ಸಾಧನಗಳೊಳಗೆ=ನಾವು ಮುಕ್ತಿಗಾಗಿ ಸಾಧನಮಾಡುವ ಮಾರ್ಗಗಳು, ಅನೇಕವಿದ್ದರೂ, ಆ ಸಾಧನಗಳೊಳಗೆ, ಇದು ಮುಖ್ಯ=ಮುಖ್ಯ ಸಾಧನವೆಂದು ತಿಳಿ! ಬುಧರಿಗಲ್ಲದೆಲೆ=ಜ್ಞಾನಿ ಜನರಿಗೆ ಹೊರತು, ಪಾಮರ ಮನುಜರಿಗೆ=ಅಜ್ಞಾನಿಗಳಿಗೆ ಪೇಳಿದರೆ, ತಿಳಿಯದು=ಈ ಮೇಲೆ ಹೇಳಿದ ವಿಷಯಗಳು ಗೊತ್ತಾಗವು || ೧೬ ||

ತಾತ್ಪರ್ಯ:—ಮನಸ್ಸಿನಿಂದಲೂ, ವಾಕ್ಯದಿಂದಲೂ, ಶರೀರದಿಂದಲೂ ಮಾಡುವ ಸಕಲ ಕಾರ್ಯಗಳನ್ನೂ ಶ್ರೀ ಪರಮಾತ್ಮನಿಗೆ ಪ್ರದಕ್ಷಿಣೆಯೆಂದು ಭಾವಿಸಿ ಅವುಗಳನ್ನು ಶ್ರೀ ಪರಮಾತ್ಮನಿಗೆ ಅರ್ಪಿಸುತ್ತಾ, ಆನಂದಪಡುತ್ತಲಿರು. ಈ ವಿಷಯಗಳು ಹೇಳೋಣದರಿಂದಲೇ ತಿಳಿಯಲು ಸಾಧ್ಯವಲ್ಲ. ಅನುಭವಮಾಡಿ ಮನಸ್ಸಿಗೆ ತಂದುಕೋ. ಇದಕ್ಕಿಂತಲೂ ದೊಡ್ಡ ಸಾಧನವು ಮುಕ್ತಿಗೆ ಬೇರೆಯಿಲ್ಲವೆಂದು ನಿಶ್ಚಯವಾಗಿ ತಿಳಿ! ಆದರೆ, ಇದು ಸಾಮಾನ್ಯ ಜನರ ಮನಸ್ಸಿಗೆ ಬರುವುದು ಕಷ್ಟ ಸಾಧ್ಯ. ಜ್ಞಾನಿಗೋಚರವಾದುದು. ಅಜ್ಞರಿಗೆ ಈ ಉಪದೇಶದಿಂದೇನು ? ಎಂದು ಉದಾಸೀನ ಮಾಡಬೇಡಿ. ಪ್ರಯತ್ನಮಾಡಿ, ತಿಳಿಯದ ಭಾಗವನ್ನು ಗುರುಮುಖದಿಂದ ತಿಳಿದು ಅನುಭವಕ್ಕೆ ತಂದುಕೊಳ್ಳಬೇಕೆಂಬುವುದೇ ದಾಸರಾಯರ ತಾತ್ಪರ್ಯವು.

ಚತುರವಿಧ ಪುರುಷಾರ್ಥ ಪಡೆವರೆ
ಚತುರದಶಲೋಕಗಳ ಮಧ್ಯದೊ
ಳಿತರುಪಾಯಗಳಿಲ್ಲ ನೋಡಲು ಸಕಲ ಶಾಸ್ತ್ರದಲಿ ||
ಸತತವಿಷಯೇಂದ್ರಿಯಗಳಲಿ ಪ್ರವಿ

**ತತನೆನಿಸಿ ರಾಜಿಸುವ ಲಕುಮೀ**
**ಪತಿಗೆ ಸರ್ವಸಮರ್ಪಣೆಯು ಮಹಪೂಜಸೋದುಪಾಯಾ || ೧೭ ||**

ಪದ್ಯಾರ್ಥ :—ಚತುರ್ವಿಧ ಪುರುಷಾರ್ಥಪಡೆವರೆ=ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ೪ ವಿಧ ಪುರುಷಾರ್ಥಗಳನ್ನು ಪಡೆಯಬೇಕಾದರೆ, ಚತುರ್ದಶ ಲೋಕಗಳ ಮಧ್ಯದೊಳ್=೧೪ ಲೋಕಗಳ ಮಧ್ಯದಲ್ಲಿ, ಸಕಲ ಶಾಸ್ತ್ರದಲಿ =ಸಕಲ ಶಾಸ್ತ್ರಗಳಲ್ಲಿ, ನೋಡಲು=ನೋಡಿದರೂ ಇತರುಪಾಯಗಳು= ಬೇರೆ ಉಪಾಯಗಳು, ಇಲ್ಲ. ಮುಂದೆ ಹೇಳತಕ್ಕದ್ದು ಒಂದೆ ಸತತ=ಸರ್ವ ಕಾಲದಲ್ಲಿಯೂ, ವಿಷಯೇಂದ್ರಿಯಗಳಲಿ=ವಿಷಯ ಸುಖಾನುಭವಕ್ಕೆ ಕಾರಣ ಗಳಾದ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಲ್ಲಿ ಪ್ರವಿತತನೆನಿಸಿ= ವ್ಯಾಪ್ತನೆಂದೆ ನಿಸಿ, ರಾಜಿಸುವ=ಪ್ರಕಾಶಿಸುವ, ಲಕುಮೀಪತಿಗೆ=ಲಕ್ಷ್ಮೀಪತಿಗೆ, ಸರ್ವ ಸಮರ್ಪಣೆಯು=ಸರ್ವ ಸಮರ್ಪಣೆ ಮಾಡುವುದೆಂಬ, ಮಹಪೂಜಿಸೋದು =ಮಹಾಪೂಜೆ ಮಾಡುವುದು, ಉಪಾಯ=ತಕ್ಕುಪಾಯವು.

ತಾತ್ಪರ್ಯ :—ಸಕಲ ಸಮರ್ಪಣೆಯಿಂದ ಪರಮಾತ್ಮನನ್ನು ಧ್ಯಾನಿ ಸುವುದಕ್ಕಿಂತಲೂ ದೊಡ್ಡ ಸಾಧನವು ಮತ್ತಾವುದೂ ಇಲ್ಲವೆಂದು ಹೇಳು ತ್ತಾರೆ :—

ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥ ಗಳನ್ನು ಪಡೆಯಬೇಕಾದರೆ ಈ ೧೪ ಲೋಕಗಳಲ್ಲಿ ಯಾವ ಸಚ್ಛಾಸ್ತ್ರಗಳನ್ನು ಹುಡುಕಿದರೂ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಲ್ಲಿ ತದ್ರೂಪಿಯಾಗಿ ತನ್ನಾ ಮಗಳಿಂದ ಕೂಡಿ ಇಂದ್ರಿಯಾದಿಗಳಲ್ಲಿ ವ್ಯಾಪ್ತನಾದ ಪರಮಾತ್ಮನಿಗೆ ಆಯಾ ಇಂದ್ರಿಯಗಳಿಂದ ಮಾಡಿದ ಪುಣ್ಯ ಪಾಪಾದಿಗಳನ್ನೆಲ್ಲಾ ಸಮರ್ಪಣೆಮಾಡು ವದೊಂದು ಹೊರತು ಬೇರೆ ಆವ ಉಪಾಯವು ದೊರಕಲಾರವು. || ೧೭ ||

ಗೋಳಕವೆ ಕುಂಡಾಗ್ನಿ ಕರಣವು
ಮೇಲೊದಗಿಬಹ ವಿಷಯ ಸಮಿಧೆಯು
ಗಾಳಿ ಯತ್ನವು ಕಾಮಧೂಮವು ಸನ್ನಿಧಾನಾರ್ಚೀ ||
ಮೇಲನವೆ ಪ್ರಜ್ವಾಲಿ ಕಿಡಿಗಳು
ತೂಳಿದಾನಂದಗಳು ತತ್ತ
ತ್ಕಾಲ ಮಾತುಗಳೆಲ್ಲ ಮಂತ್ರಾಧ್ಯಾತ್ಮಯಜ್ಞವಿದು || ೧೮ ||

ಪದ್ಯಾರ್ಥ :—ಗೋಳಕವೆ=ಸೂಕ್ಷ್ಮ ಸ್ಥೂಲಶರೀರಗಳೇ, ಕುಂಡ= ಅಗ್ನಿಕುಂಡವು, ಕರಣವು=ಇಂದ್ರಿಯಗಳು, ಅಗ್ನಿ, ಮೇಲೊದಗಿಬಹವಿಷಯ

=ಆಗಾಗ್ಯೆ ಪ್ರಾಪ್ತವಾಗುವ ವಿಷಯಗಳೆ, ಸಮಿಧಿಯು = ಕಾಷ್ಠವು, ಯತ್ನವು=ವಿಷಯ ಪ್ರಯತ್ನವೇ, ಗಾಳಿ, ಕಾಮ = ವಿಷಯೇಚ್ಛೆಯೇ, ಧೂಮವು=ಹೊಗೆಯು, ಸನ್ನಿಧಾನ=ವಿಷಯೇಂದ್ರಿಯಗಳಿಗೂ, ವಿಷಯ ಭೋಗ್ಯ ವಸ್ತುಗಳಿಗೂ ಸಾಮಿಪ್ಯವೇ, ಅರ್ಚಿ=ಅಗ್ನಿಜ್ವಾಲೆಯು, ಮೇಳ ನವೆ=ವಿಷಯೇಂದ್ರಿಯಗಳಿಗೂ, ಭೋಗ್ಯವಸ್ತುಗಳಿಗೂ, ಪರಸ್ಪರ ಸಂಬಂಧವೇ, ಪ್ರಜ್ವಾಲಿ=ವಿಶೇಷ ಜ್ವಾಲೆಯು. ತೂಳಿದಾನಂದಗಳು=ಭೋಗದಿಂದ ಉಕ್ಕಿಬರುವ ಆನಂದಗಳೇ ಕಿಡಿಗಳು, ತತ್ತತ್ಕಾಲಮಾತುಗಳೆಲ್ಲ= ಆಯಾ ಕಾಲಗಳಲ್ಲಿ ಮಾತನಾಡುವ ಮಾತುಗಳೆಲ್ಲವೂ, ಮಂತ್ರ=ಮಂತ್ರಗಳು, ಇದು=ಹೀಗೆ, ಚಿಂತಿಸುವುದೆ ಅಧ್ಯಾತ್ಮಯಜ್ಞ. || ೧೮ ||

ತಾತ್ಪರ್ಯ :—ದೇಹೇಂದ್ರಿಯ ವ್ಯಾಪಾರಗಳನ್ನೇ ಆಧ್ಯಾತ್ಮಯಜ್ಞವೆಂದು ಚಿಂತಿಸುವುದು ಒಂದು ಪರಮಾತ್ಮನ ಪೂಜೆಯೆಂದು ಹೇಳುತ್ತಾರೆ:-

ಸ್ಥೂಲ ಶರೀರ ಮತ್ತು ಸೂಕ್ಷ್ಮವಾದ ನಮ್ಮ ಶರೀರಗಳೇ ಅಗ್ನಿಕುಂಡವು. ಚಕ್ಷುಃ ಶ್ರೋತ್ರಾದಿ ಇಂದ್ರಿಯಗಳೇ ಅಗ್ನಿ. ಚಕ್ಷುರಾದಿಗಳಿಂದ ಆಗಾಗ್ಯೆ ಪ್ರಾಪ್ತವಾಗುವ ನೋಡುವುದು ಕೇಳುವುದು ಮೊದಲಾದ ವಿಷಯಗಳೇ ಕಾಷ್ಟವು. ನೋಡಲಿಕ್ಕೂ ಕೇಳಲಿಕ್ಕೂ ಪ್ರಯತ್ನಿಸುವುದೇ ಗಾಳಿ. ವಿಷಯ ಭೋಗಗಳ ಇಚ್ಛೆಯೇ ಹೊಗೆ. ಕಣ್ಣು ಕಿವಿ ಮೊದಲಾದ ಇಂದ್ರಿಯಗಳಿಗೆ ನೋಡಲಿಕ್ಕೂ ಕೇಳಲಿಕ್ಕೂ ಅರ್ಹವಾದ ಪದಾರ್ಥಗಳು ಅಂದರೆ ಸುಂದರ ರೂಪವುಳ್ಳ ವಸ್ತು ಇಂಪಾದ ಗಾನ ಮೊದಲಾದ ವಸ್ತುಗಳ ಸಾಮಿಪ್ಯವೇ ಜ್ವಾಲೆಯು. ಇಂದ್ರಿಯಗಳಿಗೆ ಭೊಗ್ಯ ವಸ್ತುಗಳ ಸಮ್ಮೇಳನವೇ ವಿಶೇಷ ಜ್ವಾಲೆಯು, ಅದರಿಂದ ಉಕ್ಕಿ ಬರುವ ಆನಂದವೇ ಕಿಡಿಗಳು, ಆಯಾ ಕಾಲಾನುಗುಣವಾಗಿ ಆಡುವ ಮಾತುಗಳೆಲ್ಲವೂ ಮಂತ್ರವು. ಹೀಗೆ ನಾವು ಮಾಡುವ ಒಂದೊಂದು ವಿಷಯವನ್ನೂ ಭಗವದುದ್ದಿಶ್ಯವಾಗಿ ಚಿಂತಿಸುವುದಕ್ಕೆ ಆಧ್ಯಾತ್ಮ ಯಜ್ಞವೆಂದು ಹೆಸರು. ಪ್ರತ್ಯಕ್ಷ ಯಾಗಗಳನ್ನು ಮಾಡುವುದಕ್ಕಾಗಿ ಅಗ್ನಿಯ ಮುಂದೆ ಕೂತು ಕಷ್ಟಸಾಧ್ಯವಾದ ಯಾಗಗಳನ್ನು ಮಾಡಿದರೂ ಈ ಆಧ್ಯಾತ್ಮ ಯಾಗಕ್ಕೆ ಸಮವಾದ ಫಲವು ಬಾರದು. ಈ ರೀತಿಯಾದ ಆಧ್ಯಾತ್ಮ ಯಜ್ಞಾಚರಣೆಯು ವಿಶೇಷವಾದ ಪರಮಾತ್ಮನ ಪೂಜೆಯೆಂದು ತಿಳಿಯಬೇಕು. ದ್ರವ್ಯಯಜ್ಞಾದಿಗಳು ಕಷ್ಟಸಾಧ್ಯ, ಫಲ ಕಮ್ಮಿ, ಈ ಯಜ್ಞವು ಸುಲಭಸಾಧ್ಯ. ಫಲಾಧಿಕ್ಯ ' ಶಬ್ದಾದೀನ್ವಿಷಯಾನನ್ಯೇ

ಇಂದ್ರಿಯಾಗ್ನಿಷು ಜುಹ್ವತಿ' ಕೆಲವು ಜ್ಞಾನಿಗಳು ಶಬ್ದಾದಿಗಳಿಂದ ಅನುಭವಿಸುವ ವಿಷಯ ಭೋಗಗಳನ್ನು ಇಂದ್ರಿಯಾಗ್ನಿಗಳಲ್ಲಿ ಹೋಮಮಾಡುವರು. ಎಂಬ ಗೀತಾವಾಕ್ಯ ಸಂಗ್ರಹವನ್ನೇ ಇಲ್ಲಿ ವಿಸ್ತಾರವಾಗಿ ಹೇಳಿರುವರು.

ಮಧುವಿರೋಧಿಯ ಪಟ್ಟಣಕೆ ಪೂ
ರ್ವದಕವಾಟಗಳಕ್ಷಿನಾಸಿಕ
ವದನ ಶ್ರೋತ್ರಗಳೆರಡು ದಕ್ಷಿಣ ಉತ್ತರದ್ವಾರ |
ಗುದ ಉಪಸ್ಥಗಳೆರಡು ಪಶ್ಚಿಮ
ಕದಗಳೆನಿಪವು ಷಟ್‌ಸರೋಜವೆ
ಸದನ ಹೃದಯವೇ ಮಂಟಪಂಗಳು ತ್ರಿಗುಣಗಳೆ ಕಲಶ || ೧೯ ||

ಪದ್ಯಾರ್ಥ:—ಮಧುವಿರೋಧಿಯ = ಮಧುನಾಮಕ ದೈತ್ಯನನ್ನು ಸಂಹರಿಸಿದ, ಶ್ರೀ ಪರಮಾತ್ಮನ ಪಟ್ಟಣಕೆ = ನಮ್ಮ ಈ ಶರೀರವೇ ಪಟ್ಟಣವು. ಇಂತಹ ಪಟ್ಟಣಕ್ಕೆ, ಅಕ್ಷಿ = ಎರಡು ಕಣ್ಣುಗಳು, ನಾಸಿಕ = ಮೂಗುಗಳೆರಡು, ವದನ = ಬಾಯಿ, ಇವುಗಳು, ಪೂರ್ವದಕವಾಟಗಳು = ಪೂರ್ವದ ಬಾಗಿಲುಗಳು, ಶ್ರೋತ್ರಗಳೆರಡು = ಕಿವಿಗಳೆರಡು ದಕ್ಷಿಣ ಉತ್ತರದ್ವಾರ = ದಕ್ಷಿಣೋತ್ತರ ಬಾಗಿಲುಗಳು, ಗುದ ಉಪಸ್ಥಗಳೆರಡು = ಗುದಲಿಂಗ ಇವೆರಡು, ಪಶ್ಚಿಮ ಕದಗಳೆನಿಪವು = ಪಶ್ಚಿಮದ ಬಾಗಿಲು ಎನಿಸುವವು. ಷಟ್‌ಸರೋಜವೇ = ಹೃದಯದೊಳಗಿನ ಷಟ್‌ದಳ ಕಮಲವೇ, ಸದನ = ಪರಮಾತ್ಮನ ಮನೆಯು. ಹೃದಯವೆ ಮಂಟಪಂಗಳು. ತ್ರಿಗುಣಗಳೆ = ಸತ್ವರಜಸ್ತಮೋಗುಣಗಳೇ, ಕಲಶ = ಮಂಟಪದ ಕಲಶವೆಂದು ಚಿಂತಿಸಬೇಕು.

ತಾತ್ಪರ್ಯ:—೧೯ ನೆಯ ಪದ್ಯ ಮೊದಲು ೨೩ನೆಯ ಪದ್ಯದವರೆವಿಗೂ ಈ ಶರೀರವನ್ನು ಪರಮಾತ್ಮನ ಪಟ್ಟಣವನ್ನಾಗಿ ತಿಳಿದು ಪೂಜಿಸುವ ಪ್ರಕಾರವನ್ನು ಹೇಳುತ್ತಾರೆ:—

ಮಧುಸೂದನನಿಗೆ ನಮ್ಮ ಶರೀರವನ್ನೇ ಒಂದು ಪಟ್ಟಣವೆಂದು ಭಾವಿಸಬೇಕು. ಪಟ್ಟಣವೆಂದಮೇಲೆ ಅದರ ದ್ವಾರ ಮೊದಲಾದ ಲಕ್ಷಣಗಳು ಬೇಕಾಯಿತು. ಅದಾವುವೆಂದರೆ:—

ಎರಡು ಕಣ್ಣುಗಳು ಮೂಗಿನ ರಂಧ್ರಗಳು ಬಾಯಿ ಇವು ಈ ಪಟ್ಟಣಕ್ಕೆ ಪೂರ್ವದ ಬಾಗಿಲುಗಳು. ಬಲದ ಕಿವಿಯು ದಕ್ಷಿಣದ ಕದ. ಎಡದ ಕಿವಿಯು ಉತ್ತರ ಕದ. ಗುದ ಶಿಶ್ನಗಳೆರಡು ಪಶ್ಚಿಮದ ಬಾಗಿಲು. ಈ ವಿಷ

ಯದಲ್ಲಿ ಭಾಗವತ ಚತುರ್ಥಸ್ಕಂಧ ೨೯ ನೆಯ ಅಧ್ಯಾಯದಲ್ಲಿನ ಪ್ರಮಾಣ. 'ನವದ್ವಾರಂ ದ್ವಿಹಸ್ತಾಂಘ್ರಿಂಪುರಂಮನುತ ಸಾಧ್ವಿತಿ | ಅಕ್ಷಿಣೀ ನಾಸಿಕೇ ಆಸ್ಯಮಿತಿ ಪಂಚಪುರಸ್ಕೃತಾಃ || ದಕ್ಷಿಣಾದಕ್ಷಿಣಃ ಕರ್ಣಃ ಉತ್ತರಾಚೋತ್ತರಃ ಸ್ಮೃತಃ || ಪಶ್ಚಿಮೇ ಇತ್ಯಧೌದ್ವಾರೌಗುದಶಿಶ್ನಾವಿಹೋದಿತಿ' ಎಂಬೀ ವಾಕ್ಯವೇ ಮೇಲಿನ ವಾಕ್ಯಕ್ಕೆ ಆಧಾರವಾಗಿರುವುದು. ತಮ್ಮ ಹೃದಯದೊಳಗಿನ ಷಟ್‌ದಳ ಕಮಲವೇ ಪರಮಾತ್ಮನ ಮನೆ. ಹೃದಯವೇ ಮಂಟಪ. ಸತ್ತ್ವರಜಸ್ತಮೋಗುಣಗಳೇ ಕಲಶ.

ಧಾತುಗಳುಪಸಪ್ತಾವರಣವು
ವೀಥಿಗಳು ನಾಡಿಗಳು ಮದಗಳು
ಯಾಥಪಗಳು ಸುಷುಮ್ನನಾಡಿಯೇ ರಾಜಪಂಥಾನಾ ||
ಈತನುರುಹಗಳೆ ವನಂಗಗಳು
ಮಾತರಿಶ್ವನು ಪಂಚರೂಪದಿ
ಪಾತಕಗಳೆಂಬರಿಗಳನ ಸಂಹರಿಪತಳವಾರ || ೨೦ ||

ಪದ್ಯಾರ್ಥ :—ಧಾತುಗಳು = ರಕ್ತಮಾಂಸ ಮಜ್ಜಾದಿ ೭ ಧಾತುಗಳು, ಸಪ್ತಾವರಣವು = ೭ ಪ್ರಾಕಾರಗಳು (ಏಳುಸುತ್ತಿನಕೋಟೆ) ನಾಡಿಗಳು ಉಪವೀಥಿಗಳು = ಅಡ್ಡಬೀದಿಗಳು, ಮದಗಳು = ಐಶ್ವರ್ಯಾದಿಗಳಿಂದ ಪುಟ್ಟುವ ಮದಗಳು, ಯೂಥಪಗಳು = ಮದಗಜಗಳು, ಸುಷುಮ್ನನಾಡಿಯು = ದೇಹ ಮಧ್ಯಗತ ಬ್ರಹ್ಮನಾಡಿಯು, ರಾಜಪಂಥಾನ = ರಾಜಮಾರ್ಗವು (ರಾಜಬೀದಿ) ಈತನುರುಹಗಳೆ = ರೋಮಗಳೆ, ವನಂಗಳು, ಮಾತರಿಶ್ವನು = ಮುಖ್ಯಪ್ರಾಣದೇವರು, ಪಂಚರೂಪದಿ = ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನನೆಂಬ ೫ ರೂಪಗಳಿಂದ, ಪಾತಕಗಳೆಂಬ = ಪಾಪಗಳೆಂಬ, ಅರಿಗಳನ = ಶತ್ರುಗಳನ್ನು, ಸಂಹರಿಪ = ಸಂಹರಿಸುವ, ತಳವಾರ = ತಣವಾರನು.

ತಾತ್ಪರ್ಯ :—ತ್ವಕ್, ಚರ್ಮ, ಮಾಂಸ, ರಕ್ತ, ಮೇದಸ್, ಮಜ್ಜಾ, ಅಸ್ಥಿಗಳೆಂಬ ೭ ಧಾತುಗಳೆ ಈ ಪಟ್ಟಣದ ಏಳು ಪ್ರಾಕಾರಗಳು. ಇಳಾ ಪಿಂಗಳಾ ಮೊದಲಾದ ನಾಡಿಗಳು ಸಣ್ಣಬೀದಿಗಳು, ವಿದ್ಯಾ, ಐಶ್ವರ್ಯಾದಿಗಳಿಂದ ಹೊಂದುವ ಎಂಟು ಮದಗಳೇ ಮದಗಜಗಳು. ಮುಖ್ಯ ಪ್ರಾಣದೇವರು ಪ್ರಾಣ, ಅಪಾನಾದಿ ೫ ರೂಪಗಳಿಂದ ಕಾಮಕ್ರೋಧಾದಿ ೬ ಶತ್ರುಗಳನ್ನು ಸಂಹರಿಸುವ ತಳವಾರನು.

ಇನಶಶಾಂಕಾದಿಗಳೇ ಲಕ್ಷ್ಮೀ
ವನಿತೆಯರಸನ ದ್ವಾರಪಾಲಕ
ರೆನಿಸುತಿಹರು ಮನದವೃತ್ತಿಗಳೆ ಪದಾತಿಗಳು |
ಅನುಭವಿಪ ವಿಷಯಂಗಳೆಪ
ಟ್ಟಣಕೆ ಬಪ್ಪಪಸಾರಗಳು ಜೀ
ವನ ಸುವರ್ತಕ ಕಪ್ಪಗಳ ಕೈಕೊಂಬ ಹರಿತಾನು || ೨೧ ||

ಪದ್ಯಾರ್ಥ :—ಇನಶಶಾಂಕಾದಿಗಳೆ=ಚಂದ್ರಸೂರ್ಯಾದಿ ತತ್ವಾಭಿಮಾನಿ ದೇವತೆಗಳೆ, ಲಕ್ಷ್ಮೀವನಿತೆಯ=ಲಕ್ಷ್ಮೀಯೆಂಬ ಉತ್ತಮ ರಮಣಿಯ, ಅರಸನ=ಪತಿಯಾದ ಶ್ರೀಪರಮಾತ್ಮನ, ದ್ವಾರಪಾಲಕರು, ಯನಿಸುತಿಹರು. ಮನದವೃತ್ತಿಗಳೆ=ಮನಸ್ಸಿನಿಂದ ಹುಟ್ಟುವ ಕೋರಿಕೆಗಳೆ, ಪದಾತಿಗಳು=ಕಾಲಾಳುಗಳು, ಅನುಭವಿಪ=ನಾವು ಅನುಭವಿಸುವ, ವಿಷಯಂಗಳೆ=ವಿಷಯಭೋಗಗಳೆ, ಪಟ್ಟಣಕೆ=ಈ ಶರೀರವೆಂಬ ಪಟ್ಟಣಕ್ಕೆ, ಒಪ್ಪ=ಬರುವ =ಪಸಾರಗಳು=ವಿಸ್ತಾರವಾದ ಅಂಗಡಿಗಳು ಜೀವನು, ಸುವರ್ತಕ=ಒಳ್ಳೆಯ ವ್ಯಾಪಾರಿಯು, ಕಪ್ಪಗಳ=ಕಪ್ಪಗಳನ್ನು, ಹರಿ=ಶ್ರೀಹರಿಯು, ತಾನು, ಕೈಕೊಂಬ=ಸ್ವೀಕರಿಸುವನು.

ತಾತ್ಪರ್ಯ :—ಲಕ್ಷ್ಮೀದೇವಿಯ ರಮಣನಾದ ಶ್ರೀಪರಮಾತ್ಮನ ದ್ವಾರಪಾಲಕರು ಚಕ್ಷುರಾದ್ಯಭಿಮಾನಿಗಳಾದ ಚಂದ್ರಸೂರ್ಯಾದಿಗಳೆಂದು ತಿಳಿಯಬೇಕು. ಮನಸ್ಸಿನಲ್ಲಿ ಆಗಾಗ್ಗೆ ಹುಟ್ಟುವ ವೃತ್ತಿಗಳೆಂದರೆ ಕೋರಿಕೆಗಳೆ ಕಾಲಾಳುಗಳು. ನಾವು ಅನುಭವಿಸುವ ವಿಷಯಭೋಗಗಳೆ ಪಟ್ಟಣಕ್ಕೆ ಬರುವ ವಿಸ್ತಾರವಾದ ಅಂಗಡಿಗಳು. ಜೀವನು ಮಾರುವ, ಮತ್ತು ತೆಗೆದುಕೊಳ್ಳುವ ವರ್ತಕನು. ಕಪ್ಪವನ್ನು ಕೈಕೊಳ್ಳುವನು ಶ್ರೀ ಪರಮಾತ್ಮನು.

ಉರುಪರಾಕ್ರಮ ನರಮನೆಗೆ ದಶ
ಕರಣಗಳು ಕನ್ನಡಿಯ ಸಾಲುಗ
ಳರ ವಿದೂರನ ಸದ್ವಿಹಾರಕೆ ಚಿತ್ರಮಂಟಪವು |
ಮರಳಿಬಿಡುವ ಶ್ವಾಸಗಳು ಚಾ
ಮರವಿಲಾಸಿನಿ ಬುದ್ಧಿದಾಮೋ
ದರಗೆ ಸಾಷ್ಟಾಂಗ ಪ್ರಣಯಮಗಳೆ ಸುಶಯಗಳು || ೨೨ ||

ಪದ್ಯಾರ್ಥ :—ಉರುಪರಾಕ್ರಮನ=ಉರು=ಉತ್ಕೃಷ್ಟವಾದ, ಪರಾಕ್ರಮನ=ಪರಾಕ್ರಮ ಶಾಲಿಯಾದ ಪರಮಾತ್ಮನ, ಅರಮನೆಗೆ=ನಮ್ಮ ಹೃತ್ಕ

ಮಲವೆಂಬ ಅರಮನೆಗೆ, ದಶಕರಣಗಳು= ಜ್ಞಾನೇಂದ್ರಿಯಗಳು೫, ಕರ್ಮೇಂದ್ರಿಯಗಳು ೫ ಅಂತು ಹತ್ತು ಇಂದ್ರಿಯಗಳು, ಕನ್ನಡಿಯ ಸಾಲುಗಳು, ಅರವಿದೂರನ=ದೋಷರಹಿತನಾದ ಶ್ರೀಹರಿಯು, ಸದ್ವಿಹಾರಕೆ = ಚೆನ್ನಾಗಿ ವಿಹರಿಸುವುದಕ್ಕೆ, ಚಿತ್ತ= ನಮ್ಮ ಚಿತ್ತವು, ಮಂಟಪವು, ಮರಳಿಬಿಡುವ ಶ್ವಾಸಗಳು=ಮತ್ತುಮತ್ತು ಬಿಡುತ್ತಿರುವ ಶ್ವಾಸಗಳು, ಚಾಮರ=ಚಾಮರಗಳು ಬುದ್ಧಿ=ಬುದ್ಧಿಯೇ ವಿಲಾಸಿನಿ = ವೇಶ್ಯಾಸ್ತ್ರೀಯು, ಸುಶಯುಗಳು=ನಾವು ಮಲಗುವುದೇ, ದಾಮೋದರನಿಗೆ, ಸಾಷ್ಟಾಂಗ ಪ್ರಣಾಮಗಳು.

ತಾತ್ಪರ್ಯ:—ಬಹು ಪರಾಕ್ರಮಶಾಲಿಯಾದ ಪರಮಾತ್ಮನ ಅರಮನೆಯಂತಿರುವುದು ನಮ್ಮ ಹೃತ್ಕಮಲವು. ಇದಕ್ಕೆ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೆಂಬ ೧೦ ಇಂದ್ರಿಯಗಳು ಕನ್ನಡಿಯ ಸಾಲುಗಳು. ದೋಷದೂರನಾದ ಶ್ರೀಹರಿಯು ಚನ್ನಾಗಿ ವಿಹರಿಸುವುದಕ್ಕೆ ನಮ್ಮ ಚಿತ್ತವೇ ಮಂಟಪವು. ಪುನಃಪುನಃ ನಾವು ಬಿಡುವ ಶ್ವಾಸಗಳೇ ಚಾಮರಗಳು ಬುದ್ಧಿಯು ವೇಶ್ಯೆಯು. ದಾಮೋದರನಿಗೆ ಸಾಷ್ಟಾಂಗ ಪ್ರಣಾಮಗಳೆಂಬುವುದು ನಾವು ಮಲಗುವದೆಂದು ಚಿಂತಿಸಬೇಕು.

ಮಾರಮಣನರಮನೆಗೆ ಸುಮಹಾ
ದ್ವಾರವೆನಿಸುವ ವದನಕೊಪ್ಪುವ
ತೋರಣ ಸ್ಮಶ್ರುಗಳು ಕೇಶಗಳೆ ಪತಾಕಿಗಳು |
ಊರಿನಡೆವಂಘ್ರಿಗಳು ಜಂಘೆಗ
ಳೂರು ಮಧ್ಯೋದರ ಶಿರಗಳಾ
ಗಾರದುಪ್ಪರಿಗೆಗಳು ಕೋಶಗಳೈದು ಕೋಣೆಗಳು || ೨೩ ||

ಪದ್ಯಾರ್ಥ:—ಮಾರಮಣನ=ಲಕ್ಷ್ಮೀಪತಿಯ, ಅರಮನೆಗೆ = ಅರಮನೆಯಂತಿರುವ ಈ ಶರೀರಕ್ಕೆ, ಸುಮಹಾದ್ವಾರವೆನಿಸುವ=ದೊಡ್ಡ ಬಾಗಿಲೆನಿಸುವ, ವದನಕೆ= ಮುಖಕ್ಕೆ, ಒಪ್ಪುವ= ಶೋಭಿಸುವ, ಸ್ಮಶ್ರುಗಳು=ಮೀಸೆಗಳು, ತೋರಣ= ತೋರಣವು, ಕೇಶಗಳೆ=ತಲೆಕೂದಲುಗಳೆ, ಪತಾಕಿಗಳು =ಧ್ವಜಪಟಗಳು, ಊರಿನಡೆವ=ನೆಲಕ್ಕೆ ಊರಿನಡೆಯುವ ಅಂಘ್ರಿಗಳು= ಪಾದಗಳು, ಜಂಘೆಗಳು= ಮೊಣಕಾಲಿನ ಕೆಳಭಾಗಗಳು, ಊರು=ತೊಡೆಗಳು, ಮಧ್ಯ=ನಡುವು, ಉದರ= ಹೊಟ್ಟೆ, ಶಿರಗಳು=ತಲೆಗಳು, ಇವುಗಳೇ,

ಈ ದೇಹವೆಂಬ ರಥದೊಳಗೆ, ಸರ್ವಕಾಲದಿ = ಸರ್ವಕಾಲಗಳಲ್ಲಿಯೂ, ಸೂತನು = ಸಾರಥಿಯು, ಆಗಿಹ = ಆಗಿರುವರು, ಶ್ರೀತರುಣಿವಲ್ಲಭ=ಶ್ರೀದೇವಿಯೆಂಬ ತರುಣಿಗೆ ಪತಿಯಾದ ಶ್ರೀ ಪರಮಾತ್ಮನೇ, ರಥಿಕನೆಂದರಿದು = ರಥಿಕನೆಂದು ಭಾವಿಸಿ, ನಿತ್ಯದಲಿ, ಪ್ರೀತಿಯಿಂದಲಿ = ಭಕ್ತಿವಿಶ್ವಾಸಗಳಿಂದ, ವಾತಾತಪಾದಿಗಳಿಂದಲಿ = ಗಾಳಿಬಿಸಲು ಮೊದಲಾದುವುಗಳಿಂದ, ಅವಿರತ=ಅವಿಚ್ಛಿನ್ನವಾಗಿ, ಪೋಷಿಸು = ಚನ್ನಾಗಿ ಪೋಷಣೆಮಾಡು, ಈತನುವಿನೊಳು = ಈ ದೇಹದೊಳಗೆ, ಮಮತೆ = ಅಭಿಮಾನವನ್ನು, ಬಿಟ್ಟಿಹನು = ಬಿಟ್ಟಿರುವನು, (ಯಾವ ಪುರುಷನೋ) ಅವನೇ, ಮಹಾಯೋಗಿ = ಮಹಾಯೋಗಿಯೆನಿಪನು.

ತಾತ್ಪರ್ಯ:—ಈ ದೇಹವೆಂಬ ರಥದಲ್ಲಿ ಸಾರಥ್ಯಮಾಡುವವರು ವಾಯುದೇವರು. ಭಾಗವತದಲ್ಲಿ "ಮನೋರಶ್ಮಿರ್ಬುದ್ಧಿಸೂತೋ" "ಬುದ್ಧಿಂತು ಸಾರಥಿಂವಿದ್ಧಿ" ಬುದ್ಧಿಯನ್ನು ಸಾರಥಿಯಂತ ಹೇಳಿರುವರು. ಮತ್ತು "ಮೂಲವಾಯು ರಕ್ಷಸಂಜ್ಞಶ್ಚಕ್ರೇ ದ್ವೇಪುಣ್ಯದುಷ್ಕೃತೆ" ಯೆಂಬ ಅಧ್ಯಾತ್ಮ ಯೋಗವಾಕ್ಯದಿಂದ ಚಕ್ರಗಳನ್ನು ದೂರಿಸುವ ಅಚ್ಚುಮರವೇ ವಾಯುದೇವರೆಂದು ಹೇಳಿರುವರು. ದಾಸರಾಯರು ವಾಯುದೇವರನ್ನು ಸಾರಥಿಯೆಂದು ಹೇಳಿರುವರು. ಪರಸ್ಪರ ವಿರೋಧ ಬಂತೆಂದರೆ, ಹಾಗಲ್ಲ. ಬುದ್ಧಿಯನ್ನು ಸಾರಥಿಯನ್ನಾಗಿ ಹೇಳಿದವರ ಅಭಿಪ್ರಾಯವು ಬರೇಬುದ್ಧಿಯ ಪರವಲ್ಲ ಅಭಿಮಾನ ದೇವತಾಪರವಾಗಿ ಮಾಡಬೇಕು. ಹಾಗಾದರೂ ಬುದ್ಧಿಗಭಿಮಾನಿ....ಉಮಾ, ಬೃಹಸ್ಪತಿ ಮೊದಲಾದವರಾದರೆ ಹೊರತು ವಾಯುದೇವರಲ್ಲ ಎಂಬುವ ಪಕ್ಷದಲ್ಲಿ ಇದರ ಅಭಿಪ್ರಾಯ ಹೀಗೆ—ಬುದ್ಧಿಯಲ್ಲಿ ಚಿತ್ತ, ಬುದ್ಧಿ, ಅಹಂಕಾರ ಮನಸ್ಸೆಂದು ೪ ಪ್ರಕಾರ ಭೇದಗಳುಂಟು. ಚಂಚಲ ಹುಟ್ಟುವುದು ಮನಸ್ಸು. ನಾನು ನನ್ನದು ಎಂಬುವದು ಅಹಂಕಾರ, ಇದು ಇಂತಹದೆಂದು ನಿಶ್ಚಯಿಸುವುದು ಬುದ್ಧಿ, ಕೇವಲ ಭಗವಂತನಡಿಗಳಲ್ಲಿ ಸ್ಥಿರವಾಗಿ ನಿಲ್ಲುವ ಬುದ್ಧಿಯೇ ಚಿತ್ತವೆನಿಸುವುದು. ಬುದ್ಧಿಯಲ್ಲಿ ಸುಬುದ್ಧಿ ದುರ್ಬುದ್ಧಿ ಯೆಂಬೆರಡು ವಿಧಗಳುಂಟು. ಪುಣ್ಯಕರ್ಮದಲ್ಲಿ ಪ್ರವರ್ತಿಸುವುದು ಸುಬುದ್ಧಿ. ಪಾಪಕರ್ಮ ಪ್ರವರ್ತಿಯೇ ದುರ್ಬುದ್ಧಿ. ಇವೆರಡಲ್ಲದೆ ಕೇವಲ ಭಗವತ್ಪರವಾದ ಬುದ್ಧಿಯೇ ಚಿತ್ತವು. ಹೀಗೆ ಚಿತ್ತಕ್ಕೂ ಬುದ್ಧಿಗೂ ಕಿಂಚಿದ್ಭೇದವಿದ್ದರೂ ಕುರುಪಾಂಡವ ನ್ಯಾಯದಂತೆ ಇರುವುದು. ಹೇಗೆಂದರೆ, ಕೌರವರೂ ಪಾಂಡವರೂ ಒಂದೇ ಕುರುವಂಶದಲ್ಲಿ ಹುಟ್ಟಿದದು

ರಿಂದ ಕೌರವಶಬ್ದ ಪಂಡವರಲ್ಲಿಯೂ ದುರ್ಯೋಧನಾದಿಗಳಲ್ಲಿಯೂ ಅನ್ವಯಿಸಬಹುದಾಗಿರುವುದು, ಆದರೂ ಕೌರವಶಬ್ದ ದುರ್ಯೋದನಾದಿಗಳಲ್ಲಿ ಮಾತ್ರ ನಿಂತಿತು, ಪಾಂಡವರಲ್ಲಿ ವಿಶೇಷ ಮಹಿಮೆಇದ್ದರೂ ಕೌರವಶಬ್ದ ಅವರಿಗಿರದೇ ಇರಲಲ್ಲ. ಆದರೆ ಪಾಂಡವಶಬ್ದ ಮಾತ್ರ ಕೌರವರಿಗಿಲ್ಲ. ಪಾಂಡುರಾಜನ ಮಕ್ಕಳಿಗೆ ಮಾತ್ರವೆ ಪಾಂಡವಯೆಂಬ ಹೆಸರು ಬಂದಿರುವುದು. ಈ ಹೆಸರು ದುರ್ಯೋಧನಾದಿಗಳಿಗೆ ಬಾರದು. ಅದರಂತೆ ಬುದ್ಧಿಪ್ರಭೇದವೇ ಚಿತ್ತವಾದರೂ ಕೇವಲ ಭಗವತ್ಪರವಾದ ಬುದ್ಧಿಗೆ ಮಾತ್ರವೆ ಚಿತ್ತತ್ವವಿರುವುದರಿಂದ ಚಿತ್ತಶಬ್ದವು ಬುದ್ಧಿಗೆ ಬರುವಂತಿಲ್ಲ. ಬುದ್ಧಿಯೆಂಬ ಹೆಸರು ಚಿತ್ತಕ್ಕೆ ಹೇಳುವರು. ಬುದ್ಧಿಯನ್ನೇ ಭಗವತ್ಪರಮಾಡಿದರೆ ಚಿತ್ತವಾಗುವುದರಿಂದ ಅದನ್ನೇ ಸುಬುದ್ಧಿಯೆನ್ನಬಹುದು. ಇಂತಹ ಭಗವತ್ಪರವಾದ ಬುದ್ಧಿಪ್ರಭೇದವಾದ ಚಿತ್ತಕ್ಕೆ ವಾಯುದೇವರೇ ಅಭಿಮಾನಿಗಳು. ಆದುದರಿಂದ ಇಲ್ಲಿ ಬುದ್ಧಿಶಬ್ದವು ಚಿತ್ತಪರ, ಚಿತ್ತಶಬ್ದವು, ಅಭಿಮಾನಿಪರ. ಹೀಗೆ ಮಾಡಿದರೆ ಚಿತ್ತಾಭಿಮಾನಿಯಾದ ವಾಯುದೇವರೇ ಸಾರಥಿಯೆಂದಾಗುತ್ತದೆ. ಇದರಿಂದ ದಾಸರಾಯರ ವಾಕ್ಯಕ್ಕೂ ಭಾಗವತಾದಿಗಳ ವಾಕ್ಯಕ್ಕೂ ಏಕವಾಕ್ಯತಾ ಬಂದಿತೆಂದು ತಿಳಿಯಬೇಕು. ಅಕ್ಷವನ್ನೇ ವಾಯುದೇವರೆಂದು ಹೇಳಿದ ಅಧ್ಯಾತ್ಮಯೋಗದ ವಾಕ್ಯದರೀತ್ಯಾ ಅಕ್ಷಸ್ಥಾನದಲ್ಲಿಯೂ, ಸಾರಥಿ ಸ್ಥಾನದಲ್ಲಿಯೂ ವಾಯುದೇವರೇ ಉಭಯಾದಿ ಪತಿಗಳಾಗಿರುವರೆಂದು ಹೇಳಿದರೆ ಬಾಧಕವೇನೂ ಇರುವುದಿಲ್ಲ. ಶ್ರೀ ಪರಮಾತ್ಮನೇ ಈ ದೇಹ ರಥದಲ್ಲಿ ಕೂತಿರುವ ರಥಿಕನೆಂದು ತಿಳಿದು ನಿತ್ಯದಲ್ಲಿಯೂ ಅನ್ನಪಾನಾದಿಗಳಿಂದ ಚೆನ್ನಾಗಿ ಶರೀರವನ್ನು ಪೋಷಿಸು. ಆದರೆ ದೇಹವು ನನ್ನದು ಯೆಂಬ ಅಭಿಮಾನದಿಂದ ಇಂದ್ರಿಯ ಪ್ರೀತಿಗೋಸ್ಕರ ಮಾತ್ರ ಶರೀರ ಪೋಷಣೆಮಾಡಬೇಡವೆಂದರ್ಥ. ಈ ಶರೀರವು ಪರಮಾತ್ಮನು ಕೂಡುವ ರಥ. ಆದುದರಿಂದ ಇದನ್ನು ತೊಳೆಯುವೆನು, ವಸ್ತ್ರಭೂಷಣಗಳಿಂದ ಅಲಂಕರಿಸುವೆನು, ರಥವು ಕೆಡದೆ ಇರುವುದಕ್ಕೋಸ್ಕರ ಅನ್ನಪಾನಾದಿಗಳಿಂದ ಚನ್ನಾಗಿ ರಕ್ಷಿಸುವೆನು ಯೆಂದುಭಾವಿಸಿ ಚೆನ್ನಾಗಿ ಪೋಷಿಸು. ನನಗೆ ಬಿಸಿಲು, ನನಗೆ ಗಾಳಿ, ತಡೆಯಲಾರೆನೆಂದು ಇಂದ್ರಿಯ ಪ್ರೀತಿಗೋಸ್ಕರ ಶರೀರಾಭಿಮಾನವನ್ನು ಮಾಡದೆ ಭಗವತ್ಪ್ರೀತಿಗೋಸ್ಕರ ಶರೀರಪೋಷಣ ಮಾಡುತ್ತಾ ಗಾಳಿ ಬಿಸಲುಗಳನ್ನು ಸಹನಮಾಡಿಕೊಂಡು ನಾನು ನನ್ನದೆಂಬ ಅಭಿಮಾನವನ್ನು ಬಿಟ್ಟು ಇರುವನು ಯಾವನೋ ಅವನೇ ಮಹಾಯೋಗಿ.

ಭವವೆನಿಪ ವನಧಿಯೊಳು ಕರ್ಮ
ಪ್ರವಹದೊಳು ಸಂಚರಿಸುತಿಹ ದೇ
ಹವ ಸುನಾವೆಯಮಾಡಿ ತಮ್ಮವರಿಂದಲೊಡಗೂಡಿ |
ದಿವಸ ದಿವಸಗಳಲ್ಲಿ ಲಕುಮೀ
ಧವನು ಕ್ರೀಡಿಪನೆಂದು ಚಿಂತಿಸೆ
ಪವನನೈಯಭವಾಬ್ಧಿ ದಾಟಿಸಿ ಪರಮಸುಖವೀವ || ೨೬ ||

ಪದ್ಯಾರ್ಥ:—ಭವವೆನಿಪ=ಸಂಸಾರವೆಂಬ ವನಧಿಯೊಳು=ಸಮುದ್ರದೊಳಗೂ, ಮತ್ತು, ಕರ್ಮ=ಪುಣ್ಯ ಪಾಪ ಕರ್ಮಗಳೆಂಬ, ಪ್ರವಹದೊಳು =ನದಿಯೊಳಗೂ, ಸಂಚರಿಸುತಿಹ=ಜನನ ಮರಣರೂಪವಾಗಿ ಬಂದು ಹೋಗುತ್ತಿರುವ, ದೇಹವೆ=ದೇಹವನ್ನೇ, ಸುನಾವೆಯ=ಉತ್ತಮವಾದ ತೆಪ್ಪವನ್ನಾಗಿ ಮಾಡಿ, ತಮ್ಮವರಿಂದಲಿ=ತಮ್ಮ ಭಕ್ತರಾದ ತತ್ವಾಭಿಮಾನಿ ದೇವತೆಗಳಿಂದ ಕೂಡಿಕೊಂಡು, ದಿವಸ ದಿವಸಗಳಲ್ಲಿ=ಪ್ರತಿ ದಿವಸದಲ್ಲಿಯೂ, ಲಕುಮೀಧವನು=ಲಕ್ಷ್ಮೀಪತಿಯು, ಕ್ರೀಡಿಪನೆಂದು=ಆಟವಾಡುತ್ತಿರುವನೆಂದು ಚಿಂತಿಸಿ ಅನುಸಂಧಾನಮಾಡಲು, ಪವನನೈಯ=ವಾಯುದೇವರ ತಂದೆಯಾದ ಶ್ರೀ ಪರಮಾತ್ಮನು, ಭವಾಬ್ಧಿ=ಸಂಸಾರ ಸಮುದ್ರದಿಂದ, ದಾಟಿಸಿ=ನಮ್ಮನ್ನು ಪಾರುಮಾಡಿ, ಸುಖವೀವ=ಸುಖವನ್ನು ಕೊಡುವನು.

ತಾತ್ಪರ್ಯ :—ಪ್ರಕಾರಾಂತರದಿಂದ ಭಗವತ್ಪೂಜಾಕ್ರಮವನ್ನು ಹೇಳುತ್ತಾರೆ :—

ಸಂಸಾರವೆಂಬ ಸಮುದ್ರದಲ್ಲಿ ಪುಣ್ಯ ಪಾಪಾದಿ ಕರ್ಮಗಳೆಂಬ ನದೀ ಪ್ರವಾಹ ಮೂಲಕದಿಂದ ಬಂದು ಸೇರಿ ಜನನ ಮರಣ ರೂಪವಾಗಿ ಸಂಚರಿಸುತ್ತಿರುವ ಈ ದೇಹವನ್ನು ಶ್ರೀ ಪರಮಾತ್ಮನು ತೆಪ್ಪವನ್ನಾಗಿ ಮಾಡಿಕೊಂಡು ತನ್ನವರಾದ ತತ್ವಾಭಿಮಾನಿ ದೇವತೆಗಳಿಂದ ಕೂಡಿ ಪ್ರತಿ ದಿವಸದಲ್ಲಿಯೂ ಆ ತೆಪ್ಪದಲ್ಲಿ ಕೂತುಕೊಂಡು ಆಟವಾಡುತ್ತಿರುವನು, ಎಂದು ನಾವು ಈ ದೇಹವನ್ನು ದೇವರ ವಾಸಸ್ಥಾನವಾಗಿ ಭಾವಿಸಿ ನಮ್ಮದೆಂಬ ಅಭಿಮಾನವನ್ನು ಬಿಟ್ಟರೆ, ಪ್ರಾಣಪತಿಯಾದ ಶ್ರೀ ಪರಮಾತ್ಮನು ನಮ್ಮನ್ನು ಸಂಸಾರಸಮುದ್ರದಿಂದ ದಾಟಿಸಿ ಪರಮಾನಂದವನ್ನು ಕೊಡುವನು.

ಆಪಣಾಲಯ ಗತಪದಾರ್ಥವು
ಸ್ತ್ರೀಪುರುಷರಗಳಿಂದ್ರಿಯಗಳಲಿ

ದೀಪಪಾವಕರೊಳಿಡುವ ತೈಲಾದಿ ದ್ರವ್ಯಗಳ |
ಆಪರಮಗವದಾನವೆಂದು
ಪದೇ ಪದೇ ಮರಿಯದಲೆ ಸ್ಮರಿಸುತ
ಭೂಪನಂದದಿ ಸಂಚರಿಸು ನಿರ್ಭಯದಿ ಸರ್ವತ್ರ ‖ ೨೭ ‖

ಪದ್ಯಾರ್ಥ :—ಆಪಣಾಲಯಗತ = ಆಪಣ = ಅಂಗಡಿ ಒಳಗೂ, ಆಲಯ = ಮನೆಯೊಳಗೂ, ಗತ = ಇರುವ, ಪದಾರ್ಥ = ಅಕ್ಕಿ ಬೇಳೆ ಮೊದಲಾದ ಪದಾರ್ಥಗಳು. ಸ್ತ್ರೀ ಪುರುಷರ, ಇಂದ್ರಿಯಗಳಲಿ = ಕಿವಿ, ಮೂಗು, ಕೈಕಾಲು ಮೊದಲಾದ ಇಂದ್ರಿಯಗಳಿಗೆ ಇಡುವ ಬೆಂಡೋಲೆ, ಕಡಗ ಮೊದಲಾದ ವಸ್ತುಗಳು, ದೀಪ ಪಾವಕರೊಳು = ದೀಪ, ಬೆಂಕಿ ಮೊದಲಾದವುಗಳಿಗೆ, ಇಡುವ ತೈಲಾದಿ ದ್ರವ್ಯಗಳ = ಹಾಕುವ ಎಣ್ಣೆ ಸೌದೆ ಮೊದಲಾದವುಗಳು, ಇವುಗಳೆಲ್ಲವನ್ನು, ಆ ಪರಮಗೆ = ಆ ಪರಮಾತ್ಮನಿಗೆ, ಅವದಾನವೆಂದು = ಆಹುತಿಯೆಂದು ಪದೇಪದೇ = ಅಡಿಗಡಿಗೂ, ಮರಿಯದಲೆ ಸ್ಮರಿಸುತ, ಭೂಪನಂದದಿ = ಅರಸಿನಂತೆ, ನಿರ್ಭಯದಿ = ಭಯರಹಿತನಾಗಿ, ಸರ್ವತ್ರ = ಎಲ್ಲಾ ಸ್ಥಳಗಳಲ್ಲಿಯೂ ಸಂಚರಿಸು.

ತಾತ್ಪರ್ಯ :—ಪರಮಾತ್ಮನಲ್ಲಿ ನಿರ್ವ್ಯಾಜ ಭಕ್ತಿಯನ್ನು ಮಾಡಿ ಎಲ್ಲವೂ ಭಗವಂತನ ಸೇವೆಯೆಂದು ತಿಳಿದು ಪೂಜಿಸುವವರಿಗೆ ತಾವು ಉಣ್ಣುವುದು ಉಡುವುದು ತೊಡುವುದು ಎಲ್ಲವೂ ಭಗವತ್ಸೇವೆಯೇ ಆಗುವುದು. ಪ್ರತ್ಯೇಕ ಸಾಧನೆ ಬೇಕಾಗಿಲ್ಲವೆಂದು ಹೇಳುತ್ತಾರೆ.

ಭಾಗವತ ಪ್ರಥಮಸ್ಕಂಧದಲಿ ‘ ಆಮಯೋಯಂಚ ಭೂತಾನಾಂಜಾಯತೇಯೇನಸುವ್ರತ | ತದೇವಹ್ಯಾಮಯದ್ರವ್ಯಂ ತತ್ಪುನಾತಿಚಿಕಿತ್ಸಕಂ ಏವಂನೃಣಾಂಕ್ರಿಯಾಯೋಗಃ ಸರ್ವೇ ಸಂಸ್ಮೃತಿ ಹೇತವಃ ‖ ತ ಯೇವಾತ್ಮ ವಿನಾಶಾಯ ಕಲ್ಪಂತೇ ಕಲ್ಪಿತಾಃಪರೆ’ ಯಾವ ಪದಾರ್ಥವು ರೋಗಕ್ಕೆ ಕಾಣಭೂತವೋ ಅಂದರೆ ಪಾಷಾಣ ವತ್ಸನಾಭಿ ಮೊದಲಾದ ಪದಾರ್ಥಗಳನ್ನು ತಿಂದರೆ ಮನುಷ್ಯನನ್ನು ಕೊಲ್ಲುವುದು. ಆ ಪದಾರ್ಥಗಳನ್ನೇ ಶುದ್ಧಿ ಮಾಡಿ ವೈದ್ಯರು ರೋಗಿಗಳಿಗೆ ಕೊಡಲು ರೋಗವನ್ನು ನಾಶಮಾಡುವುದು. ಅದರಂತೆ ನಾವು ಮಾಡುವ ಸ್ನಾನ ಅಲಂಕಾರ ಭೋಜನಾದಿಗಳನ್ನು ಆತ್ಮ ಸೌಖ್ಯಕ್ಕೋಸ್ಕರವೆಂಬ ಭಾವನೆಯಿಂದ ಮಾಡಿದರೆ ಸಂಸಾರಕ್ಕೆ ಕಾರಣವಾಗುವವು. ಅವುಗಳನ್ನೇ ಪರಮಾತ್ಮನ ವಾಸಸ್ಥಾನವಾದ ಈ ಶರೀರವನ್ನು

ಪರಮಾತ್ಮನ ಪ್ರೀತಿಗಾಗಿ ತೊಳೆಯುತ್ತೇನೆ, ಅಲಂಕರಿಸುತ್ತೇನೆ, ಪೋಷಿಸುತ್ತೇನೆ ಎಂದು ಪರಮಾತ್ಮನ ಪೂಜಾತ್ವೇನ ಭಾವಿಸಿದರೆ ಮುಕ್ತಿಗೆ ಸಾಧನವೆಂದು ಹೇಳಿರುವರು. ಅದೇ ಅರ್ಥವನ್ನೇ ಇಲ್ಲಿ ಹೇಳುತ್ತಾರೆ :—

ಅಂಗಡಿಯೊಳಗಿರುವ ಪದಾರ್ಥಗಳು, ಮನೆಯಲ್ಲಿರುವ ಅಕ್ಕಿ ಬೇಳೆ ಮೊದಲಾದ ಪದಾರ್ಥಗಳು ಸ್ತ್ರೀಯರು ಪುರುಷರು ಇಡುವ, ಉಡಿಗೆ ತೊಡಿಗೆಗಳು, ದೀಪಕ್ಕೆ ಹಾಕುವ ಎಣ್ಣೆ, ಬೆಂಕಿಗೆ ಹಾಕುವ ಸೌದೆ ಇವೆಲ್ಲವು ಪರಮಾತ್ಮನ ಪೂಜಾತ್ಮಕ ಯಾಗದಲ್ಲಿ ಆಹುತಿಯೆಂದು ಭಾವಿಸಿ ಕ್ಷಣವಾದರು ಮರಿಯದೆ ಸರ್ವದಾ ಸ್ಮರಿಸುತ್ತಾ ಮಹಾರಾಜನು ಹೇಗೆ ಯಾರಿಗೂ ಹೆದರದೆ ನಿರ್ಭೀತನಾಗಿ ಸಂಚರಿಸುವನೋ ಅದೇ ರೀತಿಯಿಂದ ಕ್ಷುದ್ರದೈವಗಳಿಗಾಗಲೀ ಕ್ಷುದ್ರ ಜನರಿಗಾಗಲಿ ಹೆದರದೆ ನಿರ್ಭೀತನಾಗಿ ಸಂಚರಿಸು.

ವಾರಿಜಭವಾಂಡವೆ ಸುಮಂಟಪ
ಮೇರುಗಿರಿ ಸಿಂಹಾಸನವು ಭಾ
ಗೀರಥಿಯೆಮಜ್ಜನವು ದಿಗ್ವಸ್ತ್ರಗಳು ನುಡಿಮಂತ್ರ ||
ಭೂರುಹಜ ಫಲಪುಷ್ಪಗಂಧ ಸ
ಮೀರ ಶಶಿರವಿದೀಪ ಭೂಷಣ
ತಾರಕಗಳೆಂದರ್ಪಿಸಲು ಕೈಕೊಂಡುಮನ್ನಿಸುವ || ೨೮ ||

ಪದ್ಯಾರ್ಥ :—ವಾರಿಜಭವಾಂಡವೆ = ಬ್ರಹ್ಮಾಂಡವೆ, ಸುಮಂಟಪ = ಉತ್ಕೃಷ್ಟವಾದ ಮಂಟಪವು, ಮೇರುಗಿರಿ = ಮೇರುಪರ್ವತವೇ ಸಿಂಹಾಸನವು ಭಾಗೀರಥಿ = ಗಂಗೋದಕವೆ, ಮಜ್ಜನ = ಅಭಿಷೇಕವು. ದಿಗ್ವಸ್ತ್ರಗಳು = ದಿಕ್ಕುಗಳೆ ವಸ್ತ್ರಗಳು, ನುಡಿ = ಮಾತುಗಳೆ ಮಂತ್ರ, ಭೂರುಹಜ = ತಾವಾಗಿ ಹುಟ್ಟಿದ ಮರಗಳಲ್ಲಿನ ಹೂವು ಹಣ್ಣುಗಳೆ ಫಲಪುಷ್ಪಗಳು. ಸಮೀರ = ಗಾಳಿಯೆ, ಗಂಧ = ಸುಗಂಧವು, ಶಶಿರವಿ = ಚಂದ್ರ ಸೂರ್ಯರೇ ದೀಪಗಳು, ತಾರಕಗಳೆ = ನಕ್ಷತ್ರಗಳೇ, ಭೂಷಣ = ಆಭರಣಗಳು, ಎಂದರ್ಪಿಸಲು = ಎಂದು ಸಮರ್ಪಿಸಲು, ಕೈಕೊಂಡು = ಸ್ವೀಕರಿಸಿ, ಮನ್ನಿಸುವ = ನಮ್ಮ ಅಪರಾಧಗಳನ್ನು ಕ್ಷಮಿಸುವನು.

ತಾತ್ಪರ್ಯ :—ಪ್ರಕಾರಾಂತರದಿಂದ ನಮ್ಮ ಕಂಗಳಿಗೆ ಕಾಣುವ ವಸ್ತುಗಳನ್ನು ಪರಮಾತ್ಮನಿಗೆ ಸಮರ್ಪಿಸುವುದೇ ಪೂಜೆಯೆಂದು ಹೇಳುತ್ತಾರೆ.

ಬ್ರಹ್ಮಾಂಡವೆ ಶ್ರೀ ಪರಮಾತ್ಮನ ಮಂಟಪವು. ಮೇರುಪರ್ವತವೇ ಸಿಂಹಾಸನವು. ಭಾಗೀರಥಿಯೇ ಸ್ನಾನಕ್ಕೆ ಉದಕವು. ದಿಕ್ಕುಗಳೇ ವಸ್ತ್ರಗಳು ಮಾತುಗಳೇ ಮಂತ್ರಗಳು. ಗಿಡಗಳಲ್ಲಿ ಬಿಡುವ ಪುಷ್ಪ ಫಲಗಳೇ ದೇವರಿಗೆ ಫಲಪುಷ್ಪಗಳು. ಬೀಸುವ ಗಾಳಿಯೇ ಸುಗಂಧವು. ಚಂದ್ರಸೂರ್ಯರೇ ದೀಪಗಳು. ನಕ್ಷತ್ರಗಳೇ ಆಭರಣಗಳೆಂದು ಭಾವಿಸಿ ಪರಮಾತ್ಮನನ್ನು ಮಾನಸಪೂಜೆಮಾಡಿ ಸಮರ್ಪಿಸಲು ಪರಮಾತ್ಮನು ಸ್ವೀಕರಿಸಿ ನಮ್ಮ ಅಪರಾಧಗಳನ್ನು ಕ್ಷಮಿಸಿ ಉದ್ಧರಿಸುವನು.

ಭೂಸುರರೊಳಿಪ್ಪಬ್ಜಭವನೊಳು
ವಾಸುದೇವನು ವಾಯು ಖಗಪ
ಸದಾಶಿವಹಿಪೇಂದ್ರನು ವಿವಸ್ವಾನ್ನಾಮಕ ಸೂರ್ಯ ||
ಭೇಶ ಕಾಮ ಮರಾಸ್ಯವರುಣಾ
ದೀಸುರಕ್ಷತ್ರಿಯರೊಳಿಪ್ಪರು
ವಾಸವಾಗಿಹ ಸಂಕರುಷಣನ ನೋಡಿಮೋದಿಪರು || ೨೯ ||

ಪದ್ಯಾರ್ಥ:—ಭೂಸುರರೊಳಿಪ್ಪ = ಬ್ರಾಹ್ಮಣರೊಳಗಿರುವ, ಅಬ್ಜಭವನೊಳು = ಬ್ರಹ್ಮದೇವರೊಳಗೆ, ವಾಸುದೇವನು = ವಾಸುದೇವ ನಾಮಕ ಪರಮಾತ್ಮನು, ವಾಯು = ವಾಯುದೇವರು, ಖಗಪ = ಪಕ್ಷಿಶ್ರೇಷ್ಠನಾದ ಗರುಡನು, ಸದಾಶಿವ = ರುದ್ರದೇವರು, ಅಹಿಪ = ಶೇಷದೇವರು, ಇಂದ್ರನು, ವಿವಸ್ವಾನ್ನಾಮಕ ಸೂರ್ಯ = ವಿವಸ್ವನ್ನಾಮಕನಾದ ಸೂರ್ಯನು, ಭೇಶ = ನಕ್ಷತ್ರಪತಿಯಾದ ಚಂದ್ರನು, ಕಾಮ = ಮನ್ಮಥನು, ಅಮರಾಸ್ಯ = ಅಗ್ನಿಯು, ವರುಣಾದಿ = ವರುಣನೇ ಮೊದಲಾದ ದೇವತೆಗಳು, ಕ್ಷತ್ರಿಯರೊಳಿಪ್ಪರು, ಕ್ಷತ್ರಿಯ ಜಾತ್ಯಭಿಮಾನಿಯಾಗಿರುವರು, ಇವರು ತಮ್ಮೊಳಗೆ ವಾಸವಾಗಿಹ = ವಾಸಮಾಡುತ್ತಿರುವ, ಸಂಕರುಷಣನ = ಸಂಕರ್ಷಣ ನಾಮಕನಾದ ಪರಮಾತ್ಮನನ್ನು ನೋಡಿ, ಮೋದಿಪರು = ಸಂತೋಷಪಡುವರು.

ತಾತ್ಪರ್ಯ:—ಬ್ರಾಹ್ಮಣಾದಿ ವರ್ಣಗಳಿಗಭಿಮಾನಿ ದೇವತೆಗಳನ್ನೂ, ತಜ್ಜಾತಿನಿಯಾಮಕನಾದ ವಾಸುದೇವ ರೂಪಗಳನ್ನು ಭೂಸುರರೊಳಗಿಪ್ಪ ಎಂಬ ಪದ್ಯಮೊದಲು ೩೨ನೆಯ ಪದ್ಯದವರಿವಿಗೂ ಹೇಳುತ್ತಾರೆ.

ಬ್ರಾಹ್ಮಣಜಾತಿಗೆ ಅಭಿಮಾನಿ ಬ್ರಹ್ಮದೇವರು. ಇವನು ಬ್ರಾಹ್ಮಣರಲ್ಲಿರುವನು. ಅವನಲ್ಲಿ ವಾಸುದೇವ ಮೂರ್ತಿಯನ್ನು ಚಿಂತಿಸಬೇಕು.

ವಾಯುದೇವರು, ಗರುಡ, ರುದ್ರ, ಶೇಷ, ಇಂದ್ರ, ವಿವಸ್ವಾನೆಂಬ ಸೂರ್ಯ, ಚಂದ್ರ, ಮನ್ಮಥ, ಅಗ್ನಿವರುಣಾದಿ ದೇವತೆಗಳು ಕ್ಷತ್ರಿಯ ಜಾತ್ಯಭಿಮಾನಿಗಳು, ಕ್ಷತ್ರಿಯಲ್ಲಿರುವವರು. ಇವರಲ್ಲಿ ಸಂಕರ್ಷಣರೂಪಿ ಶ್ರೀ ಪರಮಾತ್ಮನು ಇರುವನೆಂದು ಚಿಂತಿಸಬೇಕು.

ಮೀನಕೇತನ ತನಯಪ್ರಾಣೋ
ಪಾನವ್ಯಾನೋದಾನಮುಖ್ಯೇ
ಕೋನಪಂಚಾಶನ್ಮರುದ್ಗಣ ರುದ್ರವಸುಗಣರ ||
ಮೇನಕಾತ್ಮಜೆ ಕುವರವಿಶ್ವಕ್
ಸೇನಧನಪಾದ್ಯ ನಿಮಿಷರನುಸ
ದಾನುರಾಗದಿ ಧೇನಿಪುದು ವೈಶ್ಯರೊಳು ಪ್ರದ್ಯುಮ್ನ || ೩೦ ||

ಪದ್ಯಾರ್ಥ:—ಮೀನಕೇತನ=ಮನ್ಮಥನ, ತನಯ=ಮಗನಾದ ಅನಿರುದ್ಧನು, ಪ್ರಾಣಾಪಾನ ವ್ಯಾನೋದಾನಮುಖ್ಯ=ಪ್ರಾಣ, ಅಪಾನ, ವ್ಯಾನ ಉದಾನ ಮೊದಲಾದ, ಏಕೋನಪಂಚಾಶತ್ ಮರುದ್ಗಣ=೪೯ ಮರುದ್ಗಣಗಳು, ರುದ್ರವಸುಗಣರು=ರುದ್ರಗಣ, ವಸುಗಣರು ಮೇನಕಾತ್ಮಜೆ ಕುವರ=ಮೇನಕಾತ್ಮಜೆ=ಪಾರ್ವತಿಯ, ಕುವರ=ಮಗನಾದ ಗಣಪತಿ, ವಿಷ್ವಕ್ಸೇನ, ಧನಪಾದಿ=ಕುಬೇರಾದಿ, ಅನಿಮಿಷರನು=ದೇವತೆಗಳನ್ನು, ವೈಶ್ಯರೊಳು=ವೈಶ್ಯಜಾತಿಯ ಅಭಿಮಾನಿಗಳನ್ನಾಗಿ, ವೈಶ್ಯರೊಳಗೆ ಇರುವವರನ್ನಾಗಿಯೂ, ಅವರುಗಳಲ್ಲಿ, ಪ್ರದ್ಯುಮ್ನ = ಪದ್ಯುಮ್ನನಾಮಕ ಶ್ರೀಪರಮಾತ್ಮನು ವಾಸಮಾಡುವುದಾಗಿಯೂ, ಸದಾ=ಸರ್ವಕಾಲದಲ್ಲಿ, ಅನುರಾಗದಿ=ಪ್ರೇಮದಿಂದ ಧೇನಿಪುದು.

ತಾತ್ಪರ್ಯ:—ಮನ್ಮಥನ ಅವತಾರನಾದ ಪ್ರದ್ಯುಮ್ನನ ಮಗ ಅನಿರುದ್ಧ, ಪ್ರಾಣ ಅಪಾನ, ವ್ಯಾನ, ಉದಾನ ಮೊದಲಾದ ೪೯ ಮರುತ್ತುಗಳು ೧೧ ರುದ್ರರು, ಪಾರ್ವತೀ ಕುಮಾರನಾದ ವಿಘ್ನೇಶ್ವರ, ವಿಷ್ವಕ್ಸೇನ, ಕುಬೇರಾದಿ ದೇವತೆಗಳು, ವೈಶ್ಯಾಭಿಮಾನಿಗಳು ವೈಶ್ಯರಲ್ಲಿರುವವರು. ಈ ದೇವತೆಗಳಲ್ಲಿ ಇರುವವನು ಪ್ರದ್ಯುಮ್ನನಾಮಕ ಶ್ರೀ ಪರಮಾತ್ಮನೆಂದು ಪರಮ ಪ್ರೀತಿಯಿಂದ ಸರ್ವಕಾಲದಲ್ಲಿಯೂ ಭಜಿಸಬೇಕು.

ಇರುತಿಹರು ನಾಸತ್ಯದಸ್ರರು
ನಿರಋತಿಯು ಯಮಧರ್ಮಯಮಕಿಂ

ಕರರುಮೇದಿನಿ ಕಾಲಮೃತ್ಯುಶನ್ಯೈಶ್ಚರಾದಿಗಳು
ಕರಸಿಕೊಂಬರು ಶೂದ್ರರೆಂದನ
ವರತಶೂದ್ರರೊಳಿಪ್ಪ ಇವರೊಳ
ಗರವಿದೂರನಿರುದ್ಧನಿಹನೆಂದರಿತು ಮನ್ನಿಪುದು ‖ ೩೧ ‖

ಪದ್ಯಾರ್ಥ :—ನಾಸತ್ಯದಸ್ರರು = ಅಶ್ವಿನೀದೇವತೆಗಳು, ನಿರಖುತಿಯು=ದಿಕ್ಪಾಲಕನಾದ ನಿರಖುತಿ, ಯಮಧರ್ಮ, ಯಮಕಿಂಕರರು, ಮೇದಿನೀ=ಭೂಮಿ, ಕಾಲಮೃತ್ಯು, ಶನ್ಯೈಶ್ಚರಾದಿಗಳು, ಶೂದ್ರರೊಳು = ಶೂದ್ರರೊಳಗೆ, ಇರುತಿಹರು, ಇವರೊಳಗೆ= ಈ ದೇವತೆಗಳೊಳಗೆ, ಅರವಿದೂರ= ದೋಷದೂರನಾದ ಅನಿರುದ್ಧನು, ಇರುವನೆಂದು, ಮನ್ನಿಪುದು=ಬಹುಮಾನ ಮಾಡಬೇಕು.

ತಾತ್ಪರ್ಯ :—ನಾಸತ್ಯದಸ್ರರೆಂಬ ಇಬ್ಬರು ಅಶ್ವಿನೀದೇವತೆಗಳು, ಶನ್ಯೈಶ್ಚರಾದಿಗಳು, ಯಮಧರ್ಮ, ಯಮದೂತರು, ಭೂಮಿ, ಕಾಲಮೃತ್ಯು, ನಿರಖುತಿ, ಇವರೆಲ್ಲರೂ ಜಾತಿಯಲ್ಲಿ ಶೂದ್ರರೆನಿಸಿಕೊಂಡು ಶೂದ್ರಜಾತಿಗಭಿಮಾನಿಗಳಾಗಿ ಶೂದ್ರರಲ್ಲಿರುತ್ತಿರುವರು. ಇವರಲ್ಲಿ ದೋಷದೂರನಾದ ಅನಿರುದ್ಧರೂಪಿ ಶ್ರೀಪರಮಾತ್ಮನಿರುವನೆಂದ ಆದರದಿಂದ ಚಿಂತಿಸಬೇಕು.

ವೀತಭಯ ನಾರಾಯಣ ಚತುಷ್
ಪಾತುತಾನೆಂದೆನಿಸಿ ತತ್ತ
ಜ್ಞಾತಿಧರ್ಮಸುಕರ್ಮಂಗಳ ತಾಮಾಡಿ ಮಾಡಿಸುವ ।
ಚೇತನರವಳ ಹೊರಗೆವೋತ
ಪ್ರೋತನಾಗಿದ್ದೆಲ್ಲರಿಗೆಸಂ
ಪ್ರೀತಿಯಲಿ ಧರ್ಮಾರ್ಥ ಕಾಮಾದಿಗಳ ಕೊಡುತಿಹನು ‖ ೩೨ ‖

ಪದ್ಯಾರ್ಥ :— ವೀತಭಯ=ಭಯರಹಿತನಾದ ನಾರಾಯಣ ಮೂರ್ತಿಯು, ಚತುಷ್ಪಾತ್=ನಾಲ್ಕುಪಾದಗಳಂತಿರುವ ೪ ಜಾತಿಯವನು ತಾನೆಂದು ಎನಿಸಿ, ತತ್ತಜ್ಞಾತಿ ಧರ್ಮಸುಕರ್ಮಂಗಳ=ಬ್ರಾಹ್ಮಣ ಕ್ಷತ್ರಿಯಾದಿ ಜಾತಿಧರ್ಮಗಳನ್ನು ಆಯಾ ಜಾತಿಗಳನ್ನನುಸರಿಸಿದ ಕರ್ಮಂಗಳನ್ನು ತಾಮಾಡಿ, ಮಾಡಿಸುವ, ಚೇತನರೊಳಗೆ, ಓತಪ್ರೋತನಾಗಿ = ಅಡ್ಡವಾಗಿಯೂ, ಉದ್ದವಾಗಿಯೂ ನೆಯಿದಂತೆ ಇದ್ದು, ಯಲ್ಲರಿಗೆ=ಯಲ್ಲಾಜಾತಿಯವರಿಗೂ, ಸಂಪ್ರೀತಿಯಲಿ=ಪರಮಪ್ರೀತಿಯಿಂದ, ಧರ್ಮಾರ್ಥಕಾಮಗಳ = ಧರ್ಮಾದಿಪುರುಷಾರ್ಥಗಳನ್ನು ಕೊಡುತಿಹನು.

ತಾತ್ಪರ್ಯ :—ಭಯಾದಿ ದೋಷರಹಿತನಾದ ಶ್ರೀನಾರಾಯಣ

ಮೂರ್ತಿಯು, ಚತುಷ್ಪಾದಗಳಂತಿರುವ ಬ್ರಾಹ್ಮಣಾದಿ ಜಾತಿಯರಲ್ಲಿ ವಾಸುದೇವಾದಿ ೪ ರೂಪಗಳಿಂದ ಇದ್ದು ಆಯಾಜಾತಿಗಳನ್ನನುಸರಿಸಿದ ಧರ್ಮಗಳನ್ನೂ ತಾನು ಮಾಡಿ ಅವರಿಂದಲೂ ಮಾಡಿಸುತ್ತಾ, ಪ್ರಾಣಿಗಳ ಒಳಗೂ ಹೊರಗೂ ವಸ್ತ್ರದಲ್ಲಿ ಧಾರಗಳು ಅಡಗಿದಂತೆ ಪರಮಾತ್ಮನು ಜಗತ್ತೆಲ್ಲವನ್ನು ವ್ಯಾಪಿಸಿಕೊಂಡು ಪ್ರೀತಿಯಿಂದ ಧರ್ಮಾದಿಪುರುಷಾರ್ಥಗಳನ್ನು ಕೊಡುತ್ತಿರುವನು. ೨೯ನೆಯ ಭೂಸುರರೊಳಗೆ ಎಂಬ ಪದ್ಯಮೊದಲು, ೩೨ನೆಯ ಪದ್ಯಪವರಿವಿಗೂ ಹೇಳಿದ ಬ್ರಹ್ಮಕ್ಷತ್ರಾದಿ ವರ್ಣದೇವತೆಗಳ ವಿಷಯದಲ್ಲಿ ವಿಷ್ಣುರಹಸ್ಯ ೩೫ನೆಯ ಅಧ್ಯಾಯ ೪ನೆಯ ಶ್ಲೋಕ ಮೊದಲು "ಜಾತಿಭೇದಸ್ತು ದೇವೇಷು ಈಶ್ವರೇಚ್ಛಾನಿಬಂಧನಃ | ಬ್ರಹ್ಮವರ್ಣ ಪತಿರ್ಬ್ರಹ್ಮಾನಾರದೋದೇವ ಲೋಕಿತಃ ||೪|| ಬೃಹಸ್ಪತಿ ಭೃಗುರ್ವ್ಯಾಸ ಮರೀಚ್ಯಾದ್ಯಾಃ ಸನಾದಯಃ | ಋಷಯಃ ಪಿತರಃಸರ್ವೇ ಬ್ರಹ್ಮವರ್ಣಾಃ ಪ್ರಕೀರ್ತಿತಾಃ ||೫|| ಕ್ಷತ್ರವರ್ಣ ಪತಿರ್ವಾಯುಃ ಪ್ರಾಣಃಸೂತ್ರಂಯಈರಿತಃ || ರುದ್ರಾದ್ಯಾಃ ಪ್ರಾಯಶೋದೇವಾಃ ಕ್ಷತ್ರವರ್ಣಾಉದೀರಿತಾಃ | ಅಶ್ವಿನೌಧನ ದೌವಿಶ್ವಕರ್ಮವಿದ್ಯಾಧರಾದಯಃ || ವೈಶ್ಯವರ್ಣಪತಿಂತೇಷಾಂ ಧನದಂವ್ಯದಧಾದ್ಧರಿಃ ||೭|| ಏವಮೇವಯಮೋದೇವೋ ಧರ್ಮಃಕಾಲಇತಿದ್ವಿಧಾ || ಧರ್ಮೋವಿಪ್ರಃ ಕಾಲಶೂದ್ರವರ್ಣಾಧ್ಯಕ್ಷೋಥದೂತಕಾಃ| ಯಕ್ಷಾಶ್ಚಗುಹ್ಯಕಾಶ್ಚಾಪಿ ಶೂದ್ರವರ್ಣಾಃ ಪ್ರಕೀರ್ತಿತಾಃ' || ಇತ್ಯಾದಿ—ಈ ಪ್ರಕಾರ ಹೇಳಿರುವರು. ಇದರ ಅರ್ಥವು ಪ್ರಾಯಶಃ ಈ ಪದ್ಯಗಳಿಗೆ ಸರಿಹೋಗುವುದು ಗ್ರಂಥವಿಸ್ತಾರ ಭಯದಿಂದ ಈ ಶ್ಲೋಕಾರ್ಥಗಳನ್ನು ಇಲ್ಲಿ ಹೇಳಲಿಲ್ಲ.

ನಿಧನಧನದ ವಿಧಾತವಿಗತಾ
ಭ್ಯಾಧಿಕಸಮುಸಮವರ್ತಿಸಾಮಗ
ತ್ರಿದಶಗಣ ಸಂಪೂಜ್ಯತ್ರಿಕಕುಬ್ಧಾಮ ಶುಭನಾಮಾ ||
ಮಧುಮಥನ ಭೃಗುರಾಮಘೋಟಕ
ವದನಸರ್ವಪದಾರ್ಥದೊಳುತುದಿ
ಮೊದಲುತುಂಬಿಹನೆಂದು ಚಿಂತಿಸುಬಿಂಬ ರೂಪದಲಿ ||೩೩||

ಪದ್ಯಾರ್ಥ:-ನಿಧನ=ಪ್ರಳಯಕಾರಕನಾದುದರಿಂದ ನಿಧನನಾಮಕನು, ಧನದ=ಐಶ್ವರ್ಯ ಪ್ರದನಾದುದರಿಂದ ಧನದ ನಾಮಕನು, ವಿಧಾತ=ಸೃಷ್ಟಿಕರ್ತನು, ವಿಗತಾಭ್ಯಾಧಿಕಸಮ=ವಿಗತ=ಹೋಗಲ್ಪಟ್ಟ, ಅಭ್ಯಾಧಿಕ=

ಉತ್ತಮ ಮತ್ತು ಸಮವುಳ್ಳವನು, ಅಂದರೆ, ತನಗಿಂತಲೂ ಉತ್ತಮರಾಗಲಿ ಸಮರಾಗಲಿ ಇಲ್ಲದವನು. ಸಮವರ್ತಿ=ಯಲ್ಲರಲ್ಲಿಯೂ ಸಮಾನವಾಗಿ ವರ್ತಿಸುವನು, ಸಾಮಗ=ಸಾಮವೇದ ಪ್ರತಿಪಾದ್ಯನು, ತ್ರಿದಶಗಣಸಂಪೂಜ್ಯ =ದೇವತಾ ಗಣದಿಂದ ಚೆನ್ನಾಗಿ ಪೂಜ್ಯನಾದವನು, ತ್ರಿಕಕುಬ್ಧಾಮ= ಶ್ವೇತದ್ವೀಪ, ಅನಂತಾಸನ, ವೈಕುಂಠವೆಂಬ ಮೂರು ಸ್ಥಳಗಳಲ್ಲಿ ಮನೆಯುಳ್ಳವನು, ಮಧುಮಥನ=ಮಧು ಎಂಬ ದೈತ್ಯನನ್ನು ಸಂಹರಿಸಿದವನು, ಭೃಗುರಾಮ=ಪರಶುರಾಮನು, ಘೋಟಕವದನ=ಹಯಗ್ರೀವನು, ಇಂತಹ, ಶುಭನಾಮ=ಮಂಗಳಕರವಾದ ನಾಮವುಳ್ಳ ಶ್ರೀ ಪರಮಾತ್ಮನು, ಸರ್ವ ಪದಾರ್ಥದೊಳು=ಎಲ್ಲಾ ಪದಾರ್ಥಗಳೊಳಗೂ, ತುದಿಮೊದಲು=ಆದ್ಯಂತವಾಗಿ, ತುಂಬಿಹನೆಂದು =ವ್ಯಾಪ್ತನಾಗಿರುವನೆಂದು ಬಿಂಬರೂಪದಲಿ= ನಿನ್ನ ಬಿಂಬರೂಪದಲ್ಲಿ, ಚಿಂತಿಸು.

ತಾತ್ಪರ್ಯ:—ಸರ್ವತ್ರವ್ಯಾಪ್ತನಾದ ಶ್ರೀ ಪರಮಾತ್ಮನನ್ನು ಸ್ವದೇಹಗತ ಬಿಂಬರೂಪದಲ್ಲಿ ಐಕ್ಯಚಿಂತನೆಮಾಡಬೇಕೆಂದು ಹೇಳುತ್ತಾರೆ:—ಯಾವ ಪರಮಾತ್ಮನು ನಿಧನನಾಮಕನಾಗಿ ಪ್ರಳಯವನ್ನು ಮಾಡುವನೋ, ಎಲ್ಲರಿಗೂ ಐಶ್ವರ್ಯಪ್ರದನಾದುದರಿಂದ ಧನದನೆಂದು ಪ್ರಖ್ಯಾತನಾಗಿರುವನೋ, ಯಾವನು ಸೃಷ್ಟಿಕರ್ತನೋ, ಯಾವ ಪರಮಾತ್ಮನಿಗೆ ಸಮರಾಗಲಿ, ಉತ್ತಮರಾಗಲಿ ಇಲ್ಲವೋ, ಯಾವನು ಎಲ್ಲರಲ್ಲಿಯೂ ಸಮನಾಗಿ ವರ್ತಿಸುವನೋ, ಅಂದರೆ ಪರಮಾತ್ಮನಿಗೆ ಒಬ್ಬರಲ್ಲಿ ಸ್ನೇಹ, ಮತ್ತೊಬ್ಬರಲ್ಲಿ ದ್ವೇಷವಿಲ್ಲ. ಅವರವರು ಮಾಡಿದ ಪುಣ್ಯ ಪಾಪಗಳನ್ನನುಸರಿಸಿ ಅವರವರಿಗೆ ಫಲವನ್ನು ಕೊಡುವುದರಿಂದ ಸಮವರ್ತಿಯೆಂದು ಹೆಸರುಳ್ಳವನೆಂದರ್ಥ. ಸಾಮಗಾನಪ್ರಿಯನು, ಬ್ರಹ್ಮಾದಿ ದೇವತಾಗಣ ಪೂಜ್ಯನು, ಶ್ವೇತದ್ವೀಪ, ಅನಂತಾಸನ, ವೈಕುಂಠವೆಂಬ ಮೂರು ಲೋಕಗಳಲ್ಲಿ ಮನೆಯುಳ್ಳವನು, ಇಂತಹಾ ಮಂಗಳನಾಮವುಳ್ಳ ಶ್ರೀ ಪರಮಾತ್ಮನು, ಮಧುಸೂದನ, ಪರಶುರಾಮ, ಹಯಗ್ರೀವ ಎಂಬ ಅವತಾರರೂಪಗಳಿಂದ ಸರ್ವಪದಾರ್ಥಗಳ ತುದಿಮೊದಲುಗಳಲ್ಲಿ ಅಂದರೆ ಕಾಲು ಮೊದಲು ತಲೆಯುವರಿವಿಗೂ ಅಥವ ತುದಿಮೊದಲು ಕೆಳಗಿನವರಿವಿಗೂ ವ್ಯಾಪ್ತನಾಗಿರುವನು. ಅಂಥಹಾ ಶ್ರೀ ಹರಿಯೇ ಅದೇ ರೂಪದಿಂದ ನನ್ನ ಬಿಂಬರೂಪನಾಗಿ ಇರುವನೆಂದು ಚಿಂತಿಸಬೇಕು.

**ಕನ್ನಡಿಯ ಕೈವಿಡಿದು ನೋಡಲು**
**ತನ್ನಿರವು ಸವ್ಯಾಪಸವ್ಯದಿ**

ಕಣ್ಣಿಗೊಪ್ಪುವ ತೆರದಲನಿರುದ್ಧನಿಗೆ ಈ ಜಗವು ||
ಭಿನ್ನಭಿನ್ನವೆ ತೋರುತಿಪ್ಪದು
ಜನ್ಯವಾದುದರಿಂದ ಪ್ರತಿಬಿಂ
ಬನ್ನಮಯ ತಾನೆಂದರಿತು ಪೂಜಿಸಲು ಕೈಗೊಂಬಾ || ೩೪ ||

ಪದ್ಯಾರ್ಥ :—ಕನ್ನಡಿಯ ಕೈವಿಡಿದು = ಕನ್ನಡಿಯನ್ನು ಕೈಯಲ್ಲಿ ಹಿಡಿದುಕೊಂಡು, ನೋಡಲು, ತನ್ನಿರವು=ತನ್ನ ಇರುವಿಕೆಯು, ಸವ್ಯಾಪಸವ್ಯದಿ= ಯಡಬಲ ವ್ಯತ್ಯಾಸವಾಗಿ, ಕಣ್ಣಿಗೆ, ಒಪ್ಪುವ= ಕಾಣುವತೆರದಲಿ, ಅನಿರುದ್ಧನಿಗೆ, ಈ ಜಗವು= ಈ ಜಗತ್ತು, ಭಿನ್ನಭಿನ್ನವೆ= ಬೇರೆಬೇರೆಯಾಗಿ, ತೋರುತಿಪ್ಪದು= ಕಾಣುತ್ತಿರುವುದು, ಜನ್ಯವಾದುದರಿಂದ = ಬಿಂಬರೂಪದಿಂದ ಹುಟ್ಟಿದುದರಿಂದ, ಪ್ರತಿಬಿಂಬ= ತಾನು ಪ್ರತಿಬಿಂಬನು, ಅನ್ನಮಯ = ಅನ್ನಮಯನು ಯೆಂದರಿತು=ಎಂದು ತಿಳಿದು, ಪೂಜಿಸಲು, ಕೈಕೊಂಬ= ಸ್ವೀಕರಿಸುವನು.

ತಾತ್ಪರ್ಯ :—ಅನಿರುದ್ಧನಾಮಕ ಶ್ರೀ ಪರಮಾತ್ಮನಿಗೆ ಈ ಜಗತ್ತು ಪ್ರತಿಬಿಂಬರೂಪವೆಂದು ಹೇಳುತ್ತಾ, ಮೇಲಿನ ಪದ್ಯಗಳಲ್ಲಿ ಹೇಳಿದ ವ್ಯಾಪ್ತ್ಯುಪಾಸನೆಯಿಂದ ಪ್ರಾಪ್ತವಾಗುವ ಜೀವ ಪರಮಾತ್ಮರ ಅಭೇದ ಸಂಶಯವನ್ನು ಪರಿಹರಿಸುತ್ತಾರೆ. ಹೇಗೆಂದರೆ:—ದೇಹವೇ ರಥವು, ಪರಮಾತ್ಮನೇ ರಥಿಕನು. ಇತ್ಯಾದಿ ವಾಕ್ಯಗಳಿಂದ ಪರಮಾತ್ಮನ ವ್ಯತಿರಿಕ್ತ ಜೀವನಿಲ್ಲವೋ ಏನೋ ಎಂಬ ಸಂಶಯಬಂದೀತೆಂದು ಶಂಕಿಸಿ ' ಕನ್ನಡಿಯ ಕೈವಿಡಿದು ' ಎಂಬ ಪದ್ಯದಿಂದ ಪರಿಹರಿಸುತ್ತಾರೆ.

ಕನ್ನಡಿಯನ್ನು ಕೈಯಲ್ಲಿ ಹಿಡಿದು ತನ್ನ ಮುಖದ ಪ್ರತಿಬಿಂಬವನು ನೋಡಿದರೆ, ಯಡಬಲವಾಗಿಯೂ, ಬಲಯೆಡವಾಗಿಯೂ ಕಾಣಿಸುವಂತೆ ಶ್ರೀ ಅನಿರುದ್ಧನಾಮಕ ಶ್ರೀ ಪರಮಾತ್ಮನಿಗೆ ಈ ಜಗತ್ತಿನಲ್ಲಿರುವ ಸಕಲ ಪ್ರಾಣಿಗಳೂ ಕನ್ನಡಿಯಲ್ಲಿ ಕಾಣಿಸುವ ಪ್ರತಿಬಿಂಬದಂತೆಯೇ ಬೇರೆ ಬೇರೆ ಪ್ರತಿಬಿಂಬಗಳಾಗಿ ಕಾಣಿಸುವುವು. ಇದರಿಂದ ಬಿಂಬರೂಪಿಗಳಾದ ಮನುಷ್ಯಾದಿಗಳಿಗೂ, ಕನ್ನಡಿಯಲ್ಲಿ ಕಾಣುವ ಪ್ರತಿಬಿಂಬಗಳಿಗೂ ಹೇಗೆ ಭೇದಗಳೋ ಹಾಗೆ, ಪರಮಾತ್ಮನಿಗೂ ಪ್ರತಿಬಿಂಬರೂಪಿಗಳಾದ ಜೀವರಿಗೂ ಭೇದ ಉಂಟೆಂದು ಹೇಳಿದಂತಾಯಿತು. ಬಿಂಬರೂಪಿಯಾದ ಅನಿರುದ್ಧದೇವರಿಂದ ಈ ಜಗತ್ತು ಹುಟ್ಟಿದುದರಿಂದ ಜೀವರಿಗೆ ಪ್ರತಿಬಿಂಬರೆಂದು ಹೇಳಬೇಕಾಯಿತು. ಮತ್ತು ಅನ್ನಮಯನಾದ ಪರಮಾತ್ಮನು ಒಳಗಿದ್ದು ಅನ್ನಾದಿಗಳನ್ನು ಸ್ವೀಕರಿಸಿ

ಜೀವರನ್ನು ತೃಪ್ತಿಪಡಿಸುವುದರಿಂದ ಅನ್ನಮಯನೆಂದು ತಿಳಿದು ''ಬಿಂಬೋಽಸಿ ಪ್ರತಿಬಿಂಬೋಽಸ್ಮಿ'' 'ನೀನು ಬಿಂಬನು; ನಾನು ಪ್ರತಿಬಿಂಬನು' ಎಂದು ತಿಳಿದು ಭಕ್ತಿಯಿಂದ ಪರಮಾತ್ಮನನ್ನು ಪೂಜಿಸಲು ಪರಮಾತ್ಮನು ಸ್ವೀಕರಿಸಿ ನಮ್ಮನ್ನು ರಕ್ಷಿಸುವನು.

ಬಿಂಬರೆನಿಪರು ಸೋತ್ತಮರು ಪ್ರತಿ
ಬಿಂಬರೆನಿಪರು ಸ್ವಾವರರು ಪ್ರತಿ
ಬಿಂಬ ಬಿಂಬಗಳೊಳಗೆ ಕೇವಲಬಿಂಬ ಹರಿಯೆಂದೂ ||
ಸಂಭ್ರಮದಿ ಪಾಡುತಲಿ ನೋಡುತ
ಉಂಬುಡುವದಿಡುವದು ಕೊಡುವುದೆ
ಲ್ಲಂಬುಜಾಂಬಕ ನಂಘ್ರಿಪೂಜೆಗಳೆಂದು ನಲಿದಾಡು || ೩೫ ||

ಪದ್ಯಾರ್ಥ :—ಸೋತ್ತಮರು=ತನಗಿಂತಲು ಉತ್ತಮರು, ಬಿಂಬರೆನಿಪರು=ಬಿಂಬರೆಂದೆನಿಸಿಕೊಳ್ಳುವರು, ಸ್ವಾವರರು=ತನಗಿಂತಲೂ ಕಮ್ಮಿಯಾದ ಗುಣ ಜ್ಞಾನಾದಿಗಳುಳ್ಳವರನ್ನು, ಪ್ರತಿಬಿಂಬ=ಪ್ರತಿಬಿಂಬರೆಂದು ತಿಳಿಯಬೇಕು. ಪ್ರತಿಬಿಂಬ, ಬಿಂಬರೊಳಗೆ=ಪ್ರತಿಬಿಂಬ ಜೀವರು-ಬಿಂಬ ಜೀವರೊಳಗೆ, ಕೇವಲಬಿಂಬ=ಬಿಂಬರೂಪಿಯು, ಹರಿಯೆಂದು=ಶ್ರೀ ಪರಮಾತ್ಮನೆ ಎಂದು, ಸಂಭ್ರಮದಿ=ಸಂತೋಷದಿಂದ, ಪಾಡುತಲಿ=ಗಾನಮಾಡುತ್ತಲೂ, ನೋಡುತ=ನೋಡುತ್ತಲೂ, ಉಂಬುಡುವದು=ಭೋಜನಮಾಡುವುದು ಮತ್ತು ವಸ್ತ್ರಾದಿಗಳನ್ನು ಉಡುವುದು, ಇಡುವುದು=ಆಭರಣಾದಿಗಳನ್ನು ಧರಿಸುವುದು, ಕೊಡುವುದು=ಪರರಿಗೆ ದಾನಮಾಡುವದು, ಯೆಲ್ಲ=ಇವೆಲ್ಲಾ ಕೃತ್ಯಗಳನ್ನೂ, ಅಂಬುಜಾಂಬಕನ=ಕಮಲನೇತ್ರನಾದ ಶ್ರೀ ಪರಮಾತ್ಮನ, ಅಂಘ್ರಿಪೂಜೆಗಳೆಂದು = ಪಾದಪೂಜೆಗಳೆಂದು, ನಲಿದಾಡು=ಕುಣಿದಾಡು.

ತಾತ್ಪರ್ಯ:—ಬಿಂಬ ಪ್ರತಿಬಿಂಬ ರೂಪಗಳನ್ನು ಎಲ್ಲೆಲ್ಲಿ ಚಿಂತಿಸಬೇಕೆಂಬುವುದನ್ನು ವಿವರಿಸುತ್ತಾರೆ. ಮಹಾಭಾರತ ತಾತ್ಪರ್ಯ ನಿರ್ಣಯ ಅಧ್ಯಾಯ ೧ 'ಆಭಾಸ ಕೋಽಸ್ಯಪವನಃ ಪವನಸ್ಯ ರುದ್ರಃ ಶೇಷಾತ್ಮಕೋ ಗರುಡ ಏವಚ ಶಕ್ರಕಾಮೌ || ವೀಂದ್ರೇಶಯೋಸ್ತದಪರೇತ್ವನಯೋಶ್ಚ ತೇಷಾಮ್ಮನ್ವಾದಯಃಕ್ರಮಶಊನಗುಣಾಃ ಶತಾಂಶಾತ್' ಪರಮಾತ್ಮನ ಸಾಕ್ಷಾತ್ಪ್ರತಿಬಿಂಬರು ವಾಯುದೇವರು. ವಾಯುದೇವರ ಪ್ರತಿಬಿಂಬ ಭೂತರು ರುದ್ರದೇವರು. ಆ ರುದ್ರದೇವರೇ ಶೇಷಪಟ್ಟಕ್ಕೆ ಬರುವವರು. ಗರುಡನೂ

ಸಹ ವಾಯುದೇವರ ಪ್ರತಿಬಿಂಬನು. ಗರುಡ ಶೇಷಾದಿಗಳ ಪ್ರತಿಬಿಂಬರು ಇಂದ್ರ ಮನ್ಮಥರು. ಇವರ ಕೆಳಗಿನವರು ಅವರ ಪ್ರತಿಬಿಂಬರೆಂತಲೂ ಹೀಗೆ ಕ್ರಮವಾಗಿ ೧೦೦ ಗುಣಗಳು ಕಮ್ಮಿಯಾದವರು ಋಷ್ಯಾದಿಗಳು. ಇವರೆಲ್ಲರೂ ಸೋತ್ತಮರ ಪ್ರತಿಬಿಂಬಗಳೆಂದು ಹೇಳಿರುವರು. ಇದೇ ಅಭಿಪ್ರಾಯವನ್ನೇ ದಾಸರಾಯರು ಇಲ್ಲಿ ಹೇಳುತ್ತಾರೆ. ನಮಗಿಂತಲೂ ಉತ್ತಮರನ್ನು ನಮಗೆ ಬಿಂಬರೂಪರೆಂತಲೂ, ನಮಗಿಂತಲೂ ನೀಚರು ನಮಗೆ ಪ್ರತಿಬಿಂಬರೆಂತಲೂ ನಾವು ಸೋತ್ತಮರಿಗೆ ಪ್ರತಿಬಿಂಬರು ಸ್ವಾವರರಿಗೆ ಬಿಂಬರೂಪಿಗಳಾಗಿರುವೆವು. ಈ ಬಿಂಬ ಜೀವರಿಗೂ ಪ್ರತಿಬಿಂಬ ಜೀವರಿಗೂ ಸಹ ಮುಖ್ಯವಾದ ಬಿಂಬ ರೂಪಿಯು ಪರಮಾತ್ಮನೆಂದು ತಿಳಿದು ನಾವು ತಿನ್ನುವುದು, ಉಡುವುದು, ಇಡುವುದು, ಕೊಡುವುದು ಮೊದಲಾದ ಎಲ್ಲವೂ ನಮ್ಮಂತರ್ಯಾಮಿಯಾದ ಬಿಂಬರೂಪಿಯಾದ ಶ್ರೀ ಕಮಲಾಕ್ಷನ ಪೂಜೆಯೆಂದು ಭಾವಿಸಿ ಸಂತೋಷ ಪಡಬೇಕೆಂದು ತಾತ್ಪರ್ಯ.

ನದಿಯ ಜಲನದಿಗೆರೆವ ತೆರದಂ
ದದಲಿ ಭಗವದ್ದತ್ತ ಧರ್ಮಗ
ಳುದಧಿಶಯನನಿಗರ್ಪಿಸುತ ವ್ಯಾವರ್ತನೀನಾಗಿ |
ವಿಧಿನಿಷೇಧಾದಿಗಳಿಗೊಳಗಾ
ಗದಲೆ ಮಾಡುತದರ್ಪಿಯಂದದಿ
ಪದುಮನಾಭನ ಸಕಲ ಕರ್ಮಗಳಲ್ಲಿನೆನವುತಿರು || ೩೬ ||

ಪದ್ಯಾರ್ಥ :—ನದಿಯಜಲ = ನದಿಯ ಉದಕವನ್ನು, ನದಿಗೆ ಎರೆವಂದದಲಿ = ಅರ್ಘ್ಯಾದಿಗಳನ್ನು ಕೊಡುವಂತೆ, ಭಗವದ್ದತ್ತ = ಪರಮಾತ್ಮನು ಕೊಟ್ಟ, ಧರ್ಮಗಳು = ಧರ್ಮಗಳನ್ನು (ಪದಾರ್ಥಗಳನ್ನು) ಉದಧಿಶಯನನಿಗೆ = ಕ್ಷೀರಸಮುದ್ರಶಾಯಿಯಾದ ಶ್ರೀಹರಿಗೆ, ಅರ್ಪಿಸುತ, ನೀ = ನೀನು, ವ್ಯಾವರ್ತನಾಗಿ = ನಾನು ಮಾಡಿದೆನೆಂಬ ಭಾವವನ್ನು ಬಿಟ್ಟು, ಅಂದರೆ ಸ್ವತಂತ್ರಕರ್ತೃತ್ವಾಭಿಮಾನವನ್ನು ಬಿಟ್ಟು, ವಿಧಿನಿಷೇಧಾದಿಗಳಿಗೊಳಗಾಗದಲೆ = ಮಾಡಬೇಕಾದ ಕರ್ಮಗಳನ್ನೂ ಬಿಡಬೇಕಾದ ಕರ್ಮಗಳನ್ನು, ಸ್ವತಂತ್ರದಿಂದ ನಾನು ಮಾಡಿದೆನು ನಾನು ಬಿಟ್ಟೆನು ಎಂಬ ಬುದ್ಧಿಗ (ಅಹಂಕಾರಕ್ಕೆ) ಒಳಗಾಗದಲೆ ಮಾಡುತ = ಅಸ್ವತಂತ್ರನಾದ ನಾನು ಪರಮಾತ್ಮನು ಮಾಡಿಸಿದಂತೆ ಮಾಡುವೆನು ಎಂಬ ಭಾವನೆಯಿಂದ ಕರ್ಮಗಳನ್ನು ಮಾಡುತ್ತ, ದರ್ಪಿಯಂದದಿ = ಸಾಟ

ನಂತೆ ಅಂದರೆ ಸೌಟು ಹೇಗೆ ಸಾರು ಮೊದಲಾದ ಪದಾರ್ಥಗಳಲ್ಲಿ ಮುಳುಗು ವುದೋ (ಅಸ್ವತಂತ್ರದಿಂದ ಒಬ್ಬರು ಮುಣಗಿಸಿದಂತೆ ಮುಣುಗುವುದೋ ಹಾಗೆ ಜೀವನು ಅಸ್ವತಂತ್ರಕರ್ತನೆಂಬ ವಿಷಯದಲ್ಲಿ ದರ್ವೀ ಉಪಮಾನ ವೆಂದು ಭಾವಿಸಬೇಕು.) ಕೆಲವರು ಜೀವರಿಗೆ ಕರ್ತೃತ್ವವೇ ಇಲ್ಲವೆಂಬ ವಿಷಯ ದಲ್ಲಿ ದರ್ವೀ ಉಪಮಾನವೆಂದು ಹೇಳುವರು. ಹಾಗೆ ಹೇಳಿದರೆ ಸಿದ್ಧಾಂ ತಕ್ಕೂ ಲೌಕಿಕೋಪಮಾನಕ್ಕೂ ಸಹ ವಿರೋಧವಾಗುವುದು, ಸಾರು ಹುಳಿ ಗಳ ಒಳಗೆ ಮುಣುಗುವ ಸೌಟಿಗೆ ಹೇಗೆ ಉಪ್ಪು ಖಾರಗಳ ದುಃಖವಿಲ್ಲವೋ ಪಾಯಸಾದಿಗಳಲ್ಲಿ ಮುಣುಗುವಾಗ ಅದರ ಸಿಹಿ ಮೊದಲಾದವುಗಳಿಂದ ಅದಕ್ಕೆ ಸುಖವೂ ಇಲ್ಲವೋ ಹಾಗೆ ಜೀವನಿಗೂ ನರಕ ಸ್ವರ್ಗಾದಿಗಳಿಂದಾ ಗುವ ದುಃಖಸುಖಾದಿಗಳೂ ಇಲ್ಲದಂತಾಗುವುದು. ಸುಖದುಃಖಾದಿಗಳನ್ನೂ ನಮ್ಮೊಳಗಿರುವ ಪರಮಾತ್ಮನೇ ಅನುಭವಿಸಬೇಕಾಗಿ ಬಂದೀತು. 'ಜೀವೋ ಪಿಕರ್ತಾ' ಮೊದಲಾದ ವಾಕ್ಯಗಳು ನಿಷ್ಪ್ರಯೋಜನವಾದೀತು. ಆದ್ದರಿಂದ ದರ್ವೀ ಉಪಮಾನವನ್ನು ಅಸ್ವತಂತ್ರ ಕರ್ತೃತ್ವ ವಿಷಯದಲ್ಲಿ ಮಾತ್ರ ಉಪ ಮಾನವೆಂದು ಭಾವಿಸಬೇಕು. ಸಕಲ ಕರ್ಮಗಳಲ್ಲಿ= ನಾವು ಮಾಡುವ ಎಲ್ಲಾ ಕರ್ಮಗಳನ್ನು, ಪದುಮನಾಭನ=ಶ್ರೀಪದ್ಮನಾಭನೇ ಸ್ವತಂತ್ರನಾಗಿ ಮಾಡಿ ಸುವನೆಂದು, ನೆನವುತಿರು= ಚಿಂತಿಸುತ್ತಿರು.

ಅರಿಯದಿರ್ದರುಯಮ್ಮೊಳಿದ್ದನ
ವರತ ವಿಷಯಗಳುಂಬ ಜ್ಞಾನೋ
ತ್ತರದಿ ತನಗರ್ಪಿಸಲು ಚಿತ್ಸುಖವಿತ್ತು ಸಂತೈಪ ||
ಸರಿತುಕಾಲ ಪ್ರವಹಗಳು ಕಂ
ಡರೆಯುಸರಿಕಾಣದಿರೆ ಪರಿವವು
ಮರಳಿ ಮಜ್ಜನ ಪಾನಕರ್ಮಗಳಿಂದೆ ಸುಖವಿಹವು || ೩೭ ||

ಪದ್ಯಾರ್ಥ :—ಅರಿಯದಿರ್ದರು= ನಾವು ತಿಳಿಯದಿರ್ದರು, ಯಂಮೊ ಳಿದ್ದು= ನಮ್ಮೊಳಗಿದ್ದು, ಅನವರತ=ನಿತ್ಯದಲ್ಲಿಯೂ, ವಿಷಯಗಳುಂಬ= ವಿಷ ಯಸುಖಸಾರವನ್ನು ಸ್ವೀಕರಿಸುವನು. ಜ್ಞಾನೋತ್ತರದಿ= ಜ್ಞಾನೋದಯ ವಾದಮೇಲೆ (ನಮಗೆ ತಿಳವಳಿಕೆ ಬಂದಮೇಲೆ) ತನಗೆ= ಪರಮಾತ್ಮನಿಗೆ, ಅರ್ಪಿಸಲು= ಸಮರ್ಪಣೆಮಾಡಲು, ಚಿತ್ಸುಖವಿತ್ತು= ಶಾಶ್ವತ ಸುಖವನ್ನು ಕೊಟ್ಟು (ಮುಕ್ತಿಯನ್ನು ಕೊಟ್ಟು) ಸಂತೈಪ= ಸಮಾಧಾನ ಪಡಿಸುವನು.

(ಉದ್ಧರಿಪನು) ಸರಿತು ಕಾಲ=ಮಳೆಯಕಾಲದ, ಪ್ರವಹಗಳು=ವರ್ಷಾ ಕಾಲಾದಿಗಳಲ್ಲಿ ಬರುವ ಪ್ರವಾಹಗಳು, ಕಂಡರೆಯು ಸರಿ=ಪ್ರವಹಿಸುವುದನ್ನು ಒಬ್ಬರು ಕಂಡರೂ ಸರಿಯೆ, ಕಾಣದಿರೆ=ಕಾಣದಿದ್ದರೂ ಸರಿಯೆ, ಪರಿವವು=ಹರಿಯುತ್ತಲೇ ಇರುವವು. ಮರಳಿ=ಜನರು ಪ್ರವಾಹ ಬಂದಿರುವುದನ್ನು ತಿಳಿದನಂತರ, ಮಜ್ಜನಪಾನಕರ್ಮಗಳಿಂದ=ಸ್ನಾನಪಾನಾದಿ ಕರ್ಮಗಳನ್ನು ಮಾಡಲು ಅವರಿಗೆ ಸುಖವನ್ನು ಕೊಡುವವು,

ತಾತ್ಪರ್ಯ :—ಅಜ್ಞಾನದಿಂದ ಕೆಲವುಕಾಲ ಮಾಡಿದ ಕರ್ಮಗಳನ್ನು ಪರಮಾತ್ಮನಿಗೆ ಸಮರ್ಪಿಸದಿದ್ದರೂ, ಜ್ಞಾನೋದಯವಾದಮೇಲೆ ಸಮರ್ಪಿಸಿದರೂ, ಸ್ವೀಕರಿಸಿ, ಮುಕ್ತಿಯನ್ನು ಕೊಡುವನೆಂದು ಹೇಳುತ್ತಾರೆ :—ಹೇಗೆ ನದೀಪ್ರವಾಹಗಳು, ಒಬ್ಬರು ಕಂಡರೂ ಕಾಣದಿದ್ದರೂ ಕಾಲಗಳಲ್ಲಿ ತಪ್ಪದೆ ಪ್ರವಾಹವು ಬಂದೇಬರುವುದೋ ಮತ್ತು ಪ್ರವಾಹ ಬಂದಿತೆಂದು ಜನರಿಗೆ ತಿಳಿವಳಿಕೆ ಬಂದನಂತರ ಸ್ನಾನಪಾನಾದಿಗಳನ್ನು ಮಾಡಿದರೆ ಸುಖವನ್ನು ಕೊಡುವುದೋ, ಹಾಗೆಯೇ ಪರಮಾತ್ಮನು ನಮ್ಮೊಳಗಿದ್ದು ಕರ್ಮಗಳನ್ನು ಮಾಡಿಸುವನು, ವಿಷಯಸುಖವನ್ನನುಭವಿಸುವನು ಎಂದು ನಾವು ತಿಳಿಯದಿದ್ದರೂ ತಾನು ವಿಷಯಸುಖವನ್ನು ಸ್ವೀಕರಿಸದೆ ಇರನು. ನಮಗೆ ತಿಳಿವಳಿಕೆ ಬಂದ ಮೇಲೆ ಪರಮಾತ್ಮನಿಗೆ ಸಮರ್ಪಿಸಿದರೆ, ಶಾಶ್ವತಸುಖಮಯವಾದ ಮುಕ್ತಿಯನ್ನು ಕೊಟ್ಟು ಉದ್ಧರಿಸುವನು. ಆದ್ದರಿಂದ ಮಾಡಿದ ಸಕಲ ಕರ್ಮಗಳನ್ನು ಪರಮಾತ್ಮನೇ ಮಾಡಿ, ಮಾಡಿಸಿದನೆಂದು ಭಾವಿಸಿ ಅವನಿಗೆ ಅರ್ಪಣೆಮಾಡಬೇಕೆಂದು ಭಾವನೆ.

ಏನುಮಾಡುವ ಕರ್ಮಗಳು ಲಕು
ಮಿನಿವಾಸನಿಗರ್ಪಿಸನುಸಂ
ಧಾನಪೂರ್ವಕದಿಂದೆ ಸಂದೇಹಿಸದೆ ದಿನದಿನದಿ ||
ಮಾನನಿಧಿ ಕೈಕೊಂಡು ಸುಖವಿ
ತ್ತಾನತರ ಸಂತೈಪ ತೃಣಜಲ
ಧೇನು ತಾನುಂಡನವರತ ಪಾಲ್ಗರೆವ ತೆರದಂತೆ || ೩೮ ||

ಪದ್ಯಾರ್ಥ :—ಏನುಮಾಡುವ=ಯಾವಬಗೆಯಿಂದಲಾದರೂ ಮಾಡುವ, ಕರ್ಮಗಳು=ಪುಣ್ಯಪಾಪ ಕರ್ಮಗಳನ್ನು, ಲಕುಮಿನಿವಾಸನಿಗೆ=ಶ್ರೀನಿವಾಸನಿಗೆ, ಅನುಸಂಧಾನಪೂರ್ವಕದಿಂದೆ=ಕರ್ಮಗಳನ್ನು ಪರಮಾತ್ಮನೇ ಮಾಡಿ

ಸಿದನೆಂಬ ಅನುಸಂಧಾನಪೂರ್ವಕವಾಗಿ, ಸಂದೇಹಿಸದೆ=ಸ್ವಲ್ಪವು ಸಂಶಯ ಪಡದೆ, ದಿನದಿನದಿ=ಪ್ರತಿದಿವಸದಲ್ಲಿಯೂ, ಅರ್ಪಿಸೆ=ಸಮರ್ಪಿಸಲು, ಮಾನ ನಿಧಿ=ಮಾನವೇ ನಿಧಿಯಾಗುಳ್ಳ ಶ್ರೀ ಹರಿಯು, ಕೈಕೊಂಡು=ಸ್ವೀಕರಿಸಿ, ಸುಖವಿತ್ತು=ಸುಖವನ್ನು ಕೊಟ್ಟು, ಆನತರ=ನಮ್ರೀಭೂತರಾದ ಭಕ್ತರನ್ನು, ಧೇನು=ಗೋವು, ತೃಣಜಲತಾನುಂಡು=ತಾನು ಹುಲ್ಲುತಿಂದು ನೀರು ಕುಡಿದು, ಅನವರತ=ನಿತ್ಯದಲ್ಲಿಯೂ, ಪಾಲ್ಗರೆವ=ಹಾಲುಕರೆವ, ತೆರದಂತೆ=ರೀತಿಯಾಗಿ, ಸಂತೈಪ=ಸಂತೋಷಪಡಿಸುವನು.

ತಾತ್ಪರ್ಯ :—ಪಾಪ ಪುಣ್ಯ ಕರ್ಮಗಳೆಲ್ಲವನ್ನೂ ನಿಃಸಂಶಯವಾಗಿ ಪರಮಾತ್ಮನಿಗೇ ಸಮರ್ಪಿಸಬೇಕೆಂದು ಹೇಳುತ್ತಾರೆ. ನಾವು ಪ್ರತಿದಿವಸ ದಲ್ಲಿಯೂ ಯಾವ ಪುಣ್ಯವನ್ನು ಮಾಡಲಿ, ಪಾಪವನ್ನು ಮಾಡಲಿ "ನಾಹಂ ಕರ್ತಾ ಹರಿಃಕರ್ತಾ" ಎಂಬ ಅನುಸಂಧಾನ ಪೂರ್ವಕವಾಗಿ ಸ್ವತಂತ್ರ ಕರ್ತನು ನಾನಲ್ಲ, ಪರಮಾತ್ಮನು ಮಾಡಿಸಿದುದನ್ನು ನಾನು ಮಾಡುವೆನೆಂದು ಭಾವಿಸಿ ಪಾಪವನ್ನು ಪರಮಾತ್ಮನಿಗರ್ಪಿಸಿದರೆ ನಮಗೆ ಪಾಪವು ಹೆಚ್ಚಾಗುವುದೋ ಏನೋ ಎಂಬ ಸಂದೇಹವನ್ನು ಬಿಟ್ಟು ಶ್ರೀನಿವಾಸನಿಗೆ ಪುಣ್ಯಪಾಪಗಳನ್ನರ್ಪಿಸಿದರೆ ಶ್ರೀ ಪರಮಾತ್ಮನು ಅವನ್ನು ಸ್ವೀಕರಿಸಿ ಪಾಪಗಳನ್ನು ಸುಟ್ಟು, ಪುಣ್ಯಕರ್ಮಗಳ ಫಲವನ್ನು ಹೆಚ್ಚುಮಾಡಿ ನಮಗೆ ಸುಖವನ್ನು ಕೊಟ್ಟು ಹಸುವು ಹೇಗೆ ಹುಲ್ಲು ತಿಂದು ನೀರು ಕುಡಿದು ಹಾಲನ್ನು ಕೊಡುವುದೋ ಹಾಗೆ ನಮಗೆ ಸುಖವನ್ನು ಕೊಟ್ಟು ಉದ್ಧರಿಸುವನು.

> ಪೂರ್ವದಕ್ಷಿಣ ಪಶ್ಚಿಮೋತ್ತರ
> ಪಾರ್ವತೀಪತಿ ಯಗ್ನಿವಾಯುಸು
> ಶಾರ್ವರೀಚರದಿಗ್ವಲಯದೊಳು ಹಂಸನಾಮಕನು ||
> ಸಾರ್ವಕಾಲದಿ ಸರ್ವರೊಳುಸುರ
> ಸಾರ್ವಭೌಮನು ಸ್ವೇಚ್ಛೆಯಲಿ ಮ
> ತ್ತೋರ್ವರಿಗೆ ಗೋಚರಿಸದವ್ಯಕ್ತಾತ್ಮನೆಂದೆನಿಸಿ || ೩೯ ||

ಪದ್ಯಾರ್ಥ :—ಪೂರ್ವದಕ್ಷಿಣ ಪಶ್ಚಿಮೋತ್ತರ=ಪೂರ್ವದಕ್ಷಿಣ ಪಶ್ಚಿಮ ಉತ್ತರಗಳಲ್ಲಿಯೂ, ಪಾರ್ವತೀಪತಿ=ರುದ್ರದೇವರು ವಾಸಮಾಡುವ ಈಶಾನ್ಯ, ಅಗ್ನಿ=ಆಗ್ನೇಯ, ವಾಯು=ವಾಯುವ್ಯ, ಸುಶಾರ್ವರೀಚರ=ನಡುರಾತ್ರಿಯಲ್ಲಿ ಚರಿಸುವ ರಾಕ್ಷಸನಾದ ನಿರ್ಋತಿ ದಿಕ್ಕು, ದಿಗ್ವಲಯದೊಳು=

ದಿಕ್ಕುವಿದಿಕ್ಕು ಮಂಡಲಗಳಲ್ಲಿ, ಹಂಸನಾಮಕನು=ಹಂಸನಾಮಕ ಪರಮಾತ್ಮನು (ಇರುತಿಹನು) ಸುರಸಾರ್ವ ಭೌಮನು=ದೇವತಾಚಕ್ರವರ್ತಿಯಾದ ಶ್ರೀ ಪರಮಾತ್ಮನು (ಈ ಪ್ರಕಾರ) ಸರ್ವಕಾಲದಿ=ಸರ್ವಕಾಲಗಳಲ್ಲಿಯೂ ಸರ್ವರೊಳು=ಎಲ್ಲಾ ಪ್ರಾಣಿಗಳಲ್ಲಿಯೂ, ಸ್ವೇಚ್ಛೆಯಲಿ=ತನ್ನ ಇಚ್ಛೆಯಿಂದಲೇ, ಮತ್ತೊರ್ವರಿಗೆ = ಮತ್ತೊಬ್ಬರಿಗೆ, ಗೋಚರಿಸದೆ= ಕಣ್ಣಿಗೆ ಗೋಚರನಾಗದೆ, ಅವ್ಯಕ್ತಾತ್ಮನು=ಸ್ವರೂಪವನ್ನು ತೋರ್ಪಡಿಸದೆ ಇರುವವನು, ಎಂದೆನಿಸಿ=ಎಂದು ಪ್ರಸಿದ್ಧನಾಗಿ (ಇರುತಿಹನು)

ತಾತ್ಪರ್ಯ :—ದಿಕ್ಕುವಿದಿಕ್ಕುಗಳಲ್ಲಿ ಭಗವಂತನ ವಿಭೂತಿ ಚಿಂತನಾ ಪ್ರಕಾರವನ್ನು ಹೇಳುತ್ತಾರೆ:—

ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರವೆಂಬ ೪ ದಿಕ್ಕುಗಳು, ವಿದಿಕ್ಕುಗಳು, ಪಾರ್ವತೀಪತಿ ವಾಸಮಾಡುವ ಈಶಾನ್ಯ, ಅಗ್ನಿಯದಿಕ್ಕು ಆಗ್ನೇಯ, ವಾಯುದಿಕ್ಕು ವಾಯವ್ಯ, ರಾಕ್ಷಸನಾದ ನಿರುರುತಿಯು ವಾಸಮಾಡುವ ನೈರುತ್ಯ. ಹೀಗೆ ದಿಕ್ಕು ವಿದಿಕ್ಕುಗಳಲ್ಲಿ ಹಂಸನಾಮಕ ಪರಮಾತ್ಮನು ನಿಯಾಮಕನಾಗಿರುವನು. ಹೀಗೆ ದೇವತಾ ಸಾರ್ವಭೌಮನಾದ ಶ್ರೀ ಹರಿಯು ಸರ್ವಕಾಲದಲ್ಲಿಯೂ ಸರ್ವಪ್ರಾಣಿಗಳಲ್ಲಿಯೂ ಸ್ವೇಚ್ಛೆಯಿಂದಲೇ ಇರುತ್ತ ಮತ್ತೊಬ್ಬರಿಗೆ ಗೋಚರನಾಗದೆ 'ಅವ್ಯಕ್ತಾತ್ಮ' ಎಂಬ ಹೆಸರನ್ನು ಪಡೆದಿರುವನು. 'ಇಂದ್ರೋ ನಲೋದಂಡಧರಶ್ಚ ರಕ್ಷೋ ಪಾಶಾಯುಧೋ ವಾಯು ಧನೇಶ ರುದ್ರಃ' ಎಂಬ ಶ್ಲೋಕದಲ್ಲಿ ನಿರುರುತಿಗೆ ರಾಕ್ಷಸನೆಂದು ಪೆಸರಿಸಿರುವದರ ಆಧಾರದಮೇಲೆ ದಾಸರಾಯರು ಪ್ರಯೋಗಿಸಿರುವರು.

ಪರಿಇಡಾವತ್ಸರನು ಸಂವ
ತ್ಸರದೊಳನಿರುದ್ಧಾದಿ ರೂಪವ
ಧರಿಸಿ ಬಾರ್ಹಸ್ಪತ್ಯ ಸೌರಭ ಚಾಂದ್ರಮನುಯೆನಿಸಿ ||
ಇರುತಿಹ ಜಗನ್ನಾಥ ವಿಠಲ
ಸ್ಮರಿಸುವರನು ಸಂತಯಿಪನೆಂ
ದುರುಪರಾಕ್ರಮನುಚಿತಸಾಧನ ಯೋಗ್ಯತೆಯನರಿತು ॥ ೪೦ ॥

ಇಲ್ಲಿಗೆ ೫ ನೆಯ ಸಂಧಿಯು ಮುಗಿದುದು.

ಪದ್ಯಾರ್ಥ :—ಪರಿ ಇಡಾವತ್ಸರನು, ಸಂವತ್ಸರದೊಳು=ಪರಿವತ್ಸರ, ಇಡಾವತ್ಸರ, ವತ್ಸರ, ಅನುವತ್ಸರ, ಸಂವತ್ಸರವೆಂಬ ಐದು ವಿಧವಾದ ಸಂವ

ತ್ಸರದೊಳಗೆ, ಅನಿರುದ್ಧಾದಿ ರೂಪವ=ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣನೆಂಬ ೫ ರೂಪಗಳನ್ನು ಧರಿಸಿ, ಬಾರ್ಹಸ್ಪತ್ಯ=ಬಾರ್ಹಸ್ಪತ್ಯಮಾನವೆಂತಲೂ, ಸೌರ=ಸೌರಮಾನವೆಂತಲೂ, ಭ=ನಕ್ಷತ್ರಮಾನವೆಂತಲೂ, ಚಾಂದ್ರಮನು=ಚಾಂದ್ರಮಾನವೆಂತಲೂ, (ಸೌರದಲ್ಲಿ ಪ್ರಭೇದವಾದ ೩೬೦ ದಿವಸಗಳುಳ್ಳ ಮತ್ತೊಂದು ಸೌರ) ಅಂತು ೫ ಪ್ರಕಾರನಾಗಿ ಯನಿಸೀ=ಹೆಸರುಳ್ಳವನಾಗಿ,ಇರುತಿಹ=ಇರುವ, ಉರುಪರಾಕ್ರಮ=ಬಹು ಪರಾಕ್ರಮಶಾಲಿಯಾದ, ಜಗನ್ನಾಥವಿಠ್ಠಲ=ಜಗನ್ನಾಥವಿಠ್ಠಲನು, ಸ್ಮರಿಸುವರನ=ತನ್ನನ್ನು ಸ್ಮರಿಸುತ್ತಿರುವವರನ್ನು, ಉಚಿತಸಾಧನ ಯೋಗ್ಯತೆಯನರಿತು=ಅವರವರ ಯೋಗ್ಯತಾನುಗುಣವಾದ ಸಾಧನೆಯನ್ನು ತಿಳಿದು, ಎಂದೂ=ಯಾವಾಗಲೂ, ಸಂತಯಿಪ=ರಕ್ಷಿಪನು.

ತಾತ್ಪರ್ಯ:—ಸಂಧಿಯನ್ನು ಮುಗಿಸುವಲ್ಲಿ ಕಾಲರೂಪಿಯಾದ ಶ್ರೀ ಪರಮಾತ್ಮನ ವಿಭೂತಿಯನ್ನು ಹೇಳುತ್ತಾರೆ:—

ಭಾಗವತ ತೃತೀಯಸ್ಕಂಧ ೧೨ನೆಯ ಅಧ್ಯಾಯ ಶ್ಲೋಕ ೧೪ ರಲ್ಲಿ, 'ಸಂವತ್ಸರಃ ಪರಿವತ್ಸರ ಇಡಾವತ್ಸರಏವಚ। ಅನುವತ್ಸರೋ ವತ್ಸರಶ್ಚವಿದುರೈವಂಪ್ರಭಾಷತೆ' ॥ ೫ ವಿಧ ಸಂವತ್ಸರಗಳ ಹೆಸರುಗಳು ಉಕ್ತವಾಗಿವೆ. ಈ ಶ್ಲೋಕದ ಭಾಗವತ ತಾತ್ಪರ್ಯ ವಾಕ್ಯ, 'ಇಡಾವತ್ಸರ ನಾಮನಾ ಸೌ ನಕ್ಷತ್ರ ದ್ವಾದಶೇಸ್ಥಿತಃ । ತಿಥೀನಾಂದ್ವಾದಶಾವರ್ತೇಯೋ ಹರಿಃ ಸೋನುವತ್ಸರಃ ॥ ವತ್ಸರೋಯಃ ಸ್ಥಿತಸ್ತ್ವನ್ಹಾಂಷಷ್ಟ್ಯುತ್ತರ ತತ್ರಯೇ ॥ ಗುರ್ವಾವರ್ತದ್ವಾದಶಾಂಶೋಯಃ ಸ್ಥಿತಃಪರಿವತ್ಸರಃ ॥ ಸೌರದ್ವಾದಶಮಾಸೇಷು ಯಃಸ್ಥಿತಃ ಸಂವತ್ಸರೋಹರಿಃ ॥ ಏವಂ ಸಕಾಲ ನಾಮಾಪಿಕಾಲಸ್ಥ ಪರಮೇಶ್ವರ ಇತಿ ॥ ಅಶ್ವಿನ್ಯಾದಿ ನಕ್ಷತ್ರಗಳಲ್ಲಿ ಅಶ್ವಿನೀ ನಕ್ಷತ್ರವಾಗಲಿ ಮತ್ತಾವ ನಕ್ಷತ್ರವಾಗಲಿ ೧೨ ಆವರ್ತಿ ಆದರೆ ಒಂದು ವರ್ಷವಾಗುವುದು. ಆ ವರ್ಷಕ್ಕೆ ಇಡಾವತ್ಸರವೆಂದು ಹೆಸರು. ೧೨ ಅಮಾವಾಸ್ಯೆಗಳಾದರೆ ಒಂದು ವರ್ಷವಾಗುವುದು. ಆ ವರ್ಷಕ್ಕೆ ನಿಯಾಮಕನಾದ ಪರಮಾತ್ಮನಿಗೆ ಅನುವತ್ಸರನೆಂದು ಹೆಸರು. ೩೬೦ ದಿವಸಗಳಾದರೆ ಆಗುವ ವರ್ಷನಿಯಾಮಕನಿಗೆ ವತ್ಸರನೆಂದು ಹೆಸರು. (ಗುರು) ಬೃಹಸ್ಪತಿಯು ಒಂದು ರಾಶಿಯನ್ನು ಬಿಟ್ಟು ಮತ್ತೊಂದು ರಾಶಿಗೆ ಬರುವಾಗ ಆಗುವ ವರ್ಷನಿಯಾಮಕನಿಗೆ ಪರಿವತ್ಸರನೆಂದು ಹೆಸರು. ಸೂರ್ಯನು ೧೨ ರಾಶಿಯಲ್ಲಿ ಸಂಚಾರಮಾಡುವ ಕಾಲ ನಿಯಾಮಕನಿಗೆ ಸಂವ

ತ್ಸರನೆಂದು ಹೆಸರು. ಹೀಗೆ ಕಾಲನಿಯಾಮಕನಾದ ಪರಮಾತ್ಮನಿಗೆ ಕಾಲನೆಂದು ಹೆಸರು. ಶ್ರೀ ಪರಮಾತ್ಮನು ಮೇಲೆ ಹೇಳಿದಪ್ರಕಾರ, ಬಾರ್ಹಸ್ಪತ್ಯ. ಸೌರ, ಅನುಸೌರ, ನಕ್ಷತ್ರ, ಚಾಂದ್ರಮಾನಗಳೆಂಬ ಐದು ಬಗೆಯಾಗಿ ಗಣಿಸುವ ಪರಿವತ್ಸರಾದಿ ೫ ಹೆಸರುಗಳನ್ನು ಧರಿಸಿರುವನು. ಈ ೫ ರೂಪಗಳಲ್ಲಿ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ನಾರಾಯಣನೆಂಬ ೫ ರೂಪಗಳಿಂದ ವಾಸಮಾಡುತ್ತಿರುವನು. ಇದರಲ್ಲಿ ಅನುಸೌರವೆಂದರೆ ೩೬೦ ಹಗಲುಗಳು ಆಗುವ ವತ್ಸರನಾಮಕವಾದ ವರ್ಷಕ್ಕೆ ಹೆಸರು. ಹೀಗೆ ಉತ್ಕೃಷ್ಟ ಪರಾಕ್ರಮಿಯಾದ ಅಸ್ಮದಂತರ್ಯಾಮಿಯಾದ ಬಿಂಬರೂಪಿ ಶ್ರೀಮಜ್ಜಗನ್ನಾಥ ವಿಠ್ಠಲನನ್ನು ಸ್ಮರಿಸುವವರ ಯೋಗ್ಯತಾನುಸಾರವಾಗಿ ಅವರಿಂದ ಸಾಧನವನ್ನು ಮಾಡಿಸಿ ಸುಖವನ್ನು ಕೊಟ್ಟು ಉದ್ಧರಿಸುವನು.

೫ ನೆಯ ಸಂಧಿಯ ವ್ಯಾಖ್ಯಾನವು ಮುಗಿದುದು.

---

## ಆರನೆಯ ಸಂಧಿ

### ಪಂಚಮಹಾ ಯಜ್ಞಸಂಧಿ.

ಜನನಿ ಪಿತ ಭೂವಾರಿದಾಂಬರ
ವೆನಿಪ ಪಂಚಾಗ್ನಿಯಲಿ ನಾರಾ
ಯಣನ ತ್ರಿಂಶತಿಮೂರ್ತಿಗಗಳ ವ್ಯಾಪಾರ ವ್ಯಾಪ್ತಿಗಳ ||
ನೆನೆದು ದಿವಸಗಳೆಂಬ ಸಮಿಧಿಗ
ಳನು ನಿರಂತರ ಹೋಮಿಸುತ ಪಾ
ವನಕೆ ಪಾವನನೆನಿಪ ಪರಮನಬೇಡು ಪರಮಸುಖ ||೧||

ಪದ್ಯಾರ್ಥ:—ಜನನಿ= ತಾಯಿ, ಪಿತ= ತಂದೆ, ಭೂ= ಭೂಮಿ, ವಾರಿದ= ಮೇಘ, ಅಂಬರ= ಆಕಾಶವು, ಯೆನಿಪ= ಯೆಂಬ, ಪಂಚಾಗ್ನಿಯಲಿ= ೫ ವಿಧ ಅಗ್ನಿಗಳಲ್ಲಿ, ನಾರಾಯಣನ, ತ್ರಿಂಶತಿಮೂರ್ತಿಗಳ= ೩೦ ಮೂರ್ತಿಗಳ, ವ್ಯಾಪಾರ= ಕ್ರಿಯೆಗಳನ್ನು, ವ್ಯಾಪ್ತಿಗಳ= ಶ್ರೀ ಪರಮಾತ್ಮನ ವ್ಯಾಪನೆಯನ್ನೂ, ನೆನೆದು= ಸ್ಮರಿಸಿ, ದಿವಸಗಳೆಂಬ, ಸಮಿಧಿಗಳನು= ಕಾಷ್ಠಗಳನ್ನು, ನಿರಂತರ= ನಿತ್ಯದಲ್ಲಿಯೂ, ಹೋಮಿಸುತ= ಹೋಮವನ್ನು ಮಾಡುತ್ತ, ಪಾವನಕೆಪಾವನನೆನಿಪ= ಪವಿತ್ರ ವಸ್ತುಗಳನ್ನು ಪವಿತ್ರವನ್ನಾಗಿ ಮಾಡುವವನೆಂದು

ಪ್ರಸಿದ್ಧನಾದ, ಪರಮನ=ಸರ್ವೋತ್ತಮನಾದ ಪರಮಾತ್ಮನನ್ನು, ಪರಮ ಸುಖ=ಮೋಕ್ಷಕ್ಕೋಸ್ಕರ, ಬೇಡು=ಪ್ರಾರ್ಥಿಸು.

ತಾತ್ಪರ್ಯ:—ಪೂರ್ವ ಸಂಧಿಯಲ್ಲಿ ಪರಮಾತ್ಮನು ಸುಲಭಸಾಧ್ಯನೆಂದು ತೋರಿಸುವುದಕ್ಕಾಗಿ ನಾವು ಸ್ನಾನಮಾಡುವುದು, ಉಂಬುವುದು, ಉಡುವುದೆಲ್ಲವೂ ಭಗವತ್ಪೂಜೆಯೆಂದು ಭಾವಿಸಿದರೆ ಸಾಕು; ಪರಮಾತ್ಮನು ಮೆಚ್ಚುವನು; ವನಕ್ಕೆ ಹೋಗಿ ತಪಸ್ಸುಮಾಡಿದರೇನೇ ಮುಕ್ತಿ ಆಗುವುದು, ಇಲ್ಲವಾದರೆ ಇಲ್ಲವೆಂದಲ್ಲ. ಎಂಬಿವೇ ಮೊದಲಾದ ಅರ್ಥವನ್ನು 'ವಿಭೂತಿ' ಸಂಧಿಯಲ್ಲಿ ನಿರೂಪಿಸಿದರು. ಈ ಸಂಧಿಯಲ್ಲಿ ಯಾಗಗಳನ್ನು ಮಾಡುವವರು ಅಗ್ನಿಯ ಮುಂದೆ ಕೂತು ಹೊಗೆಯಿಂದ ಕಣ್ಣು ಇಂಗಿಸಿಕೊಂಡು ಹೋಮಾದಿಗಳನ್ನು ಮಾಡುವುದೇ ಯಾಗವಲ್ಲ. ಅನುಸಂಧಾನಪೂರ್ವಕ ಭಗವಂತನ ವ್ಯಾಪ್ತಿಯನ್ನು ತಿಳಿದು ತಾಯಿ ತಂದೆ ಮೊದಲಾದವರ ಸೇವೆಯೇ ಯಾಗವೆಂದು ಪಂಚಮಹಾಯಜ್ಞ ಎಂಬ ಈ ಸಂಧಿಯಲ್ಲಿ ಯಾಗಲಕ್ಷಣವನ್ನು ನಿರೂಪಿಸಲಾರಂಭಿಸಿ ಪ್ರಥಮ ಪದ್ಯದಿಂದ, ಈ ಸಂಧಿಯಲ್ಲಿ ನಿರೂಪಿಸುವ ವಿಷಯಗಳ ಸಂಗ್ರಹವನ್ನು ಸೂಚಿಸುತ್ತಾರೆ. ಅದು ಹೇಗೆಂದರೆ:—ಅಗ್ನಿಯೆಂದರೆ ಬೆಂಕಿಯೆಂತಲೂ, ಸಮಿಧವೆಂದರೆ ಕಾಷ್ಠಗಳೆಂದೇ ಅರ್ಥವಲ್ಲ. ತಾಯಿ ೧ ಅಗ್ನಿ, ತಂದೆ ೧ ಅಗ್ನಿ, ಭೂಮಿ ೧ ಅಗ್ನಿ, ಮೇಘ ೧ ಅಗ್ನಿ, ಆಕಾಶ ೧ ಅಗ್ನಿ; ಹೀಗೆ ೫ ಅಗ್ನಿಗಳಲ್ಲಿ ನಾರಾಯಣನು ಅನಿರುದ್ಧಾದಿ ಪಂಚರೂಪಗಳಿಂದ ಇರುವನಲ್ಲದೆ, ತಾಯಿ ಮೊದಲಾದ ಒಂದೊಂದು ಅಗ್ನಿಯಲ್ಲಿಯೂ ಅನಿರುದ್ಧಾದಿ ೫ ರೂಪಗಳಿಂದ ವ್ಯಾಪ್ತನಾಗಿರುವನು. ಇದರ ವಿವರ ಹೀಗೆ:-ತಾಯಿ ಎಂಬ ಅಗ್ನಿಯಲ್ಲಿ ಅನಿರುದ್ಧರೂಪವಿರುವುದು. ಆ ಅನಿರುದ್ಧನೊಳಗೆ, ಅನಿರುದ್ಧ ಅನಿರುದ್ಧ, ಅನಿರುದ್ಧ ಪ್ರದ್ಯುಮ್ನ, ಅನಿರುದ್ಧ ಸಂಕರ್ಷಣ, ಅನಿರುದ್ಧ ವಾಸುದೇವ, ಅನಿರುದ್ಧ ನಾರಾಯಣ, ಹೀಗೆ ೧ ರೂಪದಲ್ಲಿ ೫ ರೂಪಗಳು. ಇದರಂತೆ ತಂದೆಯಲ್ಲಿ ಪ್ರದ್ಯುಮ್ನ, ಅವನಲ್ಲಿ ಪ್ರದ್ಯುಮ್ನ ಅನಿರುದ್ಧ ಮೊದಲಾದ ೫ ರೂಪಗಳು. ಅಂತು ಒಂದೊಂದು ಅಗ್ನಿಯಲ್ಲಿ ೬ ರೂಪಗಳಂತೆ ೫ ಅಗ್ನಿಗಳಲ್ಲಿ ೩೦ ರೂಪಗಳಿಂದ ಇರುವನು. ಅಥವಾ ತಾಯಿತಂದೆ ಮೊದಲಾದ ಐವರಲ್ಲಿ ೫ ರೂಪಗಳು. ಒಬ್ಬೊಬ್ಬರಲ್ಲಿ ಅನಿರುದ್ಧಾದಿ ೫ ರೂಪಗಳು. ಅಂತು ೩೦ ರೂಪಗಳಿಂದ ಇರುವನು. ಇವನ ವ್ಯಾಪಾರವೇನೆಂದರೆ, ತಾಯಿಯಲ್ಲಿದ್ದು ಹುಟ್ಟಿಸುವನು; ತಂದೆಯಲ್ಲಿದ್ದು ಬೀಜಭೂತನನ್ನಾಗಿ ಮಾಡು

ವನು. ಭೂಮಿ ಧಾನ್ಯವನ್ನು ಕೊಡುವುದು. ಮೇಘವು ನೀರನ್ನು ಕೊಡು ವುದು. ಆಕಾಶವು ಅವಕಾಶವನ್ನು ಕೊಡುವುದು. ಹೀಗೆ ೫ ಅಗ್ನಿಗಳಲ್ಲಿ ಒಟ್ಟು ೩೦ ರೂಪಗಳಿಂದ ಮಾಡುವ ವ್ಯಾಪಾರಗಳನ್ನೂ ಈ ಅಗ್ನಿಗಳಲ್ಲಿ ವ್ಯಾಪ್ತಿಯನ್ನೂ ಸ್ಮರಿಸಿ, ದಿವಸಗಳೆಂಬುವದೇ ಕಟ್ಟಿಗೆಗಳು. ಈ ರೀತಿ ಯಾಗಿ ಪೂಜಾರೂಪವಾದ ಹೋಮಗಳನ್ನು ಮಾಡುತ್ತಾ, ಪಾವನಕ್ಕೆ ಪಾವ ನತ್ವವನ್ನು ಉಂಟುಮಾಡುವ ಪರಮಾತ್ಮನನ್ನು ಪ್ರಾರ್ಥಿಸಲು ಪರಮಸುಖ ಕರವಾದ ಮುಕ್ತಿಯನ್ನು ಕೊಡುವನು.

ಗಗನಪಾವಕ ಸಮಿಧಿ ರವಿರ
ಶ್ಮಿಗಳೆ ಧೂಮವು ವರ್ಚಿಯನಿಪುದೆ
ಹಗಲು ನಕ್ಷತ್ರಗಳೆ ಕಿಡಿಗಳು ಚಂದ್ರಮಾಂಗಾರ ||
ಮೃಗವರೋದರನೊಳಗೆ ಐರೂ
ಪಗಳ ಚಿಂತಿಸಿ ಭಕ್ತಿರಸ ಮಾ
ತುಗಳೆ ಮಂತ್ರವುಮಾಡಿ ಹೋಮಿಸುವರು ವಿಪಶ್ಚಿತರೂ || ೨ ||

ಪದ್ಯಾರ್ಥ :—ಗಗನ= ಆಕಾಶವು, ಪಾವಕ= ಅಗ್ನಿಯು ; ಸಮಿಧಿ= ಕಾಷ್ಠವು, ರವಿ= ಸೂರ್ಯನು ; ರಶ್ಮಿಗಳೇ= ಸೂರ್ಯನ ಕಿರಣಗಳೇ, ಧೂಮವು= ಹೊಗೆಯು ; ಅರ್ಚಿಯೆನಿಪುದೆ= ಜ್ವಾಲೆಯೆನ್ನುವುದೇ, ಹಗಲು, ನಕ್ಷತ್ರಗಳೆ ಕಿಡಿಗಳು ; ಚಂದ್ರಮಾ= ಚಂದ್ರನು, ಅಂಗಾರ= ಬೆಂಕಿಯು, ಮೃಗವರೋ ದರನೊಳಗೆ= ಚಂದ್ರನೊಳಗೆ, ಐರೂಪಗಳ ಚಿಂತಿಸಿ= ನಾರಾಯಣ ಇತ್ಯಾದಿ ೫ ರೂಪಗಳನ್ನು ಚಿಂತಿಸಿ, ಭಕ್ತಿರಸಮಾತುಗಳೆ= ಭಕ್ತಿರಸಗಳಿಂದ ಕೂಡಿದ ಮಾತುಗಳನ್ನೇ, ಮಂತ್ರವುಮಾಡಿ= ಮಂತ್ರವನ್ನಾಗಿ ಮಾಡಿಕೊಂಡು, ವಿಪಶ್ಚಿತರು= ಜ್ಞಾನಿಗಳು, ಹೋಮಿಸುವರು = ಹೋಮಮಾಡುವರು.

ತಾತ್ಪರ್ಯ :—ಮೇಲಿನ ಪದ್ಯದಲ್ಲಿ, ತಾಯಿ ತಂದೆ ಮೊದಲಾದ ಪಂಚಾಗ್ನಿಗಳಲ್ಲಿ ಅನಿರುದ್ಧಾದಿ ರೂಪಗಳನ್ನೂ, ಒಂದೊಂದರೊಳಗೆ ಮತ್ತೂ ಐದು ರೂಪವನ್ನೂ ಒಟ್ಟು ೩೦ ರೂಪಗಳನ್ನು ಚಿಂತಿಸಬೇಕೆಂದು ಹೇಳಿದರು. ಈಗ ಪಂಚಾಗ್ನಿಗಳನ್ನು ವ್ಯುತ್ಕ್ರಮವಾಗಿ ಆಕಾಶ ಮೊದಲುಮಾಡಿ ಅವು ಗಳಲ್ಲಿ ೩೦ ರೂಪಗಳ ವಿವರಗಳನ್ನು ೫ ಪದ್ಯಗಳಿಂದ ಹೇಳುತ್ತಾರೆ :—

ಛಾಂದೋಗ್ಯೋಪನಿಷತ್ತು ೫ ನೆಯ ಅಧ್ಯಾಯದಲ್ಲಿ “ ಅಸೌವಾವ ಲೋಕೋ ಗೌತಮಾಗ್ನಿಸ್ತಸ್ಯಾದಿತ್ಯ ಏವ ಸಮಿದ್ರಶ್ಮಯೋ ಧೂಮೋಹರ

ರ್ಚಿಶ್ಚಂಪ್ರಮಾ ಅಂಗಾರಾ ನಕ್ಷತ್ರಾಣಿ ವಿಷ್ಫುಲಿಂಗಾಸ್ತಸ್ಮಿನ್ನೇ ತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ ತಸ್ಯಾ ಆಹುತೇಃ ಸೋಮೋ ರಾಜಾ ಸಂಭವತಿ'' ಎಂದು ಹೇಳಿರುವರು. ಇದೇ ಅರ್ಥವನ್ನೇ ದಾಸರಾಯರು ಈ ಪದ್ಯದಲ್ಲಿ ಹೇಳಿರುವುದರಿಂದ ಉಪನಿಷದ್ವಾಕ್ಯಗಳಿಗೆ ಪ್ರತ್ಯೇಕ ಅರ್ಥ ಬರಿಯಲಿಲ್ಲ. ಗಗನ ಅಂದರೆ ಆಕಾಶವು, ಪಾವಕ=ಅಗ್ನಿ; ಸೂರ್ಯನು ಕಾಷ್ಠ, ಸೂರ್ಯನ ಕಿರಣಗಳು ಧೂಮ, ಹಗಲು ಜ್ವಾಲೆಯು, ನಕ್ಷತ್ರಗಳು ಕಿಡಿಗಳು, ಚಂದ್ರನು ಕೆಂಡ, ಚಂದ್ರನೊಳಗೆ ಅಂದರೆ, ಚಂದ್ರಾದಿ ಐವರೊಳಗೆ ಅನಿರುದ್ಧಾದಿ ೫ ರೂಪಗಳನ್ನು ಚಿಂತಿಸಿ, ಭಕ್ತಿರಸಪೂರ್ಣವಾದ ಮಾತುಗಳೆಂಬ ಹೋಮದ್ರವ್ಯಗಳನ್ನು ಜ್ಞಾನಿಗಳು ಹೋಮಮಾಡುವರು. ಅಗ್ನಿ, ಕಾಷ್ಠ, ಧೂಮ, ಜ್ವಾಲೆ, ಕಿಡಿ, ಕೆಂಡಗಳೆಂಬ ಆರರಲ್ಲಿಯೂ ತಚ್ಛಬ್ಧವಾಚ್ಯನಾಗಿಯೂ, ಆಕಾಶದಲ್ಲಿ ನಾರಾಯಣ, ಸೂರ್ಯನಲ್ಲಿ ನಾರಾಯಣ ನಾರಾಯಣ, ಕಿರಣಗಳಲ್ಲಿ ನಾರಾಯಣ ವಾಸುದೇವ, ಹಗಲುಗಳಲ್ಲಿ ನಾರಾಯಣ ಸಂಕರ್ಷಣ, ನಕ್ಷತ್ರಗಳಲ್ಲಿ ನಾರಾಯಣ ಪ್ರದ್ಯುಮ್ನ, ಚಂದ್ರನಲ್ಲಿ ನಾರಾಯಣಾನಿರುದ್ಧ, ಹೀಗೆ ಅಖಂಡವಾದ ಆಕಾಶಾಗ್ನಿಯಲ್ಲಿ ನಾರಾಯಣರೂಪವನ್ನೂ, ಉಳಿದ ಕಾಷ್ಠಾದಿಗಳಲ್ಲಿ ನಾರಾಯಣಾದಿ ೫ ರೂಪಗಳನ್ನೂ ಅಂತು ೬ ರೂಪಗಳನ್ನು ಚಿಂತಿಸಬೇಕು. ಛಾಂದೋಗ್ಯೋಪನಿಷತ್ತಿನ ಮೇಲಿನ ವಾಕ್ಯಗಳ ಭಾಷ್ಯದಲ್ಲಿ "ನಾರಾಯಣಾದಯಃ ಪಂಚಕ್ರಮಾತ್ಪಂಚಾಗ್ನಯಃಸ್ಮೃತಾಃ ॥ ಅದನಾದಂದ ನೇತೃತ್ವಾನಿತರಾಮಚಲತ್ವತಃ ॥ ಸಮೇಧನಾತ್ಸಮಿದ್ವಿಷ್ಣುರ್ದ್ಧೂಕ್ತಾರಾದ್ಧೂಮ ಉಚ್ಯತೆ ॥ ಅರಂಚಿದಾದರ್ಚಿಶ್ಚಸೋಂಗಾರೋಂಗರತೇರಪಿ ॥ ವಿವಿಧಂ ಸ್ಫುರಣಾಚ್ಚೈವ ವಿಷ್ಫುಲಿಂಗ ಇತೀರಿತಃ॥ ಪುನರ್ನಾರಾಯಣಾದ್ಯಾತ್ಮಾ ಪ್ರತ್ಯೇಕಂ ಪಂಚರೂಪವಾನ್॥ ಆದಿತ್ಯಃ ಸತಥಾದಾನಾದ್ರಶ್ಮೀರತಿ ಶರೂಪತಃ ॥ ತಮುಸಾಹನ ನೀಯತ್ವಾದಹಶ್ಚಂದ್ರಃ ಪರಂ ಸುಖಂ ಅನನ್ಯರಾಜೋ ನಕ್ಷತ್ರಂ'' ಇದರ ಅರ್ಥ :—

ಆಕಾಶ, ಮೇಘ, ಭೂಮಿ, ತಂದೆ (ಪುರುಷ) ತಾಯಿ (ಸ್ತ್ರೀ) ಈ ಪಂಚಾಗ್ನಿಗಳಲ್ಲಿ, ನಾರಾಯಣಾದಿ ೫ ರೂಪಗಳನ್ನು ಅಂದರೆ ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧಗಳೆಂಬ ಪಂಚರೂಪಗಳನ್ನು ಚಿಂತಿಸಬೇಕು. ಮತ್ತು ಅಗ್ನ್ಯಾದಿ ಹೆಸರು ಪರಮಾತ್ಮನದೆಂದು ತಿಳಿಯಬೇಕು. ಹೇಗೆಂದರೆ, ಆ-ಕಾ-ಶ ಶಬ್ದದಿಂದ ಚೆನ್ನಾಗಿ ಪ್ರಕಾಶಮಾನನಾಗಿ

ಇರುವುದರಿಂದ ಆಕಾಶನೆಂದು ನಾರಾಯಣನಿಗೆ ಹೆಸರು. ಅದೇ ನಾರಾಯಣನು ಅಗ್ನಿನಾಮಕನು "ಅತ್ತೀತ್ಯಗ್ನಿಃ" ಪ್ರಪಂಚವನ್ನೆಲ್ಲಾ ಭಕ್ಷಿಸುವುದರಿಂದ, ಅಂದರೆ ತನ್ನ ಉದರದಲ್ಲಿ ಪ್ರಳಯದಲ್ಲಿ ಇಟ್ಟುಕೊಂಡಿರುವುದರಿಂದಲೂ, ಸರ್ವಕಾಲದಲ್ಲಿ ಪರಮಾತ್ಮನ ಉದರದಲ್ಲಿ ಜಗತ್ತು ಇದ್ದೇ ಇರುವುದರಿಂದ ಜಗತ್ತನ್ನು ಭಕ್ಷಿಸುವನೆಂದು ವ್ಯವಹಾರ, ಅಥವಾ ಅಗ್ನಿರೂಪದಿಂದ ಸರ್ವಭಕ್ಷಕನಾದುದರಿಂದಲೂ ಅಗ್ನಿ ಎಂದು ನಾರಾಯಣನಿಗೆ ಹೆಸರು. 'ತಸ್ಯಾದಿತ್ಯ ಏವಸಮಿತ್' ಈ ಆಕಾಶಾಗ್ನಿಗೆ ಆದಿತ್ಯನೇ ಸಮಿತ್ ಅಂದರೆ ಕಾಷ್ಠವೆಂದು ಹೇಳಿರುವರು. ಇದರ ಖಂಡಾರ್ಥದಲ್ಲಿ 'ಆದಿತ್ಯಃ ಆದತ್ತ ಇತ್ಯಾದಿತ್ಯನಾಮಾ ಆದಿತ್ಯಸ್ಥೋ ನಾರಾಯಣ ನಾರಾಯಣಾತ್ಮಾ' || ಸಕಲ ಜನರು ಮಾಡುವ ಪೂಜಾದಿಗಳನ್ನು ಸ್ವೀಕರಿಸುವನು ; ಅಥವಾ, ಭೂಮಿಯಲ್ಲಿರುವ ಉದಕಗಳನ್ನೆಲ್ಲಾ ತೆಗೆದುಕೊಳ್ಳುವುದರಿಂದ ಆದಿತ್ಯನೆಂದು ಹೆಸರು. ಇಂತಹ ಆದಿತ್ಯನಾಮಕ ಪರಮಾತ್ಮನು ನಾರಾಯಣ ನಾರಾಯಣ ಸ್ವರೂಪನೆಂದು ತಿಳಿಯಬೇಕು. ಸಮಿಧವೆಂದರೂ ಪರಮಾತ್ಮನೇ ' ಸಮೇಧನಾತ್ಸಮಿದಿತ್ಯುಚ್ಯತೆ' ಎಲ್ಲರನ್ನು ವೃದ್ಧಿಗೊಳಿಸುವುದರಿಂದ ಸಮಿತ್ ಎಂದು ಪರಮಾತ್ಮನಿಗೆ ಹೆಸರು. ' ರಶ್ಮಯೋಧೂಮಃ ' ರಶ್ಮಿಗಳೆಂದರೆ ಕಿರಣಗಳು, ಧೂಮವೆಂದರ್ಥ 'ರತಿಶಂರೂಪತ್ವೇನ ರಶ್ಮಿನಾಮಾ ; ರಶ್ಮಿಗತೋ ನಾರಾಯಣೋ ವಾಸುದೇವಾತ್ಮಾ ದೂತ್ಕರೋತಿನಿರಾಕರೋತೀತ್ಯಜ್ಞಾನಾದೀನಿತಿ ಧೂಮನಾಮೋಚ್ಯತೆ ' ರತಿ ಸುಖರೂಪನಾದುದರಿಂದ ರಶ್ಮಿಯೆಂದು ಪರಮಾತ್ಮನಿಗೆ ಹೆಸರು. ಈ ರಶ್ಮಿಗತರೂಪ ನಾರಾಯಣ ವಾಸುದೇವ ಸ್ವರೂಪವೆಂದು ತಿಳಿಯಬೇಕು, ಅಜ್ಞಾನಾದಿಗಳನ್ನು ನಿರಾಕರಿಸುವುದರಿಂದ ಧೂಮನೆಂದು ಪರಮಾತ್ಮನಿಗೆ ಹೆಸರು. 'ಅಹರರ್ಚಿಃ' ಹಗಲು, ಜ್ವಾಲೆಯೆಂದರು ಇದರರ್ಥ, ತಮಸಾ ಅಹನನೀಯತ್ವಾದಹರ್ನಾಮ ಗತೋನಾರಾಯಣ ಸಂಕರ್ಷಣಾತ್ಮಾ' ಅರ್ಚಿಃ ಅರಂಚಿತತ್ವೇನಾರ್ಚಿರಿತ್ಯುಚ್ಯತೆ' ಕತ್ತಲಿನಿಂದ ಹಾನಿಯು ಆಗದಿರುವುದರಿಂದ ಪರಮಾತ್ಮನಿಗೆ ' ಅಹಃ ' ಅಂದರೆ ಹಗಲು ಎಂದು ಹೆಸರು. ಈ ಅರ್ಹಗತ ರೂಪವು ನಾರಾಯಣ ಸಂಕರ್ಷಣ ರೂಪವೆಂದು ತಿಳಿಯಬೇಕು. ವಿಕಾರ ಹೊಂದದೆ ಯಾವಾಗಲೂ ಒಂದೇರೀತಿ ಪ್ರಕಾಶಮಾನನಾಗಿ ಇರುವುದರಿಂದ ಅರ್ಚಿಯೆಂದು ಪರಮಾತ್ಮನಿಗೆ ಹೆಸರು. " ಚಂದ್ರಮಾಂ ಅಂಗಾರಾಃ " ಚಂದ್ರನು ಕೆಂಡಯೆಂಬದರ ಅರ್ಥ. " ಸುಖರೂಪತ್ವಾಚ್ಚಂದ್ರನಾಮಾ

ಚಂದ್ರಗತಃ ನಾರಾಯಣ ಪ್ರದ್ಯುಮ್ನಾತ್ಮಾ || ಅಂಗಾರಾಃ=ಅಂಗೇಷು ರಮಣ ಹೇತುತ್ವಾದಂಗಾರಾ ಇತ್ಯುಕ್ತಃ' ಸುಖಸ್ವರೂಪನಾದುದರಿಂದ ಚಂದ್ರನೆಂದು ಪರಮಾತ್ಮನಿಗೆ ಹೆಸರು. ಚಂದ್ರಗತ ರೂಪವು ನಾರಾಯಣ ಪ್ರದ್ಯುಮ್ನ ಸ್ವರೂಪವು. ಕೆಂಡಕ್ಕೆ ಅಂಗಾರವೆಂದು ಸಂಸ್ಕೃತ. ಅಂಗಾರವೆಂದರೆ ಅಂಗ ಗಳಲ್ಲಿ (ಶರೀರಗಳಲ್ಲಿ) ರಮಿಸುವುದರಿಂದ ಅಂಗಾರನೆಂದು ಪರಮಾತ್ಮನಿಗೆ ಹೆಸರು. 'ನಕ್ಷತ್ರಾಣಿ ವಿಸ್ಫುಲಿಂಗಾಃ' ನಕ್ಷತ್ರಗಳು ಕಿಡಿಗಳು ಎಂದು ಹೇಳಿ ರುವರು. ಇದರರ್ಥ :—'ಅನನ್ಯ ರಾಜತ್ವೇನ ನಕ್ಷತ್ರನಾಮಾ ; ನಕ್ಷತ್ರಗತಃ ನಾರಾಯಣಾನಿರುದ್ಧಾತ್ಮಾ, ಮತ್ಸ್ಯಾದಿ ರೂಪೇಣ ವಿವಿಧಂ ಸ್ಫುರಣಾದ್ವಿಸ್ಫು ಲಿಂಗಾ ಇತ್ಯುಕ್ತಃ' ಇವನಿಕಿಂತಲೂ ಮತ್ತೊಬ್ಬ ರಾಜನಿಲ್ಲದುದರಿಂದ ನಕ್ಷತ್ರ ನೆಂದು ಹೆಸರು. ನಕ್ಷತ್ರಗತ ರೂಪವು ನಾರಾಯಣ ಅನಿರುದ್ಧ ರೂಪವು. ಮತ್ಸ್ಯಾದಿ ರೂಪಗಳಿಂದ ನಾನಾಪ್ರಕಾರ ಸ್ಫುರಣವೆಂದರೆ ಸಾಮಾನ್ಯವಾಗಿ ಮೀನನ್ನು ನೀರಿನಿಂದ ತೆಗೆದು ಮೇಲೆಹಾಕಿದರೆ ಹಾರಿಬೀಳುವುದುಂಟು. ಅದಕ್ಕೆ ಸ್ಫುರಣವೆಂದು ಹೆಸರು. ಪರಮಾತ್ಮನು ಮತ್ಸ್ಯಾದಿ ರೂಪಗಳಿಂದ ವಿಶೇಷವಾಗಿ ಚಲಿಸಿದುದರಿಂದ ವಿಸ್ಫುಲಿಂಗನೆಂದು ಹೆಸರು. ಇಂತಹ ಆಕಾಶನಾಮಕ ನಾರಾಯಣಾಗ್ನಿಯಲ್ಲಿ ನಾರಾಯಣ ನಾರಾಯಣಾದಿ ೫ ರೂಪಗಳಿಂದ ಪ್ರತ್ಯೇಕ ಕೂಡಿದ ೬ ರೂಪವುಳ್ಳ ಅಗ್ನಿಯಲ್ಲಿ ಯಾವ ಜನರು ಭಕ್ತಿಯಿಂದ ಪರಮಾತ್ಮನನ್ನು ಸ್ತುತಿಸುವರೋ ಅಂತಹವರನ್ನು ದೇವತೆಗಳು ಷಡ್ರೂಪವುಳ್ಳ ನಾರಾಯಣಾಗ್ನಿಯಲ್ಲಿ ಆಹುತಿ ಕೊಡುವರು ಆ ಆಹುತಿ ರೂಪವಾದ ಸಜ್ಜನರು ಸೋಮರಾಜನನ್ನು ಅಂದರೆ ಚಂದ್ರನನ್ನು ಸೇರುವರು.

ಪಾವಕನು ಪರ್ಜನ್ಯ ಸಮಿಧಿಯು
ಪ್ರಾವಹೀಪತಿ ಧೂಮಗಳೆ ಮೇ
ಘಾವಳಿಗಳರ್ಚಿಕ್ಷಣ ಪ್ರಭೆ ಗರ್ಜನವೆ ಕಿಡಿಯು ||
ಭಾವಿಸುವದಂಗಾರ ಶಿಡಿಲಿಂ
ದೀವಿಧಾಗ್ನಿಯೊಳಬ್ಧಿ ಜಾತನ
ಕೋವಿದರು ಹೋಮಿಸುವರನುದಿನ ಪರಮಭಕುತಿಯಲಿ || ೩ ||

ಪದ್ಯಾರ್ಥ :—ಪಾವಕನು=ಅಗ್ನಿಯು, ಪರ್ಜನ್ಯ=ಮೇಘಾಭಿಮಾ ನಿಯು, ಸಮಿಧಿಯು=ಕಾಷ್ಠವು, ಪ್ರಾವಹೀಪತಿ = ಪ್ರಾವಹೀಪತಿಯಾದ ವಾಯು, ಧೂಮಗಳೆ=ಹೊಗೆಗಳು, ಮೇಘಪಂಜ್ತಿಗಳು, ಅರ್ಚಿ=ಜ್ವಾಲೆ

ಯು, ಕ್ಷಣಪ್ರಭೆ=ಮಿಂಚು, ಗರ್ಜನವೆ=ಮೇಘಗರ್ಜನೆಯು, ಕಿಡಿಯು, ಸಿಡಿಲು, ಅಂಗಾರ=ಕೆಂಡವೆಂದು ಭಾವಿಸುವುದು. ಈ ವಿಧಾಗ್ನಿಯೊಳಗೆ, ಅಬ್ಧಿಜಾತನ=ಚಂದ್ರನನ್ನು ಹೊಂದಿದ ಜೀವನನ್ನು, ಕೋವಿದರು=ಜ್ಞಾನಿಗಳು (ದೇವತೆಗಳು) ಅನುದಿನ=ಪ್ರತಿದಿವಸದಲ್ಲಿಯೂ, ಪರಮಭಕ್ತಿಯಲಿ, ಹೋಮಿಸುವರು

ತಾತ್ಪರ್ಯ :—ಮೇಘಾಗ್ನಿಯಲ್ಲಿ ಹೋಮಕ್ರಮವನ್ನೂ ಅಲ್ಲಿನ ಭಗವದ್ರೂಪಗಳು ಆರನ್ನು ಹೇಳುತ್ತಾರೆ :—

ಛಾಂದೋಗ್ಯೋಪನಿಷದ್ವಾಕ್ಯ :—'ಪರ್ಜನ್ಯೋವಾವ ಗೌತಮಾಗ್ನಿಸ್ತಸ್ಯ ವಾಯುರೇವ ಸಮಿದಭ್ರಂಧೂಮೋ ವಿದ್ಯುದರ್ಚಿರ ಶನಿರಂಗಾರಾ ಹ್ರಾದುನಯೋ ವಿಸ್ಫುಲಿಂಗಾಃ ‖ ತಸ್ಮಿನ್ನೇ ತಸ್ಮಿನ್ನಗ್ನೌ ದೇವಾಸ್ಸೋಮಜ್ ರಾಜಾನಂ ಜಹ್ವತಿ ತಸ್ಯಾ ಆಹುತೇರ್ವರ್ಷಃ ಸಂಭವತಿ' ಇದರರ್ಥ :— ಎಲೈ ಗೌತಮ ! ವಾವೇತ್ಯವಧಾರಣೆ ಎಂಬ ನ್ಯಾಯದಿಂದ 'ಪರ್ಜನ್ಯ ಏವ' ಅಂದರೆ ಮೇಘಚಕ್ರವೇ ಅಗ್ನಿಯಂದರ್ಥ. 'ಪರ್ಜನ್ಯಃ ಪರಮಸ್ಯಜನ್ಯ ಮಸ್ತೀತಿ ಪರ್ಜನ್ಯಃ' ಜನನವಾಗುವ ಪದಾರ್ಥಕ್ಕೆ ಜನ್ಯವೆಂದು ಹೆಸರು. ಪರಮನ ಸೇವಾರ್ಥ ಹುಟ್ಟುವ ಪದಾರ್ಥಗಳುಳ್ಳವನಿಗೆ ಪರ್ಜನ್ಯನೆಂದು (ಪರಮಾತ್ಮನೆಂದು) ಹೆಸರು. ಈ ಪರ್ಜನ್ಯಗತ ರೂಪವು ವಾಸುದೇವನು. ಇಂತಹ ವಾಸುದೇವನು ಅಗ್ನಿಸ್ಥಾನೀಯನು. ಅಗ್ನಿ ಮೊದಲಾದ ಶಬ್ದಗಳಿಗೆ ಅರ್ಥವನ್ನು ಮೇಲಿನ ಪದ್ಯದಲ್ಲಿ ಬರೆದಿರುತ್ತೆ. ಇಂತಹ ಪರ್ಜನ್ಯಗತ ವಾಸುದೇವಾಗ್ನಿಗೆ 'ವಾಯುರೇವ ಸಮಿತ್' ವಾಯುವೇ ಕಾಷ್ಠವು. ಜ್ಞಾನರೂಪಿಯಾದುದರಿಂದಲೂ, ವಾಯು ಎಂದು ಹೆಸರು. ವಾಯುಗತ ಭಗವದ್ರೂಪವು ವಾಸುದೇವ ನಾರಾಯಣ ಸ್ವರೂಪವು. 'ಅಭ್ರಂಧೂಮಃ' ಮೇಘಪಂಜ್ತಗಳೇ ಧೂಮವು. 'ಅಪಾಂಭರಣಾದಭ್ರನಾಮಾಃಭ್ರಗತೋ ವಾಸುದೇವ ವಾಸುದೇವಾತ್ಮಾ ಧೂಮಃ' ಉದಕಗಳನ್ನು ತುಂಬಿಕೊಂಡು ರಕ್ಷಣಮಾಡುವುದರಿಂದ ಅಭ್ರನೆಂದು ಮೇಘಪಂಜ್ತಗತ ಪರಮಾತ್ಮನಿಗೆ ಹೆಸರು. ಅಭ್ರಗತ ಭಗವದ್ರೂಪವು ವಾಸುದೇವ ವಾಸುದೇವ ರೂಪವು. ಇದೇ ಹೊಗೆಯು ಪೂರ್ವೋಕ್ತಪ್ರಕಾರ ಧೂಮಶಬ್ದವಾಚ್ಯನಾದ ಪರಮಾತ್ಮನೆಂದರ್ಥ.

'ವಿದ್ಯುದರ್ಚಿಃ' ವಿದ್ಯೋತನಾದ್ವಿದ್ಯುನ್ನಾಮಾ ವಿದ್ಯುದ್ಗತಃ ವಾಸು ದೇವಸಂಕರ್ಷಣನಾಮ್ನಾರ್ಚಿಃ' ವಿಶೇಷವಾದ ಕಾಂತಿಯುಳ್ಳವನಾದುದರಿಂದ ವಿದ್ಯುತ್ (ಮಿಂಚು) ಎಂದು ಪರಮಾತ್ಮನಿಗೆ ಹೆಸರು. ವಿದ್ಯುದ್ಗತ ಭಗವ ದ್ರೂಪವಾದ ವಾಸುದೇವ ಸಂಕರ್ಷಣ ಸ್ವರೂಪವೇ ಅರ್ಚಿ ಅಂದರೆ ಜ್ವಾಲೆ ಯು. ಅಶನಿರಂಗಾಃ ಶಿಡಿಲೇ ಕೆಂಡವು. ಅಶನಿಃ 'ಅಶನಾದ ಶನಿನಾಮ್ನಾಶನ ಗತೋ ವಾಸುದೇವ ಪ್ರದ್ಯುಮ್ನಾತ್ಮಾ ಅಂಗಾರಾಃ' ಅನ್ನಭೂತನಾದುದ ರಿಂದ ಅಶನಿನಾಮಕನು. ಅಶನಿಗತ ಭಗವದ್ರೂಪವಾದ ವಾಸುದೇವ ಪ್ರದ್ಯು ಮ್ನನೇ ಕೆಂಡಗಳು. 'ಹ್ರಾದುನಯೋ ವಿಸ್ಫುಲಿಂಗಾಃ' ಮೇಘಗರ್ಜನವೇ ಕಿಡಿಗಳು. 'ನಿರ್ಹಾದನಾತ್ ಹ್ರಾದುನಿನಾಮಾಹ್ರಾದುನಿ ಶಬ್ದಿತಮೇಘನಾದ ಗತೋ ವಾಸುದೇವಾನಿರುದ್ಧಾತ್ಮಾ ವಿಸ್ಫುಲಿಂಗಾಃ' ಭಯಂಕರವಾದ ಶಬ್ದಮಾಡುವುದರಿಂದ ಮೇಘಧ್ವನಿಗೆ ಹ್ರಾದುನಿಯೆಂದು ಹೆಸರು. ತದ್ಗತ ವಾಸುದೇವಾನಿರುದ್ಧ ರೂಪವೇ ಕಿಡಿಗಳು. ಹೀಗೆ ವಾಯು ಮೊದಲಾದವ ರಲ್ಲಿ ನಾರಾಯಣಾದಿ ೫ ರೂಪಗಳಿಂದ ಇರುವ ಪರ್ಜನ್ಯಾಗ್ನಿಗತ ವಾಸು ದೇವರಲ್ಲಿ ಪೂರ್ವಪದ್ಯದಲ್ಲಿ ಹೇಳಿದ ಆಕಾಶಗತ ನಾರಾಯಣನಲ್ಲಿ ಹೋಮ ಮಾಡಿ ಸೋಮರಾಜನನ್ನು ಹೊಂದಿದ ಸೋಮ (ಚಂದ್ರ) ನೆಂಬ ಹೆಸರುಳ್ಳ ಜೀವನನ್ನು ದೇವತೆಗಳು ಆಹುತಿಕೊಡುವರು. ಆ ಆಹುತಿಯ ವಶದಿಂದ ಮೇಘಚಕ್ರ ಸ್ಥಾನದಿಂದ ಮಳೆ ಬಿಂದುಗಳಲ್ಲಿ ಶೇರಿಸುವರು, ಎಂದು ಉಪ ನಿಷದ್ವಾಕ್ಯದ ಅರ್ಥ. ಇದೇ ಅರ್ಥವನ್ನೇ ದಾಸರಾಯರು ಹೇಳಿರುವುದರಿಂದ ಪದ್ಯದ ತಾತ್ಪರ್ಯವನ್ನು ಬೇರೆಯಾಗಿ ಬರೆಯಲಿಲ್ಲ. ಆದರೆ ಉಪನಿಷತ್ತಿ ನಲ್ಲಿ ಹೇಳಿದ ಪಂಚಮಹಾಯಜ್ಞ ಪ್ರಕರಣಕ್ಕೂ ದಾಸರಾಯರು ಹೇಳಿರುವ ಸಂದರ್ಭಗಳಿಗೂ ಪ್ರಕರಣಭೇದದಿಂದ ಭಿನ್ನಾಭಿಪ್ರಾಯವು ಬರುವುದು. ಉಪನಿಷತ್ತಿನಲ್ಲಿ ಪ್ರವಹನೆಂಬ ರಾಜನು ಗೌತಮರನ್ನು ಕುರಿತು ಕೇಳಿದುದು. ಜೀವನು ಭೂಮಿಯಲ್ಲಿ ಯೋಗ್ಯನಾಗಿ, ಭಗವದ್ಭಕ್ತನಾಗಿ ಹುಟ್ಟುವ ಪ್ರಕಾರ ಹೇಗೆಂಬ ಪ್ರವಹನೆಂಬ ರಾಜನ ಪ್ರಶ್ನೆಗೆ ಗೌತಮರು ಉತ್ತರವನ್ನು ಹೇಳಿರು ವರು. ಶ್ರದ್ಧೆಯಿಂದ ಯಾಗಾದಿಗಳನ್ನು ಮಾಡಿರುವ ಜೀವನಿಗೆ ಶ್ರದ್ಧಾ ಎಂದು ಹೆಸರು. ಅಂತಹ ಶ್ರದ್ಧಾನಾಮಕ ಜೀವನನ್ನು ಆಕಾಶಾಗ್ನಿಯಲ್ಲಿ ದೇವತೆಗಳು ಹೋಮಮಾಡುವರು. ಆ ಜೀವನು ಚಂದ್ರನನ್ನು ಹೊಂದು ವನು. ಆ ಚಂದ್ರಗತ ಜೀವನನ್ನು ಮೇಘಾಗ್ನಿಯಲ್ಲಿ ಹೋಮಮಾಡುವರು.

ಆ ಜೀವನು ವೃಷ್ಟಿಗತನಾಗುವನು. ಆ ವೃಷ್ಟಿಗತ ಜೀವನನ್ನು ಪೃಥಿವೀ ಅಗ್ನಿಯಲ್ಲಿ ಹೋಮಮಾಡುವರು. ಅವನು ಅನ್ನವಾಗುವನು. ಅನ್ನರೂಪ ಜೀವನನ್ನು ಪುರುಷಾಗ್ನಿಯಲ್ಲಿ ಹೋಮಿಸುವರು. ಅವನು ರೇತಸ್ಸಾಗುವನು. ಆ ರೇತೋರೂಪ ಜೀವನನ್ನು ಸ್ತ್ರೀ ನಾಮಾಗ್ನಿಯಲ್ಲಿ ಹೋಮಮಾಡುವರು. ಅವನು ಭೂಮಿಯಲ್ಲಿ ಹುಟ್ಟುವನು. ಈ ಪಂಚಾಹುತಿ ವಿದ್ಯೆಯನ್ನು ಯಾರು ತಿಳಿಯುತ್ತಾರೆಯೋ ಅವರು ಬ್ರಹ್ಮನನ್ನು ಹೊಂದುವರೆಂದು ಹೇಳಿರುವರು.

ಇಲ್ಲಿ ದಾಸರಾಯರು ಪಂಚಮಹಾಯಜ್ಞ ಪ್ರಕರಣವಾಗಿ ಹೇಳಿದುದರಿಂದ ಹೀಗೆ ಆಕಾಶಾದಿ ಅಗ್ನಿಯಲ್ಲಿ ೩೦ ಭಗವದ್ರೂಪಗಳನ್ನೂ ಆಯಾಸ್ಥಾನಗತ ಭಗವದ್ರೂಪಗಳನ್ನೂ ಚಿಂತಿಸುವುದೇ ಮುಕ್ತಿಸಾಧನವೆಂದು ಹೇಳಿರುವರು. ಈ ಪ್ರಕರಣ ಭೇದದಿಂದ ಕೊನೆಗೆ ಫಲಿತಾಂಶದಲ್ಲಿ ಉಪನಿಷದ್ವಾಕ್ಯಕ್ಕೂ, ದಾಸರಾಯರ ವಾಕ್ಯಕ್ಕೂ ವ್ಯತ್ಯಾಸ ಕಾಣುವುದೆಂದು ತಾತ್ಪರ್ಯ. ಪ್ರಕೃತ ಈ ಪದ್ಯದಲ್ಲಿ ದಾಸರಾಯರು 'ಅಬ್ಧಿಜಾತನ ಹೋಮಿಸುವರು' ಎಂಬ ಪದದಿಂದ ಚಂದ್ರನೇ ಹೋಮದ್ರವ್ಯನೆಂದು ವಾಯ್ವಾದಿ ಕಾಷ್ಠಾದಿಗಳಿಂದ ಕೂಡಿದ ಪರ್ಜನ್ಯಾಗ್ನಿಯಲ್ಲಿ ಚಂದ್ರನನ್ನೇ ಆಹುತಿಕೊಡುವರೆಂದು ಹೇಳಿರುವರು. ಉಪನಿಷದ್ಭಾಷ್ಯದಲ್ಲಿ ಚಂದ್ರಪದ ಜೀವನಿಗೆ ಹೇಳಿರುವರು. ಆ ಘಟ್ಟವು ಜೀವನ ಉತ್ಪತ್ತಿ ಘಟ್ಟವು. ಆದುದರಿಂದ ಪರಸ್ಪರ ವಿರೋಧವಿಲ್ಲವೆಂದು ತಿಳಿಯಬೇಕು.

ಧರಣಿಯೆಂಬುದೆ ಅಗ್ನಿ ಸಂವ
ತ್ಸರವೆ ಸಮಿಧಿ ವಿಹಾಯಸವೆ ಪೊಗೆ
ಇರಳುರಿದಿಶಾಂಗಾರವಾಂತರ ದಿಗ್ವಲಯಕಿಡಿಯೂ ||
ವರುಷವೆಂಬಾಹುತಿಗಳಿಂದಲಿ
ಹರಿಯ ಮೆಚ್ಚಿಸಿ ಸಕಲರೊಳಗ
ಧ್ವರಿಯನಾಗಿರು ಸರ್ವರೂಪಾತ್ಮಕನ ಚಿಂತಿಸುತ || ೪ ||

ಪದ್ಯಾರ್ಥ :—ಧರಣಿಯೆಂಬುದೆ=ಭೂಮಿಯೆನ್ನುವುದೆ, ಅಗ್ನಿ, ಸಂವತ್ಸರವೇ, ಸಮಿಧಿ=ಕಾಷ್ಠವು, ವಿಹಾಯಸವೆ=ಆಕಾಶವೆ, ಪೊಗೆ=ಹೊಗೆಯು ಇರಳು=ರಾತ್ರಿಯು, ಉರಿ=ಜ್ವಾಲೆಯು, ದಿಶಾ=ದಿಕ್ಕುಗಳು, ಅಂಗಾರ= ಕೆಂಡಗಳು, ಅವಾಂತರದಿಗ್ವಲಯ=ವಿದಿಕ್ಕುಗಳೆ ಕಿಡಿಯು, ವರುಷವೆಂಬ=

ಮಳೆಯೆಂಬ ಆಹುತಿಗಳಿಂದಲಿ ಹರಿಯ ಮೆಚ್ಚಿಸಿ, ಸರ್ವರೂಪಾತ್ಮಕನ=ಪೃಥಿವೀ ಅಗ್ನಿಯಲ್ಲಿ ಸಂಕರ್ಷಣ, ಸಂವತ್ಸರ ಮೊದಲಾದ ಕಾಷ್ಠಾದಿಗಳಲ್ಲಿ ಸಂಕರ್ಷಣ ನಾರಾಯಣ, ಸಂಕರ್ಷಣ ವಾಸುದೇವ ಮೊದಲಾದ ೬ ರೂಪಾತ್ಮಕನಾದ ಪರಮಾತ್ಮನನ್ನು ಚಿಂತಿಸುತ್ತ, ಸಕಲರೊಳಗೆ ಅಧ್ವರ್ಯನಾಗಿರು=ಯಾಗಗಳಲ್ಲಿ ಅಧ್ವರ್ಯನು ಹೇಗೆ ಅಧ್ಯಕ್ಷನೋ ಹಾಗೆ ಸರ್ವರಿಗೆ ಅಧ್ಯಕ್ಷನಾಗಿರು. ಇಂತಹಾ ಜ್ಞಾನವುಳ್ಳವರು ಅಧ್ವರ್ಯರಂತೆ ಇರುವರೆಂಬ ಭಾವ.

ತಾತ್ಪರ್ಯ:—ಈಗ ಮೂರನೆಯ ಪೃಥಿವೀ ಅಗ್ನಿಯಲ್ಲಿ ಹೋಮಿಸುವ ಪ್ರಕಾರವನ್ನು ಹೇಳುತ್ತಾರೆ:—

ಮೇಲಿನ ಎರಡು ಪದ್ಯಗಳಂತೆ ಮುಂದಿನ ಮೂರು ಪದ್ಯಗಳಿಗೂ ಉಪನಿಷದ್ವಾಕ್ಯಗಳಿರುವುವು. ಅದರ ಅಭಿಪ್ರಾಯವು ಮಾತ್ರ ಇಲ್ಲಿ ಹೇಳಲ್ಪಡುತ್ತೆ. ಗ್ರಂಥವಿಸ್ತಾರ ಭಯದಿಂದ ಉಪನಿಷದ್ವಾಕ್ಯಗಳನ್ನು ಉದ್ಧರಿಸಲಿಲ್ಲ. ಭೂಮಿಯು ಅಗ್ನಿ ಅಂದರೆ, 'ಪೃಥಿತತ್ವಾತ್ಪೃಥಿವೀನಾಮ ಪೃಥಿವೀಸ್ಥಃ ಸಂಕರ್ಷಣಃಅಗ್ನಿಃ' ಲೋಕದಲ್ಲಿ ಪ್ರಖ್ಯಾತನಾದುದರಿಂದ ಪೃಥಿವೀಯೆಂದು ಪರಮಾತ್ಮನಿಗೆ ಹೆಸರು. ಪೃಥಿವೀಗತ ಸಂಕರ್ಷಣನು ಅಗ್ನಿಯು. ಎಲ್ಲರನ್ನೂ ತನ್ನಲ್ಲಿ ವಾಸಮಾಡಿಸುವವನಾದುದರಿಂದ ಸಂವತ್ಸರನೆಂದು ಹೆಸರುಳ್ಳ ಸಂವತ್ಸರಗತನಾದ ಸಂಕರ್ಷಣ ನಾರಾಯಣ ಸ್ವರೂಪನು ಕಾಷ್ಟವು. ಚೆನ್ನಾಗಿ ಪ್ರಕಾಶ ಉಳ್ಳವನಾದುದರಿಂದ (ಸಮ್ಯಕ್ ಪ್ರಕಾಶನಾತ್ ಆಕಾಶನಾಮಾ) ಅಥವಾ ಚೆನ್ನಾಗಿ ಪ್ರಕಾಶವನ್ನು ಮಾಡುವವನಾದುದರಿಂದ ಆಕಾಶನೆಂದು ಹೆಸರು. ಈ ಆಕಾಶಗತ ಸಂಕರ್ಷಣ ವಾಸುದೇವ ಸ್ವರೂಪನು ಹೊಗೆ 'ರತಿದಾನಾದ್ರಾತ್ರಿಃ' ರತಿಪ್ರದನಾದುದರಿಂದ ರಾತ್ರಿಯೆಂದು ಪರಮಾತ್ಮನಿಗೆ ಹೆಸರು. ರಾತ್ರಿಗತ ಸಂಕರ್ಷಣ ಸಂಕರ್ಷಣ ಸ್ವರೂಪನೇ ಜ್ವಾಲೆಯು. ಜ್ಞಾನವನ್ನು ತೋರಿಸುವವನಾದುದರಿಂದ ('ದೀಶತೀತಿದಿಕ್') ದಿಕ್ನಾಮಕನು ಪರಮಾತ್ಮನು. ದಿಕ್ಕುಗಳಲ್ಲಿರುವ ಸಂಕರ್ಷಣ ಪ್ರದ್ಯುಮ್ನ ಸ್ವರೂಪನು ಕೆಂಡಗಳು 'ಅವಾಂತರಂದಿಶತೀತಿ ಅವಾಂತರದಿಕ್' ಅವಾಂತರ ಜ್ಞಾನವನ್ನು ತೋರಿಸುವವನಾದುದರಿಂದ ಅವಾಂತರ ದಿಕ್ಕೆಂದು ಪರಮಾತ್ಮನಿಗೆ ಹೆಸರು. ಅವಾಂತರ ದಿಕ್ಕುಗಳಲ್ಲಿರುವ ಸಂಕರ್ಷಣಾನಿರುದ್ಧನು ಕಿಡಿಗಳು. ಮಳೆ ಬಿಂದುಗಳನ್ನೇ ಆಹುತಿಯನ್ನಾಗಿ ಮಾಡಿ ಹರಿಯನ್ನು ಮೆಚ್ಚಿಸಿ ಮೇಲೆಹೇಳಿದ ಕಾಷ್ಠಾದಿಗತ ಸಕಲ ರೂಪಗಳನ್ನು ಚಿಂತಿಸುತ್ತ ಎಲ್ಲರಿಗಿಂತಲೂ ಅಧಿಕನಾಗಿರು.

ಹೀಗೆ ಚಿಂತಿಸಿದರೆ ಸ್ವಾಮಿಯು ನಮ್ಮನ್ನು ಸಜಾತೀಯರಲ್ಲಿ ಎಲ್ಲರಿಗಿಂತಲೂ ಅಧಿಕರನ್ನಾಗಿ ಮಾಡಿ ಉದ್ಧರಿಸುವನು ಎಂದು ತಾತ್ಪರ್ಯ.

ಪುರುಷಶಿಖಿವಾಕ್ ಸಮಿಧಿಧೂಮವು
ಪರಣವರ್ಚಿಯು ಜಿಹ್ವೆಶ್ರೋತೃಗ
ಳೆರಡು ಕಿಡಿಗಳು ಲೋಚನಗಳಂಗಾರಗಳೆನಿಸುವವು ||
ನಿರುತ ಭುಂಜಿಸುವನ್ನ ಯದುಕುಲ
ವರನಿಗವದಾನಗಳಿಂದೀ
ಪರಿಸಮರ್ಪಣೆಗೈಯೆ ಕೈಕೊಂಡನುದಿನದಿಪೊರೆವಾ || ೫ ||

ಪದ್ಯಾರ್ಥ :—ಪುರುಷ = ಪುರುಷನು, ಶಿಖಿ = ಅಗ್ನಿಯು, ವಾಕ್ = ವಾಗಿಂದ್ರಿಯವು, ಸಮಿಧಿ = ಕಾಷ್ಟವು, ಪರಣ = ಪ್ರಾಣೇಂದ್ರಿಯುವು, ಧೂಮ = ಹೊಗೆ, ಅರ್ಚಿಯು = ಜ್ವಾಲೆಯು, ಜಿಹ್ವೆ = ನಾಲಿಗೆಯು, ಶ್ರೋತ್ರಗಳೆರಡು = ಕಿವಿಗಳೆರಡು, ಕಿಡಿಗಳು, ಲೋಚನಗಳು = ಕಣ್ಣುಗಳು ಅಂಗಾರವೆನಿಸುವುವು ಕೆಂಡಗಳು ಎನಿಸುವುವು, ನಿರುತ = ನಿತ್ಯದಲ್ಲಿಯೂ, ಭುಂಜಿಸುವ = ನಾವು ಭೋಜನಮಾಡುವ, ಅನ್ನ = ಅನ್ನವನ್ನು, ಎದುಕುಲವರನಿಗೆ = ಎದುಕುಲ ಶ್ರೇಷ್ಠನಾದ ಶ್ರೀ ಪರಮಾತ್ಮನಿಗೆ, ಅವದಾನಗಳಿಂದು = ಆಹುತಿಗಳಿಂದು ಈ ಪರಿ ಅನುದಿನದಿ = ಪ್ರತಿದಿವಸದಲ್ಲಿಯೂ, ಸಮರ್ಪಣೆಗೈಯೆ, ಕೈಕೊಂಡು = ಸ್ವೀಕರಿಸಿ, ಅನುದಿನವು = ಪ್ರತಿದಿವಸದಲ್ಲಿಯೂ, ಪೊರೆವಾ = ನಮನ್ನು ಸಂರಕ್ಷಿಸುವನು.

ತಾತ್ಪರ್ಯ :—ಪುರುಷಾಗ್ನಿಯ ಲಕ್ಷಣವನ್ನು ಹೇಳುತ್ತಾರೆ. 'ಪುರುತ್ವಾತ್ಪೂರ್ಣತ್ವಾತ್ಪುರುಷನಾಮಾ' ಅನಂತನಾದುದರಿಂದಲೂ, ಪೂರ್ಣನಾದುದರಿಂದಲೂ, ಪುರುಷನೆಂದು ಪರಮಾತ್ಮನಿಗೆ ಹೆಸರು. ಈ ಪುರುಷನಲ್ಲಿರುವ ಪ್ರದ್ಯುಮ್ನರೂಪಿಯು ಅಗ್ನಿಯು. 'ತಸ್ಯಪುಂಗತಸ್ಯ ಪ್ರದ್ಯುಮ್ನಸ್ಯವಕ್ತೃತ್ವಾದ್ವಾಙ್‌ನಾಮಾವಾಚಿಸ್ಥಿತಃ ಪ್ರದ್ಯುಮ್ನ ನಾರಾಯಣಾತ್ಮಸಮಿತ್' ಎಲ್ಲರಲ್ಲಿಯೂ ಇದ್ದು ಮಾತನಾಡುವವನಾದುದರಿಂದ ವಾಕ್ ಎಂದು ಪರಮಾತ್ಮನಿಗೆ ಹೆಸರು. ಈ ಪುರುಷನಾಮಕನಾದ ಪ್ರದ್ಯುಮ್ನರೂಪಿ ಅಗ್ನಿಗೆ ವಾಕ್ಯಸ್ಥಿತ ಪ್ರದ್ಯುಮ್ನ ನಾರಾಯಣನು ಕಾಷ್ಟನು. ಚಲನೆಮಾಡಿಸುವುದರಿಂದ ಪ್ರಾಣನಾಮಕನು. ಈ ಪ್ರಾಣಸ್ಥ ಪ್ರದ್ಯುಮ್ನ ವಾಸುದೇವಸ್ವರೂಪನು ಹೊಗೆಯು. ಹೂಯತೇ, ಅದ್ಯತೇ ಅನೇನೇತಿ ಜಿಹ್ವಾನಾಮಾ ಜಿಹ್ವಾಗತ ಪ್ರದ್ಯುಮ್ನ

ಸಂಕರ್ಷಣಾತ್ಮಾ ಅರ್ಚಿಃ' ಹೋಮ ಮಾಡಿಸಿಕೊಳ್ಳಲ್ಪಡುವವನೂ, ಭಕ್ಷಿಸುವವನೂ ಆದುದರಿಂದ ಜಿಹ್ವಾನಾಮಕನು ಹರಿಯು. ನಾಲಿಗೆಯಲ್ಲಿರುವ ಪ್ರದ್ಯುಮ್ನ ಸಂಕರ್ಷಣ ರೂಪವೇ ಜ್ವಾಲೆಯು. 'ಚಷ್ಟೇಪಶ್ಯತಿ ಸರ್ವಮಿತಿ ಚಕ್ಷುರ್ನಾಮಾ ಚಕ್ಷುಸ್ಥ ಪ್ರದ್ಯುಮ್ನ ಪ್ರದ್ಯುಮ್ನಾತ್ಮಾ ಅಂಗಾರಾಃ' ಸರ್ವವನ್ನೂ ಕಣ್ಣಲ್ಲಿಟ್ಟು ನೋಡುವವನಾದುದರಿಂದ ಚಕ್ಷುಸ್ ಎಂದು ಪರಮಾತ್ಮನಿಗೆ ಹೆಸರು. ಕಣ್ಣುಗಳೊಳಗಿರುವವನು ಪ್ರದ್ಯುಮ್ನ ಕೆಂಡಗಳು. ಕೇಳುವುದರಿಂದ ಶ್ರೋತ್ರನೆಂದು ಪರಮಾತ್ಮನ ಹೆಸರು. ಕಿವಿಗಳಲ್ಲಿರುವ ಪ್ರದ್ಯುಮ್ನಾನಿರುದ್ಧ ರೂಪವು ಕಿಡಿಗಳು. ಇಂತಹ ಪುರುಷನಾಮಕ ಪ್ರದ್ಯುಮ್ನಾಗ್ನಿಯಲ್ಲಿ ನಾರಾಯಣಾದಿ ೫ ರೂಪಗಳನ್ನು ತಿಳಿದು ಷಡ್ರೂಪಿಯಾದ ಎದುಕುಲೋತ್ತಮನಾದ ಶ್ರೀ ಪರಮಾತ್ಮನ ಉದ್ದೇಶ್ಯವಾಗಿ ಪ್ರತಿದಿವಸವೂ ನಾವು ಭುಂಜಿಸುವ ಅನ್ನವೇ ಆಹುತಿಗಳೆಂದು ಸಮರ್ಪಣೆಮಾಡಿದರೆ ಸ್ವೀಕರಿಸಿ ಉತ್ತಮಗತಿಯನ್ನಿತ್ತು ರಕ್ಷಿಸುವನು. 'ಪುರುಷೋವಾವಗೌತಮಾಗ್ನಿಸ್ತಸ್ಯಾವಾಗೇವ ಸಮಿತ್' ಇತ್ಯಾದಿ ಉಪನಿಷದ್ವಾಕ್ಯಗಳೇ ಇವುಗಳಿಗೆ ಆಧಾರವು. ಉಪನಿಷದ್ಭಾಷ್ಯವನ್ನೂ ಉಪನಿಷತ್ತಿನ ಖಂಡಾರ್ಥವನ್ನು ಅನುಸರಿಸಿ ಈ ಪದ್ಯಗಳಿಗೆ ಅರ್ಥವು ಬರೆಯಲ್ಪಟ್ಟಿದೆ.

ಮತ್ತೆ ಯೋಷಾಗ್ನಿಯೊಳು ತಿಳಿವದು
ಪಸ್ಥ ತತ್ವವೆ ಸಮಿಧಿ ಕಾಮೋ
ತ್ಪತ್ತಿ ಪರ ಮಾತುಗಳೇ ಧೂಮವು ಯೋನಿಮಹದರ್ಚಿ ||
ತತ್ಪ್ರವೇಶಾಂಗಾರ ಕಿಡಿಗಳು
ಉತ್ಸಹಗಳುತ್ಸರ್ಜನವು ಪುರು
ಷೋತ್ತಮನಿಗವದಾನವೆನೆ ಕೈಕೊಂಡು ಮನ್ನಿಸುವ || ೬ ||

ಪದ್ಯಾರ್ಥ :—ಮತ್ತೆ, ಯೋಷಾಗ್ನಿಯೊಳು = ಸ್ತ್ರೀಯೆಂಬ ಅಗ್ನಿಯಲ್ಲಿ ತಿಳಿವದು = ಕಾಷ್ಠಾದಿಗಳನ್ನು ಮುಂದೆ ಹೇಳುವ ರೀತಿಯಾಗಿ ತಿಳಿಯಬೇಕು. ಉಪಸ್ಥ ತತ್ವವೆ = ಉಪಸ್ಥೇಂದ್ರಿಯವೆ, ಸಮಿಧಿ = ಕಾಷ್ಠವು. ಕಾಮೋತ್ಪತ್ತಿ ಪರಮಾತುಗಳೆ = ಕಾಮಾತುರನಾಗಿ ಸ್ತ್ರೀಯರಲ್ಲಿ ರತಿಸಂಬಂಧವಾದ ಮಾತುಗಳನ್ನಾಡುವುದೇ, ಧೂಮವು = ಹೊಗೆಯು. ಯೋನಿ, ಮಹದರ್ಚಿ = ಮಹಾಜ್ವಾಲೆಯು, ತತ್ಪ್ರವೇಶ = ಅಂತಃಪ್ರವೇಶಮಾಡಿಸುವುದೇ, ಅಂಗಾರ = ಕೆಂಡಗಳು, ಉತ್ಸಹಗಳು = ರತಿಯಲ್ಲಿ ಉತ್ಸಾಹವೇ ಕಿಡಿಗಳು, ಉತ್ಸರ್ಜನವು =

ರೇತೋತ್ಸರ್ಜನವು, ಪುರುಷೋತ್ತಮನಿಗೆ, ಅವದಾನವೆನೆ= ಆಹುತಿಗಳೆಂದು ಸಮರ್ಪಿಸಲು, ಕೈಕೊಂಡು= ಪೂಜಾತ್ವೇನ ಸ್ವೀಕರಿಸಿ, ಮನ್ನಿಸುವ= ನಮ್ಮಪರಾಧಗಳನ್ನೆಲ್ಲಾ ಕ್ಷಮಿಸುವನು.

ತಾತ್ಪರ್ಯ:— ಸ್ತ್ರೀಯೆಂಬುವದೇ ಅಗ್ನಿಯೆಂತಲೂ, ಅದಕ್ಕೆ ಕಾಷ್ಠಾದಿಗಳನ್ನೂ ಹೇಳುತ್ತಾರೆ:—ಸಕಲರಿಗೆ ಬೇಕಾದವನಾದುದರಿಂದ ಯೋಷಾನಾಮಕನು ಪರಮಾತ್ಮನು. ಸ್ತ್ರೀಯರಲ್ಲಿ ಅನಿರುದ್ಧರೂಪವನ್ನು ಚಿಂತಿಸಬೇಕು. 'ಸ್ತ್ರೀಗತೋ ನಿರುದ್ಧೋಗ್ನಿಃ' ಸ್ತ್ರೀಯರೊಳಗಿರುವ ಅನಿರುದ್ಧನು ಅಗ್ನಿಯು. 'ತಸ್ಯಾಃ ಯೋಷಿದ್ಗತಾನಿರುದ್ಧಾಖ್ಯಾಗ್ನೇಃ ಉಪಸ್ಥಃ ಉಪಸ್ಥಿತೇಃ ಉಪಸ್ಥಾನಾಮಾ ಉಪಸ್ಥಗತಃ ಅನಿರುದ್ಧನಾರಾಯಣಾತ್ಮಾ ಸಮಿತ್' ಸಮೀಪದಲ್ಲಿ ವಾಸಮಾಡುವುದರಿಂದ ಉಪಸ್ಥನೆಂದು ಪರಮಾತ್ಮನ ಹೆಸರು. ಸ್ತ್ರೀಗತಾನಿರುದ್ಧಾಗ್ನಿಗೇ ಉಪಸ್ಥನಾಮಕನಾದ ಉಪಸ್ಥಗತನಾದ ಅನಿರುದ್ಧ ನಾರಾಯಣರೂಪನು ಕಾಷ್ಠವು. 'ಉಪಮಂತ್ರಯತೇ, ರತ್ಯರ್ಥ ಸಂಭಾಷತೇ ಇತಿಯತ್‌ಸಃ ತತ್ರತ್ಯಃ ಅನಿರುದ್ಧ ವಾಸುದೇವಾತ್ಮೋಪಮಂತ್ರಣ ನಾಮಾಧೂಮಃ' ರತ್ಯರ್ಥವಾಗಿ ರಹಸ್ಯ ಸಂಭಾಷಣೆಗಳನ್ನು ಪುರುಷನೊಳಗಿದ್ದು ಮಾಡುವವನಾದುದರಿಂದ ಉಪಮಂತ್ರಣ ಎಂದು ಪರಮಾತ್ಮನಿಗೆ ಹೆಸರು. ಅಲ್ಲಿರುವವನು ಅನಿರುದ್ಧ ವಾಸುದೇವರೂಪನು ಧೂಮವು 'ಯುನಕ್ತಿ ಮಿಶ್ರೀಕರೋತೀತಿ ಯೋನಿನಾಮಾ ಯೋನಿಸ್ಥೋಽನಿರುದ್ಧ ಸಂಕರ್ಷಣಾತ್ಮಾರ್ಚಿಃ' ಮಿಶ್ರಮಾಡುವವನಾದುದರಿಂದ ಯೋನಿಯೆಂದು ಹೆಸರು. ಯೋನಿಗತ ಅನಿರುದ್ಧ ಸಂಕರ್ಷಣರೂಪಿ ಪರಮಾತ್ಮನು ಜ್ವಾಲೆಯು, ಅಂತಃಪ್ರವೇಶಮಾಡಿಸುವ ಕ್ರಿಯಾಗತನಾದ ಅನಿರುದ್ಧ ಪ್ರದ್ಯುಮ್ನರೂಪನು ಕೆಂಡಗಳು, "ಅಭಿಸಂದತೀತ್ಯಭಿನಂದಾನಾಮಾ ಅಭಿನಂದಗತೋಽನಿರುದ್ಧಾನಿರುದ್ಧಾತ್ಮಾವಿಸ್ಫುಲಿಂಗಾಃ" ರತಿಯಲ್ಲಿ ಉತ್ಸಾಹವನ್ನು ಕೊಡಿಸುವ ಅಭಿನಂದನಾಮಕನಲ್ಲಿರುವ ಅನಿರುದ್ಧಾನಿರುದ್ಧ ರೂಪವೇ ಕಿಡಿಗಳು. ಪುರುಷೋತ್ತಮನಾದ ಶ್ರೀ ಪರಮಾತ್ಮನಿಗೆ ರೇತೋತ್ಸರ್ಜನವೇ ಆಹುತಿಗಳೆಂದು ಭಾವಿಸಿ ಭಗವದ್ಪೂಜಾತ್ವೇನ ಸಮರ್ಪಿಸಲು, ಪೂಜೆಯನ್ನಾಗಿ ಸ್ವೀಕರಿಸಿ ನಮ್ಮಪರಾಧಗಳನ್ನೆಲ್ಲಾ ಮನ್ನಿಸುವನು. 'ಯೋಷಾವಾವ ಗೌತಮಾಗ್ನಿಸ್ತಸ್ಯಾ ಉಪಸ್ಥ ಏವ ಸಮಿತ್' ಇತ್ಯಾದಿ ಉಪನಿಷದ್ವಾಕ್ಯಗಳು ಇವುಗಳಿಗೆ ಆಧಾರಗಳು.

ಸಿದನೆಂಬ ಅನುಸಂಧಾನಪೂರ್ವಕವಾಗಿ, ಸಂದೇಹಿಸದೆ= ಸ್ವಲ್ಪವು ಸಂಶಯ ಪಡದೆ, ದಿನದಿನದಿ= ಪ್ರತಿದಿವಸದಲ್ಲಿಯೂ, ಅರ್ಪಿಸೆ= ಸಮರ್ಪಿಸಲು, ಮಾನ ನಿಧಿ= ಮಾನವೇ ನಿಧಿಯಾಗುಳ್ಳ ಶ್ರೀ ಹರಿಯು, ಕೈಕೊಂಡು= ಸ್ವೀಕರಿಸಿ, ಸುಖವಿತ್ತು= ಸುಖವನ್ನು ಕೊಟ್ಟು, ಆನತರ= ನಮ್ರೀಭೂತರಾದ ಭಕ್ತ ರನ್ನು, ಧೇನು= ಗೋವು, ತೃಣಜಲತಾನುಂಡು= ತಾನು ಹುಲ್ಲುತಿಂದು ನೀರು ಕುಡಿದು, ಅನವರತ= ನಿತ್ಯದಲ್ಲಿಯೂ, ಪಾಲ್ಗರೆವ= ಹಾಲುಕರೆವ, ತೆರ ದಂತೆ= ರೀತಿಯಾಗಿ, ಸಂತೈಪ= ಸಂತೋಷಪಡಿಸುವನು.

ತಾತ್ಪರ್ಯ :—ಪಾಪ ಪುಣ್ಯ ಕರ್ಮಗಳೆಲ್ಲವನ್ನೂ ನಿಃಸಂಶಯವಾಗಿ ಪರಮಾತ್ಮನಿಗೇ ಸಮರ್ಪಿಸಬೇಕೆಂದು ಹೇಳುತ್ತಾರೆ. ನಾವು ಪ್ರತಿದಿವಸ ದಲ್ಲಿಯೂ ಯಾವ ಪುಣ್ಯವನ್ನು ಮಾಡಲಿ, ಪಾಪವನ್ನು ಮಾಡಲಿ "ನಾಹಂ ಕರ್ತಾ ಹರಿಃಕರ್ತಾ" ಎಂಬ ಅನುಸಂಧಾನ ಪೂರ್ವಕವಾಗಿ ಸ್ವತಂತ್ರ ಕರ್ತನು ನಾನಲ್ಲ, ಪರಮಾತ್ಮನು ಮಾಡಿಸಿದುದನ್ನು ನಾನು ಮಾಡುವೆನೆಂದು ಭಾವಿಸಿ ಪಾಪವನ್ನು ಪರಮಾತ್ಮನಿಗರ್ಪಿಸಿದರೆ ನಮಗೆ ಪಾಪವು ಹೆಚ್ಚಾಗು ವುದೋ ಏನೋ ಎಂಬ ಸಂದೇಹವನ್ನು ಬಿಟ್ಟು ಶ್ರೀನಿವಾಸನಿಗೆ ಪುಣ್ಯಪಾಪ ಗಳನ್ನರ್ಪಿಸಿದರೆ ಶ್ರೀ ಪರಮಾತ್ಮನು ಅವನ್ನು ಸ್ವೀಕರಿಸಿ ಪಾಪಗಳನ್ನು ಸುಟ್ಟು, ಪುಣ್ಯಕರ್ಮಗಳ ಫಲವನ್ನು ಹೆಚ್ಚುಮಾಡಿ ನಮಗೆ ಸುಖವನ್ನು ಕೊಟ್ಟು ಹಸುವು ಹೇಗೆ ಹುಲ್ಲು ತಿಂದು ನೀರು ಕುಡಿದು ಹಾಲನ್ನು ಕೊಡು ವುದೋ ಹಾಗೆ ನಮಗೆ ಸುಖವನ್ನು ಕೊಟ್ಟು ಉದ್ಧರಿಸುವನು.

ಪೂರ್ವದಕ್ಷಿಣ ಪಶ್ಚಿಮೋತ್ತರ
ಪಾರ್ವತೀಪತಿ ಯಗ್ನಿವಾಯುಸು
ಶಾರ್ವರೀಚರದಿಗ್ವಲಯದೊಳು ಹಂಸನಾಮಕನು ||
ಸಾರ್ವಕಾಲದಿ ಸರ್ವರೊಳುಸುರ
ಸಾರ್ವಭೌಮನು ಸ್ವೇಚ್ಛೆಯಲಿ ಮು
ತ್ತೋರ್ವರಿಗೆ ಗೋಚರಿಸದವ್ಯಕ್ತಾತ್ಮನೆಂದೆನಿಸಿ || ೩೯ ||

ಪದ್ಯಾರ್ಥ :—ಪೂರ್ವದಕ್ಷಿಣ ಪಶ್ಚಿಮೋತ್ತರ= ಪೂರ್ವದಕ್ಷಿಣ ಪಶ್ಚಿಮ ಉತ್ತರಗಳಲ್ಲಿಯೂ, ಪಾರ್ವತೀಪತಿ= ರುದ್ರದೇವರು ವಾಸಮಾಡುವ ಈಶಾನ್ಯ, ಅಗ್ನಿ= ಆಗ್ನೇಯ, ವಾಯು= ವಾಯವ್ಯ, ಸುಶಾರ್ವರೀಚರ= ನಡುರಾತ್ರಿ ಯಲ್ಲಿ ಚರಿಸುವ ರಾಕ್ಷಸನಾದ ನಿಋುತಿ ದಿಕ್ಕು, ದಿಗ್ವಲಯದೊಳು=

ದಿಕ್ಕುವಿದಿಕ್ಕು ಮಂಡಲಗಳಲ್ಲಿ, ಹಂಸನಾಮಕನು= ಹಂಸನಾಮಕ ಪರಮಾತ್ಮನು (ಇರುತಿಹನು) ಸುರಸಾರ್ವ ಭೌಮನು= ದೇವತಾಚಕ್ರವರ್ತಿಯಾದ ಶ್ರೀ ಪರಮಾತ್ಮನು (ಈ ಪ್ರಕಾರ) ಸರ್ವಕಾಲದಿ= ಸರ್ವಕಾಲಗಳಲ್ಲಿಯೂ ಸರ್ವರೊಳು= ಎಲ್ಲಾ ಪ್ರಾಣಿಗಳಲ್ಲಿಯೂ, ಸ್ವೇಚ್ಛೆಯಲಿ= ತನ್ನ ಇಚ್ಛೆಯಿಂದಲೇ, ಮತ್ತೊರ್ವರಿಗೆ = ಮತ್ತೊಬ್ಬರಿಗೆ, ಗೋಚರಿಸದೆ= ಕಣ್ಣಿಗೆ ಗೋಚರನಾಗದೆ, ಅವ್ಯಕ್ತಾತ್ಮನು= ಸ್ವರೂಪವನ್ನು ತೋರ್ಪಡಿಸದೆ ಇರುವವನು, ಎಂದೆನಿಸಿ= ಎಂದು ಪ್ರಸಿದ್ಧನಾಗಿ (ಇರುತಿಹನು)

ತಾತ್ಪರ್ಯ :—ದಿಕ್ಕುವಿದಿಕ್ಕುಗಳಲ್ಲಿ ಭಗವಂತನ ವಿಭೂತಿ ಚಿಂತನಾ ಪ್ರಕಾರವನ್ನು ಹೇಳುತ್ತಾರೆ :—

ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರವೆಂಬ ೪ ದಿಕ್ಕುಗಳು, ವಿದಿಕ್ಕುಗಳು, ಪಾರ್ವತೀಪತಿ ವಾಸಮಾಡುವ ಈಶಾನ್ಯ, ಅಗ್ನಿಯದಿಕ್ಕು ಆಗ್ನೇಯ, ವಾಯು ದಿಕ್ಕು ವಾಯವ್ಯ, ರಾಕ್ಷಸನಾದ ನಿರುರುತಿಯು ವಾಸಮಾಡುವ ನೈರುತ್ಯ. ಹೀಗೆ ದಿಕ್ಕು ವಿದಿಕ್ಕುಗಳಲ್ಲಿ ಹಂಸನಾಮಕ ಪರಮಾತ್ಮನು ನಿಯಾಮಕನಾಗಿರುವನು. ಹೀಗೆ ದೇವತಾ ಸಾರ್ವಭೌಮನಾದ ಶ್ರೀ ಹರಿಯು ಸರ್ವಕಾಲದಲ್ಲಿಯೂ ಸರ್ವಪ್ರಾಣಿಗಳಲ್ಲಿಯೂ ಸ್ವೇಚ್ಛೆಯಿಂದಲೇ ಇರುತ್ತ ಮತ್ತೊಬ್ಬರಿಗೆ ಗೋಚರನಾಗದೆ 'ಅವ್ಯಕ್ತಾತ್ಮ' ಎಂಬ ಹೆಸರನ್ನು ಪಡೆದಿರುವನು. 'ಇಂದ್ರೋ ನಲೋದಂಡಧರಶ್ಚ ರಕ್ಷೋ ಪಾಶಾಯುಧೋ ವಾಯು ಧನೇಶ ರುದ್ರಃ' ಎಂಬ ಶ್ಲೋಕದಲ್ಲಿ ನಿರುರುತಿಗೆ ರಾಕ್ಷಸನೆಂದು ಹೆಸರಿಸಿರುವದರ ಆಧಾರದಮೇಲೆ ದಾಸರಾಯರು ಪ್ರಯೋಗಿಸಿರುವರು.

ಪರಿಇಡಾವತ್ಸರನು ಸಂವ
ತ್ಸರದೊಳನಿರುದ್ಧಾದಿ ರೂಪವ
ಧರಿಸಿ ಬಾರ್ಹಸ್ಪತ್ಯ ಸೌರಭ ಚಾಂದ್ರಮನುಯೆನಿಸಿ ||
ಇರುತಿಹ ಜಗನ್ನಾಥ ವಿಠಲ
ಸ್ಮರಿಸುವರನು ಸಂತಯಿಪನೆಂ
ದುರುಪರಾಕ್ರಮನುಚಿತಸಾಧನ ಯೋಗ್ಯತೆಯನರಿತು || ೪೦ ||

ಇಲ್ಲಿಗೆ ೫ ನೆಯ ಸಂಧಿಯು ಮುಗಿದುದು.

ಪದ್ಯಾರ್ಥ :—ಪರಿ ಇಡಾವತ್ಸರನು, ಸಂವತ್ಸರದೊಳು=ಪರಿವತ್ಸರ, ಇಡಾವತ್ಸರ, ವತ್ಸರ, ಅನುವತ್ಸರ, ಸಂವತ್ಸರವೆಂಬ ಐದು ವಿಧವಾದ ಸಂವ

ತ್ಸರದೊಳಗೆ, ಅನಿರುದ್ಧಾದಿ ರೂಪವ=ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣನೆಂಬ ೫ ರೂಪಗಳನ್ನು ಧರಿಸಿ, ಬಾರ್ಹಸ್ಪತ್ಯ=ಬಾರ್ಹಸ್ಪತ್ಯಮಾನವೆಂತಲೂ, ಸೌರ=ಸೌರಮಾನವೆಂತಲೂ, ಭ=ನಕ್ಷತ್ರಮಾನವೆಂತಲೂ, ಚಾಂದ್ರಮನು=ಚಾಂದ್ರಮಾನವೆಂತಲೂ, (ಸೌರದಲ್ಲಿ ಪ್ರಭೇದವಾದ ೩೬೦ ದಿವಸಗಳುಳ್ಳ ಮತ್ತೊಂದು ಸೌರ) ಅಂತು ೫ ಪ್ರಕಾರನಾಗಿ ಯನಿಸೀ=ಹೆಸರುಳ್ಳವನಾಗಿ,ಇರುತಿಹ=ಇರುವ, ಉರುಪರಾಕ್ರಮ=ಬಹು ಪರಾಕ್ರಮಶಾಲಿಯಾದ, ಜಗನ್ನಾಥವಿಠ್ಠಲ=ಜಗನ್ನಾಥವಿಠ್ಠಲನು, ಸ್ಮರಿಸುವರನ=ತನ್ನನ್ನು ಸ್ಮರಿಸುತ್ತಿರುವವರನ್ನು, ಉಚಿತಸಾಧನ ಯೋಗ್ಯತೆಯನರಿತು=ಅವರವರ ಯೋಗ್ಯತಾನುಗುಣವಾದ ಸಾಧನೆಯನ್ನು ತಿಳಿದು, ಎಂದೂ=ಯಾವಾಗಲೂ, ಸಂತಯಿಪ=ರಕ್ಷಿಪನು.

ತಾತ್ಪರ್ಯ:—ಸಂಧಿಯನ್ನು ಮುಗಿಸುವಲ್ಲಿ ಕಾಲರೂಪಿಯಾದ ಶ್ರೀ ಪರಮಾತ್ಮನ ವಿಭೂತಿಯನ್ನು ಹೇಳುತ್ತಾರೆ:—

ಭಾಗವತ ತೃತೀಯಸ್ಕಂಧ ೧೨ನೆಯ ಅಧ್ಯಾಯ ಶ್ಲೋಕ ೧೪ ರಲ್ಲಿ, 'ಸಂವತ್ಸರಃ ಪರಿವತ್ಸರ ಇಡಾವತ್ಸರಏವಚ | ಅನುವತ್ಸರೋ ವತ್ಸರಶ್ಚವಿದುರೈವಂಪ್ರಭಾಷತೆ' || ೫ ವಿಧ ಸಂವತ್ಸರಗಳ ಹೆಸರುಗಳು ಉಕ್ತವಾಗಿವೆ. ಈ ಶ್ಲೋಕದ ಭಾಗವತ ತಾತ್ಪರ್ಯ ವಾಕ್ಯ, 'ಇಡಾವತ್ಸರ ನಾಮಾಸೌ ನಕ್ಷತ್ರದ್ವಾದಶೇಸ್ಥಿತಃ | ತಿಥೀನಾಂದ್ವಾದಶಾವರ್ತೇಯೋ ಹರಿಃ ಸೋಽನುವತ್ಸರಃ || ವತ್ಸರೋಽಯಃ ಸ್ಥಿತಸ್ತ್ವನ್ಹಾಂಷಷ್ಟ್ಯುತ್ತರ ತತ್ರಯೇ || ಗುರ್ವಾರ್ವರ್ತದ್ವಾದಶಾಂಶೋಽಯಃ ಸ್ಥಿತಃಪರಿವತ್ಸರಃ || ಸೌರದ್ವಾದಶಮಾಸೇಷು ಯಃಸ್ಥಿತಃ ಸಂವತ್ಸರೋಽಹರಿಃ || ಏವಂ ಸಕಾಲ ನಾಮಾಪಿಕಾಲಸ್ಥ ಪರಮೇಶ್ವರ ಇತಿ || ಅಶ್ವಿನ್ಯಾದಿ ನಕ್ಷತ್ರಗಳಲ್ಲಿ ಅಶ್ವಿನೀ ನಕ್ಷತ್ರವಾಗಲಿ ಮತ್ತಾವ ನಕ್ಷತ್ರವಾಗಲಿ ೧೨ ಆವರ್ತಿ ಆದರೆ ಒಂದು ವರ್ಷವಾಗುವುದು. ಆ ವರ್ಷಕ್ಕೆ ಇಡಾವತ್ಸರವೆಂದು ಹೆಸರು. ೧೨ ಅಮಾವಾಸ್ಯೆಗಳಾದರೆ ಒಂದು ವರ್ಷವಾಗುವುದು. ಆ ವರ್ಷಕ್ಕೆ ನಿಯಾಮಕನಾದ ಪರಮಾತ್ಮನಿಗೆ ಅನುವತ್ಸರನೆಂದು ಹೆಸರು. ೩೬೦ ದಿವಸಗಳಾದರೆ ಆಗುವ ವರ್ಷನಿಯಾಮಕನಿಗೆ ವತ್ಸರನೆಂದು ಹೆಸರು. (ಗುರು) ಬೃಹಸ್ಪತಿಯು ಒಂದು ರಾಶಿಯನ್ನು ಬಿಟ್ಟು ಮತ್ತೊಂದು ರಾಶಿಗೆ ಬರುವಾಗ ಆಗುವ ವರ್ಷನಿಯಾಮಕನಿಗೆ ಪರಿವತ್ಸರನೆಂದು ಹೆಸರು. ಸೂರ್ಯನು ೧೨ ರಾಶಿಯಲ್ಲಿ ಸಂಚಾರಮಾಡುವ ಕಾಲ ನಿಯಾಮಕನಿಗೆ ಸಂವ

ತ್ಸರನೆಂದು ಹೆಸರು. ಹೀಗೆ ಕಾಲನಿಯಾಮಕನಾದ ಪರಮಾತ್ಮನಿಗೆ ಕಾಲನೆಂದು ಹೆಸರು. ಶ್ರೀ ಪರಮಾತ್ಮನು ಮೇಲೆ ಹೇಳಿದಪ್ರಕಾರ, ಬಾರ್ಹಸ್ಪತ್ಯ. ಸೌರ, ಅನುಸೌರ, ನಕ್ಷತ್ರ, ಚಾಂದ್ರಮಾನಗಳೆಂಬ ಐದು ಬಗೆಯಾಗಿ ಗಣಿಸುವ ಪರಿವತ್ಸರಾದಿ ೫ ಹೆಸರುಗಳನ್ನು ಧರಿಸಿರುವನು. ಈ ೫ ರೂಪಗಳಲ್ಲಿ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ನಾರಾಯಣನೆಂಬ ೫ ರೂಪಗಳಿಂದ ವಾಸಮಾಡುತ್ತಿರುವನು. ಇದರಲ್ಲಿ ಅನುಸೌರವೆಂದರೆ ३೬೦ ಹಗಲುಗಳು ಆಗುವ ವತ್ಸರನಾಮಕವಾದ ವರ್ಷಕ್ಕೆ ಹೆಸರು. ಹೀಗೆ ಉತ್ಕೃಷ್ಟ ಪರಾಕ್ರಮಿಯಾದ ಅಸ್ಮದಂತರ್ಯಾಮಿಯಾದ ಬಿಂಬರೂಪಿ ಶ್ರೀಮಜ್ಜಗನ್ನಾಥ ವಿಠ್ಠಲನನ್ನು ಸ್ಮರಿಸುವವರ ಯೋಗ್ಯತಾನುಸಾರವಾಗಿ ಅವರಿಂದ ಸಾಧನವನ್ನು ಮಾಡಿಸಿ ಸುಖವನ್ನು ಕೊಟ್ಟು ಉದ್ಧರಿಸುವನು.

೫ ನೆಯ ಸಂಧಿಯ ವ್ಯಾಖ್ಯಾನವು ಮುಗಿದುದು.

---

## ಆರನೆಯ ಸಂಧಿ

### ಪಂಚಮಹಾ ಯಜ್ಞಸಂಧಿ.

ಜನನಿ ಪಿತ ಭೂವಾರಿದಾಂಬರ
ವೆನಿಪ ಪಂಚಾಗ್ನಿಯಲಿ ನಾರಾ
ಯಣನ ತ್ರಿಂಶತಿಮೂರ್ತಿಗಳ ವ್ಯಾಪಾರ ವ್ಯಾಪ್ತಿಗಳ ||
ನೆನೆದು ದಿವಸಗಳೆಂಬ ಸಮಿಧಿಗ
ಳನು ನಿರಂತರ ಹೋಮಿಸುತ ಪಾ
ವನಕೆ ಪಾವನನೆನಿಪ ಪರಮನಬೇಡು ಪರಮಸುಖ || ೧ ||

ಪದ್ಯಾರ್ಥ:—ಜನನಿ = ತಾಯಿ, ಪಿತ = ತಂದೆ, ಭೂ = ಭೂಮಿ, ವಾರಿದ = ಮೇಘ, ಅಂಬರ = ಆಕಾಶವು, ಯೆನಿಪ = ಯೆಂಬ, ಪಂಚಾಗ್ನಿಯಲಿ = ೫ ವಿಧ ಅಗ್ನಿಗಳಲ್ಲಿ, ನಾರಾಯಣನ, ತ್ರಿಂಶತಿಮೂರ್ತಿಗಳ = ३೦ ಮೂರ್ತಿಗಳ, ವ್ಯಾಪಾರ = ಕ್ರಿಯೆಗಳನ್ನು, ವ್ಯಾಪ್ತಿಗಳ = ಶ್ರೀ ಪರಮಾತ್ಮನ ವ್ಯಾಪನೆಯನ್ನೂ, ನೆನೆದು = ಸ್ಮರಿಸಿ, ದಿವಸಗಳೆಂಬ, ಸಮಿಧಿಗಳನು = ಕಾಷ್ಠಗಳನ್ನು, ನಿರಂತರ = ನಿತ್ಯದಲ್ಲಿಯೂ, ಹೋಮಿಸುತ = ಹೋಮವನ್ನು ಮಾಡುತ್ತ, ಪಾವನಕೆಪಾವನನೆನಿಪ = ಪವಿತ್ರ ವಸ್ತುಗಳನ್ನು ಪವಿತ್ರವನ್ನಾಗಿ ಮಾಡುವವನೆಂದು

ಪ್ರಸಿದ್ಧನಾದ, ಪರಮನ=ಸರ್ವೋತ್ತಮನಾದ ಪರಮಾತ್ಮನನ್ನು, ಪರಮ ಸುಖ=ಮೋಕ್ಷಸೌಕ್ಯಕರ, ಬೇಡು=ಪ್ರಾರ್ಥಿಸು.

ತಾತ್ಪರ್ಯ:—ಪೂರ್ವ ಸಂಧಿಯಲ್ಲಿ ಪರಮಾತ್ಮನು ಸುಲಭಸಾಧ್ಯ ನೆಂದು ತೋರಿಸುವುದಕ್ಕಾಗಿ ನಾವು ಸ್ನಾನಮಾಡುವುದು, ಉಂಬುವುದು, ಉಡುವುದೆಲ್ಲವೂ ಭಗವತ್ಪೂಜೆಯೆಂದು ಭಾವಿಸಿದರೆ ಸಾಕು ; ಪರಮಾತ್ಮನು ಮೆಚ್ಚುವನು ; ವನಕ್ಕೆ ಹೋಗಿ ತಪಸ್ಸುಮಾಡಿದರೇನೇ ಮುಕ್ತಿ ಆಗುವುದು, ಇಲ್ಲವಾದರೆ ಇಲ್ಲವೆಂದಲ್ಲ. ಎಂಬಿವೇ ಮೊದಲಾದ ಅರ್ಥವನ್ನು 'ವಿಭೂತಿ' ಸಂಧಿಯಲ್ಲಿ ನಿರೂಪಿಸಿದರು. ಈ ಸಂಧಿಯಲ್ಲಿ ಯಾಗಗಳನ್ನು ಮಾಡುವವರು ಅಗ್ನಿಯ ಮುಂದೆ ಕೂತು ಹೊಗೆಯಿಂದ ಕಣ್ಣು ಇಂಗಿಸಿಕೊಂಡು ಹೋಮಾದಿಗಳನ್ನು ಮಾಡುವುದೇ ಯಾಗವಲ್ಲ. ಅನುಸಂಧಾನಪೂರ್ವಕ ಭಗವಂತನ ವ್ಯಾಪ್ತಿಯನ್ನು ತಿಳಿದು ತಾಯಿ ತಂದೆ ಮೊದಲಾದವರ ಸೇವೆಯೇ ಯಾಗ ವೆಂದು ಪಂಚಮಹಾಯಜ್ಞ ಎಂಬ ಈ ಸಂಧಿಯಲ್ಲಿ ಯಾಗಲಕ್ಷಣವನ್ನು ನಿರೂಪಿಸಲಾರಂಭಿಸಿ ಪ್ರಥಮ ಪದ್ಯದಿಂದ, ಈ ಸಂಧಿಯಲ್ಲಿ ನಿರೂಪಿಸುವ ವಿಷಯಗಳ ಸಂಗ್ರಹವನ್ನು ಸೂಚಿಸುತ್ತಾರೆ. ಅದು ಹೇಗೆಂದರೆ:—ಅಗ್ನಿ ಯೆಂದರೆ ಬೆಂಕಿಯೆಂತಲೂ, ಸಮಿಧವೆಂದರೆ ಕಾಷ್ಠಗಳೆಂದೇ ಅರ್ಥವಲ್ಲ. ತಾಯಿ ೧ ಅಗ್ನಿ, ತಂದೆ ೧ ಅಗ್ನಿ, ಭೂಮಿ ೧ ಅಗ್ನಿ, ಮೇಘ ೧ ಅಗ್ನಿ, ಆಕಾಶ ೧ ಅಗ್ನಿ ; ಹೀಗೆ ೫ ಅಗ್ನಿಗಳಲ್ಲಿ ನಾರಾಯಣನು ಅನಿರುದ್ಧಾದಿ ಪಂಚರೂಪ ಗಳಿಂದ ಇರುವನಲ್ಲದೆ, ತಾಯಿ ಮೊದಲಾದ ಒಂದೊಂದು ಅಗ್ನಿಯಲ್ಲಿಯೂ ಅನಿರುದ್ಧಾದಿ ೫ ರೂಪಗಳಿಂದ ವ್ಯಾಪ್ತನಾಗಿರುವನು. ಇದರ ವಿವರ ಹೀಗೆ:- ತಾಯಿ ಎಂಬ ಅಗ್ನಿಯಲ್ಲಿ ಅನಿರುದ್ಧರೂಪವಿರುವುದು. ಆ ಅನಿರುದ್ಧನೊಳಗೆ, ಅನಿರುದ್ಧ ಅನಿರುದ್ಧ, ಅನಿರುದ್ಧ ಪ್ರದ್ಯುಮ್ನ, ಅನಿರುದ್ಧ ಸಂಕರ್ಷಣ, ಅನಿರುದ್ಧ ವಾಸುದೇವ, ಅನಿರುದ್ಧ ನಾರಾಯಣ, ಹೀಗೆ ೧ ರೂಪದಲ್ಲಿ ೫ ರೂಪಗಳು. ಇದರಂತೆ ತಂದೆಯಲ್ಲಿ ಪ್ರದ್ಯುಮ್ನ, ಅವನಲ್ಲಿ ಪ್ರದ್ಯುಮ್ನ ಅನಿರುದ್ಧ ಮೊದ ಲಾದ ೫ ರೂಪಗಳು. ಅಂತು ಒಂದೊಂದು ಅಗ್ನಿಯಲ್ಲಿ ೬ ರೂಪಗಳಂತೆ ೫ ಅಗ್ನಿಗಳಲ್ಲಿ ೩೦ ರೂಪಗಳಿಂದ ಇರುವನು ಅಥವಾ ತಾಯಿತಂದೆ ಮೊದ ಲಾದ ಐವರಲ್ಲಿ ೫ ರೂಪಗಳು. ಒಬ್ಬೊಬ್ಬರಲ್ಲಿ ಅನಿರುದ್ಧಾದಿ ೫ ರೂಪಗಳು. ಅಂತು ೩೦ ರೂಪಗಳಿಂದ ಇರುವನು. ಇವನ ವ್ಯಾಪಾರವೇನೆಂದರೆ, ತಾಯಿ ಯಲ್ಲಿದ್ದು ಹುಟ್ಟಿಸುವನು ; ತಂದೆಯಲ್ಲಿದ್ದು ಬೀಜಭೂತನನ್ನಾಗಿ ಮಾಡು

ವನು. ಭೂಮಿ ಧಾನ್ಯವನ್ನು ಕೊಡುವುದು. ಮೇಘವು ನೀರನ್ನು ಕೊಡುವುದು. ಆಕಾಶವು ಅವಕಾಶವನ್ನು ಕೊಡುವುದು. ಹೀಗೆ ೫ ಅಗ್ನಿಗಳಲ್ಲಿ ಒಟ್ಟು ೩೦ ರೂಪಗಳಿಂದ ಮಾಡುವ ವ್ಯಾಪಾರಗಳನ್ನೂ ಈ ಅಗ್ನಿಗಳಲ್ಲಿ ವ್ಯಾಪ್ತಿಯನ್ನೂ ಸ್ಮರಿಸಿ, ದಿವಸಗಳೆಂಬುವದೇ ಕಟ್ಟಿಗೆಗಳು. ಈ ರೀತಿಯಾಗಿ ಪೂಜಾರೂಪವಾದ ಹೋಮಗಳನ್ನು ಮಾಡುತ್ತಾ, ಪಾವನಕ್ಕೆ ಪಾವನತ್ವವನ್ನು ಉಂಟುಮಾಡುವ ಪರಮಾತ್ಮನನ್ನು ಪ್ರಾರ್ಥಿಸಲು ಪರಮಸುಖಕರವಾದ ಮುಕ್ತಿಯನ್ನು ಕೊಡುವನು.

ಗಗನಪಾವಕ ಸಮಿಧಿ ರವಿರ
ಶ್ಮಿಗಳೆ ಧೂಮವು ವರ್ಚಿಯನಿಪುದೆ
ಹಗಲು ನಕ್ಷತ್ರಗಳೆ ಕಿಡಿಗಳು ಚಂದ್ರಮಾಂಗಾರ ||
ಮೃಗವರೋದರನೊಳಗೆ ಐರೂ
ಪಗಳ ಚಿಂತಿಸಿ ಭಕ್ತಿರಸ ಮಾ
ತುಗಳೆ ಮಂತ್ರವುಮಾಡಿ ಹೋಮಿಸುವರು ವಿಪಶ್ಚಿತರೂ || ೨ ||

ಪದ್ಯಾರ್ಥ :—ಗಗನ= ಆಕಾಶವು, ಪಾವಕ = ಅಗ್ನಿಯು ; ಸಮಿಧಿ = ಕಾಷ್ಠವು, ರವಿ= ಸೂರ್ಯನು ; ರಶ್ಮಿಗಳೇ = ಸೂರ್ಯನ ಕಿರಣಗಳೇ, ಧೂಮವು= ಹೊಗೆಯು ; ಅರ್ಚಿಯೆನಿಪುದೆ= ಜ್ವಾಲೆಯೆನ್ನುವುದೇ, ಹಗಲು, ನಕ್ಷತ್ರಗಳೆ ಕಿಡಿಗಳು ; ಚಂದ್ರಮಾ = ಚಂದ್ರನು, ಅಂಗಾರ= ಬೆಂಕಿಯು, ಮೃಗವರೋದರನೊಳಗೆ= ಚಂದ್ರನೊಳಗೆ, ಐರೂಪಗಳ ಚಿಂತಿಸಿ= ನಾರಾಯಣ ಇತ್ಯಾದಿ ೫ ರೂಪಗಳನ್ನು ಚಿಂತಿಸಿ, ಭಕ್ತಿರಸಮಾತುಗಳೆ= ಭಕ್ತಿರಸಗಳಿಂದ ಕೂಡಿದ ಮಾತುಗಳನ್ನೇ, ಮಂತ್ರವುಮಾಡಿ= ಮಂತ್ರನನ್ನಾಗಿ ಮಾಡಿಕೊಂಡು, ವಿಪಶ್ಚಿತರು= ಜ್ಞಾನಿಗಳು, ಹೋಮಿಸುವರು = ಹೋಮಮಾಡುವರು.

ತಾತ್ಪರ್ಯ :—ಮೇಲಿನ ಪದ್ಯದಲ್ಲಿ, ತಾಯಿ ತಂದೆ ಮೊದಲಾದ ಪಂಚಾಗ್ನಿಗಳಲ್ಲಿ ಅನಿರುದ್ಧಾದಿ ರೂಪಗಳನ್ನೂ, ಒಂದೊಂದರೊಳಗೆ ಮತ್ತೂ ಐದು ರೂಪವನ್ನೂ ಒಟ್ಟು ೩೦ ರೂಪಗಳನ್ನು ಚಿಂತಿಸಬೇಕೆಂದು ಹೇಳಿದರು. ಈಗ ಪಂಚಾಗ್ನಿಗಳನ್ನು ವ್ಯುತ್ಕ್ರಮವಾಗಿ ಆಕಾಶ ಮೊದಲುಮಾಡಿ ಅವುಗಳಲ್ಲಿ ೩೦ ರೂಪಗಳ ವಿವರಗಳನ್ನು ೫ ಪದ್ಯಗಳಿಂದ ಹೇಳುತ್ತಾರೆ :—

ಛಾಂದೋಗ್ಯೋಪನಿಷತ್ತು ೫ ನೆಯ ಅಧ್ಯಾಯದಲ್ಲಿ "ಅಸೌವಾವಲೋಕೋ ಗೌತಮಾಗ್ನಿಸ್ತಸ್ಯಾದಿತ್ಯ ಏವ ಸಮಿದ್ರಶ್ಮಯೋ ಧೂಮೋಹರ

ರ್ಚಿಶ್ಚಂಪ್ರಮಾ ಅಂಗಾರಾ ನಕ್ಷತ್ರಾಣಿ ವಿಷ್ಫುಲಿಂಗಾಸ್ತಸ್ಮಿನ್ನೇ ತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ ತಸ್ಯಾ ಆಹುತೇಃ ಸೋಮೋ ರಾಜಾ ಸಂಭವತಿ'' ಎಂದು ಹೇಳಿರುವರು. ಇದೇ ಅರ್ಥವನ್ನೇ ದಾಸರಾಯರು ಈ ಪದ್ಯದಲ್ಲಿ ಹೇಳಿರುವುದರಿಂದ ಉಪನಿಷದ್ವಾಕ್ಯಗಳಿಗೆ ಪ್ರತ್ಯೇಕ ಅರ್ಥ ಬರಿಯಲಿಲ್ಲ. ಗಗನ ಅಂದರೆ ಆಕಾಶವು, ಪಾವಕ=ಅಗ್ನಿ ; ಸೂರ್ಯನು ಕಾಷ್ಠ, ಸೂರ್ಯನ ಕಿರಣಗಳು ಧೂಮ, ಹಗಲು ಜ್ವಾಲೆಯು, ನಕ್ಷತ್ರಗಳು ಕಿಡಿಗಳು, ಚಂದ್ರನು ಕೆಂಡ, ಚಂದ್ರನೊಳಗೆ ಅಂದರೆ, ಚಂದ್ರಾದಿ ಐವರೊಳಗೆ ಅನಿರುದ್ಧಾದಿ ೫ ರೂಪಗಳನ್ನು ಚಿಂತಿಸಿ, ಭಕ್ತಿರಸಪೂರ್ಣವಾದ ಮಾತುಗಳೆಂಬ ಹೋಮದ್ರವ್ಯಗಳನ್ನು ಜ್ಞಾನಿಗಳು ಹೋಮಮಾಡುವರು. ಅಗ್ನಿ, ಕಾಷ್ಠ, ಧೂಮ, ಜ್ವಾಲೆ, ಕಿಡಿ, ಕೆಂಡಗಳೆಂಬ ಆರರಲ್ಲಿಯೂ ತಚ್ಛಬ್ಧವಾಚ್ಯನಾಗಿಯೂ, ಆಕಾಶದಲ್ಲಿ ನಾರಾಯಣ, ಸೂರ್ಯನಲ್ಲಿ ನಾರಾಯಣ ನಾರಾಯಣ, ಕಿರಣಗಳಲ್ಲಿ ನಾರಾಯಣ ವಾಸುದೇವ, ಹಗಲುಗಳಲ್ಲಿ ನಾರಾಯಣ ಸಂಕರ್ಷಣ, ನಕ್ಷತ್ರಗಳಲ್ಲಿ ನಾರಾಯಣ ಪ್ರದ್ಯುಮ್ನ, ಚಂದ್ರನಲ್ಲಿ ನಾರಾಯಣಾನಿರುದ್ಧ, ಹೀಗೆ ಅಖಂಡವಾದ ಆಕಾಶಾಗ್ನಿಯಲ್ಲಿ ನಾರಾಯಣರೂಪವನ್ನೂ, ಉಳಿದ ಕಾಷ್ಠಾದಿಗಳಲ್ಲಿ ನಾರಾಯಣಾದಿ ೫ ರೂಪಗಳನ್ನೂ ಅಂತು ೬ ರೂಪಗಳನ್ನು ಚಿಂತಿಸಬೇಕು. ಛಾಂದೋಗ್ಯೋಪನಿಷತ್ತಿನ ಮೇಲಿನ ವಾಕ್ಯಗಳ ಭಾಷ್ಯದಲ್ಲಿ '' ನಾರಾಯಣಾದಯಃ ಪಂಚಕ್ರಮಾತ್ಪಂಚಾಗ್ನಯಃಸ್ಮೃತಾಃ || ಅದನಾದಂದ ನೇತೃತ್ವಾನಿತರಾಮಚಲತ್ವತಃ || ಸಮೇಧನಾತ್ಸಮಿದ್ವಿಷ್ಣುರ್ಧೂಕ್ತಾರಾದ್ಧೂಮ ಉಚ್ಯತೆ || ಅರಂಚಿದಾದರ್ಚಿಶ್ಚ ಸೋಂಗಾರೋಂಗರತೇರಪಿ || ವಿವಿಧಂ ಸ್ಫುರಣಾಚ್ಚೈವ ವಿಷ್ಫುಲಿಂಗ ಇತೀರಿತಃ|| ಪುನರ್ನಾರಾಯಣಾದ್ಯತ್ಮಾ ಪ್ರತ್ಯೇಕಂ ಪಂಚರೂಪವಾ|| ಆದಿತ್ಯಃ ಸತಥಾದಾನಾದ್ರಶ್ಮೀರತಿ ಶರೂಪತಃ || ತಮುಸಾಹನ ನೀಯತ್ವಾದಹಶ್ಚಂದ್ರಃ ಪರಂ ಸುಖಂ ಅನನ್ಯರಾಜೋ ನಕ್ಷತ್ರಂ'' ಇದರ ಅರ್ಥ :—

ಆಕಾಶ, ಮೇಘ, ಭೂಮಿ, ತಂದೆ (ಪುರುಷ) ತಾಯಿ (ಸ್ತ್ರೀ) ಈ ಪಂಚಾಗ್ನಿಗಳಲ್ಲಿ, ನಾರಾಯಣಾದಿ ೫ ರೂಪಗಳನ್ನು ಅಂದರೆ ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧಗಳೆಂಬ ಪಂಚರೂಪಗಳನ್ನು ಚಿಂತಿಸಬೇಕು. ಮತ್ತು ಅಗ್ನ್ಯಾದಿ ಹೆಸರು ಪರಮಾತ್ಮನದೆಂದು ತಿಳಿಯಬೇಕು. ಹೇಗೆಂದರೆ, ಆ-ಕಾ-ಶ ಶಬ್ದದಿಂದ ಚೆನ್ನಾಗಿ ಪ್ರಕಾಶಮಾನನಾಗಿ

ಇರುವುದರಿಂದ ಆಕಾಶನೆಂದು ನಾರಾಯಣನಿಗೆ ಹೆಸರು. ಅದೇ ನಾರಾಯಣನು ಅಗ್ನಿನಾಮಕನು "ಅತ್ತೀತ್ಯಗ್ನಿಃ" ಪ್ರಪಂಚವನ್ನೆಲ್ಲಾ ಭಕ್ಷಿಸುವುದರಿಂದ, ಅಂದರೆ ತನ್ನ ಉದರದಲ್ಲಿ ಪ್ರಳಯದಲ್ಲಿ ಇಟ್ಟುಕೊಂಡಿರುವುದರಿಂದಲೂ, ಸರ್ವಕಾಲದಲ್ಲಿ ಪರಮಾತ್ಮನ ಉದರದಲ್ಲಿ ಜಗತ್ತು ಇದ್ದೇ ಇರುವುದರಿಂದ ಜಗತ್ತನ್ನು ಭಕ್ಷಿಸುವನೆಂದು ವ್ಯವಹಾರ, ಅಥವಾ ಅಗ್ನಿರೂಪದಿಂದ ಸರ್ವಭಕ್ಷಕನಾದುದರಿಂದಲೂ ಅಗ್ನಿ ಎಂದು ನಾರಾಯಣನಿಗೆ ಹೆಸರು. 'ತಸ್ಯಾದಿತ್ಯ ಏವಸಮಿತ್' ಈ ಆಕಾಶಾಗ್ನಿಗೆ ಆದಿತ್ಯನೇ ಸಮಿತ್ ಅಂದರೆ ಕಾಷ್ಟವೆಂದು ಹೇಳಿರುವರು. ಇದರ ಖಂಡಾರ್ಥದಲ್ಲಿ 'ಆದಿತ್ಯಃ ಆದತ್ತ ಇತ್ಯಾದಿತ್ಯನಾಮಾ ಆದಿತ್ಯಸ್ಥೋ ನಾರಾಯಣ ನಾರಾಯಣಾತ್ಮಾ' ॥ ಸಕಲ ಜನರು ಮಾಡುವ ಪೂಜಾದಿಗಳನ್ನು ಸ್ವೀಕರಿಸುವನು ; ಅಥವಾ, ಭೂಮಿಯಲ್ಲಿರುವ ಉದಕಗಳನ್ನೆಲ್ಲಾ ತೆಗೆದುಕೊಳ್ಳುವುದರಿಂದ ಆದಿತ್ಯನೆಂದು ಹೆಸರು. ಇಂತಹ ಆದಿತ್ಯನಾಮಕ ಪರಮಾತ್ಮನು ನಾರಾಯಣ ನಾರಾಯಣ ಸ್ವರೂಪನೆಂದು ತಿಳಿಯಬೇಕು. ಸಮಿಧನೆಂದರೂ ಪರಮಾತ್ಮನೇ ' ಸಮೇಧನಾತ್ಸಮಿದಿತ್ಯುಚ್ಯತೆ' ಎಲ್ಲರನ್ನು ವೃದ್ಧಿಗೊಳಿಸುವುದರಿಂದ ಸಮಿತ್ ಎಂದು ಪರಮಾತ್ಮನಿಗೆ ಹೆಸರು. ' ರಶ್ಮಯೋಧೂಮಃ ' ರಶ್ಮಿಗಳೆಂದರೆ ಕಿರಣಗಳು, ಧೂಮವೆಂದರ್ಥ 'ರತಿಶಂರೂಪತ್ವೇನ ರಶ್ಮಿನಾಮಾ ; ರಶ್ಮಿಗತೋ ನಾರಾಯಣೋ ವಾಸುದೇವಾತ್ಮಾ ದೂತ್ಕರೋತಿನಿರಾಕರೋತೀತ್ಯಜ್ಞಾನಾದೀನಿತಿ ಧೂಮನಾಮೋಚ್ಯತೆ' ರತಿ ಸುಖರೂಪನಾದುದರಿಂದ ರಶ್ಮಿಯೆಂದು ಪರಮಾತ್ಮನಿಗೆ ಹೆಸರು. ಈ ರಶ್ಮಿಗತರೂಪ ನಾರಾಯಣ ವಾಸುದೇವ ಸ್ವರೂಪವೆಂದು ತಿಳಿಯಬೇಕು, ಅಜ್ಞಾನಾದಿಗಳನ್ನು ನಿರಾಕರಿಸುವುದರಿಂದ ಧೂಮನೆಂದು ಪರಮಾತ್ಮನಿಗೆ ಹೆಸರು. 'ಅಹರರ್ಚಿಃ' ಹಗಲು, ಜ್ವಾಲೆಯೆಂದರು ಇದರರ್ಥ, ತಮಸಾ ಅಹನನೀಯತ್ವಾದಹರ್ನಾಮ ಗತೋನಾರಾಯಣ ಸಂಕರ್ಷಣಾತ್ಮಾ' ಅರ್ಚಿಃ ಅರಂಚಿತತ್ವೇನಾರ್ಚಿರಿತ್ಯುಚ್ಯತೆ' ಕತ್ತಲಿನಿಂದ ಹಾನಿಯು ಆಗದಿರುವುದರಿಂದ ಪರಮಾತ್ಮನಿಗೆ ' ಅಹಃ ' ಅಂದರೆ ಹಗಲು ಎಂದು ಹೆಸರು. ಈ ಅರ್ಹಗತ ರೂಪವು ನಾರಾಯಣ ಸಂಕರ್ಷಣ ರೂಪವೆಂದು ತಿಳಿಯಬೇಕು. ವಿಕಾರ ಹೊಂದದೆ ಯಾವಾಗಲೂ ಒಂದೇರೀತಿ ಪ್ರಕಾಶಮಾನನಾಗಿ ಇರುವುದರಿಂದ ಅರ್ಚಿಯೆಂದು ಪರಮಾತ್ಮನಿಗೆ ಹೆಸರು. "ಚಂದ್ರಮಾಂ ಅಂಗಾರಾಃ" ಚಂದ್ರನು ಕೆಂಡಯೆಂಬದರ ಅರ್ಥ. "ಸುಖರೂಪತ್ವಾಚ್ಚಂದ್ರನಾಮಾ

| | | |
|---|---|---|
| ನಾಗ=ನಾ=೫, ಗ=೩ | ವಾಮಾಂಕಮಾಡಿದರೆ | ೩೫ |
| ಕೃಕಳ=ಕೃ=೩, ಕ=೧, ಳ=೯ | ,, | ೯೧೩ |
| ಕೂರ್ಮ=ಕೂ=೧, ರ್ಮ=೭ | ,, | ೭೧ |
| ದೇವದತ್ತ=ದೇ=೩ ವ=೪ ದ=೩ ತ್ತ=೨ | ,, | ೨೩೪೩ |
| ಧನಂಜಯ=ಧ=೪ ನ=೫ ಂ=೦ ಜ=೩ ಯ=೧ | | ೧೩೦೫೪ |
| | | ೧೬೪೧೬ |

ಈ ಪ್ರಕಾರ ೧೬೪೧೬ ನಾಗಾದಿ ಪ್ರಾಣಗಳಲ್ಲಿ ತಮೋಗುಣಾಭಿಮಾನಿ ಶ್ರೀ ದುರ್ಗಾದೇವಿಯ ಪತಿಯಾದ ಪರಮಾತ್ಮನು ಇದ್ದು ತಾಮಸರಶಬ್ದಾದಿ ಮಾತ್ರಾಗುಣಗಳಿಗೆ ವಿಷಯೀಭೂತವಾದ ತಾಮಿಸ್ರ ಅಂಧತಾಮಿಸ್ರ ಮಹಾ ಮೋಹ, ಮೋಹ, ತಮಸ್ ಎಂಬ ಅಜ್ಞಾನವೃತ್ತಿಗಳಲ್ಲಿ ಪ್ರೇರಿಸುವನು.

ಐದು ವಿದ್ಯಗಳೊಳಗೆ ಇಹನಾ
ಗಾದಿಗಳ ಧಿಷ್ಠಾನದಲಿ ಲಕು
ಮೀಧವನು ಕೃದ್ಧೋಲ್ಕ ಮೊದಲಾ ದೈದುರೂಪಗಳ ||
ತಾಧರಿಸಿ ಸಜ್ಜನರವಿದ್ಯವ
ಭೇದಿಸುವ ತಾಮಸರಿಗಜ್ಞಾ
ನಾದಿಗಳ ಕೊಟ್ಟವರವರ ಸಾಧನವಮಾಡಿಸುವ || ೧೨ ||

ಪದ್ಯಾರ್ಥ :— ಐದುವಿದ್ಯಗಳೊಳಗೆ = ತರ್ಕ, ವ್ಯಾಕರಣ, ಮೀಮಾಂಸಾ, ಛಾಂದಸ, ಅಲಂಕಾರಗಳೆಂಬ ೫ ವಿದ್ಯೆಗಳೊಳಗೆ, ಇಹ= ಇರುವ, ನಾಗಾದಿಗಳ= ನಾಗಾದಿ ಪಂಚಪ್ರಾಣರ ಅಧಿಷ್ಠಾನದಲಿ = ಅಂತರ್ಯಾಮಿಯಾಗಿ, ಲಕುಮೀಧವನು=ಲಕ್ಷ್ಮೀಪತಿಯು, ಕೃದ್ಧೋಲ್ಕ ಮೊದಲಾದ= ಕೃದ್ಧೋಲ್ಕ, ಮಹೋಲ್ಕ, ವೀರೋಲ್ಕ, ದ್ಯುಲ್ಕ, ಸಹಸ್ರೋಲ್ಕಗಳೆಂಬ ಐದು ರೂಪಗಳ= ೫ ರೂಪಗಳನ್ನು, ತಾ= ತಾನು ಧರಿಸಿ= ಸ್ವೀಕರಿಸಿ, ಸಜ್ಜನರ, ಅವಿದ್ಯವ, ಮಹಾಮೋಹಾದಿ ಜನ್ಯವಾದ ಅನ್ಯಥಾ ಜ್ಞಾನಾದಿಗಳನ್ನು ಭೇದಿಸುವ= ಪರಿಹರಿಸುವ. ತಾಮಸರಿಗೆ, ಅಜ್ಞಾನಾದಿಗಳಕೊಟ್ಟು, ಅವರವರ= ಮುಕ್ತಿಯೋಗ್ಯತಮೋಯೋಗ್ಯಜೀವರ ಯೋಗ್ಯತಾನುಸಾರವಾಗಿ, ಸಾಧನವ, ಮಾಡಿಸುವ= ಮಾಡಿಸುವನು.

ತಾತ್ಪರ್ಯ :—ಮೇಲಿನ ಪದ್ಯದಲ್ಲಿ ನಾಗಾದಿ ಪಂಚಪ್ರಾಣರು ಸಕಲ ಜನರ ಶಬ್ದಾದಿಗಳಲ್ಲಿರುವರೆಂದು ಹೇಳಿ, ಇವರಂತರ್ಯಾಮಿ ಪರಮಾತ್ಮನು, ಅಯೋಗ್ಯಜನರಲ್ಲಿ ತಮೋಭಿಮಾನಿ ದುರ್ಗಾಪತಿರೂಪನಾಗಿ ನಿಂತು, ಅವಿದ್ಯಾ ಪಂಚಪರ್ವ ಸಂಬಂಧವಾದ ಅನ್ಯಥಾಜ್ಞಾನಾದಿಗಳಲ್ಲಿ ಪ್ರೇರಿಸುವನೆಂದು ಹೇಳಿದರು. ಈಗ ಅದೇ ನಾಗಾದಿಪ್ರಾಣರ ಅಂತರ್ಯಾಮಿಯಾಗಿ ಸಜ್ಜನರಲ್ಲಿ ಪರಮಾತ್ಮನು ಏನು ಮಾಡಿಸುವನೆಂದು ಹೇಳುತ್ತಾರೆ.

ಅಯೋಗ್ಯರಿಗೆ ೫ ವಿಧವಾದ ಅವಿದ್ಯೆಯಲ್ಲಿ ಬುದ್ಧಿಯನ್ನು ಪ್ರೇರಿಸುವಂತೆ ಸಜ್ಜನ ಶಬ್ದಾದ್ಯಧಿಷ್ಠಾನದಲ್ಲಿದ್ದು, ತರ್ಕ, ವ್ಯಾಕರಣ, ಮೀಮಾಂಸಾ, ಛಂದಸ್, ಅಲಂಕಾರಗಳೆಂಬ ಪಂಚವಿದ್ಯಾಪ್ರೇರಕನಾಗಿ, ನಾಗಾದಿಪಂಚ ಪ್ರಾಣರೊಳಗೆ ಶ್ರೀಲಕ್ಷ್ಮೀಪತಿಯು, ಹೃದ್ಯೋಲ್ಕ, ಮಹೋಲ್ಕ ವೀರೋಲ್ಕ, ದ್ಯುಲ್ಕ, ಸಹಸ್ರೋಲ್ಕಗಳೆಂಬ ೫ ರೂಪಗಳಿಂದ ಇದ್ದು ಅವರವರ ಯೋಗ್ಯತಾನುಸಾರ ಅಂದರೆ ಮುಕ್ತಿಯೋಗ್ಯರಿಗೆ ಮುಕ್ತಿಸಾಧನವನ್ನು ಮಾಡಿಸುವನು. ತಮೋಯೋಗ್ಯರಿಗೆ ತಮುಸ್ಸಾಧನವನ್ನೂ ಮಧ್ಯಮರಿಗೆ ಮಿತ್ರ ಲೋಕದ ಸಾಧನವನ್ನೂ ಮಾಡಿಸುವನು.

ಗೋವುಗಳೊಳುದ್ಗೀಥನಿಹಪ್ರ
ಸ್ತಾವಹಿಂಕಾರೆರಡು ರೂಪದ
ಲಾವಿಯ ಜಗಳೊಳಗಿಹನು ಪ್ರತಿಹಾರಾಹ್ವಯಗಳೊಳು ||
ಜೀವನಪ್ರದ ನಿಧನವಮನುಜರೊ
ಳೀವಿಧದಲಿಹ ಪಂಚಸಾಮವರಘೂವ
ರಘೂವಕೆನೆನವರಿಗೆ ಯೈದಿಸನು ಜನುಮಗಳ || ೧೪ ||

ಪದ್ಯಾರ್ಥ :—ಗೋವುಗಳೊಳು = ಗೋವುಗಳಲ್ಲಿ, ಉದ್ಗೀಥನು = ಉದ್ಗೀಥನಾಮಕ ಪರಮಾತ್ಮನು, ಇಹ = ಇರುವನು, ಪ್ರಸ್ತಾವ = ಪ್ರಸ್ತಾವ ನಾಮಕನೂ, ಹಿಂಕಾರ = ಹಿಂಕಾರನಾಮಕನೂ, ಎರಡುರೂಪದಲಿ = ಈ ಎರಡು ರೂಪಗಳಿಂದ, ಆವಿಯಜಗಳೊಳು = ಕುರಿಮೇಕೆಗಳಲ್ಲಿ, ಇಹನು = ಇರುವನು. ಹಯಗಳೊಳು ಕುದುರೆಗಳಲ್ಲಿ, ಪ್ರತಿಹಾರಾಹ್ವಯ = ಪ್ರತಿಹಾರ ನಾಮಕನು (ಇರುವನು) ಜೀವನಪ್ರದ = ಜೀವನವನ್ನು ಕೊಟ್ಟುದ್ಧರಿಸುವ ಶ್ರೀಪರಮಾತ್ಮನು, ನಿಧನನಾಮಕನಾಗಿ, ಮನುಜರೊಳು = ಮನುಷ್ಯರೊಳಗೆ (ಇರುವನು) ಈವಿಧದಲಿ = ಈ ಪ್ರಕಾರವಾಗಿ, ಇಹ = ಇರುವ, ಪಂಚ

ಸಾಮವ=ಸಾಮವೇದ ಪ್ರತಿಪಾದ್ಯವಾದ ಈ ೫ ರೂಪಗಳನ್ನು, ಜ್ಞಾಂವಜ್ಞಾಂವಕೆ=ಪ್ರತಿಜ್ಞಾಂವದಲ್ಲಿ, ನೆನೆವರಿಗೆ=ಸ್ಮರಿಸುವವರಿಗೆ, ಜನುಮಗಳ =ಜನ್ಮಗಳನ್ನು ಯ್ಯೆದಿಸನು=ಕೊಡಿಸನು. (ಪುನರ್ಜನ್ಮವಿಲ್ಲದೆ ಮಾಡುವನು)

ತಾತ್ಪರ್ಯ :—ಪ್ರಸಿದ್ಧವಾದ ಪಂಚವಿಧ ಪಶುಗಳಲ್ಲಿ ಭಗವದ್ರೂಪಗಳನ್ನು ಉಪಾಸನೆಮಾಡುವ ಪ್ರಕಾರವನ್ನು ಹೇಳುತ್ತಾರೆ.—

ಗೋವುಗಳಲ್ಲಿ, ಸದ್ಗತಿಪ್ರದನಾದ್ದರಿಂದ ಗೋ ಶಬ್ದವಾಚ್ಯನಾದ ಪರಮಾತ್ಮನಿರುವನು, ಅವುಗಳಲ್ಲಿ ಉದ್ಗೀಥನಾಮದಿಂದ ಶ್ರೀ ನಾರಾಯಣನು ಇರುವನು. ಉದ್ಗೀಥಾದಿನಾಮಗಳ ಸಂಕೇತವೇನೆಂದರೆ, ಸಾಮವೇದವನ್ನು ಅಧ್ಯಯನ ಮಾಡುವವರು ಇವುಗಳನ್ನು ತಿಳಿದಿರುವರು. ಉದ್ಗೀಥ, ಪ್ರಸ್ತಾವ, ಹಿಂಕಾರ, ಪ್ರತಿಹಾರ, ನಿಧನವೆಂಬ ೫ ಪ್ರಕಾರವಾಗಿ ಸಾಮಗಾನವು ಭಾಗಿಸಲ್ಪಟ್ಟಿರುವುದು. ಇವು ಐದರಲ್ಲಿ ನಾರಾಯಣ ವಾಸುದೇವಾದಿ ಐದು ರೂಪಗಳಿಂದ ಪರಮಾತ್ಮನಿರುವನು. ಈ ರೂಪಗಳನ್ನು ಪ್ರಸಿದ್ಧವಾದ ಯಜ್ಞಸಾಧನವಾದ ಪಂಚಪಶುಗಳಲ್ಲಿ ಉಪಾಸನೆ ಮಾಡಬೇಕು. ಗೋವುಗಳಲ್ಲಿ ಉದ್ಗೀಥನಾಮಕ ನಾರಾಯಣರೂಪವನ್ನು ಚಿಂತಿಸಬೇಕು. ಕುರಿಮೇಕೆಗಳಲ್ಲಿ ತನ್ನಾಮಕನಾಗಿ ತದಾಕಾರನಾಗಿ ಪರಮಾತ್ಮನಿರುವನು. ಅವೆರಡರಲ್ಲಿ ಪ್ರಸ್ತಾವನಾಮಕ ವಾಸುದೇವರೂಪವನ್ನೂ ಹಿಂಕಾರನಾಮಕ ಸಂಕರ್ಷಣರೂಪವನ್ನು ಚಿಂತಿಸಬೇಕು. ಕುದುರೆಯಲ್ಲಿ ತದ್ರೂಪಿತನ್ನಾಮಕನಾಗಿ ಇರುವನು. ಅವುಗಳಲ್ಲಿ ಪ್ರತಿಹಾರನಾಮಕನಾಗಿ ಪ್ರದ್ಯುಮ್ನರೂಪಿಯಾದ ಶ್ರೀ ಪರಮಾತ್ಮನಿರುವನು. ಜಗದ್ರಕ್ಷಕನಾದ ಶ್ರೀ ಪರಮಾತ್ಮನು ಮನುಷ್ಯರಲ್ಲಿ ತದಾಕಾರನಾಗಿ ತಚ್ಛಬ್ದನಾಗಿರುವನು. ಅವರಲ್ಲಿ ನಿಧನನಾಮಕ ಅನಿರುದ್ಧ ರೂಪವನ್ನು ಚಿಂತಿಸಬೇಕು. ಹೀಗೆ ಪ್ರತಿಝೂವದಲ್ಲೂ ಪಂಚಸಾಮ ಪ್ರತಿಪಾದ್ಯ ೫ ರೂಪಗಳನ್ನು ಚಿಂತನೆಮಾಡುತ್ತಿರುವವರಿಗೆ ಜನ್ಮ ಬಾರದಂತೆ ಮುಕ್ತಿಯನ್ನು ಕೊಟ್ಟುದ್ಧರಿಸುವನು. ದಾಸರಾಯರು ಹೇಳದಿರುವ ನಾರಾಯಣ ವಾಸುದೇವಾದಿ ರೂಪಗಳ ಕಲ್ಪನವೇಕೆಂದು ಆಕ್ಷೇಪಿಸಬಾರದು. ಉದ್ಗೀಥಾದಿ ಶಬ್ದಗಳ ಪ್ರತಿಪಾದ್ಯನು ನಾರಾಯಣಾದಿ ರೂಪಿಯಾದ ಪರಮಾತ್ಮನೆಂದು ಶ್ರೀಮದಾಚಾರ್ಯರು ಛಾಂದೋಗ್ಯೋಪನಿಷತ್ತಿನ ಭಾಷ್ಯದಲ್ಲಿ ಹೇಳಿರುವರು. ಛಾಂದೋಗ್ಯೋಪನಿಷತ್ತು ೨ನೆಯ ಅಧ್ಯಾಯ, ೬ನೆಯ ಖಂಡ, 'ಪಶುಷು ಪಂಚವಿಧಜ್ ಸಾಮೋಪಾಸೀತಾ ಜಾಹಿಂಕಾ

ರೋಽವಯಃ ಪ್ರಸ್ತಾವೋಗಾವ ಉದ್ಗೀಥೋಽಶ್ವಾಃ ಪ್ರತಿಹಾರಃ ಪುರುಷೋ ನಿಧನಂ ಭವಂತಿಹಾಸ್ಯಪಶವಃ, ಪಶುಮಾನ್ಭವತಿಯ ಏತದೇವಂ ವಿದ್ವಾನ್ ಪಶುಷುಪಂಚವಿಧಙ್ ಸಾಮೋಪಾಸ್ತೆ' ಪಶುಗಳಲ್ಲಿ ೫ ವಿಧ ಸಾಮವನ್ನು ಉಪಾಸನೆ ಮಾಡಬೇಕು, ಎಂದು ದಾಸರಾಯರು ಪದ್ಯದಲ್ಲಿ ಹೇಳಿದ ಅರ್ಥವನ್ನು ಹೇಳಿ, ಕಡೆಗೆ ಐದುವಿಧ ಸಾಮಪ್ರತಿಪಾದ್ಯವಾದ ೫ ರೂಪ ಗಳನ್ನು ಪ್ರಸಿದ್ಧವಾದ ೫ ಪಶುಗಳಲ್ಲಿ ಯಾವನು ತಿಳಿಯುವನೋ ಅವನು ಪಶುವಂತನಾಗುವನು ಎಂದು ಹೇಳಿರುವರು. ಅಂದರೆ ಪಶುನಾಮಕ ಪರಮಾತ್ಮನನ್ನು ಹೊಂದುವನೆಂದು ತಾತ್ಪರ್ಯ. ಈ ಉಪನಿಷದ್ಭಾಷ್ಯದಲ್ಲಿ 'ಸಾಧುತ್ವಾತ್ಸಾಮನಾಮಾನಂ ಸಮಸ್ತಗುಣಪೂರ್ಣತಃ ॥ ಸಮಸ್ತಂಯ ಉಪಾಸೀತ ನಾರಾಯಣ ಮನಾಮಯಂ ॥ ಸರ್ವಸಾಮ್ನಾಂ ದೇವತೇತಿ ಸಮುಕ್ತಃ ಸಾಧುಧರ್ಮಭಾಗಿತಿ ಸಾಮಸಂಹಿತಾಯಾಮ್ ॥ ನಾರಾಯಣಾಖ್ಯ ಉದ್ಗೀಥಃ ಉದ್ಗೇಯಃ ಪ್ರಣವೇನಯತ್ ॥ ಉದ್ಗಂಚ್ಛಂತಿ ಯತೋಽಸ್ಮಾದ್ವಾ ವಾಸುದೇವಾದಿ ಮೂರ್ತಯಃ । ಪ್ರಥಾಮಾವತಾರ ರೂಪತ್ವಾದ್ವಾಸುದೇವಃ ಪರಃಪುಮಾನ್ ॥ ಪ್ರಸ್ತಾವೋ ನಿಧನಂಚಾಪಿ ಸಂಕರ್ಷಣ ಉದಾಹೃತಃ ಸಂಕರ್ಷಣೋಽಹಿ ಸಂಹರ್ತಾ ಪ್ರಿದ್ಯುಮ್ನಃ ಪರಮೇಶ್ವರಃ ॥ ಹಿಂಕಾರಇತಿ ಸಂಪ್ರೋಕ್ತೋ ಹೀತಿಸೃಷ್ಟಿರುದೀರ್ಯತೇ ॥ ಪ್ರಸಿದ್ಧತಾಹಿಸೃಷ್ಟಿಃ ಸ್ಯಾದನಿ ರುದ್ಧಃ ಪರೋವಿಭುಃ ॥ ಪ್ರತೀಹಾರ ಇತಿಪ್ರೋಕ್ತಃ ಸಹಿಕಾರ್ಯೈಷ್ಟಿದಂಜಗತ್॥ ಪ್ರತಿಪ್ರತಿಹರೇನ್ನಿತ್ಯಂ ಮೂರ್ತಿಪ್ರತಿಹೃತೇಸ್ತಥಾ ॥ ಪಾಲನಾತ್ಸುಖ ಕಾರಿ ತ್ವಾತ್ ಪಶುನಾಮಾಜನಾರ್ದನಃ ॥ ಮುಕ್ತಸ್ತದ್ವಾನ್ ಭವತ್ಯೇವ ಪಶುಷೂ ಪಾಸಕೋ ಹರೇರಿತಿಚ ॥ ಯಜ್ಞೇನಾಂಚನ ಹೇತುತ್ವಾದಜಸ್ಥೋ ಭಗವಾನ ಜಃ ॥ ಅವಿಸ್ಥಸ್ತ್ವವಿರೇಪ್ರೋಕ್ತಃ ಊರ್ಣಶಾಯೀ ತತೋಽವನಾತ್ ॥ ಗೌಶ್ಚ ಸದ್ಗತಿ ಹೇತುತ್ವಾ ದ್ಗೋಸ್ಥಃ ಸಪುರುಷೋತ್ತಮಃ । ಅಶ್ವಶ್ಚೈವಾಶು ಗಂತೃ ತ್ವಾತ್ಪುರುಷಃ ಪೂರ್ತಿಹೇತುತ ಇತಿಚ । ಅಜಾಇತ್ಯಾದಿ ಬಹುವಚನಂ ಬಹು ರೂಪತ್ವಾದ್ಭಗವತಃ ॥ ೬ ॥ ಇವುಗಳ ತಾತ್ಪರ್ಯಾರ್ಥ :—

ಸಮಸ್ತಗುಣ ಪೂರ್ಣನಾದುದರಿಂದಲೂ, ಸಾಧುವಾದುದರಿಂದಲೂ, ಪರಮಾತ್ಮನಿಗೆ ಸಾಮನೆಂದು ಹೆಸರು. ಹೀಗೆ ಸಕಲ ಸಾಮಗಳ ಪ್ರತಿ ಪಾದ್ಯನೂ, ಅಥವಾ ಸಕಲಸಾಮದೇವತಾ ಪರಮಾತ್ಮನೆಂದು ಯಾವನು ಉಪಾಸನಮಾಡುವನೋ ಅವನು ಸಾಧುಧರ್ಮಭಾಗಿಯು, ಅವನು ಮುಕ್ತಿ

ಯನ್ನು ಹೊಂದುವನು ಎಂದು ಸಾಮಸಂಹಿತೆಯಲ್ಲಿ ಹೇಳಿರುವರು. ಶ್ರೀನಾರಾಯಣನು ಪ್ರಣವಮಂತ್ರದಿಂದ ಉತ್ಕೃಷ್ಟನೆಂದು ಹೇಳಿಸಿಕೊಳ್ಳಲ್ಪಡುವುದರಿಂದಲಾಗಲಿ, ಅಥವಾ, ನಾರಾಯಣರೂಪದಿಂದಲೇ ವಾಸುದೇವಾದಿ ಮೂರ್ತಿಗಳು ಹೊರಡುವುದರಿಂದಲಾಗಲಿ ಉದ್ಗೀಥನೆಂದು ಹೆಸರು. ಪ್ರಥಮಾವತಾರ ರೂಪನಾದುದರಿಂದ ವಾಸುದೇವನಿಗೆ ಪ್ರಸ್ತಾವನೆಂದು ಹೆಸರು. ಸಂಹಾರ ಕರ್ತನಾದುದರಿಂದ ನಿಧನನೆಂದು ಸಂಕರ್ಷಣನಿಗೆ ಹೆಸರು. ಪರಮೇಶ್ವರನಾದುದರಿಂದ ಪ್ರದ್ಯುಮ್ನನು. ಹಿ ಅಂದರೆ ಸೃಷ್ಟಿಯೆಂದರ್ಥ. ಸೃಷ್ಟಿಕರ್ತನಾದುದರಿಂದ ಹಿಂಕಾರನೆಂದು ಪ್ರದ್ಯುಮ್ನನಿಗೆ ಹೆಸರು. ಉತ್ತಮರಾದ ಬ್ರಹ್ಮಾದಿಗಳಿಗೆ ಪ್ರಭುವಾದುದರಿಂದ ಅನಿರುದ್ಧನೆಂದು ಹೆಸರು. ಒಂದೊಂದು ಕಾರ್ಯದಲ್ಲಿಯೂ ಈ ಜಗತ್ತನ್ನು ಪ್ರತಿಹರಣ ಮಾಡುವುದರಿಂದಲೂ, ಮೂರ್ತಿಗಳನ್ನು ಪ್ರತಿಹರಣಮಾಡುವುದರಿಂದಲೂ ಪ್ರತಿಹಾರನೆಂದು-ಅನಿರುದ್ಧನೆಂದು ಹೆಸರು, ಪಾಲನಮಾಡುವುದರಿಂದಲೂ, ಸುಖಕರನಾದುದರಿಂದಲೂ, ಪಶುವೆಂದು ಜನಾರ್ದನಿಗೆ ಹೆಸರು. ಪಶುವಂತನಾಗುತ್ತಾನೆ ಎಂದರೆ ಮುಕ್ತನಾಗಿ ಪಶುನಾಮಕ ಪರಮಾತ್ಮನನ್ನು ಶೇರುತ್ತಾನೆಂದು ಅರ್ಥ. ಯಜ್ಞೋಪ ಯೋಗವಾದುದರಿಂದ ಅಜಯೆಂದು ಮೇಕೆಗಳಲ್ಲಿರುವ ಪರಮಾತ್ಮನಿಗೆ ಹೆಸರು. ಆವಿ ಅಂದರೆ ಕುರಿಗಳು. ಅವುಗಳಲ್ಲಿರುವ ಪರಮಾತ್ಮನಿಗೂ ಆವಿಯೆಂದು ಹೆಸರು. ಕುರಿಗಳ ರೋಮಗಳಿಂದಾಗುವ ಧಾವಳಿ ಶಾಲು ಮೊದಲಾದವುಗಳಿಂದ ಛಳಿಗಳಿಂದ ಸಂರಕ್ಷಿಸುವುದರಿಂದ ಆವಿಯೆಂದು ಹೆಸರು. ಸದ್ಗತಿಗೆ ಕಾರಣನಾದುದರಿಂದ ಗೋವುವಳಗಿನ ಪರಮಾತ್ಮನಿಗೆ ಗೋವೆಂದು ಹೆಸರು. ಅಶುಗಂತಾ= ವೇಗವಾಗಿ ಹೋಗುವನಾದುದರಿಂದ ಅಶ್ವನೆಂದು ಅಶ್ವದೊಳಗಿರುವ ಪರಮಾತ್ಮನಿಗೆ ಹೆಸರು. ಪೂರ್ತಿಮಾಡಲು ಕಾರಣಭೂತನಾದುದರಿಂದ ಪುರುಷನೆಂದು ಹೆಸರು. ಪರಮಾತ್ಮನು ಬಹುರೂಪಿಯಾದುದರಿಂದ ಮೇಕೆಗಳು ಕುರಿಗಳು ಎಂಬ ಬಹುವಚನವು ಪರಮಾತ್ಮನಿಗೆ ಯೆಂದು ಅರ್ಥ. ಈ ಪ್ರಮಾಣಗಳನ್ನು ಮನಸ್ಸಿನಲ್ಲಿಟ್ಟುಕೊಂಡೇ ದಾಸರಾಯರು ಪಶುಗಳಲ್ಲಿ ಪಂಚಸಾಮವನ್ನು ಉಪಾಸನೆಮಾಡಬೇಕೆಂದು ಹೇಳಿರುವರು.

ಯುಗಚತುಷ್ಟಯಗಳಲಿ ತಾನಿ
ದ್ಯುಗಪ್ರವರ್ತಕ ಧರ್ಮಕರ್ಮಗ
ಳಿಗೆಪ್ರಾವರ್ತಕ ವಾಸುದೇವಾದೀರೆರಡುರೂಪಾ ||

ತಗೆದು ಕೊಂಡು ಯುಗಾದಿ ಕೃತುತಾ
ಯುಗ ಪ್ರವರ್ತಕನೆನಿಸಿ ಧರ್ಮ
ಪ್ರಘಟಕನು ತಾನಾಗಿ ಭಕತರಿಗೀವ ಸಂಪದವ || ೧೫ ||

ಪದ್ಯಾರ್ಥ :—ಯುಗಚತುಷ್ಟಯುಗಳಲಿ= ಕೃತ, ತ್ರೇತಾ, ದ್ವಾಪರ, ಕಲಿಯೆಂಬ ೪ ಯುಗಗಳಲ್ಲಿ, ತಾನಿದ್ದು, ಯುಗಪ್ರವರ್ತಕ= ಆಯಾಯುಗಗಳಲ್ಲಿ ಪ್ರವರ್ತಿಸಬೇಕಾದ ಧರ್ಮಕರ್ಮಗಳಿಗೆ= ಯುಗಧರ್ಮಗಳಿಗೂ,ಆಯಾಕಾಲಗಳಲ್ಲಿ ಮಾಡಬೇಕಾದ ಕರ್ಮಗಳಿಗೂ, ಪ್ರಾವರ್ತಕ= ಪ್ರವರ್ತಕನಾಗಿ, ವಾಸುದೇವಾದಿ, ವಾಸುದೇವ, ಸಂಕರ್ಷಣ ಪ್ರದ್ಯುಮ್ನ, ಅನಿರುದ್ಧನೆಂಬ, ಈರೆರಡುರೂಪ= ೪ ರೂಪಗಳನ್ನು, ತೆಗೆದುಕೊಂಡು ಯುಗಾದಿಕೃತ್= ಯುಗಾದಿಕೃತ್ ಯಂತಲೂ, ಯುಗಪ್ರವರ್ತಕನು= ಯುಗಪ್ರವರ್ತಕನೆಂತಲೂ, ತಾ = ತಾನು,ಯೆನಿಸಿ= ಹೆಸರುಪಡೆದು,ಧರ್ಮಪ್ರಘಟಕನು=ಆಯಾಕಾಲದಲ್ಲಿರುವ ಜನರಿಂದ ಆಯಾಧರ್ಮಘಟಕನು, ತಾನಾಗಿ, ಸಂಪದವ= ಸಂಪತ್ತನ್ನು, ಜ್ಞಾನಾದಿ ಈಶ್ವರಸಂಬಂಧವಾದ ಐಶ್ವರ್ಯವನ್ನು ಭಕತರಿಗೆ= ಭಕ್ತರಿಗೆ, ಈವ= ಕೊಡುವನು.

ತಾತ್ಪರ್ಯ:—ಕೃತ, ತ್ರೇತಾ, ದ್ವಾಪರ ಕಲಿಯೆಂಬ ೪ ಯುಗಗಳಲ್ಲಿ, ವಾಸುದೇವ ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧನೆಂಬ ೪ ರೂಪಗಳಿಂದ ಇದ್ದು 'ಯುಗಾದಿ ಕೃದ್ಯುಗಾವರ್ತೋ' ಯಂಬಂತೆ, ಯುಗಾದಿಕೃತ್ ಯೆಂಬ ಹೆಸರಿನಿಂದಲೂ, ಕೃತಯುಗಾನಂತರ ತ್ರೇತಾ, ತದನಂತರ ದ್ವಾಪರ, ಹೀಗೆ ಯುಗಗಳನ್ನು ಆವರ್ತನೆಮಾಡಿಸುವುದರಿಂದ ಯುಗಾವರ್ತನೆಂತಲೂ, ಯುಗಪ್ರವರ್ತಕನೆಂತಲೂ ಹೆಸರು ಪಡೆದು ಆಯಾಯುಗಧರ್ಮಗಳನ್ನು ಕರ್ಮಗಳನ್ನು ಆಯಾಜನರೊಳಗಿದ್ದು ಮಾಡುತ್ತಾ ಮಾಡಿಸುತ್ತಾ ತನ್ನ ಭಕ್ತರಿಂದ ಯುಗಾನುಸಾರವಾದ ಸತ್ಕರ್ಮಾನುಷ್ಠಾನವನ್ನು ಮಾಡಿಸಿ ಒರೆಸಂಪತ್ತು ಮಾತ್ರವಲ್ಲದೆ ಐಶ್ವರ್ಯವೆಂದರೆ ಈಶ್ವರಸಂಬಂಧವಾದ ಜ್ಞಾನಾದಿಗಳನ್ನು ಕೊಟ್ಟುದ್ಧರಿಸುವನು.

ತಲೆಯೊಳಿಹ ನಾರಾಯಣನು ಗಂ
ಟಲೆಡೆವಡಲೊಳು ವಾಸುದೇವನು
ಬಲದಲಿಹ ಪ್ರದ್ಯುಮ್ನ ಯಡಭಾಗದಲಿ ಅನಿರುದ್ಧ ||
ಕೆಳಗಿನಂಗದಿ ಸಂಕರುಷಣನ

ತಿಳಿದು ಈ ಪರಿಸಕಲದೇಹಗ
ಳೊಳಗೆ ಪಂಚಾತ್ಮಕನ ರೂಪವನೋಡು ಕೊಂಡಾಡು || ೧೬ ||

ಪದ್ಯಾರ್ಥ :—ತಲೆಯೊಳು=ತಲೆಯಲ್ಲಿ ನಾರಾಯಣನು ಇಹ=ಇರುವನು ಗಂಟಲೆಡೆ=ಗಂಟಲಕೆಳಭಾಗದ, ವಡಲೊಳು=ಹೊಟ್ಟೆಯಲ್ಲಿ, ವಾಸುದೇವನೂ, ಬಲದಲಿ=ಶರೀರದ ಬಲಭಾಗದಲ್ಲಿ, ಪ್ರದ್ಯುಮ್ನ=ಪ್ರದ್ಯುಮ್ನನೂ, ಯಡಭಾಗದಲಿ ಅನಿರುದ್ಧನೂ ಇಹ=ಇರುವನು. ಕೆಳಗಿನಂಗದಿ=ಕೆಳಗಿನ ಭಾಗವಾದ ಪಾದ ಮೊದಲಾದ ಅಂಗಗಳಲ್ಲಿ ಸಂಕರ್ಷಣನ, ತಿಳಿದು, ಈ ಪರಿ=ಈ ಪ್ರಕಾರವಾಗಿ ಸಕಲದೇಹಗಳೊಳಗೆ, ಪಂಚಾತ್ಮಕನ ರೂಪವ ನಾರಾಯಣ ವಾಸುದೇವಾದಿ ೫ ವ್ಯೂಹ ರೂಪವನ್ನು, ನೋಡು=ಚಿಂತಿಸು, ಕೊಂಡಾಡು=ಸ್ತೋತ್ರಮಾಡು.

ತಾತ್ಪರ್ಯ :—೧೬, ೧೭ ಈ ಯರಡುಪದ್ಯಗಳಿಂದ ನಮ್ಮ ಶರೀರದೊಳಗೆ, ನಾರಾಯಣಾದಿ ಪಂಚರೂಪಗಳನ್ನು ಚಿಂತಿಸುವ ಪ್ರಕಾರವನ್ನು ಅದರ ಫಲವನ್ನು ನಿರೂಪಿಸುತ್ತಾರೆ :—

ತಲೆಯಲ್ಲಿ ನಾರಾಯಣನು, ಗಂಟಲು ಮೊದಲುಕಟಿಪರ್ಯಂತವಾದ ಅಂಗಗಳಲ್ಲಿ ವಾಸುದೇವನು, ಬಲದ ಪಾರ್ಶ್ವದಲ್ಲಿ ಪ್ರದ್ಯುಮ್ನನು, ಯಡಭಾಗದಲ್ಲಿ ಅನಿರುದ್ಧನು, ಕಟಿಯಕೆಳಗಿನ ಅಂಗಗಳಲ್ಲಿ ಸಂಕರ್ಷಣನು, ಹೀಗೆ ನಮ್ಮ ಶರೀರದಲ್ಲಿ ಪಂಚಾತ್ಮಕನಾದ ಶ್ರೀ ಪರಮಾತ್ಮನು ನಾರಾಯಣಾದಿ ೫ ರೂಪಗಳಿಂದ ವಾಸಮಾಡುತ್ತಿರುವನೆಂದು ಮನಸ್ಸಿನಲ್ಲಿ ತಿಳಿದು ಚಿಂತಿಸಿ ಸ್ತೋತ್ರಮಾಡಬೇಕು.

ತನುವಿಶಿಷ್ಟದಿ ಇಪ್ಪನಾರಾ
ಯಣನು ಕಟಿಪದಾಂತ ಸಂಕರು
ಷಣನು ಶಿರಜಘನಾಂತವಾಗಿಹ ವಾಸುದೇವಾಖ್ಯಾ ||
ಅನಿಮಿಷೇಶ ನಿರುದ್ಧಪ್ರದ್ಯು
ಮ್ನನು ಯಡದಿಬಲಭಾಗದಲಿ ಚಿಂ
ತನೆಯ ಮಾಳ್ಪರಿಗುಂಟೆ ವೈಲಿಗೆವಿಧಿನಿಷೇಧಗಳು || ೧೭ ||

ಪದ್ಯಾರ್ಥ :—ತನುವಿಶಿಷ್ಟದಿ=ಎಲ್ಲ ಶರೀರದಲ್ಲಿಯೂ ಅಂದರೆ ಸಂಪೂರ್ಣವಾದ ಈ ದೇಹದಲ್ಲಿ ನಾರಾಯಣನು, ಇಪ್ಪ=ವ್ಯಾಪಿಸಿಕೊಂಡು ಇರುವನು,ಕಟಿಪಾದಾಂತ=ಸೊಂಟದಿಂದ ಪಾದದವರಿವಿಗೂ ಸಂಕರ್ಷಣನೂ,

ಶಿರಜಘನಾಂತವಾಗಿ= ತಲೆಮೊದಲು ಸೊಂಟದ ಹಿಂಭಾಗದವರೆಗೂ ಅಂದರೆ ಸೊಂಟದಿಂದ ಮೇಲೆ ತಲೆಯವರಿಗೂ, ವಾಸುದೇವನಾಮಕನೂ, ಇಹ= ವ್ಯಾಪಿಸಿಕೊಂಡಿರುವನು, ಅನಿಮಿಷೇಶ= ದೇವೇಶನಾದ, ಅನಿರುದ್ಧ= ಅನಿರುದ್ಧನು, ಯಡದಿ= ಯಡಭಾಗದಲ್ಲಿಯೂ ಪ್ರದ್ಯುಮ್ನನನ್ನು, ಬಲಭಾಗದಲ್ಲಿಯೂ ಚಿಂತನೆಯ, ಮಾಳ್ಪರಿಗೆ= ಮಾಡುವವರಿಗೆ ಮೈಲಿಗೆ= ಮೈಲಿಗೆಯಾಗಲಿ ವಿಧಿನಿಷೇಧಗಳು ಕರ್ತವ್ಯಾಕರ್ತವ್ಯ ದೋಷಗಳು ಉಂಟೇ? ಎಂದಿಗೂ ಇಲ್ಲವೆಂದರ್ಥ :—

ತಾತ್ಪರ್ಯ:— ಸಂಪೂರ್ಣವಾದ ಶರೀರವನ್ನು ಅಖಂಡರೂಪದಿಂದ ನಾರಾಯಣನು ವ್ಯಾಪಿಸಿಕೊಂಡಿರುವನು, ಮತ್ತು ಖಂಡರೂಪಗಳಿಂದ ಸೊಂಟದಿಂದ ಕೆಳಭಾಗದಲ್ಲಿ ಪಾದಾಂತವಾಗಿ ಸಂಕರ್ಷಣನು, ಸೊಂಟದಿಂದ ಮೇಲ್ಗಡೆ ಶಿರಃಪರ್ಯಂತವಾಗಿ ವಾಸುದೇವ ಮೂರ್ತಿಯು ಯಡಪಾರ್ಶ್ವ ಬಲಪಾರ್ಶ್ವಗಳಲ್ಲಿ ದೇವೇಶರಾದ ಅನಿರುದ್ಧ ಪ್ರದ್ಯುಮ್ನರು ಇರುವರೆಂದು ಚಿಂತನೆಯನ್ನು ಮಾಡುವವರಿಗೆ ಮೈಲಿಗೆಯಾಗಲಿ ವಿಧಿ ಅಂದರೆ ಕರ್ತವ್ಯ ಕರ್ಮಗಳು ನಿಷೇಧವೆಂದರೆ ಅಕರ್ತವ್ಯ ಕರ್ಮಗಳು ಇವುಗಳ ಸಂಬಂಧವಾದುದು ಅಂದರೆ ಮೈಲಿಗೆ ಮಡಿಯೆಂಬ ದೋಷವಿಲ್ಲ. ಮಾಡಬೇಕಾದ ಕರ್ಮಗಳನ್ನು ಬಿಟ್ಟರೂ, ಬಿಡಬೇಕಾದುದನ್ನು ಮಾಡಿದರೂ, ಯಾವದೋಷವೂ ಇವರನ್ನು ಬಂಧಿಸುವುದಿಲ್ಲವೆಂದರ್ಥ:— ಹೀಗೆ ಹೇಳಿದ ಮಾತ್ರದಿಂದ ದಾಸರಾಯರ ಅಭಿಪ್ರಾಯವು ಸ್ನಾನಸಂಧ್ಯಾದಿ ಕರ್ಮಗಳನ್ನು ಬಿಟ್ಟುಬಿಡಬಹುದೆಂದಲ್ಲ. ಅಭಕ್ಷ್ಯಭಕ್ಷಣ; ಅಗಮ್ಯಗಮನಾದಿ ನೀಚಕಾರ್ಯವನ್ನು ಮಾಡಿದರೂ ಪಾಪವಿಲ್ಲವೆಂದು ಭ್ರಷ್ಟನಾಗಬೇಕೆಂದಲ್ಲ. ಏಕೆಂದರೆ ಇದೇ ಜಗನ್ನಾಥ ದಾಸರಾಯರವರು ಮಾಡಿದ ಒಂದು ಪದದಲ್ಲಿ ('ಸ್ವೋಚಿತ ಕರ್ಮಗಳಾಚರಿಸುತ, ಬಲುನೀಚರಲಿ ಪ್ರೊಯ್ಗಾಚಿಸದೆ ಖೇಚರವಾಹ ಚರಾಚರಬಂಧಕ ಮೋಚಕನಹುದೆಂದ್ಯೋಚಿಸುತಿಪ್ಪುದೆ ಫಲವಿದು ಬಾಳ್ವದಕೆ|'') ಯಂದು ಹೇಳಿರುವರು. ಈ ವಾಕ್ಯಗಳಿಂದ ಸ್ವವರ್ಣಾಶ್ರಮೋಚಿತವಾದ ಕರ್ಮಗಳನ್ನು ಮಾಡಬೇಕೆಂದು ಒಂದು ಸ್ಥಳದಲ್ಲಿ ಹೇಳಿ ಮತ್ತೊಂದುಸ್ಥಳದಲ್ಲಿ ವಿಧಿನಿಷೇಧಗಳು ಬಾಧಿಸುವುದಿಲ್ಲವೆಂದರೆ ಕರ್ಮವೇಮಾಡಬೇಕಾಗಿಲ್ಲವೆಂಬ ಅರ್ಥವು ಎಂದಿಗೂ ಸರಿಯಾದುದಲ್ಲ. ಇದುಹೊರತು ಗೀತೆಯಲ್ಲಿ " ಯಾಸ್ತ್ವಿಂದ್ರಿಯಾಣಿ ಮಾನಸಾನಿಯ ಮ್ಯಾರಭತೇಽರ್ಜುನ| ಕರ್ಮೇಂದ್ರಿಯೈಃ ಕರ್ಮಯೋಗ ಮಸಕ್ತಃ ಸವಿಶಿಷ್ಯತೆ || ನಿಯತಂ

ಕುರು ಕರ್ಮಂತ್ವ ಕರ್ಮಜ್ಯಾಯೋಹ್ಯ ಕರ್ಮಣಃ ||" ಇತ್ಯಾದಿ ಅನೇಕ ಪ್ರಮಾಣಾದಿಗಳಿಂದ ನಿತ್ಯ ಕರ್ಮಾನುಷ್ಠಾನ ಮಾಡಬೇಕೆಂತಲೂ, ನಿಶ್ಚಯವಾಗುವುದು. ಆದ್ದರಿಂದ ವಿಧಿನಿಷೇಧಗಳೆಂಬ ಪದಗಳಿಗೆ ಸಂಕೋಚಾರ್ಥ ಮಾಡಬೇಕು. ಅಂದರೆ ನಮ್ಮ ಮನಃಪೂರ್ವಕ ನಿಷಿದ್ಧ ಕರ್ಮವನ್ನು ಮಾಡಬಾರದು ನಾವು ಪರಮಾತ್ಮನ ಚಿಂತನಾದಿಗಳಲ್ಲಿರುವಾಗಲೋ, ಮೈಮರತು ಆನಂದದಿಂದ ನರ್ತನಾದಿಗಳನ್ನು ಮಾಡುವಾಗಲೋ, ನಿಷಿದ್ಧವಾದ ಪ್ರಾಣಿಹಿಂಸಾದಿಗಳು ಕ್ರಿಮಿಕೀಟಾದಿಗಳ ಹಿಂಸಾ ಮೊದಲಾದುದು ಆಗಿಬಿಟ್ಟರೆ, ಭಗವದ್ಧ್ಯಾಪವನ್ನು ಚಿಂತಿಸುತ್ತಿರುವ ನಮ್ಮನ್ನು ಆ ಪಾಪವು ಏನೂ ಮಾಡಲಾರದು. ವಿಧಿ ಕಾರ್ಯವಾದರೂ "ಪೂರ್ವಸಂಧ್ಯಾಂ ಸನಕ್ಷತ್ರಾಂ" ಇತ್ಯಾದಿಗಳಿಂದ ಕಾಲಕಾಲಗಳಲ್ಲಿ ಮಾಡಬೇಕಾದ ಕರ್ಮಗಳನ್ನು ನಾವು ಪರಮಾತ್ಮನನ್ನು ಭಜಿಸುತ್ತಾ ಆ ಕಾಲಗಳಲ್ಲಿ ಮಾಡದೆ ಬಿಟ್ಟರೆ ಆ ವಿಧಿ ಮೀರಿದ ದೋಷವು ನಮಗಿಲ್ಲವೆಂದರ್ಥ. ನಾವು ಸ್ನಾನಾದಿಗಳನ್ನು ಮಾಡಿಕೊಂಡು ಮೈಮರತು ಪರಮಾತ್ಮನನ್ನು ಭಜಿಸುತ್ತಿರುವಾಗ ನಾಯಿ, ಬೆಕ್ಕು ಮೊದಲಾದುವೋ, ಯಾರಾದರೂ ಹುಡುಗರೋ ನಮ್ಮನ್ನು ಮುಟ್ಟಬಿಟ್ಟರೂ ನಾವು ಮೈಲಿಗೆಯಲ್ಲಿ ಭಜಿಸುವುದು ಸರಿಯಲ್ಲವೆಂದು ಸಂಶಯಪಡದೆ ನಿಶ್ಚಿಂತರಾಗಿ ಕ್ಲುಪ್ತ ಕಾಲದವರಿವಿಗೂ ಭಜಿಸಬಹುದು. ಆ ಮೈಲಿಗೆ ಭಜನಾಸಕ್ತನಾಗಿರುವಾಗ ಇಲ್ಲವೆಂದರ್ಥವೆಂದು ಭಾವಿಸಬೇಕೇ ಹೊರ್ತು ಸುತರಾಂ ಸ್ನಾನ ಸಂಧ್ಯಾ ವಿಧಿಯನ್ನು ಬಿಟ್ಟರೂ ಬಾಧಕವಿಲ್ಲವೆಂತಲೂ, ನಿಷಿದ್ಧವಾದ ಸುರಪಾನ ಮೊದಲಾದುದು ಮಾಡಿದರೂ ಕೂಡ ನಮಗೆ ಭಾಧಕವಿಲ್ಲವೆಂದು ಎಂದಿಗೂ ಭಾವಿಸಬಾರದು-

ಪದುಮನಾಭನಪಾಣಿಯೊಳಗಿಹ
ವದನದಲಿ ಹೃಷೀಕೇಶ ನಾಶಿಕ
ಸದನದಲಿ ಶ್ರೀಧರನು ಜಿಹ್ವದೊಳಿಪ್ಪ ವಾಮನನು |
ಮೃದಳತ್ವಗ್ದೇಶದಿ ತ್ರಿವಿಕ್ರಮ
ಮಧುವಿರೋಧಿಯು ಲೋಚನದಿ ಕರ
ಣದಲಿ ಇಪ್ಪನು ವಿಷ್ಣುನಾಮಕ ಶ್ರವಣನೆಂದೆನಿಸಿ ||೧೮||

ಪದ್ಯಾರ್ಥ.—ಪದುಮನಾಭನು = ಪದ್ಮನಾಭನಾಮಕಮೂರ್ತಿಯು, ಪಾಣಿಯೊಳಗೆ=ಕೈಗಳೊಳಗೆ, ಇಹ=ಇರುವನು, ವದನದಲಿ=ಮುಖದಲ್ಲಿ,

ಹೃಷೀಕೇಶ=ಹೃಷೀಕೇಶನಾಮಕನು, ನಾಶಿಕಸದನದಲಿ = ಮೂಗುಗಳೆಂಬ ಗೃಹದಲ್ಲಿ ಶ್ರೀಧರನು=ವಾಮನನು ಇರುವನು, ಜಿಹ್ವೆಯೊಳು=ನಾಲಿಗೆ ಯಲ್ಲಿ, ಇಪ್ಪ- ಇರುತ್ತಿರುವನು, ಮೃದುಳತ್ವಗ್ದೇಶದಿ = ಮೃದುವಾದ ತ್ವ ಗಿಂದ್ರಿಯದಲ್ಲಿ, ತ್ರಿವಿಕ್ರಮನು, ಲೋಚನದಿ=ಕಣ್ಣುಗಳೊಳಗೆ, ಮಧುವಿ ರೋಧಿಯು=ಮಧುಸೂಧನನು ಕರಣದಲಿ=ಕಿವಿಗಳಲ್ಲಿ ಶ್ರವಣನೆಂದೆನಿಸಿ= ಶ್ರವಣನಾಮಕನಾಗಿ ವಿಷ್ಣುನಾಮಕನು ಇಪ್ಪನು-ಇರುವನು.

ತಾತ್ಪರ್ಯ.—ಈ ಪದ್ಯ ಮೊದಲು 21ನೇ ಪದ್ಯದವರಿವಿಗೂ 24 ತತ್ವಗಳಲ್ಲಿ ಕೇಶವಾದಿ ಚತುರ್ವಿಂಶತಿ (24) ಮೂರ್ತಿಗಳನ್ನು ಚಿಂತಿಸುವ ಪ್ರಕಾರವನ್ನು ಹೇಳುತ್ತಾರೆ. ಎರಡು ಕೈಗಳಲ್ಲಿ ಪದ್ಮನಾಭಮೂರ್ತಿಯನ್ನು ಚಿಂತಿಸಬೇಕು. ಮುಖದಲ್ಲಿ ಹೃಷೀಕೇಶ ಘ್ರಾಣೇಂದ್ರಿಯಗಳಲ್ಲಿ ಶ್ರೀಧರ ಜಿಹ್ವೇಂದ್ರಿಯದಲ್ಲಿ ವಾಮನ ತ್ವಗಿಂದ್ರಿಯದಲ್ಲಿ ತ್ರಿವಿಕ್ರಮ ನೇತ್ರಗಳಲ್ಲಿ ಮಧುಸೂಧನರೂಪ ಶ್ರವಣೇಂದ್ರಿಯದಲ್ಲಿ ವಿಷ್ಣುರೂಪವನ್ನು ಚಿಂತಿಸ ಬೇಕು.

**ಮನದಲಿಹ ಗೋವಿಂದಮಾಧವ**
**ಧನಪಸಖ ತತ್ವದಲಿ ನಾರಾ**
**ಯಣ ಮಹತ್ತತ್ವದಲಿ ಅವ್ಯಕ್ತದಲಿ ಕೇಶವನು ||**
**ಇನಿತುರೂಪವ ದೇಹದೊಳು ಚಿಂ**
**ತನೆಯುಗೈವ ಮಹಾತ್ಮರಿಳೆಯೊಳು**
**ಮನುಜರವರಲ್ಲಮರರ ಸರಿ ಹರಿಕೃಪಾ ಬಲದಿ ||೨೯||**

ಪದ್ಯಾರ್ಥ.—ಮನದಲ=ಮನಸ್ಸಿನಲ್ಲಿ ಗೋವಿಂದ ಇಹ=ಇರುವ ನು ಮಾಧವ=ಮಾಧವರೂಪಿಯು ಧನಪಸಖ=ಕುಬೇರನ ಸಖನಾದ ರುದ್ರ ದೇವರಿಗೆ ಶರೀರಭೂತವಾದ ತತ್ವದಲಿ=ಅಹಂಕಾರತತ್ವದಲ್ಲಿ ಮಹತ್ತತ್ವ ದಲಿ ನಾರಾಯಣನು ಅವ್ಯಕ್ತತ್ವದಲ್ಲಿ ಕೇಶವನು ಇರುವನು. ಇನಿತುರೂ ಪವ=ಈ ಪ್ರಕಾರ ಭಗವದ್ರೂಪಗಳನ್ನು ದೇಹದೊಳು=ಈ ಶರೀರದೊಳಗೆ ಚಿಂತನೆಯುಗೈವ=ಚಿಂತನೆಯನು ಮಾಡುವ ಮಹಾತ್ಮರು ಇಳೆಯೊಳು= ಭೂಮಿಯೊಳಗೆ ಮನುಜರಲ್ಲ-ಸಾಧಾರಣ ಮನುಷ್ಯರೆಂದು ಅವರನ್ನು ಹೇಳಬಾರದು. ಹರಿಕೃಪಾಬಲದಿ-ಪರಮಾತ್ಮನ ಕೃಪಾಬಲದಿಂದ ಅವರು ಅಮರರೇಸರಿ-ದೇವತೆಗಳೇ ಸರಿ.

ತಾತ್ಪರ್ಯ.--ಮನಸ್ತತ್ವದಲ್ಲಿ – ಗೋವಿಂದನನ್ನು ಅಹಂಕಾರತತ್ವದಲ್ಲಿ ಮಾಧವನನ್ನು, ಮಹತ್ತತ್ವದಲ್ಲಿ ನಾರಾಯಣನನ್ನು, ಅವ್ಯಕ್ತತತ್ವದಲ್ಲಿ ಕೇಶವನನ್ನು ಚಿಂತಿಸಬೇಕು. ಈ ಪ್ರಕಾರ ದೇಹದಲ್ಲಿ ರೂಪವನ್ನು ಚಿಂತಿಸುವವರು ಸಾಮಾನ್ಯ ಮನುಷ್ಯರಲ್ಲ. ಇವರನ್ನು ಭಗವತ್ಕೃಪಾ ಬಲ ಉಳ್ಳ ದೇವಾಂಶರೆಂದೇ ಹೇಳಬೇಕು.

**ನೆಲದಲಿಪ್ಪನು ಕೃಷ್ಣರೂಪದಿ**
**ಜಲದೊಳಿಪ್ಪನು ಹರಿಯೆನಿಸಿ ಶಿಖಿ**
**ವಳಗೆ ಇಪ್ಪನು ಪರಶುರಾಮನುಪೇಂದ್ರನೆಂದೆನಿಸಿ ।**
**ಯಲರೊಳಿಪ್ಪ ಜನಾರ್ಧನನಿಪ್ಪನು ಬಾಂ**
**ದಳದೊಳಚ್ಯುತ ಗಂಧ ನರಹರಿ**
**ಪೊಳೆವಧೋಕ್ಷಜ ರಸಗಳೊಳು ರಸರೂಪತಾನಾಗಿ ॥೨೦॥**

ಪದ್ಯಾರ್ಥ.—ನೆಲದಲಿ=ಪೃಥಿವಿಯಲ್ಲಿ, ಕೃಷ್ಣರೂಪದಿ=ಕೃಷ್ಣರೂಪದಿಂದ, ಇಪ್ಪನು=ಇರುವನು, ಜಲದೊಳು=ಅಪ್ಪು ತತ್ವದೊಳು (ಉದಕ ತತ್ವದೊಳಗೆ) ಹರಿಯೆನಿಸಿ = ಹರಿನಾಮಕನಾಗಿ. ಇಪ್ಪನು=ಇರುವನು. ಶಿಖಿವಳಗೆ=ಅಗ್ನಿಯಲ್ಲಿ, ತೇಜಸ್ತತ್ವದಲ್ಲಿ ಪರಶುರಾಮನು ಉಪೇಂದ್ರನೆಂದೆನಿಸಿ=ಉಪೇಂದ್ರನಾಮಕನಾಗಿ, ಇಪ್ಪನು=ಇರುವನು. ಯಲರೊಳು = ವಾಯುತತ್ವದೊಳಗೆ, ಜನಾರ್ಧನನು ಇರುವನು. ಬಾಂದಳದೊಳು=ಆಕಾಶದೊಳಗೆ, ಅಚ್ಯುತ=ಅಚ್ಯುತನು ಇರುವನು, ಗಂಧ=ಗಂಧಗುಣದಲ್ಲಿ, ನರಹರಿ=ನರಸಿಂಹರೂಪಿಯು, ರಸಗಳೊಳು=ರಸಗುಣದಲ್ಲಿ ರಸರೂಪನಾಗಿ ಅಧೋಕ್ಷಜ–ಅಧೋಕ್ಷಜನು, ಪೊಳೆವ=ಪ್ರಕಾಶಮಾನನಾಗಿರುವನು.

ತಾತ್ಪರ್ಯ.—ಪಂಚಮಹಾಭೂತಗಳಲ್ಲೂ, ತನ್ಮಾತ್ರಾಗುಣಗಳಲ್ಲೂ ಪಾದಪಾಯು ಉಪಸ್ಥೇಂದ್ರಿಯಗಳಲ್ಲೂ ಚಿಂತಿಸಬೇಕಾದ ಭಗವದ್ರೂಪಗಳನ್ನು ಈ ಎರಡು ಪದ್ಯಗಳಿಂದ ಹೇಳುತ್ತಾರೆ.— ಪೃಥಿವಿಯಲ್ಲಿ ಕೃಷ್ಣರೂಪದಿಂದಲೂ, ಉದಕದಲ್ಲಿ ಹರಿ ಎಂತಲೂ, ಅಗ್ನಿಯಲ್ಲಿ ಅಂದರೆ ತೇಜಸ್ತತ್ವದಲ್ಲಿ ಪರಶುರಾಮನು ಉಪೇಂದ್ರನಾಮದಿಂದಲೂ, ವಾಯುತತ್ವದಲ್ಲಿ ಜನಾರ್ಧನರೂಪದಿಂದಲೂ, ಆಕಾಶದಲ್ಲಿ ಅಚ್ಯುತರೂಪಿಯಾಗಿಯೂ ಹೀಗೆ ಪಂಚಮಹಾಭೂತಗಳಲ್ಲಿ ಇರುವ ಮತ್ತು ತನ್ಮಾತ್ರಾಗುಣಗಳ ಪೈಕಿ ಗಂಧದಲ್ಲಿ ನರಸಿಂಹರೂಪದಿಂದಲೂ, ರಸದಲ್ಲಿ ಅಧೋಕ್ಷಜ ರೂಪಿಯಾಗಿಯೂ ಇರುತ್ತಿರುವನು.

**ರೂಪಪುರುಷೋತ್ತಮನು ಸ್ಪರ್ಶ**
**ವ್ಯಾಪಕನು ಅನಿರುದ್ಧ ಶಬ್ಧದಿ**
**ವ್ಯಾಪಿಸಿಹ ಪ್ರದ್ಯುಮ್ನ ಪಸ್ಥದಿ ವಾಸುದೇವನಿಹ ।**
**ತಾಪೊಳೆವ ವಾಯುಸ್ಥನಾಗಿ ಜ**
**ಯಾಪತಿಯು ಸಂಕರುಷಣನು ಸು**
**ಸ್ಥಾಪಕನು ಅಹಪಾದದೊಳು ದಾಮೋದರನು ಪೊಳೆವ ॥೨೦॥**

ಪದ್ಯಾರ್ಥ.—ರೂಪ–ರೂಪಗುಣದಲ್ಲಿ, ಪುರುಷೋತ್ತಮನು, ಸ್ಪರ್ಶ ವ್ಯಾಪಕನು=ಸ್ಪರ್ಶಗುಣಕಾರ್ಯವನ್ನು ಮಾಡಿಸುವನು, ಅನಿರುದ್ಧ=ಅನಿರುದ್ಧನು, ಶಬ್ಧದಿ=ಶಬ್ಧಗುಣದಲ್ಲಿ, ಪ್ರದ್ಯುಮ್ನ–ಪ್ರದ್ಯುಮ್ನನು, ವ್ಯಾಪಿಸಿಹ–ವ್ಯಾಪಿಸಿರುವನು, ಉಪಸ್ಥದಿ–ಉಪಸ್ಥೇಂದ್ರಿಯದಲ್ಲಿ ವಾಸುದೇವನು, ಸಹ=ಇರುವನು, ವಾಯುಸ್ಥನಾಗಿ–ಗುದೇಂದ್ರಿಯಗತನಾಗಿ, ಜಯಾಪತಿಯು–ಜಯನಾಮಕಳಾದ ಲಕ್ಷ್ಮೀಪತಿಯಾದ ಸಂಕರ್ಷಣನು, ತಾ=ತಾನು, ಪೊಳೆವ=ಶೋಭಿಸುವ, ಪಾದದೊಳು=ಪಾದಗಳಲ್ಲಿ, ದಾಮೋದರನು, ಅಹ–ಸ್ಥಿರವಾಗಿದ್ದು, ಪೊಳೆವ–ಶೋಭಿಸುವನು.

ತಾತ್ಪರ್ಯ.—ರೂಪದಲ್ಲಿ ಪುರುಷೋತ್ತಮನು, ಸ್ಪರ್ಶಗುಣದಲ್ಲಿ ಅನಿರುದ್ಧನು, ಶಬ್ಧಗುಣದಲ್ಲಿ ಪ್ರದ್ಯುಮ್ನನು ವ್ಯಾಪ್ತನಾಗಿರುವರು. ಉಪಸ್ಥೇಂದ್ರಿಯದಲ್ಲಿ ವಾಸುದೇವನು, ಗುದದಲ್ಲಿ ಸಂಕರ್ಷಣನು, ಪಾದಗಳಲ್ಲಿ ದಾಮೋದರನು ವ್ಯಾಪಿಸಿಕೊಂಡಿರುವರೆಂದು ಭಾವಿಸಬೇಕು.

**ಚತುರವಿಂಶತಿ ತತ್ವದೊಳು ಶ್ರೀ**
**ಪತಿಯು ಅನಿರುದ್ಧಾದಿ ರೂಪದಿ**
**ವಿತತನಾಗಿದ್ದಖಿಳಜೀವರ ಸಂಹನನದೊಳಗೆ ।**
**ಪ್ರತತಿಯಂದದಿ ಸುತ್ತಿಸುತ್ತುತ**
**ಪಿತೃಗಳಿಗೆ ತರ್ಪಕನೆನಿಸಿಕೊಂ**
**ಡತುಳಮಹಿಮನು ಷಣ್ಣವತಿ ನಾಮದಲಿ ನೆಲಸಿಹನು ॥೨೧॥**

ಪದ್ಯಾರ್ಥ.—ಶ್ರೀಪತಿಯು=ಲಕ್ಷ್ಮೀಪತಿಯು, ಚತುರವಿಂಶತಿತತ್ವದೊಳು=24 ತತ್ವಗಳಲ್ಲಿ ಅನಿರುದ್ಧಾದಿ ರೂಪದಿ–ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ವಾಸುದೇವ ಎಂಬ ರೂಪಗಳಿಂದ ವಿತತನಾಗಿದ್ದು=ವ್ಯಾಪ್ತನಾಗಿದ್ದು ಅಖಿಳಜೀವರ–ಸಮಸ್ತ ಜೀವರ ಸಂಹನನದೊಳಗೆ=ದೇಹದೊಳಗೆ ಪ್ರತತಿಯಂವದಿ=ಬಳ್ಳಿಗಳಂತೆ ಸುತ್ತಿಸುತ್ತುತ=ಸುತ್ತಲೂ ಸುತ್ತಿ

ಕೊಂಡು, ಪಿತೃಗಳಿಗೆ=ಅವರವರ ಪಿತೃಪಿತಾಮಹಾದಿಗಳಿಗೆ, ತರ್ಪಕನೆನಿಸಿಕೊಂಡು, ಅವರವರು ಮಾಡುವ ಶ್ರಾದ್ಧಾದಿಗಳಿಂದ ತೃಪ್ತಿಪಡಿಸುವನೆಂದು ಪ್ರಸಿದ್ಧನಾಗಿ, ಅತುಳಮಹಿಮನು=ಸಮವಿಲ್ಲದ ಮಹಿಮೆಯುಳ್ಳವನು, ಷಣ್ಣವತಿನಾಮದಲಿ=೯೬ ಶ್ರಾದ್ಧಗಳ ನಾಮಧೇಯಗಳಿಂದ, ನೆಲಸಿಹನು=ವಾಸವಾಗಿರುವನು.

ತಾತ್ಪರ್ಯ.—ಮೇಲಿನಪದ್ಯಗಳಿಂದ ೨೪ ತತ್ವಗಳಲ್ಲಿ ಒಂದೊಂದು ತತ್ವದಲ್ಲಿಯೂ ಇರುವ ವಿಶೇಷವಾದ ಭಗವದ್ರೂಪಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಹೇಳಿ ಈ ಪದ್ಯದಿಂದ ೨೪ ತತ್ವಗಳಲ್ಲಿ ಒಂದೊಂದು ತತ್ವದೊಳು ಅನಿರುದ್ಧಾದಿ ನಾಲ್ಕು ರೂಪಗಳಂತೆ ಒಟ್ಟು ೯೬ ರೂಪಗಳಿಂದಿದ್ದು ಶ್ರೀಪರಮಾತ್ಮನು ಪಿತೃಗಳನ್ನು ತೃಪ್ತಿಪಡಿಸುವನೆಂದು ಹೇಳುತ್ತಾರೆ.—

ಸಮುಚಿತವಾದ ಮಹಾಮಹಿಮೆಯುಳ್ಳ ಶ್ರೀಲಕ್ಷ್ಮೀಪತಿಯು ಎಂದು ಹೇಳಿರುವರು. ಅತುಳಮಹಿಮನು ಎಂಬ ಪದಕ್ಕೆ ಶ್ರೀಪತಿಯು ಎಂಬ ವಿಶೇಷಣವು ಹೇತುಗರ್ಭವಾಗಿರುವದು. ಅಂದರೆ ಶ್ರೀಪತಿಯು ಲಕ್ಷ್ಮೀಪತಿಯಾದ ದರಿಂದಲೇ ಅತುಳಮಹಿಮನೆಂದರ್ಥ:—ಹೇಗೆಂದರೆ ದ್ವಾದಶಸ್ತೋತ್ರ ೭ನೆಯ ಅಧ್ಯಾಯದಲ್ಲಿ ಶ್ರೀಲಕ್ಷ್ಮೀಯ ಮಹಿಮೆಯು ವರ್ಣಿತವಾಗಿದೆ. ಅದರಲ್ಲಿ ಒಂದು ಶ್ಲೋಕವನ್ನು ಜ್ಞಾಪಕಾರ್ಥವಾಗಿ ಸೂಚಿಸುತ್ತೇವೆ. "ಬ್ರಹ್ಮೇಶ ಶಕ್ರ ರವಿಧರ್ಮ ಶಶಾಂಕ ಪೂರ್ವ ಗೀರ್ವಾಣ ಸಂತತಿರಿಯಂಯದಪಾಂಗಲೇಶಂ॥ ಆಶ್ರಿತ್ಯ ವಿಶ್ವವಿಜಯಂ ವಿದಧಾತ್ಯಚಿಂತ್ಯ ಶ್ರೀಯತ್ಕಟಾಕ್ಷಬಲವತ್ಯಜಿತಂನಮಾಮಿ ॥" ಬ್ರಹ್ಮ, ರುದ್ರ, ಇಂದ್ರ, ಸೂರ್ಯ, ಯಮ, ಚಂದ್ರ ಮೊದಲಾದ ದೇವತಾಗಣವು ಯಾವ ಶ್ರೀಲಕ್ಷ್ಮಿಯ ಅತ್ಯಲ್ಪವಾದ, [illegible] ನೋಟದ ಪ್ರಸಾದದಿಂದಲೇ ಈ ಪ್ರಪಂಚದಲ್ಲಿ ವಿಜಯವನ್ನು ಹೊಂದುತ್ತಿರುವದೋ ಅಂತಹ ಲಕ್ಷ್ಮಿಯು ಯಾವ ಶ್ರೀಪರಮಾತ್ಮನ ಕಟಾಕ್ಷದಿಂದ ಬಲವುಳ್ಳವಳಾಗಿರುವಳೋ ಅಂತಹ ಅಜಿತನಾದ ಶ್ರೀಪರಮಾತ್ಮನನ್ನು ನಮಸ್ಕರಿಸುತ್ತೇನೆಂದು ಶ್ರೀಮದಾಚಾರ್ಯರು ಹೇಳಿರುವರು. ಮತ್ತು "ಯಂ ಕಾಮಯೇತಂ [illegible]" ಎಂಬ ಶ್ರುತಿಯು ಲಕ್ಷ್ಮೀದೇವಿ [illegible]. ಇಂತಹ ಲಕ್ಷ್ಮಿಯು ಪತ್ನಿ ಅಂದನಂತರ [illegible] ಮಹಿಮೆಯುಳ್ಳವರಾರೆಂದು ಹೇಳಬೇಕು ? ಆದ್ದರಿಂದಲೇ ದಾಸರಾಯರು ಶ್ರೀಪತಿ ಶಬ್ದವನ್ನು

ಅತುಲಮುಗಿಮುನಃ ಎಂಬ ಶಬ್ದಧಿಂದ ಸ್ಥಿರಪಡಿಸಿದರು. ೨೪ ತತ್ವಗಳಲ್ಲಿ ಒಂದೊಂದು ತತ್ವದಲ್ಲಿ ಅನಿಖುದ್ಧಾದಿ ೪ ರೂಪಗಳಂತೆ ಒಟ್ಟು ೯೬ ರೂಪ ಗಳಿಂದ ಈ ಮನುಷ್ಯಾದಿಗಳ ಶರೀರದೊಳಗೆ, ವೃಕ್ಷವನ್ನು ಬಳ್ಳಿಗಳು ಸುತ್ತಿಕೊಂಡಿರುವಂತೆ ಜೀವನನ್ನು ಸುತ್ತಿಕೊಂಡು ಇವರುಗಳಿಂದ ಷಣ್ಣ ವತಿ (೯೬) ಶ್ರಾದ್ಧಗಳನ್ನು ಮಾಡಿಸಿ ( ೯೬ ಶ್ರಾದ್ಧಗಳ ವಿವರವು ಹಿಂದೆ ೪ನೆ ಯುಸಂಧಿಯ ೨೩ನೆಯ ಪದ್ಯದಲ್ಲಿ ನೋಡಬಹುದು. ) ತನ್ನಾಮಧೇಯ ಗಳಿಂದಲೂ ಅವುಗಳಲ್ಲಿದ್ದು ಈ ಮನುಷ್ಯಾದಿಗಳ ಪಿತೃ ಪಿತಾಮಹಪ್ರಪಿತಾ ಮಹಾದಿಗಳನ್ನು ತದಭಿಮಾನಿಗಳಾದ ವಸುಗಣ, ಖುದ್ರಗಣ ಆದಿತ್ಯಗಣಗ ಳನ್ನು ಸಹ ತೃಪ್ತಿಪಡಿಸುತ್ತಿರುವನು.

**ಚತುರವಿಂಶತಿ ತತ್ವದೊಳು ತ**
**ತ್ಪತಿಗಳೆನಿಸುವ ಬ್ರಹ್ಮಮುಖದೇ**
**ವತೆಗಳೊಳು ಹನ್ನೊಂದು ನೂರೈವತ್ತೆರಡು ರೂಪ ||**
**ವಿತತನಾಗಿದ್ದೆಲ್ಲ ಜೀವರ**
**ಜತನಮಾಡುವಗೋಸುಗ ಜಗ**
**ತ್ಪತಿಗೆ ಏನಾದರು ಪ್ರಯೋಜನವಿಲ್ಲವಿದರಿಂದ ||೨೩||**

ಪದ್ಯಾರ್ಥ.—ಚತುರವಿಂಶತಿ ತತ್ವದೊಳು = ೨೪ ತತ್ವಗಳಲ್ಲಿಯೂ, ತತ್ಪತಿಗಳೆನಿಸುವ-ತತ್ವಾಭಿಮಾನಿಗಳೆಂದು ಪ್ರಸಿದ್ಧರಾಗಿರುವ, ಬ್ರಹ್ಮಮುಖ ದೇವತೆಗಳೊಳು=ಬ್ರಹ್ಮನೇ ಮೊದಲಾದ ದೇವತೆಗಳಲ್ಲಿ, ಹನ್ನೊಂದು ನೂ ರೈವತ್ತೆರಡುರೂಪ=೧೧೫೨ ರೂಪಗಳಿಂದ, ವಿತತನಾಗಿದ್ದು=ವ್ಯಾಪ್ತನಾಗಿ ದ್ದು, ಯಲ್ಲಜೀವರ–ಸಕಲ ಜೀವರನ್ನು, ಜತನಮಾಡುವ=ರಕ್ಷಣಮಾಡುವ ಈ ಪರಮಾತ್ಮನಿಗೆ ಈ ಜೀವ ರಕ್ಷಣೆಮಾಡುವದರಿಂದ, ಏನಾದರೂ=ಯಾವ ಬಗೆಯಿಂದಲಾದರೂ ಪ್ರಯೋಜನವಿಲ್ಲ.

ತಾತ್ಪರ್ಯ-—ಈ ಪದ್ಯದಿಂದ ೨೪ ತತ್ವಗಳಲ್ಲಿಯೂ, ತತ್ವಾಭಿಮಾ ನಿದೇವತೆಗಳಲ್ಲಿಯೂ ಇರುವ ಒಟ್ಟು ಭಗವದ್ರೂಪಗಳನ್ನು ಹೇಳುತ್ತಾ ಸ್ವ ಪ್ರಯೋಜನಾಪೇಕ್ಷೆ ಇಲ್ಲದೇನೇ ಜಗತ್ತನ್ನು ಪಾಲಿಸುವನೆಂದು ಭಗವಂತನ ಮಹಿಮೆಯನ್ನು ಹೇಳುತ್ತಾರೆ.—

೨೪ ತತ್ವಗಳಲ್ಲಿಯೂ ಆ ತತ್ವಾಭಿಮಾನಿಗಳಾದ ಬ್ರಹ್ಮ ಮೊದಲಾದ ದೇವತೆಗಳೊಳಗೂ ಒಟ್ಟು ೧೧೫೨ರೂಪಗಳಿಂದ ಶ್ರೀಹರಿಯು ವ್ಯಾಪ್ತನಾಗಿ

ರುವನು. ಅದು ಹೇಗೆಂದರೆ; ತತ್ವಗಳು ೨೪ ಮನಸ್ಸು, ಬುದ್ಧಿ ಮೊದಲಾದ ಒಂದೊಂದು ತತ್ವದಲ್ಲಿಯೂ ಸಂಸೃಷ್ಟತತ್ವಗಳೆಂದು ೨೪ ತತ್ವಗುಣಗಳು ಸೇರಿರುವುವು. ಇವೆರಡನ್ನು ಗುಣಾಕಾರಮಾಡಿದರೆ ೨೪×೨೪=೫೭೬ ಆಗುವುದು. ಇದರಂತೆ ತತ್ವಾಭಿಮಾನಿ ದೇವತೆಗಳು ೨೪ ಒಬ್ಬೊಬ್ಬ ದೇವತೆಯಲ್ಲಿಯೂ ಪ್ರತ್ಯೇಕವಾಗಿ ೨೪ ತತ್ವಾಭಿಮಾನಿಗಳು. ಇಲ್ಲಿಯೂ ೨೪×೨೪=೫೭೬=ಇವೆರಡನ್ನೂ ಕೂಡಿದರೆ ೫೭೬+೫೭೬ = ೧೧೫೨ ಆಗುವವು. ಇಷ್ಟು ರೂಪಗಳಿಂದ ವ್ಯಾಪ್ತನಾಗಿದ್ದು ಎಲ್ಲಾ ಜೀವರುಗಳನ್ನು ಸಂರಕ್ಷಣೆ ಮಾಡುವನು. ಆದರೆ ಜಗತ್ಪತಿಯಾದ ಶ್ರೀಪರಮಾತ್ಮನಿಗೆ ಇದರಿಂದ ಏನಾದರೂ ಪ್ರಯೋಜನವುಂಟೇ ? ಏನೇನೂ ಇಲ್ಲ. "ದೇವಸ್ಯೈಷ ಸ್ವಭಾವೋಽಯಂ ಆಪ್ತಕಾಮಸ್ಯಕಾಸ್ಪೃಹಾ" ಕ್ರೀಡಾದಿಗುಣ ವಿಶಿಷ್ಟನಾದ ಶ್ರೀಪರಮಾತ್ಮನಿಗೆ ಈ ಜಗದ್ರಕ್ಷಣೆಯು ಸ್ವಭಾವವೇ ಹೊರತು ಪೂರ್ಣಕಾಮನಾದ ಸ್ವಾಮಿಗೆ ಇದರಿಂದಾಗುವುದೇನು ? ಎಂಬ ಶೃತ್ಯಾದಿಗಳು ಇದಕ್ಕಾಧಾರವಾಗಿರುವವು. ( ಈ ವಿಷಯವನ್ನು ಮಂಗಳಾಚರಣೆಸಂಧಿಯಲ್ಲಿ ವಿಸ್ತಾರಮಾಡಿರುತ್ತದೆ. )

ಇಂದಿರಾಧವ ಶಕ್ತಿ ಮೊದಲಾ
ದೊಂದಧಿಕ ದಶರೂಪದಿಂದಲಿ
ಪೊಂದಿಹನು ಸಕಲೇಂದ್ರಿಯಗಳಲಿ ಪುರುಷನಾಮಕನು ||
ಸುಂದರಪ್ರದ ಪೂರ್ಣಜ್ಞಾನಾ
ನಂದಮಯ ಚಿದ್ದೇಹದೊಳು ತಾ
ವಂದರಕ್ಷಣವಗಲದಲೆ ಪರಮಾಪ್ತನಾಗಿಪ್ಪ ||೨೪||

ಪದ್ಯಾರ್ಥ.—ಇಂದಿರಾಧವ = ಲಕ್ಷ್ಮೀಪತಿಯು ಶಕ್ತಿ ಮೊದಲಾದ, ಒಂದಧಿಕ ದಶರೂಪದಿಂದಲಿ–೧೧ ರೂಪಗಳಿಂದ, ಸಕಲೇಂದ್ರಿಯಗಳಲಿ= ಸಮಸ್ತವಾದ ಇಂದ್ರಿಯಗಳಲ್ಲಿಯೂ, ಪೊಂದಿಹನು = ಹೊಂದಿಕೊಂಡಿರುವನು. ಸುಂದರಪ್ರದ=ಮನೋಹರರೂಪಗಳನ್ನಾಗಲಿ, ಲೋಕವನ್ನಾಗಲಿ ಕೊಡಿಸುವ, ಪೂರ್ಣಜ್ಞಾನಾನಂದಮಯ=ಪೂರ್ಣವಾದ ಜ್ಞಾನಾನಂದಮಯನಾದ, ಪುರುಷನಾಮಕನು=ಪುರುಷನಾಮಕ ಶ್ರೀಪರಮಾತ್ಮನು, ಚಿದ್ದೇಹದೊಳು=ಜೀವನ ಸ್ವರೂಪ ದೇಹದೊಳಗೆ, ತಾ=ತಾನು, ಒಂದರಕ್ಷಣ =ಒಂದು ಕ್ಷಣವಾದರೂ ಬಿಟ್ಟಗಲದೆ, ಪರಮಾಪ್ತನಾಗಿ=ಜೀವರಿಗೆ ಪರಮಾಪ್ತನಾಗಿ, ಇಪ್ಪ=ಇರುತ್ತಿರುವನು.

ತಾತ್ಪರ್ಯ.—ಶ್ರೀಲಕ್ಷ್ಮೀಪತಿಯಾದ ಶ್ರೀಪರಮಾತ್ಮನು, ಜೀವರ, ಚಕ್ಷು ಶ್ರೋತ್ರಾದಿ ೧೦ ಇಂದ್ರಿಯಗಳು ಮತ್ತು ಮನಸ್ಸು ಅಂತು ೧೧ ಇಂದ್ರಿಯಗಳಲ್ಲಿ, ಶಕ್ತಿ ಪ್ರತಿಷ್ಠಾ ಸಂವಿತ್ ಸ್ಫೂರ್ತಿ, ಪ್ರಕೃತಿ ಕಲಾ, ವಿದ್ಯಾಮತಿ, ನಿಯತಿ ಮಾಯಾ ಕಾಲ ಎಂಬ ೧೧ ರೂಪಗಳಿಂದ ಅಂತರ್ಗತನಾಗಿರುವನು. ಜನರಿಗೆ ಸುಂದರವಾದ ರೂಪಗಳನ್ನು ಅಥವಾ ಮನೋಹರವಾದ ವೈಕುಂಠಾದಿ ಲೋಕಗಳನ್ನು ಅವರವರ ಯೋಗ್ಯತಾನುಸಾರವಾಗಿ ಕೊಡುತ್ತಿರುವ ಪೂರ್ಣಜ್ಞಾನಾನಂದಮಯನಾದ ಶ್ರೀಪುರುಷನಾಮಕನು ಜೀವರ ಸ್ವರೂಪ ದೇಹಗಳಲ್ಲಿ ಅರಕ್ಷಣವಾದರೂ ಜೀವನನ್ನು ಬಿಟ್ಟಗಲದೆ ಜೀವರಿಗೆ ಪರಮಾಪ್ತನಾಗಿರುವನು.

**ಆರಧಿಕ ದಶರೂಪದಿಂದಲಿ**
**ತೋರುತಿಪ್ಪನು ವಿಶ್ವಲಿಂಗ ಶ**
**ರೀರದೊಳು ತೈಜಸನು ಪ್ರಾಜ್ಞನು ತುರೀಯನಾಮಕನು ॥**
**ಮೂರೈದು ರೂಪಗಳಿಂದಲಿ**
**ಈರೈದು ಕರಣದೊಳು ಮಾತ್ರದಿ**
**ಖೇರಶಿಖಿಜಲ ಭೂಮಿಯೊಳಗಿಹನಾತ್ಮನಾಮದಲಿ ॥೨೫॥**

ಪದ್ಯಾರ್ಥ.—ಆರಧಿಕದಶರೂಪದಿಂದಲಿ–೧೬ ರೂಪಗಳಿಂದ, ವಿಶ್ವಲಿಂಗ ಶರೀರದೊಳು–೧೬ ಕಳೆಗಳಿಂದ ಕೂಡಿದ, ತ್ರಿಗುಣಾತ್ಮಕವಾದ ಲಿಂಗ ಶರೀರದೊಳಗೆ, ತೋರುತಿಪ್ಪನು=ಜ್ಞಾನಿಗಳಿಗೆ ಕಾಣಿಸಿಕೊಳ್ಳುವನು. ಅಂದರೆ ೧೬ ರೂಪಗಳಿಂದ ಲಿಂಗಶರೀರದಲ್ಲಿ ೧೬ ಕಳಗಳಿಂದ ಇರುವನೆಂದರ್ಥ ಮೂರೈದು ರೂಪಗಳಿಂದಲಿ – ಅದು ಹೇಗೆಂದರೆ, ವಿಶ್ವ=ವಿಶ್ವನಾಮಕನಾಗಿ ಲಿಂಗಶರೀರದಲ್ಲಿ ಇರುವನು. ಲಿಂಗಶರೀರದ ೧೬ ಕಳೆಗಳಲ್ಲಿ, ತೈಜಸನು ಪ್ರಾಜ್ಞನು, ತುರೀಯನಾಮಕನು, ಮೂರೈದು ರೂಪಗಳಿಂದಲಿ=ಮೂರು ರೂಪಿಯಾದ ಪರಮಾತ್ಮನು ಒಂದೊಂದು ರೂಪದಿಂದಲೂ ಅನಿರುದ್ಧಾದಿ ೫—೫ ರೂಪಗಳನ್ನು ಧರಿಸಿ ಅಂದರೆ ೩×೫=೧೫ ರೂಪಗಳಿಂದ ಈರೈದುಕರಣದೊಳು=ಚಕ್ಷುಶ್ರೋತ್ರಾದಿ ದಶೇಂದ್ರಿಯದೊಳಗೂ ಮಾತ್ರಾದಿ=ಶಬ್ದಾದಿ ಮಾತ್ರಗುಣಗಳಿಂದ ಕೂಡಿದ, ಖೇರ, ಖ×ಈರ ಖ+ಆಕಾಶ ಈರ=ವಾಯು, ಶಿಖಿ – ಅಗ್ನಿ, ಜಲ, ಭೂಮಿಯೊಳಗೆ ಭೂಮಿಯೆಂಬ ಈ ಪಂಚಮಹಾಭೂತದೊಳಗೂ, ಇಹ=ಇರುವನು, ಇಲ್ಲಿರುವ " ಆತ್ಮನಾ

ಮದಲಿ " ಎಂಬ ಪದವು ಮುಂದಿನ ಪದ್ಯದ " ಮನದೊಳು " ಎಂಬ ಪದದಲ್ಲಿ ಅನ್ವಯಿಸತಕ್ಕದ್ದು.

ತಾತ್ಪರ್ಯ.— ಈ ಪದ್ಯದಿಂದ ಲಿಂಗ ಶರೀರದಲ್ಲಿರುವ ಭಗವದ್ರೂಪಗಳನ್ನು ಹೇಳುತ್ತಾರೆ.—ಶ್ರೀಪರಮಾತ್ಮನು ಷೋಡಶ( ೧೬) ಕಲಾತ್ಮಕವಾದ ಲಿಂಗ ಶರೀರದಲ್ಲಿ ಹದಿನಾರು ರೂಪಗಳಿಂದ ವ್ಯಾಪ್ತನಾಗಿರುವನೆಂದು ಹೇಳಿದರು. ಅದರ ವಿವರವನ್ನು ಹೇಳುತ್ತಾರೆ.—ಲಿಂಗ ಶರೀರ ಷೋಡಶ ಕಲೆಗಳಿಂದ ಕೂಡಿರುವುದು. ಜ್ಞಾನೇಂದ್ರಿಯಗಳು ೫, ತನ್ಮಾತ್ರಾ ಗುಣಗಳಿಂದ ಕೂಡಿದ ಪಂಚಮಹಾಭೂತಗಳು ೫, ಮನಸ್ಸು ೧, ಅಂತು ಹದಿನಾರು. ಇವುಗಳಲ್ಲಿ ಪರಮಾತ್ಮನ ೧೬ ರೂಪಗಳಾವುವೆಂದರೆ.—ಮೊದಲು ವಿಶ್ವರೂಪದಿಂದ ಲಿಂಗಶರೀರದಲ್ಲಿರುವದು. ಇದಲ್ಲದೆ ೧೬ ತಲೆಗಳಲ್ಲಿ ೧೬ ರೂಪಗಳು ಬೇರೆಬೇರೆಯಾಗಿರುವವು. ಅವುಗಳ ವಿವರ.—ತೈಜಸರೂಪಿಯಾದ ಪರಮಾತ್ಮನು ಅನಿರುದ್ಧಾದಿ ೫ ರೂಪಗಳಿಂದ ಕರ್ಮೇಂದ್ರಿಯಗಳಲ್ಲೂ, ತುರ್ಯನಾಮಕ ಅನಿರುದ್ಧಾದಿ ೫ ರೂಪಗಳಿಂದ ಪಂಚಮಹಾಭೂತಗಳಲ್ಲಿಯೂ ಇರುವನು. ಶಬ್ದ ಸ್ಪರ್ಶಾದಿ ಮಾತ್ರಾಗುಣಗಳು ಪಂಚಭೂತಗಳ ಗುಣಗಳೇ ಆದುದರಿಂದ ಬೇರೆಯಾಗಿ ತೆಗೆದುಕೊಳ್ಳಲಿಲ್ಲ. ಇದರಲ್ಲಿ ವಿಶ್ವತೈಜಸ, ಪ್ರಾಜ್ಞರೂಪಗಳು ಜೀವರಿಗೆ ಸತ್ವಾದಿ ಗುಣಪ್ರೇರಕರಾಗಿ, ಜಾಗ್ರದವಸ್ಥೆ, ಸ್ವಪ್ನ, ಸುಷುಪ್ತಿಗಳನ್ನು ಮಾಡಿಸುವರು. ತುರ್ಯನಾಮಕನು ಶರೀರ ರಕ್ಷಕನಾಗಿರುವನೆಂದು ತಾತ್ಪರ್ಯ. ಈ ಪದ್ಯದಲ್ಲಿ ಹದಿನೈದು ತಲೆಗಳಲ್ಲಿರುವ ಮೂರೈದು ರೂಪಗಳನ್ನು ಮಾತ್ರ ಹೇಳಿರುತ್ತಾರೆ. " ಆತ್ಮನಾಮದಲಿ " ಎಂಬ ಪದವನ್ನು ಮುಂದಿನ ಪದವಾದ "ಮನದೊಳು" ಎಂಬ ಪದಕ್ಕೆ ಸೇರಿಸಿ ಅರ್ಥಹೇಳಬೇಕು.

**ಮನದೊಳಾಹಂಕಾರದಲಿ ಚಿಂ**
**ತನೆಯ ಮಾಳ್ಪದು ಅಂತರಾತ್ಮನ**
**ಘನಸುತತ್ವದಿ ಪರಮವ್ಯಕ್ತದಲಿ ಜ್ಞಾನಾತ್ಮ ।**
**ಇನಿತು ಪಂಚಾಶದ್ವರಣವೇ**
**ದ್ಯನಮಜಾದ್ಯೈವತ್ತು ಮೂರ್ತಿಗ**
**ಳನು ಸದಾ ಸರ್ವತ್ರ ದೇಹಗಳಲ್ಲಿ ಪೂಜಿಪುದು ॥೨೬॥**

ಪದಾರ್ಥ.—(ಪೂರ್ವಪದ್ಯದಿಂದ ಬಂದದ್ದು) ಆತ್ಮನಾಮದಲಿ= ಆತ್ಮನಾಮಕನಾಗಿ, ಮನದೊಳು=ಮನಸ್ತತ್ವದೊಳಗೂ, ಅಹಂಕಾರದಲಿ=

ಅಹಂಕಾರತತ್ವಗಲ್ಲಿ, ಅಂತರಾತ್ಮನ-ಅಂತರಾತ್ಮರೂಪವನ್ನು, ಘನಸುತ ತ್ವದಿ-ಮಹತ್ತತ್ವದಲ್ಲಿ, ಪರಮನ=ಪರಮಾತ್ಮನನ್ನು, ಅವ್ಯಕ್ತದಲಿ=ಅವ್ಯ ಕ್ತತತ್ವದಲ್ಲಿ, ಜ್ಞಾನಾತ್ಮ-ಜ್ಞಾನಾತ್ಮನನ್ನು, ಚಿಂತನೆಯ=ಚಿಂತನೆಯನ್ನು, ಮಾಳ್ಪದು=ಮಾಡತಕ್ಕದ್ದು, ಇನಿತು-ಈ ಪ್ರಕಾರವಾಗಿ, ಪಂಚಾಶದ್ವರ್ಣ ವೇದ್ಯನ=ಅಕಾರಾದಿ ೫೦ ಅಕ್ಷರಗಳಿಂದ ತಿಳಿಸಿಕೊಳ್ಳಲ್ಪಡುವನ, ಅಜಾದಿ= ಅಜ, ಆನಂದ ಮೊದಲಾದ, ಐವತ್ತು ಮೂರ್ತಿಗಳನು-೫೦ ಮೂರ್ತಿಗಳ ನ್ನು, ಸದಾ=ಸರ್ವಕಾಲದಲ್ಲಿಯೂ, ಸರ್ವತ್ರದೇಹದ=ಎಲ್ಲಾ ಸ್ಥಳಗಳಲ್ಲಿ ಯೂ, ಪೂಜಿಪುದು=ಪೂಜಿಸಬೇಕು.

ತಾತ್ಪರ್ಯ.—ಪೂರ್ವ ಪದ್ಯದಲ್ಲಿ ಷೋಡಶ ಕಲಾತ್ಮಕ ಲಿಂಗಶರೀರ ವೆಂದು ಹೇಳಿ ೧೫ ತಲೆಗಳ ಭಗವದ್ರೂಪಗಳನ್ನು ಹೇಳಿದರು. ಈಗ ಉಳಿದ ಮನಸ್ತತ್ವವನ್ನೂ ಇತರ ತತ್ವಗಳನ್ನೂ ಪ್ರಕಾರಾಂತರವಾಗಿಯೂ ದೇಹಗಳಲ್ಲಿ ಭಗವದ್ರೂಪಗಳನ್ನು ಪೂಜಿಸಬೇಕೆಂಬ ವಿಷಯವನ್ನು ಹೇಳು ತ್ತಾರೆ—

ಮನಸ್ತತ್ವದಲ್ಲಿ ಆತ್ಮರೂಪವನ್ನೂ, ಅಹಂಕಾರತತ್ವದಲ್ಲಿ ಅಂತರಾ ತ್ಮರೂಪವನ್ನೂ, ಮಹತ್ತತ್ವದಲ್ಲಿ ಪರಮಾತ್ಮನ ರೂಪವನ್ನೂ, ಅವ್ಯಕ್ತತ ತ್ವದಲ್ಲಿ ಜ್ಞಾನಾತ್ಮರೂಪವನ್ನು ಚಿಂತಿಸಬೇಕು. ಅಲ್ಲದೆ ಅಕಾರ ಮೊದಲು “ಕ್ಷ” ವರೆಗೂ ಅಕ್ಷರಗಳು ೫೧ ಆಗುವವು. ಈ ಅಕ್ಷರ ಪ್ರತಿಪಾದ್ಯ ರೂಪಗಳು ತಂತ್ರಸಾರದಲ್ಲಿ ಹೇಳಿರುವರು. ಮಾತೃಕಾನ್ಯಾಸದಲ್ಲಿಯೂ ಬರುವುದು. ಅಜ, ಆನಂದ, ಇಂದ್ರ, ಈಶಾನ ಮೊದಲಾದ ೫೧ ರೂಪ ಗಳು ಇರುವವು. ಆದರೆ ಇಲ್ಲಿ ದಾಸರಾಯರು ೫೦ ಅಕ್ಷರಗಳು, ೫೦ರೂಪ ಗಳು ಎಂದು ಹೇಳಿರುವರು. “ಏಕಪಂಚಾದಶದ್ವರ್ಣಾನಾಂ” ಇತ್ಯಾದಿ ಆಚಾರ್ಯರ ವಾಕ್ಯದಿಂದ ೫೧ ಆಗುವವು. ಇದರ ಅರ್ಥವೇನೆಂದರೆ— ಅಕಾರಮೊದಲು “ಳ” ಕಾರದವರೆಗೂ ಇರುವ ಅಕ್ಷರಗಳು, ಅ=ಅಜ, ಆನಂದ, ಇ=ಇಂದ್ರ, ಉ=ಉಗ್ರ, ಊ=ಊರ್ಜ, ಋ=ಋಕಂಭರ ಎಂದು ಅಕ್ಷರಗಳನ್ನೇ ಆಯಾ ರೂಪಗಳು ತೋರಿಸುವವು. “ಕ್ಷ” ಎಂಬ ಅಕ್ಷರಕ್ಕೆ ಮಾತ್ರ ಅಕ್ಷರ್ಯರೂಪವನ್ನು ತೋರಿಸದೆ ನರಸಿಂಹದೇವನು ಆ ಅಕ್ಷರ ಪ್ರತಿಪಾದ್ಯನಾಗಿರುವನು. ಆದ್ದರಿಂದ ದಾಸರಾಯರು, ಪಂಚಾಶ ದ್ವರ್ಣವೇದ್ಯನೆಂದು ಹೇಳಿದರು. “ಕ್ಷ” ಎಂಬುವದು ನರಸಿಂಹದೇವತಾ ಕವಾದುದೆಂದು, “ಕ್ಷಂ” ನರಸಿಂಹಾಯನಮಃ ಎಂದು ಮಾತೃಕಾ ಮಂ

ತ್ರದಲ್ಲಿ ಹೇಳಿರುವರು. ಇದರಿಂದ ತಿಳಿದುಬಂದ ಅಂಶವೇನೆಂದರೆ.—"ಪಂಚಾಶದ್ವರ್ಣವೇದ್ಯನು' ಎಂಬ ದಾಸರಾಯರ ವಾಕ್ಯದಿಂದ೫೦ ಅಕ್ಷರಗಳಿಂದ ತಿಳಿಸಿಕೊಳ್ಳಲ್ಪಡುವನೆಂದು ಅರ್ಥವಾಗುವದು. ಇದರಿಂದ ಅಕಾರ ಮೊದಲು ಳಕಾರದವರೆಗೂ ಆಗುವ ೫೦ ಅಕ್ಷರಪ್ರತಿಪಾದ್ಯನಾಮಗಳು ಕ್ಷಕಾರ ಪ್ರತಿಪಾದ್ಯ ನರಸಿಂಹನಾಮಕನಾದ ಶ್ರೀಪರಮಾತ್ಮನ ಗುಣಗಳನ್ನು ಹೇಳುವುವೆಂಬ ಭಾವ. ಹೇಗೆಂದರೆ.—ಅಜ-ಉತ್ಪತ್ತಿ, ಶೂನ್ಯ, ಆ=ಆನಂದ ಸ್ವರೂಪ, ಇಂದ್ರ=ಪರಮೈಶ್ವರ್ಯ ಪ್ರದನು, ಇತ್ಯಾದಿ ಭಗವದ್ರೂಪಗಳನ್ನು ಪ್ರಕಟನ ಮಾಡುವ ರೂಪಗಳು ೫೦ ಕ್ಷಕಾರ ಪ್ರತಿಪಾದ್ಯನು, ವೇದ್ಯನು=ತಿಳಿದುಕೊಳ್ಳಲ್ಪಡಲು ಯೋಗ್ಯನು, ಸ್ತೋತ್ರಮಾಡುವವನೂ, ಅವನೇ ಒಂದು ರೂಪದಿಂದ ತನ್ನ ಮಹಿಮೆಯನ್ನು ಉಪದೇಶ ಮಾಡುತ್ತಾ, ಮತ್ತೊಂದು ರೂಪದಿಂದ ಹೊಗಳಿಸಿಕೊಳ್ಳುತ್ತಾ ಇರುವವನು ಪರಮಾತ್ಮನೇ ಆದುದರಿಂದ ವೇದ್ಯರೂಪವಾದ ಕ್ಷಕಾರ ಪ್ರತಿಪಾದ್ಯ ನರಸಿಂಹರೂಪವನ್ನು ಬೇರೆಯಾಗಿ ತೆಗೆದುಕೊಂಡರೆಂಬುವುದರಿಂದ ಆಚಾರ್ಯರ ಮತಕ್ಕೂ, ದಾಸರಾಯರ ಅಭಿಪ್ರಾಯಕ್ಕೂ ಬೇಧವಿಲ್ಲ. ಕ್ಷಕಾರ ಪ್ರತಿಪಾದ್ಯ ನೃಸಿಂಹ ಶಬ್ಧಕ್ಕೆ ಪುರುಷೋತ್ತಮನೆಂದರ್ಥ. ಪುರುಷರೂಪವೇ ಅವತಾರಗಳಿಗೆ ಮೂಲಭೂತವಾದ ಬ್ರಹ್ಮಾದಿಗಳನ್ನು ಸೃಷ್ಟಿಮಾಡುವುದಕ್ಕಾಗಿ ತೆಗೆದುಕೊಂಡ ರೂಪವು, ಭಾಗವತ ಪ್ರಥಮಸ್ಕಂಧದಲ್ಲಿ " ಜಗೃಹೇ ಪೌರುಷಂ ರೂಪಂ ಭಗವಾನ್ಮಹದಾದಿಭಿಃ ಸಂಭೂತಂ ಷೋಡಶಕಲಮಾದೌ ಲೋಕಸಿಸೃಕ್ಷಯಾ ॥ ಯಸ್ಯಾಂಭಸಿಶಯಾನಸ್ಯಯೋಗನಿದ್ರಾಂ ವಿತನ್ವತಃ । ನಾಭಿಹ್ರದಾಂಬುಜಾದಾಸೀದ್ಬ್ರಹ್ಮಾ ವಿಶ್ವಸೃಜಾಂಪತಿಃ ॥ " ಶ್ರೀಪರಮಾತ್ಮನು ಮೊಟ್ಟಮೊದಲು ಜಗತ್ತನ್ನು ಸೃಷ್ಟಿಮಾಡುವ ಉದ್ದೇಶದಿಂದ ಮಹತ್ತತ್ವಾಹಂಕಾರತತ್ವ ಪಂಚಭೂತಗಳಿಂದ ಸಹಿತವಾದ ಷೋಡಶಕಲೆಗಳುಳ್ಳ ಪುರುಷರೂಪವನ್ನು ಸ್ವೀಕರಿಸಿದನು. ಅಂದರೆ ಪ್ರಳಯಕಾಲದಲ್ಲಿ ಶಯನ ಮಾಡಿರುವ ರೂಪವನ್ನೇ ಪುರುಷರೂಪದಿಂದ ವ್ಯಕ್ತಪಡಿಸಿದನು. ಯಾವ ಪರಮಾತ್ಮನು ಪ್ರಳಯೋದಕದ ಮೇಲೆ ಮಲಗಿ ಯೋಗನಿದ್ರೆಯನ್ನು ಪ್ರಕಟಿಸುತ್ತಿದ್ಧನೋ ಆ ಪರಮಾತ್ಮನೇ ಪರಮಪುರುಷರೂಪವನ್ನು ಪ್ರಕಟನೆಮಾಡಿದನು. ಆ ಪರಮ ಪುರುಷರೂಪಿಯಾದ ಪರಮಾತ್ಮನ ನಾಭಿ ಕಮಲ

ದಿಂದಲೇ ಬ್ರಹ್ಮದೇವರು ಜನಿಸಿದರೆಂದು ಹೇಳಿರುವರು. ಆದ್ದರಿಂದ ಪರ ಮಪುರುಷ ರೂಪವೇ ಸೃಷ್ಟಿಗೆ ಕಾರಣವಾದ ಪ್ರಥಮ ರೂಪವು. ಪರಮ ಪುರುಷನೆಂಬ ಅರ್ಥವನ್ನು ಸೂಚಿಸುವುದು. ಅದರಂತೆ ಕ್ಷಕಾರ ಪ್ರತಿಪಾ ದ್ಯನರಸಿಂಹ ಶಬ್ದಾರ್ಥವು, ನರ=ಪುರುಷ, ಸಿಂಹ=ಶ್ರೇಷ್ಠ ಎಂದರ್ಥ. ಈ ರೀತಿ ೫೦ ಅಕ್ಷರಗಳಿಂದ ವೇದ್ಯನು ನರಸಿಂಹನು ಎಂದು ದಾಸರಾಯರ ವಾ ಕ್ಯಕ್ಕೆ ವೇದಕರೂಪ ೫೦, ವೇದ್ಯರೂಪ ೧, ಅಂತು ೫೧ ಎಂದು ಅರ್ಥವೆಂ ದು ತಿಳಿಯಬೇಕು. ಹೀಗೆ ೫೧ ಅಕ್ಷರ ಪ್ರತಿಪಾದ್ಯ ಭಗವದ್ರೂಪಗಳನ್ನು ಅಜಾಯನಮಃ-ಮುಖೆ, ಆನಂದಾಯನಮಃ-ಶಿರಸಿ ಎಂಬ ಮಾತೃಕಾನ್ಯಾ ಸಕ್ರಮದಿಂದ ದೇಹದ ಸರ್ವ ಪ್ರದೇಶಗಳಲ್ಲಿ ಸರ್ವದಾ ಪೂಜಿಸಬೇಕು.

**ಚತುರವಿಂಶತಿ ತತ್ವದೊಳು ತ**
**ತ್ಪತಿಗಳೆನಿಸುವ ಬ್ರಹ್ಮಮುಖ ದೇ**
**ವತೆಗಳೊಳು ಹದಿಮೂರುಸಾವಿರದೆಂಟನೂರಧಿಕ ।**
**ಚತುರವಿಂಶತಿ ರೂಪದಿಂದಲಿ**
**ವಿತತನಾಗಿದ್ದೆಲ್ಲರೊಳು ಪ್ರಾ**
**ಕೃತಪುರುಷನಂದದಲಿ ಪಂಚಾತ್ಮಕನು ರಮಿಸುವನು ॥೨೭॥**

ಪದ್ಯಾರ್ಥ.— ಚತುರವಿಂಶತಿತತ್ವದೊಳು–೨೪ ತತ್ವಗಳಲ್ಲೂ, ತತ್ಪ ತಿಗಳೆನಿಸುವ=ತತ್ವಾಭಿಮಾನಿಗಳೆಂದು ಪ್ರಸಿದ್ಧರಾದ, ಬ್ರಹ್ಮಮುಖದೇವತೆ ಗಳೊಳು=ಬ್ರಹ್ಮದೇವರೇ ಮೊದಲಾದ ದೇವತೆಗಳೊಳಗೂ, ಹದಿಮೂರು ಸಾವಿರದೆಂಟನೂರಧಿಕ ಚತುರವಿಂಶತಿರೂಪದಿಂದಲಿ=೧೩, ೮೨೪ ರೂಪಗ ಳಿಂದ, ಎಲ್ಲರೊಳು=ಸಕಲ ಜನಗಳಲ್ಲಿಯೂ, ವಿತತನಾಗಿದ್ದು=ವ್ಯಾಪ್ತನಾಗಿ ದ್ದು, ಪಂಚಾತ್ಮಕನು=ಅನಿರುದ್ಧಾದಿ ಐದು ರೂಪಾತ್ಮಕನು, ಪ್ರಾಕೃತಪು ರುಷನಂದದಲಿ–ಸಾಮಾನ್ಯರಾದ ಪ್ರಾಕೃತಪುರುಷನಂತೆ ರಮಿಸುವನು,

ತಾತ್ಪರ್ಯ.— ಈ ಪದ್ಯದಿಂದ ಸ್ಥೂಲ ಶರೀರದಲ್ಲಿ ವ್ಯಾಪಿಸಿಕೊಂಡಿ ರುವ, ಈ ಸಂಧಿಯಲ್ಲಿ ಈವರೆಗೂ ತೋರಿಸಿರುವ ಒಟ್ಟು ಭಗವದ್ರೂಪಗಳು ಸಂಖ್ಯೆಯನ್ನು ಚಿಂತನೆಗೋಸ್ಕರ ಕ್ರೋಢೀಕರಿಸಿ ಹೇಳುತ್ತಾರೆ.— ಒಟ್ಟು ೧೩, ೮೨೪ ರೂಪಗಳು. ಅಕ್ಷರ ಸಂಖ್ಯೆಯಿಂದಲೇ ಇದರ ವಿವರವನ್ನು ತಿಳಿಯಬೇಕು.

| | | | |
|---|---|---|---|
| ಅವ್ಯಕ್ತ | .... | .... | ೨೫೧ |
| ಮಹತ್ | .... | .... | ೧೮೫ |
| ತಾಮಸ | .... | .... | ೭೫೧ |
| ಮನಸ್ಸು | .... | .... | ೭೫೫ |
| ದಶೇಂದ್ರಿಯಗಳ ಒಟ್ಟು ಅಕ್ಷರ ಸಂಖ್ಯೆ | | .... | ೨೩೪೩ |
| ಪಂಚಮಹಾಭೂತಗಳ ಅಕ್ಷರ ಸಂಖ್ಯೆ ಒಟ್ಟು | | | ೧೦೦೦ |
| ಪಂಚತನ್ಮಾತ್ರ ಒಟ್ಟು ಸಂಖ್ಯೆ | | .... | ೧೦೮೦ |
| | | | ೬೩೬೫ |

| | | |
|---|---|---|
| ಅಧ್ಯಾತ್ಮ, ಆಧಿದೈವ, ಅಧಿಭೂತಗಳ ಒಟ್ಟು ಸಂಖ್ಯೆ .... | | ೪೩೨೬ |
| ದಶೇಂದ್ರಿಯಗಳ ಗೋಳಕಗಳಲ್ಲಿ ಚಕ್ಷುಸ್ ಮೊದಲಾದ ಒಂದೊಂದು ಗೋಳಕದಲ್ಲಿ ಅನಿರುದ್ಧಾದಿ ೫ ರೂಪಗಳಂತೆ ೩೦ ರೂಪಗಳನ್ನೂ ಹೀಗೆ ೧೦ ಇಂದ್ರಿಯಗಳಲ್ಲಿ ೧೦×೩೦=೩೦೦ ರೂಪಗಳನ್ನು ಹಿಂದೆ ಹೇಳಿರುವರು ಅದರ ಸಂಖ್ಯೆ .... | | ೩೦೦ |
| ಇದರಂತೆ ದಶಪ್ರಾಣರಲ್ಲಿ ಒಬ್ಬೊಬ್ಬರಲ್ಲಿ ೩೦ ರೂಪಗಳಂತೆ ೧೦ ಪ್ರಾಣಗಳಲ್ಲಿ .... .... .... | | ೩೦೦ |
| ೨೪ ತತ್ವಗಳ ಪೈಕಿ ಒಂದೊಂದು ತತ್ವದಲ್ಲಿ ಆಕಾರಾದಿ ೫೧ ಅಕ್ಷರದಂತೆ ತತ್ವಗಳಲ್ಲಿ .... | ೨೪×೫೧= | ೧೨೨೪ |
| ಮೊದಲು ಕ್ಷ ವರೆಗೂ ಇರುವ ಅಕ್ಷರಗಳು ೩೫ ಇವುಗಳನ್ನು ಕ, ಕಾ, ಕಿ ಹೀಗೆ ಕಂ ಕಃ ವರೆಗೂ ೧೨ ಅಕ್ಷರಗಳು ಆಗುವುವು ಹೀಗೆ ೩೫ ಅಕ್ಷರಗಳ ಸಂಖ್ಯೆ ಮಾಡಿದರೆ | ೩೫×೧೨= | ೪೨೦ |
| ಸ್ವರಗಳನ್ನು ಕೂಡಿಸದೆ ಕ್, ಖ್ ಎಂಬ ಅಕ್ಷರಗಳು | = | ೫೧ |
| ಶಕ್ತಿಪ್ರತಿಷ್ಠಾ ಮೊದಲಾದ ರೂಪಗಳು | = | ೧೨ |
| ಸರ್ವ ದೇಹಗಳೊಳಿರುವ ಅನಿರುದ್ಧಾದಿ ಪಂಚರೂಪ | .... | ೫ |
| ಅಂತು | .... | ೧೩೮೨೪ |

ಶ್ರೀಪರಮಾತ್ಮನು ಮೇಲೆ ವಿಚಾರಿಸಿದಂತೆ ೨೪ ತತ್ವಗಳೊಳಗೂ, ತತ್ವಾಭಿಮಾನಿ ದೇವತೆಗಳಾದ ಬ್ರಹ್ಮಾದಿಗಳೊಳಗೂ, ದೇಹದ ಸರ್ವತ್ರದಲ್ಲಿಯೂ ಸಹ ಅನಿರುದ್ಧಾದಿ ಪಂಚಾತ್ಮನಾಗಿ ಒಟ್ಟು ೧೩,೮೨೪ ರೂಪಗಳಿಂದ ಎಲ್ಲರೊಳಗೂ ವ್ಯಾಪ್ತನಾಗಿದ್ದು ಪ್ರಾಕೃತ ಪುರುಷನಂತೆ ಕ್ರೀಡಿಸುವನು. ಅಥವಾ 13,824 ಸಂಖ್ಯೆಯನ್ನು ಪ್ರಕಾರಾಂತರವಾಗಿಯೂ, ಹೇಳಬಹುದು ಹೇಗೆಂದರೆ.—ತತ್ವಗಳು 24, ಒಂದೊಂದು ತತ್ವದಲ್ಲೂ ಸಂಸೃಷ್ಟಿ ತತ್ವಗಳು 24, ಅಂತು 24×24=576. ತತ್ವಪತಿ ದೇವತೆಗಳು 24 ಒಬ್ಬೊಬ್ಬ ದೇವತೆಯಲ್ಲಿ ಮೇಲೆ ಹೇಳಿದ ಪ್ರಕಾರ ಸಂಸೃಷ್ಟಿ ತತ್ವಗಳಿಂದ ಕೂಡಿದ ತತ್ವಗಳು 576 ಹೀಗೆ 24 ದೇವತೆಗಳಲ್ಲಿ ಒಟ್ಟು ರೂಪಗಳು 576×576 =13,824 ಆಗುತ್ತದೆ. ಇಷ್ಟು ರೂಪಗಳಿಂದ ಎಲ್ಲರೊಳಗೂ ಇದ್ದು ಅನಿರುದ್ಧಾದಿ ರೂಪಗಳಿಂದ ಪ್ರಾಕೃತಪುರುಷನಂತೆ ರಮಿಸುವನು.

**ಕೇಶವಾದಿ ಸುಮೂರ್ತಿದ್ವಾದಶ**
**ಮಾಸ ಪುಂಡ್ರಗಳಲ್ಲಿ ವೇದ**
**ವ್ಯಾಸನಿರುದ್ಧಾದಿ ರೂಪಗಳಾರು ಋತುಗಳಲಿ ।**
**ವಾಸವಾಗಿಹನೆಂದು ತ್ರಿಶಂತಿ**
**ವಾಸರದಿ ಸತ್ಕರ್ಮಧರ್ಮನಿ**
**ರಾಶಿಯಿಂದಲಿ ಮಾಡುಕರುಣವ ಬೇಡು ಕೊಂಡಾಡು ॥೨೮॥**

ಪದ್ಯಾರ್ಥ.—ಕೇಶವಾದಿ = ಕೇಶವ ಮೊದಲು, ಸು = ಸಮೀಚೀನವಾದ, ಮೂರ್ತಿ=ದಾಮೋದರನವರೆವಿಗೂ ಆಗುವ 12 ಮೂರ್ತಿಗಳು, ದ್ವಾದಶಮಾಸ = ಮಾರ್ಗಶಿರ್ಷ ಮೊದಲು; ಕಾರ್ತೀಕಮಾಸದವರೆವಿಗೂ ಆಗುವ 12 ತಿಂಗಳಲ್ಲೂ, ಪುಂಡ್ರಗಳಲ್ಲಿ = 12 ಊರ್ಧ್ವ ಪುಂಡ್ರಗಳಲ್ಲಿ, ಋತುಗಳಲಿ=ವಸಂತಾದಿ 6 ಋತುಗಳಲ್ಲಿಯೂ, ವೇದವ್ಯಾಸನು, ಅನಿರುದ್ಧಾದಿ ರೂಪಗಳು=ಅನಿರುದ್ಧ ಮೊದಲಾದ 5 ಮೂರ್ತಿಗಳು ಅಂತು 6 ಮೂರ್ತಿಗಳು, ವಾಸವಾಗಿಹನೆಂದು=ವಾಸವಾಗಿ ಇರುವುವೆಂದು ತಿಳಿದು. ತ್ರಿಶಂತಿವಾಸರದಿ=30 ತಿಥಿಗಳಲ್ಲಿ, ನಂದಾ, ಭದ್ರಾ, ಜಯಾ, ರಿಕ್ತಾ, ಪೂರ್ಣಾ ಎಂಬ ಸಂಕೇತವು, ಪಾಡ್ಯ ಮೊದಲು ಪಂಚಮೀವರೆವಿಗೂ ಆಗುವವು. ಹೀಗೆ ಷಷ್ಠೀ ಮೊದಲು–ದಶಮಿಯವರೆವಿಗೂ ಮತ್ತು ಏಕಾದಶಿ ಮೊದಲು–ಪೌರ್ಣಿಮಾವರೆವಿಗೂ ಹೀಗೆ ಕೃಷ್ಣಪಕ್ಷ ಅಮಾವಸ್ಯೆ ಪರ್ಯಂತ 6 ಸಲ ಸುತ್ತಿ ಬರುವುವು 6×5=30 ದಿವಸಗಳಲ್ಲಿ ನಂದಾದಿ 5 ತಿಥಿಗಳಲ್ಲಿ ಅನಿರುದ್ಧಾದಿ 5 ಮೂರ್ತಿಗಳಂತೆ ಒಂದು ತಿಂಗಳಿಗೆ ಆಗುವ 30 ತಿಥಿಗಳಲ್ಲಿ

ಅನಿರುದ್ಧಾದಿ 5 ಮೂರ್ತಿಗಳನ್ನು, 6 ಸಲ ಚಿಂತಿಸಿದರೆ 30 ಮೂರ್ತಿಗಳಾಗುವುವು. ಈ ಪ್ರಕಾರ 30 ದಿವಸಗಳಲ್ಲಿ, ನಿರಾಶೆಯಿಂದಲಿ –' ಕಾಮ್ಯಫಲಾಪೇಕ್ಷೆಯನ್ನು ಬಿಟ್ಟು, ಸತ್ಕರ್ಮಧರ್ಮ–ಸತ್ಕರ್ಮಗಳನ್ನು, ಭಾಗವತ ಧರ್ಮಗಳನ್ನು, ಮಾಡು, ಕರುಣವಬೇಡು–ಕಾಮ್ಯ ಫಲವನ್ನು ಅಪೇಕ್ಷಿಸದೆ ಸ್ವಾಮಿಯ ಕರುಣವನ್ನು ಮಾತ್ರ ಬೇಡು. ಪರಮಾತ್ಮನನ್ನು ಸ್ತುತಿಸು.

ತಾತ್ಪರ್ಯ.—ನಾವು ಧಾರಣ ಮಾಡುವ 12 ಪುಂಡ್ರಗಳಲ್ಲಿಯೂ 12 ತಿಂಗಳಲ್ಲಿಯೂ, ಋತುಗಳಲ್ಲಿಯೂ, ತಿಥಿಗಳಲ್ಲಿಯೂ ಚಿಂತಿಸಬೇಕಾದ ಭಗವದ್ರೂಪಗಳನ್ನು ಹೇಳುತ್ತಾರೆ:—

ಮಾರ್ಗಶಿರ್ಷ ಮೊದಲು ಕಾರ್ತಿಕಮಾಸದವರೆಗೂ ಕೇಶವಾದಿ ದಾಮೋದರಾಂತವಾದ 12 ಮೂರ್ತಿಗಳನ್ನು ಚಿಂತಿಸಿ ಪೂಜಾದಿಗಳನ್ನು ಮಾಡಬೇಕು. ನಿತ್ಯ ಸ್ನಾನಾದಿ ಸಂಕಲ್ಪದಲ್ಲಿ ಈಗ ವಾಡಿಕೆಯಲ್ಲಿ ವೈಶಾಖ ಮಧುಸೂದನ, ಕಾರ್ತೀಕ ದಾಮೋದರ, ಇತ್ಯಾದಿ ವ್ಯವಹಾರ ಇದ್ದೇ ಇರುವುದು, ದ್ವಾದಶ ಪುಂಡ್ರಗಳಲ್ಲಿ " ಲಲಾಟೆ ಕೇಶವಂಧ್ಯಾಯೇನ್ನಾರಾಯಣಂ ಅಥೋದರೆ" ಇತ್ಯಾದಿ ವಾಕ್ಯಗಳಂತೆ ಕೇಶವಾದಿ 12 ಮೂರ್ತಿಗಳನ್ನು ಚಿಂತಿಸಬೇಕು. ವಸಂತಾದಿ 6 ಋತುಗಳಲ್ಲಿ ವೇದವ್ಯಾಸ, ಅನಿರುದ್ಧಾದಿ ನಾರಾಯಣಾಂತ 5, ಅಂತು 6 ರೂಪಗಳನ್ನು ಪಾಡ್ಯ ಮೊದಲು ಪಂಚಮಿವರೆಗೂ ಆಗುವ ನಂದಾದಿ ತಿಥಿಗಳಲ್ಲಿ ಅನಿರುದ್ಧಾದಿ 5 ರೂಪಗಳನ್ನೂ ಚಿಂತಿಸಬೇಕು. ನಂದಾದಿ ತಿಥಿಗಳು 6 ಸಲ ತಿರುಗಿ ಬರುವುವು. ಅದರಂತೆ ಅನಿರುದ್ಧಾದಿ ರೂಪಗಳನ್ನು 6 ಸಲ ಚಿಂತಿಸಬೇಕು. ಹೀಗೆ ದ್ವಾದಶ ಮಾಸಗಳಲ್ಲಿಯೂ ಋತುಗಳಲ್ಲಿಯೂ, ತಿಥಿಗಳಲ್ಲಿಯೂ ಸಹ ಭಗವದ್ರೂಪಗಳನ್ನು ಚಿಂತಿಸಿ ಫಲದ ಆಶೆಯನ್ನು ಬಿಟ್ಟು ಸತ್ಕರ್ಮಗಳಾದ ಸಂಧ್ಯಾದಿ ಕರ್ಮಗಳನ್ನೂ, ಮುಕ್ತಿ ಸಾಧನವಾದ ಧರ್ಮಗಳನ್ನೂ, ವ್ರತ ನಿಯಮಾದಿಗಳನ್ನೂ ಮಾಡುತ್ತಾ ಪರಮಾತ್ಮನಿಗೆ ಸಮರ್ಪಿಸುತ್ತಾ ಪರಮಾತ್ಮನ ಕರುಣವನ್ನು ಮಾತ್ರವೇ ಯಾವಜ್ಜೀವವೂ ಬೇಡುತ್ತಾ ಪರಮಾತ್ಮನನ್ನು ಸ್ತೋತ್ರ ಮಾಡುತ್ತಿರಬೇಕೆಂದು ತಾತ್ಪರ್ಯ.

**ಲೋಷ್ಟಕಾಂಚನ ಲೋಹಶೈಲಜ**
**ಕಾಷ್ಟ ಮುಂತಾದಖಿಳ ಜಡಪರ**
**ಮೇಷ್ಟಿ ಮೊದಲಾದೆಲ್ಲ ಚೇತನರೊಳಗೆ ಅನುದಿನವು ।**

**ಚೇಷ್ಟೆಗಳ ಮಾಡಿಸುತ ತಿಳಿಸದೆ**
**ಪ್ರೇಷ್ಟನಾಗಿದ್ದೆಲ್ಲರಿಗೆ ಸ**
**ರ್ವೇಷ್ಟದಾಯಕ ಸಂತಯಿಸುವನು ಸರ್ವಜೀವರನಾ ||೨೯||**

ಪದ್ಯಾರ್ಥ.—ಲೋಷ್ಟ=ಹೆಂಚು, ಕಾಂಚನ=ಬಂಗಾರ, ಲೋಹ= ಕಬ್ಬಿಣ, ಶೈಲಜ=ಪರ್ವತ, ತಜ್ಜನ್ಯ = ಕಲ್ಲು ಮೊದಲಾದವು, ಕಾಷ್ಟ ಮುಂತಾದ – ಕಟ್ಟಿಗೆ ಮೊದಲಾದ, ಅಖಿಲಜಡ = ಎಲ್ಲಾ ಜಡ ವಸ್ತುಗಳಲ್ಲಿ, ಪರಮೇಷ್ಠಿ ಮೊದಲಾದ–ಬ್ರಹ್ಮ ಮೊದಲಾದ, ಎಲ್ಲಚೇತನರೊಳಗೆ= ಎಲ್ಲಾ ಪ್ರಾಣಿಗಳೊಳಗೂ, ಅನುದಿನವು=ಪ್ರತಿ ದಿವಸದ, ಚೇಷ್ಟೆಗಳ–ಕ್ರಿಯೆಗಳನ್ನು, ಮಾಡಿಸುತ, ತಿಳಿಸದೆ, ತಾನು ಮಾಡುವ ಕ್ರಿಯೆಗಳು ಇಂತಹುದೆಂದು ಯಾರಿಗೂ ತಿಳಿಸದೆ ಪ್ರೇಷ್ಟನಾಗಿದ್ದು=ಪ್ರಾಣಿಗಳಿಗೆ ಪ್ರಿಯಕರನಾಗಿದ್ದು, ಎಲ್ಲರಿಗೆ–ಸರ್ವರಿಗೂ, ಸರ್ವೇಷ್ಟದಾಯಕ=ಸಮಸ್ತಾಭಿಲಾಷೆಯನ್ನೂ ಪೂರೈಸುತ್ತಾ, ಸರ್ವಜೀವರನ–ಎಲ್ಲಾ ಪ್ರಾಣಿಗಳನ್ನೂ, ಸಂತೈಸುವನು= ಸಮಾಧಾನಪಡಿಸುವನು (ತೃಪ್ತಿಪಡಿಸುವನು)

ತಾತ್ಪರ್ಯ.—ಜಡ ಚೇತನಾದಿ ಸಕಲ ವಸ್ತುಗಳ ಕ್ರಿಯಾದಿಗಳು ಶ್ರೀ ಪರಮಾತ್ಮನಿಂದಲೇ ಆಗುವುದೆಂದು ಚಿಂತಿಸಬೇಕೆಂದು ಹೇಳುತ್ತಾರೆ,

ಹೆಂಚು ಬಂಗಾರ, ಕಬ್ಬಿಣ, ಪರ್ವತ, ಕಲ್ಲುಗಳು, ಕಾಷ್ಟಗಳು ಮೊದಲಾದ ಎಲ್ಲಾ ಜಡ ವಸ್ತುವಿನಲ್ಲಿಯೂ ಬ್ರಹ್ಮಾದಿ ಸಕಲ ಚೇತನರಲ್ಲಿ ಇದ್ದು ಪ್ರತಿ ದಿವಸ ಅವರಿಗೆ ತಿಳಿಸದೇನೇ ಸಕಲ ಕ್ರಿಯಾದಿಗಳನ್ನು ನಡಿಸುತ್ತಾ ಎಲ್ಲರಿಗೂ ಪ್ರಿಯಕರನಾಗಿ ಅವರವರ ಮನೋಭೀಷ್ಟವನ್ನು ಪೂರೈಸುತ್ತಾ ಸಕಲ ಜೀವರನ್ನು ರಕ್ಷಿಸುವನು.

**ವಾಸುದೇವಾ ನಿರುದ್ಧ ರೂಪದಿ**
**ಪುಂಶರೀರದೊಳಿಹನು ಸರ್ವದ**
**ಸ್ತ್ರೀ ಶರೀರದೊಳಿಹನು ಸಂಕರುಷಣ ಪ್ರದ್ಯುಮ್ನ ।**
**ದ್ವಾಸುಪರ್ಣ ಶೃತಿವಿನುತ ಸ**
**ರ್ವಾಸುನಿಲಯ ನಾರಾಯಣನ ಸಥು**
**ಪಾಯಸನೆಯುಗ್ಗೈವವರು ಜೀವನ್ಮುಕ್ತರೆನಿಸುವರು ||೩೦||**

ಪದ್ಯಾರ್ಥ.—ವಾಸುದೇವನಿರುದ್ಧರೂಪದಿ=ವಾಸುದೇವ, ಅನಿರುದ್ಧ ಎಂಬ ಎರಡು ರೂಪಗಳಿಂದ, ಪುಂಶರೀರದೊಳು=ಪುರುಷ ಶರೀರದೊಳಗೆ,

ಸರ್ವದಾ= ಸರ್ವ ಕಾಲದಲ್ಲಿಯೂ, ಇಹನು= ಇರುವನು, ಸ್ತ್ರೀ ಶರೀರದೊಳಗೆ =ಸ್ತ್ರೀಯರ ಶರೀರಗಳಲ್ಲಿ, ಸಂಕರುಷಣ ಪ್ರದ್ಯುಮ್ನ= ಸಂಕರ್ಷಣ ಪ್ರದ್ಯುಮ್ನ ಎಂಬ ಎರಡು ರೂಪಗಳಿಂದ, ಇಹ= ಇರುತ್ತಿರುವನು, ದ್ವಾಸುಪರ್ಣ ಶೃತಿವಿನುತ= ದ್ವಾಸುಪರ್ಣಾ ಎಂಬ ಶೃತಿಯಿಂದ ಸ್ತುತ್ಯನಾದ, ಸರ್ವಾಸು ನಿಲಯ= ಎಲ್ಲರ ಪ್ರಾಣಗಳಲ್ಲಿ ವಾಸಮಾಡುತ್ತಿರುವ, ನಾರಾಯಣನ= ಶ್ರೀಮನ್ನಾರಾಯಣನನ್ನು, ಸದುಪಾಸನೆಯಗೈವವರು = ಪರಮಾತ್ಮನು ತನ್ನ ದೆಶೆಯಿಂದ ಭಿನ್ನನು ಸರ್ವಸ್ವತಂತ್ರನು, ಜೀವನು ಅಸ್ವತಂತ್ರನು, ಎಂಬಿವೇ ಮೊದಲಾದ ಸದುಪಾಸನೆಯನ್ನು, ಗೈವವರು= ಮಾಡುವವರು, ಜೀವನ್ಮುಕ್ತರು= ಮುಕ್ತರಾಗದಿದ್ದರೂ, ಸತ್ಯಾದಿಲೋಕಗಳಲ್ಲಿ ಮುಕ್ತರಂತೆ ಸುಖವಾಗಿರುವುದರಿಂದ ಜೀವನ್ಮುಕ್ತರೆಂದು, ಎನಿಸುವರು= ಕರೆಸಿಕೊಳ್ಳಲ್ಪಡುವರು.

ತಾತ್ಪರ್ಯ :—ಸ್ತ್ರೀ ಪುರುಷರ ಶರೀರಗಳಲ್ಲಿ ವಾಸುದೇವಾದಿ ಪಂಚರೂಪಗಳ ಉಪಾಸನಾಕ್ರಮವನ್ನು ಹೇಳುತ್ತಾರೆ :—

ವಾಸುದೇವ, ಅನಿರುದ್ಧ ಎಂಬ ಎರಡು ರೂಪಗಳಿಂದ ಪುರುಷರ ಶರೀರಗಳಲ್ಲಿ ಇರುತ್ತಿರುವನು. ಸ್ತ್ರೀ ಶರೀರಗಳಲ್ಲಿ ಸಂಕರ್ಷಣ, ಪ್ರದ್ಯುಮ್ನ ಎಂಬೆರಡು ರೂಪಗಳಿಂದ ವಾಸಮಾಡುವನು. ಶ್ರೀಮನ್ನಾರಾಯಣರೂಪದಿಂದ ಎಲ್ಲರ ಪ್ರಾಣಗಳಲ್ಲಿ ವಾಸಮಾಡುವನು. ಇಂತಹ ಪರಮಾತ್ಮನನ್ನು ಸದುಪಾಸನೆ ಎಂದರೆ–ಜೀವ ಪರಮಾತ್ಮರಿಗೆ ಭೇಧಜ್ಞಾನವು, ಪರಮಾತ್ಮನ ದಾಸನು ತಾನೆಂದು ಉಪಾಸನೆ ಮಾಡುವದು, ಜೀವ ಪರಮಾತ್ಮರಿಗೆ ಪರಸ್ಪರ ಭೇದವನ್ನು ಸೂಚಿಸುವ "ದ್ವಾಸುಪರ್ಣಾಸಯುಜಾ ಸಖಾಯಂ ಸಮಾನಂ ವೃಕ್ಷಂ ಪರಿಷಸ್ವಜಾತೇ ॥ ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನನ್ಯೋ ಅಭಿಚಾತ ಶೀತ ॥" ಎಂಬ ಶೃತಿಯಿಂದ ಸ್ತುತ್ಯನೆಂದು ದಾಸರಾಯರು ಹೇಳಿರುತ್ತಾರೆ. ಈ ಶೃತಿಯು ಸ್ಪಷ್ಟವಾಗಿ ಜೀವ ಪರಮಾತ್ಮರ ಭೇಧವನ್ನೂ, ತಾರತಮ್ಯವನ್ನೂ ತೋರಿಸುವದೆಂಬ ವಿಷಯದಲ್ಲಿ ಭಾಗವತ ದಶಮಸ್ಕಂಧ ೧೧ ನೆಯ ಅಧ್ಯಾಯದಲ್ಲಿ "ಅಥ ಬದ್ಧಸ್ಯ ಮುಕ್ತಸ್ಯ ವೈಲಕ್ಷಣಂ ವದಾಮಿ ತೇ । ವಿರುದ್ಧಧರ್ಮಿಣೋಸ್ತಾತ ಸ್ಥಿತಯೋರೇಕ ಧರ್ಮಣಿ" ಇಲ್ಲಿರುವ ಬದ್ಧ ಮುಕ್ತ ಎಂಬ ಪದಗಳಿಗೆ ಬದ್ಧನೆಂದರೆ ಜೀವನೆಂತಲೂ, ಮುಕ್ತನೆಂದರೆ ವಿಷ್ಣು ಎಂತಲೂ ವಿಜಯ ಧ್ವಜೀಯದಲ್ಲಿ ವ್ಯಾಖ್ಯಾನಮಾಡಿ ಅದಕ್ಕೆ ಆಧಾರವಾಗಿ ಭಾಗವತ ತಾತ್ಪರ್ಯದ ಶ್ರೀಮದಾಚಾರ್ಯರ

ವಾಕ್ಯವನ್ನು ಉದಹರಿಸಿರುವರು, ಅದು ಯಾವುದೆಂದರೆ:—ಬದ್ಧಾ ಜೀವಾ ಇಮೇ ಸರ್ವೇ ಪೂರ್ವಬಂಧ ಸಮನ್ವಯಾತ್ ॥ ನಿತ್ಯಮುಕ್ತಸ್ತತೋ ವಿಷ್ಣು ರ್ಮುಕ್ತಾನಾಮಾಸದೋದಿತಃ॥ ಅಬದ್ಧತ್ವಾದ ಮೋಕ್ಷೋಪಿ ದೀಪ್ಯತೇ ಸೌರ ವಿರ್ಯಥಾ ॥" ಜೀವರು ಮುಕ್ತಿಗೆ ಪೂರ್ವದಲ್ಲಿ ಬದ್ಧರಾಗಿದ್ದು ತದನಂತರ ಭಗ ವತ್ಪ್ರಸಾದದಿಂದ ಮುಕ್ತರಾಗುವರು. ಪೂರ್ವದಲ್ಲಿ ಜೀವರು ಬದ್ಧರಾಗಿರುವುದ ರಿಂದ, ಬದ್ಧರೆಂದು ಜೀವರಿಗೆ ಹೆಸರು. "ನಮೇಮೋಕ್ಷೋನ ಬಂಧನಂ" ಎಂಬ ಭಗವದ್ವಾಕ್ಯಾನುಸಾರವಾಗಿ ಮುಕ್ತಿ ಪದಕ್ಕೆ ಬಂಧನದಿಂದ ಮುಕ್ತಿ ಎಂದು ಅರ್ಥವಾಗುವುದು. ಯಾರು ಬದ್ಧರೋ ಅವರೇ ಮುಕ್ತರಾಗುವರು ಪರಮಾತ್ಮನಿಗೆ ಬಂಧನವಿಲ್ಲ, ಮುಕ್ತಿ ಎಲ್ಲಿಂದ ಬಂತು ಅಂದರೆ—ಸೂರ್ಯನಿಗೆ ಕೆಲವುಕಾಲ ಪ್ರಕಾಶವುಂಟು, ಕೆಲವುಕಾಲವಿಲ್ಲವೆಂಬುವುದಿಲ್ಲದೆ ಹೇಗೆ ಸದಾ ಪ್ರಕಾಶಿಸುತ್ತಿರುವನೋ ಹಾಗೆ ಪರಮಾತ್ಮನು ನಿತ್ಯ ಮುಕ್ತನಾಗಿರುವುದ ರಿಂದ ಮುಕ್ತನೆಂದು ಪರಮಾತ್ಮನಿಗೆ ಹೆಸರು ಮಾತ್ರವೇ ಹೊರತು ಬಂಧನ ದಿಂದ ಮುಕ್ತಿ ಎಂದರ್ಥವಲ್ಲ.

ಸೂರ್ಯ ದೃಷ್ಟಾಂತದಿಂದ ಸೂರ್ಯನು ಸದಾ ಪ್ರಕಾಶವಂತನಾದರೂ ದೇಶ ಕಾಲವನ್ನನುಸರಿಸಿ ಕೆಲವು ದೇಶಗಳಲ್ಲಿ ಅಧಿಕ ತಾಪ, ಕೆಲವು ದೇಶ ಗಳಲ್ಲಿ ಪ್ರಕಾಶ ಕಮ್ಮಿಯಾಗಿ ಕಾಣುವನು. ಅಂದರೆ ಜನರಿಗೆ ಉಷ್ಣ ಅಧಿಕ ಸಮೋಷ್ಣ, ಶೀತ ಇವು ಕಾಣುವುವು. ಕೆಲವು ದೇಶದಲ್ಲಿ ಸೂರ್ಯ ರಶ್ಮಿಯೇ ಇಲ್ಲ. ಸೂರ್ಯಾಸ್ತಮಯ ಕಾಲದಲ್ಲಿ ಪ್ರಕಾಶವಿಲ್ಲದಿರುವುದು, ಉದಯ ದಲ್ಲಿ ಪ್ರಕಾಶ ಕಮ್ಮಿ, ಮಧ್ಯಾಹ್ನದಲ್ಲಿ ಪ್ರಕಾಶಾಧಿಕ ಮೊದಲಾದ ವೈಲಕ್ಷ ಣ್ಯವು ದೇಶಕಾಲಾದಿ ಉಪಾಧಿಕೃತವೇ ಹೊರತು ಸೂರ್ಯನ ಪ್ರಕಾಶದಲ್ಲಿ ಯಾವಾಗಲೂ ನ್ಯೂನಾತಿರಿಕ್ತವಿಲ್ಲ. ಹೀಗೆ ಶ್ರೀ ಪರಮಾತ್ಮನು ರಾಮ ಕೃಷ್ಣಾದ್ಯವತಾರಗಳಲ್ಲಿ "ವಿದ್ವಾನ್ಮುಗ್ಧವಚ್ಚೈವ ಕೇಶವೋ ವೇದನಾರ್ತ ವತ್" ಎಂಬ ನಿರ್ಣಯವಾಕ್ಯ ಪ್ರಕಾರ ಪಟು ತಿಂದವನಂತೆಯೂ, ತಾನು ತಿಳಿಯದವನಂತೆಯೂ ತೋರಿಸುವುದು ಲೋಕಮೋಹಕ್ಕಾಗಿ ಎಂದು ಸ್ಪಷ್ಟ ವಾಗುವುದು. ಹೀಗೆ ತೋರಿಸಿರುವನೇ ಹೊರತು ನಿಜವಾಗಿ ಎಂದಿಗೂ ಪರಮಾತ್ಮನು ಬದ್ಧನಲ್ಲ. ಬಂಧನದಿಂದ ಮುಕ್ತಿಯೂ ಇಲ್ಲ. ನಿತ್ಯಮುಕ್ತ ನಾದುದರಿಂದ ಮುಕ್ತನೆಂದು ಹೆಸರು ಮಾತ್ರ. ಹೀಗೆ ಬದ್ಧನೆಂತಲೂ, ಮುಕ್ತನೆಂತಲೂ ಹೆಸರುಳ್ಳ ಜೀವ, ಪರಮಾತ್ಮರು ಸಮಾನ ಧರ್ಮಿಗಳಾಗಿ

ಪರಸ್ಪರ ವಿರುದ್ಧ ಧರ್ಮಿಗಳೆಂದು ಹೇಳಬೇಕಾದರೆ ಪರಸ್ಪರ ವೈಲಕ್ಷಣ್ಯವಿರ ಬೇಕಾಯಿತು. ಅದಾವುದೆಂದರೆ:—ಎಲೈ ಉದ್ಧವನೆ! ಜೀವ ಪರ ಮಾತ್ಮರ ವೈಲಕ್ಷಣ್ಯವನ್ನು ಹೇಳುವೆನು ಕೇಳು (ಎಂದು ಕೃಷ್ಣನ ವಾಕ್ಯ.) ಸುಪರ್ಣಾವೇತೌ ಸದೃಶೌ ಸಖಯೌ ಎದೃಚ್ಛಯೈತೌ ಕೃತನೀಡೌ ಚ ವೃಕ್ಷೇ। ಏಕಸ್ತಯೋಃ ಖಾದತಿ ಪಿಪ್ಪಲಾನ್ನಮನ್ಯೋ ನಿರನ್ನೋಪಿ ಬಲೇನ ಭೂಯಾನ್ ॥'' ಸ್ಥಿತೋರೇಕ ಧರ್ಮಿಣಿ.

ಇಬ್ಬರು ಒಂದು ಧರ್ಮ ಉಳ್ಳವರು ಅಂದರೆ ಸಮಾನ ಧರ್ಮಿಗಳೆಂದು ಹೇಳಿದುದನ್ನು ಮೊದಲು ವಿಸ್ತರಿಸುತ್ತಾರೆ. ಈ ದೇಹವೆಂಬ ವೃಕ್ಷದಲ್ಲಿ ಆಕಾರದಲ್ಲಿ ಸಮರಾಗಿಯೂ, ಪರಸ್ಪರ ಸಖರಾಗಿಯೂ, ಅನಾದ್ಯನಂತ ಕಾಲವೂ ಚಿತ್ಸರೂಪಿಗಳಾಗಿ ಇರುವ ವಿಷಯದಲ್ಲಿ ಏಕಧರ್ಮಿಗಳಾಗಿರುವರು. ಅಂದರೆ ಸಮಾನ ಧರ್ಮಿಗಳಾಗಿರುವರು. ವಿರುದ್ಧ ಧರ್ಮವಾವುದೆಂದರೆ:— ಇವರು ಇಬ್ಬರು "ಸುಪರ್ಣೌ'' ಅಂದರೆ ಒಳ್ಳೆ ರೆಕ್ಕೆಗಳುಳ್ಳ ಪಕ್ಷಿಗಳೆಂದು ಹೇಳಿದಂತಾಯಿತು. ಸುಪರ್ಣ ಶಬ್ದಕ್ಕೆ ಸು= ಚೆನ್ನಾಗಿ, ಪರ್ಣ ಅಂದರೆ "ಪೃಪಾಲನ ಪೂರ್ಣಯೋಃ'' ಎಂಬ ಧಾತು ಬಲದಿಂದ ಜೀವರನ್ನು ಪಾಲಿಸು ವುದರಿಂದಲೂ, ಪೂರ್ಣನಾದುದರಿಂದಲೂ ಪರಮಾತ್ಮನಿಗೆ ಸುಪೂರ್ಣನೆಂದು ಹೆಸರು. ಪರಮಾತ್ಮನಿಂದ ಪಾಲ್ಯನಾದುದರಿಂದಲೂ, ಅಪೂರ್ಣನಾದುದ ರಿಂದಲೂ ಸುಪರ್ಣನೆಂದು ಜೀವನಿಗೂ ಹೆಸರು. ಅದರೆ ಈ ಅರ್ಥದಿಂದ ಸುಪರ್ಣ ಶಬ್ದವೇ ಜೀವ ಪರಮಾತ್ಮರ ಅದೃಷ್ಟಪ್ರೇರಕ ದೈವೇಚ್ಛೆಯಿಂದ ದೇಹದ ಹೃದಯಾಕಾಶವನ್ನು ವಾಸಸ್ಥಾನವನ್ನಾಗಿ ಮಾಡಿಕೊಂಡು ವಾಸ ಮಾಡುತ್ತಿರುವರು. ಇವರಲ್ಲಿ ಒಬ್ಬನಾದ ಜೀವನು "ಪಿಪ್ಪಲಾನ್ನಂ'' ಆ ದೇಹ ಸಂಬಂಧದಿಂದುಂಟಾಗುವ ಕರ್ಮಫಲವನ್ನು ಭುಂಜಿಸದಿದ್ದರೂ ಜೀವನಿ ಗಿಂತ ಸ್ವಯಂ ಬಲಾಢ್ಯನಾಗಿರುವನು. "ಆತ್ಮಾನಮ ನ್ಯಂಚ ಸರ್ವೇದ ವಿದ್ವಾನ ಪಿಪ್ಪಲಾದೋನತು ಪಿಪ್ಪಲಾದಃ ॥ ಯೋ ವಿದ್ಯಯಾಂಧಃ ಸತು ನಿತ್ಯಮುಕ್ತಂ'' ॥ ೭ ॥

(ಪಿಪ್ಪಲವನ್ನು) ಕರ್ಮಫಲವನ್ನು ಭುಂಜಿಸದ ಪರಮಾತ್ಮನು ತನ್ನನ್ನೂ ಅವನ ಸ್ವರೂಪವನ್ನೂ ಸಹ ತಿಳಿದಿರುವನು. ಪಿಪ್ಪಲಾದನಾದ ಅಂದರೆ ಕರ್ಮಫಲವನ್ನು ಭುಂಜಿಸುವ ಜೀವನು ತನ್ನನ್ನು ತಾನೇ ಅರಿಯನು, ಇನ್ನು ಪರಮಾತ್ಮನನ್ನು ಅರಿಯುವುದೆಂತು? ಜೀವನು ಅವಿದ್ಯೆ ಎಂಬ ಮಾಯೆ

ಯಿಂದ ಮೋಹಿತನಾಗಿ ಪರಮಾತ್ಮನನ್ನು ಅರಿಯನು. ಆದುದರಿಂದ ನಿತ್ಯ ದಲ್ಲಿಯೂ ಬದ್ಧನಾಗಿರುವನು. ಅಂದರೆ ಪರಮಾತ್ಮನ ವಶದಲ್ಲಿ ಇರುವನು. ಪರಮಾತ್ಮನು ವಿದ್ಯಾಮಯನು, ನಿತ್ಯಮುಕ್ತನು ಎಂಬಿವೇ ಮೊದಲಾದ ವಿರುದ್ಧ ಧರ್ಮಗಳು ಜೀವಪರಮಾತ್ಮರಲ್ಲಿರುವುವೆಂದು ಉದ್ಧವನಿಗೆ ಶ್ರೀ ಕೃಷ್ಣನು ಜೀವ ಪರಮಾತ್ಮರ ವೈಲಕ್ಷಣವನ್ನು ಉಪದೇಶಮಾಡಿ ಜೀವಪರ ಮಾತ್ಮರ ತಾರತಮ್ಯ ಭೇದಜ್ಞಾನವನ್ನು ಸ್ಪಷ್ಟಮಾಡಿರುವನು. ದ್ವಾಸು ಪರ್ಣಾ ಎಂಬ ಶೃತ್ಯರ್ಥವನ್ನೇ ಈ ಶ್ಲೋಕದಲ್ಲಿ ಹೇಳಿರುವುದರಿಂದ ಶೃತ್ಯರ್ಥ ಬೇರೆಯಾಗಿ ಬರಿಯಲಿಲ್ಲ. ದಾಸರಾಯರು ಸದುಪಾಸನೆ ಮಾಡಬೇಕೆಂದು ಹೇಳಿದುದು ಮೇಲೆ ಹೇಳಿದಂತೆ ಭೇದ ತಾರತಮ್ಯ ಜ್ಞಾನಗಳಿಂದಲೇ ಉಪಾ ಸನಾ ಮಾಡಬೇಕೆಂದೇ ಅರ್ಥವೆಂದು ತಾತ್ಪರ್ಯ. ಹೀಗೆ ಸದುಪಾಸನೆಯನ್ನು ಮಾಡುವವರು ಮುಕ್ತರಾಗುವ ಕಾಲಕ್ಕೆ ಪೂರ್ವದಲ್ಲಿಯೇ ಸತ್ಯಲೋಕ ಮೊದ ಲಾದ ಸ್ಥಾನವನ್ನು ಹೊಂದಿ ಪುನರ್ಜನ್ಮರಹಿತರಾಗಿದ್ದು ಬ್ರಹ್ಮಣಾಸಹ ಮುಕ್ತರಾಗುವರು. ಅಮುಕ್ತರಾಗಿ ಸತ್ಯಾದಿ ಲೋಕಗಳಲ್ಲಿದ್ದರೂ ಮುಕ್ತ ರಂತೆ ಇರುವುದರಿಂದ ಜೀವನ್ಮುಕ್ತರೆಂದರ್ಥ. ಅಥವಾ ಈ ಲೋಕದಲ್ಲಿಯೇ ದೇಹಾಭಿಮಾನವನ್ನು ಬಿಟ್ಟು ಶ್ವಾನ ಚಂಡಾಲಾದಿಗಳಲ್ಲಿರುವ ಮತ್ತು ತನ್ನೊಳಗಿರುವ ಭಗವದ್ರೂಪಗಳಿಗೆ ಪರಸ್ಪರ ಭೇದವಿಲ್ಲೆಂದು ತಿಳಿದು ವ್ಯಾಪ್ತ್ಯುಪಾಸನೆಯನ್ನು ಮಾಡುವವರನ್ನು ಈ ಸಂಸಾರ ಬಂಧನವು ಏನು ಮಾಡೀತು? ಸಂಸಾರದಲ್ಲಿದ್ದರೂ ಮುಕ್ತರಂತೆ ಇರುವುದರಿಂದ ಅವರಿಗೂ ಜೀವನ್ಮುಕ್ತರೆಂದು ಹೆಸರು. ಆದ್ದರಿಂದ ದಾಸರಾಯರು ಅವರಿಗೂ ಜೀವನ್ಮುಕ್ತರೆಂದು ಹೇಳಿದರು.

ಲೋಕನಿಂದ್ಯವಾದ ಕಾರ್ಯಗಳನ್ನು ಮಾಡಿ ಎಲ್ಲರಿಂದಲೂ ನಿಂದಿತನಾ ಗಿರುವ ಪಾಪಿಯು ಬದುಕಿದ್ದರೂ ಅವನನ್ನು ಜೀವನ್ಮೃತನೆನ್ನುವದು ಹೇಗೆ ಸಹಜವೋ ಹಾಗೆ ದೇಹಗೇಹಾದಿಗಳ ಅಭಿಮಾನವನ್ನು ಬಿಟ್ಟು ಸರ್ವದಾ ಭಗವಂತನನ್ನು ವ್ಯಾಪ್ತ್ಯುಪಾಸನೆ ಮಾಡುವವನನ್ನು ಜೀವನ್ಮುಕ್ತನೆಂದು ಹೇಳುವುದು ಸಹಜವೆಂದು ಭಾವಿಸಬೇಕು.

**ತನ್ನನಂತಾನಂತ ರೂಪವ ಹಿ**<br>
**ರಣ್ಯ ಗರ್ಭಾದಿಗಳೊಳಗೆ ಕಾ**<br>
**ರುಣ್ಯಸಾಗರ ಹರಹಿಯುವವರಖಿಳ ವ್ಯಾಪಾರ ||**

ಬನ್ನಬಡದಲೆ ಮಾಡಿಮಾಡಿಸಿ
ಧನ್ಯರೆನಿಸಿ ಸಮಸ್ತ ದಿವಿಜರ
ಪುಣ್ಯಕರ್ಮವ ಸ್ವೀಕರಿಸಿ ಫಲವಿತ್ತು ಪಾಲಿಸುವ ||೩೧||

ಪದ್ಯಾರ್ಥ.— ತನ್ನನಂತಾನಂತರೂಪವ-ತನ್ನ ಅನಂತಾನಂತ ರೂಪಗಳನ್ನು, ಹಿರಣ್ಯಗರ್ಭಾದಿಗಳೊಳಗೆ-ಬ್ರಹ್ಮಾದಿದೇವತೆಗಳೊಳಗೆ, ಕಾರುಣ್ಯಸಾಗರ=ಕರುಣಾಸಮುದ್ರನಾದ ಶ್ರೀಪರಮಾತ್ಮನು, ಹರಿಹಿ-ವಿಸ್ತರಿಸಿ (ಹರಡಿ) ಅವರವರ=ಅವರವರು ಮಾಡಬೇಕಾದ, ಅಖಿಲವ್ಯಾಪಾರ=ಸಮಸ್ತ ಕಾರ್ಯಗಳನ್ನು, ಬನ್ನಪಡದಲೆ=ಲೇಶವಾದರೂ ಆಯಾಸವಿಲ್ಲದೆ, ಮಾಡಿ=ತಾನು ಅವರೊಳಗಿದ್ದು ಮಾಡಿ, ಮಾಡಿಸಿ - ಅವರಿಂದಲೂ ಮಾಡಿಸಿ, ಸಮಸ್ತದಿವಿಜರ=ಸಮಸ್ತರಾದ ದೇವತೆಗಳು ಮಾಡುವ, ಪುಣ್ಯಕರ್ಮವ=ದೈತ್ಯ ಸಂಹಾರ, ತನ್ನನ್ನಾರಾಧಿಸುವುದು, ಇವೇ ಮೊದಲಾದ ಪುಣ್ಯಕರ್ಮಗಳನ್ನು, ಸ್ವೀಕರಿಸಿ, ಫಲವಿತ್ತು=ಇಹದಲ್ಲಿ ಭೋಗವನ್ನು, ಪರದಲ್ಲಿ ಅವರವರ ಯೋಗ್ಯತಾನುಸಾರವಾಗಿ ಮುಕ್ತಿ ಸುಖವನ್ನಿತ್ತು, ಸಲಹುವನು-ಸಂರಕ್ಷಿಸುವನು.

ತಾತ್ಪರ್ಯ.— ಶ್ರೀಪರಮಾತ್ಮನು ಭಕ್ತಜನರಲ್ಲಿ ಪರಮ ಪ್ರೀತಿಯನ್ನು ಮಾಡುವನು ಎಂಬುದನ್ನು ವಿಶದಮಾಡುವುದಕ್ಕಾಗಿ ಭಕ್ತಾಗ್ರೇಸರರಾದ ಬ್ರಹ್ಮಾದಿದೇವತೆಗಳಲ್ಲಿ ಕರುಣಾಸಮುದ್ರನಾದ ಶ್ರೀಪರಮಾತ್ಮನ ಕಾರುಣ್ಯವನ್ನು ಹೇಳುತ್ತಾರೆ.

ಕರುಣಾಸಮುದ್ರನಾದ ಶ್ರೀಪರಮಾತ್ಮನು ತನ್ನ ಅನಂತಾನಂತ ರೂಪಗಳನ್ನು ತತ್ವಾಭಿಮಾನಿಗಳಾದ ಬ್ರಹ್ಮಾದಿ ದೇವತೆಗಳಲ್ಲಿ, ಹರವಿ ಅಂದರೆ ಮೇಲೆ ಹೇಳಿದಪ್ರಕಾರ ಅನಂತರೂಪಗಳಿಂದ ಸಕಲತತ್ವಪತಿಗಳಾದ ಬ್ರಹ್ಮಾದಿಗಳಲ್ಲಿದ್ದು ೨೪ ತತ್ವಗಳಲ್ಲಿ ತತ್ಪತಿಗಳಾಗಿದ್ದು ಚಕ್ಷುಶ್ರೋತ್ರಾದಿಗಳಿಂದ ಸಕಲ ಪ್ರಾಣಿಗಳು ಮಾಡಬೇಕಾದ ಕೃತ್ಯಗಳನ್ನು, ಬ್ರಹ್ಮಾದಿತತ್ಪತಿ ದೇವತೆಗಳೊಳಗಿದ್ದು, ತಾನು ಮಾಡಿಸಿ, ಅವರಿಂದ ಮಾಡಿಸುವನು ಎಂದು ಒಂದರ್ಥ ಸತ್ಯಲೋಕ, ಸ್ವರ್ಗಲೋಕಾದಿಗಳಲ್ಲಿ ವಾಸಮಾಡುತ್ತಿರುವ, ಬ್ರಹ್ಮರುದ್ರೇಂದ್ರಾದಿ ಸಕಲದೇವತೆಗಳಲ್ಲಿ ತತ್ತದಾಕಾರನಾಗಿ ತಚ್ಛಬ್ಧವಾಚ್ಯನಾಗಿ ಅನಂತಾನಂತ ರೂಪಗಳಿಂದ ಅವರಲ್ಲಿರುವನು. ಹೇಗೆಂದರೆ, ಬ್ರಹ್ಮದೇವ

ಬ್ರಹ್ಮದೇವರಲ್ಲಿ " ಬ್ರಹ್ಮ " ಎಂಬ ಪದವನ್ನು ಅಕ್ಷರಸಂಖ್ಯೆಮಾಡಿದರೆ ಬ್ರ=೫, ಹ್ಮ=೧೩, ಇದನ್ನು ವಾಮಾಂಕಮಾಡಿದರೆ ೩೧೫ ರೂಪಗಳು ಆಗುವವು ಬ್ರಹ್ಮಾಂತರ್ಗತ ವಾಸುದೇವಮೂರ್ತಿ ಇದರ ಅಕ್ಷರ ಸಂಖ್ಯಾ=ವಾ-೪, ಸು-೩, ದೇ=೩, ವ=೪, ವಾಮಾಂಕರೀತ್ಯಾ ೪೩೩೪ ಆದವು. ಇವರ ಮೇಲೆ ಬ್ರಹ್ಮಾದಿಗಳ ಪಂಚಭೂತಿಕದೇಹದಲ್ಲೂ ೨೪ ತತ್ವಗಳೂ ಅವರುಗಳಲ್ಲಿ ಮೇಲೆ ಹೇಳಿದ ಪ್ರಕಾರ ೧೩೮೨೪ ರೂಪಗಳು. ಇವರಂತೆ ಅವರೊಳಗೆ ಇರುವ ತತ್ವಾಭಿಮಾನಿ ದೇವತೆಗಳಲ್ಲಿ ಒಬ್ಬೊಬ್ಬ ದೇವತೆಯಲ್ಲೂ ಯಥಾಪ್ರಕಾರ ರೂಪಗಳು, ಹೀಗೆ ತತ್ವಾಭಿಮಾನಿದೇವತೆಗಳಿಗೂ ಅನಂತರೂಪಗಳನ್ನು ಕೊಟ್ಟು ತಾನು ರುದ್ರಾದಿ ಒಬ್ಬೊಬ್ಬರಲ್ಲೂ ಅನಂತಾನಂತರೂಪಗಳಿಂದಿದ್ದು ಅವರು ಮಾಡಬೇಕಾದ ಕಾರ್ಯಗಳನ್ನು ತಾನು ಮಾಡುವನು. ಅಂದರೆ ತತ್ವಾಭಿಮಾನಿಗಳಲ್ಲಿದ್ದು ತತ್ವಕಾರ್ಯಗಳನ್ನು ಮಾಡಿಸುವನು. ಬ್ರಹ್ಮದೇವರೊಳಗಿದ್ದು ಸೃಷ್ಟಿಮಾಡುವನು. ರುದ್ರದೇವರೊಳಗಿದ್ದು ಸಂಹಾರ ಮಾಡುವನು. ಇಂದ್ರದೇವರಲ್ಲಿದ್ದು ಸ್ವರ್ಗವನ್ನು ಪಾಲಿಸುತ್ತಾ ದುಷ್ಟನಿಗ್ರಹಮಾಡಿ ಶತಾಶ್ವಮೇಧವನ್ನು ಮಾಡುವನು. ಈ ಕಾರ್ಯಗಳನ್ನು ಅಂತರ್ಯಾಮಿಯಾಗಿ ತಾನುಮಾಡಿ, ಅವರಿಂದಲೂ ಮಾಡಿಸಿ, ಸೃಷ್ಟಿಕರ್ತಾ— ಬ್ರಹ್ಮ, ಸಂಹಾರಕರ್ತಾ— ರುದ್ರ, ವೃತ್ರಾಸುರನನ್ನು ಇಂದ್ರನು ಸಂಹರಿಸಿದನು. ನೂರು ಅಶ್ವಮೇಧವನ್ನು ಮಾಡಿದನು, ರುದ್ರದೇವರು ತ್ರಿಪುರಾಸುರನನ್ನು ಸಂಹರಿಸಿದರೆಂಬ ಇವೇ ಮೊದಲಾದ ಪುಣ್ಯಕರ್ಮಗಳನ್ನು ತಾನು ಸ್ವೀಕರಿಸಿ, ಇಹದಲ್ಲಿ ಅವರವರ ಯೋಗ್ಯತಾನುಸಾರವಾಗಿ ಫಲವನ್ನು ಕೊಟ್ಟು ಮುಕ್ತಿಯಲ್ಲಿಯೂ ತಾರತಮ್ಯ ಪ್ರಕಾರ ಬ್ರಹ್ಮಾದಿಗಳಿಗೆ ಆನಂದವನ್ನುಂಟುಮಾಡಿಸುವನು. ಹೀಗೆ ಪ್ರತಿ ಪ್ರಯೋಜನವನ್ನಪೇಕ್ಷಿಸದೆ ಇಂತಃ ಕೀರ್ತಿಯನ್ನೂ ಆನಂದವನ್ನೂ ಕೊಡಿಸುವುದರಿಂದಲೇ ಕಾರುಣ್ಯಸಾಗರನೆಂದರು. ಇಷ್ಟು ಮಾಡಿದರೂ " ಅಕರ್ತ " ನೆಂದು ಪರಮಾತ್ಮನಿಗೆ ಹೆಸರು ಅದೇಕೆಂದರೆ—" ಅಕರ್ತಾಕ್ಲಿಷ್ಟಕಾರಿತ್ವಾತ್ " ಎಷ್ಟು ಕಾರ್ಯವನ್ನು ಮಾಡುತ್ತಿದ್ದರೂ ಲೇಶವಾದರೂ ಕಾರ್ಯಪ್ರಯುಕ್ತವಾದ ಆಯಾಸವಿಲ್ಲದೇ ಇರುವುದರಿಂದಲೇ ಹೆಸರು. ಅದನ್ನೇ ದಾಸರಾಯರು " ಬನ್ನಪಡದಲೇ " ಎಂಬ ಪದದಿಂದ ತಿಳಿಸಿರುವರು. ಶ್ರಮವಿಲ್ಲದೆ ಕಾರ್ಯಗಳನ್ನು ಮಾಡಿಮಾಡಿಸುವನು

**ಸಾಗರದೊಳಿಹ ನದಿಯಜಲ ಭೇ**
**ದಾಗಸದೊಳಿಪ್ಪಬ್ಜ ಬಲ್ಲವು**
**ಕಾಗಿಗುಬ್ಬಿಗಳರಿಯಬಲ್ಲವೆ ನದಿಯಜಲ ಸ್ಥಿತಿಯಾ ||**
**ಭೋಗಿವರ ಪರ್ಯಂಕಶಯನನೊ**
**ಳೀಗುಣತ್ರಯಬದ್ಧ ಜಗವಿಹ**
**ದಾಗಮಜ್ಞರು ತಿಳಿವರಜ್ಞಾನಿಗಳವಡದು ||೩೨||**

ಪದ್ಯಾರ್ಥ.—ಸಾಗರದೊಳು-ಸಮುದ್ರದಲ್ಲಿ, ಇಹ=ಇರುವ, ನದಿಯಜಲ=ನದಿಯ ನೀರಿನ, ಭೇದ=ಭೇದವನ್ನು, ಆಗಸದೊಳು-ಆಕಾಶದಲ್ಲಿ ಇಪ್ಪ=ಸಂಚರಿಸುತ್ತಿರುವ, ಅಬ್ಜ=ಉದಕಪ್ರದವಾದ ಮೇಘಗಳು, ಬಲ್ಲ-ತಿಳಿಯುವವು. ಕಾಗಿಗುಬ್ಬಿಗಳು, ನದಿಯಜಲಭೇದ=ಸಮುದ್ರದಲ್ಲಿ ಕೂಡಿದ ನದಿಯ ಸಿಹಿನೀರನ್ನು, ಅರಿಯಬಲ್ಲವೇ=ತಿಳಿಯುವವೆ? ಭೋಗಿವರ=ಸರ್ಪ ಶ್ರೇಷ್ಠನಾದ ಶೇಷದೇವರೇ, ಪರ್ಯಂಕ=ಹಾಸಿಗೆಯಾಗಿಮಾಡಿಕೊಂಡು, ಶಯನದೊಳು=ಮಲಗಿರುವ ಪರಮಾತ್ಮನೊಳಗೆ, ಗುಣತ್ರಯಬದ್ಧ ಜಗವು=ಸತ್ವ ರಜಸ್ತಮೋಗುಣಗಳಿಂದ ಕೂಡಿದ ಈ ಪ್ರಪಂಚವು, ಇಹದು=ಇರುವುದು ಆಗಮಜ್ಞರು-ಮಧ್ವಶಾಸ್ತ್ರವನ್ನು ಚೆನ್ನಾಗಿ ತಿಳಿದವರು ತಿಳಿವರು, ಅಜ್ಞಾನಿಗಳಿಗೆ, ಅಳವಡದು=ಗೋಚರವಾಗದು.

ತಾತ್ಪರ್ಯ.—ದ್ವೈತಮತ ಸಿದ್ಧಾಂತವನ್ನು ಚೆನ್ನಾಗಿ ಬಲ್ಲವರಿಗೆ ಮಾತ್ರವೇ ಮೇಲೆ ಹೇಳಿದ ಭೇದಜ್ಞಾನವು ಸಾಧ್ಯವೇ ಹೊರತು ಇತರರಿಗೆ ತಿಳಿಯಲು ಸಾಧ್ಯವಿಲ್ಲವೆಂಬ ವಿಷಯವನ್ನು ಸದೃಷ್ಟಾಂತವಾಗಿ ನಿರೂಪಣಮಾಡುತ್ತಾರೆ. ಸಮುದ್ರದಲ್ಲಿ ಗಂಗಾದಿ ನದಿಗಳು ಕೂಡಿರಲು, ಅಂತರಿಕ್ಷದಲ್ಲಿ ಸಂಚರಿಸುತ್ತಿರುವ ಮೇಘವೃಂದಗಳು ಮಾತ್ರ ನದೀ ಜಲವನ್ನು ಬೇರ್ಪಡಿಸಿ ಪಾನಮಾಡಬಲ್ಲವಲ್ಲದೆ ಕಾಗೆ, ಗುಬ್ಬಿ ಮೊದಲಾದವು ಸಮುದ್ರದಲ್ಲಿ ಕೂಡಿದ ನದೀಜಲದ ಪರಿಸ್ಥಿತಿಯನ್ನು ಕಾಣಬಲ್ಲವೆ ? ಅದರಂತೆ ಸಾತ್ವಿಕ, ತಾಮಸರಾದ ದೇವಮಾನುಷ ದಾನವಾದಿಗಳಿಂದಲೂ, ತ್ರಿಗುಣಮಯವಾದ ವಸ್ತುಗಳಿಂದಲೂ, ಪೂರ್ಣವಾದ ಈ ಜಗತ್ತು ಶೇಷಪರ್ಯಂಕಶಾಯಿಯಾದ ಪರಮಾತ್ಮನೊಳಗೆ ಅಡಗಿ ಪರಮಾತ್ಮನಿಂದ ಭಿನ್ನವಾಗಿವೆ ಎಂಬ ವಿಷಯವನ್ನು ತಿಳಿಯಬೇಕಾದರೆ ಮಧ್ವಸಿದ್ಧಾಂತ ಶಾಸ್ತ್ರಗಳನ್ನು ಚೆನ್ನಾಗಿ ತಿಳಿದವ

ವರಿಗಲ್ಲದೆ ಅಜ್ಞಾನಿಗಳಿಗೆ ಗೋಚರವಾಗುವುದೇ? ಎಂದಿಗೂ ತಿಳಿಯಲಾರ ದೆಂದು ತಾತ್ಪರ್ಯ.

**ಕರಣಗುಣ ಭೂತಗಳೊಳಗೆ ತ**
**ದ್ವರರೆನಿಪ ಬ್ರಹ್ಮಾದಿ ದಿವಿಜರೊ**
**ಳರಿತು ರೂಪಚತುಷ್ಟಯಗಳನು ದಿನದಿನದಿ ಸರ್ವತ್ರ ||**
**ಸ್ಮರಿಸುತನುಮೋದಿಸುತ ಹಿಗ್ಗುತ**
**ಪರವಶದಿ ಪಾಡುವವರಿಗೆ ತಂ**
**ನ್ನಿರವ ತೋರಿಸಿ ಭವವಿಮುಕ್ತರಮಾಡಿ ಪೋಷಿಸುವ ||೩೩||**

ಪದ್ಯಾರ್ಥ.—ಕರಣ = ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಲ್ಲಿಯೂ, ಗುಣ-ಗುಣತ್ರಯಗಳಲ್ಲಿಯೂ, ಅಥವಾ ತನ್ಮಾತ್ರಾಗುಣಗಳಲ್ಲಿಯೂ, ಭೂತಗಳೊಳಗೆ=ಪಂಚಮಹಾಭೂತಗಳಿಗೂ, ತದ್ವರರೆನಿಪ=ಅವುಗಳಿಗೆ ಅಧಿಪತಿಗಳೆನಿಸುವ, ಬ್ರಹ್ಮಾದಿದಿವಿಜರೊಳು=ಬ್ರಹ್ಮಾದಿದೇವತೆಗಳೊಳಗೂ, ರೂಪಚತುಷ್ಟಯಗಳನು=ಅನಿರುದ್ಧಾದಿ ರೂಪಗಳನ್ನು, ಅರಿತು-ತಿಳಿದು, ದಿನದಿನದಿ=ಪ್ರತಿನಿತ್ಯವೂ, ಸರ್ವತ್ರ-ಎಲ್ಲಾ ಪ್ರಾಣಿಗಳಲ್ಲಿಯೂ, ಸ್ಮರಿಸುತ, ಅನುಮೋದಿಸುತ=ಸ್ಮರಿಸುವವರನ್ನು ನೋಡಿ ಶ್ಲಾಘಿಸುತ್ತ, ಹಿಗ್ಗುತ-ಸಂತೋಷಪಡುತ್ತ, ಪರವಶದಿ-ಮೈಮರೆತು, ಪಾಡುವವರಿಗೆ=ಭಗವನ್ಮಾಹಾತ್ಮ್ಯಸೂಚಕಪದಗಳನ್ನು ಗಾನಮಾಡುವವರಿಗೆ, ತನ್ನಿರವ=ತನ್ನ ಸ್ಥಾನವನ್ನು, ಅಥವಾ ರೂಪವನ್ನು ತೋರಿಸಿ, ಭವವಿಮುಕ್ತರ=ಜನನಮರಣದುಃಖದಿಂದ ಮುಕ್ತರನ್ನಾಗಿಮಾಡಿ, ಪೋಷಿಸುವ=ರಕ್ಷಿಸುವನು.

ತಾತ್ಪರ್ಯ.—ತತ್ವದೊಳಗೂ, ಅಭಿಮಾನಿದೇವತೆಗಳಲ್ಲಿಯೂ ಅನಂತಾನಂತರೂಪಗಳನ್ನು ಚಿಂತಿಸಬೇಕೆಂದು ಮೇಲಿನ ಪದ್ಯಗಳಲ್ಲಿ ಹೇಳಿದ್ದರು. ಆ ರೂಪಗಳನ್ನು ಕ್ರೋಢೀಕರಿಸಿ ಸುಲಭೋಪಾಯಗಳಿಂದ ಉಪಾಸನಾ ಮಾಡುವ ಕ್ರಮವನ್ನು ಅದರ ಫಲವನ್ನೂ ಸಹ ಹೇಳುತ್ತಾರೆ.—ಜ್ಞಾನೇಂದ್ರಿಯಗಳು ೫, ಕರ್ಮೇಂದ್ರಿಯಗಳು ೫, ಮನಸ್ಸು ಇವುಗಳಲ್ಲಿ ಅನಿರುದ್ಧ ರೂಪವನ್ನೂ ತನ್ಮಾತ್ರಾಗುಣಗಳಲ್ಲಿ ಅಥವಾ ಸತ್ವಾದಿ ಗುಣಗಳಲ್ಲಿ ಪ್ರದ್ಯುಮ್ನರೂಪವನ್ನೂ ಪಂಚಮಹಾಭೂತಗಳಲ್ಲಿ ಸಂಕರ್ಷಣರೂಪವನ್ನೂ ತತ್ವಾಭಿಮಾನಿಗಳಾದ ಬ್ರಹ್ಮಾದಿಗಳಲ್ಲಿ ವಾಸುದೇವರೂಪವನ್ನೂ ಈ ಪ್ರಕಾರ ಈ ಸ್ಥಾನಗಳಲ್ಲಿ ರೂಪಚತುಷ್ಟಯಗಳನ್ನು ಪ್ರತಿದಿನವೂ ಸರ್ವಪ್ರಾಣಿಗಳ ದೇಹದಲ್ಲಿ ಚಿಂತಿಸುತ್ತಾ ಸ್ಮರಿಸುತ್ತಾ ಸಂತೋಷಪಡುತ್ತಾ ಪರವಶ

ಭಗವತ್ಪರವಾದ ಪದಪದ್ಯಗಳನ್ನು ಗಾನಮಾಡುತ್ತಾ ಇರುವವರಿಗೆ ತನ್ನ ಅ ಪರೋಕ್ಷವನ್ನಿತ್ತು ಸಂಸಾರದಿಂದ ಮುಕ್ತರನ್ನಾಗಿ ಮಾಡಿ ರಕ್ಷಿಸುವನು. ವಿಷ್ಣು ಸಹಸ್ರನಾಮಾದಿಗಳಲ್ಲಿ ವಿಸ್ತಾರವಾಗಿ ಭಗವನ್ನಾಮಗಳನ್ನು ಅವುಗಳ ಪಠನಕ್ಕೆ ಮಹಾಮಹಿಮೆಯನ್ನು ಹೇಳಿರುವರು. ಒಂದುವೇಳೆ ಈ ಸಹಸ್ರ ನಾಮ ಪಠನಮಾಡಲು ಅವಕಾಶವಿಲ್ಲದಿದ್ದರೆ ಕೊನೆಯ ಒಂದು ಶ್ಲೋಕವನ್ನು ಪಠನಮಾಡಿದರೂ ಸಹಸ್ರನಾಮ ಪಠನಮಾಡಿದ ಫಲವು ಬರುವುದೆಂದು "ನಮೋಽಸ್ತ್ವನಂತಾಯ ಸಹಸ್ರಮೂರ್ತಯೇ" ಎಂಬ ಶ್ಲೋಕದಲ್ಲಿ ಉಕ್ತವಾಗಿದೆ. ಇದರಂತೆಯೇ ಪಠನಮಾಡಬೇಕಾದ ಗ್ರಂಥಗಳು ಬಹಳವಾಗಿ ಮಾಡುವುದು ಕಷ್ಟಸಾಧ್ಯವೆಂದು ತಿಳಿದು ಅಧಿಕಾರಭೇದದಿಂದ ಉಪಾಸನಾ ಮಾಡುವುದಕ್ಕಾಗಿ ಅಧ್ಯಾಯದ ಕೊನೆಯ ಭಾಗದ ೧, ೨ ಶ್ಲೋಕಗಳಲ್ಲಿ ಸಂಗ್ರಹಿಸುವ ಸಂಪ್ರದಾಯವುಂಟು. "ಸಂಕೋಚ ವಿಸ್ತರಾಭ್ಯಾಂಚ ಕಥಯಂತಿ ಮನೀಷಿಣಃ" ಜ್ಞಾನಿಗಳು ವಿಷಯಗಳನ್ನೂ ಅಧಿಕಾರಿಗಳನ್ನೂ ಅನುಸರಿಸಿ ಸಂಕೋಚವಾಗಿಯೂ ವಿಸ್ತಾರವಾಗಿಯೂ ಹೇಳುವಂತೆ ದಾಸರಾಯರು ಒಬ್ಬೊಬ್ಬರ ದೇಹದಲ್ಲಿ ಅನಂತಾನಂತ ರೂಪಗಳನ್ನು ಚಿಂತಿಸಲು ಸಾಧ್ಯವಿಲ್ಲದ ಅಧಿಕಾರಿಗಳು ಸಕಲ ಪ್ರಾಣಿಗಳ ತತ್ವಗಳಲ್ಲಿ ತದಭಿಮಾನಿಗಳಾದ ದೇವತೆಗಳಲ್ಲಿ ೪ ರೂಪಗಳನ್ನಾದರೂ ಚಿಂತಿಸಿ ಕೃತಾರ್ಥರಾಗಲೆಂದು ಈ ಉಪಾಸನಾಕ್ರಮವನ್ನು ಸಂಗ್ರಹಿಸಿದರು.

ಮೂಲರೂಪನು ಮನದೊಳಿಹ ಶ್ರವ
ಣಾಲಿಯೊಳಗಿಹ ಮತ್ಸ್ಯಕೂರ್ಮನು
ಕೋಲರೂಪನು ತ್ವಗ್ರಸನದೊಳಿಪ್ಪ ನರಸಿಂಹ।
ಬಾಲವಟು ವಾಮನನು ನಾಸಿಕ
ನಾಳದೊಳು ವದನದಲಿ ಭಾರ್ಗವ
ಪಾಲಿಭಂಜನ ಹಸ್ತದಲಿ ಪಾದದಲಿ ಶ್ರೀಕೃಷ್ಣ ॥೩೪॥

ಪದ್ಯಾರ್ಥ.—ಮೂಲರೂಪನು=ಶ್ರೀಮನ್ನಾರಾಯಣನು, ಮನದೊಳು=ಮನಸ್ಸಿನಲ್ಲಿ, ಇಹ–ಇರುವನು, ಶ್ರವಣ=ಕಿವಿಗಳಲ್ಲಿ, ಆಲಿಯೊಳಗೆ=ಕಣ್ಣುಗಳೊಳಗೆ, ಮತ್ಸ್ಯ ಕೂರ್ಮನು=ಮತ್ಸ್ಯ ಕೂರ್ಮ ರೂಪಿಯೂ ಇರುವನು. ಕೋಲರೂಪನು=ವರಾಹರೂಪಿಯು, ತ್ವಕ್=ತ್ವಗಿಂದ್ರಿಯದಲ್ಲಿರುವನು. ರಸನದೊಳಗೆ=ಜಿಹ್ವೇಂದ್ರಿಯದಲ್ಲಿ, ನರಸಿಂಹ=ನರಸಿಂಹರೂಪಿಯು

ಇಪ್ಪ-ಇರುವನು. ಬಾಲವಟುವಾಮನನು=ಬಾಲಬ್ರಹ್ಮಚಾರಿಯಾದ ವಾಮನನು, ನಾಸಿಕನಾಳದೊಳು-ಮೂಗಿನ ಕೊಳವಿಗಳಲ್ಲಿ, ವದನದಲ್ಲಿ=ವಾಗಿಂದ್ರಿಯದಲ್ಲಿ, ಭಾರ್ಗವ=ಪರಶುರಾಮನು, ವಾಲಿಭಂಜನ-ಶ್ರೀರಾಮನು ಹಸ್ತದಲಿ=ಕೈಯೊಳಗೂ, ಪಾದದಲಿ=ಕಾಲಿನಲ್ಲಿ, ಶ್ರೀಕೃಷ್ಣ=ಶ್ರೀಕೃಷ್ಣನು ಇರುವನು.

ತಾತ್ಪರ್ಯ.— ಸಂಧಿಯನ್ನು ಮುಗಿಸುತ್ತ ದಾಸರಾಯರು ಪ್ರಕಾರಾಂತರ ಮನಸಾ ಸಹ ಹನ್ನೊಂದು ಇಂದ್ರಿಯಗಳಲ್ಲಿ ಮೂಲರೂಪದ ದಶಾವತಾರಗಳನ್ನು ಚಿಂತಿಸಲು ಭಗವತ್ಪ್ರಸಾದವಾಗುವುದೆಂದು ಕಡೆಯ ಎರಡು ಪದ್ಯಗಳಿಂದ ಹೇಳುತ್ತಾರೆ.—

ಮೂಲರೂಪಿಯಾದ ಶ್ರೀಮನ್ನಾರಾಯಣನು ಮನಸ್ಸಿನಲ್ಲಿರುವನು. ಶ್ರವಣೇಂದ್ರಿಯಗಳಲ್ಲಿ ಮತ್ಸ್ಯರೂಪಿಯೂ, ನೇತ್ರೇಂದ್ರಿಯಗಳಲ್ಲಿ ಕೂರ್ಮರೂಪಿಯೂ ಇರುತ್ತಿರುವರು. ತ್ವಗಿಂದ್ರಿಯದಲ್ಲಿ ವರಾಹರೂಪದಿಂದಿರುವನು. ನರಸಿಂಹರೂಪದಿಂದ ರಸನೇಂದ್ರಿಯದಲ್ಲಿರುವನು. ಬಾಲಬ್ರಹ್ಮಚಾರಿಯಾದ ವಾಮನನು ನಾಸಿಕೇಂದ್ರಿಯದೊಳಗಿರುವನು. ವದನದಲ್ಲಿ ಪರಶುರಾಮನು ಇರುವನು. ವಾಲಿಸಂಹಾರಕನಾದ ಶ್ರೀರಾಮನು ಹಸ್ತದಲ್ಲಿಯೂ, ಪಾದದಲ್ಲಿ ಶ್ರೀಕೃಷ್ಣನೂ ಇರುವನು.

**ಜಿನವಿಮೋಹಕ ಬುದ್ಧಪಾಯುಗ**
**ದನುಜಮರ್ದನ ಕಲ್ಕಿಮೇಢ್ರದಿ**
**ಇನಿತು ದಶರೂಪಗಳ ದಶಕರಣಂಗಳಲಿ ತಿಳಿದು ||**
**ಅನುಭವಿಪ ವಿಷಯಗಳೇ ಕೃಷ್ಣಾ**
**ರ್ಪಣವೆನಲು ಕೈಗೊಂಬ ವೃಜನಾ**
**ರ್ದನ ವರ ಜಗನ್ನಾಥವಿಠಲ ವಿಶ್ವವ್ಯಾಪಕನು ||೩೫||**

ಪದ್ಯಾರ್ಥ.— ಜಿನವಿಮೋಹಕಬುದ್ಧ=ಜೈನಮತೀಯರನ್ನು ಮೋಹಗೊಳಿಸಿದ ಬುದ್ಧನು, ಪಾಯುಗ=ಪಾಯುವಿನಲ್ಲಿ (ಗುದದಲ್ಲಿಯೂ) ದನುಜಮರ್ದನ-ದೈತ್ಯಾಂತಕನಾದ ಕಲ್ಕಿಯು, ಮೇಢ್ರದಿ-ಶಿಶ್ನೇಂದ್ರಿಯದಲ್ಲಿಯೂ ಇನಿತು = ಈ ಪ್ರಕಾರವಾಗಿ, ದಶರೂಪಗಳ= ದಶಾವತಾರರೂಪಗಳನ್ನು ದಶಕರಣಂಗಳಲಿ-ದಶೇಂದ್ರಿಯಗಳಲ್ಲಿ, ತಿಳಿದು, ಅನುಭವಿಪ – ತಾನನು

ಭವಿಸುವ, ವಿಷಯಗಳೆ=ವಿಷಯ ಸುಖಗಳನ್ನೇ, ಕೃಷ್ಣಾರ್ಪಣವೆನಲು, ವೃಜಿನಾರ್ದನ=ಪಾಪನಾಶಕನಾದ, ವರ=ಸರ್ವೋತ್ತಮನಾದ, ಅಥವಾ ವೃಜಿನಾರ್ದನವರ=ಕಷ್ಟಗಳನ್ನು ಪರಿಹರಿಸುವವರಲ್ಲಿ ಶ್ರೇಷ್ಠನಾದ ನಮ್ಮ ಬಿಂಬರೂಪಿಯಾದ ಶ್ರೀಜಗನ್ನಾಥವಿಠಲನೆಂಬ, ವಿಶ್ವವ್ಯಾಪಕನು-ಪ್ರಪಂಚವನ್ನೆಲ್ಲ ವ್ಯಾಪಿಸಿಕೊಂಡಿರುವ ಶ್ರೀಪರಮಾತ್ಮನು, ಕೈಕೊಂಬ=ಸ್ವೀಕರಿಸುವನು.

೬ನೆಯ ಸಂಧಿಯ ವ್ಯಾಖ್ಯಾನವು ಮುಗಿದುದು.

## ೭ ನೆಯ ಸಂಧಿ.

## ಪಂಚತನ್ಮಾತ್ರಾ ಸಂಧಿ.

**ಭೂಸಲಿಲ ಶಿಖಿಪವನ ಭೂತಾ**
**ಕಾಶದೊಳಗೈದೈದು ತನ್ಮಾ**
**ತ್ರಾ ಸಹಿತ ಮಂದಧಿಕ ಪಂಚಾಶದ್ವರ್ಣವೇದ್ಯ ।**
**ಈ ಶರೀರದಿ ವ್ಯಾಪಿಸಿದ್ದು**
**ಸುರಾಸುರರಿಗೆ ನಿರಂತರದಲಿ ಸು**
**ಖಾಸುಖಪ್ರದನಾಗಿಯಾಡುವ ದ್ವೇಷಿಪರ ಬಡಿವ ॥೧॥**

ಪದ್ಯಾರ್ಥ.—ಭೂ-ಭೂಮಿ, ಸಲಿಲ=ಉದಕ, ಶಿಖಿ-ಅಗ್ನಿ, ಪವನ-ವಾಯು, ಭೂತಾಕಾಶದೊಳು, ಐದು=೫, ಐದು ತನ್ಮಾತ್ರಾಸಹಿತ=ಶಬ್ದ ಸ್ಪರ್ಶಾದಿ ೫ ಮಾತ್ರಾ ಗುಣಗಳಿಂದ ಸಹಿತವಾಗಿರುವ, ಈ ಶರೀರದಿ=ಈ ಪಾಂಚಭೌತಿಕ ಶರೀರದಲ್ಲಿ, ಒಂದಧಿಕಪಂಚಾಶದ್ವರ್ಣವೇದ್ಯ-ಅಕಾರಾದಿ ೫೧ ಅಕ್ಷರಗಳಿಂದ ತಿಳಿಸಿಕೊಳ್ಳಲ್ಪಡುವವನು, ವ್ಯಾಪಿಸಿ=ವ್ಯಾಪಿಸಿಕೊಂಡಿದ್ದು, ಸುರಾಸುರರಿಗೆ=ದೇವದೈತ್ಯರಿಗೆ, ಸುಖಾಸುಖಪ್ರದನಾಗಿ=ಸುಖದುಃಖಗಳನ್ನು ಕೊಡುವವನಾಗಿ, ಆಡುವ=ಕ್ರೀಡಿಸುವನು, ದ್ವೇಷಿಪರ=ದ್ವೇಷಿಗಳನ್ನು, ಬಡಿವ=ಸಂಹರಿಪ.

ತಾತ್ಪರ್ಯ.—ಈ ಸಂಧಿಯಲ್ಲಿ ತನ್ಮಾತ್ರಾಗುಣಗಳಲ್ಲಿರುವ ಭಗವದ್ರೂಪಗಳನ್ನು ಹೇಳುತ್ತಾ ಪ್ರಥಮ ಪದ್ಯದಿಂದ ಈ ಸಂಧಿಯ ಸಾರಾಂಶವನ್ನು ಹೇಳುತ್ತಾರೆ.—ಪೃಥಿವೀ, ಅಪ್ಪು, ತೇಜಸ್ಸು, ವಾಯು, ಆಕಾಶವೆಂಬ ೫ ಭೂತಗಳು. ಇವುಗಳ ಮಾತ್ರಾಗುಣಗಳು ಗಂಧ, ರಸ, ರೂಪ, ಸ್ಪರ್ಶ, ಶಬ್ದಗಳೆಂಬ ೫. ಇವುಗಳಿಂದ ಕೂಡಿದ ಈ ಶರೀರದಲ್ಲಿ ಅ೫೦ದ ೫೧

ಅಕ್ಷರಪ್ರತಿಪಾದ್ಯವಾದ ಅಜ, ಆನಂದಾದಿ ೫೧ ರೂಪಗಳನ್ನು ಚಿಂತಿಸಬೇಕು

ಅದೆಂತೆಂದರೆ.—ಮಹಾಭೂತಗಳಲ್ಲಿ ಆಕಾಶಾದಿ ಒಂದೊಂದು ಭೂತದಲ್ಲಿಯೂ ವಾಯ್ವಾದಿ ೪ ಭೂತಾದಿಗಳ ಸಂಬಂಧವಿರುವುದು. ಅದರಂತೆ ಆಕಾಶಾದಿ ತನ್ಮಾತ್ರಾಗುಣಗಳಾದ ಶಬ್ದಾದಿಗಳಲ್ಲಿ ಸ್ಪರ್ಶಾದಿ ಗುಣಗಳು, ಸ್ಪರ್ಶಾದಿಗಳಲ್ಲಿ ಶಬ್ದಾದಿ ಗುಣಗಳು ಕಲತೇ ಇರುವುವು. ಒಂದೊಂದು ಭೂತದಲ್ಲಿ ಅವಶಿಷ್ಟ ೪ ಭೂತಗಳ ಸಂಬಂಧವೂ, ಮಾತ್ರಾ ಗುಣಗಳ ಒಂದೊಂದಗಲ್ಲಿ ೪ ಮಾತ್ರಾಗುಣಗಳ ಸಂಬಂಧವು ಇರುವುದೆಂದು ತಿಳಿಯಬೇಕು. ಭಾಗವತ ತೃತೀಯಸ್ಕಂಧ ೨೭ನೆಯ ಅಧ್ಯಾಯದಲ್ಲಿ ೫೧ನೆಯ ಶ್ಲೋಕ "ಪರಸ್ಯ ದೃಶ್ಯತೇ ಧರ್ಮೋಽತ್ಯ ಪರಸ್ಮಿನ್ನಸಮನ್ವಯಾತ್" ವಿಜಯಧ್ವಜೀಯ ವ್ಯಾಖ್ಯಾನದಲ್ಲಿ "ಪರಸ್ಯ ಪೂರ್ವಸ್ಯ, ಕಾರಣಸ್ಯಾಕಾಶಾದೇಃ ಧರ್ಮಃ ಶಬ್ದಾದಿ ಗುಣೋ ಪರಸ್ಮಿನ್ಪಶ್ಚಾತ್ತನೆ ಕಾರ್ಯೇ ವಾಯ್ವಾದೌ ದೃಶ್ಯತೇಽಹಿ || ಕುತಃ | ಸಮನ್ವಯಾತ್ ಸಂಬಂಧಾತ್ ||" ಪರಸ್ಯ=ಪೂರ್ವಕರಣವಾದ ಆಕಾಶಾದಿ ಧರ್ಮವು ಅಂದರೆ ಶಬ್ದಾದಿ ಗುಣಗಳು, ಅಪರಸ್ಮಿ-ಆಮೇಲೆ ಹುಟ್ಟಿದ ಕಾರ್ಯಭೂತವಾದ ವಾಯ್ವಾದಿಗಳಲ್ಲಿ ಇರುವುವು. ಹೇಗೆಂದರೆ.—ಸಮನ್ವಯಾತ್-ಪರಸ್ಪರ ಸಂಬಂಧವಿರುವುದರಿಂದ ಎಂದು ಹೇಳಿರುವರು.

ಈ ಆಧಾರದಿಂದ ಪಂಚ ಭೂತ ೫, ಒಂದೊಂದರಲ್ಲಿ ಇತರ ಭೂತಗಳು ೪ ಅಂದರೆ, ಭೂಮಿ ಒಂದು ಅದರಲ್ಲಿ ಉದಕಾದಿ ೪ ರಸ ಸಂಬಂಧ ಅಂತು ೫. ಹೀಗೆ ಒಂದೊಂದರಲ್ಲಿ ೫ರಂತೆ ೨೫ ಆದವು. ಇದರಂತೆ ತನ್ಮಾತ್ರಾ ಶಬ್ದಾದಿಗಳು ೨೫, ಅಂತು ೫೦, ಮನಸ್ಸೊಂದನ್ನು ಸೇರಿಸಿಕೊಂಡು ೫೧ ಆದವು. ಈ ೫೧ರಲ್ಲಿ ಅಜ, ಆನಂದ ಮೊದಲಾದ ೫೧ ಅಕ್ಷರಪ್ರತಿಪಾದ್ಯರನ್ನು ತಿಳಿಯಬೇಕು. ನಮ್ಮ ಶರೀರಗಳಲ್ಲಿ ತತ್ವಾಭಿಮಾನಿ ದೇವತೆಗಳೆಷ್ಟು ಮಂದಿಗಳಿರುವರೋ ಅಷ್ಟು ಮಂದಿ ತತ್ವಾಭಿಮಾನಿ ದೈತ್ಯರಿರುವರು ಪುಣ್ಯ ಕರ್ಮಗಳನ್ನು ಪ್ರೇರಿಸುವರು ದೇವತೆಗಳು. ಪಾಪಪ್ರೇರಕರು ದೈತ್ಯರು. ಭಾಗವತ ಏಕಾದಶಸ್ಕಂಧ ೨ನೆಯ ಅಧ್ಯಾಯ ೪೯ನೆಯ ಶ್ಲೋಕದಲ್ಲಿ "ದೇಹೇಂದ್ರಿಯ ಪ್ರಾಣಧಿಯಾಂ' ಎಂಬುದರ ಭಾಗವತ ತಾತ್ಪರ್ಯವನ್ನು ವಿಜಯಧ್ವಜೀಯ ವ್ಯಾಖ್ಯಾನದಲ್ಲಿ ತೋರಿಸಿರುವರು. ಅದಾವುದೆಂದರೆ—"ದೇಹೇಂದ್ರಿಯ ಪ್ರಾಣಧಿಯಾಂ ತ್ರಿಧೈವತ್ವಭಿಮಾನಿನಃ || ತತ್ರೋತ್ತಮಾ ದೇವತಾಸ್ತಾಃ ಸರ್ವದೋಷವಿವರ್ಜಿತಾಃ || ಮಧ್ಯಮಾ ಗುಣದೋಷೇತಾ

ಅಧಮಾ ಅಸುರಾ ಮತಾಃ || ತೇಭ್ಯೋನ್ಯೋ ಮಾನುಷೋ ಜೀವಸ್ತಾಭ್ಯಾಂ ದೇವಾಸುರಾವಪಿ | ಜೀವಾಭಿಮಾನಿನಶ್ಚೈವ ತ್ರಿವಿಧಾ ಸಂಪ್ರಕೀರ್ತಿತಾಃ ||" "ಜೀವಮಾನ್ಯುತ್ತಮೋ ಬ್ರಹ್ಮಾ ಮಧ್ಯಮಃ ಸ್ವಯಮೇವತು | ಅಧಮಃ ಕಲಿರುದ್ದಿಷ್ಟಃ ತತ್ರ ಮಧ್ಯಮ ನೀಚಯೋಃ || ಮೃತಿಜನ್ಮ ಕ್ಷುಧಾದುಃಖ ಪ್ರಭೃತ್ಯಖಿಲಮೇವತು || ನೋತ್ತಮಸ್ಯತು ಜೀವಸ್ಯ ದೇಹಾದೇಶ್ಚ ಕಥಂಚನ | ಅಸುರಾಣಾಮಧರ್ಮಸ್ಯ ವೃದ್ಧ್ಯೈ ಸುಖಮಪೀಕ್ಷ್ಯತೇ || ದೇವಾನಾಂ ನೈವಕೇನಾಪಿ ದುಃಖಂ ಪ್ರೀತಿಸ್ತು ಧರ್ಮತಃ || ಅಧರ್ಮೋಪಿ ಪ್ರೀತಯೇಸ್ಯಾದಸುರಾಣಾಂ ತಮೋಗತೇಃ || ದೇವಾನಾಂ ಪುಣ್ಯಪಾಪಾಭ್ಯಾಂ ಸುಖಮೇತ್ತರೋತ್ತರಂ || ತೇಷಾಂ ದುಃಖಾಧಿಕಂ ಕಿಂಚಿದಸುರಾವೇಶತೋ ಭವೇತ್ ಪ್ರಾಣಸ್ಯ ನಾಸುರಾವೇಶೋ ಹರಿಣಾಚ ಸಮೋಹಿಸಃ || ಸಂಪೂರ್ಣಾನುಗ್ರಹಾದ್ವಿಷ್ಣೋಃ ಪ್ರಾಣಃ ಪೂರ್ಣಗುಣೋಮತಃ || ಅಸುರಾಣಾಂ ಸುಖಾದ್ಯಾಶ್ಚ ದೇವಾವೇಶಾದುದೀರಿತಾಃ |," ಇತ್ಯಾದಿ.—ದೇಹ, ಇಂದ್ರಿಯಗಳು, ಪ್ರಾಣ, ಬುದ್ಧಿ ಮೊದಲಾದವುಗಳಿಗಭಿಮಾನಿಗಳು ಮೂರು ವಿಧರುಂಟು. ಉತ್ತಮರು ದೇವತೆಗಳು ಸರ್ವದೋಷ ರಹಿತರು, ಮಧ್ಯಮರು ಗುಣದೋಷಯುಕ್ತರು. ಅಧಮರು ದೈತ್ಯರು ಇವರೆಲ್ಲರೂ ದೋಷಯುಕ್ತರು. ಈ ಮೂವರಿಂದ ಭಿನ್ನನು ಮನುಷ್ಯಜೀವನು. ಇವನಿಗೆ ದೇವಾಸುರರು ಅಭಿಮಾನಿಗಳು.

ಜೀವಾಭಿಮಾನಿಗಳೂ ಕೂಡ ತ್ರಿವಿಧರು. ಜೀವಮಾನಿಗಳಲ್ಲಿ ಉತ್ತಮರು ಬ್ರಹ್ಮದೇವರು, ಮಧ್ಯಮನು ಜೀವನೇ. ಮತ್ತು ಪುರಂಜನನೆಂಬ ರಾಜನೋರ್ವನು. ಅಧಮನು ಕಲಿಯು. ಇವರಲ್ಲಿ ಮಧ್ಯಮ ಜೀವನಿಗೂ ಜೀವಮಾನಿಯಾದ ಪುರಂಜನನಿಗೂ, ನೀಚನಾದ ಕಲಿಗೂ ಮರಣ, ಜನನ ಹಸಿವು ಮೊದಲಾದ ದೇಹಗತ ದುಃಖಗಳುಂಟು. ಇದೇ ಪ್ರಕಾರ ದೇಹಗತರಾದ ತತ್ವಾಭಿಮಾನಿ ದೇವತೆಗಳಿಗೆ ದೇಹಗತ ಸುಖಮಾತ್ರವಾಗುವದು. ಜೀವನಿಗೆ ಸುಖ ದುಃಖಗಳೆರಡೂ ಸಂಬಂಧವಾಗುವವು. ಅಸುರರಿಗೆ ಅಧರ್ಮ ವೃದ್ಧಿಯಿಂದ ದುಃಖವೇ ಆಗುವದು. ದುರ್ಯೋಧನಾದಿಗಳಿಗಾದಂತೆ ಕೆಲವು ಅಧರ್ಮಗಳಿಗೆ ಫಲರೂಪವಾಗಿ ಸುಖವೇ ಆಗುವುದುಂಟು. ಅದು ಅವರಿಗೆ ಪಾಪವೃದ್ಧಿಗೆ ಆಗುವುದು. ದೇವತೆಗಳಿಗೆ ಯಾವಬಗೆಯಿಂದಲೂ ದುಃಖವಿಲ್ಲ, ಧರ್ಮವೃದ್ಧಿಯಿಂದ ಪರಮಾತ್ಮನ ಪ್ರೀತಿ ಹೆಚ್ಚಾಗುತ್ತಿರುವದು. ಒಂದುಕಾಲದಲ್ಲಿ ದೇವತೆಗಳು ಅಧರ್ಮವನ್ನಾಚರಿಸಿದರೂ ಅಸುರರಿಗದು ತಮಸ್ಸಾ

ಧನಕ್ಕಾಗಿ ತಾವು ಮಾಡಿ ದೈತ್ಯರಿಗೆ ಆ ಪಾಪವನ್ನು ಹಂಚುವರು. ಅಲ್ಲ ದೇಹದ ದೇವತೆಗಳು ಪುಣ್ಯಮಾಡಲಿ, ಪಾಪಮಾಡಲಿ ಅಥವಾ ದೇಹಗತರಾಗಿದ್ದ ನಮ್ಮಿಂದ ಪುಣ್ಯ ಪಾಪಾದಿಗಳನ್ನೇನು ಮಾಡಿಸಿದರೂ, ಅವರಿಗೆ ಪುಣ್ಯ ಫಲವೇ ಬರುವುದು. ಪಾಪ ಫಲವು ತತ್ವಾಭಿಮಾನಿ ದೈತ್ಯರಿಗೆ ಆಗುವದು. ಇದಲ್ಲದೆ ದೈತ್ಯ ಜೀವರಿಗೆಂದಿಗೂ ಸುಖವಿಲ್ಲ. ದೇವತೆಗಳಿಗೆಂದಿಗೂ ದುಃಖವಿಲ್ಲ. ಪಾಂಡವರು ಅಜ್ಞಾತವಾಸಾದಿಗಳಲ್ಲಿ ಕಷ್ಟಪಡಲಿಲ್ಲವೆ? ದುರ್ಯೋಧನಾದಿಗಳು ರಾಜ್ಯಾದಿಗಳಿಂದ ಭೋಗಪಡಲಿಲ್ಲವೆ? ಅಂದರೆ ದೇವತೆಗಳಿಗೆ ಯತ್ಕಿಂಚಿದ್ದುಃಖವು ಅಸುರಾವೇಶದಿಂದ ಆಗುವದು. ಅದೇ ದೇವತೆಗಳೊಳಗಿರುವ ದೈತ್ಯರೇ ಅದನ್ನು ಅನುಭವಿಸುವರು. ದೇವತಾಜೀವಕ್ಕಿಲ್ಲ. ದೈತ್ಯರಿಗೆ ಸುಖವಾದರೂ ದೇವಾವೇಶದಿಂದಲೇ ಹೊರತು ದೈತ್ಯಜೀವರಿಗಿಲ್ಲ. ಪ್ರಾಣದೇವಂಗೆ ಮಾತ್ರ ಎಂದಿಗೂ ಅಸುರಾವೇಶವಿಲ್ಲ. ಅವರು ಪರಮಾತ್ಮನ ಸ್ವರೂಪವನ್ನು ತೋರಿಸುವ ವಿಷಯದಲ್ಲಿ ಓರೆಗಲ್ಲಿನಂತಿರುವರು. ಪರಮಾತ್ಮನ ಸಂಪೂರ್ಣಾನುಗ್ರಹದಿಂದ ಅವರು ಪೂರ್ಣಗುಣಗಳುಳ್ಳವರೆಂದು ತಿಳಿಯಬೇಕು. ದೇಹಗತ ತತ್ವಾಭಿಮಾನಿ ದೇವದೈತ್ಯರಿಗೆ ಸುಖದುಃಖಗಳನ್ನು ಅಂದರೆ ದೇವತೆಗಳಿಗೆ ಸುಖವನ್ನು, ದೈತ್ಯರಿಗೆ ದುಃಖವನ್ನು ಕೊಡುತ್ತಾ ಇದೇ ಶರೀರದಲ್ಲಿ ಕ್ರೀಡಿಸುತ್ತಾ ಅವರವರ ಕರ್ಮಾನುಸಾರವಾಗಿ ದ್ವೇಷಿಗಳನ್ನು ಶಿಕ್ಷಿಸಿ ಪರದಲ್ಲಿ ತಮೋರೂಪವಾದ ಶಿಕ್ಷೆಯನ್ನು ಕೊಡುವನೆಂದು ತಾತ್ಪರ್ಯ.

ಪ್ರಣವಪ್ರತಿಪಾದ್ಯನು ತ್ರಿನಾಮಧಿ
ತನುವಿನೊಳು ತ್ರಿಸ್ಥಾನಗನಿರು
ದ್ದನು ತ್ರಿಪಂಚಕ ಏಕವಿಂಶತಿ ಚತುರವಿಂಶತಿಗ ||
ನೆನಿಸಿ ಎಪ್ಪತ್ತೆರಡುಸಾವಿರ
ಇನಿತು ನಾಡಿಗಳೊಳು ನಿಯಾಮಿಸು
ತಿನಗ ಭಸ್ತ್ರಿಲೋಕದೊಳು ಸರ್ವತ್ರ ಬೆಳಗುವನು ||೨||

ಪದ್ಯಾರ್ಥ.—ಪ್ರಣವಪ್ರತಿಪಾದ್ಯನು=ಓಂಕಾರ ಪ್ರತಿಪಾದ್ಯನು, ತ್ರಿನಾಮಧಿ=ಓಂಕಾರಗತ ಅಕ್ಷರಗಳು, ಅ+ಉ+ಮ, ಎಂದು ಮೂರು. ಆನಂದ ಸ್ವರೂಪನಾದುದರಿಂದ ಅ ಎಂದು ಹೆಸರು. "ಆನಂದ ತ್ವಾದನಾಮಾಸೌ, ಉತ್ಕೃಷ್ಟತ್ವಾದು ನಾಮಕಃ ||" ಎಂಬ ವಾಕ್ಯಾನುಸಾರ ಉತ್ಕೃಷ್ಟನಾದುದರಿಂದ ಉ ಎಂದು ಹೆಸರು. ಸರ್ವ ಪೂಜ್ಯನಾದುದರಿಂದ ಮ

ಕಾರವಾಚ್ಯನು. ಇಂಶಹಾ ಮೂರು ನಾಮುಗಳಿಂದ, ತನುನಿನೊಳು=ದೇಹ ಗಳಲ್ಲಿ, ತ್ರಿಸ್ಥಾನಗ=ಲಿಂಗ ಶರೀರದಲ್ಲಿಯೂ, ಅನಿರುದ್ಧ ದೇಹದಲ್ಲಿಯೂ ಸ್ಥೂಲ ದೇಹದಲ್ಲಿಯೂ ಇದ್ದು, ಅಥವಾ, ಅ, ಉ, ಮ, ಇವು ಮೂರು ಅಕ್ಷರಗಳು ಹೊರಡುವ ಸ್ಥಾನಗಳು ಅ=ತಾಳು ಮೂಲದಿಂದ, ಕಂಠದಿಂದ ಉ, ಮ=ಓಷ್ಠದ್ವಯದಿಂದ, ಈ ಪ್ರಕಾರ ಮೂರು ಸ್ಥಾನಗಳಲ್ಲಿ ಅನಿರುದ್ಧ ನು ಅನಿರುದ್ಧ ರೂಪಿಯಾದ ಪರಮಾತ್ಮನು, ತ್ರಿಪಂಚಕ=೧೫ ರೂಪಗಳಿಂದ ಲೂ, ಏಕವಿಂಶತಿ=೨೧ ರೂಪಗಳಿಂದಲೂ, ಚತುರವಿಂಶತಿಗಾ=೨೪ ರೂ ಪಗಳಿಂದಲೂ ಇರುವನೆಂದು ಪ್ರಸಿದ್ಧನಾಗಿ, ಇನಿತು=ಇದೇ ಪ್ರಕಾರ, ಎ ಪ್ಪತ್ತೆರಡುಸಾವಿರ ನಾಡಿಗಳೊಳು-ದೇಹಗತ ೭೨೦೦೦ ನಾಡಿಗಳಲ್ಲಿ, ನಿಯ ಮಿಸುತ, ಆ ಕ್ರಿಯೆಗಳನ್ನು ಮಾಡಿಸುತ, ಇನಗಭಸ್ತಿಗ=ಇದರಂತೆ ಸೂ ರ್ಯನ ಕಿರಣಗಳಲ್ಲಿಯೂ ಸಹ ಇದ್ದು, ಸರ್ವತ್ರ=ಹೊರಗೆ ಎಲ್ಲಾ ಸ್ಥಳಗ ಳಲ್ಲಿ, ಬೆಳಗುವನು=ಪ್ರಕಾಶಿಸುವನು.

ತಾತ್ಪರ್ಯ.— ಈ ದೇಹದಲ್ಲಿಯೂ ಮತ್ತು ನಾಡಿಗಳಲ್ಲಿಯೂ ಉಪಾ ಸನೆಮಾಡಬೇಕಾದ ಭಗವದ್ರೂಪಗಳನ್ನು ಹೇಳುತ್ತಾರೆ.—

'ಪ್ರಣವ ಪ್ರತಿಪಾದ್ಯ' ಓಂಕಾರ ಪ್ರತಿಪಾದ್ಯನು ತ್ರಿನಾಮದಿ ಅಂದ ರೆ ಅ+ಉ+ಮ ಇವು ಮೂರು ಅಕ್ಷರಗಳು ಸೇರಿ ಓಂ ಎಂಬಕ್ಷರವು ಆಗಿರು ವುದು. ಇದರರ್ಥ ಛಾಂದೋಗ್ಯೋಪನಿಷದ್ಭಾಷ್ಯದಲ್ಲಿ "ಅಕಾರೇಣಾಧಿಕಂ ಪ್ರೋಕ್ತಮುಕಾರೇಣೋಚ್ಚಮುಚ್ಯತೇ | ತಥಾಮಿತಂ ಸರ್ವವೇದೈರ್ಮಕಾರೇ ಣಾಭಿಧೀಯತೇ || ಅಧಿಕೋಚ್ಚಮಿತಿಜ್ಞಾತಮೋ ಮಿತ್ಯಸ್ಯ ಈರಿತಃ ||" ಅಧಿಕನಾದುದರಿಂದ ಅನಾಮನಂತಲೂ (ಉತ್ಕೃಷ್ಟನಾದುದರಿಂದ) ಉಚ್ಚ ನಾದುದರಿಂದ ಉನಾಮಕನೆಂತಲೂ ಸರ್ವ ವೇದಗಳಿಂದಲೂ ಮಿತ ಎಂದರೆ ತಿಳಿಸಿಕೊಳ್ಳಲ್ಪಡುವನಾದುದರಿಂದ ಮಕಾರ ವಾಚ್ಯನೆಂತಲೂ ಒಟ್ಟು ಅಧಿಕ ವಾದ ಉಚ್ಚತ್ವವನ್ನು ಹೊಂದಿದವನೆಂದರ್ಥ. ಅಥವಾ "ಓಂನಾಮಾನ ಮುಪಾಸೀತ ತದರ್ಥಗುಣ ಪೂರ್ವಕಂ ಓತತ್ವಾದವ ನಾಮ್ನಾನಾದಧಿಕೋ ಚ್ಚತ್ವಕಾರಣಾತ್ || ಆನಂದಾದೋಜಸಶ್ಚೈವ ಭರಣಾದೋ ಮುದಾಹೃತಃ ಓಂಕಾರ ಶಬ್ದವಾಚ್ಯನಾದ ಪರಮಾತ್ಮನನ್ನು ಅರ್ಥಜ್ಞಾನ ಪೂರ್ವಕ ಉಪಾ ಸನೆಮಾಡಬೇಕು. ಪ್ರಪಂಚವೆಲ್ಲ ಪರಮಾತ್ಮನಲ್ಲಿ, ವಸ್ತ್ರದ ದಾರಗಳಂತೆ ಸೇ ರಿರುವದರಿಂದಲೂ ಪ್ರಪಂಚವನ್ನೆಲ್ಲ ಪಾಲನಮಾಡುವದರಿಂದಲೂ, ಎಲ್ಲರಿಂ

ದಲೂ ಪೂಜ್ಯನಾದುದರಿಂದಲೂ ಅಧಿಕವಾದ ಉಚ್ಚವನ್ನು ಹೊಂದಿರುವುದ ರಿಂದಲೂ ಆನಂದ ಸ್ವರೂಪನಾದುದರಿಂದಲೂ, ಬಲಶಾಲಿಯಾದುದರಿಂದ ಲೂ ಜಗತ್ತನ್ನು ಭರಣಮಾಡುವುದರಿಂದಲೂ ಓಂ ಎಂದು ಪರಮಾತ್ಮನಿಗೆ ಹೆಸರೆಂದು ಹೇಳಿರುವರು.

ಈ ಪ್ರಕಾರ ಮೂರು ನಾಮಗಳಿಂದ ಲಿಂಗ ಶರೀರದಲ್ಲಿಯೂ ಅನಿರು ದ್ಧಶರೀರದಲ್ಲಿಯೂ ಸ್ಥೂಲಶರೀರದಲ್ಲಿಯೂ ಈ ದೇಹದ ಮೂರು ಸ್ಥಾನಗ ಳಲ್ಲಿ ಅನಿರುದ್ಧನು ವಾಸಮಾಡುವನು. ಅಥವಾ ಅಕಾರ ಉಕಾರ ಮಕಾರ ಗಳುತ್ಪತ್ತಿ ಸ್ಥಾನಗಳು, ತಾಳು, ಕಂಠ, ಓಷ್ಟಪುಟಗಳೆಂಬ ಮೂರು ಸ್ಥಾ ನಗಳಲ್ಲಿ ವಾಸಮಾಡುವನು. ಇದಲ್ಲದೆ ಅನಿರುದ್ಧನು ಜ್ಞಾನೇಂದ್ರಿಯಗಳು ೫, ಕರ್ಮೇಂದ್ರಿಯಗಳು ೫, ಪಂಚಮಹಾಭೂತಗಳು ೫, ಹೀಗೆ ೧೫ರಲ್ಲಿ ಅನಿರುದ್ಧನು ಅನಿರುದ್ಧಾದಿ ೫ ರೂಪಗಳಿಂದ ೩×೫=ಸ್ಥಾನಗಳಲ್ಲಿ, ೩×೫= ರೂಪಗಳಿಂದ ಲಿಂಗದೇಹದಲ್ಲಿಯೂ, ಈ ೧೫ರೊಂದಿಗೆ ಪಂಚತನ್ಮಾತ್ರಾ ಗುಣಗಳು ೫, ಮನಸ್ಸು ೧, ಇವುಗಳಾರನ್ನೂ ಶೇರಿಸಿ ೨೧ರಲ್ಲಿ ಅನಿರುದ್ಧ ದೇಹದಲ್ಲಿ ಶಕ್ತಿಪ್ರತಿಷ್ಠಾ ೧೧ ದಶಾವತಾರ ೧೦=೨೧ ರೂಪಗಳಿಂದಲೂ, ಸ್ಥೂಲ ಶರೀರದಲ್ಲಿ ಈ ೨೧ ತತ್ವದೊಂದಿಗೆ ಅವ್ಯಕ್ತ, ಮಹತ್ತತ್ವ ಅಹಂಕಾರ ಈ ಮೂರನ್ನು ಶೇರಿಸಿ ೨೪ರಲ್ಲಿ ಕೇಶವಾದಿ ೨೪ ರೂಪಗಳಿಂದಲೂ ಇರುವ ನು. ಮತ್ತು ಒಂದು ತಿಂಗಳಿಗೆ ೩೦ ಹಗಲು ೩೦ ರಾತ್ರಿಗಳಂತೆ ಒಂದು ವ ರ್ಷಕ್ಕೆ ೩೬೦ ರಾತ್ರಿ ೩೬೦ ಹಗಲು ಹೀಗೆ ಮನುಷ್ಯಾಯುಃ ಪ್ರಮಾಣ, ನೂರು ವರ್ಷಗಳಿಗೆ ೩೬೦೦೦ ಹಗಲು ೩೬೦೦೦ ರಾತ್ರಿಗಳಾಗುವವು. ಇವು ಗಳೇ ಸೂರ್ಯನಲ್ಲಿ ರಶ್ಮಿರೂಪವಾಗಿ ದಕ್ಷಿಣಾಯಣದಲ್ಲಿ ೩೬೦೦೦, ಉತ್ತರಾ ಯಣದಲ್ಲಿ ೩೬೦೦೦ ರಶ್ಮಿಗಳಾಗುವವು. ಆ ರಶ್ಮಿಗಳೇ ನಮ್ಮ ಶರೀರದಲ್ಲಿ ಎ ಡದಲ್ಲಿ ೩೬೦೦೦ ಬಲದಲ್ಲಿ ೩೬೦೦೦ ಅಂತು ೭೨೦೦೦ ನಾಡಿಗಳಾಗಿರುವವು. ಆ ನಾಡಿಗಳಲ್ಲಿ ಅಷ್ಟೇ ರೂಪಗಳಿಂದ ನಿಯಾಮಕನಾಗಿ ಇರುವನಲ್ಲದೆ ಸೂ ರ್ಯನ ರಶ್ಮಿಗಳಲ್ಲಿ ಸಹ ಇದ್ದು ಹೊರಗೆಲ್ಲಾ ಸ್ಥಳಗಳಲ್ಲಿ ಪ್ರಕಾಶಮಾಡು ತ್ತಿರುವನು.

ಜೀವಲಿಂಗನಿರುದ್ಧ ಸ್ಥೂಲಕ<br>ಳೇವರಗಳೊಳು ವಿಶ್ವತುರಗ<br>ಗ್ರೀವ ಮೂಲೇಶಾಚ್ಯುತತ್ರಯ ಹಂಸಮೂರ್ತಿಗಳು ||

ಈ ವಿಧಚತುಸ್ಥಾನದಲಿ ಶಾಂ
ತೀವರನ ಈರೆರಡುರೂಪದಿ
ಭಾವಿಸುವದೇಕೋನವಿಂಶತಿಮೂರ್ತಿ ಸರ್ವತ್ರ ॥೩॥

ಪದ್ಯಾರ್ಥ.— ಜೀವಲಿಂಗನಿರುದ್ಧಸ್ಥೂಲಕಳೇವರಗಳೊಳು- ಜೀವ= ಜೀವನ ಸ್ವರೂಪದೇಹದಲ್ಲಿಯೂ, ಲಿಂಗ=ಲಿಂಗದೇಹದಲ್ಲಿಯೂ, ಅನಿರುದ್ಧ-ಅನಿರುದ್ಧ ದೇಹದೊಳಗೂ, ಸ್ಥೂಲದೇಹದೊಳಗೂ, ವಿಶ್ವ=ವಿಶ್ವರೂಪದಿಂದಲೂ, ತುರಗಗ್ರೀವ=ಹಯಗ್ರೀವರೂಪದಿಂದಲೂ, ಅನಿರುದ್ಧರೂಪದಿಂದಲೂ, ಮೂಲೇಶ=ನಾರಾಯಣ ಅಥವಾ ಪದ್ಮನಾಭರೂಪದಿಂದಲೂ, ಅಚ್ಯುತತ್ರಯ=ಅಚ್ಯುತ, ಅನಂತ, ಗೋವಿಂದ ಎಂಬ ಮೂರು ರೂಪಗಳಿಂದ, ಹಂಸಮೂರ್ತಿಗಳ = ಹಂಸ ಎಂಬ ೪ ಮೂರ್ತಿಗಳನ್ನು, ಈ ವಿಧ ಚತುಸ್ಥಾನದಲಿ—ಮೇಲೆ ಹೇಳಿದ ೪ ದೇಹಗಳಲ್ಲಿ, ಶಾಂತಿವರನ = ಶಾಂತೀಪತಿಯಾದ ಅನಿರುದ್ಧನ, ಈರೆರಡುರೂಪದಿ=೪ ರೂಪಗಳನ್ನು, ಭಾವಿಸುವುದು= ಚಿಂತಿಸಬೇಕು. ಮತ್ತು ಸರ್ವತ್ರ=ಮೇಲೆ ಹೇಳಿದ ಎಲ್ಲಾ ಸ್ಥಳಗಳಲ್ಲಿ, ಏಕೋನವಿಂಶತಿಮೂರ್ತಿ=೧೯ ಮೂರ್ತಿಗಳನ್ನು ಅಂದರೆ ಶಬ್ದಾದಿ ತನ್ಮಾತ್ರಗುಣಗಳಿಂದಕೂಡಿ ಪಂಚಮಹಾಭೂತಗಳಲ್ಲಿ ಅನಿರುದ್ಧಾದಿ ೫ರೂಪಗಳು ಜ್ಞಾನೇಂದ್ರಿಯ ೫ರಲ್ಲಿ ೫ ರೂಪಗಳು, ಕರ್ಮೇಂದ್ರಿಯ ೫ ರಲ್ಲಿ ಅನಿರುದ್ಧಾದಿ ೫ ರೂಪಗಳು, ಅಂತು ೧೫, ಅವ್ಯಕ್ತ, ಮಹತ್ತತ್ವ, ಮನಸ್ಸು, ಅಹಂಕಾರವೆಂಬ ೪ ರಲ್ಲಿ ಅಚ್ಯುತ, ಅನಂತ, ಗೋವಿಂದ, ಹಂಸವೆಂಬ ೪ ರೂಪಗಳನ್ನು ಹೀಗೆ ೧೯ರೂಪಗಳನ್ನು ಪ್ರತಿಶರೀರಗಳಲ್ಲಿಯೂ ಚಿಂತಿಸಬೇಕು

ತಾತ್ಪರ್ಯ.— ಈ ಪದ್ಯದಿಂದ ನಾಲ್ಕು ಪ್ರಕಾರವುಳ್ಳ ದೇಹಗಳಲ್ಲಿ ಉಪಾಸನಾ ಮಾಡಬೇಕಾದ ಭಗವದ್ರೂಪಗಳನ್ನು ಹೇಳುತ್ತಾರೆ.- ಜೀವನ ಸ್ವರೂಪದೇಹದಲ್ಲಿ ವಿಶ್ವರೂಪವನ್ನೂ, ಲಿಂಗಶರೀರದಲ್ಲಿ ಹಯಗ್ರೀವರೂಪವನ್ನೂ, ಅನಿರುದ್ಧದೇಹದಲ್ಲಿ ಅನಿರುದ್ಧರೂಪವನ್ನೂ, ಸ್ಥೂಲದೇಹದಲ್ಲಿ ನಾರಾಯಣರೂಪವನ್ನೂ ಧರಿಸಿ, ಅನಿರುದ್ಧನೇ ಇರುವನು. ಅಥವಾ ಅಚ್ಯುತ, ಅನಂತ, ಗೋವಿಂದ ಹಂಸ ಎಂಬ ೪ ರೂಪಗಳನ್ನು ಧರಿಸಿ ಮೇಲಿನ ೪ದೇಹದೊಳಗಿರುವನು. ಹೀಗೆ ಶಾಂತೀಪತಿಯಾದ ಅನಿರುದ್ಧನು ೪ರೂಪಗಳಿಂದ ೪ ಸ್ಥಾನಗಳಲ್ಲಿರುವುದಲ್ಲದೆ ಪಂಚಭೂತ ೫, ಕರ್ಮೇಂದ್ರಿಯ ೫. ಜ್ಞಾನೇಂದ್ರಿಯ ೫, ಹೀಗೆ ೧೫ ತತ್ವಗಳಲ್ಲಿ ಅನಿರುದ್ಧಾದಿ ೫×೩=೧೫

ರೂಪಗಳಿಂದಲೂ, ಅಚ್ಯುತಾನಂತ ಗೋವಿಂದಗಳೆಂಬ ೩ ರೂಪಗಳು, ಹಂಸ ೧, ಇಂತಹ ೧೯ ರೂಪಗಳಿಂದ ದೇಹಚತುಷ್ಟಯಗಳಲ್ಲಿ ವಾಸಮಾಡುವನೆಂದು ಭಾವಿಸಬೇಕು.

ಕಲುಷವಿಲ್ಲದ ದರ್ಪಣದಿ ಪ್ರತಿ
ಫಲಿಸಿ ಸರ್ವಪದಾರ್ಥಪಳು ಕಂ
ಗೊಳಿಸುವಂದದಿ ಬಿಂಬ ಜಡಚೇತನಗಳೊಳಗಿದ್ದು ||
ಪೊಳೆವ ಬಹುರೂಪದಲಿ ಸಜ್ಜನ
ರೊಳಗೆ ಮನದರ್ಪಣದಿ ತಾ ನಿ
ಶ್ಚಲ ನಿರಾಮಯ ನಿರ್ವಿಕಾರ ನಿರಾಶ್ರಯಾನಂತ ||೪||

ಪದ್ಯಾರ್ಥ.—ಕಲುಷವಿಲ್ಲದ=ಕಲ್ಮಷವಿಲ್ಲದ ನಿರ್ಮಲವಾದ, ದರ್ಪಣದಿ=ಕನ್ನಡಿಯಲ್ಲಿ, ಪ್ರತಿಫಲಿಸಿ, ಸರ್ವಪದಾರ್ಥಗಳು, ಕಂಗೊಳಿಸುವಂದದಲಿ=ಕಣ್ಣಿಗೆ ಗೋಚರವಾಗುವಂತೆ, ಬಿಂಬ-ಬಿಂಬರೂಪಿಯಾದ ಪರಮಾತ್ಮನು, ಜಡಚೇತನರೊಳಗೆ ಇದ್ದು, ಬಹುರೂಪದಲಿ-ಅನೇಕರೂಪಗಳಿಂದ, ಪೊಳೆವ-ಪ್ರಕಾಶಿಸುವ, ಸಜ್ಜನರೊಳಗೆ, ಮನದರ್ಪಣದಿ-ಮನಸ್ಸೆಂಬ ಕನ್ನಡಿಯಲ್ಲಿ, ಅನಂತ=ಅನಂತರೂಪವುಳ್ಳ, ನಿರಾಶ್ರಯ=ಆಶ್ರಯರಹಿತನಾಗಿರುವ ಶ್ರೀಪರಮಾತ್ಮನು, ತಾ=ತಾನು, ನಿಶ್ಚಲ=ನಿಶ್ಚಲನಾಗಿಯೂ, ನಿರಾಮಯ-ರೋಗರಹಿತನಾಗಿಯೂ, ನಿರ್ವಿಕಾರ=ವಿಕಾರ ಶೂನ್ಯನಾಗಿಯೂ ಪೊಳೆವ=ಶೋಭಿಸುವನು.

ತಾತ್ಪರ್ಯ.—ಬಿಂಬ ಪ್ರತಿಬಿಂಬ ಲಕ್ಷಣದಿಂದ ಭಗವದುಪಾಸನಾಕ್ರಮವನ್ನು ಹೇಳುತ್ತಾರೆ.—ಸ್ವಚ್ಛವಾದ ಕನ್ನಡಿಯಲ್ಲಿ ಅದರೆದುರಿಗೆ ಕಾಣುವ ಪದಾರ್ಥಗಳೆಲ್ಲ ಪ್ರತಿಬಿಂಬಿತವಾಗಿ ಹೇಗೆ ಕಾಣುವವೋ ಹಾಗೆ ಬಿಂಬರೂಪಿಯಾದ ಶ್ರೀಪರಮಾತ್ಮನಿಗೆ ನಿತ್ಯವಾದ ಜೀವನ ಸ್ವರೂಪ ದೇಹವು ಕನ್ನಡಿಯಂತಿರುವುದು. ಆ ಸ್ವರೂಪದೇಹವೆಂಬ ಕನ್ನಡಿಯಲ್ಲಿ ನಿತ್ಯವಾದ ಬಿಂಬರೂಪಿಯಾದ ಪರಮಾತ್ಮನ ಪ್ರತಿಬಿಂಬವೇ ಜೀವವಾಗಿ ಪ್ರತಿಫಲಿಸಿ ಇರುವುದು. ಬಿಂಭರೂಪಿಯು ಒಬ್ಬನೇ ಆದರೂ ಉಪಾಧಿ ಭೇದದಿಂದ ಅನೇಕ ಪ್ರತಿಬಿಂಭಗಳಾಗಿ ಕಾಣುವನು. ಉಪಾಧಿ ಭೇದದಿಂದಲೇ ಸಾತ್ವಿಕಾದಿ ತ್ರಿವಿಧ ಜೀವರಾಗಿರುವರು.

ದೀಪವು ಒಂದೇ ವಿಧವಾದ ಪ್ರಕಾಶವಾಗಿದ್ದರೂ ಮೇಲಿಡುವ ಚಿಮ್ನಿಣಿಗಳು ಕೆಂಪು, ಬಿಳಪು, ಕಪ್ಪು ಮೊದಲಾದ ವರ್ಣಗಳಿಂದ ಕೂಡಿದುವಾಗಿದ್ದರೆ ಅದೇ ದೀಪವೇ ಹೇಗೆ ಕೆಂಪು ಕಪ್ಪಾಗಿ ಕಾಣುವುದೋ ಹಾಗೆ ಪರಮಾತ್ಮನ ರೂಪವು ನಿಶ್ಚಲವೂ, ನಿರಾಮಯವೂ, ನಿರಾಶ್ರಯವೂ ಆಗಿದ್ದರೂ ಜೀವನ ಸ್ವರೂಪ ದೇಹವನ್ನನುಸರಿಸಿ, ಸಾತ್ವಿಕರು, ರಾಜಸರು, ತಾಮಸರೆಂಬ ಭೇದಗಳಾಗಿ ಕಾಣುವರು- " ಜ್ಯೋತಿರ್ಯಥೈವೋದಕ ಪಾರ್ಥಿವೇಷ್ವದಃ ಸಮೀರ ವೇಗಾನುಗತಂ ವಿಭಾವ್ಯತೇ " ಎಂಬ ಭಾಗವತ ದಶಮಸ್ಕಂಧದ ವಾಕ್ಯರೀತ್ಯಾ, ಉದಕದಲ್ಲಿ ಕಾಣುವ ಸೂರ್ಯನ ಪ್ರತಿಬಿಂಬವು ಗಾಳಿಯ ಸಂಸರ್ಗದಿಂದ ನೀರು ಆಡಲು, ನೀರಿನಲ್ಲಿ ಕಾಣುವ ಸೂರ್ಯನಬಿಂಬವು ಭಿನ್ನಭಿನ್ನವಾಗಿ ಕಾಣುವುದು. ಅದೇ ಪ್ರತಿಬಿಂಬವು ನಿಶ್ಚಲವಾದ ಸ್ಫಟಿಕ ಶಿಲಾದಿಗಳಲ್ಲಿ ಪ್ರತಿಬಿಂಬಿಸಿದ್ದರೆ ಸೂರ್ಯನ ಪ್ರತಿಬಿಂಬವು ನಿಶ್ಚಲವಾಗಿ ಕಾಣುವುದು. ಹೇಗೆ ಸೂರ್ಯನ ಪ್ರತಿಬಿಂಬದ ವೈಲಕ್ಷಣ್ಯಕ್ಕೆ ನೀರು, ಸ್ಫಟಿಕಾದಿಗಳು ಕಾರಣವೇ ಹೊರತು ಸೂರ್ಯನ ದೋಷವಲ್ಲವೋ ಹಾಗೆಯೇ ಜೀವರ ಸ್ವರೂಪ ಯೋಗ್ಯತಾನುಸಾರ ಪ್ರತಿಬಿಂಬರಾದ ಜೀವರು ದೋಷಿಗಳಾಗುವರೇ ಹೊರತು ಪರಮಾತ್ಮನು ದೋಷಿಯಲ್ಲ. ಅದರಲ್ಲಿ ಸಾತ್ವಿಕರಾದ ಯೋಗ್ಯ ಜೀವರು ಮಾತ್ರ ಸ್ವಚ್ಛವಾದ, ನಿಶ್ಚಲವಾದ ತಮ್ಮ ಮಳಸ್ಸೆಂಬ ದರ್ಪಣದಲ್ಲಿ ನಿಶ್ಚಲಾದಿ ಗುಣಗಳಿಂದ ಕೂಡಿ ಪ್ರಕಾಶಿಸುವ ಬಿಂಬರೂಪಿಯಾದ ಪರಮಾತ್ಮನನ್ನು ಕಾಣುವರು. ಅಜ್ಞಾನಿಗಳು ಅಯೋಗ್ಯರು ಅಜ್ಞಾನವೃತರಾಗಿ, ಸೂರ್ಯನು ಯಾವಾಗಲೂ ಪ್ರಕಾಶರೂಪನೇ ಆದರೂ ಮೇಘಾದ್ಯಾವರಣದಲ್ಲಿ ಸೂರ್ಯನನ್ನು ಹೇಗೆ ಕಾಣರೋ ಹಾಗೆ ಪರಮಾತ್ಮನು ಪ್ರಕಾಶರೂಪಿಯಾಗಿ ತಮ್ಮೊಳಗೆ ಬಿಂಬರೂಪದಿಂದಿದ್ದರೂ ಕಾಣುವುದಿಲ್ಲ. ಜಡದಲ್ಲಿ ಜಡರೂಪದಿಂದಲೂ, ಚೇತನರಲ್ಲಿ ಚೇತನಾರೂಪಿಯಾಗಿ ಎಲ್ಲರಲ್ಲಿ ಪ್ರಕಾಶಮಾನನಾಗಿ ಒಪ್ಪುವುದನ್ನು ಜ್ಞಾನಿಗಳು ಬಲ್ಲರು.

ನಿಶ್ಚಲನಾಗಿರುವನು ಪರಮಾತ್ಮನೆಂದರೆ ಚಲನವಿಲ್ಲದೆ ಕಲ್ಲಿನಂತೆ ನಿಶ್ಚೇಷ್ಟನೆಂದರ್ಥವಲ್ಲ. ಜಡದಲ್ಲಿ ನಿಶ್ಚಲನಾಗಿರುವನು. ಜಡಚೇತನಾದಿಗಳಲ್ಲಿ ಚಲಿಸದೆ ಅಂದರೆ ಸ್ಥಿರನಾಗಿರುವನೆಂದರ್ಥ. ಮನುಷ್ಯಾದಿ ಶರೀರಗಳಲ್ಲಿದ್ದರು ಜೀವನಿಗೆ ಕರ್ಮಾನುಸಾರ ರೋಗಗಳು ಪ್ರಾಪ್ತವಾದರೂ ತಾನು ನಿರೋಗಿಯಾಗಿರುವನು ಜೀವನು ಸುಖದುಃಖಗಳಿಂದ ವಿಕಾರಹೊಂದಿದ್ದರೂ ತಾನು

ನಿರ್ವಿಕಾರವಾಗಿರುವನು. ತನ್ನನ್ನು ರಮಾಬ್ರಹ್ಮಾದಿ ಸಕಲಚೇತನರು, ಜಡಗಳು ಸಹ ಆಶ್ರಯಿಸಿಕೊಂಡಿದ್ದರೂ ತಾನು ನಿರಾಶ್ರಯನಾಗಿರುವನು. ತಾನೊಬ್ಬನೇ ಆದರೂ ಅನಂತರೂಪನಾಗಿ ತೋರುವನು- ಆದ್ಧರಿಂದ ದಾಸರಾಯರು ನಿಶ್ಚಲ ನಿರಾಮಯ ನಿರ್ವಿಕಾರ ನಿರಾಶ್ರಯಾನಂತವೆಂಬ ವಿಶೇಷಣಗಳನ್ನು ಹೇಳಿರುವರು. ಇದರಿಂದ ಜೀವ ಪರಮಾತ್ಮರ ವೈಲಕ್ಷಣವನ್ನು ತೋರಿಸಿದಂತಾಯಿತು. ಜೀವನು ದೇಹವನ್ನು ಬಿಟ್ಟು ದೇಹಾಂತರವನ್ನು ಹೊಂದುವವನಾದುದರಿಂದ ಚಲನು. ರೋಗದಿಂದ ಪೀಡಿತನು ಜೀವನು. ಪರಮಾತ್ಮನಿಗೆ ಇವೆರಡೂ ಇಲ್ಲ. ಸುಖದುಃಖಾದಿಗಳಿಂದ ಜೀವನು ವಿಕಾರ ಹೊಂದುವನು. ಪರಮಾತ್ಮನು ನಿರ್ವಿಕಾರನು. ಜೀವನು ಪರಾಶ್ರಯನು, ಅಸ್ವತಂತ್ರನು. ಇಂತಹ ಅನಂತರೂಪಗಳಿಂದ ಪ್ರಕಾಶಿಸುವ ಪರಮಾತ್ಮನನ್ನು ಜ್ಞಾನಿಗಳು ಕಾಣುವರು.

**ಈ ಶರೀರಚತುಷ್ಟಯಗಳೊಳು**
**ಕೋಶಧಾತುಗ ಭಾರತಿಪ ಪ್ರಾ**
**ಣೇಶನಿಪ್ಪತ್ತೊಂದುಸಾವಿರದಾರನೂರೆನಿಪ ||**
**ಶ್ವಾಸರೂಪಕ ಹಂಸ ಭಾಸ್ಕರ**
**ಭೇಶರೊಳಗಿದ್ದವರ ಕೈಪಿಡಿ**
**ದೀ ಸರೋಜಭವಾಂಡದೊಳು ಸರ್ವತ್ರ ತುಂಬಿಹನು ||೫||**

ಪದ್ಯಾರ್ಥ.—ಈ ಶರೀರಚತುಷ್ಟಯಗಳೊಳು=ಮೇಲೆ ಹೇಳಿದ ಪ್ರಕಾರ ಜೀವನ ಸ್ವರೂಪ ದೇಹ ಲಿಂಗ ಮೊದಲಾದ ೪ ಶರೀರಗಳೊಳಗೆ, ಕೋಶ=ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯನೆಂಬ ೫ ಕೋಶಗಳಲ್ಲಿ, ಧಾತುಗ=ಮೇದಸ್ ಮಜ್ಜ ಮೊದಲಾದ ೭ ಧಾತುಗಳಲ್ಲಿ ವ್ಯಾಪಿಸಿಕೊಂಡಿರುವ, ಭಾರತಿಪಪ್ರಾಣೇಶ-ಭಾರತಿರಮಣ ಮುಖ್ಯಪ್ರಾಣಾಂತರ್ಗತನಾದ, ಹಂಸ-ಹಂಸರೂಪಿ ಶ್ರೀಪರಮಾತ್ಮನು, ಇಪ್ಪತ್ತೊಂದುಸಾವಿರದ ಆರನೂರೆನಿಪ – ೨೧೬೦೦ ಎಂದು ಕ್ಲಪ್ತವಾದ, ಶ್ವಾಸರೂಪಕ-ಹಂಸಮಂತ್ರ ಜಪವೆಂದೆನಿಸುವ ಶ್ವಾಸರೂಪಕನಾಗಿ ಭಾಸ್ಕರಭೇಶರೊಳು=ಎಡಬಲ ಮೂಗುಗಳಿಂದ ಹೊರಡುವ ಶ್ವಾಸಗಳಿಗೆ ಕಾರಣರಾದ ಸೂರ್ಯ ಚಂದ್ರರೊಳಗಿದ್ದು, ಅವರ=ಚಂದ್ರ ಸೂರ್ಯರ ಕೈವಿಡಿದು=ಕೈ ಪಿಡಿದು ಅಂದರೆ ಅವರ ಸಹಾಯಕನಾಗಿ ಈ ಸರೋಜಭವಾಂಡ

ದೊಳು=ಈ ಬ್ರಹ್ಮಾಂಡದೊಳಗೆ, ಸರ್ವತ್ರ=ಎಲ್ಲಾ ಸ್ಥಳಗಳಲ್ಲಿ, ತುಂಬಿಹೆ ನು=ವ್ಯಾಪ್ತನಾಗಿರುವನು.

ತಾತ್ಪರ್ಯ.—ಸ್ವರೂಪ ದೇಹ ಮೊದಲಾದ ನಾಲ್ಕು ದೇಹಗಳಲ್ಲಿ ಮುಖ್ಯಪ್ರಾಣದೇವರೊಳಗಿದ್ದು ಮಾಡಿಸುವ ಕೃತ್ಯವನ್ನು ಹೇಳುತ್ತಾರೆ.—ಈ ನಾಲ್ಕು ಶರೀರಗಳಲ್ಲಿ ಕೋಶಗಳು ೫, ಧಾತುಗಳು ೭, ಇವುಗಳಲ್ಲಿ ಇರುವ ಭಾರತೀಪತಿಯಾದ ಮುಖ್ಯಪ್ರಾಣದೇವರಿಗೆ ಪತಿಯಾದ ಸ್ವಾಮಿಯಾದ ಶ್ರೀ ಪರಮಾತ್ಮನು ಹಂಸರೂಪದಿಂದ ಪ್ರಾಣದೇವರಲ್ಲಿದ್ದು ೨೧,೬೦೦ ಹಂಸ ಮಂತ್ರ ಜಪರೂಪವಾದ ಶ್ವಾಸರೂಪನಾಗಿ, ಎಡ ಬಲ ಮೂಗುಗಳಿಂದ ಹೊರಡುವ ಶ್ವಾಸಗಳಿಗೆ ಕಾರಣರಾದ ಚಂದ್ರ ಸೂರ್ಯರ ಸಹಾಯಕನಾಗಿ ಅವರನ್ನು ಪಾಲಿಸುತ್ತಾ ಈ ಬ್ರಹ್ಮಾಂಡದಲ್ಲಿ ಸರ್ವ ಸ್ಥಳಗಳಲ್ಲಿಯೂ ವ್ಯಾಪ್ತನಾಗಿರುವನು.

ಶಿರಗಳೈದೈದೆರಡು ಬಾಹುಗ
ಳೆರಡು ಪಾದಗಳೊಂದು ಮಧ್ಯೋ
ದರದಿ ಶೋಭಿಪವಾಙ್ಮನೋಮಯನೆನಿಪ ನಿತ್ಯದಲಿ।
ಕರಣಧಾತುಗಳಲ್ಲಿ ಎಪ್ಪ
ತ್ತೆರಡುಸಾವಿರ ನಾಡಿಗಳೊಳಿ
ಪ್ಪರವಿದೂರನು ಭಾರತಪ್ರತಿಪಾದ್ಯನೆಂದೆನಿಸೀ ॥೬॥

ಪದ್ಯಾರ್ಥ.—ಶಿರಗಳೈದು=ಪಂಚಭೂತಗಳೆಂಬ ೫ ತಲೆಗಳು, ಐದೆ ರಡು ಬಾಹುಗಳು-ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೆಂಬ ಹತ್ತು ಬಾಹು ಗಳು, ಪುಣ್ಯಪಾಪಗಳೆಂಬ ಎರಡು ಪಾದಗಳು, ಒಂದುಮಧ್ಯ-ಅಹಂಕಾರ ವೆಂಬ ಒಂದು ಸೊಂಟ, ಉದರದಿ=ಬುದ್ಧಿಯೆಂಬ ಒಂದು ಉದರ ಇವುಗ ಳಿಂದ, ಶೋಭಿಪ-ಶೋಭಿಸುತ್ತಿರುವ, ವಾಙ್ಮನೋಮಯನೆನಿಸಿ-ವಾಙ್ ಮನೋಮಯನೆಂಬ ಹೆಸರಿನಿಂದ ಯುಕ್ತನಾದ ಶ್ರೀಹರಿಯು ನಿತ್ಯದಲಿಕರಣ -ದಶೇಂದ್ರಿಯಗಳಲ್ಲಿಯೂ, ಧಾತುಗಳಲ್ಲಿ=ಸಪ್ತ ಧಾತುಗಳಲ್ಲಿ, ಎಪ್ಪತೆರಡು ಸಾವಿರನಾಡಿಗಳಲ್ಲಿ, ಅರವಿದೂರನು=ದೋಷರಹಿತನು, ಭಾರತಿಪ್ರತಿಪಾದ್ಯ ನೆಂದೆನಿಸಿ=ವೇದಕ್ಕಿಂತಲೂ ಉತ್ತಮವಾದ ಭಾರತ ಪ್ರತಿಪಾದ್ಯನೆಂದೆನಿಸಿ, ಇಪ್ಪ=ವಾಸಮಾಡುತ್ತಿರುವನು.

ತಾತ್ಪರ್ಯ.—ವಾಙ್ಮನೋರೂಪಿಯಾದ ಪರಮಾತ್ಮನ ಉಪಾಸನಾ ಕ್ರಮವನ್ನು ಹೇಳುತ್ತಾರೆ.—ಸಕಲ ಪ್ರಾಣಿಗಳ ಮುಖ್ಯೇಂದ್ರಿಯಗಳಾದ

ವಾಕ್ಯದಲ್ಲಿಯೂ, ಮನಸ್ಸಿನಲ್ಲಿಯೂ ಇದ್ದು ಸಕಲ ಕಾರ್ಯಪ್ರವರ್ತಕನಾಗಿ ರುವದರಿಂದ ವಾಙ್ಮಯನೆಂತಲೂ, ಮನೋಮಯನೆಂತಲೂ ಪರಮಾತ್ಮನಿಗೆ ಹೆಸರು. ಈ ವಾಙ್ಮನೋಮಯ ರೂಪಗಳನ್ನು ಉಪಾಸನಾ ಮಾಡುವ ಕ್ರಮ ಹೇಗೆಂದರೆ.— ಪಂಚಮಹಾಭೂತಗಳೇ ಈ ರೂಪಗಳಿಗೆ ೫ ತಲೆಗಳಾಗಿಯೂ, ದಶೇಂದ್ರಿಯಗಳೇ ೧೦ ಕೈಗಳಾಗಿಯೂ, ಪುಣ್ಯ ಪಾಪಗಳೆಂಬೆರಡು ಕರ್ಮಗಳೇ ೨ ಪಾದಗಳೆಂತಲೂ, ಅಹಂಕಾರ ೧, ಬುದ್ಧಿ ೧ ಇವೆರಡು ಮಧ್ಯ ಪ್ರದೇಶ ಉದರಗಳೆಂತಲೂ ಭಾವಿಸಬೇಕು. ಇಂತಹ ರೂಪದಿಂದ ಸರ್ವತ್ರ ಇರುತ್ತಿರುವನು. ಹೀಗ ನಿತ್ಯದಲ್ಲಿ ಇಂದ್ರಿಯಗಳಲ್ಲಿಯೂ, ನಾಡಿಗಳಲ್ಲಿಯೂ ಇದ್ದರೂ ಪುಣ್ಯಪಾಪಾದಿ ಕರ್ಮಪ್ರೇರಕನಾದರೂ ತಾನು " ಅರವಿದೂರ " ನಿರ್ಲೇಪನಾದುದರಿಂದ ನಿರ್ದೋಷಿಯಾಗಿರುವನು. ಮತ್ತು ವೇದಪ್ರತಿಪಾದ್ಯನೆಂದು ಸಕಲ ಶಾಸ್ತ್ರಗಳು ಕೊಂಡಾಡುತ್ತಿರಲು ಭಾರತ ಪ್ರತಿಪಾದ್ಯನೆಂದು ದಾಸರಾಯರು ಪ್ರಯೋಗಮಾಡಿದ ಕಾರಣವೇನೆಂದರೆ, ವೇದಾಧ್ಯಯನ ಮಾಡುತ್ತಿದ್ದರೂ ಯತಾರ್ಥವಾದ ಅರ್ಥಲಾಭವು ಕಷ್ಟವಾದುದರಿಂದಲೂ, ಸ್ತ್ರೀ ಶೂದ್ರಾದಿಗಳಿಗೆ ವೇದ ಓದುವ ಅಧಿಕಾರವಿಲ್ಲದ್ದರಿಂದಲೂ ವೇದಗಳಲ್ಲಿರುವ ಭಗವನ್ಮಹಿಮೆಯನ್ನು ಜನರೆಲ್ಲರೂ ತಿಳಿಯುವುದು ಕಷ್ಟವೆಂದು ವೇದದಲ್ಲಿಯೂ ಹೇಳದಿರುವ ಭಗವನ್ಮಹಿಮೆಯು ಭಾರತದಲ್ಲಿ ಸೇರಿರುವುದೆಂದು ಆಚಾರ್ಯರ ವಾಕ್ಯವೇ ಇರುವುದು. ವೇದಾದಿಗಳು ಆದರೊಳಗಡಗಿರುವುದೆಂಬ ಭಾವನೆಯಿಂದ ಹೀಗೆ ಹೇಳಿರುವರು. ಅಥವಾ ವೇದಾದಿಗಳನ್ನೋದಿದರೂ ಮಧ್ವಶಾಸ್ತ್ರವನ್ನು ತಿಳಿದ ಹೊರತು ವೇದಗಳಿಗೆ ಸರಿಯಾದ ಅರ್ಥವಾಗುವುದಿಲ್ಲವೆಂದು ಭಾರತ ಪ್ರತಿಪಾದ್ಯನೆಂಬ ಪದದಿಂದ ಮಧ್ವಶಾಸ್ತ್ರ ಪ್ರತಿಪಾದ್ಯನೆಂಬರ್ಥವನ್ನು ಮಾಡಬಹುದು. ಹೇಗೆಂದರೆ — ಭಾಗವತ ಶೃತಿಗೀತೆಯಲ್ಲಿ " ಭರತಮತಶ್ಚಕಾಸಿ ' ವಾಯುಮತಾವಲಂಬಿಗಳಿಂದಲೇ ಭೇದ ಜ್ಞಾನದಿಂದ ಶೋಭಿಸುವೆ ಎಂದು ಸ್ತುತಿಸುವರು. ಭರತಮತಕ್ಕೆ ವಾಯುಮತವೆಂದು ಹೇಗೆ ಅರ್ಥವಾಯಿತೆಂದರೆ.— "ರತತ್ವಾದ್ಭಾತ್ಮಕೇ ವಿಷ್ಣಾವಥಾವಾಪಿ ಸ್ವಯಂಭೃತೇಃ || ಭರತೋವಾಯುರುದ್ದಿಷ್ಟೋ ಭಾರತಿತತ್ವರಸ್ವತೀ || ' ಎಂಬ ಪದದಿಂದ, ಭ–ಅಂದರೆ ಪರಮಾತ್ಮ, ಅವನಲ್ಲಿ ರತರಾಗಿರುವುದರಿಂದ ಭಾರತ ಎಂದು ವಾಯುದೇ

ವರಿಗೆ ಹೆಸರು. ಆದುದರಿಂದಲೇ, ಭರತಸ್ಯ ಸತೀ ಭಾರತೀ ' ಎಂದು ವಾಯುದೇವರ ಹೆಂಡತಿಗೆ ಭಾರತೀ ಎಂಬ ಹೆಸರು. ಆದ್ದರಿಂದ ಭಾರತವೆಂದರೆ ಭರತ ಸಂಬಂಧೀ ಭಾರತ ವಾಯು ಪ್ರೋಕ್ತವಾದ ಗ್ರಂಥಗಳಿಗೆ ಭಾರತವೆಂದು ಹೆಸರು. ವಾಯುದೇವರೇ ಮಧ್ವಾಚಾರ್ಯರಾದ್ದರಿಂದ ಭಾರತ ಪ್ರತಿಪಾದ್ಯನೆಂದು ಮಧ್ವಶಾಸ್ತ್ರ ಪ್ರತಿಪಾದ್ಯನೆಂದರ್ಥ. ಹಾಗಿಲ್ಲದಿದ್ದರೆ ಅನ್ಯಥಾ ಜ್ಞಾನದಿಂದ ಕೆಡುತ್ತಿದ್ದರೇ ಹೊರ್ತು ಯಥಾರ್ಥ ಜ್ಞಾನ ಹುಟ್ಟುತ್ತಿರಲಿಲ್ಲ. ಆದ್ದರಿಂದ ಈ ಅರ್ಥವೇ ಸಾಧುವೆಂದು ತಿಳಿಯಬೇಕು.

**ಈರೆರಡು ದೇಹೋರ್ಮಿಭೂತಗ**
**ಳಾರಧಿಕದಶಋಗ್ವಿನುತ ಲ**
**ಕ್ಷ್ಮೀರಮಣ ವಿಷ್ಣ್ವಾಖ್ಯರೂಪದಿ ಚತುಷಷ್ಟಿಕಲಾ ।**
**ಧಾರಕನು ತಾನಾಗಿ ಬ್ರಹ್ಮಪು**
**ರಾರಿ ಮುಖ್ಯರೊಳಿದ್ದು ಸತತ ವಿ**
**ಹಾರಮಾಳ್ಪನು ಚತುಷ್ಪಾದಾಹ್ವಯದಿ ಲೋಕದೊಳು ॥೭॥**

ಪದ್ಯಾರ್ಥ.—ಈರೆರಡುದೇಹ=ಮೇಲೆ ಹೇಳಿದ, ಸ್ವರೂಪದೇಹದಿ=೪ ದೇಹಗಳಿಂದ ಕೂಡಿದ ಜೀವನ ಸ್ಥೂಲ ಶರೀರವು, ಊರ್ಮಿಭೂತಗಳಾರು ಅಸ್ತಿ, ಜಾಯತೆ, ಪರಿಣಮತೆ, ವಿವರ್ಧತೆ, ಅಪಕ್ಷೀಯತೆ, ವಿನಶ್ಯತಿ ಎಂಬ ೬ ತರಂಗಗಳಿಂದ ಕೂಡಿರುವದು- ಇಂತಹಾ ತರಂಗಗಳಿಂದ ಕೂಡಿದ ದೇಹದಲ್ಲಿ ಚತುಷಷ್ಟಿ ಕಲಾ ಅಕ್ಷರ ಲಕ್ಷಣಾದಿ ೬೪ ಕಲಾವಿದ್ಯಗಳ, ಧಾರಕನು=ರಕ್ಷಕನು ಅಥವಾ ಆಧಾರಭೂತನು, ತಾನಾಗಿ ಆರಧಿಕ ದಶಋಗ್ವಿನುತ-೧೬ ಋಕ್ಕುಗಳಿಂದ ಕೂಡಿದ ಪುರುಷಸೂಕ್ತದಿಂದ ಸ್ತುತ್ಯನಾದ, ಶ್ರೀಲಕ್ಷ್ಮೀರಮಣನು, ವಿಷ್ಣ್ವಾಖ್ಯರೂಪದಿ=ವಿಷ್ಣುನಾಮಕವಾದ ರೂಪದಿಂದ ಬ್ರಹ್ಮಪುರಾರಿಮುಖ್ಯರೊಳು=ಬ್ರಹ್ಮ, ರುದ್ರ ಮೊದಲಾದವರಲ್ಲಿದ್ದು, ಚತುಷ್ಪಾದಾಹ್ವಯದಿ-ಧರ್ಮ, ಸತ್ಯ, ದಯಾ, ದಾನಗಳೆಂಬ ನಾಲ್ಕು ಪಾದಗಳುಳ್ಳ ಧರ್ಮಭೂತನಾಗಿ, ಲೋಕದೊಳು, ಸತತ=ಸರ್ವಕಾಲದಲ್ಲಿಯೂ, ವಿಹಾರಮಾಳ್ಪನು=ವಿಹಾರ ಮಾಡುತ್ತಿರುವನು.

ತಾತ್ಪರ್ಯ.—ಬ್ರಹ್ಮಾದಿ ದೇವತೆಗಳಲ್ಲಿ ಚತುಷ್ಪಾದ ಧರ್ಮಗಳನ್ನು ಪಾಲಿಸುತ್ತಾ, ಚತುಷಷ್ಟಿ ಕಲಾ ವಿದಾಧಾರಕನಾಗಿರುವ ಭಗವದ್ರೂಪೋಪಾಸನೆಯನ್ನು ಹೇಳುತ್ತಾರೆ.—ಬ್ರಹ್ಮಾದಿ ಸಕಲ ದೇವತೆಗಳಿಗೂ ಸ್ವರೂಪ

ಲಿಂಗ, ಅನಿರುದ್ಧ, ಸ್ಥೂಲಗಳೆಂಬ ಳ ದೇಹಗಳುಂಟು. ಇದರಲ್ಲಿ ಆರುವಿಧ ಗಳುಂಟು. ಅದಾವುದೆಂದರೆ.—೧. ಅಸ್ತಿ-ಲಿಂಗ, ಅನಿರುದ್ಧ ದೇಹಗಳಿಂದ ಕೂಡಿ ಸ್ಥೂಲದೇಹ ಹೊಂದುವುದಕ್ಕೆ ಪೂರ್ವದಲ್ಲಿರುವಿಕೆ. ೨. ಜಾಯತೆ-ಸ್ಥೂಲದೇಹ ಹೊಂದುವುದು. ೩. ಪರಿಣಮತೆ=ಶೈಶವಾವಸ್ಥೆ ದಾಟುವುದು. ೪. ವಿವರ್ಧತೆ=ವರ್ಧಮಾನವಾಗುತ್ತಾ ಯೌವನ ಹೊಂದುವುದು. ೫. ಅಪಕ್ಷೀಯತೆ=ಕ್ಷೀಣವಾಗುವುದು. ೬. ವಿನಶ್ಯತಿ=ನಾಶ ಹೋದುವುದೆಂಬ ೬ ತರಂಗಗಳುಂಟು. ಇವುಗಳಲ್ಲಿ ಬ್ರಹ್ಮ ವಾಯುಗಳಿಗೆ ಸರಸ್ವತೀ ಭಾರತೀ ದೇವಿಯರಿಗೆ ಮಾತ್ರ ಗರ್ಭ ಪ್ರವೇಶವಿಲ್ಲ, ಬ್ರಹ್ಮದೇವರಿಗೆ ಅವತಾರವೇ ಇಲ್ಲ. ವಾಯುದೇವರ ಅವತಾರತ್ರಯಗಳಲ್ಲಿಯೂ, ಶುಕ್ಲಶೋಣಿತ ಸಂಪರ್ಕದಿಂದ ಜನಿಸಲಿಲ್ಲವೆಂದು ಅವರ ಚರಿತ್ರೆಯಿಂದಲೇ ಗೊತ್ತಾಗುವುದು. ಆಂಜನೇಯನ ಉತ್ಪತ್ತಿಯಲ್ಲಿ ವಾಯುದೇವರು ಫಲವನ್ನು ಕೊಟ್ಟರೆಂತಲೂ ಅದರಿಂದಲೇ ಅಂಜನಾ ಗರ್ಭ ಧರಿಸಿದಳೆಂದೂ ಹೇಳಿರುವರು. ಶುಕ್ಲಶೋಣಿತ ಸಂಬಂಧವಾದರೇನೇ ಸ್ಥೂಲದೇಹವು ಗರ್ಭದಲ್ಲಿ ಉತ್ಪತ್ತಿಯಾಗುವುದು. ಅದಲ್ಲದೆ ಗರ್ಭಾಧಾನಾದಿಯು ಮತ್ತು ಜನಿಸುವುದೆಂದರೆ ತಮ್ಮಿಚ್ಛಾನುಸಾರವಾಗಿ ತಾವೇ ಲೋಕಮೋಹಕ್ಕಾಗಿ ತಮ್ಮ ನಿಜರೂಪದಿಂದಲೇ ಬಂದು ಗರ್ಭದಿಂದ ಜನಿಸಿದರೆಂದು ನಿಶ್ಚಯವಾಗುವುದು. ಹಾಗಿಲ್ಲದಿದ್ದರೆ ಸ್ತ್ರೀರಕ್ತವು, ಪುರುಷ ಶುಕ್ಲವು ಒಂದು ರಾತ್ರಿಯಲ್ಲಿ ಸೇರುವುದು "ಕಲಿಲಂ ಏಕರಾತ್ರೇಣ ಪಾಂಚರಾತ್ರೇಣ ಬುದ್ಬುದಂ | ದಶರಾತ್ರೇಣ ಕರ್ಕಂಧುಃಪೇಶ್ಯಂಡಂ ವಾತತಃಪರಂ ‖ ಮಾಸೇನತು ಶಿರೋದ್ವಾಭ್ಯಾಂ ಬಾಹ್ವಂಘ್ರ್ಯಾದ್ಯಂಗವಿಗ್ರಹಃ" ಇತ್ಯಾದಿ ಭಾಗವತ ತೃತೀಯ ಸ್ಕಂಧ ವಾಕ್ಯದಿಂದ ಒಂದು ರಾತ್ರಿಯಲ್ಲಿ ಶುಕ್ಲಶೋಣಿತ ಮಿಶ್ರವಾಗುವುದು. ೫ ದಿವಸಗಳಲ್ಲಿ ನೊರೆಕಟ್ಟುವುದು. ೧೦ ದಿವಸಗಳಲ್ಲಿ ಬೋರೆಹಣ್ಣಿನಂತೆ ಗಟ್ಟಿಯಾಗುವುದು. ತದನಂತರ ಪೇಶೀ ಎಂಬ ಚೀಲದಿಂದ ಬದ್ಧವಾಗುತ್ತಾ ಅಂಡದಂತೆ ವೃದ್ಧಿಯಾಗುವುದು. ಒಂದು ತಿಂಗಳಿಗೆ ತಲೆ ಬರುವುದು. ೨ನೇತಿಂಗಳಲ್ಲಿ ಕೈಕಾಲು ಮೊದಲಾದ ಅಂಗಗಳು ಹುಟ್ಟುತ್ತವೆ. ಎಂಬಿವೇ ಮೊದಲಾದ ವಾಕ್ಯಗಳಿಂದ ಶುಕ್ಲಶೋಣಿತ ಸಂಬಂಧದಿಂದಲೇ ಗರ್ಭೋತ್ಪತ್ತಿಯೆಂದು ಸ್ಪಷ್ಟವಾಗುವುದು. ಅದಿಲ್ಲದೆ ಆಗುವುದೆಂದರೆ ಸ್ವಮಹಿಮೆಯಿಂದಲೋ ಋಷ್ಯಾದಿಗಳ ತಪಃಪ್ರಭಾವದಿಂದಲೋ ಆಗಬೇಕಾದ್ದು. ಅನ್ಯಥಾಇಲ್ಲ

ದ್ರುಪದಾದಿಗಳ ಉತ್ಪತ್ತಿಯು ಶುಕ್ಲಾದಿಗಳಸಂಬಂಧವಿಲ್ಲದೆ ಆದರೂ ಅವು ತಮ್ಮ ಸಾಮರ್ಥ್ಯವಲ್ಲ. ತಪೋಮಹಿಮೆಯೆಂದು ತಿಳಿಯಬೇಕು.

ವಾಯುದೇವರು ಸ್ವಮಹಿಮೆಯಿಂದ ಗರ್ಭಯಾತನಾದಿಗಳಿಲ್ಲದೆ ಪೂರ್ವದಿಕ್ಕಿನಲ್ಲಿ ಸೂರ್ಯೋದಯವಾದರೆ ದಿಕ್ಕಿಗೂ ಸೂರ್ಯನಿಗೂ ಹೇಗೆ ಸಂಬಂಧವಿಲ್ಲವೋ ಹಾಗೆ ಗರ್ಭಸಂಬಂಧವಿಲ್ಲದೇನೇ ಹನುಮ ಭೀಮಾವತಾರಗಳು ಎತ್ತಿದರೆಂದು ತಿಳಿಯಬೇಕು. ಶ್ರೀಮಧ್ವಾಚಾರ್ಯರ ಜನನವು ಮಧ್ವವಿಜಯದಲ್ಲಿ "ರಾಜೀವ ಸಪ್ತರವರಂ ಭುವನಾಧಿರಾಜೋ ನಿಷ್ಕಾಸ್ಯ ಪರಮಸೌಭಗವಾನ್ವಿವೇಶ" ಮಧ್ಯಗೇಹಭಟ್ಟರ ಪತ್ನಿಯು ಪ್ರಸುವಾಗಲು ಸಂಪೂರ್ಣ ಲಕ್ಷಣದಿಂದ ಕೂಡಿದ ಆ ದೇಹದೊಳಗಿನ ಜೀವವನ್ನು ಹೊರಗೆ ಹೊರಡಿಸುತ್ತ ಹೋಗಿರುವ ರಾಜನು ಪಟ್ಟಣದೊಳಗಿನ ರಾಜನನ್ನು ಗೆದ್ದು ಹೊರಗೆ ಹೊರಡಿಸುತ್ತ ಪ್ರವೇಶಮಾಡುವಂತೆ ತಾವು ಆ ಶರೀರವನ್ನು ಪ್ರವೇಶಮಾಡಿದರೆಂದು ಸ್ಪಷ್ಟವಾಗಿ ವರ್ಣಿಸಿರುತ್ತಾರೆ. ದ್ರೌಪದಿಯು ಪೂರ್ವಜನ್ಮವಾದ ಇಂದ್ರಸೇನಾದ್ಯವತಾರಗಳಲ್ಲಿ ನಳರಾಜನ ಮಗಳೆಂದು ಹೇಳಿರುವರು. ಅಲ್ಲಿ ಭಾರತೀದೇವಿಯರಿಗೆ ಶುಕ್ಲಾದಿ ಸಂಪರ್ಕವನ್ನು ಚಿಂತಿಸಬೇಕಲ್ಲವೆ ಅಂದರೆ ಅಲ್ಲಿಯೂ ಭಾರತೀದೇವಿಯರು ಶಚ್ಯಾದಿಗಳಿಂದ ಪ್ರಾರ್ಥಿತರಾಗಿ ತಾವು ಗರ್ಭಕ್ಕೆ ಬಂದವರಾದುದರಿಂದ ತಾವೇ ಸ್ವತಂತ್ರದಿಂದ ಗರ್ಭಕ್ಕೆ ಬರುವಾಗ ಗರ್ಭದಲ್ಲಿ ನಿರ್ಲಿಪ್ತರಾಗಿದ್ದು ಶಚ್ಯಾದಿಗಳಿಗೆ ಮಾತ್ರವೇ ಗರ್ಭಸಂಪರ್ಕ ಮಾಡಿಸಿದರೆಂದು ತಿಳಿಯಬೇಕು. ಒಂದೇ ಗರ್ಭದಲ್ಲಿ ಶಚೀ, ಶಾಮಲಾ, ಉಷಾ, ಪಾರ್ವತೀ ಎಂಬ ನಾಲ್ಕುದೇವಿಯರಿಂದ ಕೂಡಿ ಭಾರತೀದೇವಿಯರು ಗರ್ಭಕ್ಕೆ ಬಂದಿರಲು, ಭಾರತೀದೇವಿಯರಿಗೆ ಗರ್ಭಸಂಬಂಧವಿಲ್ಲ, ಮಿಗಲಾದ ಶಚ್ಯಾದಿಗಳಿಗೆ ಉಂಟೆಂದು ಹೇಗೆ ನಂಬಬೇಕೆಂದರೆ ತೆಂಗಿನಕಾಯಿ ಹಸೀದಾಗಿರುವಾಗ ಆ ಕಾಯನ್ನು ಒಡೆದರೆ ಕೊಬ್ಬರಿ ಸಹಿತ ೨ ಭಾಗಗಳಾಗುವುದು. ಅದೇ ಕಾಯಿಯು ಒಣಗಿ ಮೇಲಿನ ಕರಟನ್ನು ಬಿಟ್ಟು ಗುಡುಗುಡು ಆಡುತ್ತಿರುವಾಗ ಅದನ್ನು ಒಡೆದರೆ ಒಳಗಿನ ಗಿಟುಕಿಗೆ ಸಂಬಂಧವಾಗದೆ ಕರಟವು ಮಾತ್ರ ಒಡೆಯುವುದು ಲೋಕದಲ್ಲಿ ಕಂಡಿದೆಯಷ್ಟೆ? ಅದರಂತೆ ದೇಹವು ತನ್ನದೆಂಬ ಅಭಿಮಾನವು ಶಚ್ಯಾದಿಗಳಿಗಿದ್ದುದರಿಂದ ಆ ಗರ್ಭಸಂಬಂಧವು ಅವರಿಗೆ ಆಯಿತು. ಆ ದೇಹವು ತನ್ನದೆಂಬ ಅಭಿಮಾನ ಭಾರತೀದೇವಿಯರಿಗೆ ಇಲ್ಲದ್ದರಿಂದ ಅವರಿಗೆ ಗರ್ಭಲೇಪವಿಲ್ಲವೆಂದು ತಿಳಿಯಬೇಕು.

ಪ್ರಕೃತ ಬ್ರಹ್ಮವಾಯುಗಳು, ಸರಸ್ವತೀ ಭಾರತೀಯರು ಹೊರತು ಅವರಿಗಿಂತಲೂ ಕಮ್ಮಿಯಾದ ಎಲ್ಲರಿಗೂ ೬ ತರಂಗಗಳುಂಟೆಂದು ಭಾವಿಸ ಬೇಕು. ಬ್ರಹ್ಮವಾಯುಗಳಿಗಾದರೂ ಸ್ವರೂಪ, ಲಿಂಗ, ಅನಿರುದ್ಧದೇಹ ಗಳಿಂದ ಇರುವಿಕೆ; ಸ್ಥೂಲದೇಹಪ್ರಾಪ್ತಿ ಉಂಟೇ ಉಂಟು. ಆದರೆ ಗರ್ಭ ಯಾತನಾದಿ ದುಃಖಗಳಿಲ್ಲ. ವೃದ್ಧಿ ಹೊಂದುವುದು, ಕ್ಷಯವಾಗುವುದು, ಅವರ ದೇಹಕ್ಕಿಲ್ಲದಿದ್ದರೂ ನೂರು ವರ್ಷ ಆಯುಷ್ಯವು ಕಳೆಯುತ್ತಾ ಬರು ವುದೇ ವೃದ್ಧಿಕ್ಷಯವೆಂದು ಅವರಲ್ಲಿ ಭಾವಿಸಬೇಕು. ಇಂತಹ ೪ ದೇಹಗ ಳು ೬ ತರಂಗಗಳಿಂದ ಕೂಡಿದ ಬ್ರಹ್ಮಾದಿ ಸಕಲ ಚೇತನರಲ್ಲಿ ಪುರುಷಸೂಕ್ತ ಪ್ರತಿಪಾದ್ಯನಾದ ಶ್ರೀಲಕ್ಷ್ಮೀರಮಣನಾದ ಶ್ರೀಪರಮಾತ್ಮನು ವಿಷ್ಣುರೂಪ ದಿಂದ ವ್ಯಾಪ್ತನಾಗಿದ್ದು ೬೪ ಕಲಾವಿದ್ಯೆಗಳ ಧಾರಕನಾಗಿರುವನು.

೬೪ ಕಲಾ ವಿದ್ಯಾ ಯಾವುದೆಂದರೆ.—

| | |
|---|---|
| ಅಕ್ಷರ ಲಕ್ಷಣ | ಕನ್ಯಾ ಲಕ್ಷಣ |
| ಲಿಖಿತ ಲಕ್ಷಣ | ಕಾವ್ಯ ಲಕ್ಷಣ |
| ಗಣಿತ | ಸಾಮುದ್ರಿಕ |
| ಗಾಂಧರ್ವ | ಶಕುನ |
| ನಿರುಕ್ತಿ | ಶಿಲ್ಪಿ ಶಾಸ್ತ್ರ |
| ವೈಷಿಕ | ತಾಳಶಾಸ್ತ್ರ |
| ಭಟ್ಟ | ನ್ಯಾಯಿವಾದ |
| ಪ್ರಭಾಕರ | ಧಾತುವಾದ |
| ನ್ಯಾಯಶಾಸ್ತ್ರ | ವಿಷವಾದ |
| ವ್ಯಾಕರಣ | ಗಾರುಡ |
| ಮೀಮಾಂಸಾ | ಮಲ್ಲಶಾಸ್ತ್ರ |
| ಛಾಂದಸ್ | ವೈದ್ಯ |
| ಅಲಂಕಾರ | ಪರಕಾಯ ಪ್ರವೇಶ |
| ಇತಿಹಾಸ | ಅಶ್ವಾರೋಹಣ |
| ಪುರಾಣ | ಗಜಾರೋಹಣ |
| ಸ್ತ್ರೀ ಲಕ್ಷಣ | ರಥಾರೋಹಣ |
| ಪುರುಷ ಲಕ್ಷಣ | ಚರ್ಮಶಾಸ್ತ್ರ |

ರತ್ನಪರೀಕ್ಷಾ, ಜ್ಯೋತಿಷ, ಕವಿತ್ವ, ಇಂದ್ರಜಾಲ, ಮಹೇಂದ್ರಜಾಲ, ಅಗ್ನಿಸ್ತಂಭ, ಜಲಸ್ತಂಭ, ಅರ್ಕಸ್ತಂಭ, ವಿಷಸ್ತಂಭ, ವಾಯುಸ್ತಂಭ, ಕಾಲಜ್ಞಾನ, ದೂರದೃಷ್ಟಿ, ದೂರಶ್ರವಣ, ಇಂಗಿತ ಭಾಷ, ಪರಿಹಾಷ ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಸಂಕಲ್ಪಸಿದ್ಧಿ, ಕಾಮ ರೂಪ, ಮನೋಜವ, ಪಕ್ಷಿಶಾಸ್ತ್ರ, ಆಕರ್ಷಣ, ಉಚ್ಚಾಟನ, ಸ್ತಂಭನ, ಮೋಹನ, ವಶೀಕರಣ, ಜಾರತ್ವ, ಚೋರತ್ವ.

ಈ ಪ್ರಕಾರ ಅರವತ್ತುನಾಲ್ಕು ವಿದ್ಯಾಧಾರಕನಾಗಿ ಬ್ರಹ್ಮಾದಿ ಸಕಲ ಚೇತನರಲ್ಲಿದ್ದು ಧರ್ಮ, ಸತ್ಯ, ದಯಾ, ದಾನವೆಂಬ ನಾಲ್ಕು ಪಾದಗಳುಳ್ಳ ಧರ್ಮವನ್ನು ಸ್ಥಾಪಿಸುತ್ತಾ ಮಾಡಿಸುತ್ತಾ ಚತುಷ್ಪಾದ ನಾಮಕನಾಗಿಯೂ ಅಥವಾ ಚತುಷ್ಪಾದವುಳ್ಳ ಧರ್ಮನಾಮಕನಾಗಿಯೂ ಇದ್ದು ಸರ್ವ ಲೋಕಗಳಲ್ಲಿ ವಿಹಾರಮಾಡುತ್ತಿರುವನು.

ತೃಣಮೊದಲು ಬ್ರಹ್ಮಾಂತ ಜೀವರ
ತನುಚತುಷ್ಟಯಗಳಲಿ ನಾರಾ
ಯಣನ ಸಾವಿರದೈದು ನೂರಿಪ್ಪತ್ತು ಮೇಲಾರು ||
ಗಣನೆಮಾಳ್ಪದು ಭುದರು ರೂಪವ
ಘೃಣಿಃ ಸೂರ್ಯಾದಿತ್ಯ ನಾಮಗ
ಳನುದಿನದಿ ಜಪಿಸುವರಿಗೀವಾರೋಗ್ಯ ಸಂಪದವಾ ||೮||

ಪದ್ಯಾರ್ಥ.—ತೃಣ ಮೊದಲು ಬ್ರಹ್ಮಾಂತ ಜೀವರ=ತೃಣಜೀವರ ಮೊದಲುಮಾಡಿ ಬ್ರಹ್ಮದೇವರವರೆಗಿರುವ ಜೀವರುಗಳ, ತನುಚತುಷ್ಟಯ

ಗಳಲಿ-ಸ್ವರೂಪಾದಿ ೪ ದೇಹಗಳಲ್ಲಿ, ನಾರಾಯಣನ, ಸಾವಿರದೈದು=೫ಸಾವಿರದ, ನೂರಿಪ್ಪತ್ತು ಮೇಲಾರು, ಒಟ್ಟು ೫೧೨೬ ರೂಪವ-ರೂಪಗಳನ್ನು, ಬುಧರು-ಜ್ಞಾನಿಗಳು, ಗಣನೆಮಾಳ್ಪದು-ಅಕ್ಷರ ಸಂಖ್ಯೆಯಿಂದ ಗಣನೆಮಾಡತಕ್ಕದ್ದು. "ಧ್ಯೇಯಸ್ಸದಾ ಸವಿತೃಮಂಡಲ ಮಧ್ಯವರ್ತೀ" ಎಂಬ ಧ್ಯಾನ ಶ್ಲೋಕದಿಂದ ಸೂರ್ಯಮಂಡಲ ಮಧ್ಯವರ್ತಿಯಾದ ನಾರಾಯಣನನ್ನು ಚಿಂತಿಸುತ್ತಾ, ಶ್ರೀಮದಾಚಾರ್ಯರು ತಂತ್ರಸಾರದಲ್ಲಿ ಹೇಳಿರುವ ೭೨ಮಹಾಮಂತ್ರಗಳ ಪೈಕಿ ಒಂದಾದ "ಓಂ ಘೃಣಿ ಸೂರ್ಯ ಆದಿತ್ಯಃ' ಎಂಬ ಸೂರ್ಯಾಷ್ಟಾಕ್ಷರ ಮಂತ್ರವನ್ನು ಜಪಿಸಬೇಕೆಂದು ಹೇಳುತ್ತಾರೆ. ಘೃಣಿಃ ಸೂರ್ಯಾದಿ ನಾಮಗಳನು=ಘೃಣಿ ಸೂರ್ಯನೆಂತಲೂ ಆದಿತ್ಯನೆಂತಲೂ ನಾಮಗಳಿಂದ ಕೂಡಿದ, ಈ ಮಂತ್ರವನ್ನು, ಅನುದಿನದಿ-ಪ್ರತಿದಿವಸದಲ್ಲಿಯೂ, ಜಪಿಸುವರಿಗೆ, ಆರೋಗ್ಯ=ಆರೋಗ್ಯವನ್ನು, ಸಂಪದವ = ಸಂಪತ್ತನ್ನು, ಈವ=ಕೊಡುವ.

ತಾತ್ಪರ್ಯ.—ತೃಣ ಮೊದಲು ಬ್ರಹ್ಮಾಂತ ಜೀವರ ೪ ಶರೀರಗಳಲ್ಲಿ ಉಪಾಸನಾ ಮಾಡಬೇಕಾದ ಭಗವದ್ರೂಪಗಳನ್ನು ಹೇಳುತ್ತಾರೆ.—ತೃಣ ಮೊದಲು ಬ್ರಹ್ಮದೇವರವರೆಗೂ ಇರುವ ಜೀವರ ಸ್ವರೂಪ, ಲಿಂಗ, ಅನಿರುದ್ಧ, ಸ್ಥೂಲವೆಂಬ ೪ ದೇಹಗಳಲ್ಲಿ ನಾರಾಯಣರೂಪಿಯಾದ ಶ್ರೀಪರಮಾತ್ಮನು ಅಕ್ಷರ ಸಂಖ್ಯೆಯಿಂದ, ನ+ಆ=ನಾ=೬, ರಾ=೨, ಯ=೧, ಣ=೫, ಇವುಗಳನ್ನು ವಾಮಾಂಕಮಾಡಿದರೆ ೫೧೨೬ ಆಗುವವು, ಅಥವಾ, ನಾ=೫, ರಾ=೨, ಯ=೧, ಣ=೫, ಒಟ್ಟು ೫೧೨೫ ಆದವು, ಇಷ್ಟು ರೂಪಗಳ ಕೂಡ ನಾರಾಯಣರೂಪ ಒಂದನ್ನು ಕೂಡಿಸಿದರೆ ೫೧೨೬ಆಗುವವು. ಇಷ್ಟು ರೂಪಗಳಿಂದ ವಾಸಮಾಡುವನು. ಅದೇ ನಾರಾಯಣನೇ ಸೂರ್ಯಮಂಡಲ ಮಧ್ಯವರ್ತಿಯಾಗಿದ್ದು "ಓಂ ಘೃಣಿಃ ಸೂರ್ಯ ಆದಿತ್ಯಃ' ಎಂಬ ಸೌರ ಅಷ್ಟಾಕ್ಷರ ಮಂತ್ರವನ್ನು ತಂತ್ರಸಾರದಲ್ಲಿ ಶ್ರೀಮದಾಚಾರ್ಯರು ಉದ್ಧರಿಸಿದ ೭೨ ಮಹಾಮಂತ್ರಗಳ ಪೈಕಿ ಒಂದನ್ನಾಗಿ ತೆಗೆದುಕೊಂಡಿರುವರು.

ಧರ್ಮರಾಜನು ವನವಾಸದಲ್ಲಿದ್ದಾಗ ಬ್ರಾಹ್ಮಣ ಭೋಜನಮಾಡಿಸಲು ಮಾರ್ಗವಿಲ್ಲದಿರಲು, ಈ ಮಂತ್ರದಿಂದ ಸೂರ್ಯನ ಆರಾಧನೆಮಾಡಿ ಅಕ್ಷಯಪಾತ್ರೆಯನ್ನು ಪಡೆದನು. ಆದುದರಿಂದಲೇ ದಾಸರಾಯರು "ಓಂಘೃಣೀಃ ಸೂರ್ಯಆದಿತ್ಯ" ಎಂಬ ಮಂತ್ರವನ್ನು ಪ್ರತಿದಿವಸದಲ್ಲಿಯೂ ಜಪಮಾಡು

ವವರಿಗೆ ಆರೋಗ್ಯವನ್ನೂ, ಸಂಪತ್ತನ್ನೂ ಕೊಡುವನೆಂದು ಹೇಳಿರುವರು.

**ಐದುನೂರೆಪ್ಪತ್ತನಾಲ್ಕು**
**ವಾದಿ ಭೌತಿಕದಲ್ಲಿ ತಿಳಿವುದು**
**ಐದೆರಡುಶತ ಏಕವಿಂಶತಿ ರೂಪವಧ್ಯಾತ್ಮ ||**
**ಭೇದಗಳಿನ್ನೂರು ಮೂವ**
**ತ್ತಾದ ಮೇಲೊಂದಧಿಕ ಮೂರ್ತಿಗ**
**ಳಾದರದಿಯಾಧಿದೈವದೊಳು ಚಿಂತಿಪುದು ಭೂಸುರರು ||೯||**

ಪದ್ಯಾರ್ಥ.—ಐದುನೂರೆಪ್ಪತ್ತುನಾಲ್ಕು=೫೭೪ ರೂಪಗಳನ್ನು ಆದಿ ಭೌತಿಕದಲ್ಲಿ, ತಿಳಿವದು=ಚಿಂತಿಸಬೇಕು, ಐದೆರೆಡುಶತಏಕವಿಂಶತಿರೂಪವ= ೨೨೧ ರೂಪಗಳನ್ನು, ಅಧ್ಯಾತ್ಮ=ಅಧ್ಯಾತ್ಮದಲ್ಲಿ ಚಿಂತಿಸಬೇಕು, ಭೇದಗಳಲಿ=ಅಧ್ಯಾತ್ಮಾದಿ ಭೇದಗಳಲ್ಲಿ, ಒಂದಾದ ಆದಿದೈವದೊಳು=ಆದಿದೈವದೊಳಗೆ, ಇನ್ನೂರುಮೂವತ್ತಾದ ಮೇಲೊಂದಧಿಕ=೨೩೧ ಮೂರ್ತಿಗಳ, ಆದರದಿ=ಆದರದಿಂದ, ಭೂಸುರರು-ಬ್ರಾಹ್ಮಣರು, ಚಿಂತಿಪುದು=ಧ್ಯಾನಿಸಬೇಕು

ತಾತ್ಪರ್ಯ.—ಅಧ್ಯಾತ್ಮಾಂಗತ ಸೂರ್ಯಮಂಡಲಮಧ್ಯವರ್ತಿಯಾದ ನಾರಾಯಣನ ರೂಪಗಳ ಉಪಾಸನಾ ಪ್ರಕಾರವನ್ನು ಹೇಳುತ್ತಾರೆ.— ಘೃಣಿ, ಸೂರ್ಯ, ಆದಿತ್ಯ ಎಂಬ ನಾಮುಗಳಿಂದ ಆದಿಭೂತಾದಿ ಮೂರರಲ್ಲಿ ಅಕ್ಷರ ಸಂಖ್ಯಾರೂಪಗಳಿಂದ ಶ್ರೀಮನ್ನಾರಾಯಣನು ವಾಸಮಾಡುವನು- ಘೃಣಿ=ಘ್=೪, ರ್=೨, ಣಿ=೫, ವಾಮಾಂಕ=೫೨೪ ರೂಪಗಳಿಂದ ಆದಿಭೂತವಾದ-ಪಂಚಭೂತವಾದ ಪೃಥಿವ್ಯಾಧಿತತ್ವಗಳಲ್ಲಿರುವನು. ಅಧ್ಯಾತ್ಮವೆಂಬ ಮನಸ್ತತ್ವದಲ್ಲಿ ಸೂರ್ಯನಾಮಕನಾಗಿ, ಸೂ-೨, ರ್=೨, ಯ-೧ =೨೨೧ ರೂಪಗಳಿಂದ ಇರುವನು. ಈ ಸಂಖ್ಯೆಯನ್ನು ವಾಮಾಂಕಮಾಡದೆ ಇರುವುದರ ಕಾರಣವೇನೆಂದರೆ.—ಈ ಮಂತ್ರದ "ಓಂಘೃಣಿಃ, ಸೂರ್ಯ ಆದಿತ್ಯಕೆ ಎಂಬುದರಲ್ಲಿ ಸೂರ್ಯ ಶಬ್ದವು ಮಧ್ಯಗತವಾಗಿದ್ದು ಷಡಂಗ ನ್ಯಾಸದಲ್ಲಿ ಕ್ರಮವ್ಯುತ್ಕ್ರಮವಾಗಿ ಮಂತ್ರವನ್ನುಚ್ಚರಿಸುತ್ತಾ ನ್ಯಾಸಮಾಡುವಾಗ ಕ್ರಮದಲ್ಲೂ, ವ್ಯುತ್ಕ್ರಮದಲ್ಲೂ ಸೂರ್ಯ ಶಬ್ದವು ಮಧ್ಯವಾಗುವುದೆಂಬುದನ್ನು ಸೂಚಿಸುತ್ತೆ. ಹೇಗೆಂದರೆ.—" ಓಂಘೃಣೀ ಹೃದಯಾಯ ನಮಃ, ಸೂರ್ಯಾಯ ಶಿರಸೇ ಸ್ವಾಹಾ, ಆದಿತ್ಯಾಯ ಶಿಖಾಯೈ ವೋಷಟ್ ಆದಿತ್ಯಾಯ ಕವಚಾಯ ಹುಂ, ಸೂರ್ಯಾಯ ನೇತ್ರಾಭ್ಯಾಂ ವೋಷಟ್,

ಘೃಣಯೇ ಆಷ್ಟ್ರಾಯಘಟ ಇತಿದಿಗ್ಯಂಧಃ" ಎಂದು ತಂತ್ರಸಾರದಲ್ಲಿ ಷಡಂಗನ್ಯಾಸದಲ್ಲಿ ಹೇಳಿರುವರು. ಇದರಿಂದ ಕ್ರಮವಾಗಿ ಎಡದಿಂದ ಬಲಕ್ಕೆ ಉಚ್ಚರಿಸುವಾಗಲೂ, ಘೃಣಿ, ಸೂರ್ಯ, ಆದಿತ್ಯ ಎಂದು ಸೂರ್ಯಶಬ್ದವು ಮಧ್ಯವಾಗುವುದು. ಆದಿತ್ಯ, ಸೂರ್ಯ, ಘೃಣಿ ಎಂದು ಬಲದಿಂದ ಎಡದವರೆಗೂ ಉಚ್ಚರಿಸುವಾಗಲೂ ಸೂರ್ಯಮಧ್ಯಗತವಾಗುವುದು. ಹೀಗೆ ಸೂರ್ಯ ಹೀಗೂ ಸಮ, ಹಾಗೂ ಸಮವೆಂಬ ಅರ್ಥವನ್ನು ಸೂಚಿಸುತ್ತ, ಸೂರ್ಯನ ಅಕ್ಷರ ಸಂಖ್ಯಾಕ್ರಮವಾಗಿ ೨೨೧ ಆಗುವುವು. ಇದನ್ನು ಬಲದಿಂದ ಎಣಿಸಿದರೆ ೧೨೨ ಆಗಬೇಕಾಗಿತ್ತು. ಹಾಗೆ ಹೇಳದೆ ಕ್ರಮವಾಗಿಯೇ ೨೨೧ ಎಂದು ಹೇಳಿರುವರೆಂದು ನನ್ನ ಮಂದಬುದ್ಧಿಗೆ ತೋರಿದ ಸಮಾಧಾನ ಬರೆದಿರುತ್ತೇನೆ. ಈ ವಿಷಯದಲ್ಲಿ ಸಂಕರ್ಷಣ ಒಡೆಯರು ತಮ್ಮ ವ್ಯಾಖ್ಯಾನದಲ್ಲಿ ಎರಡುಶತ ಐದೆರಡುಶತ ಏಕವಿಂಶತಿ ಎಂದು ಆವೃತ್ತಿಯಿಂದ ಪದಮಾಡಿ ಸೂರ್ಯನ ರಶ್ಮಿಗಳು ಐದು, ಪೂರ್ವಾದಿ ೪ ದಿಕ್ಕುಗಳು, ಊರ್ಧ್ವ ೧, ಹೀಗೆ ೫ ದಿಕ್ಕುಗಳಲ್ಲಿ ದಿಕ್ಕೊಂದಕ್ಕೆ ಎರಡುಶತ, ೨೦೦ರಂತೆ ೫ದಿಕ್ಕುಗಳಲ್ಲಿ ಐದೆರಡುಶತ=೫×೨=೧೦ ನೂರು ಅಂದರೆ ೧೦೦೦ ರಶ್ಮಿಗಳೆಂತಲೂ, ಶತಏಕವಿಂಶತಿ ಅಂದರೆ ೧೨೧ ಎಂದು ಅರ್ಥಮಾಡಿ, ಈ ಪದ್ಯಕ್ಕೆ ಘೃಣಿಃ, ಸೂರ್ಯ, ಆದಿತ್ಯ ಎಂಬ ಮಂತ್ರಗಳ ಸೂರ್ಯ ಶಬ್ದಕ್ಕೆ ಅರ್ಕ ಎಂಬ ಪರ್ಯಾಯಪದವನ್ನು ಕಲ್ಪಿಸಿ ಅ=೧, ರ್=೨, ಕ=೧, ಅಂತು ಶತಏಕವಿಂಶತಿ-೧೨೧ ರೂಪಗಳನ್ನು ಅಧ್ಯಾತ್ಮದಲ್ಲಿ ತಿಳಿಯಬೇಕೆಂದು ಅರ್ಥಮಾಡಿರುವರು. ಇದರಲ್ಲಿ ಸಾಧುಗಳು ಯಾವ ಅರ್ಥವನ್ನಾದರೂ ಗ್ರಹಿಸಬಹುದು- ಇದರಂತೆ ಆದಿದೈವವಾದ ತತ್ವದೇವತೆಗಳಲ್ಲಿ ಆದಿತ್ಯ-ಅ=೧, ದಿ=೩, ತ್ಯ=೨, ವಾಮಾಂಕದಿಂದ ೨೩೧ ರೂಪಗಳನ್ನು ಚಿಂತಿಸಬೇಕೆಂದು ತಾತ್ಪರ್ಯ.

**ಸುರುಚಿ ಶಾರ್ವರಿಕರನೆನಿಸಿ ಸಂ**
**ಕರುಷಣ ಪ್ರದ್ಯುಮ್ನ ಶಶಿ ಭಾ**
**ಸ್ಕರರೊಳಗೆ ಆರವತ್ತಧಿಕ ಮುನ್ನೂರು ರೂಪದಲಿ ||**
**ಕರಸಿಕೊಂಬನು ಅಹಃಸ್ಸಂವ**
**ತ್ಸರನೆನಿಪನು ವಿಶಿಷ್ಟನಾಮದ**
**ಲರಿತವರಿಗಾರೋಗ್ಯಭಾಗ್ಯವನೀವನಂದಮಯ ||೧೧||**

ಪದ್ಯಾರ್ಥ.—ಸುರುಚಿಶಾರ್ವರಿಕರನೆನಿಸಿ=ಸುರುಚಿ, ಶಾರ್ವರಿಕರ

ರೊಳಗೆ=ಸೂರ್ಯಚಂದ್ರರೊಳಗೆ, ಅರವತ್ತಧಿಕ ಮುನ್ನೂರು ರೂಪದಲಿ=೩೬೦ ರೂಪಗಳಿಂದ, ಅಹಃ=ಹಗಲುವಾಚಕನಾಗಿಯೂ, ಸಂವತ್ಸರನೆನಿಪನು-ಸಂವತ್ಸರ ಶಬ್ದವಾಚ್ಯನೂ ಆಗಿರುವನೆಂದು, ವಿಶಿಷ್ಟನಾಮದಲಿ=ಹೀಗೆ ಸಮಸ್ತ ನಾಮಗಳಿಂದ ಯುಕ್ತನೆಂದು, ಅರಿತವರಿಗೆ=ತಿಳಿದವರಿಗೆ, ನಂದಮಯ-ಆನಂದಸ್ವರೂಪನು, ಆರೋಗ್ಯಭಾಗ್ಯವನೀವ = ಆರೋಗ್ಯವನ್ನೂ ಸಂಪತ್ತನ್ನೂ ಕೊಡುವನು.

ತಾತ್ಪರ್ಯ.—ಚಂದ್ರ ಸೂರ್ಯಗತ ಭಗವದ್ರೂಪೋಪಾಸನೆಯನ್ನು ಹೇಳುತ್ತಾರೆ—ಆನಂದಮಯನಾದ ಸಂಕರ್ಷಣನು ಸುರುಚಿನಾಮಕನಾಗಿ ಸೂರ್ಯನಲ್ಲಿಯೂ, ಪ್ರದ್ಯುಮ್ನನು ಶಾರ್ವರಿಕರನಾಮದಿಂದ ಚಂದ್ರನೊಳಗೂ ಇದ್ದು, ೩೬೦ ಹಗಲು ವಾಚಕನಾಗಿಯೂ, ೩೬೦ ರಾತ್ರಿವಾಚಕನಾಗಿಯೂ, ಮತ್ತು ಸಂವತ್ಸರ ಶಬ್ದವಾಚಕನಾಗಿಯೂ ಇರುವನು, ಹೀಗೆ ವಿಶಿಷ್ಟವಾದ ನಾಮಗಳಿಂದ ಕೂಡಿದವನೆಂದು ತಿಳಿದು ಉಪಾಸನೆಮಾಡುವವರಿಗೆ ಆರೋಗ್ಯವನ್ನೂ ಸಂಪತ್ತನ್ನೂ ಕೊಟ್ಟುದ್ಧರಿಸನು.

ಏಕ ಪಂಚಾಶದ್ವರ್ಣಗತ
ಮಾಕಳತ್ರನು ಸರ್ವರೊಳಗ
ವ್ಯಾಕೃತಾಕಾಶಾಂತ ವ್ಯಾಪಿಸಿ ನಿಗಮತತಿಗಳನು ||
ವ್ಯಾಕರಣ ಭಾರತ ಮುಖಾದ್ಯ
ನೇಕ ಶಾಸ್ತ್ರ ಪುರಾಣ ಭಾಷ್ಯಾ
ನೀಕಗಳ ಕಲ್ಪಿಸಿ ಮನೋವಾಙ್ಮಯನೆನಿಸಿಕೊಂಬ ||೧೧||

ಪದ್ಯಾರ್ಥ.—ಏಕಪಂಚಾಶದ್ವರ್ಣಗತ= ಅ, ಆ ಮೊದಲಾದ ೫೧ ಅಕ್ಷರಪ್ರತಿಪಾದ್ಯನಾದ, ಮಾಕಳತ್ರನು - ಲಕ್ಷ್ಮೀಪತಿಯು, ಸರ್ವರೊಳಗೆ ಸಮಸ್ತ ಪ್ರಾಣಿಗಳೊಳಗೂ, ಹೊರಗೂ, ಅವ್ಯಾಕೃತಾಕಾಶಾಂತ=ಅವ್ಯಾಕೃತಾಕಾಶದವರೆಗೂ, ವ್ಯಾಪಿಸಿ-ವ್ಯಾಪ್ತನಾಗಿ, ನಿಗಮತತಿಗಳನು=ವೇದ ಸಮೂಹಗಳನ್ನು, ವ್ಯಾಕರಣ=ವ್ಯಾಕರಣ ಶಾಸ್ತ್ರಗಳನ್ನು, ಭಾರತಮುಖ್ಯಾದ್ಯನೇಕ ವಿಧವಾದ ಪುರಾಣ ಭಾಷ್ಯಾನೀಕಗಳ=ಪುರಾಣ ಭಾಷ್ಯಗಳ ಸಮೂಹಗಳನ್ನು, ಕಲ್ಪಿಸಿ, ಅವರಿಗೆ ಭೋದಕವಾಗುವಂತೆ ಮಾಡಿ, ಮನೋವಾಙ್ಮಯನು=ಮನೋಮಯನೆಂತಲೂ, ವಾಙ್ಮಯನೆಂತಲೂ, ಎನಿಸಿಕೊಂಬ-ಕರೆಸಿಕೊಳ್ಳುವನು.

ತಾತ್ಪರ್ಯ.—ಅಕಾರಾದ್ಯಕ್ಷರ ಪ್ರತಿಪಾದ್ಯನಾಗಿ ಸರ್ವತ್ರ ವ್ಯಾಪ್ತನಾಗಿದ್ದು ಸರ್ವಶಬ್ದವಾಚ್ಯನಾಗಿ ಮನೋವಾಙ್ಮಯನೆಂದು ಪ್ರಸಿದ್ಧನಾಗಿರುವನೆಂದು ಹೇಳುತ್ತಾರೆ—ಅಕಾರಾದಿ ೫೧ ಅಕ್ಷರಪ್ರತಿಪಾದ್ಯನಾಗಿ ಶ್ರೀಲಕ್ಷ್ಮೀರಮಣನು ಅವ್ಯಾಕೃತಾಕಾಶದವರೆಗೂ ಸರ್ವತ್ರ ಸರ್ವರೊಳಗೂ ವ್ಯಾಪ್ತನಾಗಿದ್ದು ವೇದ ಭಾರತಾದಿ ಸಕಲ ಶಾಸ್ತ್ರಾರ್ಥಗಳನ್ನು ಅವರವರ ಯೋಗ್ಯತಾನುಸಾರ ಅರ್ಥವಾಗುವಂತೆಮಾಡಿ, ಮನೋಮಯ ವಾಙ್ಮಯನೆಂದು ಕರೆಸಿಕೊಂಬನು. ( ಯಾವ ಭಾಷ್ಯಗಳಾದರೂ, ಪುರಾಣಾದಿಗಳಾದರೂ ೫೧ ಅಕಾರಾದಿ ಅಕ್ಷರಗಳನ್ನು ಬಿಟ್ಟಿಲ್ಲವಾದುದರಿಂದ ಅಜಾದಿವಾಚಕನಾಗಿ ಸರ್ವತ್ರ ತುಂಬಿರುವನೆಂಬ ತಾತ್ಪರ್ಯ. )

**ಭಾರಭೃನ್ನಾಮಕನ ಸಾವಿರ**
**ದಾರನೂರಿಪ್ಪತ್ತುನಾಲ್ಕು**
**ಮೂರುತಿಗಳು ಚರಾಚರದಿ ಸರ್ವತ್ರ ತುಂಬಿಹವು ||**
**ಆರುನಾಲ್ಕು ಜಡಗಳಲಿ ಹದಿ**
**ನಾರು ಚೇತನಗಳಲಿ ಚಿಂತಿಸೆ**
**ತೋರಿಕೊಂಬನು ತನ್ನರೂಪವ ಸರ್ವಠಾವಿನಲಿ||೧೨||**

ಪದ್ಯಾರ್ಥ.—ಭಾರಭೃನ್ನಾಮಕನ=ಭಾರಭೃತ್ ಎಂಬ ಹೆಸರುಳ್ಳ, (ಪರಮಾತ್ಮನ) ಸಾವಿರದಾರನೂರಿಪ್ಪತ್ತುನಾಲ್ಕು=೧೬೨೪, ಮೂರುತಿಗಳು, ಚರಾಚರದಿ=ಚರಾಚರಾಖ್ಯ ಪ್ರಪಂಚದಲ್ಲಿ, ಸರ್ವತ್ರ=ಎಲ್ಲಾ ಕಡೆಗಳಲ್ಲಿಯೂ ತುಂಬಿಹವು=ವ್ಯಾಪಿಸಿಕೊಂಡಿರುವವು. ಆರು ನಾಲ್ಕು ಜಡಗಳಲಿ=ಸ್ಥೂಲ ದೇಹದೊಳಗೆ ಇರುವ ೬×೪=೨೪ ಜಡಭೂತವಾದ ಪೃಥಿವ್ಯಾದಿ ತತ್ವಗಳಲ್ಲಿ ಹದಿನಾರು ಚೇತನಗಳಲ್ಲಿ—ಷೋಡಶಕಲಾಭಿಮಾನಿಗಳಾದ ೧೬ ತತ್ವೇಶರೊಳಗೂ, ಚಿಂತಿಸೆ=ಚಿಂತಿಸಲು, ಸರ್ವಠಾವಿನಲಿ—ಎಲ್ಲಾ ಪ್ರದೇಶಗಳಲ್ಲಿಯೂ, ತನ್ನರೂಪವ—ತನ್ನ ರೂಪವನ್ನು, ತೋರಿಕೊಂಬನು—ಅಪರೋಕ್ಷದಲ್ಲಿ ಕಾಣಿಸಿಕೊಳ್ಳುವನು.

ತಾತ್ಪರ್ಯ.—ಭಾರಭೃನ್ನಾಮಕನ ಉಪಾಸನಾಕ್ರಮವನ್ನು ಹೇಳುತ್ತಾರೆ—ಭಾರಭೃತ್ ಎಂಬ ಹೆಸರುಳ್ಳ ಶ್ರೀಪರಮಾತ್ಮನ ಅಕ್ಷರ ಸಂಖ್ಯಾಕ್ರಮದಿಂದ ಭಾ=೪, ರ=೨, ಭೃ=೬, ತ್—೧, ಇದನ್ನು ವಾಮಾಂಕ ಮಾಡಿದರೆ ೧೬೨೪ ಆಗುವದು. ಇಷ್ಟು ಮೂರ್ತಿಗಳು ಚರಾಚರಾಖ್ಯ ಸರ್ವ

ಪ್ರಪಂಚದಲ್ಲಿಯೂ ತುಂಬಿರುವವು. ಪ್ರಪಂಚವನ್ನೆಲ್ಲ ಧರಿಸಿ ಇರುವುದರಿಂದಲೂ, ಭಾರವಹಿಸುವುದೆಂದರೆ ಪ್ರಪಂಚದಲ್ಲಿ ಸರ್ವಪ್ರಾಣಿಗಳ ಯೋಗಕ್ಷೇಮ ಭಾರವನ್ನು ವಹಿಸಿರುವನೆಂದರ್ಥ. ಆದ್ದರಿಂದಲೇ ಶ್ರೀ ಪರಮಾತ್ಮನಿಗೆ "ಭಾರಭೃತ್" ಎಂದು ಹೆಸರು ಮತ್ತು ಸ್ಥೂಲ ಶರೀರಗಳಲ್ಲಿ ಇರುವ ೨೪ ತತ್ವಗಳು ಪೃಥಿವ್ಯಾದಿ ಜಡವಾದುದರಿಂದ ಅವುಗಳಲ್ಲಿ ತದ್ರೂಪಿಯಾಗಿರುವನು. ಷೋಡಶ ಕಲೋಪೇತ ಲಿಂಗಶರೀರದಲ್ಲಿಯೂ, ಸ್ಥೂಲ ಶರೀರದಲ್ಲಿಯೂ ಸಹ ಜ್ಞಾನೇಂದ್ರಿಯಗಳು ೫, ಕರ್ಮೇಂದ್ರಿಯಗಳು ೫, ಮಹಾಭೂತಗಳು ೫, ಮನಸ್ಸು ೧—ಇವುಗಳ ಅಭಿಮಾನಿ ದೇವತೆಗಳು ಚೇತನರಾದುದರಿಂದ ಹದಿನಾರು ಚೇತನಗಳಲಿ ಎಂದು ಹೇಳಿದರು. ೨೪ರಲ್ಲಿ ೧೬ ಚೇತನರನ್ನು ಮಾತ್ರ ಏಕೆ ತೆಗೆದುಕೊಂಡರೆಂದರೆ ಪಂಚಮಹಾಭೂತಗಳನ್ನು ತೆಗೆದುಕೊಂಡರೆ ಸೂರ್ಯನನ್ನು ಬಿಟ್ಟು ಕಿರಣಗಳು ಹೇಗೆ ಬೇರೆಯಾಗುವುದಿಲ್ಲವೋ ಹಾಗೆ ತನ್ಮಾತ್ರಾ ಗುಣಗಳು ಪೃಥಿವ್ಯಾದಿಗಳನ್ನು ಬಿಟ್ಟು ಬೇರೆ ಇರದೆ ಪೃಥಿವೀಗುಣ ಗಂಧ, ಉದಕದ ಗುಣ ರಸ, ಹೀಗೆ ಇವುಗಳು ಒಂದಕ್ಕೊಂದು ಸಂಬಂಧಿಸಿಯೇ ಇರುವವು. ಇವುಗಳಿಗೆ ಸ್ಥಾನವು ಬೇರೆಯಿಲ್ಲದೆ ಜ್ಞಾನೇಂದ್ರಿಯಗಳೇ ಆವಾಸಸ್ಥಾನವಾಗಿರುವವು ಅಂದರೆ ಮೂಗು ಗಂಧಗುಣದಿಂದ ಕೂಡಿದ ಭೂತತ್ವಕ್ಕೆ ಸ್ಥಾನವಾಗಿಯೂ, ಕಣ್ಣು ರೂಪ ಗುಣ ವಿಶಿಷ್ಟವಾದ ತೇಜಸ್ತತ್ವಕ್ಕೂ ಹೀಗೆ ಒಂದರಲ್ಲೊಂದು ಸೇರಿರುವುದರಿಂದಲೂ ಜ್ಞಾನೇಂದ್ರಿಯಾಭಿಮಾನಿಗಳೇ ಇವುಗಳಿಗೂ ಅಭಿಮಾನಿಗಳಾಗಿರುವುದರಿಂದಲೂ, ತನ್ಮಾತ್ರಾಗುಣಗಳನ್ನು ಬಿಟ್ಟರು. ಚಿತ್ತ, ಬುದ್ಧಿ, ಅಹಂಕಾರಗಳು ಮನಸ್ಸಿನ ಪ್ರಭೇದವೇ ಆದುದರಿಂದ ಮನಸ್ತತ್ವವನ್ನು ಮಾತ್ರ ತೆಗೆದುಕೊಂಡರು. ಪ್ರಾಯಶಃ ಷೋಡಶಕಲೋಪೇತವು ಪುರುಷಶರೀರವೆಂತಲು, ಆದುದರಿಂದಲೆ ಪರಮಾತ್ಮನಿಗೆ ಷೋಡಶಾತ್ಮಕನೆಂದು ಹೆಸರೆಂಬ ಭಾಗವತ ವಚನಾದಿಗಳನ್ನನುಸರಿಸಿ ದಾಸರಾಯರು 'ಹದಿನಾರು ಚೇತನಗಳಲಿ' ಎಂದು ಹೇಳಿರುವರು. ಹೀಗೆ ಸರ್ವತ್ರ ಇದ್ದು ನಮ್ಮ ಸಕಲ ಯೋಗಕ್ಷೇಮ ಭಾರವನ್ನು ವಹಿಸಿ ರಕ್ಷಿಸನೆಂದು ಭಾವಿಸಿ, ಸ್ವಕತೃತ್ವಾಭಿಮಾನವನ್ನು ಬಿಟ್ಟು ಪರಮಾತ್ಮನನ್ನು ಧ್ಯಾನಮಾಡಬೇಕು. ಮನೆ, ವನವೆಂಬ ಸ್ಥಳಭೇದವಿಲ್ಲದೆ, ಅಥವಾ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ ಎಂಬ ಭೇದವಿಲ್ಲದೆ ಯಾವ ರೀತಿಯಲ್ಲಾದರೂ **ಭಕ್ತಿಯಿಂದ ಭಜನ ಮಾಡುವವರಿಗೆ ಅಪರೋಕ್ಷದಲ್ಲಿ ತನ್ನ ರೂಪವನ್ನು**

ತೋರಿಸುವನು. || ೧೨ ||

**ಮಿಸುನಿಮೇಲಣ ಮಣಿಯುವೋಲ್ ರಾ**
**ಜಿಸುವ ಬ್ರಹ್ಮಾದಿಗಳ ಮನದಲಿ**
**ಬಿಸಜ ಜಾಂಡಾಧಾರಕನು ಆಧೇಯನೆಂದೆನಿಸಿ ||**
**ದ್ವಿಶತ ನಾಲ್ವತ್ತೆರಡು ರೂಪದಿ**
**ಶಶಿಯೊಳಿಪ್ಪನು ಶಶದೊಳಗೆ ಶೋ**
**ಭಿಸುವ ನಾಲ್ವತ್ತೆರಡಧಿಕ ಶತರೂಪದಲಿ ಬಿಡದೆ || ೧೩ ||**

ಪದ್ಯಾರ್ಥ :— ಮಿಸುನಿಮೇಲಣ = ಚಿನ್ನದ ಮೇಲೆ ಕೆತ್ತಲ್ಪಟ್ಟ ಮಣಿಯ ವೋಲ್=ಮಾಣಿಕ್ಯದಂತೆ, ಬ್ರಹ್ಮಾದಿಗಳ=ಬ್ರಹ್ಮದೇವರು ಮೊದಲಾದ ದೇವತೆಗಳ, ಮನದಲಿ=ಮನಸ್ಸಿನಲ್ಲಿ, ರಾಜಿಸುವ=ಶೋಭಿಸುವನು. ಬಿಸಜ ಜಾಂಡಾಧಾರಕನು = ಬ್ರಹ್ಮಾಂಡಾಧಾರಕನೆಂತಲೂ, ಆಧೇಯನೆಂತಲೂ ಎನಿಸಿಕೊಂಡು, ದ್ವಿಶತ ನಾಲ್ವತ್ತೆರಡುರೂಪದಿ=೨೪೨ ರೂಪಗಳಿಂದ, ಶಶಿಯೊಳಿಪ್ಪನು=ಚಂದ್ರನೊಳಗೆ ಇರುವನು, ಶಶದೊಳಗೆ=ಚಂದ್ರಮಧ್ಯಗತ ಕಳಂಕದೊಳಗೆ, ನಾಲ್ವತ್ತೆರಡಧಿಕ ಶತರೂಪದಲಿ=೧೪೨ ರೂಪಗಳಿಂದ, ಬಿಡದೆ=ಸರ್ವಕಾಲದಲ್ಲಿಯೂ, ಶೋಭಿಸುವನು.

ತಾತ್ಪರ್ಯ :—ಆಧಾರ, ಆಧೇಯ ರೂಪಗಳಿಂದ ಪರಮಾತ್ಮನ ವ್ಯಾಪ್ತಿಯನ್ನು ಹೇಳುತ್ತಾರೆ. ಪ್ರಕಾಶಮಾನವಾದ ಕುಂದಣದ ಮಧ್ಯದಲ್ಲಿ ಶೋಭಿಸುವ ಮಾಣಿಕ್ಯದಂತೆ ಆಧಾರ, ಆಧೇಯ ರೂಪಗಳಿಂದ ಬ್ರಹ್ಮಾದಿಗಳ ಮನಸ್ಸಿನಲ್ಲಿ ಶೋಭಿಸುವನು. ಚಿನ್ನ ಮಧ್ಯಗತ ಮಾಣಿಕ್ಯೋಪಮಾನದಿಂದ ಚಿನ್ನಪ್ರಾಯನಾಗಿ ಬ್ರಹ್ಮಾಂಡಕ್ಕೆ ಆಧಾರನಾಗಿರುವನು. ವಿಶ್ವರೂಪದಿಂದ ಮಾಣಿಕ್ಯದಂತೆ ಅದರೊಳಗೆ ಶೋಭಿಸುವನು. ಈ ರೂಪವನ್ನು ಬ್ರಹ್ಮಾದಿಗಳು ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಅಪರೋಕ್ಷದಲ್ಲಿ ಕಾಣುತ್ತಿರುವರು. ಆಧಾರಾಧೇಯ ವಿಷಯದಲ್ಲಿ ಮತ್ತೊಂದು ಉಪಮಾನವನ್ನು ಹೇಳುತ್ತಾರೆ. ಚಂದ್ರನ ಆಧಾರದ ಮೇಲೆ ಆಧೇಯವಾಗಿ ಶಶವೆಂಬ ಕಳಂಕವು ಶೋಭಿಸುವುದು. ಜನಗಳು ಅದನ್ನು ಜಿಂಕೆಯೆಂದು ಹೇಳುವರು. ಅದಕ್ಕೆ ಶಶ ಎಂದು ಸಂಸ್ಕೃತದಲ್ಲಿ ಹೆಸರು. ಶಶ ಎಂದರೆ ಮೊಲ. ಪ್ರಕೃತ ಚಂದ್ರನ ಕಳಂಕಕ್ಕೆ ಶಶ ಎಂಬ ಹೆಸರು ಇರುವುದರಿಂದ ಶಶವುಳ್ಳವನು ಶಶಿ ಎಂದು, ಚಂದ್ರನಿಗೆ ಹೆಸರಾಯಿತು. ಹೀಗೆ ಆಧಾರನಾಮಕನಾಗಿ ಅಕ್ಷರ

ಕ್ರಮದಿಂದ ಆ=೨, ಧಾ=೯, ರ=೨ ವಾಮಾಂಕ ಸಂಖ್ಯೆ=೨೯೨ ರೂಪಗಳಿಂದಲೂ, ಚಂದ್ರ, ಚಂದ್ರನ ಕಳಂಕಾದಿಗಳಲ್ಲಿ ಆಧಾರ ರೂಪನಾಗಿ ಬ್ರಹ್ಮಾಂಡದಲ್ಲಿಯೂ ಆಧೇಯನಾಮಕನಾಗಿ, ಆ=೨, ಧೇ=೯, ಯ=೧ ಇದರ ವಾಮಾಂಕ ಸಂಖ್ಯೆ ೧೯೨ ರೂಪಗಳಿಂದಲೂ, ಆಧೇಯ ರೂಪದಿಂದ ಲೋಕಗಳಲ್ಲಿಯೂ ಇದರಂತೆಯೆ, ಯಾವ ವಸ್ತುವಿನ ಆಧಾರದಮೇಲೆ ಯಾವ ವಸ್ತು ಇರುವುದೋ ಅವುಗಳಲ್ಲೆಲ್ಲಾ ಆಧಾರ, ಆಧೇಯ ರೂಪಗಳಿಂದ ಪರಮಾತ್ಮನು ಸರ್ವದಾ ಶೋಭಿಸುತ್ತಿರುವನೆಂದು ಚಿಂತನೆ ಮಾಡಬೇಕು. ‖ ೧೩ ‖

**ಎರಡುಸಾವಿರದೆಂಟು ರೂಪವ**
**ನರಿತು ಸರ್ವಪದಾರ್ಥದಲಿ ಶಿರಿ**
**ವರನ ಪೂಜೆಯ ಮಾಡುವರಗಳ ಬೇಡು ಕೊಂಡಾಡು ‖**
**ಬರಿದೆ ಜಲದಲಿ ಮುಣುಗಿ ಬಿಸಲೊಳು**
**ಬೆರಳನೆಣಿಸಿದರೇನು ಸದ್ಗುರು**
**ಹಿರಿಯರನುಸರಿಸಿವರ ಮರ್ಮವನರಿಯದಿಹನರನು ‖ ೧೪ ‖**

ಪದ್ಯಾರ್ಥ :—ಎರಡುಸಾವಿರ ದೆಂಟುರೂಪವನು=(ಭಾರ ಭೃತ್ ಆಧಾರ, ಆಧೇಯಗಳ ಒಟ್ಟು ರೂಪಗಳು) ೨೦೦೮ ರೂಪಗಳನ್ನು ಅರಿತು=ತಿಳಿದು, ಶಿರಿವರನ=ಲಕ್ಷ್ಮೀರಮಣನನ್ನು, ಸರ್ವ ಪದಾರ್ಥದಲಿ=ಎಲ್ಲ ವಸ್ತುಗಳಲ್ಲಿಯೂ, ಪೂಜೆಯಮಾಡು=ಪೂಜೆಯನ್ನು ಮಾಡು, ವರಗಳ ಬೇಡು, ಕೊಂಡಾಡು—ಸ್ತುತಿಸು, ಸದ್ಗುರು ಹಿರಿಯರನು=ಸದ್ಗುರುಗಳಾದ ದೊಡ್ಡವರನ್ನು, ಅನುಸರಿಸಿ, ಇವರ, ಮರ್ಮವನ್ನು, ಅರಿಯದೆ=ತಿಳಿಯದೆ, ಇಹ=ಇರುವ, ನರನು=ಮನುಷ್ಯನು, ಬರಿದೆ—ಪ್ರಯೋಜನವಿಲ್ಲದೆ, ಜಲದಲಿ ಮುಣುಗಿ—ನೀರಿನಲ್ಲಿ ಮುಳುಗಿ, ಬಿಸಲೊಳು—ಬಿಸಿಲೊಳಗೆ ಕೂತುಕೊಂಡು, ಬೆರಳನು, ಎಣಿಸಿದರೆ ಏನು ?=ಏನುಪ್ರಯೋಜನ ? [ಪ್ರಯೋಜನವಿಲ್ಲವೆಂದರ್ಥ.]

ತಾತ್ಪರ್ಯ :—ಮೇಲಿನ ಎರಡು ಪದ್ಯಗಳಲ್ಲಿ ಹೇಳಿದ ಒಟ್ಟು ಭಗವದ್ರೂಪಗಳನ್ನು ಹೇಳುತ್ತಾ ಸದ್ಗುರುವಿನ ಉಪದೇಶವಿಲ್ಲದವರಿಗೆ ಈ ಉಪಾಸನೆಯು ಗೋಚರವಿಲ್ಲವೆಂದೂ ಹೇಳುತ್ತಾರೆ:—

೧೨ನೆಯ ಪದ್ಯದಲ್ಲಿ ಹೇಳಿದ ಭಾರಭೃತ್ ರೂಪಗಳ ಸಂಖ್ಯಾ-೧೫೨೪, ಆಧಾರರೂಪಗಳು ೨೯೨, ಆಧೇಯ ರೂಪಗಳು ೧೯೨, ಒಟ್ಟು ರೂಪ

ಗಳು ೨೦೦೮ ಇಷ್ಟು ಭಗವದ್ರೂಪಗಳನ್ನ ಸರ್ವ ಪದಾರ್ಥಗಳಲ್ಲಿಯೂ ತಿಳಿದು ಲಕ್ಷ್ಮೀಪತಿಯನ್ನು ಯಾರು ಪೂಜಿಸುವರೋ ಅವರೇ ಧನ್ಯರು, ಮಾನ್ಯರು. ಅವರನ್ನು ಪ್ರಾರ್ಥಿಸಿ ಮರ್ಮವನ್ನು ತಿಳಿದುಕೊಳ್ಳಬೇಕು. ಅವರನ್ನು ಸ್ತುತಿಸಬೇಕು. ಸದ್ಗುರುಗಳ ಸೇವಾ ಮಾಡಿ ಅವರ ಉಪದೇಶದಿಂದ ಈ ಮರ್ಮಗಳನ್ನು ಅರಿಯದೆ ಇರುವ ಮನುಷ್ಯನು ದೊಡ್ಡ ಆಚಾರ್ಯನೆಂಬ ವೇಷಧಾರಿಯಾಗಿ ಛಳಿಯಲ್ಲಿ ಹೋಗಿ ಹೊಳೆಯಲ್ಲಿ ಮುಣುಗಿ ಬಿಸಲಲ್ಲಿ ಕೂತು ಕಣ್ಣು ಮುಚ್ಚುತ್ತಾ ತೆರೆಯುತ್ತ ಬೆರಳೆಣಿಸಿದರೆ ಫಲವೇನು? ಯಾವ ಪ್ರಯೋಜನವೂ ಇಲ್ಲವು.

**ಮತ್ತೆ ಚಿದ್ದೇಹದೊಳಗೆಂ**
**ಭತ್ತುಸಾವಿರದೇಳುನೂರಿ**
**ಪ್ಪತ್ತೈದು ನೃಸಿಂಹ ರೂಪದಲಿದ್ದು ಜೀವರಿಗೆ ॥**
**ನಿತ್ಯದಲಿ ಹಗಲಿರಳು ಬಪ್ಪಪ**
**ಮೃತ್ಯುವಿಗೆ ತಾ ಮೃತ್ಯುವೆನಿಸುವ**
**ಭೃತ್ಯವತ್ಸಲ ಭಯವಿನಾಶನ ಭಾಗ್ಯ ಸಂಪನ್ನ ॥ ೧೫ ॥**

ಪದ್ಯಾರ್ಥ :—ಮತ್ತೆ, ಚಿದ್ದೇಹದೊಳಗೆ=ಮೇಲೆ ಹೇಳಿದ ರೂಪಗಳಲ್ಲದೆ ಜೀವನಸ್ವರೂಪ ದೇಹದೊಳಗೆ, ಎಂಭತ್ತು ಸಾವಿರದೇಳುನೂರಿಪ್ಪತ್ತೈದು ನೃಸಿಂಹ ರೂಪದಲಿ=೮೦೭೨೫ ನಾರಸಿಂಹರೂಪಗಳಿಂದ ಇದ್ದು, ಜೀವರಿಗೆ ನಿತ್ಯದಲಿ, ಹಗಲಿರಳು=ಹಗಲು ರಾತ್ರಿಗಳಲ್ಲಿ, ಬಪ್ಪ=ಬರುವ, ಅಪಮೃತ್ಯುವಿಗೆ, ತಾ=ತಾನು, ಮೃತ್ಯುವೆನಿಸುವ. ಭಕ್ತವತ್ಸಲ. ಭಯವಿನಾಶನ. ಭಾಗ್ಯಸಂಪನ್ನ.

ತಾತ್ಪರ್ಯ :—ಸ್ವರೂಪ ದೇಹದೊಳಗಿನ ಭಗವದ್ರೂಪವನ್ನು ಹೇಳುತ್ತಾರೆ.—ನರಸಿಂಹ ಎಂಬ ರೂಪದ ಅಕ್ಷರಸಂಖ್ಯೆ ಮಾಡಿದರೆ ನ=೫, ರ=೨, ಸಿ=೭, ೦=೦, ಹ=೮ ವಾಮಾಂಕ ಮಾಡಿದರೆ ೮೦೭೨೫ ರೂಪಗಳಿಂದ ನರಸಿಂಹನು ಜೀವನಸ್ವರೂಪ ದೇಹದಲ್ಲಿದ್ದು ಜೀವರಿಗೆ ಪ್ರತಿದಿವಸದಲ್ಲಿಯೂ ಹಗಲು ರಾತ್ರಿಗಳಲ್ಲಿ ಬರುವ ಅಪಮೃತ್ಯುಗಳಿಗೆ ಮೃತ್ಯುವೆನಿಸುವನು. ಅಂದರೆ ಅಪಮೃತ್ಯುವನ್ನು ಪರಿಹರಿಸುವನೆಂದರ್ಥ. ತನ್ನ ಭೃತ್ಯರಲ್ಲಿ ಪರಮ ವಾತ್ಸಲ್ಯವುಳ್ಳವನೂ, ಭಕ್ತರ ಭಯವನ್ನು ಪರಿಹರಿಸುವವನೂ, ಷಡ್ಗುಣೈಶ್ವರ್ಯ ಪೂರ್ಣನೂ ಆದುದರಿಂದಲೇ ಅಪಮೃತ್ಯುಹರಣ ಮಾಡುವನೆಂದರ್ಥ. ॥ ೧೫ ॥

ಜ್ವರನೊಳಿಪ್ಪತ್ತೇಳು ಹರನೊಳ
ಗಿರುವ ಇಪ್ಪತ್ತೆಂಟು ರೂಪದಿ
ಎರಡು ಸಾವಿರ ದೆಂಟನೂರಿಪ್ಪತ್ತ ರೇಳೆನಿಪ|
ಜ್ವರಹ ರಾಹ್ವಯ ನಾರಸಿಂಹನ
ಸ್ಮರಣೆ ಮಾತ್ರದಿ ದುರಿತ ರಾಶಿಗ
ಳಿರದೆ ಪೋಪವು ತರಣಿ ಬಿಂಬವ ಕಂಡ ಹಿಮದಂತೆ ॥ ೧೭ ॥

ಪದ್ಯಾರ್ಥ :—ಜ್ವರನೊಳು—ಮಹೇಶ್ವರನಿಂದ ಉತ್ಪನ್ನವಾದ ಜ್ವರ ದೊಳಗೆ, ೨೭ ರೂಪಗಳಿಂದಲೂ, ಹರನೊಳಗೆ—ಜ್ವರವನ್ನು ಸೃಷ್ಟಿಸಿದ ಹರ ನೊಳಗೆ, ಇಪ್ಪತ್ತೆಂಟು ರೂಪದಿ—೨೮ ರೂಪಗಳಿಂದಲೂ, ಇರುವ. ಎರಡು ಸಾವಿರ ದೆಂಟನೂರಿಪ್ಪತ್ತ ರೇಳೆನಿಪ—೨೮೨೭ ಎನಿಸುವ ರೂಪಗಳುಳ್ಳ, ಜ್ವರಹರಾಹ್ವಯ—ಜ್ವರಹರನೆಂಬ ಹೆಸರುಳ್ಳ, ನಾರಸಿಹ್ಮನ, ಸ್ಮರಣೆಮಾತ್ರದಿ, ದುರಿತ ರಾಶಿಗಳು—ಪಾಪ ರಾಶಿಗಳು ಅಥವ ಕಷ್ಟ ರಾಶಿಗಳು, ತರಣಿ ಬಿಂಬವ —ಸೂರ್ಯಮಂಡಲವನ್ನು, ಕಂಡ—ನೋಡಿದ, ಹಿಮದಂತೆ—ಮಂಜಿನಂತೆ ಅಥವಾ ಛಳಿಯಂತೆ, ಇರದೆ ಪೋಪವು—ಇರದೆ ಹೋಗುವವು.

ತಾತ್ಪರ್ಯ :—ಎರಡು ಪದ್ಯಗಳಿಂದ ನರಸಿಂಹ ದೇವರ ಮಹಿಮೆ ಯನ್ನು ವರ್ಣಿಸುತ್ತಾರೆ.—ರುದ್ರದೇವರಿಂದ ಸೃಷ್ಟವಾದುದು ಮಹೇಶ್ವರ ಜ್ವರವು. ಈ ಕಥೆಯು ಹರಿವಂಶದಲ್ಲಿ ಉಷಾಹರಣ ಕಥೆಯಲ್ಲಿ ಶ್ರೀ ಕೃಷ್ಣ ನಿಗೂ ರುದ್ರದೇವರಿಗೂ ಯುದ್ಧ ನಡೆದ ಸಂದರ್ಭದಲ್ಲಿ ಹೇಳಿರುವರು. ಇದೇ ಕಥೆಯನ್ನು ಮಹಾಭಾರತ ತಾತ್ಪರ್ಯ ನಿರ್ಣಯ ೨೨ನೆಯ ಅಧ್ಯಾಯ ೨೫೯ನೆಯ ಶ್ಲೋಕ ಮೊದಲು ೨೬೫ ಶ್ಲೋಕದ ವರೆಗೂ ಸಂಕ್ಷೇಪವಾಗಿ ಹೇಳಿರುವರು. ಅದೆಂತೆನೆ, ‘ ಅಥಕೃಷ್ಣಃ ಸಮಾರುಹ್ಯ ಗರುಡಂ ರಾಮಸಂ ಯುತಃ ॥ ಪ್ರದ್ಯುಮ್ನೇನಚತತ್ರಾಗಾತ್ ಪ್ರಥಮಂತತ್ರಸನ್ನಿಧಿಃ ॥ ಯುದ್ಧೇ ವಾಂಗಿರಸಾಚ್ಚೈವಕ್ಷಣಾದ್ವಿದ್ರಾವ್ಯತಾಹರಿಃ ॥ ೨೫೯ ॥ ವಿದ್ರಾವ್ಯ ಶರ್ವ ಪ್ರಮಥಾನಾಸಸಾದ ಜ್ವರಂತತಃ॥ ತೇನ ಭಸ್ಮ ಪ್ರಹಾರೇಣಜ್ವರಿತಂ ರೋಹಿ ಣೇಸುತಂ ॥ ೨೬೦ ॥ ಆಶ್ಲಿಷ್ಯ ವಿಜ್ವರಂ ಚಕ್ರೇ ವಾಸುದೇವೋ ಜಗತ್ಪ್ರಭುಃ । ಸ್ವಯಂ ವಿಕ್ರೀಡ್ಯತೇನಾಥ ಕಿಂಚಿತ್ಕಾಲಂ ಜನಾರ್ದನಃ ॥ ೨೬೧ ॥ ನಿಷ್ಪಿಷ್ಯ ಮುಷ್ಟಿಭಿಸ್ತ್ವಸ್ಯಂ ಸಸರ್ಜಜ್ವರಮಚ್ಯುತಃ ॥ ಸ್ವಯಂ ಜಿತ್ವಾಪಿಗಿರಿಶ ಭೃತ್ಯಂ ನಾಲಮಿತಿಪ್ರಭುಃ ॥ ೨೬೨ ॥ ಸ್ವಭೃತ್ಯೇನಜೇತವ್ಯ ಯಿತ್ಯನ್ಯಂ ಸಸೃಜೇಶ್ವರಾ

ಜ್ವರೇಣ ವೈಷ್ಣವೇನಾ ಸೌಸುಭೃಶಂ ಪೀಡಿತಸ್ತದಾ || ೨೬೩ || ಗ್ರಾಸಾರ್ಥ ಮುಪನೀತಶ್ಚ ಜಗಾಮ ಶರಣಂ ಹರಿಂ || ತೇನಸ್ತುತಸ್ಸ ಭಗವಾನ್ ಮೋಚ ಯಾಮಾಸತಂ ಪ್ರಭುಃ ||" ಬಾಣಾಸುರನು ತನ್ನ ಮಗಳಾದ ಉಷೆಯನ್ನು ರಹಸ್ಯವಾಗಿ ಗಾಂಧರ್ವ ವಿಧಿಯಿಂದ ವಿವಾಹಮಾಡಿಕೊಂಡು ಅಂತಃಪುರದ ಲ್ಲಿರುವ ಅನಿರುದ್ಧನನ್ನು ಜಯಿಸಿ ನಾಗಾಸ್ತ್ರದಿಂದ ಕಟ್ಟಿಬಿಟ್ಟಿದ್ದನು. ಈ ವೃತ್ತಾಂತವನ್ನು ಶ್ರೀ ಕೃಷ್ಣನು ನಾರದರ ಮುಖದಿಂದ ತಿಳಿದು ಬಲರಾಮ ಪ್ರದ್ಯುಮ್ನರೊಂದಿಗೆ ಗರುಡಾರೂಢರಾಗಿ ಬಾಣಾಸುರನ ಪಟ್ಟಣಕ್ಕೆ ಬಂದರು. ಅಲ್ಲಿ ಆಂಗಿರಸ ಮೊದಲಾದ ಪ್ರಧಾನಾಗ್ನಿಗಳೊಂದಿಗೆ ಮೊದಲು ಯುದ್ಧ ವನ್ನು ಮಾಡಿ ಕ್ಷಣಮಾತ್ರದಿಂದ ಅವರೆಲ್ಲರನ್ನೂ ಓಡಿಸಿದರು, ಆಗ ರುದ್ರ ದೇವರು ಬಾಣಾಸುರನಿಗೆ ಸಹಾಯ ಮಾಡುವುದಕ್ಕಾಗಿ ಒಂದು ಜ್ವರವನ್ನು ಸೃಷ್ಟಿಮಾಡಿ ಕೃಷ್ಣನೊಡನೆ ಯುದ್ಧಕ್ಕೆ ಕಳುಹಿಸಿದರು. ಆ ಜ್ವರವು ಮೊದಲು ಬಲರಾಮನ ಮೇಲೆ ಬೂದಿಯನ್ನು ಚಲ್ಲಲು ಭಸ್ಮ ಪ್ರಹಾರದಿಂದ ಬಲರಾಮ ನಿಗೆ ಬಲವತ್ತರವಾದ ಜ್ವರವು ದೇಹದಲ್ಲಿ ವ್ಯಾಪಿಸಿ ಬಹಳ ಪೀಡಿತನಾ ಗಲು ಶ್ರೀ ಕೃಷ್ಣನು ಬಲರಾಮನನ್ನು ಆಲಿಂಗನ ಮಾಡಿಕೊಂಡು ಆ ಜ್ವರವನ್ನು ಪರಿಹರಿಸಿದನು. ಆಗ ಮಹೇಶ್ವರನ ಜ್ವರವು ಬಲರಾಮನನ್ನು ಬಿಟ್ಟು ಕೃಷ್ಣನಲ್ಲಿಯೇ ಪ್ರವೇಶಮಾಡಿತು. ಶ್ರೀ ಕೃಷ್ಣನು ಸ್ವಲ್ಪ ಹೊತ್ತು ವ್ಯಥೆಪಟ್ಟವನಂತೆ ಕಾಣಿಸಿಕೊಂಡು ತದನಂತರ ತನ್ನ ಮುಷ್ಟಿಪ್ರಹಾರದಿಂದ ಆ ಜ್ವರವನ್ನು ಜಯಿಸಿದನು. ರುದ್ರಭೃತ್ಯನನ್ನು ತನ್ನ ಭೃತ್ಯನಿಂದಲೇ ಸೋಲಿಸಬೇಕೆಂಬ ಉದ್ದೇಶದಿಂದ ತಾನೂ ಒಂದು ಜ್ವರವನ್ನು ಸೃಷ್ಟಿಸಿ ದನು. ಆಗ ವೈಷ್ಣವಜ್ವರವು ಹೊರಟು ಆ ಮಹೇಶ್ವರ ಜ್ವರವನ್ನು ಹೊರಗೆ ಸೆಳೆದು ಬಹಳವಾಗಿ ಪೀಡಿಸಿ ಕಡೆಕಡೆಗೆ ಆ ಜ್ವರವನ್ನೇ ಭಕ್ಷಿಸಬೇಕೆಂದು ಪ್ರಯತ್ನಿಸಲು ಮಹೇಶ್ವರ ಜ್ವರವು ಶ್ರೀ ಕೃಷ್ಣನನ್ನು ಪ್ರಾಣದಾನ ಮಾಡ ಬೇಕೆಂದು ಮೊರೆಹೊಕ್ಕಿತು. ಆ ಜ್ವರದಿಂದ ಸ್ತುತ್ಯನಾಗಿ ತನ್ನ ಜ್ವರ ವನ್ನು ಉಪಸಂಹಾರ ಮಾಡಿಕೊಂಡು ಮಹೇಶ್ವರ ಜ್ವರವೊಂದೇ ಭೂಮಿ ಯಲ್ಲಿರುವಂತೆ ವರವನ್ನು ಕೊಟ್ಟು 'ನೀನು ಇಷ್ಟು ಭಾಗದಿಂದ ಮನುಷ್ಯರ ಲ್ಲಿಯೂ ಮೃಗಾದಿಗಳಲ್ಲಿ ವೃಕ್ಷಾದಿಗಳಲ್ಲಿ ಇಷ್ಟಿಷ್ಟು ಭಾಗಗಳಿಂದ ವಾಸಮಾ ಡಬೇಕೆಂತಲೂ, ಜ್ವರದಿಂದ ಪೀಡಿತರಾದ ಮಾನವರು ನಿನ್ನನ್ನು ನಾನು ಜಯಿಸಿದ ಈ ಕಥೆಯನ್ನು ಶ್ರವಣಪಠಣಾದಿಗಳನ್ನು ಮಾಡಿದರೆ ತಕ್ಷಣ ಅವರಿಗೆ

ಜ್ವರದಪೀಡಾ ಪರಿಹಾರವಾಗ ಬೇಕೆಂತಲೂ' ವರವನ್ನು ಕೊಟ್ಟು ಕಳುಹಿದನು. ಜ್ವರವನ್ನು ಜಯಿಸಿದ ಮೇಲೆ ಸ್ವಯಂ ರೂದ್ರದೇವರೇ ಕೃಷ್ಣನೊಂದಿಗೆ ಯುದ್ಧದಲ್ಲಿ ಸೋತರು. ಆಗ ಬಾಣಾಸುರನು ಯುದ್ಧಕ್ಕೆ ಬರಲು ಅವನನ್ನು ಜಯಿಸಿದ್ದಲ್ಲದೆ ಅವನನ್ನು ಕೊಲ್ಲಲು ಆಯುಧವನ್ನು ತೆಗೆದುದನ್ನು ರುದ್ರದೇವರು ನೋಡಿ ಕೃಷ್ಣನನ್ನು ಬೇಡಿಕೊಂಡರು ಆಗ ಕೃಷ್ಣನು ರುದ್ರದೇವರಿಗೋಸ್ಕರ ಅವನನ್ನು ಕೊಲ್ಲದೆ ಅವನ ಸಹಸ್ರ ಕೈಗಳ ಪೈಕಿ ಎರಡನ್ನು ಮಾತ್ರ ಬಿಟ್ಟು ಮಿಕ್ಕವುಗಳನ್ನು ಕತ್ತರಿಸಿಬಿಟ್ಟನು. ರುದ್ರದೇವರು ಬಾಣಾಸುರನನ್ನು ಸಮಾಧಾನ ಪಡಿಸಿ ಹೊರಟು ಹೋದರು. ಶ್ರೀ ಕೃಷ್ಣನು ಅನಿರುದ್ಧನನ್ನು ಬಿಡಿಸಿಕೊಂಡು ಉಷಾದೇವಿಯಿಂದಲೂ ಕೂಡಿ ಯಥಾಪ್ರಕಾರ ದ್ವಾರವತೀಗೆ ಹೋದರು.

ಇಂತಹ ಜ್ವರದಲ್ಲಿ ಅಕ್ಷರ ಸಂಖ್ಯೆಯಿಂದ ಜ್ವ=೭, ರ=೨ ಅಂತು ವಾಮಾಂಕದಿಂದ ೨೭, ಇಷ್ಟು ರೂಪಗಳಿಂದ ಇರುವನು. ಇದನ್ನು ಸೃಷ್ಟಿಸಿದ ಹರನಲ್ಲಿ ಹ=೮, ರ=೨ ಅಂತು ೨೮ ರೂಪಗಳಿಂದ ಇರುವನು. ಶ್ರೀ ನರಸಿಂಹನು 'ಜ್ವರಹರ' ಎಂಬ ಹೆಸರಿನಿಂದ ಜ್ವ=೭, ರ=೨, ಹ=೮, ರ=೨-ಹೀಗೆ ೨೮೨೭ ರೂಪಗಳಿಂದ ತನ್ನನ್ನುಸ್ಮರಣೆಮಾಡುವ ಮಾತ್ರದಿಂದಲೇ ಸೂರ್ಯನು ಮಂಜುಗಳನ್ನು ಹೇಗೆ ಪರಿಹರಿಸುವನೋ, ಅಥವಾ ಛಳಿಯನ್ನು ಹೇಗೆ ಓಡಿಸುವನೋ, ಹಾಗೆ ತನ್ನ ಭಕ್ತರಿಗೆ ಬರುವ ದುರಿತಗಳನ್ನು ದೂರ ಅಟ್ಟುವನು. || ೧೬ ||

**ಮಾಸಪರಿಯಂತರವು ಬಿಡದೆ ನೃ**
**ಕೇಸರಿಯ ಶುಭನಾಮ ಮಂತ್ರ ಜಿ**
**ತಾಸನದ ಲೇಕಾಗ್ರ ಚಿತ್ತದಿ ನಿಷ್ಕಪಟದಿಂದ ||**
**ಬೇಸರದೆ ಜಪಿಸಲು ವೃಜಿನಗಳ**
**ನಾಶಗೈಸಿ ಮನೋರಥಗಳ ಪ**
**ರೇಶ ಪೂರ್ತಿಯ ಮಾಡಿ ಕೊಡುವನು ಕಡೆಗೆ ಪರಗತಿಯ**
|| ೧೭ ||

ಪದ್ಯಾರ್ಥ :—ಮಾಸ ಪರ್ಯಂತರವು = ಒಂದು ತಿಂಗಳ ವರೆಗೂ, ಬಿಡದೆ, ನೃಕೇಸರಿಯ=ನರಸಿಂಹನ, ಶುಭನಾಮ ಮಂತ್ರ=ಶುಭಕರವಾದ ನಾಮ ಮಂತ್ರವನ್ನು, ಜಿತಾಸನದಲಿ=ಸ್ಥಿರವಾದ ಆಸನದಲ್ಲಿ, ಕೂತು, ಏಕಾಗ್ರಚಿತ್ತದಿ=ಇದೇಕ ಮನಸ್ಕನಾಗಿ, ನಿಷ್ಕಪಟದಿಂದ, ಬೇಸರದೆ=ಬೇಸರ

ಗೊಳ್ಳದೆ, ಜಪಿಸಲು, ವೃಜಿನಗಳ=ಪಾಪಗಳನ್ನು, ನಾಶಗೈಸಿ=ಪರಿಹರಿಸಿ, ಮನೋರಥಗಳ=ಮನೋಭೀಷ್ಟಗಳನ್ನು, ಪರೇಶ=ಸರ್ವೇಶನಾದ ಶ್ರೀ ಪರಮಾತ್ಮನು, ಪೂರ್ತಿಯ ಮಾಡಿ, ಕಡೆಗೆ, ಪರಗತಿಯು, ಕೊಡುವನು.

ತಾತ್ಪರ್ಯ:—ಈ ಪದ್ಯದಿಂದ ನರಸಿಂಹ ದೇವರ ಮಂತ್ರೋಪಾಸನದ ಫಲವನ್ನು ಹೇಳುತ್ತಾರೆ.—ಒಂದು ತಿಂಗಳವರೆಗೂ ಅವಿಚ್ಛಿನ್ನವಾಗಿ ಶುಭಕರವಾದ ನರಸಿಂಹ ನಾಮಗಳಿಂದ ಕೂಡಿದ ಮಂತ್ರವನ್ನು ಜಪಿಸಬೇಕು. ಆ ಮಂತ್ರವನ್ನು, ಅದನ್ನು ಜಪಿಸುವ ಕ್ರಮವನ್ನು ತಂತ್ರಸಾರದಲ್ಲಿ ಹೇಳಿರುವರು. 'ಉಗ್ರಂ ವೀರಂ ಮಹಾವಿಷ್ಣುಂ ಜ್ವಲಂತಂ ಸರ್ವತೋ ಮುಖಂ | ನೃಸಿಂಹಂ ಭೀಷಣಂ ಭದ್ರಂ ಮೃತ್ಯೋರ್ಮೃತ್ಯುಂ ನಮಾಮ್ಯಹಂ||" ಎಂಬ ೩೨ ಅಕ್ಷರಗಳುಳ್ಳ ಮಹಾಮಂತ್ರವನ್ನು ಚಲಿಸದೆ ಆಸನದಲ್ಲಿ ಕೂತು ಏಕಾಗ್ರ ಚಿತ್ತನಾಗಿ ಜಪಿಸಬೇಕು. ಮನಸ್ಸಿನಲ್ಲಿ ಭಕ್ತಿಯಿಲ್ಲದೆ ಜನರು ಮೆಚ್ಚುವುದಕ್ಕಾಗಿ ಮಾಡುವುದು ಕಪಟವೆನಿಸುವುದು, ಹಾಗಿಲ್ಲದೆ ಭಕ್ತಿಯಿಂದ ಆಲಸ್ಯಗಳನ್ನು ಬಿಟ್ಟು ಜಪಿಸಿದರೆ ಸಕಲ ಪಾಪಗಳನ್ನೂ ಪರಿಹರಿಸಿ, ಸರ್ವೇಶನಾದ ಶ್ರೀಹರಿಯು ಅವರ ಮನೋಭೀಷ್ಟವನ್ನು ಪೂರೈಸಿ ಕಡೆಗೆ ಉತ್ತಮವಾದ ಗತಿಯನ್ನು ಕೊಡುವನು. || ೧೭ ||

**ಚತುರ ಮೂರ್ತ್ಯಾತ್ಮಕ ಹರಿಯು ತ್ರಿಂ**
**ಶತಿಸುರೂಪದಿ ಬ್ರಹ್ಮನೊಳು ಮಾ**
**ರುತನೊಳಿಪ್ಪತ್ತೇಳು ರೂಪದೊಳಿಪ್ಪ ಪ್ರದ್ಯುಮ್ನ ||**
**ಸುತರೊಳಿಪ್ಪತ್ತೈದು ಹದಿನೆಂ**
**ಟೆತುಳ ರೂಪಗಳರಿತು ವತ್ಸರ**
**ಶತಗಳಲಿ ಪೂಜಿಸುತಲಿರು ಚತುರಾತ್ಮಕನ ಪದವಾ || ೧೮ ||**

ಪದ್ಯಾರ್ಥ :—ಚತುರ ಮೂರ್ತ್ಯಾತ್ಮಕ=ಅನಿರುದ್ಧಾದಿ ನಾಲ್ಕು ರೂಪಾತ್ಮಕನಾದ, ಹರಿಯು=ವಾಸುದೇವನು, ತ್ರಿಂಶತಿಸುರೂಪದಿ=ಉತ್ಕೃಷ್ಟವಾದ ೩೦ ರೂಪಗಳಿಂದ, ಬ್ರಹ್ಮನೊಳು=ಬ್ರಹ್ಮದೇವರಲ್ಲಿಯೂ, ಪ್ರದ್ಯುಮ್ನ=ಪ್ರದ್ಯುಮ್ನ ರೂಪಿಯಾದ ಶ್ರೀ ಪರಮಾತ್ಮನು, ಮಾರುತನೊಳು=ವಾಯುದೇವರಲ್ಲಿ, ಇಪ್ಪತ್ತೇಳು ರೂಪದೊಳು=೨೭ ರೂಪಗಳಿಂದಲೂ, ಇಪ್ಪ=ಇರುವನು. ಸುತರೊಳು=ಬ್ರಹ್ಮ ವಾಯುಗಳ ಮಕ್ಕಳಾದ ಗರುಡ, ಶೇಷ, ರುದ್ರರೊಳಗೆ, ಇಪ್ಪತ್ತೈದು=ಇಪ್ಪತ್ತೈದು ರೂಪಗಳಿಂದ, ಸಂಕರ್ಷ

ಣನೂ ಇರುವನು. ಹದಿನೆಂಟತುಳ ರೂಪಗಳ=ಸಮರಹಿತನಾದ ೧೮ ರೂಪ ಗಳಿಂದ ಅನಿರುದ್ಧನು, (ಇರುವನು) ವತ್ಸರಶತಗಳಲಿ=ಹೀಗೆ ೧೦೦ ವರ್ಷ ಗಳಲ್ಲಿ ಒಟ್ಟು ನೂರು ರೂಪಗಳನ್ನು (ತಿಳಿದು) ಚತುರಾತ್ಮಕನ=೪ ವ್ಯೂಹಾ ತ್ಮಕನಾದ ಶ್ರೀ ಪರಮಾತ್ಮನ, ಪದವ=ಪಾದಾರವಿಂದಗಳನ್ನು, ಪೂಜಿಸು ತಲಿರು=ಪೂಜೆಯನ್ನು ಮಾಡುತ್ತಲಿರು.

ತಾತ್ಪರ್ಯ :—ಮನುಷ್ಯರಿಗೆ ಇರುವ ೧೦೦ ವರ್ಷಗಳ ಆಯುರ್ಮಾ ನದಲ್ಲಿ ಚಿಂತಿಸಬೇಕಾದ ಭಗವದ್ರೂಪಗಳನ್ನು ಹೇಳುತ್ತಾರೆ.—ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಎಂಬ ೪ ವ್ಯೂಹಾತ್ಮಕನಾದ ಶ್ರೀ ಪರ ಮಾತ್ಮನು ಮನುಷ್ಯರ ಆಯುಷ್ಯದಲ್ಲಿ ಮೊದಲು ೩೦ ವರ್ಷಗಳವರೆಗೂ ಬ್ರಹ್ಮದೇವರ ಅಂತರ್ಯಾಮಿಯಾಗಿ ಅಧಿಪತಿಯಾಗಿರುವನು, ವಾಸುದೇವನು ೩೦ ರೂಪಗಳಿಂದ ೩೦ ವರ್ಷಗಳವರೆಗೂ ಬ್ರಹ್ಮದೇವರ ಅಂತರ್ಯಾಮಿಯಾ ಗಿದ್ದು ಶರೀರವನ್ನು ರಕ್ಷಿಸುವನು. ತದನಂತರ ೨೭ ವರ್ಷಗಳವರೆಗೂ ಅಂದರೆ ೩೧ನೆಯ ವರ್ಷ ಮೊದಲು ೫೭ ವರ್ಷಗಳಾಗುವವರೆಗೂ ವಾಯುದೇವರು ಅಭಿ ಮಾನಿಗಳಾಗಿರುವರು. ಆಗ ಪ್ರದ್ಯುಮ್ನನು ೨೭ ರೂಪಗಳಿಂದ ಆ ೨೭ ವರ್ಷಗಳ ವರೆಗೂ ವಾಯ್ವಂತರ್ಯಾಮಿಯಾಗಿದ್ದು ಶರೀರವನ್ನು ರಕ್ಷಿಸುವನು. ತದನಂತರ ೨೫ ವರ್ಷಗಳು ಅಂದರೆ ೫೮ನೆಯ ವರ್ಷದಿಂದ ೮೨ ವರ್ಷಗಳವರೆಗೂ ಗರುಡ ಶೇಷ ರುದ್ರರು ಅಧಿಪತಿಗಳಾಗಿರುವರು. ಅವರಂತರ್ಯಾಮಿಯಾಗಿ ಸಂಕ ರ್ಷಣನು ೨೫ ವರ್ಷಗಳ ವರೆಗೂ ೨೫ ರೂಪಗಳಿಂದ ಇದ್ದು ಪಾಲಿಸುವನು. ಉಳಿದ ೧೮ ವರ್ಷಗಳ ವರೆಗೂ ಶ್ರೀ ಅನಿರುದ್ಧ ರೂಪಿಯಾದ ಪರಮಾತ್ಮನು ತಾನೇ ಹದಿನೆಂಟು ರೂಪಗಳಿಂದ ಪಾಲಿಸುವನು. ಹೀಗೆ ೪ ರೂಪಗಳುಳ್ಳ ಪರಮಾತ್ಮನು ೧೦೦ ವರ್ಷಗಳ ವರೆಗೂ ೪ ರೂಪಗಳಿಂದ ನಮ್ಮನ್ನು ರಕ್ಷಿಸು ವನೆಂದರಿತು ಶ್ರೀ ನಾರಾಯಣ ಮೂರ್ತಿಯನ್ನು ಪೂಜಿಸಬೇಕೆಂದು ಅರ್ಥ.

**ನೂರು ವರುಷಕೆ ದಿವಸ ಮೂವ**
**ತ್ತಾರು ಸಾವಿರ ವಹವು ನಾಡಿಶ**
**ರೀರದೊಳಗಿನಿತಿಹವು ಸ್ತ್ರೀ ಪುಂ ಭೇದದಲಿ ಹರಿಯ ||**
**ಈರಧಿಕ ಎಪ್ಪತ್ತು ಸಾವಿರ**
**ಮೂರ ತಿಗಳ ನೆನೆದು ಸರ್ವಾ**
**ಧಾರಕನ ಸರ್ವತ್ರ ಪೂಜಿಸು ಪೂರ್ಣನೆಂದರಿತು || ೧೯ ||**

**ಪದಚ್ಛೇದ :**—ನೂರು ವರುಷಕೆ=ನೂರು (೧೦೦) ವರ್ಷಗಳಿಗೆ,

ದಿವಸ=ರಾತ್ರಿ ಹಗಲಿನಿಂದ ಕೂಡಿದ ದಿವಸಗಳು, ಮೂವತ್ತಾರು ಸಾವಿರವು=೩೬ ಸಹಸ್ರಗಳು, ಅಹವು=ಆಗುವವು. [ಇದರಲ್ಲಿ ಹಗಲು ೩೬ ಸಹಸ್ರ, ರಾತ್ರಿ ೩೬ ಸಹಸ್ರ ಹೀಗೆ ೭೨ ಸಹಸ್ರಗಳಾಗುವುವು.] ಇನಿತು= ಈ ಪ್ರಕಾರವಾಗಿ, ಶರೀರದೊಳಗೆ=ನಮ್ಮ ದೇಹದೊಳಗೆ, ಸ್ತ್ರೀ ಪುಂಭೇದದಲಿ=೩೬ ಸಾವಿರ ಹಗಲು ನಾಡಿಗಳು ಪುರುಷನಾಡಿಗಳೆಂತಲೂ, ೩೬೦೦೦ ರಾತ್ರಿ ನಾಡಿಗಳು ಸ್ತ್ರೀ ನಾಡಿಗಳೆಂತಲೂ, ಬಲಭಾಗ, ಎಡಭಾಗಗಳಲ್ಲಿ ಇರುವವು. ಈ ನಾಡಿಗಳಲ್ಲಿ, ಹರಿಯ=ಶ್ರಿ ಪರಮಾತ್ಮನ, ಈರಧಿಕ ಎಪ್ಪತ್ತು ಸಾವಿರ ಮೂರುತಿಗಳ=೭೨ ಸಹಸ್ರ ಮೂರ್ತಿಗಳನ್ನು, ನೆನೆದು=ಚಿಂತಿಸಿ, ಪೂರ್ಣನೆಂದರಿತು=ಅನಂತಾದಿ ಗುಣಗಳಿಂದ ಪೂರ್ಣನೆಂದು ತಿಳಿದು, ಸರ್ವಾಧಾರಕನ=ಸರ್ವ ಪ್ರಾಣಿಗಳಿಗೂ ಆಧಾರ ಭೂತನಾದ ಶ್ರೀ ಪರಮಾತ್ಮನನ್ನು ಸರ್ವತ್ರ=ಸರ್ವ ಸ್ಥಳಗಳಲ್ಲಿಯೂ, ಪೂಜಿಸು=ಪೂಜೆಯನ್ನು ಮಾಡು.

ತಾತ್ಪರ್ಯ :— ಮನುಷ್ಯರ ಆಯುಷ್ಯ ನೂರು ವರ್ಷಗಳಿಗೆ ವರ್ಷ ಒಂದಕ್ಕೆ ೩೬೦ ದಿವಸಗಳ ಪ್ರಕಾರ ೧೦೦ ವರ್ಷಗಳಿಗೆ ೩೬೦೦೦ ದಿವಸಗಳಾಗುವವು. ಇದರಲ್ಲಿ ೩೬೦೦೦ ಹಗಲು ಮತ್ತು ೩೬ ಸಹಸ್ರ ರಾತ್ರಿಗಳು. ಇವುಗಳನ್ನು ಸೂಚಿಸುವ ನಾಡಿಗಳು ಪುರುಷ ನಾಡಿಗಳೆಂತಲೂ, ಸ್ತ್ರೀ ನಾಡಿಗಳೆಂತಲೂ ಈ ಶರೀರದ ಬಲ ಎಡ ಭಾಗಗಳಲ್ಲಿ ಅಹೋರಾತ್ರಿ ಸಂಖ್ಯಾತ್ಮಕವಾದ ನಾಡಿಗಳು ಒಟ್ಟು ೭೨ ಸಹಸ್ರಗಳಿರುವವು. ಈ ನಾಡಿಗಳಲ್ಲಿ ಶ್ರೀ ಪರಮಾತ್ಮನು ೭೨ ಸಹಸ್ರ ರೂಪಗಳಿಂದ ಇದ್ದು ನಮ್ಮನ್ನು ರಕ್ಷಿಸುವನು. ಪೂರ್ಣಾನಂದ ಸ್ವರೂಪನಾಗಿಯೇ ಇರುವನು. ಅಂದರೆ ಶರೀರ ಸಂಬಂಧದಿಂದ ನಾಡಿಗಳಿಗೆ ಏನು ವಿಕಾರವಾದರೂ ಪರಮಾತ್ಮನು ನಿರ್ಲಿಪ್ತನಾಗಿಯೇ ಇರುವನೆಂದು ತಾತ್ಪರ್ಯ. ಹೀಗೆ ಪರಮಾತ್ಮನು ಸರ್ವಾಧಾರಕನೂ ಪೂರ್ಣನೂ ಆಗಿರುವನೆಂದು ತಿಳಿದು ಸರ್ವತ್ರ ಪೂಜಿಸಬೇಕೆಂಬ ತಾತ್ಪರ್ಯ || ೧೯ ||

**ಕಾಲಕರ್ಮ ಗುಣ ಸ್ವಭಾವಗ**
**ಳಾಲಯನು ತಾನಾಗಿ ಲಕುಮಿಯ**
**ಲೋಲ ತತ್ತದ್ರೂಪ ನಾಮದಿ ಕರಸುತೊಳಗಿದ್ದು ||**
**ಲೀಲೆಯಿಂದಲಿ ಸರ್ವಜೀವರ**
**ಪಾಲಿಸುವ ಸಂಹರಿಸಿ ಸೃಜಿಪ**
**ಮೂಲಕಾರಣ ಪ್ರಕೃತಿ ಗುಣಕಾರ್ಯಗಳ ಮನೆಮಾಡಿ ||೨೦||**

**ಪದ್ಯಾರ್ಥ:—ಕಾಲ=ಭೂತ, ಭವ್ಯ, ಭವಿಷ್ಯತ್ತೆಂಬ ಮೂರು ಕಾಲಗಳು, ಕರ್ಮ=ಸುಖದುಃಖ ರೂಪ ಪ್ರಾರಬ್ಧ ಕರ್ಮಗಳು, ಗುಣ=ಸತ್ವ ರಜಸ್ತಮೋ ಗುಣಗಳು, ಸ್ವಭಾವ=ಜೀವರ ಸ್ವಭಾವಗಳು ಇವುಗಳಿಗೆ,** ಆಲಯನು=ವಾಸಸ್ಥಾನ ಭೂತನು, ತಾನಾಗಿ, ಲಕುಮಿಲೋಲ=ಲಕ್ಷ್ಮೀ ರಮಣನು, ತತ್ತದ್ರೂಪ ನಾಮದಿ=ಕಾಲ ಕರ್ಮಾದಿ ನಾಮಗಳಿಂದ ಕರೆಸಲ್ಪಡುತ್ತ, ಒಳಗಿದ್ದು=ಸರ್ವಾಂತರ್ಯಾಮಿಯಾಗಿದ್ದು, ಲೀಲೆಯಿಂದಲಿ= ಆಟದಿಂದಲೆ (ಆಯಾಸವಿಲ್ಲದೆ) ಸರ್ವಜೀವರ, ಪಾಲಿಸುವ=ವಿಷ್ಣು ರೂಪದಿಂದ ಪಾಲನೆ ಮಾಡುವನು. ಸಂಹರಿಸಿ=ರುದ್ರ ರೂಪದಿಂದ ರುದ್ರದೇವರಲ್ಲಿದ್ದು ಸರ್ವ ಜೀವರ ಸ್ಥೂಲ ದೇಹಗಳನ್ನು ನಾಶಗೊಳಿಸಿ, ಪ್ರಪಂಚವನ್ನೇ ದಹಿಸಿ, ಮೂಲಕಾರಣ=ಮೂಲ ಭೂತಳಾದ ಪ್ರಕೃತಿಗೆ ಕಾರಣಭೂತನಾದ ಪರಮಾತ್ಮನು, ಪ್ರಕೃತಿ ಗುಣಕಾರ್ಯಗಳ=ಪ್ರಾಕೃತವಾದ ಸತ್ವರಜಸ್ತಮೋ ಗುಣಗಳ ಕಾರ್ಯಗಳನ್ನೇ, ಮನೆಮಾಡಿ = ಆವಾಸಸ್ಥಾನವನ್ನಾಗಿ ಮಾಡಿಕೊಂಡು (ಅವುಗಳಲ್ಲಿದ್ದು), ಸೃಜಿಸಿ=ವಾಸುದೇವಾದಿ ರೂಪಗಳಿಂದ ಸೂಕ್ಷ್ಮ ಸೃಷ್ಟಿಯನ್ನು ಮಾಡಿ, ತದನಂತರ ಬ್ರಹ್ಮದೇವರಲ್ಲಿ ಬ್ರಹ್ಮ ರೂಪದಿಂದಿದ್ದು ಸಾತ್ವಿಕ ರಾಜಸ ತಾಮಸ ಜೀವರ ಸ್ಥೂಲ ಸೃಷ್ಟಿಯನ್ನು ಮಾಡುವನು. || ೨೦ ||

ತಾತ್ಪರ್ಯ :— ಶ್ರೀ ಪರಮಾತ್ಮನ ಸೃಷ್ಟ್ಯಾದಿ ಮಹಿಮೆಯನ್ನು 'ಕಾಲ ಕರ್ಮ' ವೆಂಬ ಪದ್ಯದಿಂದ ಹೇಳುತ್ತಾರೆ:—ಜೀವರು ಅನಾದಿಕಾಲದಿಂದಲೂ ಸಾತ್ವಿಕರು, ರಾಜಸರು, ತಾಮಸರೆಂದು ಮೂರು ವಿಧವಾದ ಸ್ವಭಾವವುಳ್ಳವರಾಗಿ ಇರುವರು. ಅವರ ಕರ್ಮಗಳೆಂದರೆ ಸಾತ್ವಿಕರು ಸುಖ ಪ್ರಾರಬ್ಧ ಕರ್ಮವುಳ್ಳವರು, ಮುಕ್ತಿ ಯೋಗ್ಯರೆನಿಸುವರು. ರಾಜಸರು ಸುಖ ದುಃಖ ಮಿಶ್ರವಾದ ಪ್ರಾರಬ್ಧದವರು. ತಾಮಸರು ದುಃಖ ಪ್ರಾರಬ್ಧ ಕರ್ಮವುಳ್ಳವರು. ಇವು ಅನಾದಿ ಕಾಲವಾಗಿ ಜೀವರ ಸ್ವಭಾವವಾಗಿಯೇ ಇರುವವು. ಶ್ರೀ ಲಕ್ಷ್ಮೀರಮಣನು ಪರಮಾಣು ಮೊದಲು ದ್ವಿಪರಾರ್ಧಾವಸಾನವಾದ ಕಾಲಾತ್ಮಕನಾಗಿ ಜೀವರ ಗುಣಕರ್ಮಗಳನ್ನನುಸರಿಸಿ ಅಂದರೆ ಸಾತ್ವಿಕರ ಪ್ರಾರಬ್ಧವನ್ನನುಸರಿಸಿ ತಾರತಮ್ಯ ಪ್ರಕಾರ ಅವರಿಂದ ಸುಖ ಸಾಧನವನ್ನು ಮಾಡಿಸುತ್ತಲೂ, ರಾಜಸರ ಗುಣಕರ್ಮಗಳನ್ನನುಸರಿಸಿ ಸಂಸಾರ ಸಾಧನವನ್ನು ಮಾಡಿಸುತ್ತಲೂ, ತಾಮಸರ ಯೋಗ್ಯತಾನುಸಾರ ದುಃಖಕ್ಕೆ

ಸಾಧನವನ್ನು ಮಾಡಿಸುತ್ತಲೂ ತ್ರಿವಿಧ ಜೀವರನ್ನೂ ವಿಷ್ಣು ರೂಪದಿಂದ ಪಾಲಿಸುವನು. ಪ್ರಳಯಕಾಲದಲ್ಲಿ ರುದ್ರಾಂತರ್ಗತನಾಗಿ ರುದ್ರ ರೂಪದಿಂದಿದ್ದು ಪ್ರಪಂಚವನ್ನು ದಹಿಸಿ, ಸರ್ವ ಜೀವರಿಗೆ ಅವರವರ ಗುಣ ಕರ್ಮಾನುಸಾರವಾದ ಸುಖ, ಮಿಶ್ರ, ದುಃಖ ರೂಪಗಳಾದ ಮುಕ್ತಿ, ಸಂಸಾರ, ತಮಸ್ಸು ಎಂಬ ೩ ವಿಧವಾದ ಗತಿಗಳನ್ನು ಕೊಡಿಸುವನು. ಮತ್ತು ಈ ವರೆವಿಗೂ ಸೃಷ್ಟಿಗೆ ಬಾರದ ಜೀವರ ಗುಣ ಕರ್ಮಾನುಸಾರವಾಗಿ ಮೂಲ ಪ್ರಕೃತಿಯುನ್ನು ಕಾರಣಮಾಡಿ ಸೃಷ್ಟಿಸುವನು. ಸೃಷ್ಟ್ಯಾದಿಗಳಿಗೆ ಈ ಪ್ರಕೃತಿ ಬ್ರಹ್ಮಾದಿಗಳು ನಿಮಿತ್ತ ಕಾರಣರು. ಮುಖ್ಯ ಕಾರಣನು ಪರಮಾತ್ಮನೇ || ೨೦ ||

**ತಿಲಜವರ್ತಿಗಳನುಸರಿಸಿ ಪ್ರ**
**ಜ್ವಲಿಸಿ ದೀಪಗಳಾಲಯುದ ಕ**
**ತ್ತಲೆಯು ಭಂಗಿಸಿ ತದ್ಗತರ್ಥವ ತೋರುವಂದದಲಿ ||**
**ಜಲರುಹೇಕ್ಷಣ ತನ್ನವರ ಮನ**
**ದೊಳಗೆ ಭಕ್ತಿ ಜ್ಞಾನ ಕರ್ಮಕೆ**
**ಒಲಿದು ಪೊಳೆವುತ ತೋರುವನು ಗುಣರೂಪ ಕ್ರೀಯೆಗಳ**
**|| ೨೧ ||**

ಪದ್ಯಾರ್ಥ:—ತಿಲಜ ವರ್ತಿಗಳ=ಎಣ್ಣೆಯನ್ನೂ ಬತ್ತಿಗಳನ್ನೂ, ಅನುಸರಿಸಿ, ಪ್ರಜ್ವಲಿಸಿ=ಪ್ರಜ್ವಲಿಸುತ್ತ ದೀಪಗಳು, ಆಲಯುದ=ಮನೆಯ, ಕತ್ತಲೆಯು=ಕತ್ತಲೆಯನ್ನು, ಭಂಗಿಸಿ=ಪರಿಹರಿಸಿ, ತದ್ಗತ=ಆ ಮನೆಯೊಳಗಿರುವ, ಅರ್ಥವ=ಪದಾರ್ಥಗಳನ್ನು, ತೋರುವಂದದಲಿ=ತೋರ್ಪಡಿಸುವಂತೆ ಜಲರುಹೇಕ್ಷಣ = ಕಮಲ ನೇತ್ರನಾದ ಶ್ರೀ ಹರಿಯು, ತನ್ನವರ=ತನ್ನ ಭಕ್ತರ, ಮನದೊಳಗೆ=ಮನಸ್ಸಿನೊಳಗೆ, ಭಕ್ತಿಜ್ಞಾನ ಕರ್ಮಕೆ=ಅವರು ಭಕ್ತಿಜ್ಞಾನದಿಂದ ಮಾಡುವ ಕರ್ಮಗಳಿಗೆ, ಒಲಿದು=ಪ್ರಸನ್ನನಾಗಿ, ಪೊಳೆವುತ=ಅಪರೋಕ್ಷದಲ್ಲಿ ಪ್ರಕಾಶಮಾನನಾಗಿ ಕಾಣಿಸಿಕೊಳ್ಳುತ್ತ, ಗುಣರೂಪ ಕ್ರೀಯೆಗಳ=ತನ್ನ ಗುಣ, ರೂಪಗಳು, ಕ್ರಿಯೆಗಳು ಇವುಗಳನ್ನು, ತೋರುವನು=ಅವರವರ ಯೋಗ್ಯತಾನುಸಾರ ತೋರಿಸುವನು.

ತಾತ್ಪರ್ಯ:—ಶ್ರೀ ಪರಮಾತ್ಮನು ಪ್ರಾಣಿಗಳ ಭಕ್ತಿಜ್ಞಾನ ಕರ್ಮಗಳಿಗೆ ಮೆಚ್ಚಿ ತನ್ನ ಗುಣರೂಪ ಕ್ರಿಯೆಗಳನ್ನು ತೋರಿಸುವೆನೆಂದು ಸದೃಷ್ಟಾಂತವಾಗಿ ಹೇಳುತ್ತಾರೆ:—

ಒಂದು ಪಾತ್ರೆಯಲ್ಲಿ ಎಣ್ಣೆಯನ್ನೂ ಬತ್ತಿಯನ್ನೂ ಹಾಕಿ ದೀಪವನ್ನು ಹಚ್ಚಿ ಮನೆಯಲ್ಲಿಟ್ಟರೆ ಆ ದೀಪವು ಎಣ್ಣೆಯನ್ನೂ ಬತ್ತಿಯನ್ನೂ ಅನುಸರಿಸಿ ಅಂದರೆ ಹೆಚ್ಚಿಗೆ ಎಣ್ಣೆಯನ್ನು ಹಾಕಿ ಮತ್ತೂ ದಪ್ಪವಾದ ಬತ್ತಿಗಳನ್ನು ಹಾಕಿದರೆ ದೀಪದ ಪ್ರಕಾಶವು ಹೆಚ್ಚುವುದು, ಸಣ್ಣದಾದ ಬತ್ತಿಯನ್ನು ಹಾಕಿದರೆ ಸಣ್ಣದಾಗಿ ದೀಪವು ಉರಿಯುವುದು. ಅದರಂತೆಯೆ ಕಮಲ ನೇತ್ರನಾದ ಶ್ರೀ ಹರಿಯು ನಮ್ಮ ಮನಸ್ಸೆಂಬ ಮನೆಯಲ್ಲಿ ಕರ್ಮವೆಂಬ ಪಾತ್ರೆಯನ್ನಿಟ್ಟು ಭಕ್ತಿಯೆಂಬ ಎಣ್ಣೆಯನ್ನೂ ಜ್ಞಾನವೆಂಬ ಬತ್ತಿಗಳನ್ನೂ ಹಾಕಿ ಶ್ರೀ ಪರಮಾತ್ಮನೆಂಬ ದೀಪದ ಜ್ವಾಲೆಯನ್ನು ಪ್ರಕಾಶಿಸುವಂತೆ ಮಾಡಿದರೆ ನಮ್ಮ ಅಜ್ಞಾನವೆಂಬ ಕತ್ತಲಿನಲ್ಲಿ ಕಾಣದಿರುವ ಭಗವಂತನ ಗುಣಗಳನ್ನೂ ರೂಪಗಳನ್ನೂ ಕ್ರಿಯೆಗಳನ್ನೂ ತೋರಿಸುವನು. ಭಕ್ತಿಯಿಂದ ಭಗವತ್ಪ್ರೀತ್ಯರ್ಥವಾಗಿ ನಿಷ್ಕಾಮ್ಯ ಕರ್ಮಗಳನ್ನು ಮಾಡಿದರೆ ಅವರವರ ಯೋಗ್ಯತಾನುಸಾರವಾಗಿ ಪರಮಾತ್ಮನ ಸ್ವರೂಪಜ್ಞಾನವಾಗುವುದು. ಅದಕ್ಕೆ ಪರಮಾತ್ಮನು ಪ್ರೀತನಾಗಿ ಅಪರೋಕ್ಷದಲ್ಲಿ ತಾನು ಪ್ರಕಾಶಮಾನನಾಗಿ ತನ್ನ ರೂಪಗಳನ್ನು ತೋರಿಸುವನು, ಅನಂತರ ಪರಮಾತ್ಮನ ಗುಣಗಳು, ಅವನು ಮಾಡುವ ಸೃಷ್ಟ್ಯಾದಿ ಕರ್ಮಗಳು ಇವುಗಳನ್ನು ಅವರವರ ಯೋಗ್ಯತಾನುಸಾರನಾಗಿ ಪರಮಾತ್ಮನು ಅವರವರಿಗೆ ತೋರಿಸಿಕೊಡುವನು-ಎಂಬ ತಾತ್ಪರ್ಯ.

**ಆವ ದೇಹವ ಕೊಡಲಿ ಹರಿಯು**
**ತ್ತಾವ ಲೋಕದೊಳಿಡಲಿ ತಾವು**
**ತ್ತಾವ ದೇಶದೊಳಿಡಲಿ ಆವಾವಸ್ಥೆಗಳು ಬರಲಿ ||**
**ಈ ವಿಧದಿ ಜಡಚೇತನದೊಳು ಪ**
**ರಾವರೇಶನ ರೂಪಗುಣಗಳ**
**ಭಾವಿಸುತ ಸುಜ್ಞಾನ ಭಕುತಿಯು ಬೇಡು ಕೊಂಡಾಡು || ೨೨ ||**

ಪದ್ಯಾರ್ಥ :—ಹರಿ=ಶ್ರೀ ಪರಮಾತ್ಮನು, ಆವದೇಹವಕೊಡಲಿ=ಯಾವ ಜನ್ಮವನ್ನು ನಮಗೆ ಕೊಟ್ಟರೂ, ಮತ್ತು ಆವ ಲೋಕದೊಳಿಡಲಿ=ನರಕ, ಸ್ವರ್ಗ, ಪಾತಾಳಾದಿ ಯಾವ ಲೋಕದಲ್ಲಿಟ್ಟರೂ, ತಾ=ತಾನು, ಮತ್ತಾವ ದೇಶದೊಳಿಡಲಿ=ಯಾವ ದೇಶದಲ್ಲಿಟ್ಟಿದ್ದರೂ, ಆವಾವಸ್ಥೆಗಳು ಬರಲಿ=ಬಾಲ್ಯ ಯೌವನಾದಿ ಅವಸ್ಥೆಗಳು ಅಥವಾ ದುಃಖ ಸುಖಾದ್ಯವಸ್ಥೆಗಳು ಅಥವಾ ಜಾಗ್ರತ, ಸ್ವಪ್ನ, ಸುಷುಪ್ತ್ಯಾದ್ಯವಸ್ಥೆಗಳು ಯಾವುದೇ

ಬಂದರೂ ಸಹ, ಈ ವಿಧದಿ=ಮೇಲಿನ ಪದ್ಯದಲ್ಲಿ ಹೇಳಿರುವಂತೆ, ಜಡಚೇತನದೊಳು=ಬ್ರಹ್ಮದೇವರು ಮೊದಲು ಸ್ಥಾವರಾಂತವಾದ ಸಕಲ ವಸ್ತುಗಳಲ್ಲಿಯೂ, ಪರಾವರೇಶನ = ಪರಾ=ಉತ್ತಮರಾದ ರಮಾ ಬ್ರಹ್ಮಾದಿಗಳಿಗೂ, ಅವರ=ನೀಚರಾದ ಕಲ್ಯಾದಿಗಳಿಗೂ ಕೂಡ, ಈಶನ=ಈಶ್ವರನಾದ ಶ್ರೀ ಪರಮಾತ್ಮನ, ರೂಪ ಗುಣಗಳ=ತತ್ತದ್ವಸ್ತುಗಳಲ್ಲಿ ತತ್ತದಾಕಾರವಾಗಿರುವ ಅನಂತರೂಪಗಳನ್ನು, ತತ್ತದ್ಗತನಾಗಿರುವಾಗಲೂ, ನಿರ್ಲಿಪ್ತನಾಗಿ, ಆನಂದಾದಿ ಗುಣಪೂರ್ಣನಾಗಿ ಇರುವನೆಂಬುದನ್ನು, ಭಾವಿಸುತ = ಚಿಂತಿಸುತ್ತ ಯೋಗ್ಯವಾದ ಸುಜ್ಞಾನ ಭಕುತಿಯು = ಉತ್ತಮ ಜ್ಞಾನವನ್ನೂ ಭಕ್ತಿಯನ್ನೂ, ಬೇಡು=ಪ್ರಾರ್ಥಿಸು. ಕೊಂಡಾಡು=ಸ್ತೋತ್ರಮಾಡು.

ತಾತ್ಪರ್ಯ: — ಭಗವದಪರೋಕ್ಷವಾಗಬೇಕಾದರೆ ಪ್ರಧಾನಸಾಧನವು ಭಕ್ತಿಜ್ಞಾನಗಳೇ. ಆದುದರಿಂದ ಕಾಮ್ಯ ಫಲವನ್ನು ಅಪೇಕ್ಷಿಸವೆ ಜನ್ಮ ಜನ್ಮಾಂತರದಲ್ಲಿಯೂ ಪರಮಾತ್ಮನಲ್ಲಿ ಭಕ್ತಿಜ್ಞಾನಗಳು ಇರುವಂತೆ ಪ್ರಾರ್ಥಿಸಬೇಕೆಂದು 'ಆವ ದೇಹವ' ಎಂಬ ಪದ್ಯದಿಂದ ಹೇಳುತ್ತಾರೆ.

ಶ್ರೀ ಪರಮಾತ್ಮನು ನಮ್ಮ ಕರ್ಮಾನುಸಾರವಾಗಿ ಯಾವ ಜನ್ಮವನ್ನಾದರೂ ಕೊಡಲಿ, ನರಕಾದಿ ಲೋಕಗಳು ಮತ್ತು ಆ ಲೋಕದ ಅನೇಕ ನರಕಗಳಲ್ಲಿ ಯಾವ ನರಕವೇ ಬಂದಿರಲಿ, ಅಥವಾ ಸ್ವರ್ಗ, ಭೂ, ಪಾತಾಳಾದಿ ಯಾವ ಲೋಕದ ಯಾವ ದೇಶದಲ್ಲಾದರೂ ನಮ್ಮನ್ನು ಹುಟ್ಟಿಸಲಿ, ಅಲ್ಲಲ್ಲಿ ಸುಖವೋ ದುಃಖವೋ ಯಾವ ಅವಸ್ಥೆಗಳಲ್ಲಿ ನಮ್ಮನ್ನಿಟ್ಟಿದ್ದರೂ ಮೇಲೆ ಹೇಳಿದಪ್ರಕಾರ ಸರ್ವೋತ್ತಮನಾದ ಶ್ರೀ ಪರಮಾತ್ಮನು ಸ್ಥಾವರ ಜಂಗಮ ಮೊದಲಾದ ಸಕಲ ಪ್ರಾಣಿಗಳಲ್ಲಿ ತತ್ತದ್ರೂಪಿಯಾಗಿ, ತತ್ತನ್ನಾಮಧೇಯದಿಂದ ವ್ಯಾಪ್ತನಾಗಿರುವನೆಂಬ ಜ್ಞಾನವನ್ನೂ ಆ ಪರಮಾತ್ಮನಲ್ಲಿ ದೃಢವಾದ ಭಕ್ತಿಯನ್ನೂ ಸ್ಥಿರವಾಗಿ ಕೊಡು! ಎಂದು ಶ್ರೀ ಪರಮಾತ್ಮನನ್ನು ನಿತ್ಯದಲ್ಲಿಯೂ ಸ್ತೋತ್ರಮಾಡುತ್ತಾ ಪ್ರಾರ್ಥಿಸುತ್ತಿರು. ನಾಯಿ, ಕತ್ತೆ ಮೊದಲಾದ ಜನ್ಮದಲ್ಲಿ ಹುಟ್ಟಿರುವಾಗಲೂ, ನರಕಾದಿಗಳನ್ನನುಭವಿಸುತ್ತಿರುವಾಗಲೂ, ಅಜ್ಞಾನಾವಸ್ಥೆಯಲ್ಲಿರುವಾಗಲೂ ಪರಮಾತ್ಮನ ಸ್ವರೂಪಜ್ಞಾನವಾಗುವುದು ಅಸಂಭವವೆಂದು ಶಂಕಿಸಬಾರದು. "ಸುಜ್ಞಾನ ಭಕುತಿಯು ಬೇಡು ಕೊಂಡಾಡು" ಎಂದು ದಾಸರಾಯರು ಹೇಳಿದ ವಾಕ್ಯವು ಶ್ವಾನಾದಿ ಜನ್ಮ ಬಂದಮೇಲೆ ಬೇಡುವುದೆಂಬ ಅರ್ಥವಲ್ಲ. ಈಗ ಮನುಷ್ಯರಾಗಿದ್ದು ಹರಿ

ಸರ್ವೋತ್ತಮತ್ವಾದಿ ಜ್ಞಾನದಿಂದಲೂ ಭಕ್ತಿಯಿಂದಲೂ ಪರಮಾತ್ಮನನ್ನು ಅವಿಚ್ಛಿನ್ನವಾಗಿ ಆರಾಧಿಸುತ್ತಿದ್ದರೆ "ಪ್ರಾರಬ್ಧವಶಾತ್ ನಮಗೆ ನಾಯಿ, ಕತ್ತೆ ಮೊದಲಾದ ಜನ್ಮವನ್ನು ಕೊಟ್ಟರೂ, ಯಾವ ನರಕಾದಿಗಳಲ್ಲಿ ನಮ್ಮ ನ್ನಿಟ್ಟರೂ ಅಥವಾ ಭೂಲೋಕದಲ್ಲೇ ಯಾವ ಸಂಸಾರದಲ್ಲಿ ನಮ್ಮನ್ನು ಬಂಧಿಸಿದ್ದರೂ ನಮ್ಮ ಮನಸ್ಸು ಮಾತ್ರ ಭ್ರಮರವು ಮಕರಂದವನ್ನು ಸೇರುವಂತೆ ನಿನ್ನ ಪಾದಕಮಲದಲ್ಲಿ ಇರಲಿ ! ಸರ್ವೋತ್ತಮನು ನೀನು ! ಸರ್ವತ್ರವ್ಯಾಪ್ತನು ಎಂಬ ಜ್ಞಾನವೂ, ದೃಢವಾದ ಭಕ್ತಿಯೂ ನಮಗೆ ಜನ್ಮಜನ್ಮಾಂತರಗಳಲ್ಲಿಯೂ ಇರಲಿ ! ಇಂತಹವರವನ್ನು ಮಾತ್ರ ನಮಗೆ ಕೊಟ್ಟು, ನಮಗೆ ಯಾವ ಜನ್ಮ, ಯಾವ ಲೋಕ, ಯಾವ ದೇಶ, ಯಾವ ಅವಸ್ಥೆಗಳನ್ನು ಕೊಟ್ಟರೂ ಕೊಡು" ಎಂದು ನಿತ್ಯದಲ್ಲಿಯೂ ಪರಮಾತ್ಮನನ್ನು ಈ ಜನ್ಮದಲ್ಲಿ ಪ್ರಾರ್ಥಿಸಬೇಕೆಂದು ತಾತ್ಪರ್ಯ. ಇಂತಹ ಜ್ಞಾನಿಗಳಾದ ಭಕ್ತರಿಗೆ ಪ್ರಾರಬ್ಧ ಕರ್ಮ ಬಲದಿಂದ ಜಡಭರತನಿಗೆ ಜಿಂಕೆಯ ಜನ್ಮವೂ, ಇಂದ್ರದ್ಯುಮ್ನ ರಾಜನಿಗೆ ಗಜಜನ್ಮವೂ, ನಹುಷನಿಗೆ ಅಜಗರ ಜನ್ಮವೂ ಪ್ರಾಪ್ತಿಯಾದಂತೆ ಆದರೂ ಅವರುಗಳಿಗೆ ಜಿಂಕೆ ಮೊದಲಾದ ಜನ್ಮಗಳಲ್ಲಿಯೂ ಕೂಡ ಜ್ಞಾನವಿದ್ದಂತೆ ಜನ್ಮಾಂತರದಲ್ಲಿಯೂ ಭಗವದನುಗ್ರಹದಿಂದ ಜ್ಞಾನ ಭಕ್ತಿ ಹುಟ್ಟುವುದರಲ್ಲಿ ಸಂಶಯವಿಲ್ಲ.

ಭಾಗವತ ಅಷ್ಟಮಸ್ಕಂಧದ ಗಜೇಂದ್ರ ಮೋಕ್ಷದ ಪ್ರಕರಣದಲ್ಲಿ "ಜಜಾಪ ಪರಮಂ ಜಾಪ್ಯಂ ಪ್ರಾಗ್‌ಜನ್ಮನ್ಯನು ಶಿಕ್ಷಿತಂ" ಗಜೇಂದ್ರನು ಪೂರ್ವಜನ್ಮದಲ್ಲಿ ಶಿಕ್ಷಿತವಾದ ಜ್ಞಾನಬಲದಿಂದ ಉತ್ತಮವಾದ, ಭಗವಂತನ ಸ್ತೋತ್ರರೂಪವಾದ ಜಪವನ್ನು ಜಪಿಸಿದನು ಎಂದು ಹೇಳಿರುವರು. ಪಂಚಮಸ್ಕಂಧದಲ್ಲಿ ಭರತರಾಜನಿಗೆ ಮೃಗಜನ್ಮ ಬಂದ ಕಾಲದಲ್ಲಿ ಮತ್ತು ಮೂರನೆಯ ಜನ್ಮ ಬ್ರಾಹ್ಮಣನಾಗಿದ್ದ ಕಾಲದಲ್ಲಿಯೂ ಸಹ ಭಗವದಾರಾಧನಾ ಪುಣ್ಯವಿಶೇಷದಿಂದ ಪೂರ್ವ ಜನ್ಮಗಳ ಜ್ಞಾನದಿಂದ ಭಗವಂತನನ್ನು ಕ್ಷಣ ಬಿಡದೆ ಧ್ಯಾನಮಾಡುತ್ತಿದ್ದನೆಂದು ಹೇಳಿರುವರು. ಫಲಾಪೇಕ್ಷೆಯಿಂದ ಕರ್ಮ ಮಾಡಬಾರದೆಂದು ಅನೇಕ ಸ್ಥಳಗಳಲ್ಲಿ ಹೇಳಿರುವರು. ಆದರೆ ಈ ಪದ್ಯದಿಂದ ಜನ್ಮಜನ್ಮಗಳಲ್ಲಿಯೂ ಜ್ಞಾನ ಭಕ್ತಿಗಳನ್ನು ಬೇಡು ಎಂದು ಹೇಗೆ ಹೇಳಿದರೆಂದರೆ, ಭಗವತ್ಪ್ರಸಾದವನ್ನೂ, ಜ್ಞಾನ ಭಕ್ತಿಗಳನ್ನೂ ಬೇಡುವುದು ಕಾಮ್ಯವಲ್ಲ. ಜ್ಞಾನಭಕ್ತಿಯನ್ನು ಬೇಡುವುದು ಪರಮಾತ್ಮನ ಪ್ರಸಾದ

ಕ್ಕಾಗಿ. ಪ್ರಸಾದವೇ ನಮಗೆ ಮುಖ್ಯ. "ನೀನು ಪ್ರಸನ್ನನಾದರೆ ನಮಗೆ ಮುಕ್ತಿಯನ್ನು ಕೊಡು!" ಐಶ್ವರ್ಯ ಕೊಡು ಎಂದು ಬೇಡುವುದು ಮಾತ್ರ ಕಾಮ್ಯ; ಬರೀ ಅನುಗ್ರಹವನ್ನು ಮಾತ್ರವೇ ಬೇಡುವುದು ಕಾಮ್ಯವಾಗುವುದಿಲ್ಲ. ಕೇವಲ ನಿಷ್ಕಾಮ ಭಕ್ತರಾದ ಸನಕಾದಿಗಳು, ಪ್ರಹ್ಲಾದ ಮೊದಲಾದವರೂ ಕೂಡ ಇಂತಹ ವರಗಳನ್ನು ಬೇಡಿರುವರು. ಅದೆಲ್ಲಂದರೆ ಭಾಗವತ ತೃತೀಯ ಸ್ಕಂಧ ೧೬ ನೆಯ ಅಧ್ಯಾಯ ೪೯ ನೆಯ ಶ್ಲೋಕ (ಸನಕಾದಿಗಳು ಪರಮಾತ್ಮನನ್ನು ಕ್ಷಮಾಪಣೆ ಬೇಡುವ ಪ್ರಕರಣ)—"ಕಾಮಂ ವ್ರಜೇಮ ವೃಜಿನೈರ್ನಿರಯೇಷು ನಸ್ತಾಚ್ಚೇತೋಲಿವದ್ಯದಿ ನ: ತೇಪದಯೋ ರಮೇತ|| ವಾಚಶ್ಚನಸ್ತುಲಶಿವದ್ಯದಿ ತೇಂಘ್ರಿಶೋಭಾಃ ಪೂರ್ಯೇತ ತತೇ ಗುಣಗಣ್ಯೈರ್ಯದಿ ಕರ್ಣರಂಧ್ರಃ" ನಿನ್ನಪ್ಪಣೆಯಿಲ್ಲದೆ ನಿನ್ನ ಮನೇ ಕಾಯುವ ದ್ವಾರಪಾಲಕರನ್ನು ನಾವು ಶಿಕ್ಷಿಸಿದ ಅಪರಾಧಕ್ಕಾಗಿ, ಈಗಿನ ಸುಖದಿಂದ ಭ್ರಷ್ಟರಾಗಿ ಕಷ್ಟಕರವಾದ ಯಾವ ನರಕಕ್ಕೆ ನಮ್ಮನ್ನು ಕಳುಹಿಸಿದರೂ ಹೋಗಲು ಸಿದ್ಧವಾಗಿದ್ದೇವೆ. ಆದರೆ ಒಂದು ಮಾತ್ರ ನಾವು ಬೇಡಿಕೊಳ್ಳುವೆವು. ಯಾವ ನರಕದಲ್ಲಿ ನಾವಿದ್ದರೂ ನಮ್ಮ ಚಿತ್ತವು ಮಾತ್ರ ನಿನ್ನ ಪಾದಕಮಲದಲ್ಲಿ ಭ್ರಮರವು ಕಮಲದಲ್ಲಿ ಸೇರುವಂತೆ ಸೇರಿ ಸುಖಪಡುವಂತೆ ಮಾಡಬೇಕು. ಮತ್ತು ನಮ್ಮ ವಾಗಿಂದ್ರಿಯವು ನಿನ್ನ ಪಾದದಲ್ಲಿ ತುಲಸಿಯು ಶೋಭಿಸುವಂತೆ ಶೋಭಿಸಲಿ! ಅಂದರೆ ನಮ್ಮ ವಾಕ್ ನಿನ್ನ ಚರಣಕಮಲವನ್ನೇ ಸ್ತೋತ್ರಮಾಡುತ್ತಿರಲಿ ಎಂದು ಭಾವ. ಮತ್ತು ನಿನ್ನ ಗುಣಗಳಿಂದ ನಮ್ಮ ಕಿವಿಯ ದ್ವಾರಗಳು ತುಂಬಿರಲಿ! ಇಷ್ಟು ಮಾತ್ರ ನಿನ್ನ ಅನುಗ್ರಹವಿದ್ದರೆ ಯಾವ ನರಕವಾದರೂ ಬರಲಿ! ಹೋಗಲು ಸಿದ್ಧವಾಗಿದ್ದೇವೆ.—ಎಂದು ಪ್ರಾರ್ಥಿಸಿದರು. ಇದೇ ಪ್ರಕಾರ ಸಪ್ತಮಸ್ಕಂಧದಲ್ಲಿ ೯ ನೆಯ ಅಧ್ಯಾಯ ೪೩ ನೆಯ ಶ್ಲೋಕ "ನೈವೋದ್ವಿಜೇ ಭವದುರತ್ಯಯ ವೈತರಣ್ಯಾಸ್ತ್ವತ್ತೀರ್ಥ ಗಾಯನ ಮಹಾಮೃತ ಮತ್ತಚಿತ್ತಃ|" ಮೇಲೆ ಘೋರತರವಾದ ಸಂಸಾರದಲ್ಲಿ ಮಾತ್ರ ನಮ್ಮನ್ನು ಬಂಧಿಸಬೇಡವೆಂದು ಪ್ರಾರ್ಥಿಸಿರುವರು. ಈ ಶ್ಲೋಕದಿಂದ ಬೇಡುವುದೇನೆಂದರೆ-ನಿರ್ಬಂಧದಿಂದ ಸಂಸಾರದಲ್ಲಿ ನೀನು ಇಟ್ಟೇ ತೀರಬೇಕೆಂದು ನಮ್ಮನ್ನು ಬಂಧನದಲ್ಲಿ ತಗಲಿಸಿದರೂ, ದಾಟಲು ಅಶಕ್ಯವಾದ ಈ ಸಂಸಾರವೆಂಬ ವೈತರಣಿಗಾದರೂ ನಾವು ಭಯಪಡುವುದಿಲ್ಲ; ಅದಕ್ಕೆ ಒಂದು ಬಲವನ್ನು ಮಾತ್ರ ಅಪೇಕ್ಷಿಸುವೆವು. ಕೆಲವು ಅಜ್ಞಾನಿಗಳು

ಮದ್ಯಾದಿ ಪಾನಗಳಿಂದ ಮತ್ತರಾಗಿ ತಮ್ಮ ಆಯಾಸವನ್ನು ಕಳೆದುಕೊಳ್ಳು ವರು. ಅದರಂತೆ ನಾವು ನಿನ್ನ ಪವಿತ್ರಕರವಾದ ಮಹಿಮಾರೂಪವಾದ ಮಹಾ ಮೃತವನ್ನು ಪಾನಮಾಡಿ ಅದರಿಂದ ಮತ್ತರಾದರೆ ನಮಗೆ ಸಂಸಾರ ಭಯ ವಿಲ್ಲ. ಅಂದರೆ ಅಂತಹ ವರವನ್ನು ಕೊಡೆಂಬ ಭಾವ. ಆದುದರಿಂದ ದಾಸ ರಾಯರು ಸುಜ್ಞಾನ ಭಕುತಿಯನ್ನು ಜನ್ಮಜನ್ಮಾಂತರದಲ್ಲಿಯೂ ಕೊಡು ಎಂದು ಬೇಡಿಕೊಳ್ಳೆಂದು ಹೇಳಿರುವರು.

**ಒಂದರೊಳಗೊಂದೊಂದು ಬೆರದಿಹ**
**ಇಂದಿರೇಶನ ರೂಪಗಳ ಮನ**
**ಬಂದ ತೆರದಲಿ ಚಿಂತಿಸಿದಕನುಮಾನ ವಿನಿತಿಲ್ಲ ||**
**ಸಿಂಧುರಾಜನೊಳಂಬರಾಲಯು**
**ಬಂದಿಸಲು ಪ್ರತಿತಂತುಗಳೊಳುದ**
**ಬಿಂದು ವ್ಯಾಪಿಸಿದಂತೆ ಇರುತಿಪ್ಪನು ಚರಾಚರದಿ || ೨೩ ||**

ಪದ್ಯಾರ್ಥ :— ಒಂದರೊಳಗೆ — ಚರಾಚರಾಖ್ಯವಾದ ಪ್ರಪಂಚದಲ್ಲಿ ತುಂಬಿಕೊಂಡಿರುವ ಪ್ರತಿಯೊಂದು ವಸ್ತುವಿನಲ್ಲಿಯೂ, ಒಂದೊಂದು—ಒಂ ದೊಂದು ರೂಪವಂತೆ, ಬೆರೆದಿಹ—ಸೇರಿಕೊಂಡಿರುವ, ಇಂದಿರೇಶನ—ಲಕ್ಷ್ಮೀ ಪತಿಯ, ರೂಪಗಳ—ರೂಪಗಳನ್ನು, ಮನಬಂದ ತೆರದಲಿ—ಯಾವ ವಸ್ತುವಿನ ಅಂತರ್ಯಾಮಿ ರೂಪವನ್ನು ಚಿಂತಿಸಬೇಕೆಂದು ಮನಸ್ಸಿಗೆ ತೋರಿದಾಗ್ಯೂ, ಚಿಂತಿಸು — ಧ್ಯಾನಮಾಡು, ಇದಕೆ—ಈ ವಿಷಯದಲ್ಲಿ, ಇನಿತು — ಯಾವ ಪ್ರಕಾರದಿಂದಲೂ, ಅನುಮಾನವಿಲ್ಲ. ಸಿಂಧುರಾಜನೊಳು — ಸಮುದ್ರನಲ್ಲಿ, ಅಂಬರಾಲಯ—ವಸ್ತ್ರದ ಮನೆಯನ್ನು, ಬಂಧಿಸಲು—ಕಟ್ಟಿದರೆ, ಪ್ರತಿತಂತು ಗಳೊಳು—ಒಂದೊಂದು ಧಾರದಲ್ಲಿಯೂ, ಉದಬಿಂದು—ಉದಕದ ಬಿಂದು ಗಳು, ವ್ಯಾಪಿಸಿದಂತೆ, ಚರಾಚರದಿ—ಚರಾಚರಾಖ್ಯ ಪ್ರಪಂಚದಲ್ಲಿ, ಇರು ತಿಪ್ಪನು—ವ್ಯಾಪಿಸಿಕೊಂಡಿರುವನು || ೨೩ ||

ತಾತ್ಪರ್ಯ :— ಅಧಿಕಾರಿಗಳಿಗೆ ವ್ಯಾಪ್ತ್ಯೋಪಾಸನಾ ಕ್ರಮವನ್ನು "ಒಂದರೊಳಗೊಂದೊಂದು ಬೆರದಿಹ...." ಎಂಬ ಪದ್ಯದಿಂದ ಹೇಳುತ್ತಾರೆ : **ಚರಾಚರಾಖ್ಯ ಪ್ರಪಂಚದಲ್ಲಿ ಪ್ರತಿಯೊಂದು ಜಡಚೇತನದಲ್ಲಿಯೂ ಒಂ ದೊಂದು ಭಗವದ್ರೂಪವಿದ್ದೇ ಇರುವುದು. ಬ್ರಹ್ಮಾದಿಗಳಲ್ಲಿ ವಾಸುದೇವಾದಿ ರೂಪಗಳಿಂದ ಅಂತರ್ಯಾಮಿಯಾಗಿರುವನು. ಸ್ವಾಂಶರೂಪಗಳಿಂದ ರಾಮ,**

ಕೃಷ್ಣಾದಿ ರೂಪಗಳನ್ನು ತೋರುವನು. ಲಕ್ಷ್ಮಣ, ಬಲರಾಮ, ಪೃಥು ಮೊದ ಲಾದವರಲ್ಲಿ ಭಿನ್ನಾಂಶದಿಂದ ತದ್ರೂಪಿಯಾಗಿರುವನು. ಘಟದಲ್ಲಿ ಘಟಾಕಾರ ನಾಗಿಯೂ, ಪಟದಲ್ಲಿ ಪಟಾಕಾರನಾಗಿಯೂ, ಶ್ವಾನ, ಚಂಡಾಲ, ಗೋ ಖರ ಗಳಲ್ಲಿ ತದ್ರೂಪಿಯಾಗಿರುವನು. "ಅಣೋರಣೀಯಾನ್ ಮಹತೋಮ ಹೀಯಾನ್" ಎಂಬ ಶೃತಿಯನ್ನನುಸರಿಸಿ ಅತಿ ಸೂಕ್ಷ್ಮವಾದ ಪರಮಾಣು ರೂಪದ ವಸ್ತುವಿನಲ್ಲಿ ಅದಕ್ಕಿಂತಲೂ ಅಣುವಾಗಿರುವನು. ದೊಡ್ಡದಾದ ಪದಾರ್ಥದಮೇಲೆ ಅದಕ್ಕಿಂತಲೂ ದೊಡ್ಡದಾದ ರೂಪದಿಂದ ಅದರ ಆವರಕ ನಾಗಿರುವನು. ಆದರೆ ಹೀಗೆ ವ್ಯಾಪ್ತನಾಗಿರುವ ಭಗವದ್ರೂಪೋಪಾಸನಾಧಿ ಕಾರವು ಸರ್ವರಿಗೂ ಇರುವುದಿಲ್ಲ. "ಪ್ರತಿಮಾ ಸ್ವಪ್ರಬುದ್ಧಾನಾಂ ಸರ್ವತ್ರ ವಿದಿತಾತ್ಮನಾಂ" ಎಂಬ ಪ್ರಮಾಣ ಬಲದಿಂದ ಅಜ್ಞಾನಿಗಳು ಪ್ರತಿಮಾಧಿ ಷ್ಠಾನದಲ್ಲಿರುವ ಪರಮಾತ್ಮನನ್ನು ಪೂಜಿಸಬೇಕೆಂತಲೂ, ಜ್ಞಾನಿಗಳು ಸರ್ವತ್ರ ವ್ಯಾಪ್ತನಾದ ಪರಮಾತ್ಮನನ್ನು ಪೂಜಿಸಬೇಕೆಂತಲೂ ನಿಶ್ಚಯವಾಗುವುದು. ಅಜ್ಞಾನಿಗಳೆಂದರೆ ಮೂಢರಲ್ಲ. "ಯಾವತ್ಸರ್ವೇಷು ಭೂತೇಷು ಮದ್ಭಾವೋ ನೋಪಜಾಯತೇ | ತಾವದೇವಮುಪಾಸೀತ...." ಎಂದು ಭಾಗವತ ವಾಕ್ಯ ವಿರುವುದರಿಂದ, ತನ್ನೊಳಗಿರುವ ಪರಮಾತ್ಮನಿಗೂ, ಶ್ವಾನ, ಚಂಡಾಲಾದಿ ಗಳಲ್ಲಿಯೂ, ಸರ್ಪ, ವ್ಯಾಘ್ರಾದಿಗಳಲ್ಲಿಯೂ ಸಹ ಇರುವ ಪರಮಾತ್ಮನಿಗೂ ಭೇದವಿಲ್ಲವೆಂದು ತಿಳಿದು ಅದರಂತೆ ಅನುಷ್ಠಾನಕ್ಕೆ ತರಲು ಯಾವಾಗ ಶಕ್ತ ನಾಗುವನೋ ಆಗ 'ಪ್ರಣಮೇದ್ದಂಡವದ್ಭೂಮೌ ಅಶ್ವಚಂಡಾಲ ಗೋಖರಂ' ಶ್ವಾನ ಚಂಡಾಲ ಗೋ ಖರಾದಿಗಳಿಗೂ ಸಹ ಸಾಷ್ಟಾಂಗ ನಮಸ್ಕಾರವನ್ನು ಮಾಡಬೇಕೆಂದು ಹೇಳಿರುವರು.

ಎಲ್ಲರಲ್ಲಿಯೂ ಭಗವಂತನಿರುವನೆಂದು ಬಾಯಿಂದ ಹೇಳುವುದು ಮತ್ತು ತಿಳಿದುಕೊಳ್ಳುವುದು-ಇವು ಮಾತ್ರ ಸುಲಭ. ಅನುಷ್ಠಾನಕ್ಕೆ ತರುವುದೇನೋ ಕಷ್ಟ. ಅನುಷ್ಠಾನವೆಂದರೇನು ? ಸರ್ಪಾದಿಗಳಲ್ಲಿಯೂ ಪರಮಾತ್ಮನಿದ್ದಾ ನೆಂದು ಸಾಮಾನ್ಯವಾಗಿ ಆಸ್ತಿಕರೆಲ್ಲರೂ ಹೇಳುತ್ತಾರೆ. ಆದರೆ ಹುಲಿ, ಹಾವುಗಳನ್ನು ಕಂಡಕೂಡಲೇ ಅವುಗಳನ್ನು ಕೊಲ್ಲಬೇಕೆಂಬ ಪ್ರಯತ್ನವನ್ನಾ ಗಲಿ ಅಥವಾ ತಾವು ಓಡಿಹೋಗುವ ಪ್ರಯತ್ನವನ್ನಾಗಲಿ ಮಾಡುತ್ತಾರೆ. ನಮ್ಮಲ್ಲಿರುವ ಭಗವಂತನೇ ಅಲ್ಲಿ ಇದ್ದಾನೆಂಬ ಜ್ಞಾನವು ದೃಢವಾದರೆ,- ಬೆಂಕಿಯು ಬೆಂಕಿಯನ್ನು ಏನುಮಾಡುವುದು ? ಅದರಂತೆ ತಾನು, ತನ್ನದು

ಎಂಬ ಕರ್ತೃತ್ವಾಭಿಮಾನವನ್ನು ಬಿಟ್ಟು ಇಲ್ಲಿರುವವನೂ, ಅಲ್ಲಿರುವವನೂ ಒಬ್ಬನೇ ಆದುದರಿಂದ "ತನ್ನನ್ನು ತಾನೇ ಏನುಮಾಡಬಲ್ಲನು ?" ಎಂಬ ಭಾವನೆಯನ್ನು ಮನಸ್ಸಿಗೆ ತಂದುಕೊಂಡು ಸರ್ಪಾದಿಗಳನ್ನು ಕಂಡರೂ, ಪ್ರತಿಮಾದಿಗಳನ್ನು ಕಂಡರೆ ಹೇಗೆ ಪೂಜಿಸುವನೋ ಮತ್ತು ನಿರ್ಭೀತಿಯಿಂದಿರುವನೋ ಹಾಗೆಯೇ ನಿರ್ಭೀತಿಯಿಂದ ಪೂಜಿಸುವ ಯೋಗ್ಯತೆ ಬಂದರೆ ಅವನು ಸರ್ವತ್ರ ವ್ಯಾಪ್ತನಾದ ಪರಮಾತ್ಮನ ಪೂಜೆಯನ್ನು ಮಾಡಬಹುದು. ಆ ಜ್ಞಾನ ಬರುವವರೆಗೂ ತನಗಿಂತಲೂ ಉತ್ತಮರೆಂದು ಯಾರಲ್ಲಿ ಭಕ್ತಿ ಹುಟ್ಟುವುದೋ ಅವರಲ್ಲಿ ಅಂತರ್ಯಾಮಿಯಾದ ಪರಮಾತ್ಮನನ್ನು ಮಾತ್ರ ಪೂಜಿಸಬೇಕು. ಯಾರಲ್ಲಿ ತಪಸ್ಸು, ಜ್ಞಾನ, ಭಕ್ತಿ ಮೊದಲಾದುವು ಅಧಿಕವಾಗಿರುವುವೋ ಆ ಅಧಿಷ್ಠಾನದಲ್ಲಿ ತಾರತಮ್ಯಾನುಸಾರ ಭಕ್ತಿ ಮಾಡಬೇಕು. ನಮಗಿಂತಲೂ ನೀಚರಲ್ಲಿಯೂ ಶ್ವಾನಾದಿಗಳಲ್ಲಿಯೂ ಇರುವ ಭಗವದ್ರೂಪಗಳಿಗೆ ಅಭೇದ ಚಿಂತನೆ ಮಾಡಿಕೊಂಡು ತನ್ನ ಯೋಗ್ಯತಾನುಸಾರ ಯಾವಯಾವ ಅಧಿಷ್ಠಾನದಲ್ಲಿ ತನಗೆ ಭಕ್ತಿ ಹುಟ್ಟುವುದೋ ಆಯಾ ಅಧಿಷ್ಠಾನದಲ್ಲಿ ಭಗವತ್ಪೂಜೆಯನ್ನು ನಿಃಸಂಶಯವಾಗಿ ಮಾಡಬಹುದು. ಆದುದರಿಂದಲೇ ದಾಸರಾಯರು 'ಮನಬಂದ ತೆರದಲಿ ಚಿಂತಿಸು' ಎಂದು ಹೇಳಿರುವರು.

ಭಗವದ್ರೂಪವು ಸರ್ವತ್ರ ತುಂಬಿರುವ ವಿಷಯದಲ್ಲಿ ದೃಷ್ಟಾಂತರವನ್ನು ಹೇಳುತ್ತಾರೆ:—ಸಮುದ್ರ ಮಧ್ಯದಲ್ಲಿ ಎಂಬ ಉಪಲಕ್ಷಣ ಮಾಡಿಕೊಂಡು ನೀರುಳ್ಳ ಕೆರೆ ಮೊದಲಾದುವುಗಳಲ್ಲಿಯಾದರೂ ವಸ್ತ್ರಮಯವಾದ (ಗೂಡಾರದ) ಮನೆಯನ್ನು ರಚಿಸಿದರೆ ಆ ವಸ್ತ್ರದ ಪ್ರತಿ ಧಾರದಲ್ಲಿಯೂ ಹೇಗ ಉದಕ ಬಿಂದುಗಳು ವ್ಯಾಪಿಸುವುವೋ ಹಾಗೆ ಪರಮಾತ್ಮನು ಚರಾಚರಾಖ್ಯವಾದ ಪ್ರಪಂಚದ ಸರ್ವತ್ರ ವ್ಯಾಪಿಸಿರುವನು. ಈ ದೃಷ್ಟಾಂತವು ಅಭೂತಪೂರ್ವವು. ನೀರೊಳಗೆ ವಸ್ತ್ರಗೃಹ (ಡೇರಾ) ವನ್ನು ರಚಿಸುವುದು ಎಲ್ಲಿಯೂ ಕಾಣುವುದಿಲ್ಲ. ಈ ದೃಷ್ಟಾಂತ ಹೇಗೆ ಕೊಟ್ಟರು ಎಂದರೆ ಉಪಮಾನದಲ್ಲಿ ಇದ್ದದ್ದೇ ಹೇಳಬೇಕೆಂಬ ನಿಯಮವಿಲ್ಲ. ಇಲ್ಲದಿದ್ದರೂ, ಇದ್ದರೆ ಹೇಗಿರುವುದೋ ಹಾಗೆ, ಎಂದು ಉಪಮಾನ ಹೇಳುವ ಸಂಪ್ರದಾಯವುಂಟು. ಲೋಕವಿಲಕ್ಷಣವಾದ ವಿಷಯದಲ್ಲಿ ಉಪಮಾನಕೊಡಬೇಕಾದರೆ ಲೋಕವಿಲಕ್ಷಣವಾದ ಉಪಮಾನವನ್ನೇ ಹುಡುಕಬೇಕು. ಭಾಗವತ ಪ್ರಥಮ ಸ್ಕಂಧದಲ್ಲಿ ಶ್ರೀ ಕೃಷ್ಣನು ಹಸ್ತಿನಾವತಿಪುರದಿಂದ ದ್ವಾರವತೀಗೆ ಬರುವಾಗ

ಅರ್ಜುನನು ರತ್ನದಂಡದಿಂದ ಕೂಡಿದ ಶ್ವೇತಚ್ಛತ್ರಿಯನ್ನು ಹಿಡಿದಿದ್ದನು. ಉದ್ಧವ, ಸಾತ್ಯಕಿ ಇವರಿಬ್ಬರೂ ಬಾಲವ್ಯಜನವನ್ನು ಹಿಡಿದು ಬೀಸುತ್ತಿದ್ದರು. ಶ್ರೀ ಕೃಷ್ಣನು ಕೌಸ್ತುಭ ಮಾಣಿಕ್ಯದಿಂದಲೂ, ವನಮಾಲಿಕೆಯಿಂದಲೂ ಶೋಭಿಸುತ್ತಿದ್ದನು. ಅದು ಹೇಗೆ ಶೋಭಿಸುತ್ತಿದ್ದಿತೆಂಬುದಕ್ಕೆ ದೃಷ್ಟಾಂತ ಹೇಳುತ್ತಾರೆ :—" ಘನೋ ಯಥಾರ್ಕೇನಚಾಪವೈದ್ಯುತೈಃ "--ಉಚ್ಚದಲ್ಲಿ ಸೂರ್ಯ, ಬಗಲಲ್ಲಿ ಪೂರ್ಣಚಂದ್ರ, ಮೇಘಮಂಡಲದಲ್ಲಿ ಇಂದ್ರ ಧನುಸ್ಸು ಮತ್ತು ಮಿಂಚು-ಇವೆಲ್ಲವುಗಳಿಂದ ಕೂಡಿದ ನೀಲಮೇಘವು ಹೇಗೆ ಶೋಭಿಸುವುದೋ ಹಾಗೆ ಪರಮಾತ್ಮನ ತಲೆಯಮೇಲೆ ಶೋಭಿಸುವ ಛತ್ರಿಯು ಸೂರ್ಯನಂತೆಯೂ, ವ್ಯಜನವು ಪೂರ್ಣ ಚಂದ್ರನಂತೆಯೂ, ವನಮಾಲಿಕೆಯು ನಾನಾ ವರ್ಣಗಳಿಂದ ಕೂಡಿದ (ಇಂದ್ರ ಚಾಪ) ಬಿಲ್ಲಿನಂತೆಯೂ, ಕೌಸ್ತುಭ ಮಾಣಿಕ್ಯವು ಮಿಂಚಿನಂತೆಯೂ ಶ್ರೀ ಕೃಷ್ಣನು ಇವೆಲ್ಲವುಗಳಿಂದ ಕೂಡಿದ ನೀಲ ಮೇಘದಂತೆಯೂ ಶೋಭಿಸಿದನು-ಎಂದು ಹೇಳಿರುವರು.

ನಮ್ಮ ದಾಸರಾಯರು ಕೊಟ್ಟ ಉಪಮಾನವು ಈಗಿನ ಪಾಶ್ಚಿಮಾತ್ಯರು ಯುಕ್ತಿಯಿಂದ ಸಮುದ್ರದಲ್ಲಿ ವಸ್ತ್ರಗೃಹವನ್ನು ರಚಿಸಿದರೂ ರಚಿಸಬಹುದು. ಭಾಗವತದಲ್ಲಿ ಕೊಟ್ಟ ಉಪಮಾನವು ಎಂದಾದರೂ ಸಂಭವಿಸಬಹುದೆ? ಮಧ್ಯಾಹ್ನದ ಸೂರ್ಯ, ಸೂರ್ಯನ ಸಮೀಪದಲ್ಲಿ ಪೂರ್ಣಕಲೋಪೇತ ಚಂದ್ರನನ್ನು ಯಾವ ಕಾಲದಲ್ಲಾದರೂ ನೋಡಲು ಸಾಧ್ಯವೆ? ಅಮಾವಾಸ್ಯೆಯ ದಿವಸವೇ ಸೂರ್ಯಚಂದ್ರರೊಂದಾಗುವುದು. ಆ ದಿನ ಚಂದ್ರನಿಗೆ ಕಲಾ ಎಲ್ಲಿಯದು? ಹೀಗಿರಲು ಸೂರ್ಯನನ್ನು ಉಚ್ಚದಲ್ಲಿಯೂ ಬಗಲಲ್ಲಿ ಪೂರ್ಣ ಚಂದ್ರನನ್ನೂ ನೋಡುವುದು ಎಂದಿಗೂ ಇಲ್ಲ. ಮತ್ತು ಇಂದ್ರ ಚಾಪವೆಂದರೆ ಪ್ರಾತಃಕಾಲದಲ್ಲಿ ಸೂರ್ಯನು ಪೂರ್ವದಲ್ಲಿದ್ದು ಪಶ್ಚಿಮದಲ್ಲಿ ಮೇಘವಿದ್ದು ಮಳೆಹನಿಗಳು ಬೀಳುತ್ತಿದ್ದರೆ ಆವಾಗಾಗಲಿ ಅಥವಾ ಸಾಯಂ ಕಾಲದಲ್ಲಿ ಸೂರ್ಯನು ಪಶ್ಚಿಮದಲ್ಲಿದ್ದು ಪೂರ್ವದಲ್ಲಿ ಮೇಘವೂ ಮಳೆ ಹನಿಗಳೂ ಇದ್ದರೆ ಆವಾಗಲೂ, ಕೆಂಪು, ಕಪ್ಪು, ಹಸುರು ಮೊದಲಾದ ನಾನಾ ವರ್ಣಗಳಿಂದ ಕೂಡಿದ ಕಾಮನ ಬಿಲ್ಲು ಕಾಣುವುದು. ಇದು ಕಾಣಬೇಕಾದರೆ ಉದಯವಾಗಿ ೧-೨ ಘಳಿಗೆಯ ವಳಗಾಗಿ ಅಥವಾ ಅಸ್ತಮಯಕ್ಕೆ ೧-೨ ಘಳಿಗೆ ಮುಂಚಿತವಾಗಿ ಕ್ರಮವಾಗಿ ಪಶ್ಚಿಮದಲ್ಲೊ ಪೂರ್ವದಲ್ಲೊ ಕಾಣುವ ಸಂಪ್ರದಾಯವುಂಟು. ಮಧ್ಯಾಹ್ನಕಾಲದಲ್ಲಿ ಈ ಬಿಲ್ಲು ಎಂದಿಗೂ

ಕಾಣುವುದಿಲ್ಲ. ಸೂರ್ಯನು ಉಚ್ಚದಲ್ಲಿದ್ದು ಬುಡದಲ್ಲಿ ಮೇಘಗಳಿದ್ದರೆ ಸುತ್ತಲೂ ಪ್ರಕಾಶಮಾನವಾದ ಬಿಸಿಲಿರಲು ಮಿಂಚು ಕಾಣುವುದು ಹೇಗೆ? ಇದರಲ್ಲಿ ಒಂದಾದರೂ ಸಾಧ್ಯವಲ್ಲ. ಛತ್ರಿ, ವ್ಯಜನ, ವನಮಾಲಿಕೆ, ಕೃಷ್ಣ ಇವೆಲ್ಲವೂ ಕಣ್ಣಿಗೆ ಗೋಚರವಾಗುತ್ತಿದ್ದುವು. ಆದ್ದರಿಂದ ದೃಷ್ಟಾಂತ ದಲ್ಲಿಯೂ ಕೂಡ ಸೂರ್ಯ, ಚಂದ್ರ, ಬಿಲ್ಲು, ಮಿಂಚುಗಳಿಂದ ಕೂಡಿದ ಮೇಘವೆಂದು ಹೇಳಿದವೆಲ್ಲವನ್ನೂ ನೋಡಬೇಕಾಗಿತ್ತು. ಹೀಗೆ ಈ ಉಪ ಮಾನವು ಅಭೂತಪೂರ್ವವಾದರೂ ಲೋಕವಿಲಕ್ಷಣವಾದ ಭಗವದ್ರೂಪಕ್ಕೆ ಬೇರೆ ಉಪಮಾನವನ್ನು ಕೊಡಲು ಸಾಧ್ಯವಿಲ್ಲದಕಾರಣ ಇವೆಲ್ಲವೂ ಕೂಡಿದರೆ ಹೇಗಿರುವುದೋ ಹಾಗೆ ಎಂದು ಲೋಕವಿಲಕ್ಷಣವಾದ ಅಭೂತೋಪಮಾನ ವನ್ನು ಕೊಟ್ಟಿರುವರು. ಆದ್ದರಿಂದ ದಾಸರಾಯರು ಇಲ್ಲಿ ಕೊಟ್ಟ ಉಪ ಮಾನವು ಇದರಂತೆಯೇ ಎಂದು ಭಾವಿಸತಕ್ಕದ್ದು || ೨೩ ||

**ಒಂದು ರೂಪದೊಳೊಂದವಯವದೊ**
**ಳೊಂದು ರೋಮದೊಳೊಂದು ದೇಶದಿ**
**ಪೊಂದಿಯಿಪ್ಪವ ಜಾಂಡನಂತಾನಂತ ಕೋಟಿಗಳು ||**
**ಹಿಂದೆ ಮಾರ್ಕಂಡೇಯ ಕಾಣನೆ**
**ಒಂದು ರೂಪದಿ ಸೃಷ್ಟಿಪ್ರಳಯವ**
**ಇಂದಿರೇಶನೊಳೇನಿದಚ್ಚರಿಯು ಪ್ರಮೇಯ ಸದಾ || ೨೪ ||**

ಪದ್ಯಾರ್ಥ :—ಒಂದು ರೂಪದೊಳು=ಪರಮಾತ್ಮನ ಅನಂತಾನಂತ ರೂಪಗಳ ಪೈಕಿ ಒಂದು ರೂಪದಲ್ಲಿರುವ, ಒಂದವಯವದೊಳು=ಕರ ಚರ ಣಾದ್ಯವಯವಗಳ ಪೈಕಿ ಒಂದವಯವದಲ್ಲಿರುವ, ಒಂದು ರೋಮದೊಳು= ಅನೇಕ ರೋಮಗಳ ಪೈಕಿ ಒಂದು ರೋಮದ, ಒಂದು ದೇಶದಿ=ಒಂದು ಭಾಗದಲ್ಲಿ, ಅಜಾಂಡ=ಬ್ರಹ್ಮಾಂಡಗಳು, ಅನಂತಾನಂತ ಕೋಟಿಗಳು= ಅನಂತಾನಂತ ಸಂಖ್ಯೆಗಳುಳ್ಳವುಗಳಾಗಿ, ಪೊಂದಿ ಇಪ್ಪವು=ಸೇರಿ ಇರುವವು, ಹಿಂದೆ=ಪ್ರಳಯದಲ್ಲಿ, ಒಂದು ರೂಪದಿ=ಪ್ರಳಯೋದಕದಲ್ಲಿ ವಟಪತ್ರ ಶಾಯಿಯಾಗಿ ಮಲಗಿದ್ದ ಒಂದು ರೂಪದೊಳಗೆ, ಸೃಷ್ಟಿ ಪ್ರಳಯವ=ಹೊರ ಭಾಗದಲ್ಲಿ ಪ್ರಳಯವನ್ನೂ, ಪರಮಾತ್ಮನ ಉದರದಲ್ಲಿರುವ ಸೃಷ್ಟಿ ಕಾರ್ಯಾ ದಿಗಳನ್ನೂ, ಮಾರ್ಕಂಡೇಯ—ಮಾರ್ಕಂಡೇಯ ಋಷಿಯು, ಕಾಣನೆ=ಕಾಣ ಲಿಲ್ಲವೆ? ಇಂದಿರೇಶನೊಳು=ಲಕ್ಷ್ಮೀಪತಿಯಲ್ಲಿ, ಏನಿದಚ್ಚರಿ=ಇದು ಏನಾ

ಶ್ಚರ್ಯ ! ಸದಾ=ಸರ್ವಕಾಲದಲ್ಲಿಯೂ ಸಹ, ಅಪ್ರಮೇಯ=ಹೀಗೆ ಇರುವನೆಂದು ಅನುಮೇಯಿಸಲು ಸಾಧ್ಯವಲ್ಲದವನು.

ತಾತ್ಪರ್ಯ :—ಭಗವನ್ಮಹಿಮೆಯು ಅದ್ಭುತವೆಂದು ಅನುಭವದಿಂದ ತೋರಿಸುತ್ತಾರೆ.

ಶ್ರೀ ಪರಮಾತ್ಮನ ಅನಂತಾನಂತ ರೂಪಗಳ ಪೈಕಿ ಒಂದು ರೂಪದ ಅನೇಕ ಅವಯವಗಳ ಪೈಕಿ ಒಂದವಯವದ, ಅನೇಕ ರೋಮಗಳ ಪೈಕಿ ಒಂದು ರೋಮದ, ಅನೇಕ ಭಾಗಗಳ ಪೈಕಿ ಒಂದು ಭಾಗದಲ್ಲಿ ಅನೇಕ ಕೋಟಿ ಬ್ರಹ್ಮಾಂಡಗಳು ಅಡಗಿರುವುವು. ಇದನ್ನು ಕಂಡವರಾರೆಂದರೆ ಮಾರ್ಕಂಡೇಯ ಋಷಿಗಳು ಪರಮಾತ್ಮನನ್ನು ಕುರಿತು ತಪಸ್ಸನ್ನು ಮಾಡಿ 'ಸೃಷ್ಟಿ, ಸ್ಥಿತಿ, ಸಂಹಾರ ರೂಪವಾದ ನಿನ್ನ ಮಾಯೆಯನ್ನು ನೋಡಬೇಕು' ಎಂದು ಬೇಡಲು ಪ್ರಳಯವನ್ನು ಶ್ರೀ ಹರಿಯು ಮಾರ್ಕಂಡೇಯರಿಗೆ ತೋರಿಸಿದನು. ಪ್ರಳಯೋದಕದಲ್ಲಿ ವಟಪತ್ರದಲ್ಲಿ ಶಯನ ಮಾಡಿರುವ ಭಗವದ್ರೂಪವನ್ನು ಕಂಡು ಎತ್ತಿಕೊಳ್ಳಲು ಸಮೀಪಕ್ಕೆ ಬರುತ್ತಿರಲು ಆ ಶಿಶು ರೂಪಿಯಾದ ಶ್ರೀ ಹರಿಯು ಶ್ವಾಸವನ್ನು ಸೆಳೆಯಲು ಮಾರ್ಕಂಡೇಯರು ಆ ಶಿಶುವಿನ ಮೂಗಿನ ದ್ವಾರದಿಂದ ಉದರ ಪ್ರವೇಶಮಾಡಿ ಅದರಲ್ಲಿ ಬ್ರಹ್ಮಾಂಡ ಮೊದಲಾದ ಸಕಲ ಪ್ರಪಂಚವನ್ನೂ ಕಂಡಿರುವರು. ಆದುದರಿಂದ ಆ ಭಗವಂತನ ಮಹಿಮೆಯು ಅಚಿಂತ್ಯವಾದುದು. ಇಂತಹ ಅಚಿಂತ್ಯ ಸ್ವರೂಪಿಯಾದ ಲಕ್ಷ್ಮೀಪತಿಯು ಮಾರ್ಕಂಡೇಯರಿಗೆ ಸೃಷ್ಟಿ ಪ್ರಳಯಾದಿಗಳನ್ನು ಒಂದೇ ರೂಪದಿಂದ ತೋರಿಸಿರುವುದೇ ಮೊದಲಾದ ಈ ವ್ಯಾಪಾರಗಳು ಆಶ್ಚರ್ಯವಲ್ಲ.

**ಒಂದನಂತಾನಂತ ರೂಪಗ**
**ಳೊಂದು ರೂಪದಿ ಇಹವು ಲೋಕಗ**
**ಳೊಂದೆ ರೂಪದಿ ಸೃಷ್ಟಿಸ್ಥಿತಿ ಮೊದಲಾದ ವ್ಯಾಪಾರ ||**
**ಒಂದೆ ಕಾಲದಿ ಮಾಡಿ ತಿಳಿಸದೆ**
**ಸಂದಣಿಸಿ ಕೊಂಡಿಪ್ಪ ಜಗದೊಳು**
**ಸಂದ ನಂದನ ರಣದೊಳಿಂದ್ರಾತ್ಮಜಗೆ ತೋರಿಸನೆ || ೨೫ ||**

ಪದ್ಯಾರ್ಥ :—ಒಂದೊಂದು ರೂಪದಿ=ಪರಮಾತ್ಮನ ಪ್ರತಿಯೊಂದು ರೂಪದಲ್ಲಿಯೂ, ಅನಂತಾನಂತ ರೂಪಗಳೂ, ಒಂದೊಂದು ರೂಪದಿ=ಪ್ರತಿ

ಯೊಂದು ರೂಪದಲ್ಲಿಯೂ, ಲೋಕಗಳು=ಅನೇಕ ಲೋಕಗಳು, ಇಹವು= ಇರುವುವು, ಸೃಷ್ಟಿ ಸ್ಥಿತಿ ಮೊದಲಾದ ವ್ಯಾಪಾರ=ಸೃಷ್ಟಿ ಸ್ಥಿತಿ ಸಂಹಾರ ನಿಯಮನಾದಿ ಅಷ್ಟ ಕರ್ತೃತ್ವ ವ್ಯಾಪಾರಗಳನ್ನು ಒಂದೇ ಕಾಲದಿ ಮಾಡಿ, ತಿಳಿಸದೆ=ತನ್ನ ಕರ್ತೃತ್ವವನ್ನು ಜೀವರಿಗೆ ತಿಳಿಸದಂತೆ, ಜಗದೊಳು=ಜಗತ್ತಿನಲ್ಲಿ, ಪಾದಣಿಸಿಕೊಂಡಿಪ್ಪ=ವ್ಯಾಪಿಸಿಕೊಂಡಿರುವನು, ನಂದನಂದನ= ನಂದಗೋಪನ ಪುತ್ರನೆಂದೆನಿಸಿದ ಶ್ರೀ ಕೃಷ್ಣನು, ಇಂದ್ರಾತ್ಮಜಗೆ=ಇಂದ್ರ ಪುತ್ರನಾದ ಅರ್ಜುನನಿಗೆ, ರಣದೊಳು=ಭಾರತ ಯುದ್ಧರಂಗವಾದ, ಕುರು ಕ್ಷೇತ್ರದಲ್ಲಿ ತೋರಿಸನೆ=ಶ್ರೀ ಕೃಷ್ಣನ ದೇಹದೊಳಗೆ ಅನೇಕ ಶಿರೋ ಬಾಹು ಗಳಿಂದಕೂಡಿದ ಪ್ರಪಂಚವನ್ನೇ ನುಂಗುತ್ತಿರುವ ಭಯಂಕರವಾಗಿಯೂ, ಆಶ್ಚರ್ಯಕರವಾಗಿಯೂ ಇರುವ ವಿಶ್ವರೂಪವನ್ನು ತೋರಿಸಲಿಲ್ಲವೆ?

ತಾತ್ಪರ್ಯ :— ಶ್ರೀ ಪರಮಾತ್ಮನ ಮಹಿಮೆಯು ಪರಮಾದ್ಭುತ ವೆಂದು ತಿಳಿಸುತ್ತಾರೆ.

ಪರಮಾತ್ಮನ ಒಂದು ರೂಪದಲ್ಲಿ ಅನಂತಾನಂತ ರೂಪಗಳು ಇರುವವು. ಒಂದೊಂದು ರೂಪದಲ್ಲಿಯೂ ಅನಂತಾನಂತ ಲೋಕಗಳಿರುವವು. ಭಾಗ ವತ ದಶಮಸ್ಕಂಧ ೯ ನೆಯ ಅಧ್ಯಾಯದಲ್ಲಿ ಶ್ರೀ ಕೃಷ್ಣನು ಮಣ್ಣು ತಿಂದ ನೆಂಬ ಶಂಕೆಯಿಂದ ಅವನನ್ನು ಶಿಕ್ಷಿಸಲು ಬಂದ ತಾಯಿಯಾದ ಯಶೋದೆಗೆ ತಾನು ಮಣ್ಣು ತಿಂದಿಲ್ಲವೆಂದು ಸ್ಪಷ್ಟಪಡಿಸುವುದಕ್ಕಾಗಿ ಬಾಯಿ ತೆರೆದು ತೋರಿಸಿದ ಪ್ರಕರಣದಲ್ಲಿ :—

**ಸಾತತ್ರ ದದೃಶೇ ವಿಶ್ವಂ ಜಗತ್ ಸ್ಥಾಸ್ನು ಚ ಖಂದಿಶಃ |**
**ಸಾದ್ರಿ ದ್ವೀಪಾಬ್ಧಿ ಭೂಗೋಳಂ ಸವಾಯ್ವಗ್ನೀಂದು ತಾರಕಂ ||೩೭||**
**ಏತದ್ವಿಚಿತ್ರಂ ಸಹಜೀವಕಾಲ ಸ್ವಭಾವ ಕರ್ಮಾಶಯ ಲಿಂಗಭೇದಂ|**
**ಸೂನೋಸ್ತನೌ ವೀಕ್ಷ್ಯ ವಿದಾರಿ ತಾಸ್ಯೇ ವ್ರಜಂ ಸಹಾತ್ಮಾ ನಮವಾ ಪಶಂಕಾಂ || ೩೮ ||**

ತಾತ್ಪರ್ಯ :—ಯಶೋದೆಯು ಶ್ರೀ ಕೃಷ್ಣನ ಬಾಯಲ್ಲಿ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವನ್ನು ನೋಡಿದಳು ಎಂದು ಸಾಮಾನ್ಯವಾಗಿ ಪ್ರಪಂಚವೆಂದು ಹೇಳಿದುದನ್ನು ವಿವರಿಸುತ್ತಾರೆ. ಪ್ರಪಂಚದ ಸಕಲ ಪ್ರದೇ ಶಗಳನ್ನೂ, ಭೂಗೋಳವನ್ನೂ, ವಾಯು, ಅಗ್ನಿ, ಚಂದ್ರ, ನಕ್ಷತ್ರಾದಿಗಳಿಂದ ಕೂಡಿದ ಅಂತರಿಕ್ಷ ಮೊದಲಾದುವುಗಳನ್ನೂ ನೋಡಿದಳು. ಅಷ್ಟು

ಮಾತ್ರವೇ ಅಲ್ಲ !. ಅನಾದಿ ಕಾಲೀನರಾದ ಸಾತ್ವಿಕ, ರಾಜಸ, ತಾಮಸರೆಂಬ ತ್ರಿವಿಧ ಜೀವರಾಶಿಗಳನ್ನೂ, ಅವರಲ್ಲಿ ಸೃಷ್ಟಿಗೆ ಬಾರದವರನ್ನೂ ಕರ್ಮಾನುಸಾರವಾಗಿ ಸೃಷ್ಟಿಗೆ ಬಂದು ಕರ್ಮಗಳನ್ನು ಮಾಡುತ್ತಿರುವವರನ್ನೂ, ಸಾತ್ವಿಕಾದಿ ಜೀವರು ಮುಕ್ತಿ, ಸಂಸಾರ, ತಮಸ್ಸೆಂಬ ತ್ರಿವಿಧ ಕರ್ಮ ಫಲವನ್ನು ಅನುಭವಿಸುತ್ತಿರುವುದನ್ನೂ, ಅವರವರ ಸಂಸಾರಗಳ ಲಕ್ಷಣಗಳು ಇವುಗಳೆಲ್ಲವನ್ನೂಪ್ರತ್ಯಕ್ಷವಾಗಿ ನೋಡಿದುದಲ್ಲದೆ ತನ್ನ ಗೋಕುಲ, ಗೋಕುಲದಲ್ಲಿ ತಾನು-ಶ್ರೀ ಕೃಷ್ಣನ ಹೊಟ್ಟೆಯಲ್ಲಿ ಕಾಣುವ ಪ್ರಪಂಚವನ್ನು ತೆರೆದು ತೋರಿಸುತ್ತಿರುವ ಬಾಯಿಯ ಮಾರ್ಗವಾಗಿ ನೋಡುತ್ತಿರುವುದನ್ನೂ, ಅದರೊಳಗೂ, ತಾನು-ಗೋಕುಲ-ಪ್ರಪಂಚಗಳು, ಆ ಪ್ರಪಂಚದಲ್ಲಿ ಗೋಕುಲ, ಅಲ್ಲೂ ತಾನು ಕೃಷ್ಣನ ಬಾಯಲ್ಲಿ ಪ್ರಪಂಚಾದಿಗಳನ್ನೂ ತನ್ನನ್ನೂ ಕೃಷ್ಣನನ್ನೂ ಹೀಗೆ ಒಂದು ಕೃಷ್ಣನ ಉದರದಲ್ಲಿ ಒಂದರೊಳಗೊಂದಾಗಿ ಅನಂತಾನಂತ ಪ್ರಪಂಚ, ಗೋಕುಲಾದಿಗಳನ್ನು ಕಂಡು ಶಂಕೆಯನ್ನು ಹೊಂದಿದಳೆಂದು ಹೇಳಿರುವರು. ಇಲ್ಲಿ ಈ ಶ್ಲೋಕದಲ್ಲಿ ' ವ್ರಜಂ ಸಹಾತ್ಮಾನಂ ' ಎಂದಿಷ್ಟೇ ಇರುವುದು. ಅನಂತಾನಂತ ವ್ರಜಾದಿಗಳನ್ನು ಕಂಡಳೆಂದು ಕಲ್ಪನವೇಕೆ ? ಎಂದು ಶಂಕಿಸಬಾರದು. ' ವ್ರಜಂ ಸಹಾತ್ಮಾನಂ ' ಎಂಬ ಪದಪ್ರಯೋಗದಿಂದಲೇ ಅನಂತಾನಂತ ರೂಪಗಳೆಂದು ಅರ್ಥವಾಗುವುದು. ಹೇಗೆಂದರೆ, ತಾನು, ಗೋಕುಲದಲ್ಲಿ ಶ್ರೀ ಕೃಷ್ಣನು ಬಾಯಿಯನ್ನು ತೆರೆದು ತೋರಿಸುತ್ತಿರುವುದನ್ನು ಶ್ರೀ ಕೃಷ್ಣನ ಹೊಟ್ಟೆಯಲ್ಲಿ ಕಂಡಳು, ಅಂದಮೇಲೆ ಆ ಬಾಯಲ್ಲಿ ಜಗತ್ತನ್ನೂ, ಗೋಕುಲವನ್ನೂ, ತನ್ನನ್ನೂ ಬಾಯಿ ತೆರೆದು ತೋರಿಸುತ್ತಿರುವ ಶ್ರೀ ಕೃಷ್ಣನನ್ನೂ ಕಂಡಳೆಂದು ಪುನಃ ಹೇಳಬೇಕಾಗಿಲ್ಲ. ಹೀಗೆ ಹೊಟ್ಟೆಯಲ್ಲಿ ಕಾಣುವ ಒಂದೊಂದು ಕೃಷ್ಣರೂಪದ ಉದರದಲ್ಲಿ ಇದರಂತೆಯೇ ಪ್ರಪಂಚವನ್ನು ಕಂಡೇ ಕಾಣಬೇಕಲ್ಲವೆ ? ಈ ಬಲದಿಂದಲೆ ಅನಂತಾನಂತ ರೂಪಗಳನ್ನು ಕಂಡಳೆಂದು ಅರ್ಥವಾಗುವುದೆಂಬ ತಾತ್ಪರ್ಯ. ಒಂದೇ ಕಾಲದಲ್ಲಿ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುವನು, ಅಂದರೆ ಸಾಮಾನ್ಯವಾಗಿ, ಜಗತ್ತನ್ನು ಸೃಷ್ಟಿಕಾಲದಲ್ಲಿ ಸೃಷ್ಟಿಮಾಡುವುದು, ಮಧ್ಯಕಾಲದಲ್ಲಿ ರಕ್ಷಣೆ, ಪ್ರಳಯಕಾಲದಲ್ಲಿ ನಾಶಮಾಡುವುದು ಸಹಜವಾದರೂ **' ಜನಂ ಜನೇನ ಜನಯನ್ ಮಾರಯನ್ ಮೃತ್ಯುನಾತ್ಮನಃ '** ಕಾಲನಾಮಕನಾದ **ಶ್ರೀ ಹರಿಯು ತನ್ನ ವಶದಲ್ಲಿರುವ ಬ್ರಹ್ಮಾದಿಗಳಿಂದಲೂ ಇತರ ಜನ**

ಗಳಿಂದಲೂ ಜನಗಳನ್ನು ಹುಟ್ಟಿಸುತ್ತಾ ಏಕಕಾಲದಲ್ಲಿಯೇ ತನ್ನ ವಶದಲ್ಲಿ ರುವ ಮೃತ್ಯುವಿಗೆ ನಿಮಿತ್ತಕಾರಣವಾದ ರೋಗಾದಿಗಳಿಂದ ಕೊಲ್ಲಿಸುತ್ತಾ ಇರುವನು-ಎಂಬ ಭಾಗವತ ತೃತೀಯಸ್ಕಂಧದ ವಾಕ್ಯದಿಂದ ಒಬ್ಬನಲ್ಲಿದ್ದು ಹುಟ್ಟಿಸುವನು, ಅದೇ ಕಾಲದಲ್ಲಿಯೇ ಮತ್ತೊಬ್ಬನಲ್ಲಿದ್ದು ಹುಟ್ಟಿದವರನ್ನು ಸಾಕುತ್ತಿರುವನು, ಮತ್ತೊಂದು ರೂಪದಿಂದ ಕೊಲ್ಲುತ್ತಿರುವನು. ಆದರೆ ಜಗತ್ತಿನಲ್ಲಿ ಜನರು ಹುಟ್ಟುತ್ತಿರುವುದು, ಜೀವಿಸುತ್ತಿರುವುದು, ಸಾಯುತ್ತಿ ರುವುದು-ಇವುಗಳನ್ನು ಸಕಲರೂ ನೋಡುತ್ತಿದ್ದರೂ, ಇವನ ಮಗನಿವನು, ಇವನನ್ನು ಸಾಕಿದವನಾತನು, ಈ ಕಾರಣದಿಂದ ಇವನು ಮೃತನಾದನು ಎಂದು ಅಂದುಕೊಳ್ಳುವರೇ ಹೊರತು ಇವುಗಳೆಲ್ಲವೂ ಭಗವದ್ವ್ಯಾಪಾರ ವೆಂದು ಯಾರೂ ಅರಿಯುವುದಿಲ್ಲ. ಜ್ಞಾನಿಗಳಿಗೆ ಮಾತ್ರವೇ ಗೋಚರವಾ ಗುವುದು. ಭಾರತ ಯುದ್ಧದಲ್ಲಿ ಅರ್ಜುನನಿಗೆ ವಿಶ್ವರೂಪವನ್ನು ತೋರಿಸಿ ದಾಗ ಭೀಷ್ಮ ಪ್ರಮುಖರಾದ ಯೋಧರೆಲ್ಲರೂ ಶ್ರೀ ಕೃಷ್ಣನ ಬಾಯೊಳಗೆ ಪ್ರವೇಶಿಸುತ್ತಿರುವುದನ್ನು ಶ್ರೀ ಕೃಷ್ಣನು ಅರ್ಜುನನಿಗೆ ತೋರಿಸಿದುದನ್ನೂ, ಅರ್ಜುನನು ಕಂಡುದುದನ್ನೂ ಗೀತೆಯ ೧೧ ನೆಯ ಅಧ್ಯಾಯದಲ್ಲಿ ಸ್ಪಷ್ಟ ಮಾಡಿರುವರು. ಅದರಿಂದಲೇ ಪರಮಾತ್ಮನ ಮಹಿಮೆಯು ವ್ಯಕ್ತವಾಗಲಿ ಲ್ಲವೆ ? ಎಂದು ತಾತ್ಪರ್ಯ.

**ಶ್ರೀರಮೇಶನ ಮೂರ್ತಿಗಳು ನವ**
**ನಾರಿ ಕುಂಜರದಂತೆ ಏಕಾ**
**ಕಾರ ತೋರ್ಪವು ಅವಯುವಾಹ್ವಯ ಅವಯುವಗಳಲ್ಲಿ ||**
**ಬೇರೆ ಬೇರೆ ಕಂಗೊಳಿಸುವ ಶ**
**ರೀರದೊಳು ನಾನಾ ಪ್ರಕಾರ ವಿ**
**ಕಾರಶೂನ್ಯ ವಿರಾಟನೆನಿಸುವ ಪದುಮ ಜಾಂಡದೊಳು ||೨೬||**

ಪದ್ಯಾರ್ಥ :—ಶ್ರೀ ರಮೇಶನ=ಶ್ರೀ ಲಕ್ಷ್ಮೀಪತಿಯ, ಮೂರ್ತಿಗಳು, ನವನಾರಿ ಕುಂಜರದಂತೆ=(೯ ನಾರಿಯರನ್ನು ಕೂಡಿಸಿ ಒಂದೇ ಆನೆಯ ರೂಪ ವನ್ನಾಗಿ ಮಾಡಿಸುವುದಕ್ಕೆ ನವನಾರಿ ಕುಂಜರ [ಚಿತ್ರದಲ್ಲಿ ನೋಡಿರಿ] ವೆಂದು ಹೆಸರು)=ಅದರಂತೆ, ಏಕಾಕಾರ ತೋರ್ಪವು=ಒಂದೇ ಆಕಾರವಾಗಿ ಕಾಣು ವುವು. ಅವಯುವಾಹ್ವಯ=ಅವಯುವಗಳೆಂದು ಹೆಸರುಳ್ಳ ಶ್ರೀ ಹರಿಯು, ಅವಯುವಗಳಲ್ಲಿ=ಕರಚರಣಾದಿ ಅವಯುವಗಳಲ್ಲಿ, ಬೇರೆಬೇರೆ ಕಂಗೊಳಿಸುವ

=ಕೈ ಬೇರೆ, ಕಾಲು ಬೇರೆ ಎಂದು ತೋರಿಸಿಕೊಳ್ಳುವನು (ಹೀಗೆ) ಶರೀರದೊಳು=ಶರೀರಗಳಲ್ಲಿ, ನಾನಾಪ್ರಕಾರ=ಅನೇಕ ವಿಧಗಳಾಗಿದ್ದರೂ, ವಿಕಾರಶೂನ್ಯ=ನಿರ್ವಿಕಾರನಾಗಿರುವನು, ಪದುಮಜಾಂಡದೊಳು=ಬ್ರಹ್ಮಾಂಡದಲ್ಲಿ ವಿರಾಟನೆನಿಸುವ=ಬ್ರಹ್ಮಾಂಡವನ್ನೇ ತನ್ನ ಶರೀರವನ್ನಾಗಿ ಮಾಡಿಕೊಂಡು ವಿರಾಟ್-ಪುರುಷನೆಂದು ನಾಮವುಳ್ಳವನಾಗಿರುವನು || ೨೭ ||

ತಾತ್ಪರ್ಯ :— ಶ್ರೀ ಪರಮಾತ್ಮನ ಮಹಿಮೆಯನ್ನೇ ಮತ್ತೂ ಹೇಳುತ್ತಾರೆ :--ಶ್ರೀ ಪರಮಾತ್ಮನು ನವನಾರೀ ಕುಂಜರವೆಂಬ ಚಿತ್ರದಲ್ಲಿ ಕಾಣುವ ಆನೆಯ ಆಕಾರವು ಹೇಗೆ ೯ ನಾರಿಯರಿಂದ ರಚಿಸಲ್ಪಟ್ಟು ಒಂದೇ ಆಕಾರವಾಗಿ ಕಾಣುವುದೋ, ಮತ್ತು ಅವರುಗಳನ್ನು ಬೇರ್ಪಡಿಸಿದರೆ ಒಂಭತ್ತು ಸ್ತ್ರೀಯರು ಪ್ರತ್ಯೇಕವಾಗಿ ಹೇಗೆ ಕಾಣುವರೋ ಹಾಗೆಯೇ ಪ್ರತಿಯೊಂದು ಶರೀರದಲ್ಲಿಯೂ ತಾನೇ ಕೈಕಾಲು ಮೊದಲಾದ ಅವಯವರೂಪಿಯಾಗಿ ೨೪ ತತ್ವಗಳ ಹೆಸರಿನಿಂದ ಒಂದೇ ಶರೀರವಾಗಿ ಕಾಣುವನು. ಜ್ಞಾನಿಗಳಿಗೆ ಕರದಲ್ಲಿ ಕರಾಕಾರವಾಗಿ ಕರನೆಂಬ ಹೆಸರಿನಿಂದಲೂ, ಚರಣದಲ್ಲಿ ಚರಣಾಕಾರನಾಗಿ ಚರಣನಾಮಕನಾಗಿಯೂ ಹೀಗೆಯೇ ಒಂದೊಂದು ಅವಯವಗಳಲ್ಲಿಯೂ ತತ್ತದಾಕಾರನಾಗಿ, ತತ್ತಚ್ಛಬ್ದ ವಾಚ್ಯನಾಗಿ ಬೇರೆಬೇರೆಯಾಗಿ ಕಾಣುವನು. ಹೀಗಿದ್ದರೂ ಮನುಷ್ಯಾದಿಗಳ ಶರೀರಗಳ ಅವಯವಗಳಿಗೆ ಛೇದಭೇದಾದಿಗಳು ಸಂಭವಿಸಿದರೂ ಆ ಅಂಗಗತನಾದ ತಾನು ನಿರ್ವಿಕಾರನಾಗಿಯೇ ಇರುವನು. ಇದಲ್ಲದೆ ೧೪ ಲೋಕಗಳಿಂದ ಕೂಡಿದ ಬ್ರಹ್ಮಾಂಡವನ್ನೇ ತನಗೆ ಶರೀರವನ್ನಾಗಿ ಮಾಡಿಕೊಂಡು ತಾನೇ ಕರಚರಣಾದಿ ಅವಯವಾಕಾರನಾಗಿ ತೋರುತ್ತಾ 'ವಿರಾಟ್-ರೂಪಿ' ಎನಿಸುವನು. 'ಪಾತಾಳ ಮೇತಸ್ಯಹಿ ಪಾದಮೂಲಂ' ಎಂಬ ಭಾಗವತ ದ್ವಿತೀಯ ಸ್ಕಂಧದ ವಾಕ್ಯಗಳಿಂದ ವಿರಾಟ್-ರೂಪವು ವಿಶದವಾಗುವುದು. ಇಂತಹ ಮಹಾಮಹಿಮೆಯುಳ್ಳವನು (ಪರಮಾತ್ಮನು) ಎಂದು ತಾತ್ಪರ್ಯ || ೨೭ ||

**ವಾರಿಜ ಭವಾಂಡದೊಳು ಲಕುಮಿನಾ**
**ನಾರಸಿಂಹನ ರೂಪ ಗುಣಗಳು**
**ವಾರಿಧಿಯೊಳಿಹ ತೆರೆಗಳಂದದಿ ಸಂದಣಿಸಿ ಇಹವು ||**
**ಕಾರಣಂಶಾವೇಶ ವ್ಯಾಪ್ತವ**
**ತಾರಕಾರ್ಯಾವ್ಯಕ್ತ ವ್ಯಕ್ತವು**
**ನಾರು ನಾಲ್ಕು ವಿಭೂತಿಯಂತರ್ಯಾಮಿ ರೂಪಗಳು || ೨೮ ||**

**ಪದ್ಯಾರ್ಥ:—ವಾರಿಜಭವಾಂಡದೊಳು=ಬ್ರಹ್ಮಾಂಡದೊಳಗೆ, ಲಕು ಮಿನಾರಸಿಂಹನ** = ಲಕ್ಷ್ಮೀನರಸಿಂಹ ದೇವರ, ರೂಪಗುಣಗಳು, ವಾರಿಧಿ ಯೊಳಿಹ=ಸಮುದ್ರದಲ್ಲಿರುವ, ತೆರೆಗಳಂದದಿ=ಅಲೆಗಳಂತೆ, ಸಂದಣಿಸಿ= ವ್ಯಾಪಿಸಿಕೊಂಡು, ಇಹವು = ಇರುವವು, ಕಾರಣ = ಅನಿರುದ್ಧಾದಿ ಸೃಷ್ಟಿ ಕಾರಣ ರೂಪದಿಂದಲೂ, ಅಂಶ-ಪ್ರತಿಬಿಂಬ ರೂಪದಿಂದ ಜೀವರಲ್ಲಿಯೂ, ಆವೇಶ=ವಿಶೇಷಾವೇಶದಿಂದ ಬಲರಾಮ, ಲಕ್ಷ್ಮಣಾದಿಗಳಲ್ಲಿಯೂ, ವ್ಯಾಪ್ತ =ಬ್ರಹ್ಮಾಂಡದಲ್ಲಿ ಸರ್ವತ್ರ ವ್ಯಾಪ್ತಿರೂಪಗಳಿಂದಲೂ, ಅವತಾರ=ರಾಮ, ಕೃಷ್ಣಾದಿ ಅವತಾರ ರೂಪಗಳಿಂದಲೂ, ಕಾರ್ಯ = ಕಾರ್ಯರೂಪದಿಂದ ಪ್ರಪಂಚದಲ್ಲಿಯೂ, ಜ್ಞಾನಿಗಳ ಹೃದಯಾಕಾಶದಲ್ಲಿ, ವ್ಯಕ್ತ=ವ್ಯಕ್ತನಾಗಿ ಯೂ ಅಜ್ಞಾನಿಗಳಲ್ಲಿ, ಅವ್ಯಕ್ತ=ಅವ್ಯಕ್ತನಾಗಿಯೂ ಅಥವಾ ಬ್ರಹ್ಮಾದಿ ರೂಪದಿಂದಿದ್ದು ಅಜ್ಞರಿಗೆ ಅವ್ಯಕ್ತನಾಗಿಯೂ, ವಾಸುದೇವಾದಿ ರೂಪಗಳಿಂದ ಸುಜ್ಞರಿಗೆ ವ್ಯಕ್ತನಾಗಿಯೂ, ಆರು ನಾಲ್ಕು ೬+೪, ವಿಭೂತಿ=೧೦ ವಿಧ ವಿಭೂತಿ ರೂಪಗಳಿಂದಲೂ, ಅಂತರ್ಯಾಮಿ ರೂಪಗಳು=ಸರ್ವತ್ರ ಅಂತ ರ್ಯಾಮಿ ರೂಪಗಳಿಂದಲೂ, (ಹೀಗೆ ಪರಮಾತ್ಮನು ಸಮುದ್ರದ ಅಲೆಗಳಂತೆ, ಪ್ರತ್ಯೇಕ ಪ್ರತ್ಯೇಕವಾಗಿ ಕಂಡರೂ ಹೇಗೆ ಎಲ್ಲ ಅಲೆಗಳೂ ಸೇರಿ ಒಂದೇ ಒಂದು ಸಮುದ್ರವಾಗಿರುವುದೋ ಅದರಂತೆಯೇ ಅನೇಕ ರೂಪಾತ್ಮಕನಾಗಿ ಒಬ್ಬನೇ ಇರುವನು) || ೨೭ ||

**ತಾತ್ಪರ್ಯ** :— ಲಕ್ಷ್ಮೀನಾರಸಿಂಹ ನಾಮಕನಾದ ಶ್ರೀ ಲಕ್ಷ್ಮೀ ನಾರಾಯಣನು ಒಂದೇ ಸಮುದ್ರದಲ್ಲಿ ಅನಂತಾನಂತನಾಗಿ ಅಲೆಗಳು ಹೇಗೆ ಒಂದರ ಹಿಂದೆ ಒಂದಾಗಿ, ಒಂದೇ ಕಾಲದಲ್ಲಿ ಕಾಣುವವೋ ಹಾಗೆ ಕಾರಣ ರೂಪ, ಅಂಶ, ಆವೇಶ, ವ್ಯಾಪ್ತ, ಅವತಾರ, ಕಾರ್ಯ, ಅವ್ಯಕ್ತ, ವ್ಯಕ್ತ, ೧೦ ವಿಧ ವಿಭೂತಿ, ಅಂತರ್ಯಾಮಿಗಳೆಂಬ ಅನಂತಾನಂತ ರೂಪಗಳಿಂದ, ಒಂದೇ ಕಾಲದಲ್ಲಿ ತೋರುವನು. ಕಾರಣ, ಅಂಶ ಮೊದಲಾದ ರೂಪಗಳೆಂದು ಯಾವ ರೂಪಗಳನ್ನು ಹೇಳುತ್ತಾರೆಂದರೆ-ಸೃಷ್ಟ್ಯಾದಿಗಳಿಗೆ ಕಾರಣರೂಪಗಳು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ನಾಲ್ಕು ರೂಪಗಳು ಸೃಷ್ಟಿಸ್ಥಿತ್ಯಾದಿಗಳಿಗಾಗಿ ಸ್ವೀಕರಿಸಿದನೆಂದು ನಿರ್ಣಯ ಪ್ರಥಮಾಧ್ಯಾಯದಲ್ಲಿ “ ಇತ್ಥಂ ವಿಚಿಂತ್ಯ ಪರಮಸ್ಸತು ವಾಸುದೇವ ನಾಮಾ ಬಭೂವ ನಿಜಮುಕ್ತಿ ಪದಪ್ರದಾತಾ” ಎಂಬ ಆರನೆಯ ಶ್ಲೋಕ ಮೊದಲುಗೊಂಡು ೯ನೆಯ

ಶ್ಲೋಕದವರೆಗೂ ವಾಸುದೇವಾದಿ ನಾಲ್ಕು ರೂಪಗಳ ವ್ಯಾಪಾರಗಳನ್ನು ಹೇಳಿರುವರು. ಆ ಶ್ಲೋಕಾರ್ಥ ನೋಡಿದರೆ ಅನಿರುದ್ಧಾದಿ ರೂಪಗಳು ಸೃಷ್ಟಿ ಸ್ಥಿತ್ಯಾದಿಗಳಿಗೆ ಕಾರಣವೆಂದು ಗೊತ್ತಾಗುವುದು. ಅಂಶವೆಂದರೆ 'ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ' ಎಂಬ ಗೀತಾವಾಕ್ಯದಿಂದ, ಅಂಶವೆಂದರೆ ಪ್ರತಿಬಿಂಬವೆಂತಲೂ, ಜೀವರೇ ಪ್ರತಿಬಿಂಬ ಭೂತರೆಂದೂ ಹೇಳಿರುವರು. ಅಂತಹ ಜೀವರಲ್ಲಿ ಜೀವಾಕಾರನಾಗಿರುವುದೇ ಅಂಶ ರೂಪಗಳು. ಆವೇಶರೂಪಗಳೆಂದರೆ ಲಕ್ಷ್ಮಿ, ಬ್ರಹ್ಮ, ಶೇಷಾದಿಗಳು, ಬಲ ರಾಮ, ಲಕ್ಷ್ಮಣ ಮೊದಲಾದವು. "ನರಃ ಫಲ್ಗುನ ಇತ್ಯಾದ್ಯಾ ವಿಶೇಷಾವೇಶಿನೋ ಹರೇಃ ॥ ವಾಲಿ ಸಾಂಬಾದಯಶ್ಚೈವ ಕಿಂಚಿದಾವಾಶಿನೋ ಹರೇಃ ॥" ಎಂಬ ನಿರ್ಣಯ ಎರಡನೆಯ ಅಧ್ಯಾಯ ೩೩ ನೆಯ ಶ್ಲೋಕದ ವಾಕ್ಯದಿಂದ, ಅರ್ಜುನಾದಿಗಳು ವಿಶೇಷಾವೇಶವುಳ್ಳವರೆಂತಲೂ, ವಾಲಿ, ಸಾಂಬಾದಿಗಳು ಪರಮಾತ್ಮನ ಕಿಂಚಿದಾವೇಶವುಳ್ಳವರೆಂತಲೂ ಗೊತ್ತಾಗುವುದು. ಇವುಗಳೇ ಆವೇಶರೂಪಗಳು. ವ್ಯಾಪ್ತರೂಪವೆಂದರೆ ಬ್ರಹ್ಮಾಂಡದಲ್ಲಿ ಸರ್ವತ್ರ ವ್ಯಾಪ್ತರೂಪಗಳೆಂದರ್ಥ. ಅವತಾರ ರೂಪಗಳು ರಾಮ, ಕೃಷ್ಣಾದಿಗಳು. ಕಾರ್ಯರೂಪ ಜಗತ್ತಿನ ಸರ್ವ ಪ್ರಾಣಿಗಳಲ್ಲಿಯೂ ಬ್ರಹ್ಮ, ರುದ್ರಾದಿ ರೂಪಗಳಿಂದ ಸೃಷ್ಟ್ಯಾದಿಗಳನ್ನು ಮಾಡುತ್ತಿದ್ದರೂ ಅವರ ದೇಹದಲ್ಲಿ ತಾನು ಅಜ್ಞರಿಗೆ ಅವ್ಯಕ್ತನಾಗಿಯೇ ಇರುವನು. ಅಥವಾ ಸರ್ವತ್ರ ಸರ್ವ ಶರೀರಗಳಲ್ಲಿದ್ದರೂ ಅಜ್ಞಾನಿಗಳಿಗೆ ಗೋಚರವಾಗನು. ಜ್ಞಾನಿಗಳಿಗೆ ಸರ್ವತ್ರ ಗೋಚರನಾಗುವನು. ಅಥವಾ ಸಾಮಾನ್ಯ ಜನರಿಗೆ ವಾಸುದೇವಾದಿ ರೂಪಗಳಿಂದ ಅವ್ಯಕ್ತನಾಗಿಯೂ, ರಾಮ, ಕೃಷ್ಣಾದಿ ರೂಪಗಳಿಂದ ವ್ಯಕ್ತನಾಗಿಯೂ ಇರುವನು. ವಿಭೂತಿ ರೂಪಗಳು ಹತ್ತು ವಿಧಗಳು-ಸ್ಥಿತ, ಸಾಧಾರಣ, ವಿಶೇಷ, ಸಜಾತಿ, ನೈಜ, ಆಸಿತ, ಸಹಜ, ವಿಜಾತಿ, ಖಂಡ, ಅಖಂಡ ಎಂಬ ೧೦ ವಿಧಗಳೆಂದು ೫ ನೆಯ ಸಂಧಿಯಲ್ಲಿಯೇ ವಿಸ್ತಾರವಾಗಿ ಹೇಳಿರುವರು. ಅಂತರ್ಯಾಮಿಯು ಸರ್ವತ್ರ ಹೀಗೆ ಅನಂತಾನಂತ ರೂಪಿಯಾಗಿ ತೋರುವನೆಂಬ ತಾತ್ಪರ್ಯ ॥ ೨೭ ॥

**ಮಣಿಗಳೊಳಗಿಹ ಸೂತ್ರದಂದದಿ**
**ಪ್ರಣವ ಸಾಧ್ಯನು ಚೇತನಾಚೇ**
**ತನ ಜಗತ್ತಿನೊಳನುದಿನದೊಳಾಡುವನು ಸುಖಪೂರ್ಣ ॥**

**ದಣುವಿಕೆಯು ಇವಗಿಲ್ಲ ಬಹುಕಾ**
**ರುಣಿಕನಂತಾನಂತ ಜೀವರ**
**ಗಣದೊಳೇಕಾಂಶಾಂಶ ರೂಪದಿ ನಿಂತು ನೇಮಿಸುವ ॥ ೨೮ ॥**

ಪದ್ಯಾರ್ಥ :— ಮಣಿಗಳೊಳು=ಮಾಣಿಕ್ಯದೊಳಗೆ, ಇಹ=ದೂರಿಸಿ ಇರುವ, ಸೂತ್ರದಂದದಿ=ಧಾರದಂತೆ, ಪ್ರಣವಪಾದ್ಯನು=ಓಂಕಾರ ಪ್ರತಿಪಾದ್ಯನಾದ ಶ್ರೀ ಹರಿಯು, ಚೇತನಾಚೇತನ ಜಗತ್ತಿನೊಳು=ಜಡಚೇತನಾತ್ಮಕವಾದ ಈ ಪ್ರಪಂಚದೊಳಗೆ, ಅನುದಿನದೊಳು=ಪ್ರತಿದಿವಸದಲ್ಲಿಯೂ, ಆಡುವನು = ಕ್ರೀಡಿಸುತ್ತಿರುವನು, ಸುಖಪೂರ್ಣ = ಸುಖಪೂರ್ಣನಾದುದರಿಂದ, ದಣುವಿಕೆಯು = ಆಯಾಸವು, ಇವಗಿಲ್ಲ, ಬಹುಕಾರುಣಿಕ=ಬಹುದಯಾಸಮುದ್ರನು, ಅನಂತಾನಂತ ಜೀವರ ಗಣದೊಳು; ಏಕಾಂಶಾಂಶ ರೂಪದಿ=ಬಿಂಬರೂಪದಿಂದಲೂ, ಪ್ರತಿಬಿಂಬನಾದ ಜೀವನೊಳಗೂ, ನಿಂತು =ಇದ್ದು, ನೇಮಿಸುವ=ಪ್ರೇರಿಸುವನು ॥ ೨೮ ॥

ತಾತ್ಪರ್ಯ :—ಧಾರದಲ್ಲಿ ಮಾಣಿಕ್ಯಗಳನ್ನು ಪೋಣಿಸಿರಲು ಹೇಗೆ ಆ ಧಾರವು ಎಲ್ಲಾ ಮಾಣಿಕ್ಯಗಳಿಗೂ ಆಧಾರವಾಗಿರುವುದೋ ಹಾಗೆ ಶ್ರೀ ಪರಮಾತ್ಮನು ಬ್ರಹ್ಮಾದಿ ಚೇತನ ರಾಶಿಗಳೊಳಗೂ, ಅಚೇತನಗಳಾದ ನದೀ, ಪರ್ವತ ಮೊದಲಾದುವುಗಳೊಳಗೂ, ಅಂತು ಸರ್ವ ಪ್ರಪಂಚಕ್ಕೆ ಆಧಾರಭೂತನಾಗಿದ್ದು ಅವರವರು ಮಾಡಬೇಕಾದ ಕೃತ್ಯಗಳನ್ನು ಸರ್ವದಾ ಮಾಡುತ್ತಾ, ಮಾಡಿಸುತ್ತಿದ್ದರೂ, ಸುಖಪೂರ್ಣ ಸ್ವರೂಪನಾದುದರಿಂದ ಲೇಶವಾದರೂ ಆಯಾಸವಿಲ್ಲದೆ ವಿಹರಿಸುತ್ತಿರುವನು. ಕರುಣಾಸಮುದ್ರನಾದ ಶ್ರೀ ಹರಿಯು ವಾಸುದೇವ ಸ್ವಾಂಶರೂಪದಿಂದ ಬ್ರಹ್ಮದೇವರಲ್ಲಿಯೂ, ಬ್ರಹ್ಮಾಂಶದಿಂದ ರುದ್ರದೇವರಲ್ಲಿಯೂ, ಹೀಗೆ ಸ್ವಾಂಶಗಳು, ರಾಮ, ಕೃಷ್ಣಾದಿ ರೂಪಗಳು ಅಂಶಾಂಶರೂಪಗಳು ಮಿಗಿಲಾದ ಜೀವರಲ್ಲಿರುವುವು. ಇಂತಹ ರೂಪಗಳಿಂದ ಎಲ್ಲರಲ್ಲಿಯೂ ಇದ್ದು ಅವರವರ ಯೋಗ್ಯತಾನುಸಾರವಾಗಿ ಕರ್ಮಗಳಲ್ಲಿ ಪ್ರೇರಿಸಿ, ಮಾಡಿ, ಮಾಡಿಸುವನೆಂಬ ತಾತ್ಪರ್ಯ ॥ ೨೮ ॥

**ಜೀವ ಜೀವರ ಭೇದ ಜಡಜಡ**
**ಜೀವ ಜಡಜಡ ಜೀವರಿಂದಲಿ**
**ಶ್ರೀವರನು ಮತ್ಯಂತ ಭಿನ್ನ ವಿಲಕ್ಷಣನು ಲಕ್ಷ್ಮೀ ॥**
**ಮೂವರಿಂದಲಿ ಪದುಮಜಾಂಡದಿ**

**ತಾ ವಿಲಕ್ಷಣಳೆನಿಸುತಿಪ್ಪಳು**
**ಸಾವಧಿಕ ಸಮಶೂನ್ಯಳೆಂದರಿತೀರ್ವರನು ಭಜಿಸು ॥ ೨೯ ॥**

ಪದ್ಯಾರ್ಥ:—ಜೀವಜೀವರ=ಜೀವರಿಗೂ ಜೀವರಿಗೂ, ಭೇದ=ಒಬ್ಬರಿಗೊಬ್ಬರು ಭೇದವುಳ್ಳವರು, ಜಡಜಡ=ಜಡಗಳಿಗೂ ಜಡಗಳಿಗೂ ಪರಸ್ಪರ ಭೇದ, ಜೀವಜಡ=ಜೀವರಿಗೂ ಜಡಗಳಿಗೂ ಪರಸ್ಪರ ಭೇದ, ಜಡಜೀವರಿಂದಲಿ=ಜೀವರ ಧೆಶೆಯಿಂದಲೂ, ಜಡರ ದೆಶೆಯಿಂದಲೂ, ಶ್ರೀವರನು=ಲಕ್ಷ್ಮೀಗೆ ಶ್ರೇಷ್ಟನಾದ ಶ್ರೀಹರಿಯು, ಅತ್ಯಂತ ಭಿನ್ನ=ಅತ್ಯಂತವಾಗಿ ಭೇದವುಳ್ಳವನು ಮತ್ತು ವಿಲಕ್ಷಣನು, ಲಕ್ಷ್ಮೀ=ಲಕ್ಷ್ಮೀದೇವಿಯುರು, ಮೂವರಿಂದಲಿ=ಜೀವ, ಜಡ, ಪರಮಾತ್ಮರೆಂಬ ಈ ಮೂವರ ದೆಶೆಯಿಂದಲೂ, ಪದುಮಜಾಂಡದಿ=ಬ್ರಹ್ಮಾಂಡದಲ್ಲಿ, ತಾ=ತಾವು, ವಿಲಕ್ಷಣಳೆನಿಸುತಿಪ್ಪಳು=ಭೇದವೆಂದೆನಿಸಿಕೊಳ್ಳುವರು, ಸಾವಧಿಕ=ಗುಣಗಳ ಅವಧಿಯಿಂದ ಕೂಡಿದವಳಾಗಿ, ಸಮಶೂನ್ಯಳೆಂದು=ಸಮವಿಲ್ಲದ ವಿಲಕ್ಷಣವುಳ್ಳವರೆಂದು, ಅರಿತು=ತಿಳಿದು, ಈರ್ವರನೂ=ಲಕ್ಷ್ಮಿ, ನಾರಾಯಣರೆಂಬ ಇಬ್ಬರನ್ನೂ, ಭಜಿಸು.

ತಾತ್ಪರ್ಯ:—ಜಡಚೇತನಾತ್ಮಕ ಪ್ರಪಂಚದಲ್ಲಿ ವ್ಯಾಪ್ತನಾಗಿರುವನೆಂದು ಉಪಾಸನಾ ಮಾಡಬೇಕೆಂದು ಮೇಲಿನ ಪದ್ಯದಿಂದ ಹೇಳಿದರು. ಈಗ ಇಂತಹ ಪ್ರಪಂಚದಲ್ಲಿದ್ದರೂ ಜಡಚೇತನರಿಂದ ವಿಲಕ್ಷಣರು ಲಕ್ಷ್ಮೀ, ನಾರಾಯಣರೆಂದು ಉಪಾಸನೆಯನ್ನು ಹೇಳುತ್ತಾ ಅದಕ್ಕೆ ಮುಖ್ಯ ಸಾಧನವಾದ ಪಂಚಭೇದವನ್ನೂ ಸಹ ಹೇಳುತ್ತಾರೆ.

ಜೀವರಿಗೂ ಜೀವರಿಗೂ ಪರಸ್ಪರ ಭೇದ, ಜಡರಿಗೂ ಜಡರಿಗೂ ಪರಸ್ಪರ ಭೇದ, ಜೀವರಿಗೂ, ಮೇಲಿನ ಸ್ಥೂಲದೇಹ ಭೂತವಾದ ಜಡಗಳಿಗೂ, ಭೇದ, ಜೀವನಿಗೂ ಪರಮಾತ್ಮನಿಗೂ ಭೇದ, ಜಡಗಳಿಗೂ ಪರಮಾತ್ಮನಿಗೂ ಭೇದ,-ಎಂಬ ಪಂಚ ಭೇದಗಳನ್ನು ತಿಳಿಯಬೇಕು. ಜೀವರಿಗೆ ಜೀವರು ಭಿನ್ನರು ಎಂಬ ವಿಷಯವು ನಮ್ಮ ಅನುಭವದಲ್ಲಿಯೇ ಇರುವುದು. ಲೋಕದಲ್ಲಿರುವ ಅನೇಕ ಪ್ರಾಣಿಗಳಲ್ಲಿ ಕೆಲವರು ಸುಖಪಡುತ್ತಿರುವರು, ಕೆಲವರು ದುಃಖಪಡುತ್ತಿರುವರು, ಕೆಲವು ಜನರು ರೋಗಿಗಳು, ಕೆಲವರು ಆರೋಗ್ಯವಂತರು. ಅಲ್ಲದೆ ಕತ್ತೆ, ಕುದುರೆ ಮೊದಲಾದ ಪ್ರಾಣಿಗಳಾಗಿ ಹುಟ್ಟಿರುವವರು-ಇವೆಲ್ಲವೂ ಒಂದೇ ಹೇಗೆ ಆದೀತು ? ಅದುದರಿಂದ ಜೀವರಲ್ಲಿ ಪರಸ್ಪರ

ಭೇದ ಹೇಳಿಯೇ ತೀರಬೇಕು. ಜೀವರು ನಿತ್ಯರು, ದೇಹವು ಅನಿತ್ಯವು. "ಘಟೇಭಿನ್ನೇಯಥಾಕಾಶ ಆಕಾಶಸ್ಯಾದ್ಯಥಾಪುರಾ" ಎಂಬ ಭಾಗವತ ದ್ವಾದಶಸ್ಕಂಧ ವಾಕ್ಯಾನುಸಾರವಾಗಿ ಘಟ ಒಡೆದುಹೋಗಲು ಘಟದೊಳಗಿನ ಆಕಾಶವು ಆಕಾಶವಾಗಿ ನಿಂತುಹೋಗುವುದು. ಆ ಆಕಾಶವು ನಾಶವಾಗದು. ಅದರಿಂದ ದೇಹವು ನಾಶವಾದರೂ ಜೀವವು ದೇಹಾಂತರವನ್ನು ಹೊಂದುವುದು. ಆದುದರಿಂದಲೇ ಜೀವರಿಗೂ ಜಡರಿಗೂ ಭೇದವುಂಟೆಂದು ತಿಳಿಯಬೇಕು. ಜಡಕ್ಕೂ ಜಡಕ್ಕೂ ಸಹ ಭೇದವುಂಟು. ನೊಣ, ಇರುವೆ ಕತ್ತೆ, ಕುದುರೆ ಮೊದಲಾದ ಪ್ರಾಣಿಗಳ ದೇಹಗಳಿಗೂ, ಪರ್ವತ, ನದಿ ಮೊದಲಾದವುಗಳಿಗೂ ಒಂದಕ್ಕೊಂದು ಭಿನ್ನವಾಗಿಯೇ ಇರುವುದರಿಂದ ಜಡಕ್ಕೂ ಜಡಕ್ಕೂ ಭೇದ ಒಪ್ಪಿಕೊಳ್ಳಬೇಕಾಯಿತು. ಜೀವರಿಗೂ ಪರಮಾತ್ಮನಿಗೂ ಭೇದ. ಹೇಗೆಂದರೆ :—

ಜೀವರು ಅಸ್ವತಂತ್ರರು. ಜನನ ಮರಣಾದಿ ಕ್ಲೇಶ (ಅಂದರೆ ಜೀವ ನಿತ್ಯವಾದರೂ ಶರೀರ ಸಂಯೋಗ ವಿಯೋಗಗಳೇ ಜನನ-ಮರಣಗಳು) ಆ ದುಃಖಗಳನ್ನು ಅನುಭವಿಸಬೇಕಾದವರು. ಪರಮಾತ್ಮನು ಸ್ವತಂತ್ರನು. ಆನಂದ ಪೂರ್ಣನು. ಅಚಿಂತ್ಯ ಮಹಿಮೆಯುಳ್ಳವನು. ಈ ಕಾರಣದಿಂದ ಜೀವರಿಗೂ ಪರಮಾತ್ಮನಿಗೂ ಭೇದ ಒಪ್ಪಿಕೊಳ್ಳಬೇಕು. ಜಡದಲ್ಲಿ ಕ್ರಿಯಾಶಕ್ತಿ ಇಲ್ಲವಾದುದರಿಂದ ಪರಮಾತ್ಮನು ಜಡದಿಂದ ಭಿನ್ನನೆಂದು ಒಪ್ಪಿಕೊಳ್ಳಬೇಕಾಯಿತು. ಜೀವ ಜಡಾದಿಗಳಲ್ಲಿ ಇಲ್ಲದಿರುವ ವಿಲಕ್ಷಣ ಧರ್ಮವು ಪರಮಾತ್ಮನಲ್ಲಿ ಇರುವುದರಿಂದ ವಿಲಕ್ಷಣನೆಂದು ಹೇಳಿದರು. ಲಕ್ಷ್ಮೀದೇವಿಯರು ಪರಮಾತ್ಮನಿಂದಲೂ, ಜಡರಿಂದಲೂ, ಚೇತನರಿಂದಲೂ ಸಹ ವಿಲಕ್ಷಣರಾಗಿರುವರು, ಬ್ರಹ್ಮಾದಿ ಜೀವರಂತೆ ಲಕ್ಷ್ಮೀದೇವಿಯರನ್ನು ಸಾಧಾರಣ ಜೀವರೆನ್ನುವುದಕ್ಕೆ ಬ್ರಹ್ಮಾದಿಗಳಿಗೆ ಶರೀರ ಪ್ರಾಪ್ತಿ, ಶರೀರ ನಾಶಗಳುಂಟು. ರಮಾದೇವಿಯರಿಗೆ ಅದಿಲ್ಲ. ಪ್ರಳಯಕಾಲದಲ್ಲಿ ಕೂಡ ಇದ್ದೇ ಇರುವರು. ಆದುದರಿಂದ ಅವರು ಜೀವವಿಲಕ್ಷಣರೆಂದು ಹೇಳಬೇಕಾಯಿತು. ಜಗತ್ಸೃಷ್ಟಿಗೆ ಕಾರಣರೂಪರಾಗಿ ಜಡಪ್ರಕೃತಿ ರೂಪರಾಗಿದ್ದರೂ ಜಡಸೃಷ್ಟಿಗಾಗಿ ಜಡರೂಪವನ್ನು ಸ್ವೀಕರಿಸುವರೇ ಹೊರತು ತಾವು ಜಡರಲ್ಲ. ಏಕೆಂದರೆ ಬ್ರಹ್ಮಾದಿಗಳನ್ನು ಸೃಷ್ಟಿಮಾಡುವಾಗ ಚೇತನ ಸ್ವರೂಪದಿಂದಲೇ ಇರುವರು, ಚೇತನರಿಗೆ ಕ್ರಿಯಾಶಕ್ತಿ ಇರುವುದರಿಂದ ಸಾಮರ್ಥ್ಯವುಳ್ಳವರು, ಜಡಚೇತನಾದಿ

ರೂಪಗಳನ್ನು ಧರಿಸಬಹುದು. ಬರೀ ಜಡವು ಮಾತ್ರವೆಂದಿಗೂ ಚೇತನವಾಗದು. ಆದುದರಿಂದ ಲಕ್ಷ್ಮೀದೇವಿಯರು ಜಡದಿಂದ ಭಿನ್ನರೆಂದು ಹೇಳಬೇಕಾಯಿತು. ಪರಮಾತ್ಮನಂತೆ ಪ್ರಳಯಕಾಲದಲ್ಲಿಯೂ ಸಹ ನಾಶವಿಲ್ಲದ ಶರೀರ ಉಳ್ಳವಳಾದಕಾರಣ ಪರಮಾತ್ಮನೇ ಲಕ್ಷ್ಮೀಸ್ವರೂಪವೆಂದು ಹೇಳುವುದೆಂದರೆ ಪ್ರಳಯಕಾಲದಲ್ಲಾದರೂ ಪರಮಾತ್ಮನ ಅಧೀನರಾಗಿ ಅಸ್ವತಂತ್ರರಾಗಿಯೇ ಇರುವರು. ಆದುದರಿಂದ ಪರಮಾತ್ಮನಿಂದ ಭಿನ್ನರಾದರು. ಈ ವಿಲಕ್ಷಣವನ್ನು ದಾಸರಾಯರು ತೋರಿಸುತ್ತಾರೆ. "ಸಾವಧಿಕ ಸಮಶೂನ್ಯಳೆಂದು" ಇಷ್ಟೆಂದು ಅವಧಿಯುಳ್ಳ ಅಂದರೆ ಪರಿಮಿತಿಯುಳ್ಳ ಗುಣಾದಿಗಳಿಂದ ಕೂಡಿದವರಾಗಿ, ಸಮರಹಿತರಾಗಿರುವರು. ಅಂದರೆ ಪರಮಾತ್ಮನಿಗಿಂತಲೂ ಕಡಿಮೆಯಾಗಿರುವರು. ಬ್ರಹ್ಮಾದಿಗಳಿಗಿಂತಲೂ ಉತ್ತಮರು. ಈಕೆಗೆ ಸಮರಾದವರು ಮತ್ತಾರೂ ಇಲ್ಲ. ಹೀಗೆ ಲಕ್ಷ್ಮೀ ನಾರಾಯಣರು ಲೋಕವಿಲಕ್ಷಣರೆಂದು ಉಪಾಸನೆ ಮಾಡಬೇಕೆಂದು ತಾತ್ಪರ್ಯ,

**ಆದಿತೇಯರು ತಿಳಿಯದಿಹ ಗುಣ**
**ವೇದ ಮಾನಿಗಳೆಂದೆನಿಪ ವಾ**
**ಣ್ಯಾದಿಗಳು ಬಲ್ಲರವರರಿಯದ ಗುಣಗಣಂಗಳನು ||**
**ವೇಧ ಬಲ್ಲನು ಬೊಮ್ಮನರಿಯದ**
**ಗಾಧ ಗುಣಗಳು ಲಕುಮಿ ಬಲ್ಲಳು**
**ಶ್ರೀಧರೊಬ್ಬನು ಪಾಸ್ಯ ಸದ್ಗುಣಪೂರ್ಣ ಹರಿಯೆಂದು || ೩೦ ||**

ಪದ್ಯಾರ್ಥ :—ಆದಿತೇಯರು=ದೇವತೆಗಳು, ತಿಳಿಯದಿಹ=ತಿಳಿಯದಿರುವ, ಗುಣ=ಪರಮಾತ್ಮನ ಗುಣಗಣಗಳನ್ನು, ವೇದಮಾನಿಗಳೆಂದೆನಿಪ=ವೇದಾಭಿಮಾನಿಗಳೆಂದೆನಿಸುವ, ವಾಣ್ಯಾದಿಗಳು=ಸರಸ್ವತೀ ಭಾರತಿಯರು ಬಲ್ಲರು, ಅವರರಿಯದ=ಸರಸ್ವತಿ, ಭಾರತಿದೇವಿಯರು ತಿಳಿಯದ, ಗುಣಗಣಂಗಳನು, ವೇಧ=ಬ್ರಹ್ಮದೇವರು, ಬಲ್ಲನು=ತಿಳಿದಿರುವರು, ಬೊಮ್ಮನರಿಯದ=ಬ್ರಹ್ಮದೇವರಿಗೆ ತಿಳಿಯದ, ಅಗಾಧ ಗುಣಗಳು=ಅಪಾರವಾದ ಗುಣಗಳನ್ನೂ, ಮತ್ತು ಶ್ರೀಧರ=ಲಕ್ಷ್ಮೀದೇವಿಯರನ್ನು ವಕ್ಷಸ್ಥಲದಲ್ಲಿ ಧರಿಸಿದ, ಸದ್ಗುಣಪೂರ್ಣ=ಉತ್ಕೃಷ್ಟವಾದ ಗುಣಪೂರ್ಣನಾದ, ಹರಿ=ದುರಿತನಿವರ್ತಕನಾದ ಪರಮಾತ್ಮನು, ಒಬ್ಬನು=ಒಬ್ಬನೇ, ಉಪಾಸ್ಯನೆಂದು=ರಮಾಬ್ರಹ್ಮಾದಿ ಸಕಲ ದೇವತೆಗಳಿಂದಲೂ ಉಪಾಸ್ಯನೆಂತಲೂ, ಲಕುಮಿ=ಲಕ್ಷ್ಮೀದೇವಿಯರು, ಬಲ್ಲಳು=ತಿಳಿದಿರುವರು.

ತಾತ್ಪರ್ಯ :—ಮುಂದಿನ ಮೂರು ಪದ್ಯಗಳಿಂದ ಲಕ್ಷ್ಮೀದೇವಿಯರ ಮಹಾಮಹಿಮೆಯನ್ನು ಹೇಳಿ ಅಂತಹ ರಮಾದೇವಿಯರು ಪರಮಾತ್ಮನ ಅಪಾರಗುಣಗಳನ್ನು ಇನ್ನೂ ಹುಡುಕುತ್ತಿರುವರು ಎಂಬ ವಚನಗಳಿಂದ ವಿಶೇಷವಾದ ಭಗವನ್ಮಹಿಮೆಯನ್ನು ಹೇಳುತ್ತಾರೆ.

ರುದ್ರಾದಿ ದೇವತೆಗಳು ತಿಳಿಯುವ ಭಗವನ್ಮಹಿಮೆಯನ್ನು ವೇದಾಭಿಮಾನಿಗಳೆಂದು ಪ್ರಸಿದ್ಧರಾದ ಸರಸ್ವತೀ, ಭಾರತೀ ದೇವಿಯರು ಬಲ್ಲರು. ಅವರು ಕಾಣದ ಗುಣಗಣಗಳನ್ನು ಬ್ರಹ್ಮದೇವರು ಬಲ್ಲರು. ಬ್ರಹ್ಮದೇವರಿಗೂ ಗೋಚರವಾಗದ ಮಹಾ ಮಹಿಮೆಗಳನ್ನೂ ಲಕ್ಷ್ಮೀದೇವಿಯರು ಬಲ್ಲರು. ಆ ಗುಣಗಳು ಎಂತಹವೆಂದರೆ ಶ್ರೀವತ್ಸದಲ್ಲಿ ಲಕ್ಷ್ಮೀದೇವಿಯರನ್ನು ಧರಿಸಿರುವನು. ಸರ್ವಸದ್ಗುಣ ಪೂರ್ಣನು, ದುರಿತಹರನಾಮುದರಿದ ಹರಿ-ಶಬ್ದ-ವಾಚ್ಯನು. ಇಂತಹ ಪರಮಾತ್ಮನೊಬ್ಬನೇ ಸಕಲ ಜನರಿಂದಲೂ ಉಪಾಸ್ಯನು-ಎಂಬ ಇವೇ ಮೊದಲಾದುವು.

**ಇಂತನಂತಾನಂತ ಗುಣಗಳ**
**ಪ್ರಾಂತಗಾಣದೆ ಮಹಲಕುಮಿ ಭಗ**
**ವಂತ ಗಾಭರಣಾಯುಧಾಂಬರ ಮಾಲಯಗಳಾಗಿ ||**
**ಸ್ವಾಂತದಲಿ ನೆಲೆಗೊಳಿಸಿ ಪರಮದು**
**ರಂತ ಮಹಿಮನ ದೌತ್ಯಕರ್ಮನಿ**
**ರಂತರದಿ ಮಾಡುತಲಿ ತದಧೀನತ್ವ ಯೈದಿದಳು || ೩೧ ||**

ಪದ್ಯಾರ್ಥ :— ಇಂತು=ಈ ಪ್ರಕಾರ, ಅನಂತಾನಂತ ಗುಣಗಳ, ಪ್ರಾಂತಗಾಣದೆ=ಕೊನೆ ಕಾಣದೆ, ಮಹಾಲಕುಮಿ=ಮಹಾ ಲಕ್ಷ್ಮೀದೇಯರು, ಭಗವಂತಗೆ=ಪರಮಾತ್ಮನಿಗೆ, ಆಭರಣ=ಕೌಸ್ತುಭಾದ್ಯಾಭರಣ ರೂಪಿಯರಾಗಿಯೂ, ಆಯುಧ=ಧನುಸ್ಸೇ ಮೊದಲಾದ ಆಯುಧ ರೂಪಿಯರಾಗಿಯೂ, ಅಂಬರ=ವಸ್ತ್ರರೂಪಿಯರಾಗಿಯೂ, ಆಲಯಗಳಾಗಿ=ಮನೆಯಾಗಿಯೂ ಆಗಿ, ಸ್ವಾಂತದಲಿ-ಸ್ವ=ತನ್ನ, ಅಂತದಲಿ=ಅಂತರಂಗದಲ್ಲಿ (ಮನಸ್ಸಿನಲ್ಲಿ), ನೆಲೆಗೊಳಿಸಿ=ಸ್ಥಿರವಾಗಿ ಭಗವದ್ರೂಪವನ್ನು ನಿಲ್ಲಿಸಿಕೊಂಡು, ಪರಮ ದುರಂತಮಹಿಮನ=ಉತ್ಕೃಷ್ಟವಾಗಿಯೂ ಮತ್ತು ಕೊನೆಕಾಣದೆಯೂ ಇರುವ ಮಹಿಮೆಯುಳ್ಳ ಪರಮಾತ್ಮನ, ದೌತ್ಯಕರ್ಮ=ದಾಸ

ಕರ್ಮಗಳನ್ನು, ನಿರಂತರದಿ=ನಿತ್ಯದಲ್ಲಿಯೂ ಮಾಡುತಲಿ, ತದಧೀನತ್ವ= ಪರಮಾತ್ಮನ ಅಧೀನಳಾಗಿರುವಿಕೆಯನ್ನು, ಯ್ದೈದಿದಳು=ಹೊಂದಿದಳು,

ತಾತ್ಪರ್ಯ :—ಮೇಲಿನ ಪದ್ಯದಲ್ಲಿ ರಮಾದೇವಿಯರು ಬ್ರಹ್ಮಾದಿಗಳು ಕಾಣದ ಭಗವನ್ಮಹಿಮೆಯನ್ನು ಬಲ್ಲರು ಎಂದು ಹೇಳಿದ್ದರಿಂದ ಭಗವನ್ಮಹಿಮೆಯೆಲ್ಲವನ್ನೂ ಬಲ್ಲವರೆಂದು ಸಂಶಯ ಬಂದೀತೆಂದು ದಾಸರಾಯರು ಅದನ್ನು ಪರಿಹರಿಸುತ್ತಾರೆ.

ಯದ್ಯಪಿ ಬ್ರಹ್ಮಾದಿಗಳಿಗಿಂತಲೂ ಹೆಚ್ಚಿಗೆ ಭಗವನ್ಮಹಿಮೆಯನ್ನು ರಮಾದೇವಿಯರು ಬಲ್ಲವರಾದರೂ ಪರಮಾತ್ಮನ ಅನಂತಾನಂತ ಗುಣಗಳನ್ನು ಕೊನೆಕಾಣದೆ ತಮ್ಮ ಮನಸ್ಸಿನಲಿ ಭಗವದ್ರೂಪವನ್ನು ಸ್ಥಿರವಾಗಿ ನಿಲ್ಲಿಸಿ ಅದ್ಯಾಪಿ ಗುಣಗಳನ್ನು ಹುಡುಕುತ್ತಿರುವರು, ಆದರೂ ಪಾರಗಾಣರು. ಅಂತಹ ಭಗವಂತನ ಸೇವಾ ಮಾಡುವುದಕ್ಕೆ ತಮ್ಮ ಒಂದೇ ರೂಪದಿಂದಲಾಗಲಿ, ಶ್ರೀ, ಭೂ, ದುರ್ಗಾದಿ ಮೂರು ರೂಪದಿಂದಲೂ ಸೇವಾ ಮಾಡುತ್ತಿದ್ದರೂ ತೃಪ್ತಿ ಇಲ್ಲದೆ, ವಸ್ತ್ರ, ಆಭರಣ, ಛತ್ರಚಾಮರಾದಿ ರೂಪಗಳನ್ನು ಧರಿಸಿ ಸೇವಾ ಮಾಡಿ ಪರಮಾತ್ಮನನ್ನು ಮೆಚ್ಚಿಸುತ್ತಿರುವರು. ಮತ್ತು ತಮಗೆ ಅನೇಕ ದಾಸಿಯರಿದ್ದರೂ ಸ್ವಯಂ ಭಗವಂತನ ಸೇವಾದಿಗಳನ್ನು ತಾವೇ ಮಾಡುತ್ತಿರುವರು. ಭಾಗವತ ತೃತೀಯಸ್ಕಂಧ, ೧೬ ನೆಯ ಅಧ್ಯಾಯ ಶ್ಲೋಕ ೨೧. " ಶ್ರೀರೂಪಿಣೀ ಕ್ವಣಯತೀ ಚರಣಾರವಿಂದಂ ನೀಲಾಂಬುಜೇನ ಹರಿಸಪ್ಲನಿ ಮುಕ್ತ ದೋಷಾ । ಸಂಲಕ್ಷ್ಯತೇಸ್ಫಟಿಕ ಕುಡ್ಯ ಉಪೇತ ಹೇಮ್ನಿ ಸಮ್ಮಾರ್ಜತೀಯದನುಗ್ರಹಣೇನ್ಯಯತ್ನಾಃ ॥" ವಿಜಯಧ್ವಜೀಯ ವ್ಯಾಖ್ಯಾನ ॥ ಅನ್ಯೇಷಾ ಮುಪಾಸಕಾನಾಂ ಅಸ್ಮಾದಾದೀನಾಂ ಉಪಾಸನಾದಿ ಪ್ರಯತ್ನಾಯಸ್ಯಾನುಗ್ರಹಣೇಽನುಗ್ರಹಾರ್ಥಂ ಸ್ಯುಃ ॥ ಇತರರಾದ ನಮ್ಮಂತಹವರು ಯಾವ ಲಕ್ಷ್ಮೀದೇವಿಯರ ಅನುಗ್ರಹವನ್ನು ಪಡೆಯುವುದಕ್ಕೋಸ್ಕರ ಲಕ್ಷ್ಮೀದೇವಿಯರನ್ನು ಉಪಾಸನೆ ಮಾಡುತ್ತಿರುವೆವೋ ಅಂತಹ ಜನನಾದಿ ದೋಷರಹಿತರಾದ ಲಕ್ಷ್ಮೀದೇವಿಯರು ತಮ್ಮ ದಿವ್ಯ ರೂಪದಿಂದ ಪರಮಾತ್ಮನ ಅಂತಃಪುರದಲ್ಲಿ ಚರಣಾರವಿಂದಗಳಲ್ಲಿ ಶೋಭಿಸುತ್ತಿರುವ ಕಾಲಂದಿಗೆಯ ಶಬ್ದವನ್ನುಂಟುಮಾಡುತ್ತ ನೀಲವರ್ಣವಾದ ಕಮಲ ಪುಷ್ಪಗಳಿಂದ ರಚಿಸಲ್ಪಟ್ಟ ಕಸ ಬಳಿಯಲು ಸಾಧನವಾದ ಸಮ್ಮಾರ್ಜನೆಯನ್ನು ಕೈಯಲ್ಲಿ ಹಿಡಿದು ಕಸ ಬಳಿಯುತ್ತಿರುವಂತೆ ಸುವರ್ಣ ಖಚಿತವಾದ ಸ್ಫಟಿಕವು

ಯವಾದ ಗೋಡೆಯಲ್ಲಿ ಪ್ರತಿಬಿಂಬಿತರಾಗಿ ಕಾಣುತ್ತಿರುವರು-ಎಂದು ಹೇಳಿ ರುವರು. ಇದಲ್ಲದೇ ಪುರಂದರ ದಾಸರಾಯರು ರಚಿಸಿರುವ "ಏನು ಧನ್ಯಳೋ ! ಲಕುಮಿ ಎಂಥ ಮಾನ್ಯಳೋ !...." ಎಂಬ ಪದದಲ್ಲಿ "ಛತ್ರ ಚಾಮರ ವ್ಯಜನಪರ್ಯಂಕ | ಪಾತ್ರರೂಪಳಾಗಿ ನಿಂತು | ಚಿತ್ರ ಚರಿತನಾದ ಹರಿಯ | ನಿತ್ಯಸೇವೆ ಮಾಡುತಿಹಳು || ಏನು ||" ಎಂದು ಹೇಳಿರುವರು. ಇದೇ ಅಭಿಪ್ರಾಯವನ್ನೇ ದಾಸರಾಯರು ಹೇಳಿರುತ್ತಾರೆ-'ದೌತ್ಯಕರ್ಮ ವನ್ನು ನಿತ್ಯದಲ್ಲೂ ಮಾಡುತ್ತಿರುವರು' ಎಂದು ದಾಸರಾಯರು ಹೇಳಿರುವರು. ದೂತ ಶಬ್ದವು ಒಂದು ಕಾರ್ಯಕ್ಕೋಸ್ಕರ ಮತ್ತೊಬ್ಬರಲ್ಲಿ ಕಳುಹಿಸಲ್ಪಡು ವವನಿಗೆ ಮಾತ್ರವೇ ಬರುವುದು. ಹನುಮಂತದೇವರನ್ನು ಸೀತೆಗೆ ಉಂಗು ರವನ್ನು ಕೊಟ್ಟು ಚೂಡಾಮಣಿಯನ್ನು ತರಲು ರಾಮದೇವರು ಕಳುಹಿಸಿದು ದರಿಂದಲೋ, ಅಥವಾ ರಾವಣನ ಸಮೀಪಕ್ಕೆ ಕಳುಹಿಸಿದ ನಿಮಿತ್ತದಿಂದಲೊ 'ಶ್ರೀರಾಮದೂತ'ನೆಂದು ಹನುಮಂತ ದೇವರಿಗೆ ಹೆಸರಾಯಿತು. ಶ್ರೀ ಕೃಷ್ಣನು ಪಾಂಡವರಿಗ ರಾಜ್ಯವನ್ನು ಕೊಡಿಸಿ ಕುರುಪಾಂಡವರ ಸಂಧಿಗೋ ಸ್ಕರ ದೌತ್ಯವನ್ನು ಮಾಡಿದರು. ಹಾಗೆ ಲಕ್ಷ್ಮೀದೇವಿಯರೂ ದೌತ್ಯಕರ್ಮ ವನ್ನು ಮಾಡಿದರೇನು ? ದೌತ್ಯಕರ್ಮವನ್ನು ಮಾಡಿದರೆಂದು ದಾಸರಾಯರು ಹೇಗೆ ಹೇಳಿದರೆಂದರೆ :—

ದಾಸ ದಾಸಿಯರಿಗೆ ದೌತ್ಯಕರ್ಮವು ಸಹಜವಾಗಿದ್ದೇ ಇರುವುದು, ದೌತ್ಯಕ್ಕೆ ಮಾತ್ರ ದಾಸ ದಾಸಿಯರೇ ಇರಬೇಕೆಂಬ ನಿಯಮವಿಲ್ಲ, ದಾಸರ ಲ್ಲದವರೂ ಸಹ ದೌತ್ಯವನ್ನು ಮಾಡಬಹುದು. ರಾಜಸೂಯ ಯಾಗದಲ್ಲಿ ಧರ್ಮರಾಜನಿಗೆ ನಾರದರು ದೌತ್ಯವನ್ನು ಮಾಡಿರುವರು. ಪಾಂಡವರಿಗೆ ಶ್ರೀ ಕೃಷ್ಣನು ದೌತ್ಯಮಾಡಿರುವನು. ದ್ರುಪದರಾಜನ ಪುರೋಹಿತರು ದೂತರಾಗಿ ಧೃತರಾಷ್ಟ್ರರಾಜನ ಸಮೀಪಕ್ಕೆ ಬಂದಿರುವರು. ಇವರೆಲ್ಲರೂ ದೌತ್ಯ ಕರ್ಮ ವನ್ನು ಮಾಡಿದ್ದರೂ ದಾಸರಾಗಿಲ್ಲ. ದಾಸದಾಸಿಯರಿಗೆ ಮಾತ್ರ ಮೇಲೆ ಹೇಳಿ ರುವಂತೆ ದೌತ್ಯವು ಸಹಜವಾಗಿ ಇದ್ದೇ ಇರುವುದು. ಕುರು ಪಾಂಡವ ನ್ಯಾಯದಂತೆ ಕುರುವಂಶದಲ್ಲೇ ಪಾಂಡವರು ಹುಟ್ಟಿರುವರು. ಆದ್ದರಿಂದ ಕೌರವ ಶಬ್ದವು ಪಾಂಡವರಲ್ಲಿದ್ದರೂ ಅವರ ಮಹಿಮೆಯಿಂದ ಕೌರವರೆಲ್ಲ ರನ್ನೂ ಒಟ್ಟುಕೂಡಿಸಿ ಪಾಂಡುರಾಯನ ಮಕ್ಕಳಾದ ಪಾಂಡವರನ್ನು ಮಾತ್ರ ಕೌರವರ ದೆಸೆಯಿಂದ ಬೇರ್ಪಡಿಸಿದರು. ಕೌರವ ಶಬ್ದ ಮಾತ್ರ ಪಾಂಡವರಲ್ಲಿ

ಬರುವುದೇ ಹೊರತು ಪಾಂಡವ ಶಬ್ದವು ಕೌರವರಿಗೆ ಹೇಗೆ ಬಾರದೋ ಹಾಗೆ ದೂತಿ ಎಂದು ದಾಸಿಯರಿಗೆ ಹೇಳಬಹುದೇಆಗಲಿ ದೂತಿಯನ್ನು ಮಾತ್ರ ದಾಸಿ ಎಂದು ಕರೆಯಲು ಸಾಧ್ಯವಲ್ಲ. ಆದರೆ ರಮಾದೇವಿಯರನ್ನು ಪರಮಾತ್ಮನಿಗೆ ದಾಸಿಯೆಂದೇ ಹೇಳಬೇಕಾಗಿತ್ತು. ದೌತ್ಯ ಕರ್ಮ ಮಾಡುತ್ತಿದ್ದರೆಂದೇಕೆ ಹೇಳಿದರೆಂದರೆ ಸಾಧಾರಣವಾಗಿ ಸಂಬಳಕ್ಕೆ ಇರುವ ದಾಸಿಯರು ಹೊರಗಿನ ಸಾಮಾನ್ಯ ಕೆಲಸವನ್ನು ಮಾಡುವರೇ ಹೊರತು ಅಂತರಂಗಕ್ಕೆ ಸೇರಿದ ದೌತ್ಯಾದಿ ಕರ್ಮವನ್ನು ಅವರಿಂದ ಯಾರೂ ಮಾಡಿಸುವುದಿಲ್ಲ. ಆದುದರಿಂದಲೇ ರಾಜಕನ್ಯೆಯರು ತಮ್ಮಲ್ಲಿ ಸರಿಯಾದದಾಸಿಯರಿಲ್ಲದಿದ್ದರೆ ತಮ್ಮ ಗೆಳತಿಯರನ್ನೇ ದೌತ್ಯವಿಷಯದಲ್ಲಿ ಕಳುಹಿಸುವ ಸಂಪ್ರದಾಯವಿತ್ತು. ಆದುದರಿಂದ ಕೇವಲ ಅಂತರಂಗಕ್ಕೆ ಸೇರಿದವರೇ ದೌತ್ಯಕರ್ಮಕ್ಕೆ ಯೋಗ್ಯರು. ಆದುದರಿಂದ ರಮಾದೇವಿಯರು ಪರಮಾತ್ಮನ ಕೇವಲ ಅಂತರಂಗ ದಾಸಿಯರಾಗಿದ್ದರೆಂಬುದನ್ನು ತೋರಿಸುವುದಕ್ಕಾಗಿ 'ದೌತ್ಯಕರ್ಮ' ವನ್ನು ಎಂದು ಹೇಳಿದರೆಂದು ತಿಳಿಯಬೇಕು. ಹೀಗೆ ಭಗವಂತನ ಅಧೀನರಾಗಿ ಭಗವದನುಗ್ರಹದಿಂದಲೇ ಭಗವನ್ಮಹಿಮೆಗಳನ್ನು ಬ್ರಹ್ಮಾದಿಗಳಿಗಿಂತಲೂ ಹೆಚ್ಚಾಗಿ ತಮ್ಮ ಯೋಗ್ಯತಾನುಸಾರವಾಗಿ ಬಲ್ಲರೆಂದು ತಾತ್ಪರ್ಯ.

**ಪ್ರಳಯ ಜಲಧಿಯೊಳುಳ್ಳ ನಾವೆಯು**
**ಹೊಲಬು ಕಾಣದೆ ಸುತ್ತುವಂದದಿ**
**ಜಲರುಹೇಕ್ಷಣನಮಲ ಗುಣರೂಪಗಳ ಚಿಂತಿಸುತ ||**
**ನೆಲೆಯಗಾಣದೆ ಮಹಾಲಕುಮಿ ಚಂ**
**ಚಲವನೈದಿಹಳಲ್ಪ ಜೀವರಿ**
**ಗಳವಡುವುದೇನಿವನ ಮಹಿಮೆಗಳೀ ಜಗತ್ರಯದಿ || ೩೨ ||**

ಪದ್ಯಾರ್ಥ :—ಪ್ರಳಯ ಜಲಧಿಯೊಳುಳ್ಳ=ಪ್ರಳಯ ಸಮುದ್ರದಲ್ಲಿರುವ, ನಾವೆಯು=ಹಡಗು, ಹೊಲಬುಗಾಣದೆ=ದಡವನ್ನು ಕಾಣದೆ, ಸುತ್ತುವಂದದಿ=ಸುತ್ತುತ್ತಿರುವಂತೆ, ಜಲರುಹೇಕ್ಷಣನ=ಕಮಲ ನೇತ್ರನಾದ ಶ್ರೀಹರಿಯ, ಅಮಲಗುಣ ರೂಪಗಳ=ನಿರ್ದುಷ್ಟವಾದ ಗುಣರೂಪಗಳನ್ನು ಚಿಂತಿಸುತ, ನೆಲೆಯಗಾಣದೆ=ಪಾರಗಾಣದೆ, ಮಹಾಲಕುಮಿ=ಮಹಾ ಲಕ್ಷ್ಮೀದೇವಿಯರು, ಚಂಚಲವನು=ಚಾಂಚಲ್ಯವನ್ನು, ಯ್ಯೈದಿದಳು=ಹೊಂದಿದರು ಹೀಗೆ ಇರುವಲ್ಲಿ, ಈ ಜಗತ್ರಯದಿ=ಈ ಮೂರು ಲೋಕಗಳಲ್ಲೂ (ಅಂದರೆ

**ಕೆಳಗಿನ ಪಾತಾಳಾದಿ ಲೋಕಗಳು ಮೇಲಿನ ಸ್ವರ್ಗಾದಿ ಲೋಕಗಳು** ಮಧ್ಯದ ಭೂಲೋಕವು-ಹೀಗೆ ಮೂರು ಲೋಕವೆಂದರ್ಥ.) ಇವನ ಮಹಿಮೆ ಗಳು=ಈ ಪರಮಾತ್ಮನ ಮಹಿಮೆಗಳು, ಅಲ್ಪ ಜೀವರಿಗೆ=ಸಾಮಾನ್ಯ ಜೀವ ರಿಗೆ, ಅಳವಡುವದೇನು ? = ಇಷ್ಟೆಂದು ನಿಶ್ಚಯಮಾಡಲು ಸಾಧ್ಯವೇ ? (ಎಂದಿಗೂ ಆಗಲಾರದೆಂಬ ಭಾವ)

ತಾತ್ಪರ್ಯ :— ಭಗವಂತನ ಗುಣರೂಪಾದಿ ಮಹಿಮೆಗಳನ್ನು ಸಾಕ ಲ್ಯೇನ ತಿಳಿಯಲು ಯಾರಿಗೂ ಸಾಧ್ಯವಲ್ಲವೆಂಬ ವಿಷಯವನ್ನು ಸದೃಷ್ಟಾಂತ ವಾಗಿ ಕೈಮುತ್ಯ ನ್ಯಾಯದಿಂದಲೂ ತಿಳಿಸುತ್ತಾರೆ:—(ಕೈ ಮುತ್ಯ ನ್ಯಾಯ ವೆಂದರೆ " ಮಹಾ ಗಜಗಳೆಲ್ಲಾ ಗಾಳಿಗೆ ಹಾರುತ್ತಿರುವಾಗ ಗುಂಗಾಡಿನ ಹೆಸರೆಲ್ಲಿ ' ಎಂಬ ಗಾದೆಯಂತೆ ಇಂತಿಂಥಾ ಮಹಾತ್ಮರ ಪಾಡೆಲ್ಲ ಹೀಗಾದ ಮೇಲೆ ಇನ್ನು ಅಲ್ಪರ ಪಾಡನ್ನು ಕೇಳುವುದೇನು-ಎಂದು ಸ್ಥಾಪಿಸುವುದಕ್ಕೆ ಕೈಮುತ್ಯನ್ಯಾಯವೆಂದು ಹೆಸರು).

ಜಗತ್ತೆಲ್ಲವೂ ಪ್ರಳಯೋದಕದಲ್ಲಿ ಮುಣುಗಿರುವಾಗ ಅದರಲ್ಲಿ ಒಂದು ಹಡಗು ಮಾತ್ರವಿದ್ದರೆ ಆ ಹಡಗು ದಡವನ್ನು ಕಾಣದೆ ಹೇಗೆ ನೀರಿನಲ್ಲಿಯೇ ಇಲ್ಲಿಂದಲ್ಲಿಗೆ ಸುತ್ತುತ್ತಿರುವುದೋ ಅದರಂತೆಯೇ ಮಹಾಲಕ್ಷ್ಮೀದೇವಿ ಯವರು ಪರಮಾತ್ಮನ ಅಪಾರವಾದ ಗುಣರೂಪರಾಶಿಗಳನ್ನು ಕೊನೆಕಾಣದೆ ಅದರಲ್ಲೇ ಲೋಲಾಡುತ್ತಾ ಚಾಂಚಲ್ಯವನ್ನು ಹೊಂದಿರುವರು. ಅಂದ ಮೇಲೆ ಇನ್ನು ಸಾಮಾನ್ಯರಾದ ಇತರ ಜೀವರು ಪರಮಾತ್ಮನ ಗುಣಾದಿ ಮಹಿ ಮೆಗಳನ್ನು ತಿಳಿಯುವುದೆಂತು ? ॥ ೨೨ ॥

**ಶ್ರೀನಿಕೇತನ ಸಾತ್ವತಾಂಪತಿ**
**ಜ್ಞಾನ ಗಮ್ಯ ಗಯಾ ಸುರಾರ್ದನ**
**ಮೌನಿಕುಲ ಸಮ್ಮಾನ್ಯ ಮಾನದ ಮಾತುಳಧ್ವಂಸೀ ॥**
**ದೀನ ಜನಮಂದಾರ ಮಧುರಿಪು**
**ಪ್ರಾಣದ ಜಗನ್ನಾಥ ವಿಠ್ಠಲ**
**ತಾನೆಗತಿಯೆಂಬನುದಿನದಿ ನಂಬಿದವರನು ಪೊರೆವ ॥ ೩೩ ॥**

ಪದ್ಯಾರ್ಥ :—ಶ್ರೀನಿಕೇತನ=ಲಕ್ಷ್ಮೀದೇವಿಯರಿಗೆ ಮನೆಯಂತಿರುವ ಅಂದರೆ ಲಕ್ಷ್ಮೀದೇವಿಯರನ್ನು ವಕ್ಷಸ್ಥಳದಲ್ಲಿ ಸದಾ ಧರಿಸಿಕೊಂಡಿರುವ, ಸಾತ್ವತಾಂಪತಿ=ಸಾತ್ವತ ಕುಲದ ಸ್ವಾಮಿಯಾದ ಅಥವಾ ಸಜ್ಜನರ ಸ್ವಾಮಿ

**ಯಾದ, ಜ್ಞಾನಗಮ್ಯ** = ಜ್ಞಾನದಿಂದಲೇ ಹೊಂದಲು ಶಕ್ಯನಾದ, **ಗಯಾಸುರಾರ್ದನ** = ಗಯಾ ಎಂಬ ದೈತ್ಯನನ್ನು ಸಂಹಾರಮಾಡಿದ, **ಮೌನಿಕುಲ ಸನ್ಮಾನ್ಯ** = ಋಷಿಕುಲದಿಂದ ಬಹುಮಾನವನ್ನು ಹೊಂದಿರುವ, **ಮಾನದ** = ತನ್ನ ಭಕ್ತರಿಗೆ ತಕ್ಕ ಗೌರವವನ್ನು ಕೊಡಿಸುತ್ತಿರುವ, **ಮಾತುಳಧ್ವಂಸಿ** = ಸೋದರಮಾವನಾದ ಕಂಸನನ್ನು ಕೊಂದ, **ದೀನಜನಮಂದಾರ** = ದೀನರಾದ ಭಕ್ತರಿಗೆ ಕಲ್ಪವೃಕ್ಷದಂತಿರುವ, **ಮಧುರಿಪು** = ಮಧು ಎಂಬ ರಾಕ್ಷಸನನ್ನು ಸಂಹರಿಸಿದ, **ಪ್ರಾಣದ** = ಸಕಲರಿಗೂ ಪ್ರಾಣವನ್ನಿತ್ತು ರಕ್ಷಿಸುವ, **ಜಗನ್ನಾಥ ವಿಠ್ಠಲ** = (ದಾಸರಾಯರ ಬಿಂಬರೂಪಿಯಾದ) ಜಗನ್ನಾಥವಿಠ್ಠಲನಾಮಕನಾದ ಶ್ರೀ ಪರಮಾತ್ಮನು, **ತಾನೇ ಗತಿಯೆಂದು** = ಪರಮಾತ್ಮನೇ ಗತಿ ಎಂಬದಾಗಿ, **ಅನುದಿನದಿ** = ಪ್ರತಿದಿವಸದಲ್ಲಿಯೂ, **ನಂಬಿದವರನು, ಪೊರೆವ** = ರಕ್ಷಿಸುವನು.

**ತಾತ್ಪರ್ಯ** :— ಸಂಧಿಯನ್ನು ಸಮಾಪನಮಾಡುತ್ತಾ ಪರಮಾತ್ಮನನ್ನು ಸ್ತುತಿಸಿ, ಇಂತಹ ಪರಮಾತ್ಮನನ್ನು ನಂಬಿದವರನ್ನು ಶ್ರೀ ಹರಿಯು ಸಂರಕ್ಷಿಸುವನೆಂದು ಹೇಳುತ್ತಾರೆ :—ಶ್ರೀ ಲಕ್ಷ್ಮೀದೇವಿಯರನ್ನು ಸರ್ವದಾ ವಕ್ಷಸ್ಥಳದಲ್ಲಿಟ್ಟುಕೊಂಡಿರುವುದರಿಂದ ಶ್ರೀನಿಕೇತನನೆಂಬ ಹೆಸರುಳ್ಳವನು. ಯಾದವ ಕುಲಕ್ಕೆ ಸೇರಿದ ಸಾತ್ವತಕುಲದಲ್ಲಿ ಅವತಾರಮಾಡಿದುದರಿಂದ ಸಾತ್ವತಾಂಪತಿ ಎಂದು ಹೆಸರು. ಅಥವಾ ಸಾಧುಜನರಿಗೆ ಸ್ವಾಮಿಯಾದುದರಿಂದಲೂ ಸಾತ್ವತಾಂಪತಿ ಎಂದು ಹೆಸರು. ಪರಮಾತ್ಮನನ್ನು ಸೇರಬೇಕಾದರೆ ಜ್ಞಾನದಿಂದಲೇ ಸಾಧ್ಯವಾದುದರಿಂದ ಜ್ಞಾನಗಮ್ಯನೆಂದರು. ಗಯಾ ಎಂಬ ಅಸುರನನ್ನು ಸಂಹರಿಸಿ ಪುಣ್ಯಕರವಾದ ಗಯಾಕ್ಷೇತ್ರವನ್ನು ರಚಿಸಿದವನು, ಮುನಿಕುಲ ಜನದಿಂದ ಸನ್ಮಾನವನ್ನು ಹೊಂದುವವನು. ತಾನು ಈ ಋಷ್ಯಾದಿಗಳಿಗೆ ಮರ್ಯಾದಾರ್ಥವಾಗಿ ಸನ್ಮಾನವನ್ನು ಮಾಡುವನು. ತನ್ನ ಸೋದರಮಾವನಾದ ಕಂಸನನ್ನು ಸಂಹರಿಸಿ ಯಾದವರನ್ನು ಕಾಯ್ದವನು. ದೀನಜನರಿಗೆ ಕಲ್ಪವೃಕ್ಷದಂತೆ ಇರುವನು. ಮಧು ಎಂಬ ಮಹಾ ದೈತ್ಯನನ್ನು ಕೊಂದವನು. ಸರ್ವರಿಗೂ ಪ್ರಾಣದಾತನು. ಇಂತಹ ಬಿಂಬರೂಪಿಯಾದ ಶ್ರೀ ಜಗನ್ನಾಥ ವಿಠ್ಠಲನನ್ನು 'ನೀನೇ ಗತಿ' ಎಂದು ಯಾರು ದೃಢವಾಗಿ ನಂಬಿರುವರೋ ಅವರನ್ನು ಸ್ವಾಮಿಯು ಸಂರಕ್ಷಣೆ ಮಾಡಲೇಮಾಡುವನು ॥ ೩೩ ॥

ಇಲ್ಲಿಗೆ ೭ ನೆಯ ಸಂಧಿಯು ಸಮಾಪ್ತವಾದುದು.

——o——

## ೮ನೆಯ ಮಾತೃಕಾಸಂಧಿ

**ಪಾದಮಾನಿಜಯಂತನೊಳಗೆ ಸು**
**ಮೇಧನಾಮಕನಿಪ್ಪ ದಕ್ಷಿಣ**
**ಪಾದದುಂಗುಟದಲ್ಲಿ ಪವನನು ಭಾರಭೃದ್ರೂಪಾ ||**
**ಕಾದುಕೊಂಡಿಹ ಟಂಕಿತರ ಮೊದ**
**ಲಾದ ನಾಮದಿ ಸಂಧಿಗಳಲೀ**
**ರೈದು ರೂಪದಲಿದ್ದು ಸಂತತ ನಡದು ನಡಿಸುತಲೀ || ೧ ||**

ಪದ್ಯಾರ್ಥ :— ಪಾದಮಾನಿ = ಪಾದಾಭಿಮಾನಿಯಾದ, ಜಯಂತನೊಳಗೆ, ಸುಮೇಧನಾಮಕ = ಸುಮೇಧನೆಂಬ ನಾಮವುಳ್ಳ ಪರಮಾತ್ಮನು, ಇಪ್ಪ= ಇರುವನು, ದಕ್ಷಿಣಪಾದದುಂಗುಟದಲ್ಲಿ= ಬಲದಕಾಲಿನ ಹೆಬ್ಬೆರಳಿನಲ್ಲಿ ಪವನನು = ವಾಯುದೇವರು, ತದಂತರ್ಯಾಮಿಯಾಗಿ, ಭಾರಭೃದ್ರೂಪ= ಭಾರಭೃತ್ ಎಂಬ ಹೆಸರುಳ್ಳ ರೂಪದಿಂದ, ಕಾದುಕೊಂಡಿಹ = ಕಾದು ಕೊಂಡಿರುವನು, ಟಂಕಿತರ ಮೊದಲಾದ= ಟಂಕೀತಾರ ಮೊದಲಾದ, ನಾಮದಿ = ಹೆಸರಿನಿಂದ, ಸಂಧಿಗಳು= ತೊಡೆಸಂಧಿ ಮೊದಲು ಪಾದಾಂಗುಷ್ಟದವರೆಗೂ ಇರುವ ಸಂಧಿಗಳಲ್ಲಿ, ಈರೈದು ರೂಪದಲಿದ್ದು= ೧೦ ರೂಪಗಳಿಂದ ಇದ್ದು, ನಡೆದು= ತಾನು ನಡೆಯುತ್ತಾ, ನಡೆಸುತಲಿ = ಜನರಿಂದಲೂ ಸಹ ನಡಿಸುತ್ತಾ ಇರುವನು || ೧ ||

ತಾತ್ಪರ್ಯ :— ಪೂರ್ವ ಸಂಧಿಗಳಲ್ಲಿ ಪಂಚಮಹಾಭೂತ ತನ್ಮಾತ್ರಾ ಗುಣಗಳಿಂದ ಯುಕ್ತವಾದ ಪಂಚಭೌತಿಕವಾದ ಶರೀರಾದಿಗಳಲ್ಲಿ ಭಗವದ್ರೂಪೊಪಾಸನಾಕ್ರಮವನ್ನು ಹೇಳಿ ಪೂರ್ವ ಸಂಧಿ ೧೧ ನೆಯ ಪದ್ಯದಲ್ಲಿ " ಏಕಪಂಚಾಶದ್ವರ್ಣಗತಮಾಕಳತ್ರನು " ಎಂದು ೫೧ ಅಕ್ಷರಗತ ಪರಮಾತ್ಮನು ಶರೀರದಲ್ಲಿರುವನೆಂದು ಸಂಕೋಚವಾಗಿ ಹೇಳಿದ್ದರು. ಈ ಸಂಧಿಯಲ್ಲಿ ೫೧ ಅಕ್ಷರಗತ ಭಗವದ್ರೂಪಗಳನ್ನು ತಂತ್ರಸಾರೋಕ್ತ ಮಾತೃಕಾನ್ಯಾಸಕ್ರಮದಿಂದ ಯಾವ ಯಾವ ಸ್ಥಾನಗಳಲ್ಲಿ ಚಿಂತಿಸಬೇಕೆಂಬ ವಿಷಯವನ್ನು ನಿರೂಪಿಸುತ್ತಾರೆ :—

ಪಾದಾಭಿಮಾನಿ ಜಯಂತನಲ್ಲಿ ಸುಮೇಧನಾಮಕನಾದ ಪರಮಾತ್ಮನು ಇರುವನು. ದಕ್ಷಿಣ ಪಾದದ (ಬಲದ ಕಾಲಿನ) ಹೆಬ್ಬೆರಳಿನಲ್ಲಿ ವಾಯುದೇವರು ಇರುವರು. ಅವರೊಳಗೆ ಭಾರಭೃತ್ ಎಂಬ ಹೆಸರಿನಿಂಹ ಪರಮಾ

ತ್ಮನಿರುವನು. ಈ ರೂಪಗಳು ೫೧ ಅಕ್ಷರಗಳಿಗೆ ಸಂಬಂಧಪಡದ ಬೇರೆ ರೂಪಗಳು. ಬಲದ ತೊಡೆಯ ಸಂಧಿ, ಮೊಣಕಾಲು ಸಂಧಿ, ಪಾದಗತ ಸಂಧಿ, ಬೆರಳುಗಳ ಸಂಧಿ, ಬೆರಳುಗಳ ಕೊನೆಯ ಭಾಗ ಈ ೫ ಸ್ಥಳಗಳಲ್ಲಿ ಟಂಕಿ ಮೊದಲಾದ ೫ ಅಂದರೆ ಮಾತೃಕಾನ್ಯಾಸಕ್ರಮದಲ್ಲಿ ಹೇಳಿದಂತೆ ಟಂಕಿ, ಠಕಲ, ಡರಕ, ಢರೀ, ಣಾತ್ಮ ಎಂಬ ೫ ರೂಪಗಳಿಂದಲೂ, ಇದರಂತೆ ಎಡಭಾಗದ ತೊಡೆಯ ಮೊದಲು ೫ ಸಂಧಿಗಳಲ್ಲಿ ತಾರ, ಥಪ, ದಂಡೀ, ಧನ್ವೀ, ನಮ್ಯ ಎಂಬ ೫ ರೂಪಗಳಿಂದಲೂ ಇದ್ದು ತಾನು ಆ ದೇಹಗತನಾಗಿ ನಡೆಯುತ್ತಾ ಮತ್ತು ಆ ದೇಹಿಗಳಿಂದಲೂ ನಡೆಯಿಸುತ್ತಾ ಇರುವನು || ೧ ||

**ಕಪಿಲ ಚಾರ್ವಂಗಾದಿ ರೂಪದಿ**
**ವಪುಗಳೊಳು ಹಸ್ತಗಳ ಸಂಧಿಯೊ**
**ಳಪರಿಮಿತ ಕರ್ಮಗಳ ಮಾಡುತಲಿಪ್ಪ ದಿನದಿನದಿ ||**
**ಕೃಪಣವತ್ಸಲ ಪಾರ್ಶ್ವದೊಳು ಪರ**
**ಸು ಫಲಿಯೆನಿಸುವ ಗುದ ಉಪಸ್ಥದಿ**
**ವಿಪುಳ ಬಲಿ ಭಗಮನವೆನಿಸಿ ತುಂದಿಯೊಳಗಿರುತಿಹನು || ೨ ||**

ಪದ್ಯಾರ್ಥ :— ಕಪಿಲಚಾರ್ವಂಗಾದಿ ರೂಪದಿ=ಕಪಿಲ, ಚಾರ್ವಂಗ ಮೊದಲಾದ ರೂಪಗಳಿಂದ, ಹಸ್ತಗಳ ಸಂಧಿಯೊಳು=ಬಲ ಎಡ ಕೈಗಳ ಸಂಧಿಗಳಲ್ಲಿ, ಇದ್ದು, ದಿನದಿನದಿ=ಪ್ರತಿದಿವಸದಲ್ಲೂ, ಅಪರಿಮಿತ—ಪರಿಮಿತಿಯಿಲ್ಲದ (ಲೆಖ್ಖವಿಲ್ಲದ) ಕರ್ಮಗಳ—ಕರ್ಮಗಳನ್ನು, ಮಾಡುತಲಿಪ್ಪ=ಮಾಡುತ್ತಿರುವನು, ಕೃಪಣವತ್ಸಲ=(ಭಕ್ತರಾಗಿದ್ದು ಜಿತೇಂದ್ರಿಯರಾಗದವರು ಕೃಪಣರು) ಅಂತಹ ಭಕ್ತರಲ್ಲಿ ವಾತ್ಸಲ್ಯವುಳ್ಳ, ಶ್ರೀ ಹರಿಯು, ಪಾರ್ಶ್ವದೊಳು=ಬಲ, ಎಡ ಪಾರ್ಶ್ವಗಳಲ್ಲಿ, ಪರಸುಫಲಿಯೆನಿಸುವ=ಪರ, ಮತ್ತು ಫಲಿ ಎಂಬ ಸುರೂಪಗಳಿಂದ ಇರುವನು, ಗುದ ಉಪಸ್ಥದಿ=ಗುದದಲ್ಲೂ, ಉಪಸ್ಥದಲ್ಲೂ, ವಿಪುಳ=ವ್ಯಾಪ್ತವಾದ, ಬಲಿ, ಭಗ ಎಂಬ ರೂಪಗಳಿಂದಿರುವನು, ಮನವೆನಿಸಿ=ಮನ ಎಂಬ ಹೆಸರಿನಿಂದ, ತುಂದಿಯೊಳಗೆ=ನಾಭಿಯ ಕೆಳಭಾಗದಲ್ಲಿ, ಇರುತಿಹನು=ಇರುತ್ತಿರುವನು || ೨ ||

**ತಾತ್ಪರ್ಯ** :— ಮೇಲಿನ ಪದ್ಯದಲ್ಲಿ ಟ, ಠ, ಡ, ಢ, ಣ, ತ, ಥ, ದ, ಧ, ನ-ಎಂಬ ೧೦ ಅಕ್ಷರಗಳ ಭಗವದ್ರೂಪಗಳ ಚಿಂತನಾಕ್ರಮವನ್ನು ಹೇಳಿದರು. ಈ ಪದ್ಯದಿಂದ ಕವರ್ಗ ಚವರ್ಗಾದಿಗಳ ಚಿಂತನಾಕ್ರಮವನ್ನು

ಹೇಳುತ್ತಾರೆ :— ಕ=ಕಪಿಲ, ಖ=ಖಪತಿ, ಗ=ಗರುಡ, ಘ=ಘರ್ಮ, ಙ=ಙಸಾರ ಎಂಬ ೫ ರೂಪಗಳನ್ನು ಬಲದ ಕೈ, ತೋಳು ಸಂಧಿ, ಮೊಣ ಕೈ ಸಂಧಿ, ಬೆರಳುಗಳಿಗೆ ಮೂಲ ಸಂಧಿ, ಬೆರಳು ಮಧ್ಯಗತ ಸಂಧಿ-ಹೀಗೆ ೫ ಸಂಧಿಗಳಲ್ಲಿ ಚಿಂತಿಸಬೇಕು. ಇದರಂತೆ ಚ=ಚಾರ್ವಂಗ, ಛ=ಛಂದೋ ಗಮ್ಯ, ಜ=ಜನಾರ್ದನ, ಝ=ಝಾಟಿತಾರಿ, ಞ=ಯಮ ಎಂಬ ೫ ರೂಪ ಗಳನ್ನು ಎಡಗೈ ೫ ಸಂಧಿಗಳಲ್ಲಿ ಚಿಂತಿಸಬೇಕು.

ಪವರ್ಗ ಸ್ಥಾನಗಳನ್ನು ಹೇಳುತ್ತಾರೆ :— ಕೃಪಣವತ್ಸಲನಾದ ಶ್ರೀ ಹರಿಯು ಪ=ಪರ ಎಂಬ ರೂಪದಿಂದಲೂ, ಫ=ಫಲಿ ಎಂಬ ರೂಪದಿಂದಲೂ ಎರಡು ಪಾರ್ಶ್ವಗಳಲ್ಲಿ ಇರುವನು. ಬ=ಬಲಿ, ಭ=ಭಗ ಎಂಬ ಈ ಎರಡು ರೂಪಗಳಿಂದ ಗುದ, ಉಪಸ್ಥ ಇವೆರಡು ಸ್ಥಾನಗಳಲ್ಲಿ ಇರುವನು. ಮ= ಮನು ಎಂಬ ರೂಪದಿಂದ ತುಂದದಲ್ಲಿ (ಅಂದರೆ ಹೊಕ್ಕಳಿಗೆ ಕೆಳಭಾಗದ ಹೊಟ್ಟೆಗೆ ಹೆಸರು. 'ತುಂದಂ ನಾಭೇರಧಃ ಪ್ರದೇಶಃ' ಎಂದು ತಂತ್ರ ಸಾರದ ೪ನೆಯ ಅಧ್ಯಾಯದ ವ್ಯಾಖ್ಯಾನದಲ್ಲಿ ಸ್ಪಷ್ಟಮಾಡಿರುವರು) ಇರು ವನು. ಈ ಪ್ರಕಾರ ಚಿಂತಿಸಬೇಕೆಂದು ತಾತ್ಪರ್ಯ || ೨ ||

**ಐದು ಮೇಲೊಂದಧಿಕ ದಳವು**
**ಳ್ಳೈದು ಪದ್ಮವು ನಾಭಿ ಮೂಲದಿ**
**ಯೈದು ಮೂರ್ತಿಗಳಿಹವು ಅನಿರುದ್ಧಾದಿ ನಾಮದಲಿ ||**
**ಯೈದುಸುತ ಗರ್ಭವನು ಜೀವರ**
**ನಾದಿ ಕರ್ಮ ಪ್ರಕೃತಿ ಗುಣಗಳ**
**ಹಾದಿ ತಪ್ಪಲಿ ಗೊಡದೆ ವ್ಯಾಪಾರಗಳ ಮಾಡುತಿಹ || ೨ ||**

ಪದ್ಯಾರ್ಥ :— ಐದು ಮೇಲೊಂದಧಿಕ ದಳವುಳ್ಳ=೬ ದಳಗಳುಳ್ಳ, ಐದು ಪದ್ಮವು=೫ ಪದ್ಮಗಳು, ನಾಭಿ=ನಾಭಿಯ, ಮೂಲದಿ=ಬುಡದ ಭಾಗದಲ್ಲಿ, ಐದು ಪದ್ಮಗಳು ಇರುವವು. ಇವುಗಳಲ್ಲಿ, ಅನಿರುದ್ಧಾದಿ ನಾಮ ದಲಿ=ಅನಿರುದ್ಧಾದಿ ಹೆಸರುಳ್ಳ ಐದು ಮೂರ್ತಿಗಳು, ಇಹವು=ಇರುವವು. ಜೀವರ=ಜೀವರುಗಳಿಗೆ, ಗರ್ಭವನು=ಗರ್ಭಸ್ಥಾನವನ್ನು, ಯೈದಿಸುತ= ಕೊಡಿಸುತ್ತ, ಅನಾದಿ ಕರ್ಮ=ಅನಾದಿ ಕರ್ಮಗಳನ್ನು, ಪ್ರಕೃತಿ ಗುಣಗಳ =ಪ್ರಕೃತಿ ಸಂಬಂಧವಾದ ಸತ್ವ ರಜಸ್ತಮೋ ಗುಣಗಳನ್ನು, ಹಾದಿ ತಪ್ಪಲಿ

ಗೊಡದೆ=ಯೋಗ್ಯತೆಯನ್ನು ಮೀರದಂತೆ, ವ್ಯಾಪಾರಗಳ ಮಾಡುತಿಹ= ಕರ್ಮಗಳನ್ನು ಮಾಡಿ ಮಾಡಿಸುತ್ತಿರುವನು.

ತಾತ್ಪರ್ಯ :— 'ಐದು ಮೇಲೊಂದಧಿಕ ದಳವುಳ್ಳೈದು ಪದ್ಮವು ನಾಭಿಮೂಲದಿ' ಎಂಬೀ ಪದ್ಯಕ್ಕೆ ಸಾಧಾರಣವಾಗಿ ನಾಭಿಮೂಲದಲ್ಲಿ ೬ ದಳ ಗಳುಳ್ಳ ೫ ಪದ್ಮಗಳು ಇರುವುವೆಂತಲೂ, ಅವುಗಳಲ್ಲಿ ಅನಿರುದ್ಧಾದಿ ೫ ರೂಪ ಗಳಿರುವುವೆಂತಲೂ ಅರ್ಥವಾಗುವುದು. ಮಾನಸಸ್ಮೃತಿ ಎಂಬ ಗ್ರಂಥದಲ್ಲಿ "ತತಸ್ಸುಷುಮ್ನಾ ಸಂಸಕ್ತಾ ನಾಭಿ ಸಂಸ್ಥೇಷು ಪಂಚಸು | ಷಟ್‌ದಳಾರುಣ ಪತ್ರೇಷು ಅನಿರುದ್ಧಾದಿಕಾನ್ ಸ್ಮರೇತ್ ||" ಎಂಬ ಪ್ರಮಾಣವು ಇದಕ್ಕೆ ಆಧಾರವಾಗಿರುವುದು. ಅಂದರೆ ತಂತ್ರಸಾರದಲ್ಲಿ ೪ ನೇ ಅಧ್ಯಾಯ ೧೬೦ ನೇ ಶ್ಲೋಕ "ಮೂಲಾಧಾರಂ ಸಮಾರಭ್ಯ ತ್ವಾಮೂರ್ಧಾನಮೃಜುಸ್ಥಿತಾ | ಮಧ್ಯೇಸುಷುಮ್ನಾ ವಿಜ್ಞೇಯಾ ವಜ್ರಿಕಾಽರ್ಯಾ ಪ್ರಕಾಶಿನಿ | ವೈದ್ಯುತಾ ಬ್ರ ಹ್ಮನಾಡೀತಿ ಸೈವ ಪಂಚಪ್ರಭೇದಿನಿ || ೧೬೧ || ಪೃಷ್ಟವಾಮಾಗ್ರದಕ್ಷಾಂತ ರ್ಭೇದಾಸ್ತ್ವೇಚ ಕ್ರಮೇಣತು | ಪ್ರದ್ಯುಮ್ನಾದಿ ಸ್ವರೂಪೇಣ ಧ್ಯೇಯಂ ಸಿದ್ಧಿ ಮಭೀಪ್ಸಿತಾ ||" ಇದರ ಛಲಾರಿ ವ್ಯಾಖ್ಯಾನದ ರೀತ್ಯಾ ಅರ್ಥ :— ಮಧ್ಯೇ=ಶರೀರ ಮಧ್ಯದಲ್ಲಿ, ಮೂಲಾಧಾರಂ' ಮೂಲಸ್ಯ=ವೃಷಣಕ್ಕೆ, ಆಧಾರಂ=ಅಧೋ ಭಾಗವನ್ನು, ಸಮಾರಭ್ಯ=ಆರಂಭಮಾಡಿ, ಆಮೂರ್ಧಾ ನಂ=ಶಿರಸ್ಸುವರೆಗೂ, ಋಜುಸ್ಥಿತಾ=ನೆಟ್ಟಗೆ ಇರುವುದು ಸುಷುಮ್ನಾನಾಡಿ ಯು.... ಇದರ ಅಭಿಪ್ರಾಯವೇನೆಂದರೆ ಗುದದ್ವಾರಕ್ಕೂ ವೃಷಣಕ್ಕೂ ಮಧ್ಯಪ್ರದೇಶದಲ್ಲಿ ಎರಡು ಅಂಗುಲ ದೀರ್ಘವಾಗಿಯೂ, ೪ ಅಂಗುಲ ವಿಸ್ತಾ ರವಾಗಿಯೂ ಇರುವ ವರ್ತುಳಾಕಾರವಾದ ಒಂದು ಗೆಡ್ಡೆಯು ಇರುವುದು. ಅದರಿಂದಲೇ ನಾಡಿಗಳು ಹುಟ್ಟಿರುವವು. ಸುಷುಮ್ನಾ ನಾಡಿಯು ಅಲ್ಲಿಂದಲೇ ಹುಟ್ಟಿದ್ದುದು. ಅದು ಒಂದೇ ನಾಡಿಯೇ ವಜ್ರಿಕಾ, ಆರ್ಯಾ, ಪ್ರಕಾಶಿನೀ, ವೈದ್ಯುತಾ, ಬ್ರಹ್ಮನಾಡೀ ಎಂಬ ೫ ಭೇದದಿಂದ ಕೂಡಿರುವುದು. ಒಂದಕ್ಕೆ ೫ ರೂಪಗಳು ಹೇಗೆಂದರೆ :—

ಇದೇ ಸುಷುಮ್ನಾ ನಾಡಿಯ ಹಿಂಬಾಗಕ್ಕೆ 'ವಜ್ರಿಕೆ' ಎಂದು ಹೆಸರು, ಎಡಭಾಗಕ್ಕೆ 'ಆರ್ಯಾ' ಎಂದು ಹೆಸರು. ಮುಂಭಾಗಕ್ಕೆ ಪ್ರಕಾಶಿನೀ, ಬಲಭಾಗಕ್ಕೆ 'ವೈದ್ಯುತಾ' ಎಂದು ಹೆಸರುಗಳು. ಮಧ್ಯಭಾಗಕ್ಕೆ 'ಬ್ರಹ್ಮ ನಾಡೀ' ಎಂದು ಹೆಸರು. ಈ ಐದು ಸ್ಥಾನಗಳಲ್ಲಿ ಕ್ರಮವಾಗಿ ಪ್ರದ್ಯುಮ್ನ,

ಅನಿರುದ್ಧ, ವಾಸುದೇವ, ಸಂಕರ್ಷಣ, ನಾರಾಯಣ ಸ್ವರೂಪವುಳ್ಳ ಪರಮಾತ್ಮನನ್ನು ಚಿಂತಿಸಬೇಕು.

'ಮೂಲೇಚನಾಭೌ ಹೃದಯೇಂದ್ರಿಯೋನಿ ಭ್ರೂಮಧ್ಯ ಮೂರ್ಧ್ನಿ ದ್ವಿಷಡಂತರಕೇಷು || ೧೬೩ || ಚತುರ್ದ್ವಿಷಷ್ಟಂ ದ್ವಿಚತುರ್ದ್ವಿಷಟ್ಕಂದಳೇಷುಪದ್ಮೇಷು ಸಿತಾರುಣೇಷು | ಪಂಚಾತ್ಮಕೋಸೌ ಭಗವಾನ್ಸದೈವ ಧ್ಯೇಯೋಹೃದಂತಾನ್ಯರುಣಾನಿತಾನಿ || ೧೬೪ || ಈ ಮಧ್ಯಗತ ಸುಷುಮ್ನಾನಾಡಿಯಲ್ಲಿ ಮೂಲದಲ್ಲೂ, ನಾಭಿ, ಹೃದಯ, ಇಂದ್ರಯೋನಿ, ಭ್ರೂಮಧ್ಯ, ಶಿರಸ್ಸು ಎಂಬ ೬ ಸ್ಥಳಗಳಲ್ಲಿ ೬ ಪದ್ಮಗಳುಂಟು. ಮೂಲ ಶಬ್ದಕ್ಕೆ ಮೇಲೆ ಅರ್ಥ ಬರೆದಿದೆ. ಅಲ್ಲಿ ಚತುರ್ದಳ ಕಮಲ ೧. ನಾಭಿಯಲ್ಲಿ ೬ ದಳಗಳುಳ್ಳ ಕಮಲ ೧, ಹೃದಯದಲ್ಲಿ ೮ ದಳಗಳುಳ್ಳ ಕಮಲ ೧. ಇಂದ್ರಯೋನಿ. ಅಂದರೆ ಕಿರುನಾಲಿಗೆ ಎಂದು ಕಂಠದಲ್ಲಿ ಜೋಲುತ್ತಿರುವುದು. ತೈತ್ತರೀಯ ಉಪನಿಷತ್ತಿನಲ್ಲಿ 'ಅಂತರೇಣ ತಾಳುಕೇಯ ಏಷಸ್ತನ ಇವಾವಲಂಬತೇ, ಸೇಂದ್ರಯೋನಿಃ' ಎಂದು ಇಂದ್ರಯೋನಿಯ ಲಕ್ಷಣವನ್ನು ಹೇಳಿರುವರು. ಅಂದರೆ ಗಂಟಲ ಮಧ್ಯದಲ್ಲಿ ಸ್ತನದಂತೆ ಜೋಲುತ್ತಿರುವುದು ಯಾವುದೋ ಅದೇ ಇಂದ್ರಯೋನಿ ಎಂದು ಹೇಳಿರುವರು. ಆ ಇಂದ್ರಯೋನಿಯಲ್ಲಿ ದ್ವಿದಳ ಕಮಲ ೧. ಹುಬ್ಬಿನ ಮಧ್ಯದಲ್ಲಿ ನಾಲ್ಕು ದಳಗಳುಳ್ಳ ಕಮಲ ೧. ಶಿರಸ್ಸಿನಿಂದ ೧೨ ಅಂಗುಲ ಪ್ರಮಾಣದ ಎತ್ತರ ಪ್ರದೇಶದಲ್ಲಿ ೧೨ ದಳ ಕಮಲ ೧. ಅಂತು ೬ ಕಮಲಗಳಿರುವವು. ಈ ಪದ್ಮಗಳು ಕೆಲವು ಬೆಳ್ಳಗೂ ಕೆಲವು ಕೆಂಪಗೂ ಇರುವವು. ಯಾವ ಪದ್ಮಗಳು ಬಿಳುಪು ? ಯಾವುದು ಕೆಂಪೆಂದರೆ 'ಹೃದಂತಾನ್ಯರುಣಾನಿ' ಮೂಲ, ನಾಭಿ, ಹೃದಯ, ಈ ಮೂರು ಕಮಲಗಳು ಕೆಂಪಗಿರುವವು. ಅವುಗಳಿಗೆ ಮೇಲಿನ ಪದ್ಮಗಳು ಮೂರೂ ಶುಕ್ಲವರ್ಣದವುಗಳಾಗಿರುವವು. ಇವುಗಳಲ್ಲಿ ಪಂಚಾತ್ಮಕನಾದ ಪರಮಾತ್ಮನನ್ನು ಅಂದರೆ ಪ್ರದ್ಯುಮ್ನ, ಅನಿರುದ್ಧ, ವಾಸುದೇವ, ಸಂಕರ್ಷಣ, ನಾರಾಯಣ, ಎಂಬ ೫ ರೂಪಗಳನ್ನು ಕ್ರಮವಾಗಿ ಧ್ಯಾನಮಾಡಬೇಕೆಂದು ಈ ಶ್ಲೋಕಗಳಿಗೆ ಛಲಾರಿ ಆಚಾರ್ಯರ ವ್ಯಾಖ್ಯಾನವಿರುವುದು. ಇದಲ್ಲದೆ ಸುಷುಮ್ನಾ ನಾಡಿಗೆ ೪ ಪಾರ್ಶ್ವಗಳಲ್ಲಿಯೂ ೪ ನಾಡಿಗಳು ಬೇರೆಯಾಗಿರುವವು. 'ಇಡಾಚ ಪಿಂಗಳಾಚೈವ ವಜ್ರಿಕಾ ಧಾರಿಣೀತಥಾ | ಸುಷುಮ್ನಾ ಯಾಶ್ಚತುರ್ದಿಕ್ಷು ವಜ್ರಿಕಾದ್ಯಾಸು ತತ್ರಚ ||೧೬೬|| ಚತುರ್ಮೂರ್ತಿಃ ಸಭಗವಾ೯ ಹೃದಯೇ ಸವ್ಯವಸ್ಥಿತಃ' ಅದೇ ತಂ

ತ್ರಸಾರ ೪ ನೇ ಅಧ್ಯಾಯದಲ್ಲಿನ ಮೇಲಿನ ಶ್ಲೋಕ ವ್ಯಾಖ್ಯಾನರೀತಿಯಾದ ಅರ್ಥ :—

ಸುಷುಮ್ನಾ ನಾಡಿಗೆ ನಾಲ್ಕು ದಿಕ್ಕುಗಳಲ್ಲೂ ಇಡಾ, ಪಿಂಗಳಾ, ವಜ್ರಿಕಾ ಧಾರಣೀ ಎಂಬ ನಾಲ್ಕು ನಾಡಿಗಳಿರುವವು. ಆವುಗಳಲ್ಲಿ ಅನಿರುದ್ಧಾದಿ ೪ ರೂಪಗಳಿಂದ ೪ ನಾಡಿಗಳಲ್ಲೂ ನಾರಾಯಣ ನಾಮದಿಂದ ಸುಷುಮ್ನಾ ನಾಡಿಯಲ್ಲೂ ಇರುವನು. ಆದರೆ ಇಡಾ, ಪಿಂಗಳಾ, ಎಂಬ ಕ್ರಮದಿಂದ ಅನಿರುದ್ಧಾದಿಗಳು ಇರುವರೆಂಬ ಭ್ರಾಂತಿಯನ್ನು ನಿವಾರಣೆ ಮಾಡುವುದಕ್ಕಾಗಿ 'ವಜ್ರಿಕಾದ್ಯಾಸು' ಎಂದು ಹೇಳಿರುವರು. ವಜ್ರಿಕಾ ಮೊದಲು ಮಾಡಿ ಅನಿರೂದ್ಧಾದಿ ರೂಪಗಳು ಇರುವವು. ಇದರ ವಿವರ ಛಾಂದೋಗ್ಯೋಪ ನಿಷದ್ಭಾಷ್ಯದಲ್ಲಿ 'ಸಯೋಽಷ ಹೃದಿನಾಡೀಷು ಪಂಚರೂಪಃ ಪ್ರತಿಷ್ಟಿತಃ | ನಾರಾಯಣಾಖ್ಯಂ ಸೌಷುಮ್ನಂ ಮಧ್ಯಗಂ ರಕ್ತವರ್ಣಕಂ||ಶುಕ್ಲಂತು ವಾಸುದೇವಾಖ್ಯಂ ನಂದಿನ್ಯಾಮುಗ್ರತ ಸ್ಥಿತಂ | ಪಿಂಗಳಾಯಾಂ ಪಿಂಗಳಂಚ ರೂಪಂ ಸಂಕರ್ಷಣಾಭಿಧಂ | ಪಶ್ಚಿಮೇವಜ್ರಿಕಾಯಾಂಚ ಪೀತಂ ಪ್ರದ್ಯುಮ್ನ ನಾಮಕಂ | ಇಡಾಯಾಮನಿರುದ್ಧಾಖ್ಯಂ ನೀಲರೂಪಂ ವ್ಯವಸ್ಥಿತಂ' ಸುಷುಮ್ನಾಕ್ಕೆ ಪಶ್ಚಿಮದಲ್ಲಿರುವ ವಜ್ರಿಕಾನಾಡಿಯಲ್ಲಿ ಪೀತವರ್ಣನಾಗಿ ಪ್ರದ್ಯುಮ್ನ ಉತ್ತರದಲ್ಲಿರುವ ಇಡಾನಾಡಿಯಲ್ಲಿ ಅನಿರುದ್ಧನು ನೀಲವರ್ಣನಾಗಿರುವನು. ಪೂರ್ವದಿಕ್ಕಿನ ನಂದಿನೀ ಎಂಬ ನಾಮಾಂತರವುಳ್ಳ ಧಾರಿಣೀನಾಡಿಯಲ್ಲಿ ಶುಕ್ಲವರ್ಣನಾಗಿ ವಾಸುದೇವ, ದಕ್ಷಿಣದಲ್ಲಿ ಪಿಂಗಳಾನಾಡಿಯಲ್ಲಿ ಪಿಂಗಳ ವರ್ಣನಾಗಿ ಸಂಕರ್ಷಣ, ಮಧ್ಯದಲ್ಲಿ ಸುಷುಮ್ನಾ ನಾಡಿಯಲ್ಲಿ ರಕ್ತವರ್ಣನಾಗಿ ನಾರಾಯಣ—ಹೀಗೆ ೫ ರೂಪಗಳಿಂದ ಭಗವಂತನಿರುವನು. ಇವೇ ಮೊದಲಾದ ಆಧಾರದಮೇಲೆ 'ಐದುಮೇಲೊಂದಧಿಕದಳವುಳ್ಳೈದು ಪದ್ಮವು ನಾಭಿಮೂಲದಿ' ಎಂಬ ಪದಗಳಿಗೆ ಒಂದೊಂದು ಸ್ಥಳದಲ್ಲೂ ೫-೫ ಪದ್ಮಗಳು ಎಂಬ ಅರ್ಥ ಮಾಡುವುದು ನಿರಾಧಾರವೆಂತಲೂ ೫ ಸ್ಥಾನಗಳಲ್ಲಿ ೫ ಪದ್ಮಗಳೆಂತಲೂ ಮತ್ತೊಂದು ಪದ್ಮವು ಕಣ್ಣಿಗೆ ಅಗೋಚರವಾಗಿ ತಲೆಗೆ ೧೨ ಅಂಗುಲ ಪ್ರಮಾಣದ ಎತ್ತರದ ಒಳಗೆ ಇರುವುದೆಂದು ಸಿದ್ಧವಾಗುವುದು. ಈ ವಾಕ್ಯಕ್ಕೂ ಮಾನಸಸ್ಮೃತಿಯ ವಾಕ್ಯಕ್ಕೂ ಪರಸ್ಪರ ವಿರೋಧ ಬರುವುದು. ಇದಕ್ಕೆ ಸಮಾಧಾನ ಹೇಗೆಂದರೆ-ನಾಭಿಯಲ್ಲಿ ಷಟ್ದಳ ಕಮಲಗಳು ೫ ಇದ್ದರೂ ಒಂದೇ ಗಡ್ಡೆಯಲ್ಲಿ ಸೇರಿಕೊಂಡು ಒಂದನ್ನೊಂದು ಸಂಬಂಧಿಸಿಯೇ ಇರು

ವುದರಿಂದ ಅವುಗಳು ಒಂದೇ ಕಮಲವೆಂದು ಶ್ರೀಮದಾಚಾರ್ಯರ ಅಭಿ ಪ್ರಾಯವು. ಮಾನಸಸ್ಮೃತಿಯ ವಾಕ್ಯವನ್ನನುಸರಿಸಿ ದಾಸರಾಯರು ಹೇಳಿದ ೫ ಕಮಲಗಳೆಂಬ ವಾಕ್ಯಾಭಿಪ್ರಾಯದಿಂದ ಅವು ೫ ಕಮಲಗಳನ್ನೂ ಬೇರೆ ಬೇರೆ ಹೇಳಿರುವರೆಂದು ಭಾವಿಸಬೇಕು. ಹೀಗೆ ೫ ಕಮಲಗಳಲ್ಲಿ ಅನಿರುದ್ಧಾದಿ ೫ ರೂಪಗಳಿಂದ ಪರಮಾತ್ಮನಿದ್ದು ಅವರವರ ಕರ್ಮಾನುಸಾರವಾಗಿ ಜೀವ ರನ್ನು ಗರ್ಭಕ್ಕೆ ತಂದು ಹುಟ್ಟಿಸಿ ಅನಾದಿಕರ್ಮಗಳನ್ನು ಮೀರದೆ ಕರ್ಮಗೆ ಳನ್ನು ಮಾಡಿ, ಮಾಡಿಸುತ್ತಿರುವನು.

**ನಾಭಿಯೊಳಿ ಷಟ್ಕೋಣಮಂಡಲ**
**ದೀ ಭವಿಷ್ಯದ್ಬ್ರಹ್ಮನೊಳು ಮು**
**ಕ್ತಾಭ ಶ್ರೀಪ್ರದ್ಯುಮ್ನನಿಪ್ಪನು ವಿಬುಧಗಣಸೇವ್ಯ ||**
**ಶೋಭಿಸುತ ಕೌಸ್ತುಭವೆ ಮೊದಲಾ**
**ದಾಭರಣ ವಾಯುಧಗಳಿಂದ ಮ**
**ಹಾಭಯಂಕರ ಪಾಪಪುರುಷನ ಶೋಷಿಸುತ ನಿತ್ಯ || ೪ ||**

ಪದ್ಯಾರ್ಥ :—ನಾಭಿಯೊಳಿ = ಹೊಕ್ಕಳಲ್ಲಿ, ಷಟ್ಕೋಣಮಂಡಲದಿ= ಷಟ್ಕೋಣಾತ್ಮಕವಾದ ಮಂಡಲ ಮಧ್ಯದಲ್ಲಿ, ಈ ಭವಿಷ್ಯದ್ಬ್ರಹ್ಮನೊಳು= ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಯನ್ನು ಪಡೆಯುವ ವಾಯುದೇವರೊಳಗೆ, ಮುಕ್ತಾಭ=ಮುತ್ತಿನಂತೆ ಪ್ರಕಾಶಮಾನನಾಗಿ, ವಿಭುಧಗಣಸೇವ್ಯ=ದೇವ ತಾಗಣ ಸೇವಿತನಾದ, ಶ್ರೀ ಪ್ರದ್ಯುಮ್ನ=ಪ್ರದ್ಯುಮ್ನನಾಮಕನು, ಕೌಸ್ತು ಭವೆ ಮೊದಲಾದ, ಆಭರಣ=ಒಡವೆಗಳಿಂದಲೂ, ಆಯುಧಗಳಿಂದ=ಚಕ್ರಾ ದ್ಯಾಯುಧಗಳಿಂದಲೂ, ಶೋಭಿಸುತ, ಮಹಾಭಯಂಕರ=ಮಹಾಭಯಂ ಕರನಾದ, ಪಾಪಪುರುಷನ=ಪಾಪಪುರುಷನನ್ನು, ನಿತ್ಯ=ನಿತ್ಯದಲ್ಲೂ, ಶೋ ಷಿಸುತ, ಇಪ್ಪನು=ಇರುತ್ತಿರುವನು.

ತಾತ್ಪರ್ಯ:—ಮೇಲಿನ ಪದ್ಯದಲ್ಲಿ ಮೂಲಾಧಾರ ಮೊದಲು ಶಿರಸ್ಸಿನ ವರೆವಿಗೂ ೬ ಸ್ಥಳಗಳಲ್ಲಿ ೬ ಪದ್ಮಗಳಪ್ಪೈಕಿ ಶಿರಸ್ಸಿಗೆ ಮೇಲೆ ಇರುವ ಪದ್ಮ ವನ್ನು ಬಿಟ್ಟು ೫ ಪದ್ಮಗಳಲ್ಲಿ ಭಗವಂತನ ಅನಿರುದ್ಧಾದಿ ರೂಪಗಳ ಚಿಂತನಾ ಪ್ರಕಾರ ಹೇಳಿ, ಈ ಪದ್ಯದಿಂದ ಆ ಕಮಲಗಳ ಮಧ್ಯಗತವಾದ ತ್ರಿಕೋ ಣಾದಿ ಮಂಡಲಗಳನ್ನು, ತದ್ಗತ ಭಗವದ್ರೂಪಗಳ ಚಿಂತನೆಯನ್ನು ಹೇಳುತ್ತಾ ಪಾಪಪುರುಷ ವಿಸರ್ಜನಾ ಲಕ್ಷಣವನ್ನೂ ಸಹ ಹೇಳುತ್ತಾರೆ.

**ಮೂಲಾಧಾರ ಮೊದಲು ಮೇಲೆ ಹೇಳಿದ ಆರು ಪದ್ಮಗಳಲ್ಲೂ ಮಧ್ಯ ಪ್ರದೇಶಗಳಲ್ಲಿ** ೬ ಮಂಡಲಗಳು ಇರುವುವು. ತ್ರಿಕೋಣಮಂಡಲ, ಷಟ್ಕೋಣ ಮಂಡಲ, ದ್ವಾದಶಕೋಣ, ವರ್ತುಳ ಮಂಡಲ, ತ್ರಿಕೋಣ, ವರ್ತುಳ ವೆಂಬ ೬ ಮಂಡಲಗಳು ಇರುವುವು. ಇದಕ್ಕೆ ಆಧಾರ—“ ತ್ರಿಕೋಣ ವನ್ಹೌಚ ಷಡಸ್ರವಾಯೋಃ ದ್ವಿಸ್ತ್ವಾವದಸ್ರ ರವಿವೃತ್ತ ಶಶಿತ್ರಿವನ್ಹೌ ॥ ವೃತ್ತೇ ವಥಾವಪಿ ವಿಚಿಂತ್ಯಮಿದಂ ದಶಾರ್ಧರೂಪಂ ಸಿತಂ ತದಖಿಳಂ ಹೃದ ಯಾತ್ಪರಸ್ಥಂ ॥ ೧೬೫ ॥ ’ ಎಂಬ ಈ ಪ್ರಮಾಣಬಲದಿಂದ ಮೇಲೆ ಹೇಳಿ ದಂತೆ ೬ ಮಂಡಲಗಳು ಇರುವುವು. ತ್ರಿಕೋಣ ಮಂಡಲವು ಅಗ್ನಿಮಂಡಲ ವೆಂತಲೂ. ಷಟ್ಕೋಣ ವಾಯುಮಂಡಲವೆಂತಲೂ, ದ್ವಾದಶಕೋಣ ಸೂ ರ್ಯ ಮಂಡಲವೆಂತಲೂ, ವರ್ತುಳ ಮಂಡಲ ಚಂದ್ರ ಮಂಡಲವೆಂತಲೂ ಹೀಗೆ ೪ ಮಂಡಲಗಳು ಮತ್ತು ತ್ರಿಕೋಣ ಮಂಡಲ, ವರ್ತುಳ ಮಂಡಲ ಹೀಗೆ ೬ ಮಂಡಲಗಳೂ ಇರುವುವು. ಇವುಗಳಲ್ಲಿ ಅನಿರುದ್ಧಾದಿ ೫ ರೂಪ ಗಳನ್ನು ಚಿಂತಿಸಬೇಕೆಂದು ಹೇಳಿರುವರು. ಅದರ ಪೈಕಿ ಈ ಪದ್ಯದಲ್ಲಿ ನಾಭಿ ಗತ ಷಟ್ಕೋಣ ಮಂಡಲದಲ್ಲಿ ಚಿಂತಿಸಬೇಕಾದ ಭಗವದ್ರೂಪವನ್ನು ಹೇಳು ತ್ತಾರೆ.

ನಾಭಿಯಲ್ಲಿ ಷಟ್ಕೋಣ ಮಂಡಲವಿರುವುದು. ನೀಲವರ್ಣರಾಗಿ ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಯನ್ನು ಹೊಂದುವ ವಾಯು ದೇವರು ಇರುವರು. ಅವರಂತರ್ಯಾಮಿಯಾಗಿ ದೇವತಾಗಣ ಸೇವಿತನಾದ ಶ್ರೀ ಪ್ರದ್ಯುಮ್ನನು ನೀಲಮಣಿಯ ಮಧ್ಯಗತವಾದ ಮುತ್ತಿನಂತೆ ಕಾಂತಿಯಿಂದ ಯುಕ್ತನಾಗಿ ಕೌಸ್ತುಭ ಮೊದಲಾದ ಆಭರಣಗಳಿಂದಲೂ, ಚಕ್ರಶಂಖಾದ್ಯಾ ಯುಧಗಳಿಂದಲೂ ಶೋಭಿಸುತ್ತ ಮಹಾಭಯಂಕರನಾದ ಪಾಪಪುರುಷನನ್ನು ನಿತ್ಯದಲ್ಲೂ ಶೋಷಿಸುತ್ತಿರುವನು. ಪಾಪಪುರುಷನ ಲಕ್ಷಣವನ್ನು ಪಾಪ ಪುರುಷವಿಸರ್ಜನ ಮಂತ್ರದಲ್ಲಿ “ ಬ್ರಹ್ಮಹತ್ಯಾ ಶಿರಸ್ಕಂಚ ” ಇತ್ಯಾದಿ ವಾಕ್ಯಗಳಿಂದ ಹೇಳಿರುವರು. ಪಾಪಪುರುಷನಿಗೆ ಬ್ರಹ್ಮಹತ್ಯೆಯೇ ಶಿರಸ್ಸು, ಸ್ವರ್ಣಸ್ತೇಯವೆಂಬ ಮಹಾಪಾಪವು ಎರಡು ಭುಜಗಳು. ಸುರಾಪಾನವೆಂಬು ವುದೇ ಹೃದಯ. ಗುರುಸ್ತ್ರೀ ಗಮನವೆಂಬ ಮಹಾಪಾಪವೇ ಕಟಿಪ್ರದೇಶವು. ತತ್ಸಂಯೋಗ ಅಂದರೆ ಮೇಲಿನ ಪಾಪಿಗಳ ಸಹವಾಸಿಗಳೆಂದರ್ಥ. ಇಂತಹ ಮಹಾಪಾಪವು ಎರಡು ಪಾದಗಳು, ಮಿಗಲಾದ ಪಾತಕಗಳು ಅಂಗಗಳು,

ಮತ್ತು ಪ್ರತ್ಯಂಗಗಳು, ಉಪಪಾತಕಗಳೇ ರೋಮಗಳು. ಕೈಯ್ಯಲ್ಲಿ ಕತ್ತಿ, ಡಾಲೂ ಇವುಗಳನ್ನು ಧರಿಸಿಕೊಂಡು ಕಪ್ಪುಬಣ್ಣವಾಗಿರುವನೆಂದು ವಾಮ ಕುಕ್ಷಿಯಲ್ಲಿ ಚಿಂತಿಸಿ, ತದನಂತರ ಆ ಪಾಪಪುರುಷನನ್ನು ನಾಭಿಪ್ರದೇಶಕ್ಕೆ ತಂದದ್ದಾಗಿ ಭಾವಿಸಿಕೊಂಡು ನಾಭಿಯಲ್ಲಿ "ಷಟ್ಕೋಣ ಮಂಡಲ ಮಧ್ಯಸ್ಥೋ ನೀಲವರ್ಣೋ ವಾಯುಬೀಜವಾಚ್ಯಃ ಪರಮಾತ್ಮಾ ವಾಯ್ವಂತರ್ಯಾಮಿ ಶ್ರೀ ಪ್ರದ್ಯುಮ್ನೋ ಭಗವಾನ್ ಮಚ್ಛರೀರಸ್ಥಂ ಪಾಪಪುರುಷಂ ವಾಯುನಾ ಶೋಷಯತು" ಎಂದು ಉಚ್ಚರಿಸಿ ವಾಯು ಬೀಜವಾದ 'ಯಂ' ಎಂಬ ಬೀಜಾಕ್ಷರವನ್ನು ೬ ಸಲ ಓಂಕಾರವನ್ನು ಸೇರಿಸಿ ಜಪಿಸಿ, ಪಾಪಪುರುಷನು ಶುಷ್ಕೀಭೂತನಾದನೆಂದು ಭಾವಿಸಬೇಕು.—ಎಂದು ಹೇಳಿರುವರು. ಈ ಅಭಿಪ್ರಾಯವನ್ನೇ ದಾಸರಾಯರು ಇಲ್ಲಿ ಹೇಳಿರುವರು. 'ಮುಕ್ತಾಭ' ಪ್ರದ್ಯುಮ್ನನು 'ಮುತ್ತಿನಂತೆ ಪ್ರಕಾಶಮಾನನಾಗಿ' ಎಂದರು. ಮೇಲಿನ ಮಂತ್ರದಲ್ಲಿ 'ನೀಲವರ್ಣೋ ವಾಯು ಬೀಜವಾಚ್ಯಃ' ಎಂಬ ಪದದಿಂದ ಪ್ರದ್ಯುಮ್ನನು ನೀಲವರ್ಣನಾಗಿರುವನೆಂದು ಹೇಳಿರುವರು. ಇದರ ತಾತ್ಪರ್ಯವೇನೆಂದರೆ— ಷಟ್ಕೋಣ ಮಂಡಲದಲ್ಲಿ ನೀಲವರ್ಣದವರಾದ ವಾಯುದೇವರು ಇರುವರು. ಅವರಂತರ್ಯಾಮಿಯಾದುದರಿಂದ ಜ್ಞಾನಿಗಳಿಗೆ ಸಾಮಾನ್ಯವಾದ ಪ್ರಕಾಶವುಳ್ಳವನಾಗಿ, ಕತ್ತಲೊಳಗೆ ಇರುವ ಮುತ್ತಿನಂತೆ ಹೆಚ್ಚು ಬಿಳುಪು ಕಾಣದೆ ನೀಲ ಸಂಬಂಧವಾದ ಮುತ್ತಿನಂತೆ ಕಾಣುವನು. ಸಾಧಾರಣ ಜನರು ನೀಲವರ್ಣ ವಾಯ್ವಂತರ್ಯಾಮಿಯಾದುದರಿಂದ ಅಂತರ್ಯಾಮಿ ರೂಪವನ್ನು ಕಾಣದೆ ನೀಲವರ್ಣವನ್ನೇ ಕಾಣುತ್ತಿರುವರು. ಆದುದರಿಂದ ನೀಲವರ್ಣನೆಂದು ಮಾತ್ರ ಹೇಳಿದರೆಂದು ತಿಳಿಯಬೇಕು.

**ದ್ವಾದಶಾರ್ಕರ ಮಂಡಲವು ಮ**<br>
**ಧ್ಯೋದರದೊಳು ಸುಷುಮ್ನದೊಳಗಿಹು**<br>
**ದೈದುರೂಪಾತ್ಮಕನು ಮರವತ್ತಧಿಕ ಮುನ್ನೂರು ॥**<br>
**ಈ ದಿವಾರಾತ್ರಿಗಳ ಮಾನಿಗ**<br>
**ಳಾದ ದಿವಿಜರ ಸಂತಯಿಸುತನಿ**<br>
**ಷಾದರೂಪಕ ದೈತ್ಯರನು ಸಂಹರಿಪ ನಿತ್ಯದಲಿ ॥ ೫ ॥**

ಪದ್ಯಾರ್ಥ :—ದ್ವಾದಶಾರ್ಕರ ಮಂಡಲವು=ದ್ವಾದಶ (೧೨) ಕೋಣಗಳುಳ್ಳ ಸೂರ್ಯ ಮಂಡಲವು, ಮಧ್ಯೋದರದೊಳು=ಉದರ ಮಧ್ಯದಲ್ಲಿ,

ಸುಷುಮ್ನದೊಳಗೆ = ಸುಷುಮ್ನಾ ನಾಡಿಗೆ ಸೇರಿ, ಇಹುದು = ಇರುವುದು, ಐದುರೂಪಾತ್ಮಕನು = ಅನಿರುದ್ಧಾದಿ ೫ ರೂಪಾತ್ಮಕನಾದ ಶ್ರೀ ಪರಮಾತ್ಮನು ಆದ್ವಾದಶ ಕೋಣಮಂಡಲದಲ್ಲಿ ಸಂಕರ್ಷಣ ರೂಪದಿಂದಿದ್ದು, ಅರವತ್ತಧಿಕ ಮುನ್ನೂರು = ೩೬೦ ಸಂಖ್ಯೆಯುಳ್ಳ, ಈ ದಿವಾರಾತ್ರಿಗಳ ಮಾನಿಗಳಾದ = ಹಗಲು, ರಾತ್ರಿಗಳಿಗೆ ಅಭಿಮಾನಿಗಳಾದ, ದಿವಿಜರ = ದೇವತೆಗಳನ್ನು, ಸಂತೈಸುತ = ಸಮಾಧಾನ ಪಡಿಸುತ್ತ, ಈ ದೇವತೆಗಳಿಗೆ ಶತೃಭೂತರಾದ, ನಿಷಾದ ರೂಪಕ ದೈತ್ಯರನು = ನಿಷಾದ ಜಾತಿಯಂತೆ ಕಾಣುತ್ತಿರುವ ದೈತ್ಯರನ್ನು, ನಿತ್ಯದಲಿ = ನಿತ್ಯದಲ್ಲೂ, ಸಂಹರಿಪ = ಸಂಹರಿಸುವನು.

ತಾತ್ಪರ್ಯ :—ಉದರ ಮಧ್ಯದಲ್ಲಿ ಸುಷುಮ್ನಾನಾಡಿಗೆ ಸೇರಿ ದ್ವಾದಶಕೋಣವುಳ್ಳ ಸೂರ್ಯಮಂಡಲ ವಿರುವುದು. ಅದರಲ್ಲಿ ಪಂಚರೂಪಾತ್ಮಕನೆಂದರೆ ಅನಿರುದ್ಧಾದಿ ೫ ರೂಪಾತ್ಮಕನಾದ ಶ್ರೀ ಪರಮಾತ್ಮನು ಸಂಕರ್ಷಣ ರೂಪದಿಂದ ಇದ್ದು ೩೬೦ ಹಗಲು ಮತ್ತು ೩೬೦ ರಾತ್ರಿಗಳಿಗೆ ಅಭಿಮಾನಿಗಳಾದ ದೇವತೆಗಳನ್ನು ಸಂತೋಷಪಡಿಸುತ್ತಾ, ನಿಷಾದ ಅಂದರೆ ಕಿರಾತರೂಪಿಗಳಾದ ಸೂರ್ಯನಿಗೆ ಶತೃಭೂತರಾದ ಮಂದೋಹ ಎಂಬ ಹೆಸರುಳ್ಳ ರಾಕ್ಷಸರನ್ನು ನಿತ್ಯದಲ್ಲೂ ಸಂಹರಿಸುವನು. ಒಂದು ದಿವಸ ಸಂಹಾರ ಮಾಡಿದಮೇಲೆ ಪುನಃ ಅವರನ್ನೇ ಸಂಹಾರಮಾಡುವುದೆಂತು ? ಏತಕ್ಕಾಗಿ ಅವರನ್ನು ಕೊಲ್ಲುವುದೆಂದರೆ, ಸಂಧ್ಯಾಭಾಷ್ಯದಲ್ಲಿ ' ಸಂಧ್ಯಾಕಾಲೇಚ ಸಂಪ್ರಾಪ್ತೇ ಘೋರೇ ಪರಮದಾರುಣೇ| ಮಂದೇಹಾ ರಾಕ್ಷಸಾ ಘೋರಾಃ ಸೂರ್ಯ ಮಿಚ್ಛಂತಿ ಖಾದಿತುಂ||ಪ್ರಜಾಪತಿ ಕೃತಃ ಶಾಪಸ್ತೇಷಾಂವೈರೇಯ ರಾಕ್ಷಸಾಂ| ಅಕ್ಷಯತ್ವಂ ಶರೀರಾಣಾಂ ಮರಣಂಚ ದಿನೇದಿನೇ || ತತಃ ಸೂರ್ಯಸ್ಯ ತೈರ್ಯುದ್ಧಂ ಭವತ್ಯೇವ ಸುದಾರಣಂ ' || ಪರಮದಾರುಣವಾದ ಘೋರವಾದ ಸಂಧ್ಯಾಕಾಲವು ಪ್ರಾಪ್ತವಾಗಲು ಮಾಹೇಹ ಎಂಬ ಕೆಲವು ಘೋರರಾದ ರಾಕ್ಷಸರು ಸೂರ್ಯನನ್ನು ಬಕ್ಷಿಸಲು ಇಚ್ಛಿಸುವರು ಆ ರಾಕ್ಷಸರಿಗೆ ಬಹ್ಮದೇವರು ಪ್ರತಿದಿವಸದಲ್ಲೂ ಮರಣ ಹೊಂದುವಂತೆಯೂ ಅವರ ದೇಹಗಳಿಗೆ ಅಕ್ಷಯತ್ವವಿರುವ ಹಾಗೆಯೂ ಶಾಪವನ್ನು ಕೊಟ್ಟಿರುವರು. ಅದೆಂತೆಂದರೆ ನಿತ್ಯದಲ್ಲಿಯೂ ಪ್ರಾತಃ ಸಂಧ್ಯಾಕಾಲಕ್ಕೆ ಆ ರಾಕ್ಷಸರು ಸೂರ್ಯನನ್ನು ಬಕ್ಷಿಸಲು ಬರುವರು. ಸೂರ್ಯನಿಗೂ ಆ ರಾಕ್ಷಸರಿಗೂ ಪ್ರತಿದಿವಸದಲ್ಲಿಯೂ ಯುದ್ಧನಡೆಯುವುದು. ಆ ಸಮಯದಲ್ಲಿ ಬ್ರಾಹ್ಮಣರು

ಗಾಯತ್ರಿಯಿಂದ ಅಭಿಮಂತ್ರಿತವಾದ ಉದಕದಿಂದ ಅರ್ಘ್ಯ ಕೊಟ್ಟರೆ ಆ ಉದಕವು ವಜ್ರಪ್ರಾಯವಾಗಿ ಹೋಗಿ ಆ ರಾಕ್ಷಸರನ್ನು ಕೊಲ್ಲುವುದು. ಅವರು ಮತ್ತೂ ರಾತ್ರಿಕಾಲಗಳಲ್ಲಿ ತಮ್ಮ ಅಕ್ಷಯ ಶರೀರದಲ್ಲಿಯೇ ಸೇರಿ ಬದುಕಿ ಬಂದು ಮಾರನೆಯ ದಿವಸ ಮತ್ತೂ ಸೂರ್ಯನನ್ನು ಬಕ್ಷಿಸಲು ಬರುವರು, ಮತ್ತೂ ಸಾಯುವರು. ಹೀಗೆ ಬ್ರಹ್ಮದೇವರ ಶಾಪವೇ ಇರುವುದೆಂದು ಸಂಧ್ಯಾ ಭಾಷ್ಯದಲ್ಲಿ ವಿಷ್ಣುಪುರಾಣದ ವಾಕ್ಯದ ಆಧಾರವನ್ನು ಬರೆದಿರುವರು. ಇರಲಿ! ಬ್ರಾಹ್ಮಣರ ಅರ್ಘ್ಯ ಮಾತ್ರದಿಂದ ರಾಕ್ಷಸರು ಮೃತರಾಗುವುದಾದರೆ ಇಲ್ಲಿ ದ್ವಾದಶಕೋಣ ರವಿಮಂಡಲದಲ್ಲಿರುವ ಸಂಕರ್ಷಣನು ರಾಕ್ಷಸರನ್ನು ಸಂಹರಿಸನೆಂದು ಹೇಳಿರುವರು. ಅದಕ್ಕೂ ಇದಕ್ಕೂ ಸಂಬಂಧವೆಲ್ಲಿಯದು? ಅಂದರೆ, ಬರಿಯ ಮಂತ್ರಕ್ಕಾಗಲಿ, ಅರ್ಘ್ಯೋದಕಕ್ಕಾಗಲಿ ರಾಕ್ಷಸರನ್ನು ಕೊಲ್ಲುವ ಯೋಗ್ಯತೆ ಇಲ್ಲವಾದಕಾರಣ ನಮ್ಮ ದೇಹದ ಉದರಮಧ್ಯದಲ್ಲಿ ದ್ವಾದಶ ಕೋಣ ಸೂರ್ಯಮಂಡಲ ಮಧ್ಯಗತನಾದ ಸಂಕರ್ಷಣನು ನಾವು ಕೊಡುವ ಅರ್ಘ್ಯದೊಳಗಿದ್ದು ಆ ರಾಕ್ಷಸರನ್ನು ಸಂಹರಿಸುವನು. ಸೂರ್ಯಶತೃ ಮೃತ ನಾಗುವುದರಿಂದ ಹಗಲು ರಾತ್ರಿಗಳಿಗೆ ಅಭಿಮಾನ ದೇವತೆಗಳಿಗೆ ಆನಂದ ವಾಗುವುದು. || ೫ ||

**ಹೃದಯದೊಳಗಿಹ ಅಷ್ಟದಳ ಕಮ**
**ಲದರೊಳಗೆ ಪ್ರಾದೇಶ ನಾಮಕ**
**ಉದಿತ ಭಾಸ್ಕರನಂತೆ ತೋರ್ಪನು ಬಿಂಬನೆಂದೆನಿಸಿ ||**
**ಪದುಮ ಚಕ್ರ ಸುಸಂಖ ಸುಗದಾಂ**
**ಗದಕಟಕ ಮುಕುಟಾಂಗುಲೀಯಕ**
**ಪದಕ ಕೌಸ್ತುಭಹಾರ ಗ್ರೈವೇಯಾದಿ ಭೂಷಿತನು || ೬ ||**

ಪದ್ಯಾರ್ಥ :— ಹೃದಯದೊಳಗೆ, ಅಷ್ಟದಳಕಮಲ=೮ ದಳಗಳುಳ್ಳ ಕಮಲವು, ಇಹದು=ಇರುವುದು, ಅದರೊಳಗೆ, ಪ್ರಾದೇಶನಾಮಕ=ಪ್ರಾದೇಶನಾಮಕನಾದ ಶ್ರೀ ಪರಮಾತ್ಮನು, ಉದಿತಭಾಸ್ಕರನಂತೆ=ಆಗಲೇ ಉದಿಸಿದ ಸೂರ್ಯನಂತೆ, ಪದುಮ=ಪದ್ಮ, ಚಕ್ರ, ಸುಶಂಖ=ಉತ್ತಮವಾದ ಶಂಖ, ಸು=ಸಮೀಚೀನವಾದ, ಗದ, ಅಂಗದ=ಬಾಹುಮುರುಗಿ, ಕಟಕ= ಹಸ್ತಾಭರಣ, ಮುಕುಟ = ಕಿರೀಟ, ಅಂಗುಲೀಯಕ=ಉಂಗುರ, ಪದಕ, ಕೌಸ್ತುಭಹಾರ, ಗ್ರೈವೇಯಾದಿ=ಕತ್ತಿನಲ್ಲಿ ಧರಿಸುವ ಬಗೆಬಗೆಯ ಹಾರಾದಿ

ಗಳು, ಇವುಗಳಿಂದ, ಭೂಷಿತನು=ಭೂಷಿತನಾಗಿ, ಬಿಂಬನೆಂದೆನಿಸಿ=ಬಿಂಬ ರೂಪಿಯೆಂಬ ಹೆಸರಿನಿಂದ, ತೋರ್ಪನು=ಗೋಚರಿಸುವನು || ೬ ||

ತಾತ್ಪರ್ಯ :—ಹೃದಯದಲ್ಲಿ ಅಷ್ಟದಳ ಕಮಲದಲ್ಲಿ ಪ್ರಾದೇಶಮಾತ್ರನಾಗಿ ವಾಸಮಾಡುವ ಭಗವಂತನ ಸೂಕ್ಷ್ಮೋಪಾಸನಾಕ್ರಮವನ್ನು ಭಾಗವತ ದ್ವಿತೀಯಸ್ಕಂಧ ಎರಡನೆಯ ಅಧ್ಯಾಯ "ಕೇಚಿತ್ಸ್ವದೇಹಾಂತ ಹೃದಯಾ ವಕಾಶೇ ಪ್ರಾದೇಶ ಮಾತ್ರಂ ಪುರುಷಂ ವಸಂತಂ" ಎಂಬ ಒಂಭತ್ತನೆಯ ಶ್ಲೋಕ ಮೊದಲು ೧೩ ನೆಯ ಶ್ಲೋಕದವರೆಗೂ ಹೇಳಿರುವರು. ಅದನ್ನೇ ದಾಸರಾಯರು ಈ ಪದ್ಯದಿಂದ ಹೇಳುತ್ತಾರೆ :— ಹೃದಯದಲ್ಲಿ ಅಷ್ಟದಳ ಕಮಲವಿರುವುದು. ಅದರೊಳಗೆ ಪ್ರಾದೇಶ ಅಂದರೆ ಜೋಟು ಉದ್ದವಾಗಿರುವನೆಂದರ್ಥ. ಅದೇ ನಾಮಧೇಯದಿಂದ ಬಿಂಬರೂಪಿ ಪರಮಾತ್ಮನು ಬಾಲಸೂರ್ಯನಂತೆ ಪ್ರಕಾಶಮಾನನಾಗಿ ಪದ್ಮ, ಚಕ್ರ, ಶಂಖ, ಗದಾ, ಅಂಗದಾದಿ ಆಭರಣಗಳಿಂದ ಭೂಷಿತನಾಗಿ ಶೋಭಿಸುತ್ತಿರುವನು. ಇಂತಹ ಪರಮಾತ್ಮನ ಸೂಕ್ಷ್ಮರೂಪೋಪಾಸನೆಯನ್ನು ಅಧಿಕಾರಿಗಳು ಮಾಡುವರೆಂಬ ತಾತ್ಪರ್ಯ || ೬ ||

**ದ್ವಿದಳ ಪದ್ಮವು ಶೋಭಿಪುದು ಕಂ**
**ಠದಲಿ ಮುಖ್ಯಪ್ರಾಣ ತನ್ನಯ**
**ಸುದತಿಯಿಂದೊಡಗೂಡಿ ಹಂಸೋಪಾಸನೆಯ ಮಾಳ್ಪ ||**
**ಉದಕವನ್ನಾದಿಗಳಿಗವಕಾ**
**ಶದನು ತಾನಾಗಿದ್ದುದಾನಾ**
**ಭಿದನು ನುಡಿದು ನುಡಿಸುವ ಸರ್ವಜೀವರೊಳು || ೭ ||**

ಪದ್ಯಾರ್ಥ :— ಕಂಠದಲಿ, ದ್ವಿದಳ ಪದ್ಮವು=೨ ದಳಗಳುಳ್ಳ ಕಮಲವು, ಶೋಭಿಪುದು=ಶೋಭಿಸುವುದು, ಮುಖ್ಯಪ್ರಾಣ=ಮುಖ್ಯ ಪ್ರಾಣದೇವರು, ತನ್ನಯ, ಸುದತಿಯಿಂದೊಡಗೂಡಿ—ಭಾರ್ಯೆಯಿಂದ ಸಮೇತರಾಗಿ, ಹಂಸೋಪಾಸನೆಯನ್ನು=ಹಂಸಮಂತ್ರ ಜಪವನ್ನು, ಮಾಳ್ಪ=ಮಾಡುವರು, ಉದಕವನ್ನಾದಿಗಳಿಗೆ—ಉದಕ ಅನ್ನ ಮೊದಲಾದವುಗಳಿಗೆ, ಅವಕಾಶದನು=ಅವಕಾಶಕೊಡುವವನು, ತಾನಾಗಿದ್ದು, ಉದಾನಾಭಿದನು=ಉದಾನನಾಮಕನಾಗಿ, ಸರ್ವಜೀವರೊಳು=ಸರ್ವಪ್ರಾಣಿಗಳೊಳಗೆ ಇದ್ದು, ನುಡಿದು=ಮಾತನಾಡುತ್ತಾ, ನುಡಿಸುವ=ಮಾತಾಡುವಂತೆ ಮಾಡುತ್ತಿರುವನು ||೭||

**ತಾತ್ಪರ್ಯ** :—ಕಂಠದಲ್ಲಿ ಎರಡು ದಳಗಳುಳ್ಳ ಕಮಲವು ಶೋಭಿಸುತ್ತಿಸುವುದು. ಅದರಲ್ಲಿ ಉದಾನನಾಮಕರಾದ ವಾಯುದೇವರು ತಮ್ಮ ಭಾರ್ಯೆಯಿಂದ ಕೂಡಿ ವಾಸಮಾಡುತ್ತಾ ಶ್ವಾಸೋಚ್ಛ್ವಾಸ ರೂಪವಾದ ಹಂಸಮಂತ್ರ ಜಪರೂಪೋಪಾಸನೆಯನ್ನು ಮಾಡುತ್ತಿರುವರು. ಅಲ್ಲದೆ ಪ್ರಾಣಿಗಳು ಭೋಜನಮಾಡುವ ಅನ್ನಾದಿಗಳು ಉದರ ಸ್ಥಾನಕ್ಕೆ ಹೋಗಿ ಸೇರಲು ಅವಕಾಶವನ್ನು ಕೊಡುವರು ತಾವು ಮಾತನಾಡುತ್ತಾ ಪ್ರಾಣಿಗಳಿಂದಲೂ ಮಾತನಾಡಿಸುವರು.

" ಪ್ರಾಣಾಪಾನ ವಿಡಾಯಾಂಚ ಪಿಂಗಳಾಯಾಂಚ ಸರ್ವತಃ || ವ್ಯಾನಸ್ಸಂಧಿಷು ಸರ್ವತ್ರ ಉದಾನೋ ಬ್ರಹ್ಮನಾಡಿಗಃ" ಎಂಬ ಭಾಗವತ ದ್ವಿತೀಯ ಸ್ಕಂಧ ತಾತ್ಪರ್ಯದಿಂದ, ಪ್ರಾಣ, ಅಪಾನ ವಾಯುಗಳು ಇಡಾ, ಪಿಂಗಳಾ ನಾಡಿಗಳಲ್ಲಿ ಇರುವರೆಂತಲೂ ವ್ಯಾನ ಪ್ರಾಣದೇವರು ಸಕಲ ಸಂದಿಗಳಲ್ಲಿಯೂ, ಉದಾನ ವಾಯುದೇವರು ಬ್ರಹ್ಮನಾಡಿ ಅಂದರೆ ಮೂಲಾಧಾರ ಮೊದಲು ಶಿರಸ್ಸಿನವರೆವಿಗೂ ನೆಟ್ಟಗೆ ಹೋಗಿರುವ ಮಧ್ಯಪ್ರದೇಶದಲ್ಲಿರುವ ಸುಷುಮ್ನಾ ನಾಡಿಯಲ್ಲಿರುವರು ಎಂತಲೂ ಸಿದ್ಧವಾಗುವುದು. ಆ ನಾಡಿಯಲ್ಲಿ ಉದಾನ ವಾಯುದೇವರು ವ್ಯಾಪ್ತರಾಗಿ ಕಂಠದಲ್ಲಿ ಅದೇ ಸುಷುಮ್ನಾನಾಡಿಯ ಮಧ್ಯದಲ್ಲಿ ಇರುವರು || ೭ ||

**ನಾಸಿಕದಿ ನಾಸತ್ಯದಸ್ರರು**
**ಶ್ವಾಸಮಾನಿಪ್ರಾಣ ಭಾರತಿ**
**ಹಂಸ ಧನ್ವಂತರಿಗಳಲ್ಲೆಲ್ಲಿಪ್ಪರವರೊಳಗೆ ||**
**ಭೇಶ ಭಾಸ್ಕರ ರಕ್ಷಿಯುಗಳಕ**
**ಧೀಶರೆನಿಪರು ಅವರೊಳಗೆ ಲ**
**ಕ್ಷ್ಮೀಶ ದಧಿವಾಮನರು ನಿಯಾಮಿಸುತ ಇರುತಿಹರು || ೮ ||**

ಪದ್ಯಾರ್ಥ :—ನಾಸಿಕದಿ=ಮೂಗಿನಲ್ಲಿ, ನಾಸತ್ಯದಸ್ರರು=ನಾಸತ್ಯ, ದಸ್ರ ಎಂಬ ಅಶ್ವಿನೀ ದೇವತೆಗಳಿಬ್ಬರೂ (ಘ್ರಾಣೇಂದ್ರಿಯಕ್ಕೆ ಅಭಿಮಾನಿಗಳಾಗಿ ಇರುವರು) ಶ್ವಾಸಮಾನಿ ಪ್ರಾಣಭಾರತಿ=ಶ್ವಾಸಕ್ಕೆ ಅಭಿಮಾನಿಗಳು, ಪ್ರಾಣ=ವಾಯುದೇವರು, ಭಾರತೀದೇವಿಯರೂ ಸಹ ಅಲ್ಲಿರುವರು. ಅವರೊಳಗೆ=ಅಶ್ವಿನೀ ದೇವತೆಗಳ ವಳಗೂ, ಪ್ರಾಣ ಭಾರತಿಯರ ವಳಗೂ, ಅಲ್ಲಲ್ಲಿ=ಆಯಾ ಸ್ಥಾನಗಳಲ್ಲಿ, ಹಂಸಧನ್ವಂತರಿಗಳು—ಹಂಸರೂಪಿ ಶ್ರೀ ಪರ

ಮಾತ್ಮನೂ, ಧನ್ವಂತರಿ ದೇವರೂ ಸಹ, ಇಪ್ಪರು=ಇರುವರು. ಭೇಶಭಾಸ್ಕರರು =ಚಂದ್ರಸೂರ್ಯರು, (ಭ=ನಕ್ಷತ್ರ ಇವುಗಳಿಗೆ ಈಶನು=ಸ್ವಾಮಿಯಾದುದ ರಿಂದ ಭೇಶನೆಂದು ಚಂದ್ರನಿಗೆ ಹೆಸರು) ಅಕ್ಷಿಯುಗಳಕೆ=ನೇತ್ರದ್ವಂದ್ವಗಳಿಗೆ ಅಧೀಶರೆನಿಪರು=ಅಧಿಪತಿಗಳೆನಿಸುವರು ; ಅವರೊಳಗೆ, ಲಕ್ಷ್ಮೀಶ=ಲಕ್ಷ್ಮೀ ಪತಿಯಾದ ನಾರಾಯಣದೇವರು, ದಧಿವಾಮನರು=ದಧಿವಾಮನದೇವರು, ನಿಯಾಮಿಸುತ=ಪ್ರೇರಣೆಮಾಡುತ್ತಾ, ಇರುತಿಹರು=ಇರುತ್ತಿರುವರು || ೮ ||

ತಾತ್ಪರ್ಯ :—'ನಾಸತ್ಯದಸ್ರೌ ಪರಮಸ್ಯನಾಸೆ' ಎಂಬ ಭಾಗವತ ವಾಕ್ಯದಿಂದ ನಾಸತ್ಯದಸ್ರ ಎಂಬ ಅಶ್ವಿನೀದೇವರೀರ್ವರೂ ಎಡಬಲ ಮೂಗು ಗಳಿಗೆ ಅಭಿಮಾನಿಗಳಾಗಿ ಅಲ್ಲಿ ಇರುವರು. ಅಲ್ಲಿಂದ ಬಿಡುವ ಶ್ವಾಸೋಚ್ಛ್ವಾಸ ಕಾರ್ಯವನ್ನು ಮಾಡಿಸುತ್ತಾ ಶ್ವಾಸಾಭಿಮಾನಿಗಳಾಗಿ ಪ್ರಾಣ ಭಾರತಿಯರು ಇರುವರು. ಈ ನಾಲ್ವರಲ್ಲಿಯೂ ಆಯಾ ಸ್ಥಾನಗಳಲ್ಲಿಯೂ ಸಹ, ಹಂಸ, ಧನ್ವಂತರಿ ಎಂಬ ಎರಡು ಭಗವದ್ರೂಪಗಳನ್ನು ಚಿಂತಿಸಬೇಕು. ಎರಡು ಕಣ್ಣುಗಳಿಗೆ ಅಭಿಮಾನಿಗಳು ಚಂದ್ರಸೂರ್ಯರು. ಅವರಂತರ್ಯಾಮಿಯಾಗಿ ಶ್ರೀ ನಾರಾಯಣ ದೇವರೂ ಮತ್ತು ದಧಿವಾಮನ ದೇವರು ಸಹ ಇದ್ದು ನೋಡುವ ವ್ಯಾಪಾರದಲ್ಲಿ ಪ್ರೇರಿಸುವರು.

ಸ್ತಂಭರೂಪದಲಿಪ್ಪ ದಕ್ಷಿಣ
ದಂಬಕದಿ ಪ್ರದ್ಯುಮ್ನ ಗುಣರೂ
ಪಾಂಭೃಣಿಯು ತಾನಾಗಿ ಇಪ್ಪಳು ವತ್ಸರೂಪದಲಿ ||
ಪೊಂಬಸುರ ಪದಯೋಗ್ಯ ಪವನತ್ರಿ
ಯಂಬಕಾದಿ ಸಮಸ್ತ ದಿವಿಜಕ
ದಂಬಸೇವಿತನಾಗಿ ಸರ್ವ ಪದಾರ್ಥಗಳ ತೋರ್ಪ || ೯ ||

ಪದ್ಯಾರ್ಥ :—ದಕ್ಷಿಣದ=ಬಲದ, ಅಂಬಕದಿ=ಕಣ್ಣಿನಲ್ಲಿ ಪ್ರದ್ಯು ಮ್ನ=ಪ್ರದ್ಯುಮ್ನ ನಾಮಕ ಪರಮಾತ್ಮನು, ಸ್ತಂಭ ರೂಪದಲಿ=ಸ್ತಂಭಾ ಕಾರನಾಗಿ, ಇಪ್ಪ=ಇರುವನು, ಅಂಭೃಣಿಯು=ರಮಾದೇವಿಯು, ತಾನು, ಗುಣರೂಪ=ಹಗ್ಗದ ರೂಪಳಾಗಿ, ಇಪ್ಪಳು=ಇರುವಳು. ಪೊಂಬಸುರ ಪದ ಯೋಗ್ಯ=ಹಿರಣ್ಯಗರ್ಭ ಅಂದರೆ ಬ್ರಹ್ಮದೇವರ ಪದವಿಗೆ ಯೋಗ್ಯರಾದ, ಪವನ=ವಾಯುದೇವರು, ತ್ರಿಯಂಬಕಾದಿ=ರುದ್ರದೇವರು ಮೊದಲಾದ, ಸಮಸ್ತ=ಸಕಲವಾದ, ದಿವಿಜ=ದೇವತೆಗಳ, ಕದಂಬ=ಸಮೂಹದಿಂದ,

ಸೇವಿತರಾಗಿ=ಸೇವಿತರಾಗಿ, ವತ್ಸರೂಪದಲಿ=ಕರುವಿನ ರೂಪದಿಂದ, ಕಟ್ಟಲ್ಪಟ್ಟು, ಸರ್ವ ಪದಾರ್ಥಗಳ=ನೋಡಲಿಕ್ಕೆ ಯೋಗ್ಯವಾದ ಸಕಲ ಪದಾರ್ಥಗಳನ್ನು, ತೋರ್ಪ=ತೋರ್ಪಡಿಸುವನು.

ತಾತ್ಪರ್ಯ:—ಮೇಲಿನ ಪದ್ಯದಲ್ಲಿ ಚಂದ್ರಸೂರ್ಯರು ನೇತ್ರಾಭಿಮಾನಿಗಳೆಂತಲೂ, ಅವರಂತರ್ಯಾಮಿಯಾಗಿ ನಾರಾಯಣ ದಧಿವಾಮನರು ಇರುವರೆಂದು ಹೇಳಿದರು. ಈಗ ಬಲದ ನೇತ್ರದಲ್ಲಿರುವ ವಿಶೇಷರೂಪಗಳನ್ನು ಹೇಳುತ್ತಾರೆ:— 'ಸ್ತಂಭರೂಪದಲಿ' ಮೊದಲಾದ ಮೂರು ಪದ್ಯಗಳಿಂದ :—

ಮಾನಸ ಸ್ಮೃತಿಯಲ್ಲಿ 'ದಕ್ಷಿಣಾಕ್ಷಿಸ್ಥಿತೋ ವಿಷ್ಣುಃ ಸ್ತಂಭರೂಪೋ ರಮಾಸ್ಯಯಂ | ರಜ್ಜು ರೂಪತಯಾಬದ್ಧಂ ವಾಯುಂ ಗೋವತ್ಸ ರೂಪಿಣಂ' ಎಂಬುದರ ಅರ್ಥವನ್ನೇ ಈ ಪದ್ಯದಲ್ಲಿ ದಾಸರಾಯರು ಹೇಳಿರುವರು. ಬಲದ ಕಣ್ಣಿನಲ್ಲಿ ಪ್ರದ್ಯುಮ್ನನಾಮಕ ಶ್ರೀ ಪರಮಾತ್ಮನು ಸ್ತಂಭಾಕಾರನಾಗಿರುವನು. ರಮಾದೇವಿಯರು ಹಗ್ಗವಾಗಿದ್ದು ಕರುವಿನ ರೂಪದಿಂದ ಇರುವ ಮುಂದಿನ ಕಲ್ಪಕ್ಕೆ ಬ್ರಹ್ಮ ಪದವಿಗೆ ಬರುವ ವಾಯುದೇವರನ್ನು ಕಟ್ಟಿರುವರು. ಆ ವಾಯುದೇವರು ರುದ್ರಾದಿ ಸಮಸ್ತ ದೇವತಾ ಸಮೂಹದಿಂದ ಸೇವಿತರಾಗಿ ಕಣ್ಣಿಂದ ನೋಡಲು ಯೋಗ್ಯವಾದ ಸಕಲ ಪದಾರ್ಥಗಳನ್ನು ನೋಡುವಂತೆ ಮಾಡುವರು.

**ನೇತ್ರಗಳಲಿ ವಸಿಷ್ಟ ವಿಶ್ವಾ**
**ಮಿತ್ರ ಭಾರದ್ವಾಜ ಗೌತಮ**
**ಅತ್ರಿಯೂ ಜಮದಗ್ನಿ ನಾಮಗಳಿಂದ ಕರೆಸುತಲೀ ||**
**ಪತ್ರತಾಪಕ ಶಕ್ರ ಸೂರ್ಯಧ**
**ರಿತ್ರಿ ಪರ್ಜನ್ಯಾದಿ ಸುರರು ಜ**
**ಗತ್ರಯೇಶನ ಭಜಿಪರನುದಿನ ಪರಮ ಭಕುತಿಯಲಿ || ೧೦ ||**

ಪದ್ಯಾರ್ಥ:—ನೇತ್ರಗಳಲಿ=ಕಣ್ಣುಗಳಲ್ಲಿ, ವಸಿಷ್ಟ, ವಿಶ್ವಾಮಿತ್ರ, ಭಾರದ್ವಾಜ, ಗೌತಮ, ಅತ್ರಿ, ಜಮದಗ್ನಿ, ಈ ನಾಮಗಳಿಂದ ಕರೆಸುತಲಿ=ಕರೆಸಿಕೊಳ್ಳುತ್ತಾ, ಪತ್ರತಾಪಕ=ತನ್ನಾಮಕ ರುದ್ರದೇವರು, ಶಕ್ರ=ಇಂದ್ರದೇವರು, ಸೂರ್ಯ, ಧರಿತ್ರಿ=ಭೂಮಿಯು, ಪರ್ಜನ್ಯ=ವರುಣದೇವರು, ಆದಿ=ಮೊದಲಾದ, ಸುರರು = ದೇವತೆಗಳು, ಜಗತ್ರಯೇಶನ=ಮೂರು

ಲೋಕಾಧ್ಯಕ್ಷನಾದ ಶ್ರೀ ಪರಮಾತ್ಮನನ್ನು, ಪರಮ ಭಕ್ತಿಯಲಿ, ಅನುದಿನ= ಪ್ರತಿದಿವಸವೂ ಭಜಿಪರು.

ತಾತ್ಪರ್ಯ :—ಮೇಲಿನ ಪದ್ಯದಲ್ಲಿ ವತ್ಸರೂಪಿಯಾದ ವಾಯುದೇವರು ರುದ್ರಾದಿ ದೇವತೆಗಳಿಂದ ಸೇವಿತರಾಗಿ ಇರುವರೆಂದು ಹೇಳಿದರು. ಈಗ ಆ ದೇವತೆಗಳ ಉಪಾಸನಾಕ್ರಮವನ್ನು ಈ ಪದ್ಯದಲ್ಲಿ ಹೇಳುತ್ತಾರೆ :—

ವಸಿಷ್ಠಾದಿ ನಾಮಗಳಿಂದ ರುದ್ರಾದಿಗಳು ಕಣ್ಣಿನೊಳಗೆ ಇದ್ದು ಉಪಾಸನಾ ಮಾಡುವರೆಂದು ಈ ಪದ್ಯದಲ್ಲಿ ಹೇಳಿರುವರು. ಇದಕ್ಕೆ ಮೂಲ ಗ್ರಂಥವಾದ ಮಾನಸ ಸ್ಮೃತಿಯಲ್ಲಿ ಕಣ್ಣುಗಳಲ್ಲಿ ಯಾವ ಯಾವ ಭಾಗದಲ್ಲಿ ಯಾರು ಯಾರು ಯಾವ ಯಾವ ನಾಮಗಳಿಂದ ಇರುವರೆಂಬ ವಿಷಯವನ್ನು ಹೇಳಿರುವರು. ಅದು ಹೇಗೆಂದರೆ : "ಶ್ವೇತತಾರಾಸ್ಥಿತಶ್ಚಂದ್ರೋ ವಸಿಷ್ಠಾಖ್ಯ ಸುರೇಶ್ವರಃ|ನಯನೇ ರಕ್ತರಾಜಿಸ್ಥೋ ರುದ್ರೋಗೌತುಮ ನಾಮಕಃ| ಕೃಷ್ಣತಾರಾಸ್ಥಿತೋ ವಹ್ನಿರ್ಜಮದಗ್ನಿರಿತಿ ಸ್ಮೃತಃ | ಕಮನೀಯಾದಿತ್ಯ ಸಂಸ್ಥೋವಿಶ್ವಾಮಿತ್ರಾಭಿದಃಸ್ಥಿತಃ| ವಾರಿಗೋ ವರುಣಃ ಸಾಕ್ಷಾದ್ಭಾರದ್ವಾಜಾಭಿಧಸ್ತಥಾ | ಅಧರಾವರ್ತಿನೀ ಸಂಸ್ಥಾ ಪೃಥ್ವೀ ಕಶ್ಯಪ ನಾಮಿಕಾ | ಉತ್ತರಾಯಾಂ ದ್ಯುನಾಮ್ನಾಯಾಂ ಭಾರತೀ ಹ್ಯತ್ರಿನಾಮಿಕಾ| ಏತೇಹ್ಯಕ್ಷಿಣಿಮನಸಃ ಸಪ್ತದೇವಾ ಉಪಾಸತೇ" ಕಣ್ಣಿನ ಬಿಳಿಯಭಾಗದಲ್ಲಿ ಚಂದ್ರನು ಇರುವನು. ಅಲ್ಲಿಯೇ ದೇವೇಂದ್ರನು, ವಸಿಷ್ಠನಾಮಕನಾಗಿ ವಾಸಮಾಡುವನು. ಕಣ್ಣಿನ ಕಡೆಯಭಾಗದ ಕೆಂಪಿನಲ್ಲಿ ರುದ್ರದೇವರು ಗೌತುಮನೆಂಬ ಹೆಸರಿನಿಂದಿರುವರು. ಕರಿಯ ಗುಡ್ಡಿನಲ್ಲಿ ಅಗ್ನಿಯು ಜಮದಗ್ನಿಯೆಂಬ ಹೆಸರಿನಿಂದ ಇರುವನು. ಮನೋಹರವಾದ ದೃಷ್ಟಿಯಲ್ಲಿ ಸೂರ್ಯನು ವಿಶ್ವಾಮಿತ್ರನಾಮಕನಾಗಿರುವನು. ಕಣ್ಣಿನ ನೀರಿನಲ್ಲಿ ವರುಣನು ಭಾರದ್ವಾಜನಾಮಕನಾಗಿರುವನು. ಕಣ್ಣಿನ ಕೆಳಭಾಗದಲ್ಲಿ ಭೂಮಿದೇವಿಯು ಕಶ್ಯಪನಾಮಕಳಾಗಿರುವಳು. ಮೇಲ್ಭಾಗಕ್ಕೆ ದ್ಯು ಎಂದು ಹೆಸರು. ಅಲ್ಲಿ ಭಾರತಿದೇವಿಯರು ಅತ್ರಿ ಎಂಬ ಹೆಸರಿನಿಂದ ಇರುವರು. ಹೀಗೆ ೭ ದೇವತೆಗಳು ಪೂರ್ಣವಾದ ಮನಸ್ಸುಳ್ಳವರಾಗಿ ವಾಯುದೇವರನ್ನು ಉಪಾಸನೆ ಮಾಡುತ್ತಿರುವರೆಂದು ಮಾನಸ ಸ್ಮೃತಿ ವಾಕ್ಯವಿರುವುದು. ಆ ಅಭಿಪ್ರಾಯವೇ ಈ ಪದ್ಯದಲ್ಲಿ ಸಂಕೋಚವಾಗಿ ಹೇಳಲ್ಪಟ್ಟಿರುವದು.

**ಜ್ಯೋತಿಯೊಳಗಿಪ್ಪನು ಕಪಿಲಪುರು**
**ಹೂತಮುಖ ದಿಕ್ಪತಿಗಳಿಂದ ಸ**
**ಮೇತನಾಗಿಹ ದಕ್ಷಿಣಾಕ್ಷಿಯ ಮುಖದೊಳಿಹ ವಿಶ್ವ ||**
**ಶ್ವೇತವರ್ಣ ಚತುರ್ಭುಜನು ಸಂ**
**ಪ್ರೀತಿಯಿಂದಲಿ ಸ್ಥೂಲ ವಿಷಯುವ**
**ಚೇತನರಿಗುಂಡುಣಿಪ ಜಾಗ್ರತಿ ಇತ್ತು ನೃಗಜಾಸ್ಯ || ೧೧ ||**

ಪದ್ಯಾರ್ಥ :—ಜ್ಯೋತಿಯೊಳಗೆ=ಕಣ್ಣಿಗೆ ಸಂಬಂಧವಾದ ಜ್ಯೋತಿಯೊಳಗೆ, ಕಪಿಲ=ಕಪಿಲನಾಮಕ ಪರಮಾತ್ಮನು, ಇಪ್ಪನು=ಇರುವನು. ಶ್ವೇತವರ್ಣ=ಬಿಳುಪಾದ ಬಣ್ಣವುಳ್ಳ, ಚತುರ್ಭುಜನು=೪ ಭುಜಗಳಿಂದ ಯುಕ್ತನಾದ, ನೃಗಜಾಸ್ಯ=೧೮ ಮನುಷ್ಯ ಮುಖಗಳು ೧ ಆನೆಯ ಮುಖದಿಂದಲೂ ಒಟ್ಟು ೧೯ ಮುಖಗಳಿಂದ ಯುಕ್ತನಾದ, ವಿಶ್ವ=ವಿಶ್ವನಾಮಕ ಪರಮಾತ್ಮನು, ಪುರುಹೂತ ಮುಖ—ದೇವೇಂದ್ರನೇ ಮೊದಲಾದ, ದಿಕ್ಪತಿಗಳಿಂದ=ದಿಕ್ಪಾಲಕರಿಂದ, ಸಮೇತನಾಗಿ=ಕೂಡಿದವನಾಗಿ, ದಕ್ಷಿಣಾಕ್ಷಿಯ =ಬಲಗಣ್ಣಿನ, ಮುಖದೊಳು=ಮುಂಭಾಗದಲ್ಲಿ, ಇಹ=ಇರುವನು. ಈ ವಿಶ್ವರೂಪಿಯಾದ ಪರಮಾತ್ಮನು, ಪ್ರೀತಿಯಿಂದಲಿ ಚೇತನರಿಗೆ, ಜಾಗ್ರತಿ ಇತ್ತು=ಜಾಗ್ರದವಸ್ಥೆಯನ್ನು ಕೊಟ್ಟು, ಸ್ಥೂಲ ವಿಷಯುವ=ಸ್ಥೂಲವಾದ ವಿಷಯ ಸುಖವನ್ನು, ಉಂಡು=ತಾನು ಸ್ವೀಕರಿಸಿ, ಉಣಿಪ=ಉಣಿಸುವನು.

ತಾತ್ಪರ್ಯ :— ಕಪಿಲನಾಮಕ ಪರಮಾತ್ಮನು ಕಣ್ಣಿನ ಪ್ರಕಾಶದಲ್ಲಿ (ತೇಜಸ್ಸಿನಲ್ಲಿ) ಇರುವನು. ವಿಶ್ವನಾಮಕ ಪರಮಾತ್ಮನು ಇಂದ್ರಾದಿ ಅಷ್ಟ ದಿಕ್ಪಾಲಕರಿಂದ ಸೇವಿತನಾಗಿ, ಅವರಿಂದೊಡಗೂಡಿ, ಬಲ ಕಣ್ಣಿನ ಮುಂಭಾಗದಲ್ಲಿ ಅದರ ಆಕಾರವನ್ನು ವ್ಯಾಪಿಸಿಕೊಂಡು ಇರುವನು. ಈ ಪರಮಾತ್ಮನು ಶ್ವೇತವರ್ಣನಾಗಿಯೂ ಚತುರ್ಭುಜ ಉಳ್ಳವನಾಗಿಯೂ ಇರುವನು. ಮನುಷ್ಯರ ಮುಖಗಳೂ, ಆನೆಯ ಮುಖವೂ ಸಹ ಇರುವುದೆಂದು ದಾಸರಾಯರು "ನೃಗಜಾಸ್ಯ" ಎಂಬ ಪದದಿಂದ ಹೇಳಿರುವರು. ಆದರೆ ಒಟ್ಟು ಎಷ್ಟು ಮುಖಗಳೆಂದು ಹೇಳದಿದ್ದರೂ "ನೃಗಜಾಸ್ಯ" ಎಂಬ ಪದವು ಮನುಷ್ಯರ ಮುಖ ಆನೆಯ ಮುಖವೆಂದು ಹೇಳಿದಮೇಲೆ ಒಂದು ಮುಖವಲ್ಲವೆಂಬುದು ಸ್ಪಷ್ಟವಾಯಿತು. ಹಾಗಾದರೆ ಎಷ್ಟು ಮುಖವೆಂದರೆ--ಮಾಂಡೂಕೋಪನಿಷದ್ಭಾಷ್ಯದಲ್ಲಿ **"ಅಷ್ಟಾದಶ ಮುಖಾನ್ಯಸ್ಯ ಪುಮಾಕಾರಾಣಿ ಸರ್ವಶಃ ||**

ಮಧ್ಯಮಂತು ಗಜಾಕಾರ-ಶ್ಚತುರ್ಬಾಹುಃ ಪರಃ ಪುಮಾನ್ " ೧೮ ಮುಖ
ಗಳು ಮನುಷ್ಯ ಮುಖಗಳು; ಮಧ್ಯದಲ್ಲಿ ಒಂದು ಮುಖಮಾತ್ರ ಆನೆಯ
ಮುಖವೆಂತಲೂ ೪ ಬಾಹುಗಳುಳ್ಳ ಪರಮ ಪುರುಷನೆಂದು ಹೇಳಿರುವರು.
ಅದೇ ಅರ್ಥವನ್ನೇ ಇಲ್ಲಿ ತೆಗೆದುಕೊಳ್ಳಬೇಕು. ಈ ವಿಶ್ವನಾಮಕನು ಜೀವರು
ಗಳಿಗೆ ಜಾಗ್ರದವಸ್ಥಾ ಕೊಡುವವನು. ಆದ್ದರಿಂದ ಪ್ರೀತಿಯಿಂದ ಜೀವರಿಗೆ
ಜಾಗ್ರದವಸ್ಥೆಯಲ್ಲಿ ಅನುಭವಿಸಬೇಕಾದ ಸ್ಥೂಲವಾದ ವಿಷಯ ಸುಖಗಳನ್ನು
ಅವರ ನೇತ್ರದಲ್ಲಿದ್ದು ತಾನು ಅನುಭವಿಸಿ ಜೀವನಿಗೂ ಸುಖವನ್ನು ಉಣಿಸು
ವನು. ಇದರಲ್ಲಿ ಸ್ವಲ್ಪ ವಿಶೇಷ ಉಂಟು. ಅದೇನೆಂದರೆ :—ವಿಶ್ವರೂಪಿಯಾದ
ಪರಮಾತ್ಮನಿಗೆ ೧೯ ಮುಖಗಳೆಂದು ಹೇಳಿದರು. ಅವರಲ್ಲಿ ಯಾವ ಯಾವ
ಮುಖದಿಂದ ಯಾರುಯಾರಿಗೆ ಜಾಗ್ರದವಸ್ಥೆಯನ್ನು ಕೊಡುವನೆಂಬ ವಿಷ
ಯದಲ್ಲಿ ಪ್ರಕಾಶಸಂಹಿತಾ ಎಂಬ ಗ್ರಂಥದಲ್ಲಿ ವಿಸ್ತಾರಮಾಡಿರುವರು: ಅದೆಂ
ತೆನೆ " ದಕ್ಷಿಣಾಕ್ಷಿಗತೋ ವಿಶ್ವಃ ಸತ್ವಸ್ಥಃ ಸತ್ಯಭಾಗತಃ || ಉತ್ತಮಾನಾಂ
ಮಧ್ಯಮಾನಾಂ ನೀಚಾನಾಂ ತತ್ವಮಾನಿನಾಂ | ತ್ರಿಭಿರ್ಮುಖೈಃ ಸವ್ಯಗತೈರ
ವಸ್ಥಾ ಜಾಗೃದಾಹ್ವಯಾ | ಕರೋತ್ಯಯಂ ಮಧ್ಯಗಾಸ್ಯತೃತೀಯೇನ ಸದೈ
ವಹಿ|| ಉಚ್ಚಮಧ್ಯಾಂಶ್ಚ ಮರ್ತ್ಯಾನಾಂ ದಾಸಾನಾಂ ಜಾಗೃದಾಹ್ವಯಾ ||
ಕರೋತ್ಯವಸ್ಥಾಮಂ ತ್ಯಸ್ಥೈ ಸ್ತ್ರಿಭಿರಾಸ್ಯೈಃ ಸವಿವಹಿ || ನಿರಂಶಾನಾಂಚ
ಸಾಂಶಾನಾಂ ಜಾಗೃದಾ ಸಂಪ್ರವರ್ತಕಃ | ಪುಂಸಾಮೇವಂ ವಾಮಗಾಸ್ಯೈಃ
ಸ್ತ್ರೀಣಾಮೇವಂ ಕರಿಷ್ಯತಿ " ಚೇತನರ ಬಲಗಣ್ಣಿನಲ್ಲಿ ವಿಶ್ವನಾಮಕ ಪರ
ಮಾತ್ಮನು ಸತ್ವಗುಣ ಪ್ರವಿಷ್ಟನಾಗಿದ್ದು ಸತ್ವಭಾಗದಿಂದ ತತ್ವಾಭಿಮಾನಿಗ
ಳಾದ ದೇವತೆಗಳಲ್ಲಿ ಉತ್ತಮರಾದ ಬ್ರಹ್ಮಾದಿಗಳಿಗೂ, ಮಧ್ಯಮರಾದ ಇಂ
ದ್ರಾದಿಗಳಿಗೂ ಅಧಮರಾದ ಪುಷ್ಕರಾದಿಗಳಿಗೂ ಇಂತಹ ಮೂರು ವಿಧರಾದ
ದೇವತೆಗಳಿಗೂ ಗಜಮುಖಕ್ಕೆ ಶೇರಿದಹಾಗಿರುವ ಬಲಗಡೆಯ ಮೂರು ಮುಖ
ಗಳಿಂದ ಜಾಗೃದವಸ್ಥೆಯನ್ನು ಕೊಡುವನು. ಆ ಮೂರು ಮುಖಗಳಿಗೆ ಶೇರಿದ
ಹಾಗೆ ನಡುವೆ ಇರುವ ಮೂರು ಮುಖಗಳಿಂದ ಮನುಷ್ಯೋತ್ತಮರು ಮನು
ಷ್ಯರಲ್ಲಿ ಮಧ್ಯಮರು ಅಧಮರೆಂಬ ಮೂರುವಿಧ ಜನರಿಗೂ ಜಾಗೃದವಸ್ಥೆ
ಯನ್ನು ಕೊಡುವನು, ಅವುಗಳಿಗೆ ಶೇರಿದಹಾಗೆ ಇರುವ ಕಡೇ ಭಾಗದ
ಮೂರು ಮುಖಗಳಿಂದ ದೈತ್ಯೋತ್ತಮರು, ಮಧ್ಯಮರು, ಅಧಮರಾದ
ಸಾಂಶರು ನಿರಂಶರಾದ ದೈತ್ಯರು ಇವರುಗಳಿಗೆ ಜಾಗೃದವಸ್ಥೆಯನ್ನು ಕೊಡು

ವನು. ಹೀಗೆ ಬಲಗಡೆ ಮುಖಗಳು ಒಂಬತ್ತರಿಂದ ಪುರುಷರಿಗೆ ಜಾಗ್ರದವಸ್ಥೆ ಉಂಟಾಗುವದು. ಇದರಂತೆ ಗಜಮುಖಕ್ಕೆ ಎಡಭಾಗದಲ್ಲಿರುವ ಒಂಭತ್ತು ಮುಖಗಳಿಂದ ದೇವ ಮಾನುಷ ದೈತ್ಯ ಎಂಬ ಹೆಸರುಗಳಿಂದ ಸ್ತ್ರೀಯರಿಗೂ ಜಾಗ್ರದವಸ್ಥೆಯನ್ನು ಕೊಡುವನು. ಈ ವಿಶೇಷಾರ್ಥಗಳೆಲ್ಲವು ದಾಸರಾಯರು ಹೇಳಿದ ಪದ್ಯದಲ್ಲಿ ಗರ್ಭಿತವಾಗಿದೆ.

**ನೆಲಸಿಹರು ದಿಗ್ದೇವತೆಗಳಿಂ**
**ಕೆಲದಿ ಕರ್ಣಂಗಳಲಿ ತೀರ್ಥಂ**
**ಗಳಿಗೆ ಮಾನಿಗಳಾದ ಸುರನದಿ ಮುಖ್ಯನಿರ್ಜರರು ||**
**ಬಲದ ಕಿವಿಯಲ್ಲಿರುತಿಹರು ಬಾಂ**
**ಬೊಳೆಯು ಜನಕ ತ್ರಿವಿಕ್ರಮನು ನಿ**
**ರ್ಮಲರನು ಮಾಡುವ ನೀಪರಿ ಚಿಂತಿಸುವ ಜನರ || ೧೨ ||**

ಪದ್ಯಾರ್ಥ :—ದಿಗ್ದೇವತೆಗಳು, ಇಂಕೆಲದಿ=ಈ ದೇಹದಲ್ಲಿ, ಕರ್ಣಂಗಳಲಿ=ಕಿವಿಗಳಲ್ಲಿ, ನೆಲಸಿಹರು=ಅಭಿಮಾನಿಗಳಾಗಿ ವಾಸಮಾಡುತ್ತಿರುವರು. ತೀರ್ಥಂಗಳಿಗೆ=ಗಂಗಾ ಮೊದಲಾದ ತೀರ್ಥಗಳಿಗೆ, ಮಾನಿಗಳಾದ=ಅಭಿಮಾನಿಗಳಾದ, ಸುರನದಿ ಮುಖ್ಯ=ದೇವ ಗಂಗೆಯೇ ಮೊದಲಾದ, ನಿರ್ಜರರು=ದೇವತೆಗಳು, ಬಲದ ಕಿವಿಯಲ್ಲಿರುತಿಹರು=ಬ್ರಾಹ್ಮಣರ ಬಲದ ಕಿವಿಯಲ್ಲಿ ಇರುತ್ತಿರುವರು, ಬಾಂಬೊಳೆಯು=ಗಂಗೆಯು, ಜನಕ=ತಂದೆಯಾದ ತ್ರಿವಿಕ್ರಮನು, ಈ ಪರಿ=ಈ ಪ್ರಕಾರವಾಗಿ ಚಿಂತಿಸುವ, ಜನರ=ಜನಗಳನ್ನು, ನಿರ್ಮಲರನು=ಶುದ್ಧರನ್ನಾಗಿ ಮಾಡುವನು.

ತಾತ್ಪರ್ಯ :—ನೆಲಸಿಹರು ಎಂಬೀ ಪದ್ಯದಿಂದ ಕಿವಿಯಲ್ಲಿ ಚಿಂತಿಸಬೇಕಾದ ದೇವತೆಗಳನ್ನು ಹೇಳುತ್ತಾರೆ :—

ಕಿವಿಗಳಲ್ಲಿ ದಿಗ್ದೇವತೆಗಳು ಅಭಿಮಾನಿಗಳಾಗಿ ವಾಸಮಾಡುವರು. “ ಪುಷ್ಕರಾದ್ಯಾನಿ ತೀರ್ಥಾನಿ ಗಂಗಾಧ್ಯಾಃಸರಿತಸ್ತಥಾ | ವಿಪ್ರಸ್ಯ ದಕ್ಷಿಣೇ ಕರ್ಣೇ ಸಂತೀತಿ ಮನುರಬ್ರವೀತ್ ” ಎಂಬ ಮನುವಾಕ್ಯದಿಂದ ಪುಷ್ಕರ ಮೊದಲಾದ ಸಕಲ ತೀರ್ಥಾಭಿಮಾನಿಗಳು ಗಂಗಾ ಮೊದಲಾದ ಪುಣ್ಯ ನದ್ಯಭಿಮಾನಿಗಳೆಲ್ಲರೂ ಬ್ರಾಹ್ಮಣರ ಬಲದ ಕಿವಿಯಲ್ಲಿ ವಾಸಮಾಡುತ್ತಾರೆಂದು ಸಿದ್ಧವಾಗುವುದು. ಆದ್ದರಿಂದಲೇ ಬ್ರಾಹ್ಮಣನು ಆಚಮನ ಮಾಡಬೇಕಾದ ಸಂದರ್ಭದಲ್ಲಿ ಉದಕವು ದೊರಕದೆ ಅಸಂದರ್ಭವಾದರೆ ‘ ಸ್ವಕರ್ಣಸ್ಪ

ರ್ಶನಾಚಮ್ಯ ಚಿಃ' ಎಂಬ ಧರ್ಮ ಶಾಸ್ತ್ರ ವಾಕ್ಯದಂತೆ ತನ್ನ ಕಿವಿಯ ಸ್ಪರ್ಶ ದಿಂದಲೇ ಆಚಮನ ಮಾಡಿದಂತೆ ಶುದ್ಧನಾಗುವನೆಂದು ಸಿದ್ಧವಾಗುವುದು. ಇದೇ ಅಭಿಪ್ರಾಯವನ್ನೇ ದಾಸರಾಯರು ಇಲ್ಲಿ ವಿಸ್ತರಿಸಿರುವರು. ಈ ಪ್ರಕಾರ ಬಲದ ಕಿವಿಯಲ್ಲಿ ಸಕಲ ತೀರ್ಥಾಭಿಮಾನಿಗಳು ಇರುವರೆಂದು ಯಾವ ವಿಪ್ರರು ಕರ್ಣಸ್ಪರ್ಶ ಮಾಡುವರೋ ಅವರನ್ನು ಗಂಗೆಯನ್ನು ಪಡೆದ ತ್ರಿವಿಕ್ರಮನು ಶುಚಿಭೂರ್ತತರನ್ನಾಗಿ ಮಾಡುವನು.

**ಚಿತ್ತಜೇಂದ್ರರು ಮನದೊಳಿಪ್ಪರು**
**ಕೃತ್ತಿವಾಸನು ಹಂಕಾರದಿ**
**ಚಿತ್ತ ಚೇತನ ಮಾನಿಗಳು ವಿಹಗೇಂದ್ರ ಫಣಿಪರೊಳು ||**
**ನಿತ್ಯದಲಿ ನೆಲೆಗೊಂಡು ಹತ್ತೊಂ**
**ಭತ್ತು ಮೊಗತೈಜಸನು ಸ್ವಪ್ನಾ**
**ವಸ್ಥೆಯೈದಿಸಿ ಜೀವರನ ಪ್ರವಿವಿಕ್ತ ಭುಗ್ಯೆನಿಪ || ೧೩ ||**

ಪದ್ಯಾರ್ಥ :—ಚಿತ್ತಜೇಂದ್ರರು=ಚಿತ್ತಜ=ಮನ್ಮಥನು, ಇಂದ್ರ= ದೇವೇಂದ್ರ ಇವರುಗಳು, ಮನದೊಳು=ಮನಸ್ಸಿಗಭಿಮಾನಿಗಳಾಗಿ, ಇಪ್ಪರು ಇರುವರು. ಕೃತ್ತಿವಾಸನು=ಚರ್ಮ ವಸ್ತ್ರವನ್ನು ಧರಿಸಿದ ರುದ್ರದೇವರು. ಅಹಂಕಾರದಿ=ಅಹಂಕಾರ ತತ್ವದಲ್ಲಿ (ಇರುವರು) ಚಿತ್ತಚೇತನ ಮಾನಿಗಳು =ಚಿತ್ತ ಚೇತನ ಇವುಗಳಿಗೆ ಅಭಿಮಾನಿಗಳಾದ, ವಿಹಗೇಂದ್ರ=ಪಕ್ಷಿ ಶ್ರೇಷ್ಟ ನಾದ ಗರುಡ, ಫಣಿಪರೊಳು=ಸರ್ಪಶ್ರೇಷ್ಟನಾದ ಶೇಷ ಇವರೊಳಗೆ ನಿತ್ಯ ದಲಿ, ಹತ್ತೊಂಭತ್ತು ಮೊಗ=೧೯ ಮುಖಗಳುಳ್ಳ, ತೈಜಸನು=ತೈಜಸನಾ ಮಕ ಪರಮಾತ್ಮನು ನೆಲೆಗೊಂಡು ವಾಸಮಾಡುತ್ತಾ, ಜೀವರನ=ಜೀವ ರನ್ನು, ಸ್ವಪ್ನಾವಸ್ಥೆ=ಸ್ವಪ್ನಾವಸ್ಥೆಯನ್ನು, ಯೈದಿಸಿ=ಹೊಂದುವಂತೆ ಮಾಡಿ ಪ್ರವಿವಿಕ್ತ=ವಿಶೇಷವಾದ ಏಕಾಂತ ಪದಾರ್ಥಗಳನ್ನು (ಸ್ವಪ್ನ ಪದಾರ್ಥಗ ಳನ್ನು) ಭುಕ್=ಭುಂಜಿಸುವವನು, ಎನಿಪ=ಎಂದು ಪ್ರಸಿದ್ಧನಾಗಿರುವನು.

ತಾತ್ಪರ್ಯ:—ಮನಸ್ಸಿನಲ್ಲಿ ಮನ್ಮಥ, ಇಂದ್ರ ಇವರಿಬ್ಬರು ಇರುವರು. ಅಹಂಕಾರದಲ್ಲಿ ರುದ್ರದೇವರು ಇರುವರು. ಚಿತ್ತಾಭಿಮಾನಿ ಗರುಡನು ಚಿತ್ತ ದಲ್ಲಿ ಇರುವನು. ಚಿತ್ತಾಭಿಮಾನಿಗಳು ಬ್ರಹ್ಮ ವಾಯುಗಳೆಂದು ಭಾಗವತ ವಾಕ್ಯವಿದ್ದರೂ, ಮುಖ್ಯಾಭಿಮಾನಿಗಳು ಬ್ರಹ್ಮವಾಯುಗಳು, ಅಮುಖ್ಯ ತಯಾ ಗರುಡನೆಂದು ತಿಳಿಯಬೇಕು. ಚೇತನಕ್ಕಭಿಮಾನಿಗಳು ಶೇಷದೇವರು.

ಇವರು ಚೇತನದಲ್ಲಿರುವುರು. ಇವರುಗಳಲ್ಲಿ ವಿಶ್ವನಾಮಕ ಪರಮಾತ್ಮನಂತೆಯೇ ಮಧ್ಯದಲ್ಲಿ ಗಜಮುಖ, ಎಡದ ಭಾಗದಲ್ಲಿ ೯ ಮನುಷ್ಯ ಮುಖಗಳು, ಬಲದ ಭಾಗದಲ್ಲಿ ೯ ಮನುಷ್ಯ ಮುಖಗಳು, ಹೀಗೆ ೧೯ ಮುಖಗಳುಳ್ಳ ತೈಜಸನಾಮಕ ಪರಮಾತ್ಮನಿದ್ದು ಜೀವರಿಗೆ ಸ್ವಪ್ನಾವಸ್ಥೆಯನ್ನು ಕೊಡಿಸಿ ಅಂದರೆ, ಸ್ವಪ್ನದಲ್ಲಿ ಗಜ ಕುದರೆ ಮೊದಲಾದ ಪದಾರ್ಥಗಳನ್ನು ಸೃಷ್ಟಿಸಿ ಅವುಗಳಿಗೂ, ಜೀವರುಗಳಿಗೂ ಸಂಬಂಧಪಡಿಸಿ ಜೀವರೊಳಗಿದ್ದು ತಾನೂ ಆ ಸುಖವನ್ನು ಅನುಭವಿಸಿ ಜೀವನಿಗೆ ಉಣಿಸುವುದರಿಂದ ಜೀವನಿಗೆ ಸ್ವಪ್ನದಲ್ಲಿ ಕಾಣುವ ಪದಾರ್ಥಗಳು ಅವನು ಸ್ವಪ್ನದಲ್ಲಿ ಮಾತ್ರ ಕಾಣುವನೇ ಹೊರತು ಮತ್ತಾರಿಗೂ ಗೊತ್ತಾಗುವುದಿಲ್ಲ. ಆದ್ದರಿಂದ ಪ್ರವಿವಿಕ್ತ ಭುಕ್ ಎಂದು ಹೇಳಿದರು. ಏಕಾಂತದಲ್ಲಿ ಹುಟ್ಟುವ ಪದಾರ್ಥಗಳ ಸಂಬಂಧದಿಂದ ಹುಟ್ಟುವ ಸ್ವಪ್ನ ಸುಖವನ್ನನುಭವಿಸುವನೆಂದರ್ಥ.

**ಜ್ಞಾನಮಯ ತೈಜಸನು ಹೃದಯ**
**ಸ್ಥಾನಯ್ದಿದಿಸಿ ಪ್ರಾಜ್ಞನೆಂಬ ಭಿ**
**ಧಾನ ದಿಂಕರಿಸುತ್ತ ಚಿತ್ಸುಖ ವ್ಯಕ್ತಿಯನೆ ಕೊಡುತ ||**
**ಆನತೇಷ್ಟಪ್ರದನು ಅನುಸಂ**
**ಧಾನ ವೀಯದೆ ಸುಪ್ತಿಯ್ಯೆದಿಸಿ**
**ತಾನೆ ಪುನರಪಿ ಸ್ವಪ್ನ ಜಾಗ್ರತಿ ಈವ ಚೇತನಕೆ || ೧೪ ||**

ಪದ್ಯಾರ್ಥ :—ಜ್ಞಾನಮಯ=ಜ್ಞಾನಸ್ವರೂಪನಾದ, ತೈಜಸನು=ತೈಜಸನಾಮಕ ಪರಮಾತ್ಮನು, ಹೃದಯಸ್ಥಾನ ಐದಿಸಿ=ಜೀವರನ್ನು ಹೃದಯಸ್ಥಾನಕ್ಕೆ ತಂದು, ಪ್ರಾಜ್ಞನೆಂಬಭಿದಾನದಿಂ=ಪ್ರಾಜ್ಞನೆಂಬ ಹೆಸರಿನಿಂದ, ಕರೆಸುತ=ಕರಿಸಿಕೊಳ್ಳುತ್ತ, ಚಿತ್ಸುಖ=ಸ್ವರೂಪ ಸುಖದ, ವ್ಯಕ್ತಿಯನೆ ಕೊಡುತ=ತಿಳಿವಳಿಕೆಯನ್ನು ಕೊಡಿಸುತ್ತ, ಆನತೇಷ್ಟಪ್ರದನು=ಆನತ=ನಮಸ್ಕಾರ ಮಾಡುವವರಿಗ, ಇಷ್ಟಪ್ರದನು=ಇಷ್ಟಾರ್ಥವನ್ನು ಪೂರೈಸುವ ಶ್ರೀ ಹರಿಯು, ಅನುಸಂಧಾನವೀಯದೆ ಜೀವರಿಗೆ ಈಗ ಹೀಗಿರುವೆನೆಂಬ ವಿಷಯವು ಮನಸ್ಸಿಗೆ ಬಾರದಂತೆ ಮಾಡಿ, ಸುಪ್ತಿಯ್ಯೆದಿಸಿ=ನಿದ್ರಾವಸ್ಥೆಯನ್ನು ಕೊಟ್ಟು, ತಾನೆ=ತೈಜಸನೆ, ಪುನರಪಿ=ಪುನಃ ಸ್ವಪ್ನಜಾಗ್ರತಿ=ಸ್ವಪ್ನಾವಸ್ಥೆಯನ್ನು ಜಾಗ್ರದವಸ್ಥೆಯನ್ನೂ, ಚೇತನಕೆ=ಚೇತನರಿಗೆ, ಈವ=ಕೊಡುವ.

**ತಾತ್ಪರ್ಯ** :—ಜ್ಞಾನಸ್ವರೂಪನಾದ ತೈಜಸನಾಮಕ ಪರಮಾತ್ಮನು ಕಂಠಸ್ಥಾನದಲ್ಲಿದ್ದು ಸ್ವಪ್ನಾವಸ್ಥೆಯನ್ನು ಕೊಡಿಸುವನು. ಅಲ್ಲಿಂದ ಜೀವರನ್ನು ತನ್ನೊಳಗೆ ಇಟ್ಟುಕೊಂಡು ಹೃದಯಸ್ಥಾನಕ್ಕೆ ಬರುವನು. ಇದೇ ತೈಜಸ ಪರಮಾತ್ಮನೇ ಪ್ರಾಜ್ಞನಾಮಕನಾಗಿ ಹೃದಯಸ್ಥಾನದಲ್ಲಿರುವನು. ಅಲ್ಲಿಗೆ ಜೀವನಿಂದ ಕೂಡಿ ತೈಜಸನು ಬಂದ ಕೂಡಲೆ, ಪ್ರಾಜ್ಞನು ತನ್ನ ಆಲಿಂಗನೆ ದಿಂದ ಸುಷುಪ್ತ್ಯವಸ್ಥೆಯನ್ನು (ನಿದ್ರೆಯನ್ನು) ಕೊಡಿಸಿ ಮುಕ್ತಿಯೋಗ್ಯರಿಗೆ ಸ್ವರೂಪಾನಂದವನ್ನು ಸ್ವಲ್ಪಮಟ್ಟಿಗೆ ಅಭಿವ್ಯಕ್ತಿಮಾಡಿಸುವನು. ಪ್ರಾಜ್ಞ ನಾಮಕನಾದ ಪರಮಾತ್ಮನ ಆಲಿಂಗನವೇ ಸುಷುಪ್ತ್ಯವಸ್ಥೆ. ಆಗಿನ ಸುಖವೇ ಸ್ವರೂಪ ಸುಖವು. ಜೀವನಿಗೆ ಸಾಕ್ಷಾತ್ತಾಗಿ ಪರಮಾತ್ಮನ ಆಲಿಂಗನೆ ದೊರ ಕುವುದಿಲ್ಲ. ವಾಯುದೇವರು ಜೀವನನ್ನು ನುಂಗಿ ರಮಾದೇವಿಯರಲ್ಲಿ ಪ್ರವೇಶ ಮಾಡುವರು, ರಮಾಸಮೇತ ತೈಜಸನು ಪ್ರಾಜ್ಞನಲ್ಲಿ ಬರುವನು ಅಲ್ಲಿ ಪರಂ ಪರಾ ಸಂಬಂಧದಿಂದ ಜೀವನಿಗೆ ಪ್ರಾಜ್ಞನಾಲಿಂಗನ ದೊರೆಯುವದೆಂದು ಭಾವ., ತಮೋ ಯೋಗ್ಯರಿಗೆ ಶಾಶ್ವತ ಸುಖವೇ ಇಲ್ಲದ ಕಾರಣ ಅನಿತ್ಯಸು ಖವನ್ನು ಕಲ್ಪಿಸುವನು. ಸುಷುಪ್ತಿ ಕಾಲದಲ್ಲಿ ಇತರ ವಿಷಯಜ್ಞಾನವಾವದೂ ಇರುವುದಿಲ್ಲ. ತೈಜಸನು ಮತ್ತೂ ಜೀವಕಳಾ ವಿಶಿಷ್ಟನಾಗಿ ಕಂಠಕ್ಕೆ ಬಂದು ಸ್ವಪ್ನವನ್ನು ಕೊಡಿಸುವನು. ವಿಶ್ವನು ಜೀವಕಳೆಯಿಂದ ಕೂಡಿ ತೈಜಸನನ್ನು ಬಿಟ್ಟು ನೇತ್ರಕ್ಕೆ ಬಂದು ಜಾಗ್ರದವಸ್ಥೆಯನ್ನು ಕೊಡಿಸುವನು. ಹೀಗೆ ಒಬ್ಬನೇ ಪರಮಾತ್ಮನು ವಿಶ್ವ, ತೈಜಸ ಪ್ರಾಜ್ಞ ಎಂಬ ರೂಪಗಳಿಂದ "ಜಾಗ್ರತ, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳನ್ನು ಜೀವರಿಗೆ ಕೊಡಿಸುವ ನೆಂದು ತಾತ್ಪರ್ಯ. ಈ ವಿಷಯದಲ್ಲಿ ಪ್ರಮಾಣ ವಾಕ್ಯಗಳು ಯಾವುವೆಂ ದರೆ:—ಮಾನಸ ಸ್ಮೃತಿವಾಕ್ಯ :—"ಪುನಸ್ತೈಜಸ ಸಂಯುಕ್ತೋ ವಿಷ್ಣು ರ್ಜೀವಕಳಾವೃತಃ। ಕಂಠೇ ಸಮಾಗತೋ ಸ್ವಪ್ನಃ ಪುನರ್ಭವತಿ ತತ್ರಹಿ॥ ವಿಹಾಯ ತೈಜಸಂ ವಿಶ್ವೇ ಪುನಶ್ಚಕ್ಷೋಃ ಸಮಾಗತೆ॥ ತದಾಜಾಗ್ರದವ ಸ್ಥಾಸ್ಯಾ ದೇವಂ ವಿಜ್ಞೇ ಯಮಂಜಸಾ" ನಿದ್ರೆಕಳೆದಮೇಲೆ ಪುನಃ ತೈಜಸ ರೂಪಿಯಾದ ಪರಮಾತ್ಮನಿಂದ ಕೂಡಿ ವಿಶ್ವನು ಜೀವಕಲಾ ವಿಶಿಷ್ಟನಾಗಿ ಕಂ ಠಕ್ಕೆ ಬರುವನು. ಆಗ ಸ್ವಪ್ನಾವಸ್ಥೆಯು ಜೀವನಿಗೆ ಮತ್ತೂ ಬರುವುದು-- ತೈಜಸನನ್ನು ಬಿಟ್ಟು ವಿಶ್ವನಾಮಕ ಪರಮಾತ್ಮನು ಮತ್ತು ಚಕ್ಷುಸ್ಸಿಗೆ ಬರಲು,

ಜೀವರಿಗೆ ಜಾಗ್ರದವಸ್ಥೆ (ಎಚ್ಚರಿಕೆ) ಬರುವುದು ಎಂದು ಪ್ರಮಾಣಾರ್ಥ.
ಇದೇ ಅಭಿಪ್ರಾಯವನ್ನೇ ದಾಸರಾಯರು ಇಲ್ಲಿ ಹೇಳಿರುವರು

**ನಾಲಿಗೆಯೊಳಿಹ ವರುಣ ಮತ್ಸ್ಯಣು**
**ನಾಲಿಗೆಯೊಳುಪೇಂದ್ರ ಇಂದ್ರನು**
**ತಾಳು ಪರ್ಜನ್ಯಾಖ್ಯ ಸೂರ್ಯನು ಅರ್ಧ ಗರ್ಭನಿಹ ||**
**ಆಲಿಯೊಳು ನಾಮನ ಸುಭಾಮನ**
**ಫಾಲದೊಳು ಶಿವಕೇಶವನು ಸುಕ**
**ಪೋಲದೊಳಗೆ ರತೀಶಕಾಮನು ಅಲ್ಲೆ ಪ್ರದ್ಯುಮ್ನ || ೧೭ ||**

ಪದ್ಯಾರ್ಥ :—ನಾಲಿಗೆಯೊಳು, ವರುಣ=ವರುಣನು, ಮತ್ಸ್ಯ=ಮತ್ಸ್ಯರೂಪಿ ಪರಮಾತ್ಮನು, ಇಹ=ಇರುವರು, ಅಣುನಾಲಿಗೆಯೊಳು=ಕಿರಿನಾಲಿಗೆಯಲ್ಲಿ, ಉಪೇಂದ್ರ, ಇಂದ್ರನು, (ಇರುವರು) ತಾಳು=ಗಂಟಲು ಒಳಗೆ, ಪರ್ಜನ್ಯಾಖ್ಯ ಸೂರ್ಯನು=ಪರ್ಜನ್ಯ ಎಂಬ ಸೂರ್ಯನು, ಅರ್ಧಗರ್ಭ=ಅರ್ಧಗರ್ಭನೆಂಬ ಹೆಸರುಳ್ಳ ಪರಮಾತ್ಮನು, ಇಹ=ಇರುವರು, ಆಲಿಯೊಳು=ಕಣ್ಣಿನ ಒಳಭಾಗದಲ್ಲಿ, ಸುಭಾಮನ=ಈ ಹೆಸರುಳ್ಳ ದೇವತೆಯು, ವಾಮನ=ವಾಮನರೂಪಿ ಪರಮಾತ್ಮನು ಇರುವರು, ಫಾಲದೊಳು=ಹಣೆಯೊಳಗೆ, ಶಿವ=ಈಶ್ವರನು, ಕೇಶವ=ಕೇಶವಮೂರ್ತಿಯು, ಇರುವರು. ಸುಕಪೋಲದೊಳಗೆ, ರತೀಶಕಾಮನು=ರತಿಪತಿಯಾದ ಮನ್ಮಥನು, ಅಲ್ಲೇ ಪ್ರದ್ಯುಮ್ನ=ಅದೇ ಸ್ಥಳದಲ್ಲಿಯೇ ಪ್ರದ್ಯುಮ್ನ ನಾಮಕ ಪರಮಾತ್ಮನು ಇರುವರು.

ತಾತ್ಪರ್ಯ :—ನಾಲಿಗೆ ಮೊದಲಾದ ಸ್ಥಾನಗಳಲ್ಲಿ ತದಭಿಮಾನಿ ದೇವತೆಗಳಿಂದ ಸಮೇತನಾಗಿ ಶ್ರೀಹರಿಯು ನಾಮಾಂತರಗಳಿಂದ ವಾಸಮಾಡುವನೆಂದು ಹೇಳುತ್ತಾರೆ.—ನಾಲಿಗೆಯಲ್ಲಿ ವರುಣನು ಮತ್ಸ್ಯರೂಪಿಯಾದ ಪರಮಾತ್ಮನು ಇರುವರು. ಕಿರಿನಾಲಿಗೆಯಲ್ಲಿ ಇಂದ್ರನಿಂದ ಸಹಿತನಾಗಿ ಉಪೇಂದ್ರನಾಮಕ ಪರಮಾತ್ಮನಿರುವನು. ಗಂಟಲು ಒಳಗೆ ಪರ್ಜನ್ಯನೆಂಬ ಸೂರ್ಯ, ಅರ್ಧಗರ್ಭನೆಂಬ ಪರಮಾತ್ಮನು ಇರುವರು. ಕಣ್ಣುಗಳ ಒಳಭಾಗದಲ್ಲಿ ಸುಭಾಮನ ಎಂಬ ದೇವತಾ ಸಮೇತನಾಗಿ ವಾಮನದೇವರು ಇರುವರು. ಹಣೆಯೊಳಗೆ ರುದ್ರದೇವರು, ಕೇಶವ ನಾಮಕ ಪರಮಾತ್ಮನು ಇರುವರು. ಕಪೋಲಗಳಲ್ಲಿ ರತಿಪತಿಯಾದ ಮನ್ಮಥನು, ಪ್ರದ್ಯುಮ್ನನಾಮಕ ಪರಮಾತ್ಮನೂ ಇರುವರು.

ರೋಮಗಳಲಿ ವಸಂತ ತ್ರಿಕಕು |
ದ್ಧಾಮ ಮುಖದೊಳಗಗ್ನಿ ಭಾರ್ಗವ
ತಾಮರಸ ಭವವಾಸುದೇವರು ಮಸ್ತಕದೊಳಿಹರು ||
ಈಮನದೊಳಿಹ ವಿಷ್ಣು ಶಿಖದೊಳು
ವಮಾ ಮಹೇಶ್ವರ ನಾರಸಿಂಹ
ಸ್ವಾಮಿ ತನ್ನನು ದಿನದಿನೆನೆ ವರಪಮೃತ್ಯು ಪರಿಹರಿಪ ||೧೬||

ಪದ್ಯಾರ್ಥ :—ರೋಮಗಳಲಿ, ವಸಂತ=ವಸಂತ ಋತುವಿಗೆ ಅಭಿಮಾನಿ ದೇವತೆಯಾದ ವಸಂತನು, ತ್ರಿಕಕುದ್ಧಾಮ=ತ್ರಿ=ಮೂರಾದಂಥಾ ಕಕುತ್=ಗೂಳಿ ಎತ್ತುಗಳಿಗೆ, ಕತ್ತಿಗೂ ಬೆನ್ನಿಗೂ ಮಧ್ಯದಲ್ಲಿರುವ ಗಂಟಿಗೆ ಕುತ್ ಎಂದು ಹೆಸರು, ಅದರಂತೆ ಶ್ರೇಷ್ಟವಾಗಿ ಶೋಭಿಸುವ ಧಾಮ=ಶ್ವೇತ ದ್ವೀಪಾದಿ ಮನೆಗಳುಳ್ಳಂಥಾ ತ್ರಿಕಕುಧ್ಧಾಮನೆಂದು ಹೆಸರುಳ್ಳ ಶ್ರೀ ಪರಮಾತ್ಮನು ಇರುವನು. ಮುಖದೊಳಗೆ, ಬಾಯೊಳಗೆ ಅಗ್ನಿ=ಅಗ್ನಿಯು ಭಾರ್ಗವ=ಪರುಶುರಾಮ ದೇವರು ಇರುವರು, ಮಸ್ತಕದೊಳು=ಶಿರಸ್ಸಿನಲ್ಲಿ ತಾಮರಸಭವ=ಕಮಲೋದ್ಭವರಾದ ಬ್ರಹ್ಮದೇವರು, ವಾಸುದೇವ ಮೂರ್ತಿಯೂ, ಇಹರು=ಇರುವರು, ಮನದೊಳು, ಈ=ಲಕ್ಷ್ಮೀದೇವಿಯರು, ವಿಷ್ಣು=ವಿಷ್ಣುರೂಪಿ ಪರಮಾತ್ಮನು ಇರುವರು, ಶಿಖದೊಳು ಶಿಖೆಯಲ್ಲಿ= ಉಮಾಮಹೇಶ್ವರ=ಪಾರ್ವತೀ ಪರಮೇಶ್ವರರೂ, ಮತ್ತು ನಾರಸಿಂಹ ಸ್ವಾಮಿ=ನರಸಿಂಹ ರೂಪಿಯಾದ ಪರಮಾತ್ಮನು ಇದ್ದು, ತನ್ನನು, ದಿನದಿನದಿ =ಪ್ರತಿದಿವಸವೂ, ನೆನೆವರ=ಧ್ಯಾನಿಸುವವರ, ಅಪಮೃತ್ಯು=ಅಪಮೃತ್ಯುವನ್ನು, ಪರಿಹರಿಪ=ಪರಿಹಾರ ಮಾಡುವನು.

ತಾತ್ಪರ್ಯ :—ರೋಮಗಳಲ್ಲಿ ವಸಂತನು, ತ್ರಿಕಕುದ್ಧಾಮ ನಾಮಕ ಪರಮಾತ್ಮನು ಇರುವರು. ಮುಖದೊಳಗೆ ಅಗ್ನಿ, ಪರಶುರಾಮರು ಇರುವರು. ಶಿರಸ್ಸಿನಲ್ಲಿ ಬ್ರಹ್ಮದೇವರು ವಾಸುದೇವಮೂರ್ತಿ ಇರುವರು. ಮನಸ್ಸಿನಲ್ಲಿ ಲಕ್ಷ್ಮೀ-ವಿಷ್ಣು ಇರುವರು. ಚಂಡಿಕೆ (ಜುಟ್ಟು) ಯಲ್ಲಿ ಪಾರ್ವತೀ ಪರಮೇಶ್ವರರು ಶ್ರೀನೃಸಿಂಹರೂಪೀ ಪರಮಾತ್ಮನು ಇರುವರು. "ಉಗ್ರಂ ವೀರಂ ಮಹಾವಿಷ್ಣುಂ" ಇತ್ಯಾದಿ ನೃಸಿಂಹ ಮಂತ್ರಗಳನ್ನು ಪ್ರತಿನಿತ್ಯವೂ ಜಪಿಸುತ್ತಾ ನರಸಿಂಹ ಸ್ಮರಣೆಯನ್ನು ಮಾಡುವವರಿಗೆ ಆಯಾ ಕಾಲದಲ್ಲಿ ಪ್ರಾಪ್ತವಾಗುವ ಅಪಮೃತ್ಯುಗಳನ್ನು ದೂರಮಾಡುವನು.

**ಮೌಳಿಯಲ್ಲಿಹ ವಾಸುದೇವನು**
**ಯೆ ೞಳಧಿಕ ನವಜಾದಿ ರೂಪವ**
**ತಾಳಿ ಮುಖದೊಳು ನಯನ ಶ್ರವಣಾದ್ಯವಯವಗಳಲ್ಲಿ ।**
**ಆಳರಸು ತಾನಾಗಿ ಸತತಸ**
**ಲೀಲೆ ಗೈವುತಲಿಪ್ಪ ಸುಖಮಯ**
**ಕೇಳಿಕೇಳಿಸಿ ನೋಡಿನೋಡಿಸಿ ನುಡಿದಃ ನ ಡಿಸುವನು ||೦೭||**

ಪದ್ಯಾರ್ಥ :—ಮೌಳಿಯಲಿ = ನೆತ್ತಿಯಮೇಲೆ, ಇಹ = ಇರುವ, ವಾಸುದೇವನು, ಏಳಧಿಕನವ=೭+೯=೧೬ ಸಂಖ್ಯಾಉಳ್ಳ, ಅಜಾದಿರೂಪವ=ಅ, ಆ, ಇ ಮೊದಲಾದ ೧೬ ಸ್ವರಾಕ್ಷರಗಳ ಪ್ರತಿಪಾದ್ಯನಾದ ಅಜ, ಆನಂದ, ಇಂದ್ರ ಮೊದಲಾದ ರೂಪಗಳನ್ನು ತಾಳಿ=ಧರಿಸಿ, ಮುಖದೊಳು =ಮುಖಕ್ಕೆ ಸಂಬಂಧಿಸಿದ ನಯನ ಶ್ರವಣಾದ್ಯ ವಯವಗಳಲಿ=ಕಣ್ಣು ಕಿವಿ ಮೊದಲಾದ ಅವಯವಗಳಲ್ಲಿ, ಆಳು, ಅರಸು ತಾನಾಗಿ,=ಭೃತ್ಯನು ಯಜಮಾನನು ತಾನೇ ಆಗಿ, ಸತತ=ಸರ್ವಕಾಲದಲ್ಲಿಯೂ, ಸುಲೀಲೆ ಗೈವುತಲಿಪ್ಪ=ಉತ್ಕೃಷ್ಟವಾದ ಲೀಲೆಯನ್ನು ಮಾಡುತ್ತಿರುವನು. ಸುಖಮಯ= ಸುಖಸ್ವರೂಪನಾದ ಪರಮಾತ್ಮನು, ಕೇಳಿ=ಕಿವಿಯಲ್ಲಿದ್ದು ತಾನು ಕೇಳಿ, ಕೇಳಿಸಿ=ಜೀವನು ಕೇಳುವಂತೆ ಮಾಡಿ, ನೋಡಿ=ತಾನು ನೋಡಿ, ಜೀವನಿಂದ ನೋಡಿಸಿ, ನುಡಿದು=ತಾನು ನುಡಿದು, ನುಡಿಸುವನು=ಜೀವನಿಂದ ನುಡಿಸುವನು.

ತಾತ್ಪರ್ಯ :—ತಲೆಯ ಮುಖ್ಯಪ್ರದೇಶವಾದ ಬ್ರಹ್ಮರಂಧ್ರ ಪ್ರದೇಶದಲ್ಲಿ ವಾಸುದೇವ ರೂಪಿಯಾದ ಪರಮಾತ್ಮನು, ಅಕಾರ ಮೊದಲು ಅಃವರೆಗೂ ಆಗುವ ೧೬ ಅಕ್ಷರಗಳ ಪ್ರತಿಪಾದ್ಯನಾದ, ಅಜ, ಆನಂದ, ಇಂದ್ರ ಮೊದಲಾದ ೧೬ ರೂಪಗಳನ್ನು ಧರಿಸಿ ಮುಖದಲ್ಲಿ ಕಣ್ಣು ಕಿವಿ ಮೊದಲಾದ ಮಾತೃಕಾನ್ಯಾಸದಲ್ಲಿ ಹೇಳಿದ ಪ್ರಕಾರ ಆಯಾ ಸ್ಥಾನಗಳಲ್ಲಿ, ಪ್ರಭುವಾಗಿಯೂ, ಭೃತ್ಯನಾಗಿಯೂ ಇದ್ದು ವಿಹಾರ ಮಾಡುವನು. ತಾನು ಸುಖ ಸ್ವರೂಪನಾದರೂ, ನಿರ್ಲಿಪ್ತನಾಗಿ ಸರ್ವರ ಕಿವಿಯಲ್ಲಿದ್ದು ತಾನು ಕೇಳುತ್ತಾ ಜೀವರನ್ನು ಕೇಳುವಂತೆ ಮಾಡುವನು, ನೋಡಿ ನೋಡಿಸುವನು. ತಾನು ಮಾತನಾಡಿ ಜೀವರಿಂದಲೂ ಮಾತಾಡಿಸುವನು.

**ಎರಡಧಿಕ ಎಪ್ಪತ್ತೆನಿಪಸಾ**
**ವಿರದನಾಡಿಗೆ ಮುಖ್ಯವಿಕೋ**

**ತ್ತರ ಶತಗಳಲ್ಲಿಹವು ನೂರಾ ಒಂದು ಮೂರ್ತಿಗಳು ॥**
**ಅರಿತ ದೇಹದಿ ಕಲಶನಾಮಕ**
**ಹರಿಗೆ ಕಳೆಗಳೆಂದು ನೈರಂ**
**ತರದಿ ಪೂಜಿಸುತಿಹರು ಪರಮಾದರದಿ ಭೂಸುರರು ॥೧೮॥**

ಪದ್ಯಾರ್ಥ :—ಎರಡಧಿಕ ಎಪ್ಪತ್ತೆನಿಪ=೭೨ ಸಂಖ್ಯಾಕವಾದ, ಸಾವಿರದ ನಾಡಿಗೆ, ಒಟ್ಟು ೭೨೦೦೦ ಸಹಸ್ರ ನಾಡಿಗಳಲ್ಲಿ, ಮುಖ್ಯ=ಮುಖ್ಯವಾದುದು, ಏಕೋತ್ತರ ಶತಗಳು=೧೦೧ ನಾಡಿಗಳು. ಅಲ್ಲಿ=ಆ ೧೦೧ ನಾಡಿಗಳಲ್ಲಿ ನೂರು ಒಂದು ಮೂರ್ತಿಗಳು, ಇಹವು=ಇರುವುವು, ಅರಿತು=ಹೀಗೆ ತಿಳಿದು, ದೇಹದಿ=ತನ್ನ ದೇಹದಲ್ಲಿ, ಕಲಶನಾಮಕಹರಿಗೆ, ಕಲಶ ನಾಮಕ ಹರಿಗೆ, ಕಳೆಗಳೆಂದು=೧೦೧ ನಾಡಿಗಳಲ್ಲಿರುವ ಭಗವದ್ರೂಪಗಳ ಕಳೆಗಳೆಂದು, ನೈರಂತರದಿ=ನಿರಂತರದಲ್ಲಿ, ಭೂಸುರರು=ಬ್ರಾಹ್ಮಣರು, ಪರಮಾದರದಿ ಪೂಜಿಸುತಿಹರು =ಪೂಜಿಸುತ್ತಿರುವರು.

ತಾತ್ಪರ್ಯ :—ಎರಡಧಿಕ ಎಂಬ ಪದ್ಯದಿಂದ ಪರಮಾತ್ಮನ ಅಭಿಷೇಕಾದಿಗಳನ್ನು ಮಾಡುವಾಗ ನಾವು ಮಾಡುವ ಕಲಶಪೂಜೆಯ ಸಮಯದಲ್ಲಿ ಕಲಶದಲ್ಲಿ ಆವಾಹನೆ ಮಾಡಬೇಕಾದ ೧೦೧ ಮೂರ್ತಿಗಳನ್ನು ನಮ್ಮ ದೇಹಗತ ೧೦೧ ಮುಖ್ಯನಾಡಿಗಳಲ್ಲಿ ಪೂಜಿಸಬೇಕೆಂದು ಹೇಳುತ್ತಾರೆ.

ಒಟ್ಟು ನಮ್ಮ ದೇಹಗತ ಪ್ರಧಾನ ನಾಡಿಗಳು ೭೨೦೦೦, ಅದರಲ್ಲಿ ಮುಖ್ಯವಾದುವು ೧೦೧ ನಾಡಿಗಳು, ಆ ನಾಡಿಗಳಲ್ಲಿ ‘ ಕಲಶಸ್ಯ ಮುಖೇ ವಿಷ್ಣುಃ ’ ಇತ್ಯಾದಿ ಶ್ಲೋಕದಿಂದ ಕಲಶದಲ್ಲಿ ಕಲಶನಾಮಕ ಪರಮಾತ್ಮನನ್ನು ಚಿಂತಿಸಿ ೧೦೧ ಮೂರ್ತಿಗಳನ್ನು ಆವಾಹನೆ ಮಾಡುವ ಸಂಪ್ರದಾಯವು ತಂತ್ರಸಾರರೀತ್ಯಾ ದೇವತಾರ್ಚನ ಮಂತ್ರದಲ್ಲಿ ಸೇರಿಸಿದೆ. ‘ ಏಕಪಂಚಾಶದ್ವರ್ಣಾನಾಂ ಚತುರ್ವಿಂಶತಿ ಮೂರ್ತಯಃ ಆತ್ಮಾದ್ಯಾ ವಾಸುದೇವಾದ್ಯಾ ವಿಶ್ವಾದ್ಯಾ ಮತ್ಸ್ಯ ಕಚ್ಛಪೌ | ಕ್ರೋಡೋ ನೃಸಿಂಹಃ ಸವಟುರ್ಜಾಮದಗ್ನಿ ರಘೂದ್ವಹೌ ॥ ವಾಸಿಷ್ಟಯಾದವೌ ಕೃಷ್ಣಾವಾತ್ರೇಯೋ ಬುದ್ಧಕಲ್ಕಿನೌ | ಶಿಂಶು ಮಾರಶ್ಚೇತಿ ಶತಂಕಲಾಃ ಕಲಶದೇವತಾಃ॥’’ ಅಜಾದಿ ೫೧, ಕೇಶವಾದಿ ೨೪, ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮ ಎಂಬ ೪ ಮೂರ್ತಿಗಳು, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಇವು ೪. ವಿಶ್ವ, ತೈಜಸ, ಪ್ರಾಜ್ಞ, ತುರಿಯ ಇವು ೪, ಮತ್ಸ್ಯಾದಿ ೧೦, ವೇದವ್ಯಾಸ, ದತ್ತಾತ್ರೇಯ,

ಶಿಂಶುಮಾರ, ಶ್ರೀ ಲಕ್ಷ್ಮೀನಾರಾಯಣ. ಅಂತು ೧೨೧ ಮೂರ್ತಿಗಳು ಇವು ಕಲಶ ಮೂರ್ತಿಯು ಕಳಾಭೂತವೆಂದು ತಂತ್ರಸಾರದಲ್ಲಿ ಹೇಳಿರುವರು. ಈ ಮೂರ್ತಿಗಳೇ ನಮ್ಮ ದೇಹಗತ ೧೨೧ ಮುಖ್ಯ ನಾಡಿಗಳಲ್ಲಿ ಇರುವವು. ಇವುಗಳೂ ಕಲಶನಾಮಕ ಪರಮಾತ್ಮನ ಕಳೆಗಳೆಂದು ತಿಳಿದು ಪರಮಾದರದಿಂದ ಜ್ಞಾನಿಗಳಾದ ಬ್ರಾಹ್ಮಣರು ಪೂಜಿಸುತ್ತಿರುವರು. ಬ್ರಾಹ್ಮಣರು ಎಂಬ ಮಾತಿನಿಂದ ಬ್ರಹ್ಮಜ್ಞಾನಿಗಳೆಂದರ್ಥ. ಬರೀ ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದವರೆಲ್ಲರೂ ಹೀಗೆ ಪೂಜೆ ಮಾಡುತ್ತಾರೆಂದು ಅರ್ಥವಲ್ಲ. ಮಾಡುತ್ತಾರೆ ಎಂಬ ವಾಕ್ಯದಿಂದ ಶಿಷ್ಟಾಚಾರವನ್ನು ತೋರಿಸಿರುತ್ತಾರೆ; ಇದರಿಂದ ಅಧಿಕಾರಿಗಳೆಲ್ಲರೂ ಹೀಗೇ ಮಾಡಬೇಕೆಂಬ ತಾತ್ಪರ್ಯ.

**ಇದಕೆ ಕಾರಣವೆನಿಸುವವು ಎರ**
**ಡಧಿಕ ದಶನಾಡಿಗಳೊಳಗೆ ಸುರ**
**ನದಿಯು ಮೊದಲಾದಮಲತೀರ್ಥಗಳಿಹವು ಕರಣದಲಿ ||**
**ಪದುಮನಾಭನು ಕೇಶವಾದಿ**
**ದ್ವಿದಶ ರೂಪದಲಿಪ್ಪ ನಲ್ಲತಿ**
**ಮೃದುಳವಾದ ಸುಷುಮ್ನದೊಳಗೇಕಾತ್ಮನೆನಿಸುವನು ||೧೯||**

ಪದ್ಯಾರ್ಥ :—ಇದಕೆ=ಮೇಲೆ ಹೇಳಿದ ನಾಡಿಗಳಿಗೆ, ಕಾರಣವೆನಿಸುವ=ಮೂಲಕಾರಣವೆಂದು ಪ್ರಖ್ಯಾತಿ ಪಡೆದಿರುವ, ಎರಡಧಿಕ ದಶನಾಡಿಗಳೊಳಗೆ=೧೨ ನಾಡಿಗಳೊಳಗೆ, ಸುರನದಿಯು ಮೊದಲಾದ ಅಮಲ ತೀರ್ಥಗಳು=ನಿಷ್ಕಲ್ಮಷವಾದ ಪುಣ್ಯತೀರ್ಥಗಳು, ಇಹವು=ಇರುವವು, ಪದುಮನಾಭನು, ಕೇಶವಾದಿ ದ್ವಿದಶರೂಪದಲಿ=ಕೇಶವ ಮೊದಲು ದಾಮೋದರನವರೆಗೂ ಆಗುವ ೧೨ ರೂಪಗಳಿಂದ, ಅಲ್ಲಿ=ಆ ೧೨ ನಾಡಿಗಳಲ್ಲಿ, ಇಪ್ಪ=ಇರುವನು. ಅತಿ ಮೃದುಳವಾದ, ಸುಷುಮ್ನದೊಳಗೆ=ಸುಷುಮ್ನಾ ನಾಡಿಯಲ್ಲಿ, ಏಕಾತ್ಮನೆನಿಸುವನು=ಏಕಾತ್ಮನೆಂಬ ನಾಮದಿಂದ ಕರೆಸಿಕೊಳ್ಳುತ್ತಾ ಇರುವನು.

ತಾತ್ಪರ್ಯ ;—ಮೇಲೆ ಹೇಳಿದ ೧೨೧ ನಾಡಿಗಳಿಗೆ ಕಾರಣಭೂತಗಳಾದ ೧೨ ನಾಡಿಗಳಲ್ಲಿ ಚಿಂತಿಸಬೇಕಾದ ಮೂರ್ತಿಗಳನ್ನು ಹೇಳುತ್ತಾರೆ.

ಈ ಮೇಲೆ ಹೇಳಿದ ನಾಡಿಗಳಿಗೆ ಕಾರಣಭೂತವಾದ ನಾಡಿಗಳು ೧೨ ಪ್ರಧಾನವಾದುವು. ಇವುಗಳಲ್ಲಿ ಗಂಗಾ ಮೊದಲಾದ ೧೨ ನದಿಗಳು ಅಂದರೆ

ಆ ನದಿಗಳ ಅಭಿಮಾನಿ ದೇವತೆಗಳು ವಾಸಮಾಡುವರು. ಆನಾಡಿಗಳ ಮತ್ತು ನದಿಗಳ ಹೆಸರುಗಳನ್ನು ಶ್ರೀ ವಿಜಯದಾಸರಾಯರವರು ತಮ್ಮ ಸುಳಾದಿ ಯಲ್ಲಿ ಹೇಳಿರುವರು. " ಒಂದೊಂದು ನಾಡಿಯಲ್ಲಿ ಒಂದೊಂದು ನದಿಗಳು ಕುಂದಾದೆ ಹನ್ನೆರಡಾರಲ್ಲಿಹವು ಮಂದಾಕಿನೀ ಇಡಾನಾಡಿಯಲ್ಲಿ, ಭಾನು ನಂದನೆ ಪಿಂಗಳಾ ನಾಡಿಯಲ್ಲಿ, ಗಾಂಧಾರಿ ನಾಡಿಯಲ್ಲಿ ಉಂಟು ಕಾವೇರಿ, ಹಸ್ತಿನೀಗೆ ಸಿಂದು ನದಿಯನ್ನಿ, ತಾಮ್ರಪರ್ಣಿಸಂದೀದೆ ನೋಡಿ ಲಂಬು ನಾಡಿಯಲ್ಲಿ, ಚಂದುಳ್ಳ ಗೋಮತಿ ಮಧ್ಯನಾಡಿಯಲ್ಲಿ ಪುನ್ನಾಡಿ ಗಂಡೀಕೆ ನೋಡಿ, ಸರಸ್ವತೀ ನಾಡಿಯಲ್ಲಿ ನಂದಾ, ಕೃಷ್ಣವೇಣಿ ಕುಹದಿ ಸೋವನಂದಿನಿ, ತಾಪತೀ ಶಂಕಿಣೀ ನಾಡಿಯಲ್ಲಿ ವಾಸವೆಂದು ತಿಳಿ, ಗೋದೆ ವಾರುಣಿ ನಾಡಿ ಯಲ್ಲಿ ಅಂದವಾದ ಪೂಷಾ (ಪೂಣರ್ಾ) ಪಯಸ್ವಿನೀಯಿಂದ ಪುಟ್ಟಿಪಾದು ಅಲ್ಲಿಗಲ್ಲಿ ಪೊಂದಿಕೊಂಡಿಪ್ಪವು ಜ್ಞಾನಿಗಳು ತುತಿಸಿ ಮಿಂದು ಪರಮ ಪದ ವೀಯ ಪಡಕೊಂಬೋರು ಬೃಂದಾರಕ ವಂದ್ಯ ವಿಜಯ ವಿಠಲರೇಯನ ಸಂದ ರ್ಶನವಾಳ್ಪ ಮಹಾತ್ಮರು ಬಲ್ಲರು " ಈ ಸುಳಾದಿಯಲ್ಲಿ ವಿವರಿಸಿದಂತೆ,

೧. ಇಡಾನಾಡಿಯಲ್ಲಿ ಮಂದಾಕಿನೀ,
೨. ಪಿಂಗಳಾ ನಾಡಿಯಲ್ಲಿ ಯಮುನೆ,
೩. ಗಾಂಧಾರಿ ನಾಡಿಯಲ್ಲಿ ಕಾವೇರಿ,
೪. ಹಸ್ತಿನೀ ನಾಡಿಯಲ್ಲಿ ಸಿಂಧು,
೫. ಅಲಂಬು ನಾಡಿಯಲ್ಲಿ ತಾಮ್ರಪರ್ಣೀ,
೬. ಮಧ್ಯನಾಡಿಯಲ್ಲಿ ಗೋಮತಿ,
೭. ಪುನ್ನಾಡಿ ನಾಡಿಯಲ್ಲಿ ಗಂಡಿಕೆ,
೮. ಸರಸ್ವತೀ ನಾಡಿಯಲ್ಲಿ ನಂದಾ ಕೃಷ್ಣವೇಣೀ,
೯. ಕುಹುನಾಡೀ—ಕಾಳಿಂದೀ,
೧೦. ಶಂಕಿಣಿ....ತಪತೀ
೧೧. ವಾರುಣಿ--ಗೋದಾವರಿ,
೧೨. ಪೂಷಾ--ಪಯಸ್ವನೀ,

ಹೀಗೆ ೧೨ ನಾಡಿಗಳಲ್ಲಿ ೧೨ ನದಿಗಳನ್ನು ತಿಳಿದು ಜ್ಞಾನತೀರ್ಥದಲ್ಲಿ ಸ್ನಾನ ಮಾಡಿರೆಂದು ವಿಜಯದಾಸರಾಯರವರ ಸುಳಾದಿಯಿಂದ ವ್ಯಕ್ತವಾಗುವುದು. ಇದೇ ರೀತಿಯಾಗಿ ಬ್ರಾಹ್ಮಣರ ಬಲದ ಕಿವಿಯಲ್ಲೂ ಸಹ ಇರುವವು. ಶ್ರೀ

ಪರಮಾತ್ಮನು ಕೇಶವ ಮೊದಲು ದಾಮೋದರನವರೆಗೂ ಆಗುವ (೧೨) ದ್ವಾದಶ, ರೂಪಗಳಿಂದ ಆ ನಾಡಿಗಳಲ್ಲಿರುವನು. ಎಲ್ಲಾ ನಾಡಿಗಳಿಗೂ ಮೂಲಾಧಾರವಾದ ಮಧ್ಯದಲ್ಲಿರುವ ಸುಷುಮ್ನಾ ನಾಡಿಯಲ್ಲಿ, ಶ್ರೀ ಪರಮಾತ್ಮನು ಏಕಾತ್ಮನೆಂಬ ಹೆಸರಿನಿಂದ ವಾಸಮಾಡುವನು. ಹೀಗೆ ತಿಳಿದು ಚಿಂತಿಸುವುದರಿಂದ ಆಯಾ ನದಿಗಳಲ್ಲಿ ಸ್ನಾನಮಾಡಿದ ಫಲವು ಪ್ರಾಪ್ತವಾಗುವದೆಂಬ ತಾತ್ಪರ್ಯ.

**ಆಮ್ನಾಯ ಪ್ರತಿಪಾದ್ಯ ಶ್ರೀ ಪ್ರ**
**ದ್ಯುಮ್ನ ದೇವನು ದೇಹದೊಳಗೆ ಸು**
**ಷುಮ್ನದಿಡಾ ಪಿಂಗಳದಿ ಶ್ರೀ ವಿಶ್ವಾದಿ ರೂಪದಲಿ ||**
**ನಿರ್ಮಲಾತ್ಮನು ವಾಣಿ ವಾಯುಚ**
**ತುರ್ಮುಖರೊಳಗಿದ್ದ ಖಿಲಜೀವರ**
**ಕರ್ಮಗುಣವನನುಸರಿಸಿ ನಡೆವನು ವಿಶ್ವವ್ಯಾಪಕನು ||೨೦||**

ಪದ್ಯಾರ್ಥ :—ಆಮ್ನಾಯ ಪ್ರತಿಪಾದ್ಯನಾದ=ವೇದಪ್ರತಿಪಾದ್ಯನಾದ, ನಿರ್ಮಲಾತ್ಮನು=ನಿರ್ದೋಷ ಸ್ವರೂಪನಾದ, ವಿಶ್ವವ್ಯಾಪಕನು=ಪ್ರಪಂಚವನ್ನೆಲ್ಲ ವ್ಯಾಪಿಸಿಕೊಂಡಿರುವ ಶ್ರೀ ಪ್ರದ್ಯುಮ್ನ ದೇವನು, ದೇಹದೊಳಗೆ, ಸುಷುಮ್ನದಿ=ಸುಷುಮ್ನಾ ನಾಡಿಯಲ್ಲಿ, ಇಡಪಿಂಗಳದಿ=ಇಡಾ, ಪಿಂಗಳಾ ನಾಡಿಗಳಲ್ಲಿ, ಶ್ರೀ ವಿಶ್ವಾದಿರೂಪದಲಿ=ವಿಶ್ವ, ತೈಜಸ, ಪ್ರಾಜ್ಞ ಎಂಬ ಮೂರು ರೂಪಗಳಿಂದ, ವಾಣಿ=ಸರಸ್ವತೀ ದೇವಿಯರು, ವಾಯು, ಚತುರ್ಮುಖರ=ಬ್ರಹ್ಮದೇವರ ಒಳಗಿದ್ದು, ಅಖಿಲಜೀವರ, ಕರ್ಮ=ಕರ್ಮಗಳನ್ನು, ಸತ್ವಾದಿ ಗುಣಗಳನ್ನು ಅನುಸರಿಸಿ, ನಡೆವನು=ಕಾರ್ಯವನ್ನು ಮಾಡುತ್ತಾ ಮಾಡಿಸುವನು.

ತಾತ್ಪರ್ಯ :—ಸುಷುಮ್ನಾದಿ ನಾಡಿಗಳಲ್ಲಿ ರೂಪಾಂತರಗಳಿಂದಲೂ ವಾಸಮಾಡುವನೆಂದು ಹೇಳುತ್ತಾರೆ.

ವೇದ ಪ್ರತಿಪಾದ್ಯನಾಗಿಯೂ, ನಿರ್ದೋಷ ಸ್ವರೂಪಿಯಾಗಿಯೂ, ಸಕಲ ಲೋಕವನ್ನೂ ಏಕಾಕಾರವಾಗಿ ವ್ಯಾಪಿಸಿಕೊಂಡಿರುವ ಶ್ರೀ ಪರಮಾತ್ಮನು ಪ್ರದ್ಯುಮ್ನ ನಾಮಕನಾಗಿ ಅಖಂಡನಾಗಿ ಸುಷುಮ್ನಾ, ಇಡಾ, ಪಿಂಗಳಾ ಎಂಬ ಮೂರು ನಾಡಿಗಳಲ್ಲಿ ವ್ಯಾಪ್ತನಾಗಿರುವನು. ಈ ನಾಡಿಗಳಿಗೆ ಅಭಿಮಾನಿಗಳಾಗಿ ಸರಸ್ವತೀ, ವಾಯುದೇವರು, ಬ್ರಹ್ಮದೇವರು ಇರುವರು. ಇವ

ರಲ್ಲಿ ಖಂಡರೂಪಿಯಾಗಿ ಪ್ರದ್ಯುಮ್ನನೇ, ವಿಶ್ವ, ತೈಜಸ, ಪ್ರಾಜ್ಞ ಎಂಬ ೩ ರೂಪಗಳಿಂದ ಇದ್ದು, ಸಕಲ ಜೀವರ ಯೋಗ್ಯತಾನುಸಾರವಾಗಿ ಅವರವರ ಪ್ರಾರಬ್ಧಾದಿ ಕರ್ಮಗಳನ್ನೂ ಸತ್ವಾದಿ ಗುಣಗಳನ್ನೂ ಅನುಸರಿಸಿ ಕರ್ಮಗಳನ್ನು ಮಾಡಿ ಮಾಡಿಸುವನು.

**ಅಬ್ದಯನ ಋತುಮಾಸ ಪಕ್ಷಸು**
**ಶಬ್ದದಿಂದಲಿ ಕರೆಸುತಲಿನೀ**
**ಲಾಬ್ಜವರ್ಣ ನಿರುದ್ಧ ಮೊದಲಾದೈದು ರೂಪದಲಿ ||**
**ಹಬ್ಬಿಹನು ಸರ್ವತ್ರದಲಿ ಕರು**
**ಣಾಬ್ಧಿ ನಾಲ್ವತ್ತೈದು ರೂಪದಿ**
**ಲಭ್ಯನಾಗುವನೀಪರಿಯಲಿ ಧೇನಿಸುವ ಭಕುತರಿಗೆ ||೨೧||**

ಪದ್ಯಾರ್ಥ :—ಅಬ್ದ=ವರ್ಷವು, ಅಯನ, ಋತು, ಮಾಸ, ಪಕ್ಷ ಇವುಗಳ ಸುಶಬ್ದದಿಂದಲಿ=ಉತ್ತಮವಾದ ಶಬ್ದಗಳಿಂದ, ಕರೆಸುತ=ಕರೆಸಿಕೊಳ್ಳುತ್ತ, ನೀಲಾಬ್ಜವರ್ಣ=ನೀಲ ಕಮಲದಂತೆ ಬಣ್ಣವುಳ್ಳ, ಅನಿರುದ್ಧ ಮೊದಲಾದ, ಐದು ರೂಪದಲಿ=೫ ರೂಪಗಳಿಂದ, ಸರ್ವತ್ರದಲಿ=ಸರ್ವಸ್ಥಳಗಳಲ್ಲಿಯೂ, ಕರುಣಾಬ್ಧಿ=ಕರುಣಾ ಸಮುದ್ರನಾದ ಶ್ರೀ ಪರಮಾತ್ಮನು, ಹಬ್ಬಿಹನು=ವ್ಯಾಪ್ತನಾಗಿರುವನು, ಈಪರಿ=ಈ ರೀತಿಯಾಗಿ, ಧೇನಿಸುವ=ಧ್ಯಾನಮಾಡುವ, ಭಕುತರಿಗೆ=ಭಕ್ತರಿಗೆ, ನಲವತ್ತೈದು ರೂಪದಿ=೪೫ ರೂಪಗಳಿಂದ, ಲಭ್ಯವಾಗುವನು. ಧ್ಯಾನಗೋಚರನಾಗುವನು.

ತಾತ್ಪರ್ಯ :—ಅಬ್ದಾದಿಗತ ಭಗವದ್ರೂಪಗಳ ಚಿಂತನಾಪ್ರಕಾರವನ್ನು ಹೇಳುತ್ತಾರೆ.—ವರ್ಷ ೧. ಅಯನ ೨. ಋತು ೬. ಮಾಸ ೧೨. ಪಕ್ಷ ೨೪. ಅಂತು ೪೫ ರೂಪಗಳು. ಕರುಣಾ ಸಮುದ್ರನಾದ ಶ್ರೀ ಹರಿಯು ೪೫ ರೂಪಗಳಿಂದ ಮೇಲೆ ಹೇಳಿದ ಸಂವತ್ಸರಾದಿಗಳಲ್ಲಿ ಸಂವತ್ಸರಾದಿ ಶಬ್ದವಾಚ್ಯನಾಗಿ ವ್ಯಾಪ್ತನಾಗಿರುವನು, ಇಂತಹ ೪೫ ರೂಪಗಳನ್ನು ತಿಳಿದು ಯಾರು ಪರಮಾತ್ಮನನ್ನು ಧೇನಿಸುವರೋ, ಅಂತಹ ಭಕ್ತರಿಗೆ ಅದರಂತೆಯೆ ಧ್ಯಾನಗೋಚರನಾಗುವನು.

**ಐದು ರೂಪಾತ್ಮಕನು ಇಪ್ಪ**
**ತ್ತೈದು ರೂಪದಲಿಪ್ಪ ಮತ್ತಾದಿ**
**ನೈದು ತಿಥಿ ಇಪ್ಪತ್ತು ನಾಲ್ಕರಿಂದ ಹೆಚ್ಚಿಸಲು ||**

**ಯ್ದೈದುವದು ಅರವತ್ತಧಿಕ ಮುನ್ನೂ**
**ರಾದ ದಿವಸಾಹ್ವಯನೊಳಗೆ ಮನ**
**ತೊಯ್ದವಗೆ ತಾಪತ್ರಯ ಮಹದೋಷವೆಲ್ಲಿಹವೋ ||೨೨||**

ಪದ್ಯಾರ್ಥ :—ಐದು ರೂಪಾತ್ಮಕನು=ಅನಿರುದ್ಧಾದಿ ೫ ರೂಪಾತ್ಮಕನಾದ ಶ್ರೀಹರಿಯು, ಇಪ್ಪತ್ತೈದು ರೂಪದಲಿ=ಅಬ್ದಾದಿ ಐದರಲ್ಲಿ ಒಂದೊಂದರಲ್ಲಿ ೫ ರೂಪಗಳಂತೆ, ೫×೫=೨೫ ರೂಪಗಳಿಂದ, ಇಪ್ಪ=ಇರುವನು. ಮತ್ತು, ಹದಿನೈದು ತಿಥಿ=ಪಾಡ್ಯ ವೊದಲು ಪೌರ್ಣಿಮೆವರಿಗೂ ಶುಕ್ಲಪಕ್ಷದಲ್ಲಿ, ಪಾಡ್ಯ ವೊದಲು ಅಮಾವಾಸ್ಯೆ ವರೆಗೂ ಕೃಷ್ಣಪಕ್ಷದಲ್ಲಿ ಹೀಗೆ ಪಕ್ಷಕ್ಕೆ ೧೫ ತಿಥಿಗಳನ್ನು, ಇಪ್ಪತ್ತು ನಾಲ್ಕರಿಂದ ಪೆಚ್ಚಿಸಲು=ಸಂವತ್ಸರಕ್ಕಾಗುವ ೨೪ ಪಕ್ಷಗಳಿಂದ ಗುಣಾಕಾರ ಮಾಡಲು, ಅರವತ್ತಧಿಕ ಮುನ್ನೂರು=೩೬೦ ದಿವಸಗಳು ಯ್ದೈದುವದು=ಆಗುವವು. ಆದ ದಿವಸಾಹ್ವಯ=ಆದಿವಸಗಳ ನಾಮಧೇಯ ಉಳ್ಳ ಪರಮಾತ್ಮನ ಒಳಗೆ, ಮನತೊಯ್ದವಗೆ=ಚೆನ್ನಾಗಿ ಮನಸ್ಸನ್ನಿಟ್ಟವನಿಗೆ ತಾಪತ್ರಯ=ತಾಪತ್ರಯವೆಂಬ, ಮಹದೋಷ=ಮಹಾದೋಷವು, ಯೆಲ್ಲಿಹವೋ=ಎಲ್ಲಿರುವವೋ, ಇಲ್ಲವೆಂದರ್ಥ. || ೨೨ ||

ತಾತ್ಪರ್ಯ :—ಅನಿರುದ್ಧಾಧಿ ಪಂಚರೂಪಾತ್ಮಕನಾದ ಶ್ರೀಹರಿಯು, ಸಂವತ್ಸರ, ಅಯನ, ಋತು, ಮಾಸ, ಪಕ್ಷಗಳೆಂಬ ಐದರಲ್ಲಿ ಒಂದೊಂದರಲ್ಲಿಯೂ, ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ ಎಂಬೈದು ರೂಪಗಳಿಂದ ಇರುವನು. ಹೀಗೆ ಅನಿರುದ್ಧಾದಿ ೫ ರೂಪಗಳನ್ನು, ಸಂವತ್ಸರಾದಿ ಐದರಿಂದ ಗುಣಾಕಾರ ಮಾಡಿದರೆ ೨೫ ರೂಪಗಳಾಗುವವು. ಈ ೨೫ ರೂಪಗಳಿಂದ ಪರಮಾತ್ಮನು ಸಂವತ್ಸರಾದಿಗಳಲ್ಲಿ ಇರುವನು. ಮತ್ತು ೧ ಪಕ್ಷಕ್ಕೆ ೧೫ ದಿವಸಗಳು. ತಿಂಗಳಿಗೆ ಶುಕ್ಲ, ಕೃಷ್ಣವೆಂಬ ೨ ಪಕ್ಷಗಳು, ೧೨ ತಿಂಗಳಿಗೆ ೨೪ ಪಕ್ಷಗಳಾಗುವವು. ೨೪×೧೫ ಹೀಗೆ ಗುಣಾಕಾರ ಮಾಡಿದರೆ ೩೬೦ ದಿವಸಗಳಾಗುವವು. ಪರಮಾತ್ಮನು ೩೬೦ ರೂಪಗಳಿಂದ ಆದಿವಸಗಳಲ್ಲಿ ದಿವಸ ನಾಮಧೇಯದಿಂದಿರುವನು, ಇಂತಹ ಪರಮಾತ್ಮನಲ್ಲಿ ಮನಸ್ಸನ್ನಿಟ್ಟು ಧೃಢವಾಗಿ ಚಿಂತಿಸುವವನಿಗೆ ತಾಪತ್ರಯ ದೋಷವೆಂಬುದು ಎಂದಿಗೂ ಬರುವುದಿಲ್ಲವೆಂದು ತಾತ್ಪರ್ಯ || ೨೨ ||

**ದಿವಸ ಯಾಮ ಮುಹೂರ್ತ ಘಟಿಕಾ**
**ದ್ಯವಯವಗಳೊಳಿದ್ದ ಗಂಗಾ**

**ಪ್ರವಹದಂದದಿಕಾಲನಾಮಕ ಪ್ರವಹಿಸುತಲಿಪ್ಪ ||**
**ಇವನ ಗುಣರೂಪ ಕ್ರಿಯಂಗಳ**
**ನಿವಹದೊಳು ಮುಳಿಗ್ಯಾಡುತಲಿ ಭಾ**
**ರ್ಗವಿ ಸದಾನಂದಾತ್ಮಳಾಗಿಹಳೆಲ್ಲ ಕಾಲದಲಿ || ೨೩ ||**

ಪದ್ಯಾರ್ಥ:—ದಿವಸ=ಪಾಡ್ಯ ಮೊದಲಾದ ದಿವಸಗಳು, ಅಥವಾ ಹಗಲು, ಯಾಮ=ಝಾಮ, ಮುಹೂರ್ತ=೨ ಘಳಿಗೆಯಕಾಲ, ಘಟಿಕಾದಿ=ಘಳಿಗೆ ಮೊದಲಾದ, ಅವಯುವಗಳೊಳಿದ್ದು=ಕಾಲಗಳಲ್ಲಿದ್ದು, ಗಂಗಾಪ್ರವಹದಂದದಿ=ಗಂಗಾ ಪ್ರವಾಹದಂತೆ, ಕಾಲನಾಮಕ=ಕಾಲನಾಮಕ ಪರಮಾತ್ಮನು, ಪ್ರವಹಿಸುತಲಿ=ಪ್ರವಹಿಸುತ್ತಾ ಅಂದರೆ, ಗಂಗಾ ಪ್ರವಾಹವು ಹೇಗೆ ನಿತ್ಯವಾಗಿ ಮುಂದೆ ನೀರು ಹೋಗುತ್ತಾ ಹಿಂದೆ ನೀರು ಬರುತ್ತಲೆ ಇರುವುದೋ ಹಾಗೆ, ಒಂದು ಘಳಿಗೆ ಯಾಗುತ್ತಾ ಮತ್ತೊಂದು ಘಳಿಗೆ ಬರುವುದು. ಹೀಗೆ ಪ್ರವಾಹ ರೂಪದಿಂದ, ಇಪ್ಪ=ಇರುವನು, ಇವನ=ಈ ಪರಮಾತ್ಮನ, ಗುಣರೂಪ ಕ್ರಿಯಂಗಳ=ಗುಣ=ಆನಂದಾದಿ ಗುಣಗಳು, ರೂಪ=ಅಪ್ರಾಕೃತ ರೂಪಗಳು, ಕ್ರಿಯಂಗಳ=ಸೃಷ್ಟ್ಯಾದಿ ಕ್ರಿಯಾ ವಿಶೇಷಗಳು, ಇವುಗಳ, ನಿವಹದೊಳು=ಮಡುವಿನೊಳಗೆ, ಮುಳಗ್ಯಾಡುತಲಿ, ಭಾರ್ಗವಿ=ರಮಾ ದೇವಿಯರು, ಸದಾನಂದಾತ್ಮಳಾಗಿ=ಸದಾಕಾಲದಲ್ಲಿ ಆನಂದಸ್ವರೂಪಳಾಗಿ, ಎಲ್ಲಕಾಲದಲಿ=ಪ್ರಳಯಾದಿ ಕಾಲದಲ್ಲಿಯೂ ಕೂಡ, ಇಹಳು=ವಾಸಮಾಡುತ್ತಿರುವರು.

ತಾತ್ಪರ್ಯ :—ಕಾಲನಾಮಕ ಪರಮಾತ್ಮನು ಲವನಿಮೇಷಾದ್ಯವಯುವಗಳಲ್ಲಿ ಪ್ರವಾಹ ರೂಪನಾಗಿರುವನೆಂದು ಹೇಳುತ್ತಾರೆ:—ದಿವಸಗಳು, ಝಾಮ, ಮುಹೂರ್ತ, ಘಳಿಗೆ ಮೊದಲಾದವು ದಿವಸಗಳಿಗೆ ಅಂಗಗಳು. ಇವುಗಳಲ್ಲಿ ಗಂಗಾ ಪ್ರವಾಹದಂತೆ ನಿತ್ಯವಾಗಿ ಕಾಲ ನಾಮಕ ಪರಮಾತ್ಮನು ಇರುವನು. ಗಂಗಾ ಪ್ರವಾಹವು ಹೇಗೆ ನೀರುಮುಂದೆ ಹೋಗುತ್ತಾ ಮತ್ತು ಹಿಂದೆ ಬರುತ್ತಲೇ ಇರುವುದೊ, ಹೋದ ನೀರು ಹೇಗೆ ಹಿಂದಿರುಗದೋ, ಹಾಗೆಯೇ ದಿವಸದಲ್ಲಾದರೂ ಘಳಿಗೆಮೇಲೆ ಘಳಿಗೆ, ಮುಹೂರ್ತದ ಮೇಲೆ ಮತ್ತೊಂದು ಮುಹೂರ್ತ ಹಗಲಾದಮೇಲೆ ರಾತ್ರಿ, ಪುನಃ ಹಗಲು ಹೀಗೆ ಬರುತ್ತಿರುವುದರಿಂದ ಪ್ರವಾಹೋಪಮಾನ ಕೊಟ್ಟರು. ಸಾಮಾನ್ಯ ನದಿಯ ಪ್ರವಾಹದಲ್ಲಿಯೂ ಈ ಗುಣವಿದ್ದೇ ಇರುವುದು. ಗಂಗಾಪ್ರವಾಹೋಪಮಾನ

ವೇಕೆಂದರೆ ಮಿಗಲಾದವುಗಳಲ್ಲಿ ಕೆಲವುಕಾಲ ನೀರಿಲ್ಲದೆ ಇರುವುದೂ ಉಂಟು. ಆದ್ದರಿಂದ ಗಂಗಾಪ್ರವಾಹೋಪಮಾನ ಕೊಟ್ಟರೆಂದು ತಿಳಿಯಬೇಕು. ಇಂತಹ ಭಗವಂತನ ಆನಂದಾದಿ ಗುಣಗಳು, ಅಪ್ರಾಕೃತವಾದ ಅನಂತಾನಂತ ರೂಪಗಳು, ಸೃಷ್ಟ್ಯಾದಿ ಅನಂತಾನಂತ ಕ್ರಿಯೆಗಳು, ಇವೇ ಮೊದಲಾದ ಭಗವನ್ಮಹಿಮೆಗಳೆಂಬ ದೊಡ್ಡಮಡುವಿನಲ್ಲಿ ರಮಾ ದೇವಿಯರು ಮುಳಿಗಿ ಆಡುತ್ತಾ ಅಂದರೆ ಅವುಗಳ ಪಾರಗಾಣದೆ, ಪಾರಗಾಣುವ ಪ್ರಯತ್ನದಲ್ಲಿ ನಿರತರಾಗಿರುವರೆಂದು ಅರ್ಥ. ಯಾರಾದರು ಒಂದು ಕಾರ್ಯವನ್ನು ಪ್ರಯತ್ನಿಸಿ ಆ ಕಾರ್ಯವಾಗದಿದ್ದರೆ ಮನಃಕ್ಲೇಶವಾಗುವುದು. ಹಾಗೆ ರಮಾದೇವಿಯರು ಕ್ಲೇಶಪಡುವರೋ ಅಂದರೆ, ಇಲ್ಲ; ಸದಾ ಆನಂದ ಸ್ವರೂಪರಾಗಿಯೇ ಕುತೂಹಲದಿಂದ ನಿತ್ಯದಲ್ಲಿಯೂ ಹೊಸ ಹೊಸ ಮಹಿಮೆಗಳನ್ನು ಹುಡುಕುತ್ತಿರುವರು || ೨೩ ||

**ವೇದ ತತಿಗಳ ಮಾನಿ ಲಕ್ಷ್ಮಿಧ**
**ರಾಧರನ ಗುಣರೂಪ ಕ್ರೀಯುಗ**
**ಳಾದಿ ಮಧ್ಯಾಂತವನು ಕಾಣದೆ ಮನದಿ ಯೋಚಿಸುತ ||**
**ಆದಪೆನೆ ಈತನಿಗೆ ಪತ್ನಿ ಕೃ**
**ಪೋದಧಿಯು ಸ್ವೀಕರಿಸಿದನು ಲೋ**
**ಕಾಧಿಪನು ಭಿಕ್ಷುಕನ ಮನೆ ಯೌತನವ ಕೊಂಬಂತೆ || ೨೪ ||**

ಪದ್ಯಾರ್ಥ :—ವೇದ ತತಿಗಳ=ವೇದ ಸಮೋಹಗಳಿಗೆ, ಮಾನಿ=ಅಭಿಮಾನಿಯಾದ, ಲಕ್ಷ್ಮಿ=ಲಕ್ಷ್ಮೀದೇವಿಯರು, ಧರಾ ಧರನ=ಭೂಧರನಾದ ಪರಮಾತ್ಮನ, ಗುಣರೂಪ ಕ್ರಿಯುಗಳ, ಆದಿಮಧ್ಯಾಂತವನು=ಮೊದಲು ಮಧ್ಯ, ಕೊನೆಯನ್ನು, ಕಾಣದೆ, ಈತನಿಗೆ, ಈ ಪರಮಾತ್ಮನಿಗೆ, ಪತ್ನಿ=ಹೆಂಡತಿಯು, ಆದಪೆನೆ=ಪ್ರತಿ ಅವತಾರಗಳಲ್ಲಿಯೂ ಕೂಡ ನಾನೇ ಆಗುವೆನೇ ಎಂದು, ಮನದಿ=ಮನಸ್ಸಿನಲ್ಲಿ, ಯೋಚಿಸುತ್ತಾ ಇರುವರು. ಕೃಪೋದಧಿಯು =ಕರುಣಾ ಸಮುದ್ರನಾದ ಹರಿಯು, ಲೋಕಾಧಿಪನು=ಮಹಾರಾಜನು, ಭಿಕ್ಷುಕನ ಮನೆ ಔತನವ, ಕೊಂಬಂತೆ=ಸ್ವೀಕರಿಸುವಂತೆ, ಸ್ವೀಕರಿಸಿದನು. || ೨೪ ||

**ತಾತ್ಪರ್ಯ :**—ಲಕ್ಷ್ಮೀದೇವಿಯರು ಭಗವನ್ಮಹಿಮೆಯನ್ನು ಸಾಕಲ್ಯೇನ ಕಾಣರೆಂಬ ವಿಷಯುವನ್ನು ಈ ಪದ್ಯದಿಂದಲೂ ಹೇಳುತ್ತಾರೆ :—

ವೇದ ಸಮೂಹಗಳಿಗಭಿಮಾನಿಯರಾದ ರಮಾದೇವಿಯರು ಶ್ರೀ ಪರಮಾತ್ಮನ ಗುಣರೂಪಕ್ರಿಯೆಗಳ ಆದಿ, ಮಧ್ಯ, ಅಂತ್ಯಗಳನ್ನು ಕಾಣದೆ ಮನಸ್ಸಿನಲ್ಲಿ, ಆಶ್ಚರ್ಯ ಪಡುತ್ತಾ ಇಂತಹ ಪರಮಾತ್ಮನಿಗೆ ಪ್ರತಿ ಅವತಾರದಲ್ಲಿಯೂ ನಾನೇ ಪತ್ನಿಯಾದೇನೆ ಎಂದು ಯೋಚಿಸುತ್ತಿರುವರು. ಲಕ್ಷ್ಮೀ ದೇವಿಯರಿಗೆ ಅವತಾರಗಳಲ್ಲಿ ತಾವೇ ಹೆಂಡತಿಯಾಗುವೆನೋ ಇಲ್ಲವೋ ಎಂಬ ಸಂಶಯವೇನೂ ಇಲ್ಲ. ಯಾವಾಗ ಅವತಾರವಾದೀತು, ಯಾವಾಗ ಪತ್ನಿಯಾದೇನೆಂಬ ಲವಲವಿಕೆಯಿಂದ ಯೋಚಿಸುತ್ತಿರುವರೆಂಬ ಭಾವ. ಪರಮಾತ್ಮನು ಸ್ವರಮಣನಾದುದರಿಂದ ರಮಾದೇವಿಯರಿಂದ ತನಗೇನೂ ಆಗಬೇಕಾಗಿಲ್ಲವಾದರೂ, ಕರುಣಾ ಸಮುದ್ರನಾದುದರಿಂದ ಆಕೆಯ ಸೇವೆಗೆ ಪ್ರೀತನಾಗಿ, ಭಿಕ್ಷುಕನ ಮನೆಯ ಔತಣವನ್ನು ಮಹಾರಾಜನು ಅಂಗೀ ಕರಿಸುವಂತೆ ತಾನು ಆಕೆಯನ್ನು ಸ್ವೀಕರಿಸಿದನು. || ೨೪ ||

**ಕೋವಿದರು ಚಿತ್ತೈಸುವುದು ಶ್ರೀ**
**ದೇವಿಯೊಳಗಿಹ ನಿಖಿಳ ಗುಣತೃಣ**
**ಜೀವನಲಿ ಕಲ್ಪಿಸಿ ಯುಕುತಿಯಲಿ ಮತ್ತು ಕ್ರಮದಿಂದ ||**
**ದೇವಿ ದೇವಿಯು ಇಪ್ಪಳೆಂದರಿ**
**ದಾವಿರಿಂಚಿಯ ಜನನಿ ಈತನ**
**ಯಾವಕಾಲದಲರಿಯಳೆಂತನೆ ನರರ ಪಾಡೇನು || ೨೫ ||**

ಪದ್ಯಾರ್ಥ :—ಕೋವಿದರು=ಜ್ಞಾನಿಗಳು, ಚಿತ್ತೈಸುವದು=ಮುಂದೆ ಹೇಳುವ ವಿಷಯವನ್ನು ಚಿತ್ತದಲ್ಲಿಡಬೇಕು. ಶ್ರೀ ದೇವಿಯೊಳಗೆ, ಇಹ=ಇರುವ, ನಿಖಿಳ ಗುಣ=ಸಮಸ್ತ ಗುಣಗಳು, ತೃಣ ಜೀವನಲಿ=ಜೀವರ ಪೈಕಿ ಕಡೆಯವರಾದ ತೃಣ ಜೀವರಲ್ಲಿ, ಕಲ್ಪಿಸಿ=ಇರುವವೆಂದು ಭಾವಿಸಿ, ಯುಕುತಿಯಲಿ=ಯುಕ್ತಿಯಿಂದ, ಮತ್ತು ಕ್ರಮದಿಂದ=ತೃಣಮೊದಲು ಬ್ರಹ್ಮದೇವರವರೆವಿಗೂ ಇರುವ ತಾರತಮ್ಯ ಕ್ರಮದಿಂದ=ಗುಣಗಳನ್ನು ಹೆಚ್ಚಿಸಿದರೆ ಎಷ್ಟು ಆಗುವವೋ ಅಷ್ಟು ಗುಣಗಳಿಂದ, ದೇವಿ ದೇವಿಯು=ದೇವಿಯರಿಗೆ ದೇವಿಯರಾದ ರಮಾದೇವಿಯರು, ಇಪ್ಪಳೆಂದು=ಇರುವರೆಂದು, ಅರಿದು=ತಿಳಿದು, ಆವಿರಿಂಚಿಯ=ಬ್ರಹ್ಮದೇವರ ಜನನಿ=ತಾಯಿಯಾದ, ರಮಾದೇವಿಯರು, ಈತನ=ಈ ಪರಮಾತ್ಮನ ಮಹಿಮೆಯನ್ನು, ಯಾವಕಾಲದಲಿ=ಎಲ್ಲಾಕಾಲದಲ್ಲಿಯೂ, ಅರಿಯಳು=ಅರಿಯರು, ಯೆಂತನೆ=ಅಂದ

ಮೇಲೆ, ನರರ=ಮನುಷ್ಯರ, ಪಾಡೇನು.

ತಾತ್ಪರ್ಯ :—ಮೇಲಿನ ಪದ್ಯಾರ್ಥವನ್ನೇ ವಿಶದಮಾಡುತ್ತಾರೆ ;— ಪಂಡಿತರು ಈ ವಿಷಯದಲ್ಲಿ ಸ್ವಲ್ಪ ಚಿತ್ತವನ್ನು ಕೊಡಬೇಕು. ಲಕ್ಷ್ಮೀದೇವಿಯರಲ್ಲಿರುವ ಸಂಪೂರ್ಣ ಗುಣಗಳು ಒಬ್ಬ ಅಧಮನಾದ ತೃಣ ಜೀವನಲ್ಲಿಯೂ ಇದೆಯೆಂದು ಭಾವಿಸೋಣ, ಅದರಮೇಲೆ ಅವನಿಗಿಂತಲೂ ಉತ್ತಮರಾದ ಚೇತನ ಪ್ರಾಣಿಗಳಲ್ಲಿ ಗುಣಗಳನ್ನು ಹೆಚ್ಚಿಸುತ್ತಾ ಬನ್ನಿರಿ ! ಹೀಗೆ ಮನುಷ್ಯರು ದೇವತೆಗಳು ಎಂಬ ತಾರತಮ್ಯದಿಂದ ಗುಣಗಳನ್ನು ಹೆಚ್ಚಿಸುತ್ತಾ ಬ್ರಹ್ಮದೇವರವರೆಗೂ ಗುಣಗಳನ್ನು ಹೆಚ್ಚಿಸಿದರೆ ಎಷ್ಟು ಗುಣಗಳು ಹೆಚ್ಚಾಗುವವು. ಈ ಪ್ರಕಾರವಾದ ಗುಣಗಳು ರಮಾದೇವಿಯರಲ್ಲಿ ಎಷ್ಟಿವೆ ಎಂಬುವುದನ್ನು ಚಿಂತಿಸಿ ! ಇಂತಹ ಗುಳಗಳುಳ್ಳ ರಮಾದೇವಿಯರು ತಮ್ಮ ಇಷ್ಟು ಗುಣಗಳಿಂದ ಪರಮಾತ್ಮನ ಗುಣಗಳನ್ನು ಸರ್ವಕಾಲದಲ್ಲಿ ಹುಡುಕುತ್ತಿದ್ದರೂ ಪಾರಗಾಣರು. ಅಂದಮೇಲೆ ಇನ್ನು ಅತ್ಯಲ್ಪರಾದ ಮನುಷ್ಯರ ಪಾಡೇನು ! ಭಗವದನುಗ್ರಹದಿಂದಲೇ ಭಗವನ್ಮಹಿಮೆಯನ್ನು ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಯತ್ಕಿಂಚಿತ್ ಬಲ್ಲರೆಂದು ತಾತ್ಪರ್ಯ.

**ಕ್ಷೀರದಧಿ ನವನೀತ ಘೃತದೊಳು**
**ಸೌರಭರಸಾಹ್ವಯನೆನಿಸಿ ಶಾಂ**
**ತೀರಮಣ ಜ್ಞಾನಕ್ರಿಯೇಚ್ಛಾ ಶಕ್ತಿಯೆಂದೆಂಬಾ ।**
**ಈರೆರಡು ನಾಮದಲಿ ಕರಸುವ**
**ಭಾರತೀ ವಾಗ್ದೇವಿ ವಾಯುಸ**
**ರೋರು ಹಾಸನರಲ್ಲಿ ನೆಲಸಿಹನೆಲ್ಲಕಾಲದಲಿ ॥ ೨೬ ॥**

ಪದ್ಯಾರ್ಥ :—ಕ್ಷೀರ=ಹಾಲು, ದಧಿ=ಮೊಸರು, ನವನೀತ=ಬೆಣ್ಣೆ, ಘೃತದೊಳು=ತುಪ್ಪ, ಇವುಗಳಲ್ಲಿ, ಸೌರಭರಸಾಹ್ವಯನೆನಿಸಿ=ವಾಸನಾರೂಪನೆಂತಲೂ, ರಸರೂಪನೆಂತಲೂ ಪ್ರಸಿದ್ಧನಾಗಿ, ಶಾಂತೀರಮಣ=ಶಾಂತೀಪತಿಯಾದ ಅನಿರುದ್ಧನು, ಜ್ಞಾನ, ಕ್ರಿಯಾ, ಇಚ್ಛಾ, ಶಕ್ತಿಯೆಂದೆಂಬ= ಎಂದು ಪ್ರಸಿದ್ಧವಾದ, ಈರೆರಡು ನಾಮದಲಿ=೪ ನಾಮಗಳಿಂದ, ಕರೆಸುವ =ಪ್ರಸಿದ್ಧರಾದ, ಭಾರತೀ=ಭಾರತೀದೇವಿಯರು, ವಾಗ್ದೇವಿ=ಸರಸ್ವತೀದೇವಿಯವರು, ವಾಯು=ವಾಯುದೇವರು, ಸರೋರು ಹಾಸನರಲ್ಲಿ=ಕಮ

ಲಾಸನರಾದ ಬ್ರಹ್ಮದೇವರು, ಈ ನಾಲ್ವರಲ್ಲಿ, ಎಲ್ಲಕಾಲದಲಿ=ಸರ್ವಕಾಲದಲ್ಲಿ ಯೂ, ನೆಲಸಿಹನು=ವಾಸಮಾಡುತ್ತಿರುವನು.

ತಾತ್ಪರ್ಯ ;—ದಧಿಕ್ಷೀರಾದಿಗಳಲ್ಲಿ ಭಗವದ್ರೂಪ ಚಿಂತನೆಯನ್ನು ಹೇಳುತ್ತಾರೆ.

ಹಾಲು, ಮಸರು, ಬೆಣ್ಣೆ, ತುಪ್ಪ ಈ ನಾಲ್ಕರಲ್ಲಿರುವ ಸುವಾಸನೆ, ರುಚಿ ಇವುಗಳ ಸ್ವರೂಪನಾಗಿ, ಶಾಂತೀಪತಿಯಾದ ಅನಿರುದ್ಧನು ನಾಲ್ಕು ರೂಪಗಳಿಂದ, ಜ್ಞಾನರೂಪದಿಂದ ಬ್ರಹ್ಮದೇವರಲ್ಲಿಯು ಕ್ರಿಯಾರೂಪದಿಂದ ವಾಯುದೇವರಲ್ಲಿಯೂ, ಇಚ್ಛಾರೂಪದಿಂದ ಸರಸ್ವತಿಯಲ್ಲಿಯು ಶಕ್ತಿರೂಪದಿಂದ ಭಾರತೀದೇವಿಯಲ್ಲಿಯೂ ಸರ್ವದಾ ಇರುತ್ತಿರುವನೆಂದು ಚಿಂತಿಸಬೇಕು.

**ವಸುಗಳೆಂಟು ನವಪ್ರಜೇಶರು**
**ಶ್ವಸನಗಣರ್ನವತ್ತು ಏಕಾ**
**ದಶದಿವಾಕರರನಿತು ರುದ್ರರು ಯಶ್ವಿನಿಗಳೆರಡು ।**
**ದಶವಿಹೀನ ಶತಾಖ್ಯರೀಸುಮ**
**ನಸರೊಳಗೆ ಚತುರಾತ್ಮನಿ ಯಾ**
**ಮಿಸುವ ಬ್ರಹ್ಮ ಸಮೀರಖಗಪ ಫಣೀಂದ್ರರೊಳಗಿದ್ದು ॥೨೭॥**

ಪದ್ಯಾರ್ಥ :—ವಸುಗಳೆಂಟು=ಅಷ್ಟವಸುಗಳು, ನವಪ್ರಜೇಶರು=೯ ಪ್ರಜೇಶರು, ಶ್ವಸನಗಣರ್ನವತ್ತು=೫೦ ಮರುದ್ಗಣರು=ಏಕಾದಶ ದಿವಾಕರರು=೧೧ ಸೂರ್ಯರು, ಅನಿತು ರುದ್ರರು=ಅಷ್ಟೇ ರುದ್ರರು, ಅಂದರೆ ೧೧ ರುದ್ರರು, ಅಶ್ವಿನಿಗಳೆರಡು=ಅಶ್ವಿನಿ ದೇವತೆಗಳು ಇಬ್ಬರು, ದಶವಿಹೀನ ಶತಾಖ್ಯ=೧೦ ಕಮ್ಮಿ ನೂರು ಸಂಖ್ಯಾಕರಾದ, ಈ ಸುಮನಸರೊಳಗೆ=ಈ ದೇವತೆಗಳೊಳಗೆ, ಚತುರಾತ್ಮ=ಅನಿರುದ್ಧಾದಿ ೪ ರೂಪಾತ್ಮಕನು, ಬ್ರಹ್ಮ=ಬ್ರಹ್ಮದೇವರು, ಸಮೀರ=ವಾಯುದೇವರು, ಖಗಪ=ಪಕ್ಷಿ ಶ್ರೇಷ್ಟನಾದ ಗರುಡದೇವರು, ಫಣೀಂದ್ರರೊಳಗಿದ್ದು=ಶೇಷದೇವರು ಈ ನಾಲ್ವರೊಳಗಿದ್ದು ನಿಯಾಮಿಸುವ=ಪ್ರೇರಕನಾಗಿರುವನು.

ತಾತ್ಪರ್ಯ:—ಅನಿರುದ್ಧಾದಿ ೪ ರೂಪಗಳುಳ್ಳ ಪರಮಾತ್ಮನು ವಸ್ವಾದಿ ೯೦ ದೇವತೆಗಳೊಳಗೆ ಪ್ರೇರಕನಾಗಿರುವನೆಂದು ಹೇಳುತ್ತಾರೆ.

**ದ್ರೋಣ, ಪ್ರಾಣ, ಧ್ರುವ, ಅರ್ಕ, ಅಗ್ನಿ, ದೋಷ, ವಸು, ವಿಭಾವಸು ಎಂದು ೮ ಮಂದಿ ವಸುಗಳು, ಪ್ರಜೇಶರು, ಮರೀಚ್ಯಾದಿ ೯ ಮಂದಿಗಳು.**

ಮರುತ್ತುಗಣಗಳು ೪೯ ಮಂದಿಗಳು. ಇಂದ್ರದೇವರು ಒಬ್ಬರನ್ನು ಸೇರಿಸಿ ೫೦ ಮಂದಿಗಳು. ಸೂರ್ಯರು ೧೧ ಮಂದಿಗಳು. ದ್ವಾದಶಾದಿತ್ಯರ ಪೈಕಿ ಉರುಕ್ರಮನೆಂಬ ಸೂರ್ಯನು ಪರಮಾತ್ಮನ ಅವತಾರವೇ ಆದುದರಿಂದ ಆ ಸೂರ್ಯನನ್ನು ಬಿಟ್ಟು ೧೧ ಮಂದಿಯನ್ನು ತೆಗೆದುಕೊಂಡರು. ಅಷ್ಟೇ ರುದ್ರರು ಅಂದರೆ ರುದ್ರಗಣ ೧೧. ಅಶ್ವಿನೀದೇವತೆಗಳಿಬ್ಬರು. ಅಂತು ೯೧ ದೇವತೆಗಳು, ಪದ್ಯದಲ್ಲಿ ದಶವಿಹೀನ ಶತ, ೧೦ ಕಡಿಮೆ ೧೦೦ ಅಂದರೆ ೯೦ ಎಂದು ಹೇಳಿರುವರು. ಇದರಲ್ಲಿ ೯೧ ಸಂಖ್ಯಾ ಆದುವು. ಇದರ ವ್ಯತ್ಯಾಸ ಪರಿಹಾರ ಹೇಗೆಂದರೆ-ಅಶ್ವಿನೀ ದೇವತೆಗಳು ಕುದುರೆ ಮೂಗಿನ ದೆಶೆಯಿಂದ ಒಂದೇ ಕಾಲದಲ್ಲಿ ಇಬ್ಬರೂ ಹುಟ್ಟ ಒಂದೇ ಹೆಸರಿನಿಂದ ಇಬ್ಬರೂ ಒಂದಾಗಿ ಕೂಡಲೇ ಇರುವುದರಿಂದ ಆದೇವತೆಗಳನ್ನು ಒಬ್ಬರನ್ನಾಗಿ ಸಂಖ್ಯೆಗೆ ತೆಗೆದುಕೊಂಡಿರುವರು. ಆದ್ದರಿಂದ ೯೦ ದೇವತೆಗಳೆಂದು ಹೇಳಿದರು. ಶ್ರೀ ಹರಿಯು ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ರೂಪಗಳಿಂದ, ಬ್ರಹ್ಮ, ವಾಯು, ಗರುಡ, ಶೇಷರೆಂಬ ನಾಲ್ವರಲ್ಲಿದ್ದು ಮೇಲಿನ ೯೦ ದೇವತೆಗಳಲ್ಲಿ ಪ್ರವೇಶಮಾಡಿ ಕಾರ್ಯ ಪ್ರೇರಕನಾಗಿ ಇರುವನು.

**ತೋರುತಿಪ್ಪನು ಚಕ್ರದಲಿ ಹಿಂ**
**ಕಾರನಾಮಕ ಶಂಖದಲಿ ಪ್ರತಿ**
**ಹಾರಗದೆಯಲಿ ನಿಧನ ಪದ್ಮದಲಿಪ್ಪ ಪ್ರಸ್ತಾವ ||**
**ಕಾರುಣಿಕನುದ್ಗೀಥನಾಮದಿ**
**ಮಾರಮಣ ನೈ ರೂಪಗಳ ಶಂ**
**ಖಾರಿ ಮೊದಲಾದಾಯುಧಗಳೊಳು ಸ್ಮರಿಸಿ ಧರಿಸುತಿರು ॥೨೮॥**

ಪದ್ಯಾರ್ಥ:—ಚಕ್ರದಲಿ=ಚಕ್ರಮುದ್ರೆಯಲ್ಲಿ, ಹಿಂಕಾರ ನಾಮಕ=ಹಿಂಕಾರ ನಾಮಕ ಪರಮಾತ್ಮನು, ತೋರುತಿಪ್ಪನು=ಕಾಣಿಸಿಕೊಳ್ಳುವನು. ಶಂಖದಲಿ, ಪ್ರತಿಹಾರ=ಪ್ರತಿಹಾರನಾಮಕ ಪರಮಾತ್ಮನು. ಗದೆಯಲಿ=ಗದಾಮುದ್ರೆಯಲ್ಲಿ, ನಿಧನ=ನಿಧನನಾಮಕ ಪರಮಾತ್ಮನು, ಪದ್ಮದಲಿ=ಪದ್ಮಮುದ್ರೆಯಲ್ಲಿ, ಪ್ರಸ್ತಾವ=ಪ್ರಸ್ತಾವನಾಮಕ ಪರಮಾತ್ಮನು, ಇಪ್ಪ=ಇರುವನು, ಉದ್ಗೀಥ=ಉದ್ಗೀಥನೆಂಬ ಪರಮಾತ್ಮನು, ನಾಮದಿ=ನಾಮಮುದ್ರೆಯಲ್ಲಿರುವನು. ಕಾರುಣಿಕನೆ=ಕರುಣಾಳುವಾದ, ಮಾರಮಣನೆ=ಲಕ್ಷ್ಮೀಪತಿಯು, ಐರೂಪಗಳ=೫ ರೂಪಗಳನ್ನು, ಶಂಖಾರಿ ಮೊದಲಾದ

—ಶಂಖ ಚಕ್ರ ಮೊದಲಾದ, ಆಯುಧಗಳೊಳು—ಆಯುಧರೂಪವಾದ ೫ ಮುದ್ರೆಗಳಲ್ಲಿ, ಸ್ಮರಿಸಿ—ಚಿಂತಿಸಿ, ಧರಿಸುತಿರು.

ತಾತ್ಪರ್ಯ :—ಪಂಚ ಮುದ್ರೆಗಳನ್ನು ಧಾರಣಮಾಡುವಾಗ ಅವುಗಳಲ್ಲಿ ಚಿಂತಿಸಬೇಕಾದ ಭಗವದ್ರೂಪಗಳನ್ನು ಹೇಳುತ್ತಾರೆ.

ಚಕ್ರಮುದ್ರೆಯಲ್ಲಿ ಹಿಂಕಾರ ನಾಮದಿಂದಲೂ, ಶಂಖದಲ್ಲಿ ಪ್ರತಿಹಾರ ನಾಮದಿಂದಲೂ, ಗದೆಯಲ್ಲಿ ನಿಧನನೆಂಬ ಹೆಸರಿನಿಂದಲೂ, ಪದ್ಮದಲ್ಲಿ ಪ್ರಸ್ತಾವನೆಂಬ ಹೆಸರಿನಿಂದಲೂ, ನಾಮಮುದ್ರೆಯಲ್ಲಿ—ಉದ್ಗೀಥನೆಂಬ ಹೆಸರಿನಿಂದಲೂ, ಇರುವನು. ಹೀಗೆ ಮಹಾ ಕರುಣಾಳುವಾದ ಶ್ರೀ ಪರಮಾತ್ಮನು ಈ ೫ ರೂಪಗಳಿಂದ ೫ ಮುದ್ರೆಗಳಲ್ಲಿ ಇರುವನೆಂದು ಚಿಂತಿಸಿ ಮುದ್ರೆಗಳನ್ನು ಧರಿಸಬೇಕೆಂಬ ತಾತ್ಪರ್ಯ.

**ತನುವೆ ರಥ ವಾಗಾಭಿಮಾನಿಯೆ**
**ಗುಣವೆನಿಸುವಳು ಶ್ರೋತ್ರದೊಳುರೋ**
**ಹಿಣಿ ಶಶಾಂಕರು ಪಾಶಪಾಣಿಗಳಶ್ವವೆಂದೆನಿಸಿ |**
**ಇನನು ಸಂಜ್ಞಾದೇವಿಯರು ಇಹ**
**ರನಲಲೋಚನ ಸೂತನೆನಿಸುವ**
**ಪ್ರಣವಪಾದ್ಯ ಪ್ರಾಣನಾಮಕರಥಿಕನೆನಿಸುವನು ‖ ೨೯ ‖**

ಪದ್ಯಾರ್ಥ :—ತನುವೆ — ಶರೀರವೆ, ರಥ—ರಥವು, ವಾಗಾಭಿಮಾನಿಯೆ—ವಾಕ್ಯಕ್ಕಭಿಮಾನಿಯಾದ ಉಮಾದೇವಿಯು, ಗುಣವೆನಿಸುವಳು—ಹಗ್ಗವೆನಿಸುವಳು. ಶ್ರೋತ್ರದೊಳು—ಕಿವಿಯಲ್ಲಿರುವ, ರೋಹಿಣಿ ಶಶಾಂಕರು —ರೋಹಿಣಿದೇವಿಯು, ಆಕೆಯ ಪತಿಯಾದ ಚಂದ್ರನು ಲಗಾಮು ಹಿಡಿಯುವವರು. ಇನನು—ಸೂರ್ಯನು, ಸಂಜ್ಞಾದೇವಿಯರು—ಅವನ ಪತ್ನೀ ಸಂಜ್ಞಾದೇವಿಯು, ಅಶ್ವವೆಂದೆನಿಸಿ—ಕುದುರೆಯೆಂದೆನಿಸಿ, ಇಹರು—ಇರುವರು. ಅನಲಲೋಚನ — ಅಗ್ನಿನೇತ್ರನಾದ ರುದ್ರದೇವರು, ಸೂತನೆನಿಸುವ—ಸಾರಥಿಯೆನಿಸುವರು, ಪ್ರಣವಪಾದ್ಯ—ಓಂಕಾರ ಪ್ರತಿಪಾದ್ಯನಾದ ಮುಖ್ಯಪ್ರಾಣಾಂತರ್ಗತ ಪ್ರಾಣನಾಮಕ ಶ್ರೀ ಪರಮಾತ್ಮನು ರಥಿಕನೆನಿಸುವನು.

ತಾತ್ಪರ್ಯ :—ದೇಹವನ್ನೇ ರಥವನ್ನಾಗಿಯೂ, ಪರಮಾತ್ಮನನ್ನೇ ರಥಿಕನನ್ನಾಗಿ ಚಿಂತಿಸಬೇಕೆಂದು ಹೇಳುತ್ತಾರೆ :—ನಮ್ಮ ದೇಹವೇ ರಥವು ವಾಗಭಿಮಾನಿ ಪಾರ್ವತಿ ದೇವಿಯು ಹಗ್ಗವು. ಕಿವಿಗಳಿಗಭಿಮಾನಿಯಾದ

ರೋಹಿಣಿ ಚಂದ್ರರು ಹಗ್ಗ ಹಿಡಿಯುವವರು. ಸೂರ್ಯನೂ ಅವನ ಪತ್ನಿ ಸಂಜ್ಞಾದೇವಿಯರೂ ಕಣ್ಣೊಳಗಿದ್ದು ಕುದುರೆಗಳಾಗಿರುವರು. ರುದ್ರದೇವರು ಮನೋಭಿಮಾನಿಯಾಗಿ ಸಾರಥಿಯಾಗಿರುವರು. ಪ್ರಣವ ಪ್ರತಿಪಾದ್ಯನಾದ ಮುಖ್ಯ ಪ್ರಾಣಾಂತರ್ಗತ ಪ್ರಾಣನಾಮಕ ಶ್ರೀ ಪರಮಾತ್ಮನೇ ರಥಿಕನೆಂದು ಚಿಂತಿಸಿ ದೇಹಕ್ಕೆ ಅಲಂಕಾರಾದಿಗಳನ್ನು ಮಾಡಬೇಕೆಂಬ ತಾತ್ಪರ್ಯ. ಅದಕ್ಕೆ ಆಧಾರಭೂತವಾದ ಪ್ರಮಾಣಗಳು ಮಾನಸ ಸ್ಮೃತಿಯೆಂಬ ಗ್ರಂಥ ದಲ್ಲಿರುವವು. 'ವಿಷ್ಣೋರಾಯತನಂ ದಿವ್ಯಂದೇಹಾಖ್ಯಂ ವೈಷ್ಣವಂರಥಂ || ಸೂರ್ಯಶ್ಚ ಸೂರ್ಯ ಭಾರ್ಯಾಚ ಚಕ್ಷುಷ್ದ್ವಯ ಸಮಾಶ್ರಿತೌ | ವಾಜಿ ರೂಪೌ ತಥಾಸೋಮಸ್ತತ್ಪತ್ನೀಚ ಶ್ರುತಿಸ್ಥಿತೌ || ಹಯಪಾಶೌ ವಹಂ ತ್ಯೇತೆ ತದ್ಬಂಧ ಪ್ರಗ್ರಹಾತ್ಮಿಕಾ | ಉಮಾವಾಚಿಸ್ಥಿತಾಜ್ಞೆಯಾ ತತ್ಪತಿರ್ಮ ನಸಿ ಸ್ಥಿತಃ | ಸಂಪ್ರೋಕ್ತಃ ಸಾರಥಿಸ್ತಸ್ಮಿನ್ ರಥೇಪ್ರಾಣಃ ಪ್ರತಿಷ್ಠಿತಃ | ಪ್ರಕೃಷ್ಟಜ್ಞಾನರೂಪತ್ವಾ ತ್ಪ್ರಾಣೆ ಪ್ರಾಣೋ ಹರಿಃಸ್ಮೃತಃ | ಅದಿತಿಷ್ಠತಿ ವಿಷ್ಣುಸ್ತು ತಸ್ಮಾದ್ದೇಹ ಮಲಂಚರೇತ್' ಇದರರ್ಥ:- ಈ ನಮ್ಮ ದೇಹವು ಪರಮಾತ್ಮನು ವಾಸಮಾಡಲು ಅರ್ಹವಾದ, ದಿವ್ಯವಾದ ವೈಷ್ಣವ ರಥವು. ಸೂರ್ಯನೂ ಅವನ ಭಾರ್ಯಳೂ ಎರಡು ಕಣ್ಣುಗಳಲ್ಲಿದ್ದು ಕುದುರೆ ಗಳಂತಿರುವರು. ಚಂದ್ರನೂ ಅವನ ಪತ್ನಿಯೂ ಕಿವಿಗಳಲ್ಲಿದ್ದು ಕುದುರೆಗಳ ಲಗಾಮನ್ನು, ಹಿಡಿದುಇರುವರು. ಉಮಾದೇವಿಯು ವಾಕ್ಯದಲ್ಲಿದ್ದು ಲಗಾಮಿಗೆ ಇರುವ ಹಗ್ಗವಾಗಿ ಇರುವಳು, ಆಕೆಯ ಪತಿಯಾದ ರುದ್ರದೇವರು ಮನಸ್ಸಿ ನಲ್ಲಿದ್ದು ಸಾರಥಿಯಾಗಿರುವರು. ರಥದಲ್ಲಿ ಪ್ರಾಣದೇವರು ರಥಿಕರಾಗಿ ಕೂತಿ ರುವರು, ಅವರಂತರ್ಯಾಮಿಯಾಗಿ ಪ್ರಾಣಯೆಂಬ ಹೆಸರಿನಿಂದ ಶ್ರೀ ಪರಮಾ ತ್ಮನು ಇರುವನು. ಪ್ರ=ಪ್ರಕೃಷ್ಟವಾದ, ಅ=ಆನಂದ ಸ್ವರೂಪನಾಗಿಯೂ, ಣ=ಜ್ಞಾನಸ್ವರೂಪನಾಗಿಯೂ, ಇರುವುದರಿಂದ ಪ್ರ+ಅ+ಣ=ಪ್ರಾಣ, ಎಂದು ಪರಮಾತ್ಮನಿಗೆ ಹೆಸರು. ಇಂತಹ ವಿಷ್ಣುವಿಗೆ ರಥವಾಗಿರುವುದರಿಂದ ಈ ದೇಹವನ್ನು ಅಲಂಕರಿಸಬೇಕು. ಎಂದು ಪ್ರಮಾಣಾರ್ಥವು. ಇದೇ ಅಭಿ ಪ್ರಾಯವನ್ನೇ ದಾಸರಾಯರು ಹೇಳಿರುವರು.

**ಅಮಿತಮಹಿಮನ ಪಾರಗುಣಗಳ |**
**ಸಮಿತವರ್ಣಾತ್ಮಕ ಶ್ರುತಿಸ್ಮೃತಿ**
**ಗಮಿಸಲಾಪವೆ ತದಭಿಮಾನಿಗಳೆಂದೆನಿಸಿಕೊಂಬ ||**

**ಕಮಲಸಂಭವ ಭವಸುರೇಂದ್ರಾ**
**ದ್ಯಮರರನುದಿನ ತಿಳಿಯಲರಿಯರು**
**ಸ್ವಮಹಿಮೆಗಳಾದ್ಯಂತ ಮಧ್ಯಗಳರಿವ ಸರ್ವಜ್ಞ ॥ ೩೦ ॥**

ಪದ್ಯಾರ್ಥ :—ಅಮಿತ ಮಹಿಮನ=ಮಿತಿಇಲ್ಲದ ಮಹಿಮೆಯುಳ್ಳ ಪರಮಾತ್ಮನ, ಅಪಾರ ಗುಣಗಳ=ಕಡೆಗಾಣದ ಗುಣಗಳನ್ನು, ಸಮಿತ ವರ್ಣಾತ್ಮಕ=ಪರಿಮಿತಿಯುಳ್ಳ ಅಕ್ಷರಗಳಿಂದ ಕೂಡಿದ ಶ್ರುತಿ ಸ್ಮೃತಿಗಳು, ಗಮಿಸಲಾಪವೆ = ಕೊನೆಗಾಣುವವೆ? ತದಭಿಮಾನಿಗಳೆಂದೆನಿಸಿಕೊಂಬ= ಶ್ರುತಿಸ್ಮೃತಿಗಳಿಗೆ ಅಭಿಮಾನಿಗಳೆಂದು ಪ್ರಸಿದ್ಧರಾದ, ಕಮಲಸಂಭವ=ಬ್ರಹ್ಮದೇವರು, ಭವ=ರುದ್ರದೇವರು, ಸುರೇಂದ್ರಾದ್ರಿ=ದೇವೇಂದ್ರ ಮೊದಲಾದ ಅಮರರು=ದೇವತೆಗಳು, ಅನುದಿನ = ಪ್ರತಿದಿವಸದಲ್ಲಿಯೂ, (ಹುಡುಕುತ್ತಿದ್ದರೂ) ತಿಳಿಯಲು=ಭಗವನ್ಮಹಿಮೆಗಳನ್ನು ತಿಳಿಯುವ ಪ್ರಯತ್ನದಲ್ಲಿದ್ದರೂ, ಅರಿಯರು=ಸಂಪೂರ್ಣವಾಗಿ ತಿಳಿಯಲಾರರು. ಸ್ವಮಹಿಮೆಗಳ= ತನ್ನ ಮಹಿಮೆಗಳ, ಆದ್ಯಂತ ಮಧ್ಯಗಳ=ಮೊದಲು, ಕೊನೆ, ಮಧ್ಯಗಳನ್ನು, ಸರ್ವಜ್ಞ=ಸರ್ವಜ್ಞನಾದ ಪರಮಾತ್ಮನೊಬ್ಬನೇ, ಅರಿವ=ಬಲ್ಲನು.

ತಾತ್ಪರ್ಯ :—ಪರಮಾತ್ಮನು ಅಪಾರ ಮಹಿಮನೆಂದು ಹೇಳುತ್ತಾರೆ. ಇಷ್ಟೆಂದು ಮಿತಿಯೇ ಇಲ್ಲದ ಮಹಿಮೆಯುಳ್ಳವನು ಶ್ರೀಹರಿಯು. ಇವನ ಅಪಾರವಾದ ಗುಣಗಳನ್ನು ಜನರು ತಿಳಿಯಬೇಕಾದರೆ, ಶ್ರುತಿಗಳಿಂದಲೂ, ಸ್ಮೃತಿಗಳಿಂದಲೂ, ತಿಳಿಯಬೇಕು. ಆದರು ಆ ಶ್ರುತಿ ಸ್ಮೃತಿಗಳು ತಮಗೆ ಗೋಚರವಾದಷ್ಟು ಮಹಿಮೆಗಳನ್ನು ಹೇಳುವವೇ ಹೊರತು ಸಾಕಲ್ಯೇನ ಭಗವನ್ಮಹಿಮೆಗಳನ್ನು ಹೇಳಲಾರವು. ಏಕೆಂದರೆ, 'ಸಮಿತವರ್ಣಾತ್ಮಕ' ಅಕ್ಷರಗಳು ಪರಿಮಿತಿ ಉಳ್ಳವು. ಆ ಅಕ್ಷರಾತ್ಮಕವಾದ ಶ್ರುತಿ ಸ್ಮೃತಿಗಳಿಗೂ ಪರಿಮಿತಿ ಉಂಟು. ಅಪರಿಮಿತವಾದ ಭಗವಂತನ ಗುಣಗಳನ್ನು ಪರಿಮಿತಿಯುಳ್ಳ ಶ್ರುತಿ ಸ್ಮೃತಿಗಳು ಕೊನೆಗಾಣುವುದೆಂತು? ಎಂದಿಗೂ ಆಗುವುದಿಲ್ಲ. ತದಭಿಮಾನಿಗಳೆಂದೆನಿಸುವ ಬ್ರಹ್ಮರುದ್ರಾದಿಗಳೂ ಸಂಪೂರ್ಣವಾಗಿ ಅರಿಯರು, ತಮ್ಮತಮ್ಮ ಯೋಗ್ಯತಾನುಸಾರವಾಗಿ ಬಲ್ಲರು. ಆ ಮಹಿಮೆಗಳ ಕೊನೆಕಂಡವರಾರು? ಅಂದರೆ ಸರ್ವಜ್ಞನಾದ ಪರಮಾತ್ಮನೊಬ್ಬನೇ ತನ್ನ ಮಹಿಮೆಗಳ ಆದ್ಯಂತ ಮಧ್ಯಗಳನ್ನು ಬಲ್ಲವನೆಂದು ತಾತ್ಪರ್ಯ.

**ವಿತ್ತದೇಹಾಗಾರದಾರಾ**
**ಪತ್ಯಮಿತ್ರಾದಿಗಳೊಳಗೆ ಹರಿ**
**ಪ್ರತ್ಯಗಾತ್ಮನು ಎಂದೆನಿಸಿ ನೆಲಸಿಪ್ಪನೆಂದರಿದು ||**
**ನಿತ್ಯದಲಿ ಸಂತೃಪ್ತಿಬಡಿಸುತ**
**ಉತ್ತಮಾಧಮ ಮಧ್ಯಮರ ಕೃತ**
**ಕೃತ್ಯನಾಗುನ್ಮತ್ತನಾಗದೆ ಭೃತ್ಯನಾನೆಂದು || ೩೧ ||**

ಪದ್ಯಾರ್ಥ :—ವಿತ್ತ=ದ್ರವ್ಯ, ದೇಹ=ಶರೀರ, ಅಗಾರ=ಮನೆ ದಾರಾ=ಹೆಂಡರು, ಅಪತ್ಯ=ಮಕ್ಕಳು, ಮಿತ್ರಾದಿಗಳೊಳಗೆ=ಸ್ನೇಹಿತ ಮೊದಲಾದವರಲ್ಲಿ, ಹರಿ=ಶ್ರೀಹರಿಯು, ಪ್ರತ್ಯಗಾತ್ಮನು ಜೀವರಲ್ಲದೆ ಬೇರೆ ಯಾದವನು, ಎಂದೆನಿಸಿ=ಎಂದು ಪ್ರಸಿದ್ಧನಾಗಿ, ನೆಲಸಿಪ್ಪನು=ಎಲ್ಲಾ ಜೀವ ರಂತರ್ಯಾಮಿ ಯಾಗಿರುವನು. ಎಂದರಿದು=ಎಂದು ತಿಳಿದು, ನಿತ್ಯದಲಿ, ಉತ್ತಮಾಧಮ ಮಧ್ಯಮರ, ಹೆಂಡರು ಮಕ್ಕಳು ಮಿತ್ರರು ಮೊದಲಾದವರು ಉತ್ತಮರೇ ಆಗಲಿ, ಮಧ್ಯಮರೇ ಆಗಲಿ, ಅಧಮರೇ ಆಗಲಿ ಅವರೆಲ್ಲರನ್ನು, ಸಂತೃಪ್ತಿ ಬಡಿಸುತ=ಚನ್ನಾಗಿ ತೃಪ್ತಿಪಡಿಸುತ್ತ, ಕೃತಕೃತ್ಯನಾಗು=ಮಾಡ ಬೇಕಾದ ಭಗವತ್ಪೂಜಾರೂಪವಾದ ಸಾಧನವನ್ನು ಮಾಡಿದೆನು ಎಂದು ಭಾವಿಸು, ಉನ್ಮತ್ತನಾಗದೆ=ನನ್ನ ದೇಹ, ನನ್ನ ಹೆಂಡತಿ, ಎಂದು ಹುಚ್ಚ ನಂತೆ ತಿರುಗದೇ, ಭೃತ್ಯನಾನೆಂದು=ಪರಮಾತ್ಮನ ಭೃತ್ಯನು ನಾನು ಎಂದು ಭಾವಿಸು.

ತಾತ್ಪರ್ಯ :—ಉಪಕ್ರಮಮಾಡಿದ ಸಂಧಿಯನ್ನು ಪೂರೈಸುತ್ತಾ ಎರಡು ಪದ್ಯಗಳಿಂದ ಭಗವದುಪಾಸನಾ ವಿಷಯದಲ್ಲಿ ಮುಖ್ಯವಾದ ಸಾರಾಂ ಶವನ್ನು ಹೇಳುತ್ತಾರೆ. —

ತಾನು, ತನ್ನ ಹೆಂಡರು, ಮಕ್ಕಳು, ಧನ ಮೊದಲಾದವುಗಳಲ್ಲಿ ಪರ ಮಾತ್ಮನೇ ತದಾಕಾರನಾಗಿ ಅವರಲ್ಲಿರುವನೆಂದು ಭಾವಿಸಿ ಹೆಂಡರು ಮಕ್ಕ ಳನ್ನು, ತನ್ನ ಪ್ರೀತಿಗೋಸ್ಕರ ಬಹಳ ಮಮತೆಯಿಂದ ನಾನು ಸಾಕದಿದ್ದರೆ ಅವರ ಗತಿಯೇನು ಎಂಬ ಮಮತೆಯಿಂದಲೂ ಸ್ವತಂತ್ರ ಕರ್ತೃತ್ವಾಭಿಮಾನ ದಿಂದ ಹುಚ್ಚನಾಗದೆ, ಹೆಂಡತಿಮಕ್ಕಳ ರಕ್ಷಣೆಯೂಸಹ ಭಗವತ್ಪೂಜೆಯು, ನಾನು ಪರಮಾತ್ಮನ ಭೃತ್ಯನು; ನನ್ನೊಳಗಿದ್ದು ಅವನೇ ಮಾಡಿಸುವನು ಎಂದು ಭಾವಿಸಿ ಹೆಂಡರು ಮಕ್ಕಳು ಮೊದಲಾದವರು ಉತ್ತಮಾಧಮ ಮಧ್ಯಮ

ರಾದರೂ ಅಂದರೆ ಅವರು ನಿನ್ನಲ್ಲಿ ಹೆಚ್ಚು ಪ್ರೀತಿಮಾಡಲಿ ಉದಾಸೀನ ವಾಗಿರಲಿ, ದ್ವೇಷವನ್ನಾದರೂ ಮಾಡಲಿ, ಅಂತಹವರಲ್ಲಿ ಅವರಂತೆ ನೀನಿರದೆ ಎಲ್ಲರಲ್ಲಿಯೂ ಪರಮಾತ್ಮನೇ ಇದ್ದು. ಹಾಗೆ ಮಾಡಿಸುವನೆಂದು ಭಾವಿಸಿ ನೀನು ಅವರನ್ನು ಸಮವಾಗಿ ಭಾವಿಸು ಅಥವಾ ನಿನಗಿಂತಲೂ ಉತ್ತಮರು, ನಿನಗೆ ಸಮರು ನಿನಗಿಂತಲೂ ನೀಚರು ಇಂತಹವರಲ್ಲಿ, ಅಥವಾ ಉತ್ತಮರು ಬ್ರಾಹ್ಮಣಾದಿಗಳು ಗುರುಗಳು ಮೊದಲಾದವರು. ಮಧ್ಯಮರು ಸಾಧಾರಣ ಜನರು, ಅಧಮರು ಶ್ವಾನಾದಿಗಳು ಇವರಲ್ಲಿಯೂ ಕೂಡ ಭಗವಂತನು ಸಮನಾಗಿ ಇರುವನೆಂದು ಭಾವಿಸಿ ನಿನ್ನ ಶಕ್ತ್ಯಾನುಸಾರವಾಗಿಯೂ, ಅವ ರವರ ಯೋಗ್ಯತಾನುಸಾರವಾಗಿಯೂ ಅವರೆಲ್ಲರನ್ನೂ ಚನ್ನಾಗಿ ತೃಪ್ತಿಪಡಿಸ ಬೇಕು ಎಂದು ತಾತ್ಪರ್ಯ.

**ದೇವದೇವೇಶನ ಸುಮೂರ್ತಿಕ**
**ಳೇವರಗಳೊಳಗ ನವರತಸಂ**
**ಭಾವಿಸುತ ಪೂಜಿಸುತ ನೋಡುತ ಸುಖಿಸುತಿರು ಬಿಡದೆ ||**
**ಶ್ರೀವರ ಜಗನ್ನಾಥ ವಿಠ್ಠಲನು**
**ತಾವಲಿದು ಕಾರುಣ್ಯದಲಿಭವ**
**ನೋವು ಪರಿಹರಿಸುವನು ಪ್ರವಿತತ ಪತಿತಪಾವನನು ||೩೨||**

ಪದ್ಯಾರ್ಥ :—ದೇವ ದೇವೇಶನ=ದೇವತೆಗಳಿಗೆಲ್ಲ ದೇವರಾದ ಪರ ಮಾತ್ಮನ, ಸುಮೂರ್ತಿ=ದಿವ್ಯಮೂರ್ತಿಗಳನ್ನು, ಕಳೇವರಗಳೊಳಗೆ=ಶರೀ ರಗಳಲ್ಲಿ, ಅನವರತ=ನಿತ್ಯವೂ, ಸಂಭಾವಿಸುತ=ಬಹುಮಾನ ಮಾಡುತ್ತಾ ಪೂಜಿಸುತ, ನೋಡುತ, ಬಿಡದೆ, ಸುಖಿಸುತಿರು ಪ್ರವಿತತ=ಸರ್ವತ್ರ ವ್ಯಾಪ್ತನೂ; ಪತಿತ ಪಾವನನೂ ಆದ ಶ್ರೀವರ=ಶ್ರೀಲಕ್ಷ್ಮೀಪತಿಯಾದ, ಜಗನ್ನಾಥ ವಿಠ್ಠಲನು=ಜಗನ್ನಾಥಾಂಕಿತ ಬಿಂಬ ಮೂರ್ತಿಯಾದ ಶ್ರೀ ವಿಠ್ಠ ಲನು, ತಾವಲಿದು=ತಾನು ಪ್ರೀತನಾಗಿ, ಕಾರುಣ್ಯದಲಿ=ಕರುಣದಿಂದ, ಭವನೋವ=ಜನನ ಮರಣದ ವೇದನೆಯನ್ನು, ಪರಿಹರಿಸುವನು.

ತಾತ್ಪರ್ಯ :—ಬ್ರಹ್ಮಾದಿ ಸಕಲ ದೇವತೆಗಳಿಗೂ ಸ್ವಾಮಿಯಾದ ಶ್ರೀ ಪರಮಾತ್ಮನ ಮೂರ್ತಿಗಳು ಉತ್ತಮ, ಮಧ್ಯಮ, ಅಧಮರಾದ ಸರ್ವ ಪ್ರಾಣಿಗಳಲ್ಲಿಯೂ ಇರುವವೆಂದು ಭಾವಿಸಿ, ಮಧ್ಯಮಾಧಿಷ್ಠಾನದಲ್ಲಿ ಸಂಭಾ ವನೆಯನ್ನು, ಉತ್ತಮಾಧಿಷ್ಠಾನದಲ್ಲಿ ಪೂಜೆಯನ್ನು, ಅಧಮಾಧಿಷ್ಠಾನದಲ್ಲಿ

ನೋಡುವುದು ಅಂದರೆ ಶ್ವಾನ ಚಂಡಾಲಾದಿಗಳಲ್ಲೂ ಭಗವದ್ರೂಪಗಳು ಇವೆ ಎಂದು ತಿಳಿಯುವದೆಂದರ್ಥ. ಹೀಗೆ ಸರ್ವತ್ರ ಭಗವನ್ಮೂರ್ತಿಗಳನ್ನು ತಿಳಿದು ಬಿಡದೆ ಅವಿಚ್ಛಿನ್ನವಾಗಿ ಪರಮಾತ್ಮನ ರೂಪಗಳನ್ನು ಚಿಂತಿಸುತ್ತಾ ಸುಖದಿಂದಿರಬೇಕು. ಹೀಗೆ ಮಾಡುವುದರಿಂದ ಫಲವೇನೆಂದರೆ, ಸರ್ವತ್ರ ವ್ಯಾಪ್ತನಾದ, ಪತಿತಪಾವನನಾದ, ಲಕ್ಷ್ಮೀಪತಿಯಾದ ಶ್ರೀ ಜಗನ್ನಾಥ ವಿಠ್ಠಲನಾಮಕ ಬಿಂಬರೂಪಿಯಾದ ಶ್ರೀ ಪರಮಾತ್ಮನು, ನಮಗೆ ಪ್ರಸನ್ನನಾಗಿ ನಮ್ಮಗಳಸಂಸಾರನೆಂಬ ತಾಪತ್ರಯ ರೂಪವಾದ ವೇದನೆಯನ್ನು ಪರಿಹರಿಸುವನು.

ಎಂಟನೆ ಸಂಧಿಯ ವ್ಯಾಖ್ಯಾನವು ಮುಗಿದುದು



# ಒಂಭತ್ತನೆಯ ಸಂಧಿ.

## ಜೀವಪ್ರಕರಣ ಸಂಧಿ

**ಹರಿಯೆ ಪಂಚಾಶದ್ವರಣಸು**
**ಸ್ವರ ಉದಾತ್ತಾನುದಾತ್ತ ಪ್ರಚಯ**
**ಸ್ವರಿತಸಂಧಿವಿಸರ್ಗ ಬಿಂದುಗಳೊಳಗೆ ತದ್ವಾಚ್ಯ ||**
**ಇರುವತತ್ತನ್ನಾಮ ರೂಪಗ**
**ಳರಿತುಪಾಸನೆ ಗೈವರಿಳೆಯೊಳು**
**ಸುರರೆಸರಿ ನರರಲ್ಲವರಾಡುವದೆ ವೇದಾರ್ಥ || ೧ ||**

ಪದ್ಯಾರ್ಥ ;—ಹರಿಯೆ = ಶ್ರೀಪರಮಾತ್ಮನೆ, ಪಂಚಾಶದ್ವರ್ಣ = ಅಕಾರ ಮೊದಲಾದ ೫೦ ಅಕ್ಷರಗಳು, ಸುಸ್ವರ=ಅಕ್ಷರಗಳನ್ನು ಉಚ್ಚರಿಸುವದು, ಉದಾತ್ತ=ಸ್ವರವನ್ನು ಒಂದು ಸ್ಥಾನ ಉಚ್ಚದಲ್ಲಿ ಹೇಳುವುದು, ಅನುದಾತ್ತ=ಒಂದುಸ್ಥಾನ=ಒಂದು ಸ್ಥಾನ ತಗ್ಗಿಸುವುದು, ಪ್ರಚಯ=ಸ್ವರ ವಿಶೇಷವು, ಸ್ವರಿತ=ಯಥಾಸ್ಥಿತಿ ಉಚ್ಚರಿಸುವುದು, ಸಂಧಿ=ಎರಡು ಪದಗೆಳನ್ನು ಒಂದಾಗಿ ಕೂಡಿಸುವುದು, ವಿಸರ್ಗ, ಬಿಂದುಗಳೊಳಗೆ=ಪಕ್ಕದಲ್ಲಿ ಸೊನ್ನೆಕೊಡುವುದು, ಅಂದರೆ ಅಂ. ಕಂ. ಇತ್ಯಾದಿ ಉಚ್ಚಾರಗಳು ಇವುಗಳೊಳಗೆ, ತದ್ವಾಚ್ಯ=ತಚ್ಛಬ್ಧವಾಚ್ಯನಾಗಿ, ಇರುವ=ಇರುವನು, ತತ್ತನ್ನಾಮ ರೂಪಗಳರಿತು=ಸ್ವರಿತೋದಾತ್ತಾದಿಗಳಲ್ಲಿ, ಯಾವನಾಮ, ಯಾವರೂಪ ಎಂಬಿವೇ ಮೊದಲಾದವುಗಳನ್ನು ತಿಳಿದು, ಉಪಾಸನೆಗೈವರು=ಉಪಾಸನೆ ಮಾಡುವವರು, ಇಳೆಯೊಳು=ಭೂಮಿಯಲ್ಲಿ, ಸುರರೇಸರಿ=ದೇವತೆಗಳೆಂದೇ ಹೇಳಬೇಕು. ನರರಲ್ಲ=ಅವರನ್ನು ಸಾಮಾನ್ಯರಾದ ಮನುಷ್ಯರೆಂದು ಹೇಳಬಾರದು, ಅವರು ಆಡುವುದೇ = ಅವರು ಬಾಯಿಯಿಂದ ಏನು ಹೇಳಿದರೂ, ವೇದಾರ್ಥ=ಅದೇ ವೇದಾರ್ಥಗಳಿಗೆ ಸಮವೆಂದು ಭಾವಿಸಬೇಕು.

ತಾತ್ಪರ್ಯ :—ಈ ಸಂಧಿಯಲ್ಲಿ ಮುಕ್ತಿಯಾಗಬೇಕಾದರೂ, ಅಪರೋಕ್ಷವಾಗಬೇಕಾದರೂ ಸಹ ಮುಖ್ಯವಾಗಿ ಮೊಟ್ಟಮೊದಲು ಜೀವನ ಸ್ವರೂಪ ಯೋಗ್ಯತೆಯನ್ನು ತಿಳಿದುಕೊಂಡು ಯಾರಯಾರಲ್ಲಿ ಹೇಗೆ ಹೇಗಿರಬೇಕೆಂಬ ವಿಷಯವನ್ನು ಅರಿತು, ಅಧಿಷ್ಠಾನವನ್ನನುಸರಿಸಿ ಉಪಾಸನೆ ಮಾಡುವುದು ಮುಖ್ಯಸಾಧನವೆಂದು ಹೇಳುತ್ತಾರೆ. ಆ ಕಾರಣದಿಂದ ಇದಕ್ಕೆ ಜೀವ ಪ್ರಕ

ರಣ ಸಂಧಿಯೆಂದು ಹೆಸರಿಟ್ಟರು :—ಅದರಲ್ಲಿ ಪ್ರಥಮ ಪದ್ಯದಿಂದ ಸಂಧಿಯ ಸಾರಭೂತವಾದ ಉತ್ತಮ ಜೀವರ ಸ್ವರೂಪವನ್ನು ತಿಳಿಸುತ್ತಾರೆ.

ವೇದಗಳಲ್ಲಿ, ಸ್ವರಿತ, ಅನುದಾತ್ತ, ಉದಾತ್ತ, ಪ್ರಚಯ ಮೊದಲಾದವು ಇರುವವು; ಸಂಧಿ, ವಿಸರ್ಗ, ಬಿಂದುಗಳು ಸರ್ವಸ್ಮೃತಿ ವಾಕ್ಯಗಳಲ್ಲಿ, ವೇದಗಳಲ್ಲಿ ಸಹ ಬರುವವು. ಸ್ವರಿತ, ಅನುದಾತ್ತ, ಉದಾತ್ತಗಳ ಲಕ್ಷಣಗಳನ್ನು ತಿಳಿಯಬೇಕಾದರೆ ಸಂಗೀತ ಶಾಸ್ತ್ರದಲ್ಲಿ ಸ್ವಲ್ಪ ಪರಿಶ್ರಮ ಇರಬೇಕು. "ಸರಿಗಮ ಪದನಿ" ಎಂಬ ೭ ಸ್ವರಗಳು ಆರೋಹಣ ಕ್ರಮವಾಗಿ ಒಂದಕ್ಕೊಂದು ಉಚ್ಚಸ್ವರವಾಗುವುದು "ನಿಧಪಮ ಗರಿಸ" ಇವು ಅವರೋಹಣ, ಇವು ಒಂದಕ್ಕೊಂದು ನೀಚಸ್ವರವಾಗುವುದು. ಇದರಲ್ಲಿ ಮ. ಪ. ಧ. ಎಂಬ ೩ ಸ್ವರಗಳನ್ನು ತೆಗೆದುಕೊಂಡರೆ ಮ. ಎಂಬುವುದು ಅನುದಾತ್ತ ಸ್ವರವು, ಪ. ಎಂಬುದು ಸ್ವರಿತ, ಧ. ಎಂಬುದು ಉದಾತ್ತ. ಪ. ಎಂಬ ಸ್ವರವು ಯಥಾಸ್ಥಿತಿಯಾಗಿ ಉಚ್ಚರಿಸುವದು. ಅದಕ್ಕೆ ಸ್ವರಿತವೆಂದು ಹೆಸರು. ಪಂಚಮಕಿಂತಲೂ ಒಂದು ಸ್ವರ ಕೀಳಾಗಿ ಉಚ್ಚಾರಮಾಡುವದು ಮ (ಮಧ್ಯಮ,) ಪಂಚಮಕಿಂತಲೂ ಒಂದು ಸ್ವರ ಉಚ್ಚದಿಂದ ಉಚ್ಚರಿಸುವದು ಧ. (ಧೈವತ) ವೇದಗಳಲ್ಲಿ ಸಮವಾಗಿ ಉಚ್ಚರಿಸುವದು ಸ್ವರಿತ, ನೀಚಸ್ವರವೆ, ಅನುದಾತ್ತ, ಉಚ್ಚಸ್ವರವೆ, ಉದಾತ್ತ, ಪ್ರಚಯವೆಂದರೆ, ಉದಾತ್ತವನ್ನು ಉಚ್ಚರಿಸುವಾಗ ಸ್ವರಿತ, ಅನುದಾತ್ತ, ಉದಾತ್ತಗಳನ್ನು ಒಂದೇ ಪದದ ಕಡೆಯಲ್ಲಿ ಏಕಕಾಲದಲ್ಲಿ ಉಚ್ಚರಿಸುವ ಸ್ವರವಿಶೇಷವು. ಸಂಧಿಯೆಂದರೆ ಎರಡು ಪದಗಳನ್ನು ಶೇರಿಸುವುದು. ಅಂದರೆ 'ಪ್ರಾಣಾಪಾನಾಪಿಡಾಯಾಂ' ಎಂಬ ಪದದಲ್ಲಿ ಪ್ರಾಣ, ಅಪಾನ ಎಂಬ ಎರಡು ಪದಗಳನ್ನು ಸಂಧಿಮಾಡುವಾಗ ಪ್ರಾಣಾಪಾನೌ ಎಂದು ಆಯಿತು ಇದಕ್ಕೆ ಸಂಧಿಎಂದು ಹೆಸರು. ವಿಸರ್ಗ, ಬಿಂದು ಪ್ರಸಿದ್ಧವೇ ಸರಿ. ಇವುಗಳಲ್ಲಿ ೫೦ ಅಕ್ಷರಗಳ ವಾಚ್ಯನಾಗಿಯೂ, ಉದಾತ್ತ ನಾಮಕನಾಗಿಯೂ, ಅನುದಾತ್ತಾದಿ ನಾಮಗಳಿಂದಕೂಡಿ ಅಲ್ಲಲ್ಲಿ ವ್ಯಾಪ್ತನಾಗಿರುವನು ಎಂದು ತಿಳಿದು, ಉಪಾಸನಾ ಮಾಡಬೇಕು; ಮತ್ತು, 'ಸರ್ವೇ ವೇದಾ ಯತ್ಪದಮಾಮನಂತಿ, ವೇದೈಶ್ಚ ಸರ್ವೈರಹಮೇವ ವೇದ್ಯಃ' ಇತ್ಯಾದಿ ಶ್ರುತಿ ಸ್ಮೃತಿಗಳಲ್ಲಿ ಹೇಳಿದಂತೆ ಸಕಲವೇದಗಳೂ, ಪುರಾಣಗಳೂ ಸಹ ಪರಮಾತ್ಮನನ್ನೇ ಹೊಗಳುವುವು. ಅವನೇ ಸಕಲ ಶ್ರುತಿ ಸ್ಮೃತಿ ಪ್ರತಿಪಾದ್ಯನೆಂದು ಭಾವಿಸಿ ಯಾವನು ಉಪಾಸನೆ ಮಾಡುವನೊ ಅವನನ್ನು ಈ ಮನು

ಸ್ಯ ಲೋಕದಲ್ಲಿ ಸಾಮಾನ್ಯ ಮನುಷ್ಯನೆಂದು ಭಾವಿಸದೆ ದೇವಾಂಶನೆಂದು ತಿಳಿಯಬೇಕೆಂದು ಸಂಧಿ ಸೂಚಿತವಾದ ಈ ಪದ್ಯದಿಂದ ಉತ್ತಮಜೀವನ ಸ್ವರೂಪವನ್ನು ತಿಳಿಸಿದರು.

**ಈಶನಲಿ ವಿಜ್ಞಾನ ಭಗವ**
**ದ್ದಾಸರಲಿ ಸದ್ಭಕ್ತಿ ವಿಷಯನಿ**
**ರಾಶೆಮಿಥ್ಯಾವಾದಿಯಲಿ ಪ್ರದ್ವೇಷ ನಿತ್ಯದಲಿ ||**
**ಈ ಸಮಸ್ತ ಪ್ರಾಣಿಗಳಲಿರ**
**ಮೇಶನಿಹನೆಂದರಿದವರಭಿ**
**ಲಾಷೆಪೂರೈಸುವುದೆ ಮಹಯಜ್ಞಹರಿಪೂಜೆ || ೨ ||**

ಪದ್ಯಾರ್ಥ :—ಈಶನಲಿ=ಪರಮಾತ್ಮನಲ್ಲಿ, ವಿಜ್ಞಾನ=ವಿಶೇಷವಾದ ಜ್ಞಾನ, ಭಗವದ್ದಾಸರಲಿ, ಸದ್ಭಕ್ತಿ, ವಿಷಯ=ವಿಷಯ ಸುಖದಲ್ಲಿ, ನಿರಾಶೆ =ಆಶೆಯನ್ನು ಬಿಡುವುದು, ಮಿಥ್ಯಾವಾದಿಯಲಿ=ಜಗತ್ತೇಸುಳ್ಳು ಎಂದು ವಾದಿಸುವವನಲ್ಲಿ, ನಿತ್ಯದಲಿ, ಪ್ರದ್ವೇಷ=ಹೆಚ್ಚಾಗಿ ದ್ವೇಷಿಸುವುದು. ಈ ಸಮಸ್ತಪ್ರಾಣಿಗಳಲಿ, ರಮೇಶನು=ಲಕ್ಷ್ಮೀಪತಿಯು, ಇಹನೆಂದು=ಇರುವ ನೆಂದು ಅರಿತು, ಅವರ=ಆ ಜನರ, ಅಭಿಲಾಷೆ ಪೂರೈಸುವುದೇ ಮಹಾಯಜ್ಞ, ಹರಿಪೂಜೆ.

ತಾತ್ಪರ್ಯ :—ಮೇಲಿನ ಪದ್ಯದಲ್ಲಿ ಹೇಳಿದ ಯೋಗ್ಯಜೀವರ ಸ್ವರೂ ಪವನ್ನೇ ವಿಶದಮಾಡುತ್ತಾರೆ :—

ಶ್ರೀ ಪರಮಾತ್ಮನೇ ಸರ್ವೋತ್ತಮನು. ಸಮಸ್ತ ಪ್ರಪಂಚದಿಂದ ಭಿನ್ನನು; ಸಕಲಜಗತ್ಪ್ರೇರಕನು ಎಂಬಿವೇ ಮೊದಲಾದ ವಿಶೇಷಜ್ಞಾನ, ಭಗ ವಂತನು ನಮಗೆ ಸ್ವಾಮಿಯು, ನಾವು ಅವನ ದಾಸರು ಎಂದರಿತು ಉಪಾಸನೆ ಮಾಡುವ ಭಕ್ತರಲ್ಲಿ ಉತ್ತಮವಾದ ಭಕ್ತಿ ಮಾಡುವುದು ಸಂಸಾರ ಸುಖದಲ್ಲಿ ನಿರಾಶೆ, ಜಗತ್ತೆಲ್ಲವು ಸುಳ್ಳು, ಈಶ್ವರನನ್ನು ಬಿಟ್ಟು ಜೀವನು ಬೇರೆಇಲ್ಲ, ನಾನೇ ಈಶ್ವರನು ಎಂಬಿವೇ ಮೊದಲಾದ ಮತವನ್ನಾಶ್ರಯಿಸಿದವರಲ್ಲಿ ವಿಶೇಷ ವಾದ ದ್ವೇಷ, ಚರಾಚರ ಮಿಶ್ರವಾದ ಈ ಪ್ರಪಂಚದಲ್ಲಿ ಶ್ರೀಹರಿಯು ಸರ್ವತ್ರ ವ್ಯಾಪಿಸಿಕೊಂಡಿರುವನು ಎಂದು ತಿಳಿದು ಪ್ರಾಣಿಗಳ ಮನೋಭೀಷ್ಟ ಗಳನ್ನು ಪೂರೈಸುವುದೇ ದೊಡ್ಡ ಯಾಗವೆಂತಲೂ ಅದೇ ಪರಮಾತ್ಮನ ಮಹಾ

ಪೂಜೆಯೆಂತಲೂ ತಿಳಿಯಬೇಕು. ಹೀಗಿರುವವರು ಯೋಗ್ಯಜೀವರೆಂದು ತಾತ್ಪರ್ಯ.

**ತ್ರಿದಶ ಏಕಾತ್ಮನೆನಿಸಿ ಭೂ**
**ಉದಕ ಶಿಖಿಯೊಳಘುತ್ತುಕರಣದ**
**ಲಧಿಪರೆನಿಸುವ ಪ್ರಾಣಮುಖ್ಯಾದಿತ್ಯರೊಳು ನೆಲಸೀ ॥**
**ವಿದಿತನಾಗಿದ್ದ ನವರತನಿರ**
**ವಧಿಕ ಮಹಿಮನು ಸಕಲವಿಷಯವ**
**ನಿಧನನಾಮಕ ಸಂಕರುಷಣಾಹ್ವಯನು ಸ್ವೀಕರಿಪ ॥ ೩ ॥**

ಪದ್ಯಾರ್ಥ :—ತ್ರಿದಶ=ತ್ರಿ=೩, ದಶ=೧೦, ಒಟ್ಟು ೧೩ ರೂಪಗಳುಳ್ಳವನಾಗಿಯೂ, ಏಕಾತ್ಮನೆನಿಸಿ=ಏಕಾತ್ಮನೆಂತಲೂ ಪ್ರಸಿದ್ಧನಾಗಿ, ಭೂ=ಭೂಮಿ, ಉದಕ=ನೀರು, ಶಿಖಿಯೊಳಗೆ=ಅಗ್ನಿ, ಇವು ಮೂರರಲ್ಲಿ ಮೂರು ರೂಪಗಳಿಂದಲೂ, ಹತ್ತುಕರಣದಲಿ=ಕಣ್ಣು ಮೊದಲಾದ ೧೦ ಇಂದ್ರಿಯಗಳಲ್ಲಿಯೂ, ಅಧಿಪರೆನಿಸುವ=ತದಭಿಮಾನಿಗಳೆನಿಸುವ, ಪ್ರಾಣಮುಖ್ಯ=ವಾಯುದೇವರು ಮೊದಲಾದ, ಆದಿತ್ಯರೊಳು=ದೇವತೆಗಳಲ್ಲಿಯೂ, ನಿಧನನಾಮಕ=ನಿಧನನೆಂಬ ನಾಮವುಳ್ಳ, ಸಂಕರ್ಷಣಾಹ್ವಯನು =ಸಂಕರ್ಷಣನಾಮಕ ಪರಮಾತ್ಮನು, ನೆಲಸಿ=ವಾಸಮಾಡುತ್ತಾ, ವಿದಿತನಾಗಿದ್ದು=ಜ್ಞಾನಿಗೋಚರನಾಗಿದ್ದು, ಅನವರತ=ನಿತ್ಯವೂ, ನಿರವಧಿಕ ಮಹಿಮನು=ಅವಧಿ ಇಲ್ಲದ ಮಹಿಮೆಯುಳ್ಳವನಾಗಿ, ಸಕಲವಿಷಯವ=ಈ ಶರೀರದಲ್ಲಿ ಅನುಭವಿಸುವ ಸಕಲ ವಿಷಯ ಭೋಗಗಳನ್ನು, ಸ್ವೀಕರಿಪ=ಸ್ವೀಕರಿಸುವನು.

ತಾತ್ಪರ್ಯ :—ಮೇಲಿನ ಪದ್ಯದಲ್ಲಿ ಹೇಳಿದಪ್ರಕಾರ ಜೀವರ ಯೋಗ್ಯತೆಯನ್ನರಿತು ಅವರವರ ಮನೋಭೀಷ್ಟವನ್ನು ಪೂರೈಸಿದರೆ ಶ್ರೀಹರಿಯು ಅದನ್ನು ಪ್ರೀತಿಯಿಂದ ಸ್ವೀಕರಿಸುವನು. ಅದರಿಂದ ಭಗವತ್ಪೂಜೆಯೇ ಮಾಡಿದಂತಾಗುವುದು ಎಂದು ಹೇಳುತ್ತಾರೆ:—ಪೃಥಿವೀ, ಉದಕ, ತೇಜಸ್ಸು ಎಂಬ ಹೆಸರುಳ್ಳ ಇವು ಮೂರು, ಅನ್ನ, ಉದಕ, ಅಗ್ನಿಯೆಂಬ ಮೂರರ ಸಾಂಕೇತಿಕ ನಾಮಗಳೆಂದು ತಿಳಿಯಬೇಕು. ಅನ್ನೋದಕ ಅಗ್ನಿಗಳೆಂಬ ಮೂರರಿಂದ ಹುಟ್ಟುವದು ವಾತ, ಪಿತ್ತ, ಶ್ಲೇಷ್ಮವೆಂಬ ಮೂರು ಧಾತುಗಳು. ಪ್ರಳಯಕಾಲದಲ್ಲಿ ರುದ್ರಾಂತರ್ಗತನಾಗಿದ್ದು ಜಗತ್ತನ್ನೆಲ್ಲಾ ದಹಿಸಿ

ಸಂಹಾರ ಮಾಡುವುದರಿಂದ ಸಂಕರ್ಷಣ ಮೂರ್ತಿಗೆ ನಿಧನಮೂರ್ತಿ ಎಂದು ಹೆಸರು. ಇಂತಹಾ ಸಂಕರ್ಷಣನು, ಮಾತಪಿತ್ರಾದಿ ಮೂರರಲ್ಲಿ ಮೂರು ರೂಪಗಳಿಂದಲೂ, ಕಣ್ಣು ಕಿವಿ ಮೊದಲಾದ ದಶೇಂದ್ರಿಯಗಳಲ್ಲಿ ತದಭಿಮಾನಿಗಳಾದ ವಾಯು ಮೊದಲಾದ ದೇವತೆಗಳಲ್ಲಿಯೂ ಸಹ ೧೦ ರೂಪಗಳಿಂದಲೂ, ಮನಸ್ಸಿನಲ್ಲಿ ಏಕಾತ್ಮನೆಂಬ ಒಂದು ರೂಪದಿಂದಲೂ ಇದ್ದು ಜ್ಞಾನಿಗಳಿಗೆ ಮಾತ್ರ ಗೋಚರನಾಗುತ್ತಾ ಅಪಾರ ಮಹಿಮನಾದುದರಿಂದ ನಾವು ಪರರಿಗೆ ಮಾಡುವ ಪೂಜಾದಿಗಳನ್ನೂ, ನಾವು ಅನುಭವಿಸುವ ಸುಖಾದಿಗಳನ್ನೂ, ಕೇಳುವುದು ನೋಡುವುದು ಮೊದಲಾದ ಸಕಲ ವಿಷಯಭೋಗಗಳನ್ನೂ ಸಹಾ ಸ್ವೀಕರಿಸುವನು. ಹೀಗೆ ತಿಳಿದು ಅನುಭವಿಸುವ ವಿಷಯಭೋಗಗಳೂಸಹ ಭಗವತ್ಪೂಜೆಯೇ ಆಗುವವೆಂದು ತಾತ್ಪರ್ಯ.

**ದಹಿಕದೈಶಿಕ ಕಾಲಿಕತ್ರಯ**
**ಗಹನ ಕರ್ಮಗಳುಂಟು ಇದರೊಳು**
**ವಿಹಿತ ಕರ್ಮಗಳರಿತು ನಿಷ್ಕಾಮಕನು ನೀನಾಗಿ**
**ಬೃಹತಿನಾಮಕ ಭಾರತೀಶನ**
**ಮಹಿತರೂಪವ ನೆನೆದು ಮನದಲ್ಲ್ಯ**
**ರಹರ್ಭಗವಂತಗರ್ಪಿಸು ಪರಮ ಭಕುತಿಯಲಿ || ೪ ||**

ಪದ್ಯಾರ್ಥ :—ದಹಿಕ=ದೇಹ ಸಂಬಂಧವಾಗಿಯೂ, ದೈಶಿಕ=ದೇಶ ಸಂಬಂಧವಾಗಿಯೂ, ಕಾಲಿಕ=ಕಾಲ ಸಂಬಂಧವಾಗಿಯೂ, ತ್ರಯ=ಮೂರಾದ, ಗಹನ ಕರ್ಮಗಳು=ಗಹನವಾದ ಕರ್ಮಗಳು ಉಂಟು. ಇದರೊಳು=ಇವುಗಳೊಳು, ವಿಹಿತ ಕರ್ಮಗಳರಿತು=ಅವಶ್ಯ ಮಾಡಬೇಕಾದ ಕರ್ಮಗಳನ್ನು ತಿಳಿದು, ನಿಷ್ಕಾಮಕನು=ಫಲಾಪೇಕ್ಷೆ ರಹಿತನು, ನೀನು, ಆಗಿ, ಬೃಹತಿನಾಮಕ=೭೨೦೦೦ ನಾಡೀಗತ ಬೃಹತೀ ನಾಮಕರಾದ, ಭಾರತೀಶನ=ಮುಖ್ಯ ಪ್ರಾಣದೇವರ, ಮಹಿತರೂಪವ=ಉತ್ಕೃಷ್ಟ ರೂಪಗಳನ್ನು, ಮನದಲಿ=ಮನಸ್ಸಿನಲ್ಲಿ, ನೆನೆದು=ಸ್ಮರಿಸಿ, ಅಹರಹ=ಪ್ರತಿ ದಿವಸ ಪರಮ ಭಕ್ತಿಯಲ್ಲಿ, ಭಗವಂತಗರ್ಪಿಸು.

ತಾತ್ಪರ್ಯ :—ಮನುಷ್ಯರು ಮಾಡಬೇಕಾದ ಕರ್ಮಗಳು ಮೂರು ಪ್ರಕಾರ, ದೈಹಿಕ, ದೇಶಿಕ, ಕಾಲಿಕ, ದೈಹಿಕವೆಂದರೆ ದೇಹದಿಂದ ಮಾಡುವ ಸೇವೆಗಳು-ನಮನಾದಿಗಳು. ದೇಶಿಕ ದೇಶ ಸಂಬಂಧವಾದುದು, ಅದು ಪುಣ್ಯ

ಕ್ಷೇತ್ರಗಳಾದ ಕಾಶಿ ಮೊದಲಾದ ಸ್ಥಳಗಳಿಗೆ ಹೋದಾಗ ಮಾಡುವ ಮುಂಡನ ತೀರ್ಥಶ್ರಾದ್ಧ ಮೊದಲಾದವು, ಕಾಲಿಕವೆಂದರೆ ಕಾಲ ಸಂಬಂಧವಾದ ಸಂಧ್ಯಾವಂದನ, ಶ್ರಾದ್ಧ ಸಂಕ್ರಮಣಾದಿಗಳಲ್ಲಿ ಮಾಡುವ ಕೃತ್ಯಗಳು. ಹೀಗೆ ಮೂರು ವಿಧವಾದ ಕರ್ಮಗಳಲ್ಲಿ ವಿಧ್ಯುಕ್ತ ಪ್ರಕಾರ ಎಲ್ಲಾ ಕರ್ಮಗಳನ್ನು ಮಾಡಬೇಕಾದರೆ ಬಹಳ ಕಠಿಣವಾಗಿರುವುದು. ಆದುದರಿಂದ ಈ ಮೂರು ವಿಧ ಕರ್ಮಗಳಲ್ಲಿ ವಿಹಿತವಾದ ಕರ್ಮಗಳು ಅಂದರೆ ಯಾವ ಕರ್ಮಗಳನ್ನು ಅವಶ್ಯವಾಗಿ ಮಾಡೇ ತೀರಬೇಕೋ ಆ ಕರ್ಮಗಳನ್ನು ತಿಳಿದು ಫಲಾಪೇಕ್ಷೆಯನ್ನು ಬಿಟ್ಟು ಭಗವತ್ಪ್ರೀತಿಗೋಸ್ಕರವಾಗಿ ಮಾಡಬೇಕು. ಮತ್ತು ೭೨೦೦೦ ನಾಡಿಗತ ವಾಯುದೇವರಿಗೆ ಬೃಹತೀಯೆಂದು ಹೆಸರು. ಇಂತಹ ಬೃಹತೀ ಛಂದಸ್ಸಿಗೆ ಪ್ರತಿಪಾದ್ಯರಾದ ಬೃಹತೀನಾಮಕರಾದ ಭಾರತೀಪತಿಯಾದ ವಾಯುದೇವರನ್ನು ಚಿಂತಿಸಿ ಅವರಂತರ್ಯಾಮಿಯಾದ ಭಗವಂತನಿಗೆ, ಪ್ರತಿದಿವಸವೂ ನಾವು ಮಾಡುವ ಕರ್ಮಗಳನ್ನು ಪರಮ ಭಕ್ತಿಯಿಂದ ಅರ್ಪಿಸಬೇಕು.

**ಮೂರು ವಿಧ ಕರ್ಮಗಳೊಳಗೆಕಂ**
**ಸಾರಿಭಾರ್ಗವ ಹಯವದನ ಸಂ**
**ಪ್ರೇರಕನು ತಾನಾಗಿ ನವರೂಪಗಳನೆ ಧರಿಸಿ |**
**ಸೂರಿಮಾನವ ದಾನವರೊಳು**
**ವಿಕಾರ ಶೂನ್ಯನು ಮಾಡಿ ಮಾಡಿಸಿ**
**ಸಾರಭೋಕ್ತನು ಸ್ವೀಕರಿಸಿ ಕೊಡುತಿಪ್ಪ ಜೀವರಿಗೆ || ೫ ||**

ಪದ್ಯಾರ್ಥ :—ಮೂರು ವಿಧ ಕರ್ಮಗಳೊಳಗೆ=ಮೇಲಿನ ಪದ್ಯದಲ್ಲಿ ಹೇಳಿದ ದೈಹಿಕ, ದೇಶಿಕ, ಕಾಲಿಕವೆಂಬ ಮೂರು ವಿಧ ಕರ್ಮಗಳೊಳಗೆ, ಕಂಸಾರಿ ಶ್ರೀ ಕೃಷ್ಣನು, ಭಾರ್ಗವ=ಪರಶುರಾಮ, ಹಯವದನ=ಹಯಗ್ರೀವ ಎಂಬೀ ಮೂರು ರೂಪಗಳಿಂದ, ಸಂಪ್ರೇರಕನು=ಚೆನ್ನಾಗಿ ಪ್ರೇರಿಸುವನು, ತಾನಾಗಿ ನವರೂಪಗಳನೆ ಧರಿಸಿ=ಕೃಷ್ಣರೂಪ ೩ ಪರಶುರಾಮ ರೂಪ ೩ ಹಯಗ್ರೀವರೂಪ ೩, ಹೀಗೆ ೯ ರೂಪಗಳನ್ನು ಧರಿಸಿ, ಸೂರಿ=ದೇವತೆಗಳಲ್ಲಿ ಮಾನವ=ಮನುಷ್ಯರಲ್ಲಿ, ದಾನವರೊಳು=ದೈತ್ಯರೊಳಗೆ ಇದ್ದು ವಿಕಾರ ಶೂನ್ಯನು=ಸ್ವಯಂ ವಿಕಾರ ರಹಿತನಾಗಿ, ಮಾಡಿ=ದೇವ ಮಾನವ ದಾನವರು ಮಾಡುವ ಸಾತ್ವಿಕ ರಾಜಸ ತಾಮಸ ಕರ್ಮಗಳನ್ನು ಮಾಡಿ ಮಾಡಿಸಿ,

ಸಾರಭೋಕ್ತನು, ಸ್ವೀಕರಿಸಿ=ತಾನು ಸಾತ್ವಿಕ ಕರ್ಮಗಳ ಫಲವನ್ನು ಸ್ವೀಕರಿಸಿ ಜೀವರಿಗೆ ಕೊಡುತಿಪ್ಪ.

ತಾತ್ಪರ್ಯ :—ಮೇಲೆ ಹೇಳಿದ ತ್ರಿವಿಧ ಕರ್ಮಗಳ ಪ್ರೇರಕರಾದ ಭಗವದ್ರೂಪಗಳನ್ನು ಹೇಳುತ್ತಾರೆ;—

ದೈಹಿಕ, ದೇಶಿಕ, ಕಾಲಿಕವೆಂಬ ಕರ್ಮಗಳು ಸಾತ್ವಿಕ ರಾಜಸ ತಾಮಸರೆಂಬ ತ್ರಿವಿಧ ಜೀವರಾಶಿಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿರುವುವು. ಮೂರು ವಿಧ ಜೀವರಾಶಿಗಳೆಂದರೆ ದೇವತೆಗಳು, ಮನುಷ್ಯರು, ದೈತ್ಯರೆಂದರ್ಥ. ದೈಹಿಕ ಕರ್ಮಗಳಿಗೆ ಪ್ರೇರಕನು ಕೃಷ್ಣರೂಪಿಯಾದ ಪರಮಾತ್ಮನು. ದೇಶಿಕ ಕರ್ಮಗಳ ಪ್ರೇರಕನು ಪರಶುರಾಮ. ಕಾಲಿಕ ಕರ್ಮ ಪ್ರೇರಕನು ಹಯಗ್ರೀವ. ಮೂರು ವಿಧ ಜೀವರಲ್ಲಿ ಮೂರು ವಿಧ ಕರ್ಮ ಪ್ರೇರಕನಾಗಿ ೩×೩=೯, ಒಟ್ಟು ೯ ರೂಪಗಳಿಂದ ಅಲ್ಲಲ್ಲಿ ಪ್ರೇರಕನಾಗಿರುವನು. ಸಾತ್ವಿಕಾದಿ ಶರೀರಗತನಾಗಿದ್ದರೂ ತಾನು ವಿಕಾರ ಶೂನ್ಯನಾಗಿರುವನು. ಮೂರು ವಿಧ ಜೀವರಾಶಿಗಳು ಮಾಡಬೇಕಾದ ಕರ್ಮಗಳನ್ನು ಅವರೊಳಗಿದ್ದು ತಾನು ಮಾಡಿ ಅವರಿಂದಲೂ ಮಾಡಿಸಿ ಸರ್ವಸಾರ ಭೋಕ್ತನಾದ ಸ್ವಾಮಿ, ಅವರವರ ಪೂಜಾ ದ್ವೇಷಾದಿಗಳನ್ನನುಸರಿಸಿ ಫಲವನ್ನು ಕೊಡುವುದಕ್ಕಾಗಿ ಸಾತ್ವಿಕರು ಮಾಡುವ ಸಾತ್ವಿಕ ಪೂಜಾದಿಗಳನ್ನು, ಮನುಷ್ಯರು ಮಾಡುವ ರಾಜಸ ಪೂಜಾದಿಗಳನ್ನು, ತಾಮಸರು ಮಾಡುವ ದ್ವೇಷಾದಿಗಳನ್ನೂ ಕೂಡ ತಾನು ಸ್ವೀಕರಿಸಿ ಕರ್ಮಾನುಸಾರವಾಗಿ ಫಲವನ್ನು ಕೊಡುವನು.

**ಅನಲ ಪಕ್ವವ ಗೈಸಿದನ್ನವ**
**ಅನಲನೊಳು ಹೋಮಿಸುವ ತೆರದಂ**
**ತನಿಮಿಷೇಶನು ಮಾಡಿ ಮಾಡಿಸಿದಖಿಳ ಕರ್ಮಗಳ!**
**ಮನವಚನಕಾಯದಲಿ ತಿಳಿದನು**
**ದಿನದಿಕೊಡೆ ಶಂಕಿಸದೆ ವೃಜನಾ**
**ರ್ದನ ಸದಾ ಕೈಕೊಂಡು ಸಂತೈಸುವನು ತನ್ನವರ ‖ ೬ ‖**

ಪದ್ಯಾರ್ಥ :—ಅನಲ=ಅಗ್ನಿಯಿಂದ, ಪಕ್ವವ ಗೈಸಿದ=ಪಕ್ವ ಮಾಡಿದ, ಅನ್ನವನು=ಅನ್ನವನ್ನು, ಅನಲನೊಳು=ಅಗ್ನಿಯೊಳಗೆ, ಹೋಮಿಸುವ ತೆರದಂತೆ=ಹೋಮ ಮಾಡುವ ಹಾಗೆ, ಅನಿಮಿಷೇಶನು=ದೇವೇಶನು, ಮಾಡಿ ಮಾಡಿಸಿದ, ಅಖಿಳ ಕರ್ಮಗಳ=ಎಲ್ಲಾ ಕರ್ಮಗಳನ್ನೂ, ಮನವಚನಕಾಯ

ದಲಿ=ಮನಸ್ಸಿನಿಂದಲೂ, ವಚನದಿಂದಲೂ ಶರೀರದಿಂದಲೂ, ತಿಳಿದು=ಮಾಡಿದ ಕರ್ಮಗಳೆಲ್ಲವನ್ನೂ ಪರಮಾತ್ಮನೇ ಮಾಡಿಸಿದನೆಂದು ತಿಳಿದು, ಅನುದಿನದಿ=ಪ್ರತಿದಿವಸವೂ, ಶಂಕಿಸದೆ=ಸಂಶಯ ಪಡದೆ, ಕೊಡೆ=ಸಮರ್ಪಣೆ ಮಾಡಲು, ವೃಜನಾರ್ದನ=ಕಲುಷನಾಶಕನಾದ ಪರಮಾತ್ಮನು ಸದಾ=ಸರ್ವ ಕಾಲದಲ್ಲಿಯೂ, ಕೈಕೊಂಡು=ಸ್ವೀಕರಿಸಿ, ತನ್ನವರ=ತನ್ನ ಭಕ್ತರನ್ನು, ಸಂತೈಸುವನು.

ತಾತ್ಪರ್ಯ:—ಪರಮಾತ್ಮನು ನಮ್ಮೊಳಗಿದ್ದು ಮಾಡಿ ಮಾಡಿಸುವ ಎಲ್ಲಾ ಕರ್ಮಗಳನ್ನೂ ಪರಮಾತ್ಮನಿಗೆ ಸಮರ್ಪಣ ಮಾಡಬೇಕೆಂದು ದೃಷ್ಟಾಂತ ಸಹಿತವಾಗಿ ಹೇಳುತ್ತಾರೆ.

ಅಗ್ನ್ಯಂತರ್ಗತ ಶ್ರೀ ಪರಶುರಾಮ ದೇವರೆ ಅನ್ನಾದಿಗಳನ್ನು ಪಕ್ವವನ್ನಾಗಿ ಮಾಡುವವನು. ಅಂದರೆ ನಾವು ಒಲೆ ಉರಿಹಾಕಿ ಅಗ್ನಿಯಿಂದ ಅನ್ನಾದಿಗಳನ್ನು ಪಕ್ವ ಮಾಡುವೆವಷ್ಟೆ. ಆ ಪಕ್ವವನ್ನು ಮಾಡುವ ಶಕ್ತಿಯು ಅಗ್ನಿದೇವರಿಗೆ ಇಲ್ಲವಾದುದರಿಂದ ಅಗ್ನಿ ಅಂತರ್ಯಾಮಿಯಾಗಿದ್ದು ಪರಶುರಾಮ ದೇವರು ಮಾಡುವರೆಂದರ್ಥ. ಅದೇ ಅನ್ನವನ್ನೇ ಪರಮಾತ್ಮನಿಗೆ ಸಾಲಿಗ್ರಾಮಾ ದ್ಯಧಿಷ್ಠಾನದಲ್ಲಿ ನೈವೇದ್ಯ ಸಮರ್ಪಣೆಮಾಡಿ ಮತ್ತು ವೈಶ್ವದೇವ ಮಾಡುವಾಗ ಅಗ್ನ್ಯಂತರ್ಗತ ಪರಶುರಾಮಾತ್ಮಕ ಪರಮಾತ್ಮನಿಗೆ ಸಮರ್ಪಿಸುವ ಸಂಪ್ರದಾಯವು ಪ್ರಸಿದ್ಧವಲ್ಲವೆ? ಇದರಂತೆ ಶ್ರೀಪರಮಾತ್ಮನು ನಮ್ಮ ಮನೋವಾಕ್ಕಾಯಗಳಲ್ಲಿದ್ದು ಮಾಡಿ ಮಾಡಿಸಿದ, ಸಕಲವಾದ ಪುಣ್ಯ ಪಾಪಾದಿ ಕರ್ಮಗಳನ್ನು, ಕೊಡಬಹುದೊ ಕೊಡಕೂಡದೋ ಎಂಬ ಶಂಕೆಯನ್ನು ಮನಸ್ಸಿನಲ್ಲಿ ಮಾಡದೆ, ಶ್ರೀಪರಮಾತ್ಮನಿಗೆ ಅರ್ಪಿಸಿದರೆ, ಪಾಪನಾಶಕನಾದ ಪರಮಾತ್ಮನು ತಾನು ಸರ್ವಕಾಲದಲ್ಲಿಯೂ ಅವುಗಳನ್ನು ಸ್ವೀಕರಿಸಿ ಪಾಪಗಳನ್ನು ಸುಟ್ಟು, ಪುಣ್ಯಫಲವನ್ನು ಭಕ್ತರಿಗೆಕೊಟ್ಟು ಅವರನ್ನು ಸಮಾಧಾನಪಡಿಸುವನು.

**ಕದುರಿಬಾಲದ ಕೊನೆಯ ಕೂದಲು**
**ತುದಿವಿಭಾಗವ ಮಾಡಿ ಶತವಿಧ**
**ವದರೊಳೊಂದನು ನೂರಭಾಗವ ಮಾಡಲೆಂತಿಹದೊ ॥**
**ವಿಧಿಭವಾದಿ ಸಮಸ್ತಜೀವರ**

**ಮೊದಲುಮಾಡಿ ತೃಣಾಂತ ಜೀವರೊ**
**ಳಧಿಕ ನ್ಯೂನತೆ ಇಲ್ಲವೆಂದಿಗು ಜೀವಪರಿಮಾಣ ॥ ೭ ॥**

ಪದ್ಯಾರ್ಥ :—ಕುದುರೆಬಾಲದ ಕೊನೆಯಕೂದಲು=ಕುದುರೆಬಾಲದ ಒಂದು ಕೂದಲ ಕಡೆಯ ಭಾಗವನ್ನು, ಶತವಿಧ=ನೂರುವಿಧವಾಗಿ, ತುದಿ ವಿಭಾಗವಮಾಡಿ=ಕೊನೆಸೀಳಿ ಭಾಗಿಸಿ, ಅದರೊಳಗೊಂದನು=ಅವುಗಳಲ್ಲಿ ಒಂದನ್ನು, ನೂರುಭಾಗವಮಾಡಲು, ಎಂತಿಹದೊ=ಎಷ್ಟು ಇರುವುದೋ, ವಿಧಿಭವಾದಿ=ಬ್ರಹ್ಮರುದ್ರ ಮೊದಲಾದ, ಸಮಸ್ತಜೀವರ ಮೊದಲುಮಾಡಿ, ತೃಣಾಂತ = ತೃಣಜೀವರವರೆಗೂ ಇರುವ, ಜೀವರೊಳು = ಜೀವರಲ್ಲಿ, ಎಂದಿಗೂ=ಯಾವಾಗಲೂ, ಜೀವಪರಿಮಾಣ=ಜೀವರ ಪರಿಮಾಣವು, ಅಧಿಕನ್ಯೂನತೆಇಲ್ಲ=ಹೆಚ್ಚು ಕಡಿಮೆಇಲ್ಲ.

ತಾತ್ಪರ್ಯ :—ಪರಮಾತ್ಮನು ಜೀವರಲ್ಲಿ ಪರಮಾಣುವಾದ ಅನೇಕ ರೂಪಗಳಿಂದ ವಾಸವಾಗಿರುವನೆಂಬ ಭಗವನ್ಮಹಿಮೆಯನ್ನು ಮುಂದಿನ ಪದ್ಯದಲ್ಲಿ ಹೇಳುತ್ತಾ ಈ ಪದ್ಯದಿಂದ ಜೀವರ ಪರಿಣಾಮವನ್ನು ಹೇಳುತ್ತಾರೆ. ಕುದುರೆಯ ಬಾಲದ ಒಂದು ಕೂದಲನ್ನು ಕಿತ್ತು, ಅದರ ಕೊನೆಯ ಭಾಗವನ್ನು ಮಾತ್ರ ತೆಗೆದುಕೊಂಡು ಅದನ್ನು ನೂರು ಭಾಗವನ್ನಾಗಿ ಸೀಳಿಸಿ, ಸೀಳಿದ ಒಂದು ತುಣಕನ್ನು ನೂರು ಭಾಗವಾಗಿ ತುಣುಕು ಮಾಡಿದರೆ ಎಷ್ಟು ಇರುವುದೋ ಅಷ್ಟುಮಾತ್ರವೇ ಬ್ರಹ್ಮಮೊದಲು ತೃಣಜೀವರವರೆಗೂ ಎಲ್ಲಾ ಜೀವರ ಸ್ವರೂಪ ಪರಿಮಾಣವು ಇರುವುದು. ಬ್ರಹ್ಮಾದಿ ಜೀವರ ಪರಿಮಾಣವು ದೊಡ್ಡದೆಂದಾಗಲಿ, ತೃಣಾದಿ ಜೀವರ ಪರಿಮಾಣವು ಸಣ್ಣದೆಂದಾಗಲಿ ಹೆಚ್ಚು ಕಮ್ಮಿಯು ಎಂದಿಗೂ ಇಲ್ಲ. 'ಅಶ್ವ ವಾಲಾಗ್ರಮಾದಾಯ ವಿಭಜ್ಯ ಶತಧಾಹಿತತ್ । ಪುನಶ್ಚ ಶತಧಾಭಿನ್ನಂ ಕಿಯನ್ಮಾನಂ ಭವಿಷ್ಯತಿ ॥ ತಾವದ್ಬ್ರಹ್ಮಾದಿ ಜೀವಾನಾಂ ಪರಿಮಾಣಂ ಪ್ರಕೀರ್ತಿತಂ ॥' ಎಂಬ ತತ್ವಸಾರದ ಪ್ರಮಾಣವು ಇದಕ್ಕಾಧಾರವಾಗಿರುವುದು. ಮೂಲದಲ್ಲಿನ ಅರ್ಥವೆ ಈ ಶ್ಲೋಕಾರ್ಥವು.

**ಜೀವನಂ ಗುಷ್ಠಾಗ್ರಮೂರುತಿ**
**ಜೀವನಂ ಗುಟಮಾತ್ರ ಮೂರುತಿ**
**ಜೀವನಪ್ರಾದೇಶ ಜೀವಾಕಾರ ಮೂರ್ತಿಗಳು ॥**
**ಏವಮಾದಿ ಅನಂತರೂಪದಿ**

**ಯಾವದವಯವಗಳೊಳು ವ್ಯಾಪಿಸಿ**
**ಕಾವ ಕರುಣಾಳಾದ ದೇವನು ಈ ಜಗತ್ರಯವ ॥ ೮ ॥**

ಪದ್ಯಾರ್ಥ :—ಜೀವನ, ಅಂಗುಷ್ಠಾಗ್ರ=ಹೆಬ್ಬೆರಳಿನ ಕೊನೆಯಷ್ಟು, ಮೂರುತಿ, ಭಗವನ್ಮೂರ್ತಿಯು, ಜೀವನ, ಅಂಗುಟಮಾತ್ರಮೂರುತಿ=ಹೆಬ್ಬೆರಳಿನಷ್ಟು ಭಗವನ್ಮೂರ್ತಿಯು, ಜೀವನ ಪ್ರಾದೇಶ=ಜೀವನ ಚೋಟು ಉದ್ದವಾದ ಮೂರ್ತಿಯು, ಜೀವಾಕಾರ ಮೂರ್ತಿಗಳು=ಜೀವನಷ್ಟು ಆಕಾರ ಉಳ್ಳ ಮೂರುತಿಗಳು, ಏವಮಾದಿ=ಇವೇ ಮೊದಲಾದ, ಅನಂತರೂಪದಿ=ಅನಂತ ರೂಪಗಳಿಂದ, ಯಾವದವಯವಗಳೊಳು=ಎಲ್ಲಾ ಅಂಗಗಳಲ್ಲಿಯೂ ವ್ಯಾಪಿಸಿ=ವ್ಯಾಪಿಸಿಕೊಂಡು, ಕರುಣಾಳಾದ=ಕರುಣಾ ಪೂರ್ಣನಾದ, ದೇವನು=ಶ್ರೀಹರಿಯು, ಈ ಜಗತ್ರಯವ=ಈ ಮೂರು ಲೋಕಗಳನ್ನು ಕಾವ=ರಕ್ಷಿಸುವನು.

ತಾತ್ಪರ್ಯ ;—ಜೀವನು ಪರಮಾಣು ರೂಪನೆಂದು ಮೇಲಿನ ಪದ್ಯದಲ್ಲಿ ಹೇಳಿ ಈ ಪದ್ಯದಿಂದ ಜೀವಕ್ಕಿಂತಲೂ ಅತ್ಯಂತ ಪರಮಾಣು ರೂಪನಾಗಿ ಪರಮಾತ್ಮನು ಜೀವನಲ್ಲಿರುವನೆಂದು ಹೇಳುತ್ತಾರೆ.

ಜೀವನ ಪರಿಮಾಣವು ಕುದುರೆಯ ಕೂದಲ ಕೊನೆಯನ್ನು ನೂರಾಗಿ ಸೀಳಿ, ಅದರಲ್ಲಿನ ಒಂದು ಶೀಳಕನ್ನು ನೂರಾಗಿ ಭಾಗಿಸಿದರೆ ಆಗುವಷ್ಟು ಇರುವುದೆಂದು ಹೇಳಿದರಲ್ಲವೆ? ಅಂತಹ ಜೀವನಕ್ಕೆ ಹೆಬೆ ರಳಿನ ಕೊನೆಯಷ್ಟು ಆಕಾರ ಉಳ್ಳ ಮೂರ್ತಿಗಳು ಕೆಲವು, ಕೆಲವು ಮೂರ್ತಿಗಳು ಹೆಬ್ಬೆರಳಿನಷ್ಟು ಮತ್ತೆ ಕೆಲವು ಜೀವನ ಒಂದು ಚೋಟಿಷ್ಟು ಜೀವನ ಸಂಪೂರ್ಣಾಕಾರದಷ್ಟು ಮೂರ್ತಿಗಳು ಕೆಲವು. ಹೀಗೆ ಅನಂತಾನಂತ ರೂಪಗಳಿಂದ ಜೀವನ ಎಲ್ಲಾ ಅಂಗಗಳಲ್ಲಿಯೂ ವ್ಯಾಪಿಸಿಕೊಂಡು ಕರುಣಾಪೂರ್ಣನಾದ ಶ್ರೀ ಹರಿಯು ಮೂರು ಲೋಕವನ್ನು ಪಾಲಿಸುವನು. "ತತ್ಕರ್ಣಿಕಾಮೂಲ ದೇಶೆ ಜೀವಾಂಗುಷ್ಠಾಗ್ರ ಮಾನತಃ | ಮೂಲೇಶ ಇತಿವಿಖ್ಯಾತಃ" ಇತ್ಯಾದಿ ಮುಕ್ತಿ ತತ್ವಗ್ರಂಥದ ವಾಕ್ಯದಿಂದ ಜೀವನ ಹೃದಯಾಕಾಶದಲ್ಲಿ ಅಷ್ಟದಳ ಕಮಲ ಕರ್ಣಿಕೆಯ ಮಧ್ಯ ಪ್ರದೇಶದಲ್ಲಿ ಜೀವನ ಅಂಗುಷ್ಟದ ಕೊನೆಯಷ್ಟು ರೂಪದಿಂದ ಮೂಲೇಶನೆಂಬ ಹೆಸರಿನಿಂದ ವಾಸಮಾಡುತ್ತಿರುವನು. ಆ ಮೂರ್ತಿಯ ಹಿಂಭಾಗದಲ್ಲಿ ಜೀವನ ಅಂಗುಷ್ಟಮಾತ್ರರೂಪದಿಂದಲೂ ಆ ಮೂರ್ತಿಯ ಹಿಂದೆ ಪ್ರಾದೇಶನಾಮಕ ಪರಮಾತ್ಮನು ಚೋಟು ಉದ್ದ

ದಷ್ಟು ರೂಪದಿಂದ ಇರುವನು ಎಂಬ ಅರ್ಥವು ಸಿದ್ಧವಾಗುವುದು. ಜೀವನ ಎಲ್ಲಾ ಅಂಗಗಳಲ್ಲಿಯೂ ಅನಂತಾನಂತ ರೂಪಗಳಿಂದ ಇರುವನೆಂಬ ವಿಷಯ ದಲ್ಲಿ ತೈತ್ತರೀಯ ಭಾಷ್ಯಾದಿಗಳಲ್ಲಿ ಹೇಳಿರುವ ' ವಿಷ್ಣೋರಂಗಾನಿ ಜೀವಾಂ ಗೇಷ್ವವಚ್ಛಿನ್ನಾನಿ ಸರ್ವಶಃ | ವಾಸುದೇವೋ ಹರೇಃಶೀರ್ಷಂ ಜೀವ ಶೀರ್ಷೇ ವ್ಯವಸ್ಥಿತಃ ನಾರಾಯಣೋ ಹರೇರ್ಮಧ್ಯಂ ಜೀವ ಸಂದೇಹ ಸಂಸ್ಥಿತಃ |' ಎಂಬಿವೇ ಮೊದಲಾದ ಪ್ರಮಾಣದಿಂದ, ಪರಮಾತ್ಮನ ರೂಪಗಳು ಜೀವನ ಸರ್ವಾಂಗಗಳಲ್ಲಿಯೂ, ಒಂದೊಂದು ಅಂಗದಲ್ಲಿ ಪ್ರತ್ಯೇಕ ಪ್ರತ್ಯೇಕ ಭಗವ ದ್ರೂಪಗಳು ಇವೆ ಎಂದು ತಿಳಿಯಬೇಕು. ಜೀವನ ಸ್ವರೂಪ ದೇಹಾಕಾರ ನಾಗಿ ಜೀವನ ಸ್ವರೂಪ ದೇಹವನ್ನು ವ್ಯಾಪಿಸಿಕೊಂಡು ಶ್ರೀ ಪರಮಾತ್ಮನಿರು ವನು. ಆ ಪರಮಾತ್ಮನ ಶಿರಸ್ಸಿನಲ್ಲಿ ವಾಸುದೇವ ರೂಪಿಯು ವಾಸ ಮಾಡು ವನು. ಅದೇ ಪರಮಾತ್ಮನ ಶಿರಸ್ಸೇ ಜೀವನ ಶಿರಸ್ಸಿನಲ್ಲಿ ಇರುವುದು. ಅಲ್ಲಿ ವಾಸುದೇವ ಮೂರ್ತಿ ಇರುವನು. ನಾರಾಯಣನು ಜೀವನ ದೇಹಾಕಾರ ನಾದ ಪರಮಾತ್ಮನ ಮಧ್ಯದಲ್ಲಿ ಇರುವನು. ನಾರಾಯಣನೇ ಜೀವನ ಮಧ್ಯ ದಲ್ಲಿಯೂ ಇರುವನು. ಇದೇ ಪ್ರಕಾರ ದಕ್ಷಿಣ ಪಾರ್ಶ್ವದಲ್ಲಿ ಪ್ರದ್ಯುಮ್ನ ಎಡದ ಪಾರ್ಶ್ವದಲ್ಲಿ ಅನಿರುದ್ಧ. ಹೀಗೆ ಅನಂತವಾದ ಪರಮಾಣು ರೂಪಗ ಳಿಂದ ಜೀವನ ಸ್ವರೂಪ ದೇಹದಲ್ಲಿ ಪರಮಾತ್ಮನಿರುವನೆಂದು ಸಿದ್ಧವಾಗು ವುದು.

**ಬಿಂಬ ಜೀವಾಂಗುಷ್ಟ ಮಾತ್ರದಿ**
**ಯಿಂಬುಕೊಂಡಿಹ ಸರ್ವರೊಳು ಸೂ**
**ಕ್ಷ್ಮಾಂಬರದಿ ಹೃತ್ಕಮಲ ಮಧ್ಯನಿವಾಸಿಯೆಂದೆನಿಸಿ |**
**ಎಂಬರೀತಗೆ ಕೋವಿದರು ವಿ**
**ಶ್ವಂಭರಾತ್ಮ ಪ್ರಾಜ್ಞ ಭಕ್ತ ಕು**
**ಟುಂಬಿ ಸಂತೈಸುವನು ಈಪರಿ ಬಲ್ಲ ಭಜಕರನ ||೯||**

ಪದ್ಯಾರ್ಥ :—ಬಿಂಬ=ಬಿಂಬರೂಪಿಯಾದ ಶ್ರೀ ಪರಮಾತ್ಮನು, ಜೀ ವಾಂಗುಷ್ಟ ಮಾತ್ರದಿ=ಜೀವನ ಅಂಗುಷ್ಟ ಪರಿಮಿತಿಯಿಂದ, ಸರ್ವರೊಳು= ಸಮಸ್ತರಲ್ಲಿಯೂ, ಸೂಕ್ಷ್ಮಾಂಬರದಿ=ಸೂಕ್ಷ್ಮವಾದ ಹೃದಯಾಕಾಶದಲ್ಲಿ, ಹೃತ್ಕಮಲ ಮಧ್ಯನಿವಾಸಿ ಎಂದೆನಿಸಿ, ಇಂಬುಕೊಂಡಿಹ=ವ್ಯಾಪಿಸಿಕೊಂಡಿ ರುವನು ಕೋವಿದರು=ಜ್ಞಾನಿಗಳು, ಈತಗೆ=ಈ ಭಗವದ್ರೂಪವನ್ನು,

ವಿಶ್ವಂಭರಾತ್ಮಪ್ರಾಜ್ಞ=ವಿಶ್ವಂಭರ, ಆತ್ಮ, ಪ್ರಾಜ್ಞ ಎಂಬ ಮೂರು ನಾಮಗಳಿಂದ ಕೂಡಿದವನೆಂದು, ಯೆಂಬರು=ಹೇಳುವರು. ಈ ಪರಿ=ಈರೀತಿಯಾಗಿ, ಬಲ್ಲ=ತಿಳಿದ, ಭಜಕರನ=ತನ್ನ ಸೇವಕರನ್ನು (ಭಕ್ತರನ್ನು) ಭಕ್ತ ಕುಟುಂಬಿ=ಭಕ್ತ ಪೋಷಕನು, ಸಂತೈಸುವನು.

ತಾತ್ಪರ್ಯ :—ಬಿಂಬರೂಪಿಯಾದ ಶ್ರೀ ಪರಮಾತ್ಮನ ಲಕ್ಷಣವನ್ನು ಹೇಳುತ್ತಾರೆ :—

ಕಾಟಕೋಪನಿಷದ್ಭಾಷ್ಯದಲ್ಲಿ 'ಸ್ಥೂಲಾಂಗುಷ್ಟಮಿತೋ ದೇಹೇ ಜೀವಾಂಗುಷ್ಟಮಿತೋ ಹೃದಿ' ಎಂದು ಹೇಳಿರುವರು. ಈ ಪ್ರಮಾಣಾನುಸಾರವಾಗಿ ಪರಮಾತ್ಮನು ಸ್ಥೂಲದೇಹದಲ್ಲಿ ಹೃದಯಾಕಾಶದಲ್ಲಿ ಸ್ಥೂಲದೇಹದ ಅಂಗುಷ್ಟ ಪರಿಮಿತಿಯುಳ್ಳ ರೂಪದಿಂದ ಇರುವನು. ಇದೇ ಪ್ರಕಾರ ಜೀವನ ಸ್ವರೂಪದೇಹದ ಅತಿ ಸೂಕ್ಷ್ಮವಾದ ಹೃದಯಾಕಾಶದಲ್ಲಿ ಜೀವನ ಅಂಗುಷ್ಟ ಪರಿಮಿತಿಯುಳ್ಳ ರೂಪದಿಂದ ಇರುವನು ಎಂದು ತಿಳಿಯಬೇಕು. ಈತನು ಸೂಕ್ಷ್ಮವಾದ ಹೃದಯಾಕಾಶಗೆತ ಕಮಲ ಕರ್ಣಿಕಾ ಮಧ್ಯದಲ್ಲಿರುವುದರಿಂದ ಈತನನ್ನು ಹೃತ್ಕಮಲ ಮಧ್ಯನಿವಾಸಿ ಅನ್ನುವರು. ಇವನನ್ನೇ ಜ್ಞಾನಿಗಳು ವಿಶ್ವಂಭರ ಮೂರ್ತಿಯೆಂತಲೂ ಆತ್ಮ ಮೂರ್ತಿ ಎಂತಲೂ ಪ್ರಾಜ್ಞಮೂರ್ತಿ ಎಂತಲೂ ಹೇಳುವರು. ಈ ಸ್ವಾಮಿಯು ಭಕ್ತ ಜನರನ್ನು ಪ್ರೀತಿಯಿಂದ ಪೋಷಿಸುವುದರಿಂದ ಭಕ್ತ ಕುಟುಂಬಿ ಎಂದು ಹೇಳಿದರು. ವಿಶ್ವವನ್ನೇ ಪೋಷಿಸುವವನಾದರೂ, ಭಕ್ತರನ್ನು ಪ್ರೀತಿಯಿಂದ ಪೋಷಿಸುವನೆಂದು ತಾತ್ಪರ್ಯ. ಹೀಗೆ ತಿಳಿದು ಯಾರು ಪರಮಾತ್ಮನನ್ನು ಭಜಿಸುವರೊ ಅವರನ್ನು ಸರ್ವಪ್ರಕಾರದಿಂದಲೂ ಪರಮಾತ್ಮನು ಸಂತೋಷಪಡಿಸುವನು.

> ಪುರುಷನಾಮಕ ಸರ್ವ ಜೀವರೊ
> ಳಿರುವ ದೇಹಾಕಾರ ರೂಪದಿ
> ಕರಣ ನಿಯಾಮಕ ಹೃಷೀಕಪ ಇಂದ್ರಿಯಂಗಳಲಿ |
> ತುರಿಯನಾಮಕ ವಿಶ್ವತಾಹ
> ನ್ನೆರಡು ಬೆರಳುಳಿದುತ್ತಮಾಂಗದಿ
> ಎರಡಧಿಕ ಎಪ್ಪತ್ತುಸಾವಿರ ನಾಡಿಯೊಳಗಿಪ್ಪ ||೧೦||

ಪದ್ಯಾರ್ಥ ;—ಪುರುಷನಾಮಕ = ಪುರುಷನಾಮಕ ಪರಮಾತ್ಮನು, ಸರ್ವ ಜೀವರೊಳು, ದೇಹಾಕಾರ ರೂಪದಿ=ಜೀವನ ಸ್ವರೂಪ ದೇಹವು

ಯಾವ ರೂಪದಿಂದಿರುವುದೊ ಅದೇ ರೂಪದಿಂದ, ಇರುವ=ಇರುವನು. ಹೃಷೀಕಪ=ಇಂದ್ರಿಯಗಳನ್ನು ಪಾಲಿಸುವುದರಿಂದ ಹೃಷೀಕೇಶನೆಂಬ ಹೆಸರುಳ್ಳ ಪರಮಾತ್ಮನು, ಕರಣನಿಯಾಮಕ=ಇಂದ್ರಿಯಗಳ ಪ್ರೇರಕನಾಗಿ, ಇಂದ್ರಿಯಂಗಳಲಿ, ಇರುವನು. ತುರಿಯನಾಮಕ ವಿಶ್ವ=ತುರ್ಯನೆಂಬ ಹೆಸರುಳ್ಳ ವಿಶ್ವಮೂರ್ತಿಯು, ಹನ್ನೆರಡು ಬೆರಳುಳಿದುತ್ತಮಾಂಗದಿ=ಶಿರಸ್ಸಿನಮೇಲೆ ೧೨ ಅಂಗುಳ ಪರಿಮಾಣದ ಎತ್ತರದಲ್ಲಿಯೂ, ಎರಡಧಿಕ ಎಪ್ಪತ್ತು ಸಾವಿರ ನಾಡಿಯೊಳಗೆ=೭೨ ಸಾವಿರ ನಾಡಿಯೊಳಗೂ ಇಪ್ಪ=ಇರುವನು.

ತಾತ್ಪರ್ಯ;— ಪುರುಷನಾಮಕನಾದ ಶ್ರೀ ಪರಮಾತ್ಮನು ಜೀವನ ಸ್ವರೂಪ ದೇಹವು ಯಾವ ಆಕಾರದಲ್ಲಿರುವುದೊ, ಅಂದರೆ, ಮನುಷ್ಯಾಕಾರವೋ, ಮೃಗಾಕಾರವೋ, ಪಕ್ಷಿಯೋ, ಅಂತು ಜೀವನ ಸ್ವರೂಪವನ್ನನುಸರಿಸಿ ಸರ್ವ ಜೀವರ ದೇಹದಲ್ಲಿರುವನು. ಹೃಷೀಕೇಶನಾಮಕನು ಇಂದ್ರಿಯಗಳಲ್ಲಿ ಇಂದ್ರಿಯ ಪ್ರೇರಕನಾಗಿರುವನು. ವಿಶ್ವನಾಮಕನು ತುರ್ಯನಾಮಧೇಯದಿಂದ ತಲೆಗೆ ಮೇಲೆ ೧೨ ಅಂಗುಲಗಳ ಎತ್ತರದಲ್ಲಿ ಇರುವನು. ಈ ವಿಷಯದಲ್ಲಿ ೮ ನೆಯ ಸಂಧಿ ೩ ನೆಯ ಪದ್ಯದ ತಾತ್ಪರ್ಯವನ್ನು ಬರೆಯುವ ಸಂದರ್ಭದಲ್ಲಿ ಪ್ರಮಾಣಸಹಿತವಾಗಿ ವಿಶದ ಮಾಡಿರುತ್ತೆ. ಇದಲ್ಲದೆ ದೇಹಗತ ೭೨ ಸಾವಿರ ನಾಡಿಗಳಲ್ಲಿ ಸಹ ಇರುತ್ತಿರುವನು. ತುರ್ಯ, ವಿಶ್ವ, ಈ ರೂಪಗಳನ್ನು ಹೇಳಿದ್ದರಿಂದ 'ಪರಮಾತ್ಮಾ ಚತೂರೂಪಃ ಸರ್ವಪ್ರಾಣಿಶರೀರಗಃ' ಎಂಬ ಪ್ರಮಾಣಾನುಸಾರವಾಗಿ ವಿಶ್ವ, ತೈಜಸ, ಪ್ರಾಜ್ಞ, ತುರ್ಯ ಎಂಬ ೪ ರೂಪಗಳಿಂದ ಜೀವರ ದೇಹದಲ್ಲಿರುವನೆಂದು ತಾತ್ಪರ್ಯ.

**ವ್ಯಾಪಕನು ತಾನಾಗಿ ಜೀವಸ್ವ**
**ರೂಪದೇಹದ ಒಳಹೊರಗೆನಿ**
**ರ್ಲೇಪನಾಗಿಹ ಜೀವಕೃತಕರ್ಮಗಳ ನಾಚರಿಸಿ ॥**
**ಶ್ರೀಪಯೋಜ ಭವೇರರಿಂದ ಪ್ರ**
**ದೀಪವರ್ಣ ಸ್ವಮೂರ್ತಿಮಧ್ಯಗ**
**ತಾಪೊಳೆವ ವಿಶ್ವಾದಿರೂಪದಿ ಸೇವೆಕೈಕೊಳುತ** ॥ ೧೧ ॥

ಪದ್ಯಾರ್ಥ:—ಜೀವಸ್ವರೂಪದೇಹದ ವಳಹೊರಗೆ=ಜೀವನ ಸ್ವರೂಪ ದೇಹದ ಒಳಗೂಹೊರಗೂ ವ್ಯಾಪಕನುತಾನಾಗಿ, ಜೀವ=ಜೀವನು ಮಾಡುವ ಕರ್ಮಗಳನ್ನು, ಆಚರಿಸಿ=ಕರ್ಮಗಳನ್ನು ಮಾಡಿಸಿ, ನಿರ್ಲೇಪನಾಗಿಹ=ಅದ

ರಫಲ ಸಂಬಂಧವಿಲ್ಲದವನು, ಶ್ರೀಪಯೋಜ ಭವೇರರಿಂದ=ಶ್ರೀ=ಲಕ್ಷ್ಮೀ ದೇವಿಯರು, ಪಯೋಜಭವ=ಪದ್ಮಸಂಭವರಾದ ಬ್ರಹ್ಮದೇವರು, ಈರ= ವಾಯುದೇವರು, ಇವರಿಂದ ಸೇವೆಕೈಕೊಳುತ=ಸೇವೆಯನ್ನು ಸ್ವೀಕರಿಸುತ್ತಾ, ಪ್ರದೀಪವರ್ಣ=ಅಪ್ರಾಕೃತ ಬಣ್ಣಗಳಿಂದ ಕೂಡಿದ, ವಿಶ್ವಾದಿರೂಪದಿ=ವಿ ಶ್ವಾದಿ ವಿಮಲೋತ್ಕರ್ಷಿಣಿ ಇತ್ಯಾದಿ ತನ್ನ, ಸ್ವಮೂರ್ತಿ ಮಧ್ಯಗ=ಸ್ವರೂಪ ಗಳ ಮಧ್ಯಗತನಾಗಿ, ಮೂಲರೂಪಿ ಶ್ರೀನಾರಾಯಣನು, ತಾ=ತಾನು, ಪೊ ಳೆವ=ಪ್ರಕಾಶಿಸುವನು.

ತಾತ್ಪರ್ಯ:—ಜೀವನ ಸ್ವರೂಪದೇಹದ ಒಳಗೂ ಹೊರಗೂ ಸಹ ಪರಮಾತ್ಮನು ವ್ಯಾಪ್ತನಾಗಿದ್ದು ಜೀವನ ಯೋಗ್ಯತೆಯನ್ನನುಸರಿಸಿ ಅವರ ವರು ಮಾಡಬೇಕಾದ ಕರ್ಮಗಳನ್ನು ತಾನು ಮಾಡಿಮಾಡಿಸಿ ಸ್ಥೂಲದೇಹದಲ್ಲಿ ವ್ಯಕ್ತಿಪಡಿಸಿ, ತಾನು ನಿರ್ಲೇಪನಾಗಿರುವನು. 'ಲಕ್ಷ್ಮೀಧರಾಭ್ಯಾ ಮಾಶ್ಲಿ ಷ್ಟಃ ಸ್ವಮೂರ್ತಿಗಣ ಮಧ್ಯಗಃ | ಮೂರ್ತಯೋಷ್ಟಾವಪಿ ಧ್ಯೇಯಾಶ್ಚಕ್ರ ಶಂಖವರಾಭಯೈಃ | ಯುಕ್ತಾಃ ಪ್ರದೀಪ ವರ್ಣಾಶ್ಚ ಸರ್ವಾಭರಣ ಭೂಷಿ ತಾಃ' ಇತ್ಯಾದಿ ತಂತ್ರಸಾರ ಪ್ರಮಾಣರೀತ್ಯಾ ಈ ಶರೀರದಲ್ಲಿಯೂ, ಸ್ವರೂಪ ದೇಹದಲ್ಲಿಯೂ ಸಹ ವಿಶ್ವ, ತೈಜಸ, ಪ್ರಾಜ್ಞ, ತುರ್ಯ, ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮಯೆಂಬ ೮ ರೂಪಗಳೂ, ಚಕ್ರಶಂಖಗಳನ್ನು ಎರಡು ಕೈಗಳಲ್ಲಿ ಧರಿಸಿಕೊಂಡು ಅಭಯ, ವರದ ಹಸ್ತಗಳೆರಡರಿಂದ ಕೂಡಿ ಸರ್ವಾ ಭರಣ ಭೂಷಿತನಾಗಿ ಪ್ರಜ್ವಲಿಸುವ ಕಾಂತಿಯುಳ್ಳ ರೂಪಗಳಿಂದ ಬಿಂಬ ರೂಪಿಯಾದ ಶ್ರೀಮನ್ನಾರಾಯಣನು ಶ್ರೀದೇವಿ, ಭೂದೇವಿ ಸಮೇತನಾಗಿ ಬ್ರಹ್ಮವಾಯುಗಳಿಂದ ಸೇವಿತನಾಗಿರುವನೆಂದು ಶ್ರೀಮದಾಚಾರ್ಯರ ವಾಕ್ಯ ದಿಂದ ಸಿದ್ಧವಾಗುವದು. ಜೀವನಸ್ವರೂಪದಲ್ಲಿಯೂ ಪರಮಾತ್ಮನ ಪ್ರವೇಶ ವನ್ನು ತಿಳಿದರೇನೆ 'ವ್ಯಾಪಕನು ತಾನಾಗಿ' ಎಂಬದರ ಅರ್ಥ ಪೂರ್ಣವಾ ಗುತ್ತೆ.

**ಗರುಡ ಶೇಷ ಭವಾದಿನಾಮವ**
**ಧರಿಸಿ ಪವನಸ್ವರೂಪದೇಹದಿ**
**ಕರಣನಿಯಾಮಕ ತಾನಾಗಿಪ್ಪ ಹರಿಯೆಂತೆ ||**
**ಸರಸಿಜಾಸನ ವಾಣಿಭಾರತಿ**
**ಭರತನಿಂದೊಡಗೂಡಿ ಲಿಂಗದ**
**ಲಿರುತಿಹರು ನಿಕ್ಕದಿತೆಯರಿಗಿಲ್ಲವಾಸ್ಥಾನ ||೧೨||**

ಪದ್ಯಾರ್ಥ :—ಗುರುಡಶೇಷಭವಾದಿ, ಗರುಡ, ಶೇಷ, ರುದ್ರ ಮೊದಲಾದ, ನಾಮವ=ಹೆಸರನ್ನು, ಧರಿಸಿ, ಪವನ=ವಾಯುದೇವರು, ಸ್ವರೂಪ ದೇಹದಿ=ಜೀವರುಗಳ ಸ್ವರೂಪದೇಹದಲ್ಲಿ, ಕರಣನಿಯಾಮಕ=ಇಂದ್ರಿಯ ಪ್ರೇರಕರಾಗಿ, ಹರಿಯಂತೆ=ಪರಮಾತ್ಮನಂತೆ, ಇಪ್ಪ=ಇರುವರು, ಸರಸಿಜಾಸನ=ಬ್ರಹ್ಮದೇವರು, ವಾಣಿ=ಸರಸ್ವತೀ ದೇವಿಯರು, ಭಾರತೀ ದೇವಿಯರು, ಈ ಮೂವರು ಭರತನಿಂದ=ವಾಯುದೇವರಿಂದ, ಒಡಗೂಡಿ, ಲಿಂಗದಲಿ=ಜೀವನ ಲಿಂಗದೇಹದಲ್ಲಿ, ನಿಯಾಮಕರಾಗಿ ಇರುತಿಹರು, ಮಿಕ್ಕ=ಮಿಗೆಲಾದ, ಅದಿತೇಯರಿಗೆ=ತತ್ವಾಭಿಮಾನಿದೇವತೆಗಳಿಗೆ, ಆಸ್ಥಾನ=ಲಿಂಗಶರೀರದಲ್ಲಿ ಇರುವ ಸ್ಥಿತಿಯು ಇಲ್ಲ.

ತಾತ್ಪರ್ಯ :—ಜೀವನ ಸ್ವರೂಪ ದೇಹದಲ್ಲಿ ಇಂದ್ರಿಯ ಪ್ರೇರಕರಾಗಿ ವಾಯುದೇವರು ಇರುವರೆಂದು ಹೇಳುತ್ತಾರೆ :—ವಾಯುದೇವರು, ಅಹಂಕಾರ ತತ್ವಾದಿಗಳಿಗೆ ಅಭಿಮಾನಿಗಳಾದ ಗರುಡ, ಶೇಷ, ರುದ್ರ, ಆದಿಶಬ್ದದಿಂದ ಇತರ ತತ್ವಾಭಿಮಾನಿ ದೇವತೆಗಳನ್ನು ತೆಗೆದುಕೊಳ್ಳಬೇಕು. ಇಂತಹಾ ತತ್ವಾಭಿಮಾನಿ ದೇವತೆಗಳ ರೂಪವನ್ನು ನಾಮವನ್ನು ತಾವೇ ಸ್ವೀಕರಿಸಿ ಶ್ರೀ ಪರಮಾತ್ಮನು ಹೇಗೆ ಜೀವನ ಸ್ವರೂಪಾಂತಃ ಕರಣಪ್ರೇರಕನೋ ಹಾಗೆ ವಾಯುದೇವರು ಇಂದ್ರಿಯ ಪ್ರೇರಕರಾಗಿರುವರು. ಅದರೆ ಮುಖ್ಯ ಪ್ರೇರಕನು ಪರಮಾತ್ಮನು, ಆ ಪರಮಾತ್ಮನ ವಶದಲ್ಲಿದ್ದು ಜೀವನು ಮಾಡಬೇಕಾದ ಕಾರ್ಯಗಳನ್ನು ರಾಜಕಾರ್ಯವನ್ನು ಭೃತ್ಯರು ನಡಿಸುವಂತೆ ನಡೆಸುತ್ತಾ ಮಿಕ್ಕ ದೇವತೆಗಳನ್ನು ವಶಮಾಡಿಕೊಂಡು ಇರುವರು. ವಾಯುದೇವರಿಗೆ ಸ್ವರೂಪದೇಹದಲ್ಲಿ ಪ್ರವೇಶವಿಲ್ಲವೆಂದು ಕೆಲವರ ಅಭಿಪ್ರಾಯು. ದಾಸರಾಯರು ಈ ಪದ್ಯದಲ್ಲಿ ' ಹರಿಯಂತೆ ಪವನ ' ಎಂಬೀ ವಾಕ್ಯದಿಂದ ವಾಯುದೇವರಿಗೆ ಸ್ವರೂಪ ದೇಹದಲ್ಲಿ ಪ್ರವೇಶ ಉಂಟೆಂಬುದನ್ನು ಸ್ಪಷ್ಟಮಾಡಿರುವರು. ಇದಕ್ಕೆ ಆಧಾರವಾಗಿ ಶ್ರೀಮದಾಚಾರ್ಯರ ವಾಕ್ಯವೂ ಇರುವುದು. ನ್ಯಾಯ ವಿವರಣದಲ್ಲಿ ' ಇಂದ್ರಿಯಸ್ಥೈಃ ಸ್ವರೂಪೈಸ್ತು | ಸುಜ್ಞಾನಂ ಜನಯತ್ಯಸೌ || ಮನಸ್ಥೇನ ವಿಶೇಷೇಣ | ಕಾಮ್ಯೈಃ ಕರ್ಮ ಕೃದೇವಸಃ || ಪೃಥಕ್ ಸ್ಥಿತೇನ ರೂಪೇಣ| ಜೀವಂ ಧಾರಯತಿಪ್ರಭುಃ || ಜೀವಸ್ಥಿತೇನ ರೂಪೇಣ | ವೇದಯತ್ಯಹ ಮಿತ್ಯಪಿ || ಪ್ರಾಣಏಕೋ ವಶೀನಿತ್ಯಂ | ಬಾಹ್ಯಂತಃ ಕರಣೇಶ್ವರಃ || ತಾನ್ಯೇತಾನಿವ ಶಾನ್ಯೇವ|ತಥಾಪಿ ಕೃಪಯೈವಸಃ || ಪೃಥಕ್ ಶಕ್ತೋಪಿ ತದ್ಧೈ

ಸ್ತು । ಸ್ವರೂಪೈಸ್ತದ್ಗ ಕಾರ್ಯಕೃತ್ ॥ ತಸ್ಯೇಶೋ ಭಗವಾನ್ ವಿಷ್ಣುರೇವ ಮೇವ ಯಥಾಕ್ರಮಂ'॥ ಜೀವನಸ್ವರೂಪದೇಹದಲ್ಲಿ ವಾಯುದೇವರು ಇಂದ್ರಿಯಾಭಿಮಾನಿ ದೇವತೆಗಳ ಸ್ವರೂಪವನ್ನು ಧರಿಸಿ ಜೀವನು ಮಾಡಬೇಕಾದ ಕರ್ಮಗಳನ್ನು ಮಾಡುವರು ಮತ್ತು ಮಾಡಿಸುವರು. ಮನಸ್ಸಿನ ಅಭಿಮಾನಿ ರೂಪದಿಂದ ಜೀವರಿಗೆ ಜ್ಞಾನವನ್ನು ಹುಟ್ಟಿಸುವರು. ಭಗವತ್ಸನ್ನಿಧಿಗತವಾದ ಮುಖ್ಯ ಪ್ರಾಣರೂಪದಿಂದ ಜೀವವನ್ನು ಧರಿಸಿ ಇರುವರು. ಜೀವನ ಸ್ವರೂಪ ದೇಹದ ಇಂದ್ರಿಯಗತ ರೂಪದಿಂದ ನಾನು ಎಂಬ ಅಭಿಮಾನವನ್ನು ಹುಟ್ಟಿಸುವರು. ಹೀಗೆ ಪ್ರಾಣದೇವರು ಒಬ್ಬರು—ಎಲ್ಲರನ್ನು ವಶಮಾಡಿಕೊಂಡಿರುವುದರಿಂದ ವಶೀ ಎಂಬ ಹೆಸರನ್ನು ಪಡೆದಿರುವರು. ಸ್ವರೂಪದೇಹದ ಇಂದ್ರಿಯಗಳಿಗೂ, ಹೊರಗಿನ ಲಿಂಗಶರೀರದ ಇಂದ್ರಿಯಗಳಿಗೂ ಸಹ ಅಧಿಪತಿಯಾಗಿರುವರು. ಇಂದ್ರಿಯಗಳೆಲ್ಲವೂ ವಾಯುದೇವರ ವಶದಲ್ಲಿಯೇ ಇರುವವು. ತನುಗೆ ತನ್ಮ ರೂಪದಿಂದಲಿ ಸಕಲೇಂದ್ರಿಯ ಪ್ರೇರಣಾಶಕ್ತಿಯಿದ್ದರೂ ತತ್ವೇಶರಲ್ಲಿ ಕರುಣದಿಂದ ಬೇರೆ ಬೇರೆ ತತ್ವೇಶರ ರೂಪವನ್ನು ಧರಿಸಿ ಕಣ್ಣು ಕಿವಿ ಮೊದಲಾದ ಇಂದ್ರಿಯಗಳಿಂದ ಕಾರ್ಯವನ್ನು ಮಾಡಿಸುವರು. ಇಂತಹ ವಾಯುದೇವರಿಗೆ ಈಶನು ಪರಮಾತ್ಮನೊಬ್ಬನೆ ಎಂದು ನ್ಯಾಯವಿವರಣದ ವಾಕ್ಯಾರ್ಥವು. ಈ ಅರ್ಥವು ತಾಮ್ರಪರ್ಣೀಯ ಟಿಪ್ಪಣಿಯನ್ನನುಸರಿಸಿ ಬರೆಯಲ್ಪಟ್ಟಿರುವುದು. ಇದಲ್ಲದೆ ಭಾಗವತ ತಾತ್ಪರ್ಯ ದೀಪಿಕಾದಲ್ಲಿ 'ಸ್ವರೂಪೇಂದ್ರಿಯ ದೇಹೇಷು ಮಾತರಿಶ್ವಾಭಿ ಧಾನತಃ । ತತ್ತಿ ಲಿಂಗಶರೀರಸ್ಥಃ ಸೂತ್ರನಾಮಾ ಮಹಾಪ್ರಭುಃ ।' ಜೀವನ ಸ್ವರೂಪದೇಹದ ಇಂದ್ರಿಯಗಳಲ್ಲಿ ಮಾತರಿಶ್ವಾ ಎಂಬ ನಾಮದಿಂದಲೂ ಲಿಂಗಶರೀರದಲ್ಲಿ ಸೂತ್ರನೆಂಬ ಹೆಸರಿನಿಂದಲೂ ವಾಸಮಾಡುವರೆಂಬ ಪವಮಾನ ಸಂಹಿತಾ ಪ್ರಮಾಣವನ್ನು ಉದಾಹರಿಸಿರುವರು. ಈ ಆಧಾರಗಳಿಂದ ದಾಸರಾಯರು ಇಲ್ಲಿ ಹೇಳಿರುವ ವಾಕ್ಯ ಪ್ರಮಾಣಗಳಿಂದ ಊರ್ಜಿತವೆಂದು ಕಾಣುವುದು. ಲಿಂಗ ಶರೀರದಲ್ಲಿ ಬ್ರಹ್ಮ, ಸರಸ್ವತೀ, ಭಾರತೀ, ಇವರು, ಭರತ ಎಂದರೆ ವಾಯುದೇವರು. ಅವರಿಂದೊಡಗೂಡಿ ವಾಸಮಾಡುವರು. ಈ ದೇಹದಿ ಇತರ ತತ್ವಾಭಿಮಾನಿ ದೇವತೆಗಳಿಗೆ ಪ್ರವೇಶವಿಲ್ಲ 'ರತತ್ವಾದ್ಭಾತ್ಮಕೇ ವಿಷ್ಣಾವಥವಾಪಿ ಸ್ವಯಂಭೃತೇಃ । ಭರತೋ ವಾಯುರುದ್ದಿಷ್ಟೋ ಭಾರತೀ ತತ್ಸರಸ್ವತೀ' ಎಂಬ ಭಾಗವತ ದಶಮತಾತ್ಪರ್ಯಾನುಸಾರ 'ಭ'ಯೆಂಬ ಪರಮಾತ್ಮನಲ್ಲಿ ರತರಾದು

ದರಿಂದ ಭರತ ಎಂತಲೂ, ಅಥವಾ, ಸಕಲ ಜನರನ್ನು ಭರಣಮಾಡುವುದರಿಂದ ಭರತಯೆಂದು ವಾಯುದೇವರಿಗೆ ಹೆಸರು. ಭರತನ ಸತಿಯಾದುದರಿಂದ ಭಾರತಿಯೆಂದು ಅವರ ಪತ್ನಿಗೆ ಹೆಸರಾಯಿತು. ಈ ಆಧಾರದ ಮೇಲೆ ವಾಯುದೇವರಿಗೆ ದಾಸರಾಯರು ಭರತ ಎಂಬ ಶಬ್ದವನ್ನು ಪ್ರಯೋಗ ಮಾಡಿರುವರು.

**ಜೀವನಕೆ ತುಷದಂತೆ ಲಿಂಗವು**
**ಸಾವಕಾಶದಿ ಪೊಂದಿಸುತ್ತಲು**
**ಪ್ರಾವರಣ ರೂಪದಲಿ ಇಪ್ಪದು ಭಗವದಿಚ್ಛೆಯಲಿ ॥**
**ಕೇವಲ ಜಡಪ್ರಕೃತಿ ಯಿದಕಧಿ**
**ದೇವತೆಯು ಮಹಲಕುಮಿಯಭಿಮಾನಿ ಸಳು**
**ಆವಿರಜಿಯ ಸ್ನಾನಪರಿಯಂತರದಿ ಹತ್ತಿಹದು ॥ ೧೩ ॥**

ಪದ್ಯಾರ್ಥ :—ಜೀವನಕೆ=ಪ್ರಾಣಿಗಳಿಗೆ ಜೀವನ ರೂಪವಾದ ಧಾನ್ಯಗಳ ಮೇಲೆ, ತುಷದಂತೆ=ಹೊಟ್ಟಿನಂತೆ, ಲಿಂಗವು=ಲಿಂಗ ಶರೀರವು, ಸಾವಕಾಶದಿ = ಜೀವನ ಸ್ವರೂಪ ದೇಹವು ಒಳಗಿರುವುದಕ್ಕೆ ಅವಕಾಶವನ್ನು ಕೊಟ್ಟು, ಸುತ್ತಲೂ, ಪ್ರಾವರಣರೂಪದಲಿ=ಅಕ್ಕಿಯು ಭತ್ತವಾಗಿರುವಾಗ ಅದರ ಮೇಲೆ ಹೊಟ್ಟು ಹೇಗೆ ಸುತ್ತಿಕೊಂಡಿರುವುದೊ ಹಾಗೆ ಭಗವದಿಚ್ಛೆಯಲಿ=ಪರಮಾತ್ಮನ ಇಚ್ಛೆಯಿಂದಲೆ, ಇಪ್ಪದು = ಲಿಂಗಶರೀರವು ಇರುವುದು, ಇದಕೆ=ಈಲಿಂಗ ಶರೀರಕ್ಕೆ, ಕೇವಲ ಜಡಪ್ರಕೃತಿಯು=ಜಡಪ್ರಕೃತಿ ರೂಪವಾದ, ಮಹಾಲಕುಮಿ=ಮಹಾ ಲಕ್ಷ್ಮಿಯೇ, ಅಧಿದೇವತೆಯು=ಅಭಿಮಾನಿಯು, ಆವಿರಜಿಯ ಸ್ನಾನಪರಿಯಂತರದಿ=ಆಲಿಂಗ ಶರೀರವು ವಿರಜಾನದಿ ಸ್ನಾನಪರಿಯಂತ, ಹತ್ತಿಹದು=ಜೀವನಸ್ವರೂಪ ದೇಹಕ್ಕೆ ಸೇರಿಕೊಂಡಿರುವುದು.

ತಾತ್ಪರ್ಯ :—ಲಿಂಗಶರೀರದ ಲಕ್ಷಣವನ್ನು ಹೇಳುತ್ತಾರೆ :-ಭತ್ತದ ಕಾಳುಗಳ ಮೇಲೆ ಹೇಗೆ ಹೊಟ್ಟು ಆವರಿಸಿ ಕೊಂಡಿರುವುದೋ ಹಾಗೆ ಭಗವದಿಚ್ಛೆಯಿಂದ ಜೀವನ ಸ್ವರೂಪ ದೇಹದ ಮೇಲೆ ಆವರಣರೂಪವಾಗಿ ಲಿಂಗ ಶರೀರವು, ಸ್ವರೂಪ ದೇಹವಿರುವುದಕ್ಕೆ ಒಳಗೆ ಅವಕಾಶವನ್ನು ಕೊಟ್ಟು ಮೇಲೆ ಸುತ್ತಿಕೊಂಡಿರುವುದು. ಈ ಲಿಂಗಶರೀರಕ್ಕೆ ಅಭಿಮಾನಿಯರಾಗಿ ಮಹಾಲಕ್ಷ್ಮಿದೇವಿಯರೆ, ಜಡಪ್ರಕೃತಿಯ ರೂಪದಿಂದ ಇರುವರು. ಈಲಿಂಗ

ಶರೀರವು ವಿರಜಾನದೀ ಸ್ನಾನಪರಿಯಂತ ಸ್ವರೂಪದೇಹಕ್ಕೆ ಅಂಟಿಕೊಂಡಿರುವುದು. ವಿರಜಾನದೀ ಸ್ನಾನವಾದಕೂಡಲೆ ಲಿಂಗಶರೀರ ಭಂಗವಾಗುವುದು.

**ಆರಧಿಕ ದಶಕಳೆಗಳುಳ್ಳ ಶ**
**ರೀರವನಿರುದ್ಧಗಳ ಮಧ್ಯದಿ**
**ಶೇರಿ ಇಪ್ಪವು ಜೀವ ಪರಮಾಚ್ಛಾದಿಕದ್ವಯವು ||**
**ಬಾರದಂದದಿ ದಾನವರನತಿ**
**ದೂರಗೈಸುತ ಶ್ರೀ ಜನಾರ್ದನ**
**ಮೂರುಗುಣದೊಳಗಿಪ್ಪನೆಂದಿಗು ತ್ರಿವೃತ್ ಎಂದೆನಿಸಿ || ೧೪ ||**

ಪದ್ಯಾರ್ಥ :—ಆರಧಿಕದಶಕಳೆಗಳುಳ್ಳ=೧೬ ಕಳೆಗಳುಳ್ಳ, ಶರೀರ= ಲಿಂಗದೇಹ, ಅನಿರುದ್ಧಗಳ=ಅನಿರುದ್ಧ ಶರೀರ, ಇವೆರಡರ ಮಧ್ಯದಿ=ಮಧ್ಯದಲ್ಲಿ, ಜೀವಪರಮಾಚ್ಛಾದಿಕದ್ವಯವು=ಜೀವಾಚ್ಛಾದಿಕ, ಪರಮಾಚ್ಛಾದಿಕವೆಂಬ ಎರಡು ದುಷ್ಟವಾದ ಪ್ರಕೃತಿಗಳು, ಸೇರಿಯಿಪ್ಪವು=ಸೇರಿಕೊಂಡು ಇರುವವು. ದಾನವರನು, ಬಾರದಂದದಿ=ಜೀವನ ಸಮೀಪಕ್ಕೆ ಬರಗೊಡಿಸದೆ, ಅತಿದೂರಗೈಸುತ=ದೂರದಲ್ಲಿ ಅಟ್ಟುತ್ತಾ, ಶ್ರೀ ಜನಾರ್ದನ=ದುಷ್ಟಜನ ಮರ್ದಕನಾದ ಶ್ರೀ ಹರಿಯು, ತ್ರಿವೃತ್ = ತ್ರಿಗುಣಕಾರ್ಯಪ್ರೇರಕನೆಂದೆನಿಸಿ, ಎಂದಿಗೂ=ಯಾವಾಗಲೂ, ಮೂರುಗುಣದೊಳಗೆ=ಸತ್ವಗುಣ, ರಜೋಗುಣ, ತಮೋಗುಣಗಳೆಂಬ ಮೂರು ಗುಣಯುಕ್ತವಾದ ಲಿಂಗಶರೀರದೊಳಗೆ, ಇಪ್ಪ=ಇರುವನು || ೧೪ ||

ತಾತ್ಪರ್ಯ :— ಮೇಲೆ ಹೇಳಿದ, ಷೋಡಶ ಕಳೆಗಳುಳ್ಳ, ಲಿಂಗಶರೀರಕ್ಕೂ ಅನಿರುದ್ಧ ಶರೀರಕ್ಕೂ ಮಧ್ಯದಲ್ಲಿ ಜೀವಾಚ್ಛಾದಿಕವೆಂತಲೂ ಪರಮಾಚ್ಛಾದಿಕವೆಂತಲೂ "ಅಜೇದ್ವೌ ಪ್ರಕೃತೀ ದುಷ್ಟೇ" ಎಂಬ ಭಾಗವತ ತಾತ್ಪರ್ಯ ವಾಕ್ಯದಂತೆ ದುಷ್ಟವಾದ ಎರಡು ಪ್ರಕೃತಿಗಳು ಸೇರಿಕೊಂಡಿರುವವು. ಲಿಂಗಶರೀರವು ಷೋಡಶ ಕಳೆಗಳುಳ್ಳದ್ದು ಎಂಬ ವಿಷಯವು ೪ನೆಯ ಸಂಧಿ ಎರಡನೆಯ ಪದ್ಯದಲ್ಲಿ ಬಂದಿದೆ, ಅದ್ದರಿಂದ ಇಲ್ಲಿ ಬರೆಯುವ ಅವಶ್ಯಕವಿಲ್ಲ. ಅಕ್ಕಿಯಮೇಲೆ ತವಡು ಒಂದು ಆವರಕ, ಅದಕ್ಕೆ ಹೊಟ್ಟು ಒಂದು ಆವರಕವಾಗಿ ಹೇಗೆ ಭತ್ತವೆಂದಿನಿಸಿಕೊಂಡಿರುವುದೋ ಹಾಗೆ ಜೀವಾಚ್ಛಾದಿಕ ಪರಮಾಚ್ಛಾದಿಕಗಳೆಂಬ ಎರಡು ಅಂಟಿಕೊಂಡಿರುವವು. ಜೀವಾಚ್ಛಾದಿಕವು ಜೀವನಸ್ವರೂಪವೇ ಕಾಣದಂತೆ ಆವರಿಸಿಕೊಂಡಿರುವುದು. ಈ

ವಿಷಯದಲ್ಲಿ ಶ್ರುತಿಗೀತೆಯ ಆಧಾರ :—ರಮಾದೇವಿಯರು ಶ್ರುತಿರೂಪರಾಗಿ ಪರಮಾತ್ಮನನ್ನು ಪ್ರಾರ್ಥಿಸಿರುವರು. ಶ್ರುತಿಗೀತೆಯ ಮೊದಲನೆಯ ಶ್ಲೋಕ " ಜಯಜಯ ಜಹ್ಯಜಾಮಜಿತದೋಷ ಗೃಹೀತಗುಣಾಂ " ಹೇ. ಅಜಿತ | ದೋಷಗೃಹೀತ ಗುಣಾಂ ಅಜಾಂಜಹಿ '' ಯಾವಾಗಲೂ ಯಾರಿಗೂ ಸೋಲದ ಎಲೈ ದೇವ! ಗುಣಗಳನ್ನು ನುಂಗಿ ದೋಷವನ್ನೇ ಪ್ರಕಟಿಸುತ್ತಿರುವ ಅಜಾಂ=ಜೀವಾಚ್ಛಾದಿಕ ಸ್ವರೂಪವಾದ ದುಷ್ಟಪ್ರಕೃತಿಯನ್ನು, ಜಹಿ= ನಾಶಗೊಳಿಸು, ಎಂದು ಪ್ರಾರ್ಥನೆಮಾಡಿರುವರು. ಜೀವಾಚ್ಛಾದಿಕದ ಒಳ ಭಾಗದಲ್ಲಿ ಪರಮಾಚ್ಛಾದಿಕವು ಪರಮಾತ್ಮನ ಸ್ವರೂಪವು ಜೀವನಿಗೆ ಕಾಣ ಗೊಡಿಸದೆ ಪರದೇ (ತೆರೆ) ಯಂತಿರುವುದು. ಅಂತಹಾ ಪರಮಾಚ್ಛಾದಿಕೆ ಯೆಂಬ ದುಷ್ಟ ಪ್ರಕೃತಿಯನ್ನು " ಜಹಿ " ದೂರಮಾಡು ಎಂಬ ಶ್ರುತಿವಾಕ್ಯ ದಿಂದ ಇವೆರಡು ಪ್ರಕೃತಿಗಳು ಇರುವಾಗ ಜೀವನಿಗೆ ತನ್ನ ಸ್ವರೂಪವೇ ಆಗಲೀ ಪರಮಾತ್ಮನ ಸ್ವರೂಪವೇ ಆಗಲಿ ಕಾಣುವುದಿಲ್ಲ. ಜೀವಾಚ್ಛಾದಿಕವು ನಾಶ ವಾದರೆ ಜೀವನಸ್ವರೂಪವು ಕಾಣುವುದು. ಜೀವನಿಗೂ ಪರಮಾತ್ಮನಿಗೂ ಮಧ್ಯ ತೆರೆಹಾಕಿದಂತೆ ಪರಮಾಚ್ಛಾದಿಕವಿರುವುದು. ಆ ತೆರೆಯೂ ಹೋದರೆ ಪರಮಾತ್ಮನ ಸ್ವರೂಪವು ಕಾಣಬರುವದು. ಇದೇ ವಿಷಯವನ್ನೇ ವಿಷ್ಣು ರಹಸ್ಯದಲ್ಲಿಯೂ ಹೇಳಿರುವರು. ತ್ರಿಗುಣಾತ್ಮಕವಾದ ಲಿಂಗಶರೀರದಲ್ಲಿ ಪರ ಮಾತ್ಮನಿದ್ದು ದೈತ್ಯರ ಪ್ರವೇಶವಿಲ್ಲದಂತೆ ಜೀವರನ್ನು ಪಾಲಿಸುತ್ತಿರುವನು || ೧೪ ||

> **ರುದ್ರಮೊದಲಾದಮರರಿಗನಿ**
> **ರುದ್ಧ ದೇಹವೆ ಮನೆಯೆನಿಸುವುದು**
> **ಇದ್ದು ಕೆಲಸವಮಾಡರಲ್ಲಿಂದಿತ್ತ ಸ್ಥೂಲದಲಿ ||**
> **ಕ್ರುದ್ಧ ಖಳ ದಿವಿಜರು ಪರಸ್ಪರ**
> **ಸ್ಪರ್ಧೆಯಿಂದಲಿ ದ್ವಂದ್ವ ಕರ್ಮ ಸ**
> **ಮೃದ್ಧಿಗಳನಾಚರಿಸುವರು ಪ್ರಾಣೇಶನಾಜ್ಞೆಯಲಿ || ೧೫ ||**

ಪದ್ಯಾರ್ಥ :—ರುದ್ರ ಮೊದಲಾದ, ಅಮರರಿಗೆ=ದೇವತೆಗಳಿಗೆ, ಅನಿ ರುದ್ಧ ದೇಹವೆ, ಮನೆಯೆನಿಸುವುದು=ಆವಾಸಸ್ಥಾನವಾಗಿರುವುದು. ಇದ್ದು =ಆ ಅನಿರುದ್ಧ ದೇಹದಲ್ಲಿದ್ಧರೂ, ಕೆಲಸವಮಾಡರು=ಚಕ್ಷು ಶ್ರೋತ್ರಾದಿ ಗಳಿಂದ ಮಾಡಬೇಕಾದ ನೋಡುವುದು, ಕೇಳುವುದು ಮೊದಲಾದ ಕೆಲಸ

ವನ್ನು ಮಾಡರು. ಅಲ್ಲಿಂದಿತ್ತ=ಅವಕ್ಕೀಚೆ, ಸ್ಥೂಲದಲಿ=ಸ್ಥೂಲದೇಹದಲ್ಲಿ, ಕ್ರುದ್ಧ=ಕ್ರೋಧವಶರಾದ, ಖಳ=ದೈತ್ಯರು, ದಿವಿಜರು=ದೇವತೆಗಳು, ಪರಸ್ಪರ=ಒಬ್ಬರಿಗೊಬ್ಬರು, ಸ್ಪರ್ಧೆಯಿಂದಲಿ, ದ್ವಂದ್ವಕರ್ಮ ಸಮೃದ್ಧಿಗಳನ್ನು=ಬಹಳವಾದ ಪುಣ್ಯಪಾಪ ಕರ್ಮಗಳನ್ನು, ಪ್ರಾಣೇಶನ=ಮುಖ್ಯ ಪ್ರಾಣದೇವರ, ಆಜ್ಞೆಯಲಿ=ಅಪ್ಪಣೆಯಿಂದ ಆಚರಿಸುವರು || ೧೫ ||

ತಾತ್ಪರ್ಯ :— ರುದ್ರ ಮೊದಲಾದ ದೇವತೆಗಳಿಗೆ ಲಿಂಗಶರೀರದಲ್ಲಿ ಪ್ರವೇಶವಿಲ್ಲವೆಂದು ಮೇಲಿನ ಪದ್ಯದಲ್ಲಿ ಹೇಳಿದರು. ಹಾಗಾದರೆ ಅವರ ಪ್ರವೇಶ ಎಲ್ಲಿಯವರೆಗೆ ಅಂದರೆ ಅದನ್ನು ಹೇಳುತ್ತಾರೆ:—ರುದ್ರ ಮೊದಲಾದ ತತ್ವೇಶರು ಅನಿರುದ್ಧ ದೇಹದಲ್ಲಿ ವಾಸವಾಗಿದ್ದು ಇಂದ್ರಿಯ ವ್ಯಾಪಾರಗಳನ್ನು ಮಾಡದೆ ಇರುವರು. ಏಕೆಂದರೆ ಆ ಶರೀರದಲ್ಲಿ ಇಂದ್ರಿಯ ವ್ಯಾಪಾರಗಳು ಇರುವುದಿಲ್ಲ. ಅದರಿಂದೀಚೆಗೆ ಇರುವ ಸ್ಥೂಲದೇಹದಲ್ಲಿ ತತ್ವಾಭಿಮಾನಿಗಳಾದ ದೇವತೆಗಳು ದೈತ್ಯರೂ ಸಹ ಇರುವರು. ಪರಸ್ಪರ ಈ ಎರಡು ಗುಣಗಳು ದ್ವೇಷದಿಂದ ಪಾಪಕರ್ಮಗಳನ್ನು ದೈತ್ಯರು, ಪುಣ್ಯಕರ್ಮಗಳನ್ನು ದೇವತೆಗಳು, ಹೀಗೆ ಪ್ರಾಣದೇವರ ಆಜ್ಞಾಧಾರಕರಾಗಿ ಸ್ಥೂಲದೇಹದಿಂದ ಮಾಡಿಸುತ್ತಿರುವರು || ೧೫ ||

**ಮಹಿಯೊಳಗೆ ಸುಕ್ಷೇತ್ರ ತೀರ್ಥದಿ**
**ತುಹಿನವರ್ಷ ವಸಂತಕಾಲದಿ**
**ದಹಿಕ ದೇಶಿಕ ಕಾಲಕತ್ರಯ ಧರ್ಮಕರ್ಮಗಳ ||**
**ದ್ರುಹಿಣ ಮೊದಲಾದಮರರೆಲ್ಲರು**
**ವಹಿಸಿ ಗುಣಗಳನನುಸರಿಸಿ ಸಂ**
**ನಿಹಿತರಾಗಿದ್ದೆಲ್ಲರೊಳು ಮಾಡುವರು ವ್ಯಾಪಾರ || ೧೬ ||**

ಪದ್ಯಾರ್ಥ :— ಮಹಿಯೊಳಗೆ = ಭೂಮಿಯ ಭರತಖಂಡದಲ್ಲಿ, ಸುಕ್ಷೇತ್ರ ತೀರ್ಥದಿ=ಅಯೋಧ್ಯಾ, ಮಧುರಾದಿ ಕ್ಷೇತ್ರಗಳು, ಗಂಗಾ ಮೊದಲಾದ ತೀರ್ಥಗಳು ಇವುಗಳಲ್ಲಿ, ತುಹಿನ=ಹಿಮಕಾಲವಾದ, ಧನುರ್ಮಾಸ-ಮಾಘಮಾಸ ಮೊದಲಾದ ಹಿಮಕಾಲದಲ್ಲಿಯೂ, ವರ್ಷ=ಉಪಲಕ್ಷಣಯಾ ವರ್ಷಋತು ಶರದೃತೂ ಕೂಡಿ ವರ್ಷಾಕಾಲವಾದ ಚಾತುರ್ಮಾಸದಲ್ಲಿಯೂ, ದಹಿಕ=ದೇಹಸಂಬಂಧವಾದ, ದೇಶಿಕ=ದೇಶಸಂಬಂಧವಾದುದು, ಕಾಲಕ=ಕಾಲಸಂಬಂಧವಾದುದು, ಹೀಗೆ, ತ್ರಯ=ಮೂರು ವಿಧವಾದ,

ಧರ್ಮಕರ್ಮಗಳ=ಧರ್ಮ=ದಾನಾದಿಗಳು, ಕರ್ಮ=ಸಂಧ್ಯಾವಂದನಾದಿ ನಿತ್ಯನೈಮಿತ್ತಿಕ ಕರ್ಮಗಳು ಇವುಗಳನ್ನು, ದ್ರುಹಿಣಮೊದಲಾದ = ಬ್ರಹ್ಮ ದೇವರು ಮೊದಲಾದ, ಅಮರರೆಲ್ಲರು=ತತ್ವಾಭಿಮಾನಿದೇವತೆಗಳೆಲ್ಲರು, ವಹಿಸಿ =ಜೀವನು ಮಾಡಬೇಕಾದುದನ್ನು ತಾವೇ ವಹಿಸಿ, ಗುಣಗಳನು=ಸತ್ವಾದಿ ಗುಣಗಳನ್ನು, ಅನುಸರಿಸಿ, ಎಲ್ಲರೊಳು, ಸನ್ನಿಹಿತರಾಗಿದ್ದು, ವ್ಯಾಪಾರ=ಕೃತ್ಯ ಗಳನ್ನು, ಮಾಡುವರು.

ತಾತ್ಪರ್ಯ:—ಮೇಲಿನ ಪದ್ಯದಲ್ಲಿ ದೇವತೆಗಳು ಪುಣ್ಯಕರ್ಮಗಳನ್ನೂ ದೈತ್ಯರು ಪಾಪಕರ್ಮಗಳನ್ನೂ ಮಾಡಿಸುವರೆಂದು ಹೇಳಿದರು. ಅದರಲ್ಲಿ ದೇವತೆಗಳು ಮಾಡಿಸುವ ಪುಣ್ಯಕರ್ಮಗಳನ್ನು ಪೆಸರಿಸುತ್ತಾರೆ:— ಈ ಭರತ ಖಂಡದಲ್ಲಿರುವ ಶ್ರೀರಂಗ, ತಿರುಪತಿ, ಪಂಢರೀಪುರ, ಅಯೋಧ್ಯಾ ಮಥುರೆ ಮೊದಲಾದ ಪುಣ್ಯಕ್ಷೇತ್ರಗಳು, ಗಂಗಾ ಗೋದಾವರಿ ಮೊದಲಾದ ತೀರ್ಥ ಗಳು, ಇವುಗಳಲ್ಲಿ ಮಾಡಬೇಕಾದ, ದೇಹಸಂಬಂಧವಾದ, ಮುಂಡನಾದಿ ಗಳು, ದೇಶಸಂಬಂಧವಾದ ತೀರ್ಥಶ್ರಾದ್ಧಾದಿಗಳು ಇವುಗಳನ್ನು ಚಾತು ರ್ಮಾಸ, ಮಾಘಾದಿ ಮಾಸಗಳು, ಚೈತ್ರ ವೈಶಾಖಾದಿ ವಸಂತಕಾಲ, ಇಂತಹ ಕಾಲಸಂಬಂಧ ಸ್ನಾನದಾನಾದಿಗಳು, ತ್ರಿವಿಧವಾದ ಧರ್ಮ, ಅಂದರೆ ಕ್ಷೇತ್ರಗಳಲ್ಲಿ ಛತ್ರ ಕಟ್ಟಿಸುವುದು, ಕೆರೆ ಕಟ್ಟಿಸುವುದು, ಅನ್ನ ಹಾಕಿಸು ವುದು, ಪುರಾಣಶ್ರವಣ ಇತ್ಯಾದಿಗಳಿಗೆ ಹೆಸರು. ಇಂತಹಾ ಧರ್ಮಗಳನ್ನು ಕರ್ಮಗಳಲ್ಲಿ ನಿತ್ಯ, ನೈಮಿತ್ತಕವೆಂದು ಎರಡು ವಿಧ ಸಂಧ್ಯಾವಂದನ ಶ್ರಾದ್ಧಾದಿಗಳು, ನಿತ್ಯಕರ್ಮಗಳು, ವಿಷ್ಣುಪಂಚಕ ಮೊದಲಾದವು ನೈಮಿತ್ತಿಕ ಕರ್ಮ. ಇಂತಹ ಧರ್ಮ ಕರ್ಮಗಳನ್ನು, ಬ್ರಹ್ಮಾದಿ ತತ್ವೇಶರೆಲ್ಲರೂ ಕೂಡಿ ಜೀವನ ಭಾರವನ್ನು ತಾವೇ ವಹಿಸಿ, ಅವರವರ ಯೋಗ್ಯತೆಯನ್ನನುಸರಿಸಿ, ಅವರವರಲ್ಲಿದ್ದು ಮಾಡಿಸುವರು ‖ ೧೬ ‖

**ಕೇಶಸಾಶಿರವಿಧ ವಿಭಾಗವ**
**ಗೈಸಲೆನಿತನಿತಿಹ ಸುಷುಮ್ನವು**
**ಆಶಿರಾಂತದಿ ವ್ಯಾಪಿಸಿಹುದೀ ದೇಹ ಮಧ್ಯದಲಿ ‖**
**ಆ ಸುಷುಮ್ನಕೆ ವಜ್ರಕಾರ್ಯಪ್ರ**
**ಕಾಶಿನಿ ವೈದ್ಯುತಿಗಳಿಹವು ಪ್ರ**
**ದೇಶದಲಿ ಪಶ್ಚಿಮಕೆ ಉತ್ತರಪೂರ್ವ ದಕ್ಷಿಣಕೆ** ‖ ೧೭ ‖

ಪದ್ಯಾರ್ಥ ;—ಕೇಶ=ಕೂದಲನ್ನು, ಸಾಸಿರವಿಧ=ಸಹಸ್ರಭಾಗವಾಗಿ, ವಿಭಾಗವ, ಗೈಸಲು=ಮಾಡಲು, ಯೆನಿತು=ಎಷ್ಟಿರುವುದೋ, ಅನಿತಿಹ=ಅಷ್ಟುಮಾತ್ರವಾಗಿ, ಸುಷುಮ್ನಾನಾಡಿಯು, ಆಶಿರಾಂತದಿ=ಮೂಲಸ್ಥಾನ ಮೊದಲು ತಲೆಯುವರಿಗೂ, ಈದೇಹ ಮಧ್ಯದಲಿ, ವ್ಯಾಪಿಸಿಹದು=ವ್ಯಾಪಿಸಿಕೊಂಡಿರುವುದು, ಆಸುಷುಮ್ನಕೆ=ಆ ಸುಷುಮ್ನಾನಾಡಿಗೆ, ವಜ್ರಿಕಾ, ಆರ್ಯ ಪ್ರಕಾಶಿನೀ, ವೈದ್ಯುತಿಗಳು = ಹೀಗೆ ೪ ಹೆಸರುಗಳು, ಪಶ್ಚಿಮಕೆ, ಉತ್ತರ, ಪೂರ್ವ, ದಕ್ಷಿಣಕೆ, ಪ್ರದೇಶದಲಿ=ಇಂತೀ ೪ ಪ್ರದೇಶದಲ್ಲಿ ಇಹವು=ಇರುವವು.

ತಾತ್ಪರ್ಯ :—ದೇಹ ಮಧ್ಯದಲ್ಲಿರುವ ಸುಷುಮ್ನಾನಾಡಿಯ ಲಕ್ಷಣವನ್ನು ಹೇಳುತ್ತಾರೆ :—ಒಂದು ಕೂದಲನ್ನು ಸಾವಿರಭಾಗವಾಗಿ ಸೀಳಿದರೆ ಎಷ್ಟಿರುವುದೋ ಅಷ್ಟು ಸಣ್ಣದಾಗಿ ವೃಷಣದ ಮೂಲಸ್ಥಾನ ಮೊದಲು ತಲೆಯ ಬ್ರಹ್ಮರಂಧ್ರದವರಿವಿಗೂ ಮಧ್ಯದಲ್ಲಿ ಸುಷುಮ್ನಾ ನಾಡಿ ಇರುವುದು. ಈ ನಾಡಿಯು ೫ ಪ್ರಭೇದಗಳಿಂದ ಕೂಡಿರುವುದು. ಮತ್ತು ಅದಕ್ಕೆ ೫ ಹೆಸರುಗಳುಂಟು. ಮಧ್ಯದಲ್ಲಿ ಸುಷುಮ್ನಾ ಆದರ ಪಶ್ಚಿಮಭಾಗಕ್ಕೆ ಅಂದರೆ ಹಿಂಭಾಗಕ್ಕೆವಜ್ರಕಾಯೆಂದು ಹೆಸರು. ಪೂರ್ವಭಾಗವೆಂದರೆ ಸಷುಮ್ನಾಕ್ಕೆ ಮುಂಭಾಗಕ್ಕೆ ಪ್ರಕಾಶಿನೀ ಎಂದು ಹೆಸರು. ದಕ್ಷಿಣಕ್ಕೆ (ಬಲಗಡೆಗೆ) ವೈದ್ಯುತ ಎಂದು ಹೆಸರು. ಈ ವಿಷಯವನ್ನು ೮ನೆಯ ಸಂಧಿಯ ೩ನೆಯ ಪದ್ಯದ ವ್ಯಾಖ್ಯಾನದಲ್ಲಿ ವಿವರಮಾಡಿರುವುದು. ಈ ಒಂದೇ ಸುಷುಮ್ನಾನಾಡಿಯೇ ೫ ಭಾಗದಲ್ಲಿ ೫ ಹೆಸರಿನಿಂದ ಕೂಡಿರುವುದೆಂದು ತಿಳಿಯಬೇಕು.

**ಅನಳಿನಭವ ನಾಡಿಯೊಳಗೆ ತ್ರಿ**
**ಕೋಣಚಕ್ರವು ಇಪ್ಪದಲ್ಲಿ ಕೃ**
**ಶಾನುಮಂಡಲ ಮಧ್ಯಗನು ಸಂಕರ್ಷಣಾಹ್ವಯನು ॥**
**ಹೀನ ಪಾಪಾತ್ಮಕ ಪುರುಷನ**
**ಹಾನಿಗೈಸುತ ದಿನದಿನದಿ ವಿ**
**ಜ್ಞಾನಮಯ ಶ್ರೀವಾಸುದೇವನು ಯ್ಯೈದಿಸುವ ಕರುಣೀ ॥೧೮॥**

ಪದ್ಯಾರ್ಥ :— ಅನಳಿನ ಭವನಾಡಿಯೊಳಗೆ = ಸುಷುಮ್ನಾ ಎಂದು ಪ್ರಸಿದ್ಧಿಹೊಂದಿದ ಬ್ರಹ್ಮನಾಡಿಯ ಒಳಗೆ (ಹೃದಯಮಧ್ಯದಲ್ಲಿ) ತ್ರಿಕೋಣ ಚಕ್ರವು ಇಪ್ಪದು=ಇರುವುದು, ಅಲ್ಲಿ, ಕೃಶಾನು ಮಂಡಲ ಮಧ್ಯಗನು=ಅಗಿ

ಮಂಡಲ ಮಧ್ಯಗತನಾಗಿ, ಸಂಕರ್ಷಣಾಹ್ವಯನು=ಸಂಕರ್ಷಣ ನಾಮಕ ಪರಮಾತ್ಮನು, ಹೀನ=ನೀಚನಾದ, ಪಾಪಾತ್ಮಕ ಪುರುಷನ=ಗುರು ಮಂತ್ರದಲ್ಲಿ ಹೇಳಿದ ಪ್ರಕಾರ 'ಬ್ರಹ್ಮಹತ್ಯ ಶಿರಸ್ಕಂಚ' ಎಂಬೀ ಲಕ್ಷಣದಿಂದ ಕೂಡಿದ, ಪಾಪಸ್ವರೂಪನಾದ ಪಾಪಪುರುಷನನ್ನು, ದಿನದಿನದಿ=ಪ್ರತಿದಿವಸ, ಹಾನಿಗೈಸುತ=ಭಸ್ಮಮಾಡುತ್ತಾ, ಕರುಣೀ=ಕರುಣಾಳುವಾದ ಶ್ರೀಹರಿಯು ವಾಸುದೇವನು=ವಾಸುದೇವ ರೂಪದಿಂದ, ಜ್ಞಾನಮಯ=ಪವಿತ್ರಸ್ವರೂಪ ಉಳ್ಳವನನ್ನಾಗಿ, ಯೈದಿಸುವ=ಮಾಡಿಸುವನು.

ತಾತ್ಪರ್ಯ :—ಇದರರ್ಥವನ್ನು ಅನೆಯ ಸಂಧಿವ್ಯಾಖ್ಯಾನವಲ್ಲಿ ಸ್ಪಷ್ಟ ಮಾಡಿರುತ್ತೆ. "ತ್ರಿಕೋಣಮಂಡಲ ಮಧ್ಯಸ್ಥೋ ರಕ್ತವರ್ಣೋ ಅಗ್ನಿಬೀಜ ವಾಚ್ಯಃ ಅಗ್ನ್ಯಂತರ್ಯಾಮಿ ಸಂಕರ್ಷಣೋ ಭಗವಾನ್ ಮಚ್ಛರೀರಸ್ಥಂ ಪಾಪಪುರುಷಂ ಅಗ್ನಿನಾ ನಿರ್ದಹತು" ಎಂಬ ಮಂತ್ರಾರ್ಥವನ್ನೇ ಇಲ್ಲಿ ಹೇಳಿರುತ್ತದೆ. ಮಧ್ಯಗತ ಸುಷುಮ್ನಾ ನಾಡಿಗೆ ಬ್ರಹ್ಮನಾಡಿಯೆಂದು ಹೆಸರು. ಆ ನಾಡಿಗೆ ಸೇರಿ ಹೃದಯಾಕಾಶದಲ್ಲಿ ತ್ರಿಕೋಣಮಂಡಲ ಮಧ್ಯದಲ್ಲಿ ಅಗ್ನಿ ಶಬ್ದವಾಚ್ಯನಾದ ಅಗ್ನ್ಯಂತರ್ಗತ ಸಂಕರ್ಷಣನು ಪ್ರತಿದಿವಸದಲ್ಲಿಯೂ ಪಾಪ ಪುರುಷನನ್ನು ದಹಿಸುವನು. ಅವನು ಬ್ರಹ್ಮನ ವರದಿಂದ ರಾತ್ರಿ ಪುನಃ ಬದುಕುವನು. ಮಂತ್ರಜಾಪಕರ ಹೃದಯದಲ್ಲಿದ್ದು ಪಾಪಿಯನ್ನು ಪುನಃ ದಹಿಸುವನು. ತದನಂತರ ಶಿರೋಗತ ವಾಸುದೇವ ಮೂರ್ತಿಯು ದೇಹ ವನ್ನು ಪವಿತ್ರವನ್ನಾಗಿ ಮಾಡಿ ಜ್ಞಾನಪ್ರದನಾಗುವನು || ೧೮ ||

**ಮಧ್ಯನಾಡಿಯ ಮಧ್ಯದಲಿ ಹೃ**
**ತ್ಪದ್ಮ ಮೂಲದಿ ಮೂಲಪತಿಪದ**
**ಪದ್ಮ ಮೂಲದಲಿಪ್ಪ ಪವನನಪಾದಮೂಲದಲಿ |**
**ಪೊಂದಿಕೊಂಡಿಹ ಜೀವಲಿಂಗನಿ**
**ರುದ್ಧದೇಹ ವಿಶಿಷ್ಟನಾಗಿಕ**
**ಪರ್ದಿಮೊದಲಾದ ಮರರೆಲ್ಲರು ಕಾದುಕೊಂಡಿಹರು || ೧೯ ||**

ಪದಾರ್ಥ :—ಮಧ್ಯನಾಡಿಯ ಮಧ್ಯದಲಿ=ಸುಷುಮ್ನಾ ನಾಡಿಯ ಮಧ್ಯದಲ್ಲಿರುವ, ಹೃತ್ಪದ್ಮಮೂಲದಲಿ = ಹೃದಯಕಮಲದ ಬುಡದ ಭಾಗದ ಕರ್ಣಿಕೆಯಲ್ಲಿರುವ, ಮೂಲಪತಿ=ಮೂಲೇಶನಾಮಕ ಪರಮಾತ್ಮನ, ಪದಪದ್ಮ ಮೂಲದಲಿ=ಪಾದಕಮಲದ ಮೂಲದಲ್ಲಿ, ಇಪ್ಪ=ಇರುವ, ಪವನನ=ವಾ

ಯುದೇವರ, ಪಾದಮೂಲದಲಿ=ಪಾದಾಂಗುಷ್ಠಾಗ್ರದಲ್ಲಿ, ಜೀವ=ಜೀವನು, ಲಿಂಗನಿರುದ್ಧ ದೇಹವಿಶಿಷ್ಟನಾಗಿ=ಲಿಂಗದೇಹ, ಅನಿರುದ್ಧದೇಹ ಇವುಗಳಿಂದ ಸಹಿತನಾಗಿ, ಪೊಂದಿಕೊಂಡಿಹ = ಸೇರಿಕೊಂಡಿರುವನು, ಕಪರ್ದಿಮೊದಲಾದ = ರುದ್ರದೇವರು ಮೊದಲಾದ, ಅಮರರೆಲ್ಲರು = ದೇವತೆಗಳೆಲ್ಲರು, ಕಾದುಕೊಂಡಿಹರು=ಕಮಲದ ೮ ದಳಗಳಲ್ಲಿ ವಾಸಮಾಡುತ್ತಿರುವರು.

ತಾತ್ಪರ್ಯ :—ಜೀವನಿರುವ ಸ್ಥಾನವನ್ನು ಹೇಳುತ್ತಾರೆ :—ದೇಹದ ಮಧ್ಯದಲ್ಲಿರುವ ಸುಷುಮ್ನಾನಾಡಿಗೆ ಸೇರಿಕೊಂಡು ೮ ದಳಗಳುಳ್ಳ ಕಮಲ ಒಂದಿರುವುದು. ಆ ಕಮಲದಲ್ಲಿ ಅಗ್ರೇಶ, ಮೂಲೇಶ, ಪ್ರಾದೇಶ ಎಂಬ ಮೂರು ಮೂರ್ತಿಗಳು, ಕಮಲದ ಮೇಲಿನ ದಳದಲ್ಲಿಯೂ, ಬುಡದ ದಳದಲ್ಲಿಯೂ, ಮಧ್ಯದಲ್ಲಿಯೂ ಇರುವರು. ಅವುಗಳಲ್ಲಿ ಕೆಳಗಿನ ದಳದಲ್ಲಿ ಮೂಲೇಶ ನಾಮಕ ಪರಮಾತ್ಮನ ಪಾದಮೂಲದಲ್ಲಿ ಪ್ರಾಣದೇವರು ಇರುವರು. ಆ ಪ್ರಾಣದೇವರು ಮೇಲೆ ಹೇಳಿದ ಮೂರು ಮೂರ್ತಿಗಳಿಗೂ, ಅಭಿಮುಖರಾಗಿ ಕೈಮುಗಿದುಕೊಂಡು ನಿಂತಿರುವರು. ಅವರ ಪಾದವನ್ನಾಶ್ರಯಿಸಿಕೊಂಡು, ಲಿಂಗ ಶರೀರ, ಅನಿರುದ್ಧ ಶರೀರಗಳಿಂದ ಕೂಡಿದ ಜೀವನಿರುವನು. ರುದ್ರದೇವರು ಮೊದಲಾದ ಅಷ್ಟದಿಕ್ ಪಾಲಕರು ೮ ದಳಗಳಲ್ಲಿ ಭಗವತ್ಸೇವಾಪರರಾಗಿ ಕಾದುಕೊಂಡಿರುವರು. ಇದಕ್ಕೆ ಅಧಾರ ವಾಕ್ಯಗಳು :—" ವಿಷ್ಣುರ್ಮೂಲೇಶ ಇತಿತು ವಿಜ್ಞಾನಾತ್ಮೇತಿ ತಂವಿದುಃ | ತಸ್ಮಾದಗ್ರೇಶಮೂಲೇಶ ಪ್ರಾದೇಶ ಇತಿನಾಮಕಾಃ | ಮೂರ್ತಯಃ ಸಂತಿಹೃತ್ಪದ್ಮೇತ್ರಯ ಆನಂದ ರೂಪಿಣಃ | ವರ್ತತೇ ಮೂಲೇಶಪಾದ ಸನ್ನಿಧೌ. ಪ್ರಾಣನಾಮಕಃ ಬದ್ಧಾಂಜಲಿಃ ಸ್ವರೂಪಾಣಾಂ ತ್ರಯಾಣಾಂ ಪರತಃ ಸದಾ | ಪೂರ್ವಾಭಿಮುಖತಶ್ಚೈವ ವರ್ತತೆ ಜೀವಏವತು | ಮುಖ್ಯಪ್ರಾಣ ಪದಾಂಭೋಜ ಸನ್ನಿಧೌ ತದ್ವದೇವಹಿ " ಎಂಬ ಮುಕ್ತಿ ತತ್ವವಾಕ್ಯಗಳಲ್ಲಿ ಉಕ್ತವಾದ ಅರ್ಥವನ್ನೇ ದಾಸರಾಯರು ಇಲ್ಲಿ ಹೇಳಿರುವರು. || ೧೯ ||

**ನಾಳಮಧ್ಯದಲ್ಲಿಪ್ಪ ಹೃತ್ಕೀ**
**ಲಾಲಜದೊಳಿಪ್ಪಷ್ಟದಳದಿ ಕು**
**ಲಾಲಚಕ್ರದ ತೆರದಿಚರಿಸುತ ಹಂಸನಾಮಕನೂ ||**
**ಕಾಲಕಾಲಗಳಲ್ಲಿ ಯೋಚ್ಚಿಸಿ**

**ಪಾಲಕರ ಕೈಸೇವೆ ಕೊಳ್ಳುತಕೃ**
**ಪಾಳುಯವರಭಿಲಾಷೆಗಳ ಪೂರೈಸಿ ಕೊಡುತಿಪ್ಪ ॥ ೨೦ ॥**

ಪದ್ಯಾರ್ಥ :—ನಾಳಮಧ್ಯದಲಿಪ್ಪ=ಸುಷುಮ್ನಾನಾಡಿಯ ಮಧ್ಯದಲ್ಲಿ ಸೇರಿಕೊಂಡಿರುವ, ಹೃತ್ಕೀಲಾಲಜದೊಳು = ಹೃದಯ ಕಮಲದೊಳಗೆ, ಇಪ್ಪ=ಇರುವ, ಅಷ್ಟದಳದಿ=೮ ದಳಗಳಲ್ಲಿ, ಕುಲಾಲ ಚಕ್ರದತೆರದಿ=ಕುಂಬಾರನ ಚಕ್ರದಂತೆ, ಚರಿಸುತ=ತಿರುಗುತ್ತಾ, ಹಂಸನಾಮಕನು=ಹಂಸನಾಮಕ ಪರಮಾತ್ಮನು, ಕಾಲಕಾಲಗಳಲ್ಲಿ, ಯಿಣ್‌ದೆಶಿಪಾಲಕರ=೮ ದಿಕ್ಪಾಲಕರ, ಕೈಸೇವೆ=ಸೇವೆಯನ್ನು ಕೊಳ್ಳುತ=ಸ್ವೀಕರಿಸುತ, ಕೃಪಾಳು=ಕರುಣಾಳುವಾದ ಶ್ರೀಪರಮಾತ್ಮನು ಅವರಭಿಲಾಷೆಗಳ=ಜೀವರ ಯೋಗ್ಯತಾನುಸಾರ ಅವರವರ ಅಭಿಲಾಷೆಯನ್ನು ಪೂರೈಸಿಕೊಡುತಿಪ್ಪ ॥ ೨೦ ॥

ತಾತ್ಪರ್ಯ ;—ಪೂರ್ವಪದ್ಯದಲ್ಲಿ ಹೃದಯಕಮಲದ ೮ ದಳಗಳಲ್ಲಿ ದಿಕ್‌ಪಾಲಕರು ಇರುವರೆಂದು ಹೇಳಿದರು. ಮುಂದಿನ ೫ ಪದ್ಯಗಳಿಂದ ಹಂಸನಾಮಕ ಪರಮಾತ್ಮನು ಹೃತ್ಕಮಲದ ೮ ದಳಗಳಲ್ಲಿ ಸುತ್ತುತ್ತಾ ಜೀವರ ಪುಣ್ಯಪಾಪಾದಿ ಕರ್ಮಗಳ ಪ್ರೇರಣೆ ಮಾಡುವನೆಂದು ಹೇಳುತ್ತಾರೆ-ಸುಷುಮ್ನಾ ನಾಡಿಯ ಮಧ್ಯಪ್ರದೇಶದಲ್ಲಿ, ಹೃದಯ ಕಮಲದ ೮ ದಳಗಳಲ್ಲಿ ಕುಂಬಾರನ ಚಕ್ರವು ತಿರಗುವಂತೆ ಹಂಸನಾಮಕ ಪರಮಾತ್ಮನು ಸುತ್ತುತ್ತಾ ಅಷ್ಟದಿಕ್ ಪಾಲಕರಿಂದ ಸೇವೆಯನ್ನು ಸ್ವೀಕರಿಸಿಕೊಂಡು ಕರುಣಾಳುವಾದ ಶ್ರೀ ಹರಿಯು ಅವರವರ ಮನೋಭೀಷ್ಟಗಳನ್ನು ಪೂರೈಸುತ್ತಿರುವನು.

**ವಾಸ ವಾನುಜ ರೇಣುಕಾತ್ಮಜ**
**ದಾಶರಥಿ ವೃಜನಾರ್ದನ ಮಲಜ**
**ಲಾಶಯಾಲಯ ಹಯವದನ ಶ್ರೀಕಪಿಲ ನರಸಿಂಹ ॥**
**ಈ ಸುರೂಪದ ಲವರವರಗಂ**
**ತೋಷಬಡಿಸುತ ನಿತ್ಯಸುಖಮಯ**
**ವಾಸವಾಗಿಹ ಹೃತ್ಕಮಲದೊಳು ಬಿಂಬನೆಂದೆನಿಸಿ ॥ ೨೧ ॥**

ಪದ್ಯಾರ್ಥ :-ವಾಸವಾನುಜ=ಇಂದ್ರದೇವರ ತಮ್ಮನಾದ ಉಪೇಂದ್ರದೇವರು, ರೇಣುಕಾತ್ಮಜ = ಪರಶುರಾಮ, ದಾಶರಥಿ = ದಶರಥರಾಮ, ವೃಜನಾರ್ದನ=ಪಾಪನಾಶಕನಾದ ಜನಾರ್ದನನು, ಅಮಲಜಲಾಶಯಾಲಯ

=ನಿರ್ಮಲವಾದ ಜಲಾಶಯ ಅಂದರೆ ಕೆರೆ ಮೊದಲಾದವು, ಅವುಗಳನ್ನು ಮನೆಯನ್ನಾಗಿ ಮಾಡಿಕೊಂಡಿರುವ ಮತ್ಸ್ಯಮೂರ್ತಿ, ಹಯವದನ=ಹಯ ಗ್ರೀವ, ಶ್ರೀ ಕಪಿಲ, ನರಸಿಂಹ, ಈ ಸುರೂಪದಲಿ ಈ ೮ ರೂಪಗಳಿಂದ, ಅವ ರವರ=ಆಯಾ ಜೀವರನ್ನು (ಯೋಗ್ಯತಾನು ಸಾರವಾಗಿ) ಸಂತೋಷ ಬಡಿ ಸುತ, ನಿತ್ಯಸುಖಮಯ=ಶಾಶ್ವತವಾದ ಸುಖಸ್ವರೂಪನಾದ ಶ್ರೀಹರಿಯು, ಬಿಂಬನೆಂದೆಸಿಸಿ, ಹೃತ್ಕಮಲದೊಳು=ಹೃದಯ ಕಮಲದಳಗಳಲ್ಲಿ, ವಾಸ ವಾಗಿಹ=ವಾಸಮಾಡುತ್ತಿರುವನು.

ತಾತ್ಪರ್ಯ :—೮ ದಿಕ್‌ಪಾಲಕರಿಂದ ೮ ರೂಪಗಳಿಂದ ಉಪಾಸ್ಯನಾ ಗಿರುವನೆಂದು ಹೇಳುತ್ತಾರೆ.-ಹೃದಯ ಕಮಲದ ಅಷ್ಟದಳಗಳಲ್ಲಿ ಉಪೇಂದ್ರ ಪರಶುರಾಮ, ರಾಮ, ಜನಾರ್ದನ, ಮತ್ಸ್ಯ, ಹಯಗ್ರೀವ, ಕಪಿಲ, ನರಸಿಂಹ ಎಂಬ೮ ರೂಪಗಳಿಂದ ಇಂದ್ರ ಅಗ್ನಿ ಮೊದಲಾದ ದಿಕ್ಕುಗಳಲ್ಲಿ ಬಿಂಬನೆಂಬ ಹೆಸರಿಸಿಂದ ಆನಂದ ಸ್ವರೂಪನಾದ ಸ್ವಾಮಿಯು ಅವರವರ ಯೋಗ್ಯತಾನು ಸಾರವಾಗಿ ಅವರವರನ್ನು ಸಂತೋಷ ಪಡಿಸುತ್ತಾ ವಾಸಮಾಡುತ್ತಿರುವನು.

**ಸುರಪನಾಲಯಕೈದಿದರೆ ಮನ**
**ವೆರಗುವದು ಸತ್ಪುಣ್ಯಮಾರ್ಗದಿ**
**ಬರಲು ವಹ್ನಿಯಮನಿಗೆ ನಿದ್ರಾಲಸ್ಯ ಹಸುತೃಷೆಯು ||**
**ತರಣಿ ತನಯನಿಕೇತನದಿಸಂ**
**ಭರಿತ ಕೋಪಾಟೋಪ ತೋರ ವ**
**ದರವಿದೂರನು ನಿಋುತಿಯಲ್ಲಿರೆ ಪಾಪಗಳಮಾಳ್ಪ || ೨೨ ||**

ಪದ್ಯಾರ್ಥ :—ಸುರಪನ=ಇಂದ್ರನ, ಆಲಯಕೆ = ಮನೆಗೆ ಅಂದರೆ ಇಂದ್ರನು ವಾಸಮಾಡುವ ಪೂರ್ವದಳಕ್ಕೆ, ಯ್ದಿದರೆ=ಬಂದರೆ, ಮನವು= ಮನಸ್ಸು, ಸತ್ಪುಣ್ಯಮಾರ್ಗದಿ=ಉತ್ತಮವಾದ ಪುಣ್ಯಮಾರ್ಗದಲ್ಲಿ, ಎರಗು ವುದು=ಪ್ರವೇಶಿಸುವುದು, ವಹ್ನಿಯಮನೆಗೆ=ಅಗ್ನಿ ಇರುವ ದಳಕ್ಕೆ, ಬರಲು, ನಿದ್ರಾ, ಆಲಸ್ಯ=ಕಾರ್ಯ ಮಾಡುವುದರಲ್ಲಿ ಪಾಲಮಾರಿಕೆ, (ಬೇಜಾರು) ಹಸುತೃಷೆಯು=ಹಸಿವು ಬಾಯಾರಿಕೆ ಮೊದಲಾದವುಗಳು ಸಂಭವಿಸುವುದು, ತರಣಿ=ಸೂರ್ಯನ, ತನಯ=ಮಗನಾದ ಯಮನ, ನಿಕೇತನದಿ=ದಳಕ್ಕೆ ಬರಲು, ಸಂಭರಿತ ಕೋಪಾಟೋಪ=ಪೂರ್ಣವಾದ ಕೋಪದ ಆರ್ಭಟವು, ತೋರುವುದು, ಅರವಿದೂರನು=ದೋಷದೂರನು, ನಿಋುತಿಯಲ್ಲಿರೆ=ನಿಋು

ತಿಯ ದಳಕ್ಕೆ ಬಂದರೆ, ಪಾಪಗಳವಾಳ್ಪ=ಪಾಪಕರ್ಮದಲ್ಲಿ ಬುದ್ಧಿಯು ಪ್ರವೇಶಿಸುವುದು.

ತಾತ್ಪರ್ಯ :—೨೦ ನೆಯ ಪದ್ಯದಲ್ಲಿ ಹಂಸರೂಪೀ ಪರಮಾತ್ಮನು ೮ ದಳಗಳಲ್ಲಿರುವ ದಿಕ್ಪಾಲಕರಿಂದ ಸೇವಿತನಾಗಿ ಕುಂಬಾರನ ಚಕ್ರದಂತೆ ೮ ದಳಗಳಲ್ಲಿ ಸುತ್ತುತ್ತಿರುವನೆಂದು ಹೇಳಿದ್ದರು. ಈಗ ಮೂರು ಪದ್ಯಗಳಿಂದ ಯಾವಯಾವ ದಳಗಳಲ್ಲಿದ್ದಾಗ ಯಾವಯಾವ ಕಾರ್ಯಗಳನ್ನು ಮಾಡಿಸುವನೆಂಬುವುದನ್ನು ಹೇಳುತ್ತಾರೆ:—ಇಂದ್ರನಿರುವ ಪೂರ್ವದಳದಲ್ಲಿ ಪರಮಾತ್ಮನು ಬಂದರೆ ಉತ್ತಮವಾದ ಪುಣ್ಯಮಾರ್ಗದಲ್ಲಿ ಮನಸ್ಸು ಪ್ರವೇಶಿಸುವುದು. ಅಗ್ನಿ ಇರುವದಳಕ್ಕೆ ಪರಮಾತ್ಮನು ಬಂದರೆ ಜೀವನಿಗೆ ನಿದ್ರಾ, ಪಾಲಮಾರಿಕೆ, ಹಸಿವು ಬಾಯಾರಿಗೆ ಮೊದಲಾದವು ಸಂಭವಿಸುವುವು. ಯಮನಿರುವ ದಕ್ಷಿಣದಳಕ್ಕೆ ಬರಲು, ಪ್ರಬಲವಾದ ಕೋಪದ ಆರ್ಭಟವು ಸಂಭವಿಸುವುದು. ದೋಷದೂರನಾದ ಶ್ರೀಹರಿಯು ನೈಋತಿಯ ದಳಕ್ಕೆ ಬರಲು ಜೀವನಿಗೆ ಪಾಪಮಾಡುವ ಬುದ್ಧಿಯು ಹುಟ್ಟುವುದು.

**ವರುಣನಲ್ಲಿ ವಿನೋದ ಹಾಸ್ಯವು**
**ಮರುತನೊಳು ಗಮನಾ ಗಮನ ಹಿಮ**
**ಕರ ಧನಾಧಿಪರಲ್ಲಿ ಧರ್ಮದ ಬುದ್ಧಿ ಜನಿಸುವುದು |**
**ಹರನ ಮಂದಿರದಲ್ಲಿ ಗೋಧನ**
**ಧರಣಿ ಕನ್ಯಾದಾನಗಳುವಂ**
**ಧರಘಳಿಗೆ ತಡಿಯದಲೆ ಕೊಡುತಿಹ ಚಿತ್ತಪುಟ್ಟುವದು ||೨೩||**

ಪದ್ಯಾರ್ಥ :—ವರುಣನಲ್ಲಿ=ವರುಣನು ವಾಸಮಾಡುವ ಪಶ್ಚಿಮ ದಳದಲ್ಲಿ (ಪರಮಾತ್ಮನು ಬರಲು) ವಿನೋದ ಹಾಸ್ಯವು=ಹಾಸ್ಯಾದಿಗಳಿಂದ ವಿನೋದವಾಗಿ ಕಾಲಕಳೆಯುವ ಬುದ್ಧಿಯು ಜನಿಸುವುದು. ಮರುತನೊಳು=ವಾಯು ವಾಸವಾಗಿರುವ ವಾಯುವ್ಯ ದಳದಲ್ಲಿ ಭಗವಂತನಿರಲು, ಗಮನಾಗಮನ=ಸಂಚಾರ ಮಾಡುವುದರಲ್ಲಿ ಬುದ್ಧಿ ಹುಟ್ಟುವುದು. ಹಿಮಕರಧನಾಧಿಪರಲ್ಲಿ=ಚಂದ್ರ ಮತ್ತು ಕುಬೇರರು ವಾಸಮಾಡುವ ಉತ್ತರ ದಳದಲ್ಲಿ ಪರಮಾತ್ಮನಿರಲು, ಧರ್ಮದ ಬುದ್ಧಿ=ಧರ್ಮ ವಿಷಯದಲ್ಲಿ ಬುದ್ಧಿಯು ಜನಿಸುವುದು. ಹರನ=ರುದ್ರದೇವರು ಇರುವ ಈಶಾನ್ಯ ದಳದಲ್ಲಿ ಪರಮಾತ್ಮನು ಬರಲು, ಗೋಧನ ಧರಣಿ ಕನ್ಯಾದಾನಗಳು=ಗೋದಾನ,

ದ್ರವ್ಯದಾನ, ಭೂದಾನ, ಕನ್ಯಾಧಾನಗಳು, ಒಂದರ ಘಳಿಗೆ ತಡಿಯದಲೆ=ಅರ್ಧ ಘಳಿಗೆಯಾದರೂ ಸಾವಕಾಶವಿಲ್ಲದೆಲೆ ಅಂದರೆ ಪರಮಾತ್ಮನು ಈಶಾನ್ಯ, ದಳಕ್ಕೆ ಬಂದ ಕ್ಷಣದಲ್ಲಿಯೇ, ಕೊಡುತಿಹ=ಕೊಡುವ, ಚಿತ್ತ=ಬುದ್ಧಿಯು, ಪುಟ್ಟುವುದು=ಹುಟ್ಟುವುದು.

ತಾತ್ಪರ್ಯ :—ವರುಣನಿರುವ ಪಶ್ಚಿಮದಿಕ್ಕಿಗೆ ಪರಮಾತ್ಮನು ಬರಲು ವಿನೋದ, ಹಾಸ್ಯಾದಿಗಳಲ್ಲಿ ಬುದ್ಧಿ ಹುಟ್ಟುವುದು. ವಾಯುವಿರುವ ವಾಯವ್ಯದಳಕ್ಕೆ ಬರಲು ದೇಶಾಂತರಕ್ಕೆ ಹೋಗುವುದಕ್ಕೂ ಬರುವುದಕ್ಕೂ ಬುದ್ಧಿ ಹುಟ್ಟುವುದು. ಚಂದ್ರ ಮತ್ತು ಕುಬೇರರಿರುವ ಉತ್ತರ ದಳಕ್ಕೆ ಬರಲು ಧರ್ಮ ವಿಷಯದಲ್ಲಿ ಬುದ್ಧಿ ಹುಟ್ಟುವುದು. ರುದ್ರದೇವರು ಇರುವ ಈಶಾನ್ಯದಿಕ್ಕಿಗೆ ಬರಲು ಗೋದಾನ, ಭೂದಾನ, ದ್ರವ್ಯದಾನ, ಕನ್ಯಾದಾನ ಮೊದಲಾದವುಗಳಲ್ಲಿ ಬುದ್ಧಿಯು ಹುಟ್ಟುವುದು.

**ಹೃದಯದೊಳಗೆ ವಿರಕ್ತಿಕೇಸರ**
**ಕೊದಗೆ ಸ್ವಪ್ನಸುಷುಪ್ತಿಲಿಂಗದಿ**
**ಮಧುಹ ಕರ್ಣಿಕೆಯಲ್ಲಿ ಬರೆಜಾಗ್ರತೆಯು ಪುಟ್ಟುವದು।**
**ಸುದರಿಶನ ಮೊದಲಾದ ಮಷ್ಟಾ**
**ಯುಧವ ಪಿಡಿದಾಶಾಧಿಪತಿಗಳ**
**ಸದನದಲಿ ಸಂಚರಿಸುತೀಪರಿ ಬುದ್ಧಿಗಳ ಕೊಡುವ ॥೨೪॥**

ಪದ್ಯಾರ್ಥ:—ಹೃದಯದೊಳಗೆ=ಹೃದಯ ಕಮಲ ಮಧ್ಯಕ್ಕೆ ಬರಲು ವಿರಕ್ತಿ=ಸಂಸಾರದಲ್ಲಿ ವಿರಕ್ತಿ ಹುಟ್ಟುವದು. ಕೇಸರಕೆ=ಮಧ್ಯದ ಕುಸುಮಕ್ಕೆ, ಒದಗೆ=ಬರಲು, ಸ್ವಪ್ನ=ಸ್ವಪ್ನಾವಸ್ಥೆಯು ಬರುವುದು. ಲಿಂಗದಿ =ಲಿಂಗಶರೀರಕ್ಕೆ ಬರಲು, ಸುಷುಪ್ತಿ=ನಿದ್ರಾವಸ್ಥೆಯು ಬರುವುದು, ಮಧುಹ =ಮಧುಸೂದನನು, ಕರ್ಣಿಕೆಯಲ್ಲಿ=ದಳಗಳಲ್ಲಿ, ಬರೆ=ಪ್ರವೇಶಮಾಡಲು ಜಾಗ್ರತೆಯು=ಜಾಗ್ರದವಸ್ಥೆಯು, ಪುಟ್ಟುವುದು=ಹುಟ್ಟುವುದು. ಸುದರ್ಶನ ಮೊದಲಾದ=ಚಕ್ರ ಮೊದಲಾದ, ಅಷ್ಟಾಯುಧವ=೮ ಆಯುಧಗಳನ್ನು, ಪಿಡಿದು, ಆಶಾಧಿಪತಿಗಳ=ದಿಕ್‌ಪಾಲಕರ, ಸದನದಲಿ=ದಳಗಳಲ್ಲಿ, ಸಂಚರಿಸುತ ಈಪರಿ=ಈ ರೀತಿಯಾಗಿ ಬುದ್ಧಿಗಳ ಕೊಡುವ,

ತಾತ್ಪರ್ಯ :—ಅಷ್ಟದಳಗಳ ಸಂಚಾರ ಬಿಟ್ಟು ಶ್ರೀ ಪರಮಾತ್ಮನು ಪುನಹ ಮಧ್ಯ ಹೃತ್ಕಮಲಕ್ಕೆ ಬರಲು, ವೈರಾಗ್ಯ ಬುದ್ಧಿಯುಂಟಾಗುವುದು.

ಆ ದಳಗಳ ಮಧ್ಯ ಕುಸುಮದಲ್ಲಿ ಸಂಚರಿಸುವಾಗ ಸ್ವಪ್ನಾವಸ್ಥೆಯು ಬರುವುದು. ಕಮಲದ ಮಧ್ಯದ ಗಡ್ಡೆಗೆ ಬರಲು ನಿದ್ರಾವಸ್ಥೆಯು ಪ್ರಾಪ್ತವಾಗುವುದು. ಮಧುಸೂದನನು ಮತ್ತೆ ದಳಗಳಿಗೆ ಪ್ರವೇಶಮಾಡಲು ಎಚ್ಚರಿಕೆ ಹುಟ್ಟುವುದು. ಚಕ್ರ, ಶಂಖ, ಗದಾ, ಪದ್ಮ, ಧನುಸ್ಸು, ಬಾಣ, ಕತ್ತಿ, ಡಾಲು ಎಂಬ ೮ ಆಯುಧಗಳನ್ನು ೮ ಕೈಗಳಲ್ಲಿ ಧರಿಸಿಕೊಂಡು ಶ್ರೀ ಬಿಂಬನೆನಿಸುವ ಹಂಸರೂಪಿ ಪರಮಾತ್ಮನು ಅಷ್ಟದಿಕ್ಪಾಲಕರ ದಳಗಳಲ್ಲಿ ಸುತ್ತುತ್ತಿರುವಾಗ ಈ ವಿಧವಾದ ಬುದ್ಧಿಗಳನ್ನು ಹುಟ್ಟಸುವನು.

**ಸೂತ್ರನಾಮಕ ಪ್ರಾಣಪತಿಗಾ**
**ಯತ್ರಿ ಸಂಪ್ರತಿಪಾದ್ಯನಾಗೀ**
**ಗಾತ್ರದೊಳು ನೆಲಿಸಿದ್ದು ತಿಳಿಯದೆ ಕಂಡಕಂಡಲ್ಲೀ |**
**ಧಾತ್ರಿಯೊಳು ಸಂಚರಿಸಿ ಪುತ್ರಕ**
**ಳತ್ರ ಸಹಿತನುದಿನದಿ ತೀರ್ಥ**
**ಕ್ಷೇತ್ರಯಾತ್ರೆಯ ಮಾಡಿದೆವು ಎಂದೆನುತ ಹಿಗ್ಗುವರು ||೨೫||**

ಪದ್ಯಾರ್ಥ ;—ಸೂತ್ರನಾಮಕ=ಸೂತ್ರಯೆಂಬ ಹೆಸರುಳ್ಳ, ಪ್ರಾಣ=ಪ್ರಾಣದೇವರ, ಪತಿ=ಸ್ವಾಮಿಯಾದ ಶ್ರೀ ಹಂಸನಾಮಕ ಪರಮಾತ್ಮನು ಗಾಯತ್ರೀ ಸಂಪ್ರತಿಪಾದ್ಯನಾಗಿ=ಗಾಯತ್ರೀ ಪ್ರತಿಪಾದ್ಯನೆಂದೆನಿಸಿ, ಈ ಗಾತ್ರದೊಳು=ಈ ಶರೀರದಲ್ಲಿ, ನೆಲೆಸಿದ್ದು=ಇರುವುದನ್ನು ತಿಳಿಯದೆ, ದಾತ್ರಿಯೊಳು=ಭೂಮಿಯಲ್ಲಿ, ಕಂಡಕಂಡಲ್ಲಿ=ಕಂಡಕಂಡ ಸ್ಥಳಗಳಲ್ಲಿ, ಸಂಚರಿಸಿ=ಸಂಚಾರ ಮಾಡಿ, ಪುತ್ರಕಳತ್ರಸಹಿತ=ಮಕ್ಕಳು ಹೆಂಡರು ಸಹ, ಅನುದಿನದಿ=ಪ್ರತಿದಿವಸದಲ್ಲಿಯೂ, ತೀರ್ಥಕ್ಷೇತ್ರಯಾತ್ರೆಯ =ತೀರ್ಥಕ್ಷೇತ್ರಗಳ ಯಾತ್ರೆಗಳನ್ನು, ಮಾಡಿದೆವು ಎಂದೆನುತ, ಹಿಗ್ಗುವರು.

ತಾತ್ಪರ್ಯ :—ಅನುಸಂಧಾನವಿಲ್ಲದವರು ತೀರ್ಥಯಾತ್ರಾದಿಗಳನ್ನು ಮಾಡಿದರೂ ನಿಷ್ಫಲವೇ ಆಗುವದು. ಅನುಸಂಧಾನದಿಂದ ಭಗವದ್ರೂಪಗಳನ್ನು ದೇಹದಲ್ಲಿ ಚಿಂತಿಸಿದರೆ ತೀರ್ಥಯಾತ್ರೆಮಾಡಿದ್ದಕ್ಕಿಂತಲೂ ಉತ್ತಮ ಫಲವು ಪ್ರಾಪ್ತವಾಗುವುದೆಂದು ಹೇಳುತ್ತಾರೆ.

ಸೂತ್ರನಾಮಕರಾದ ಪ್ರಾಣದೇವರ ಸ್ವಾಮಿಯಾದ ಶ್ರೀ ಹಂಸಮೂರ್ತಿಯು ನಮ್ಮ ದೇಹದ ಹೃತ್ಕಮಲ ಮಧ್ಯದ ದಳಗಳಲ್ಲಿ ರಾಮಾದಿ ರೂಪಗಳಿಂದ ವಾಸಮಾಡುವುದನ್ನು ಅರಿಯದೇ, ಈ ಭೂಮಿಯಲ್ಲಿ ದೇಶಾಟನಮಾಡಿ

ಉಡುಪಿಗೆ ಹೋಗಿ ಕೃಷ್ಣದರ್ಶನ ಮಾಡಿದೆವು, ಅಯೋಧ್ಯೆಗೆ ಹೋಗಿ ರಾಮ ದರ್ಶನ ಮಾಡಿದೆವು, ಕಾಶಿಗೆ ಹೋಗಿ ಗಂಗಾಸ್ನಾನ ಮಾಡಿದೆವು ಎಂದು, ಹೆಂಡರು ಮಕ್ಕಳಿಂದ ಕೂಡಿ ದೇಶ ದೇಶ ತಿರುಗಿ ಬಂದು ಹೆಮ್ಮೆಯನ್ನು ಕೊಚ್ಚಿಕೊಳ್ಳುವರು. ಹೃದಯದಲ್ಲಿರುವ ಭಗವಂತನನ್ನರಿಯದೆ ದೇಶಾಟನೆ ಮಾಡಿದರೇನು ಫಲ ! ಜ್ಞಾನಿಗಳು ದೇಹಗತ ಭಗವದ್ರೂಪಗಳನ್ನರಿತು, ಮನೆ ಯಲ್ಲಿದ್ದೇ ಸಕಲ ತೀರ್ಥಕ್ಷೇತ್ರಗಳ ಯಾತ್ರೆಯನ್ನು ಮಾಡಿದ ಫಲವನ್ನು ಹೊಂದುವರು. ಆದ್ದರಿಂದ ಅನುಸಂಧಾನವೇ ಮುಖ್ಯ ಸಾಧನವೆಂಬ ತಾತ್ಪರ್ಯ.

**ನಾರಸಿಂಹ ಸ್ವರೂಪದೊಳಗೆ ಶ**
**ರೀರನಾಮದಿ ಕರೆಸುವನು ಹದಿ**
**ನಾರು ಕಳೆಗಳುಳ್ಳಲಿಂಗದಿ ಪುರುಷನಾಮಕನು ॥**
**ತೋರುವನು ಅನಿರುದ್ಧನೊಳು ಶಾಂ**
**ತೀ ರಮಣನನಿರುದ್ಧರೂಪದಿ**
**ಪ್ರೇರಿಸುವ ಪ್ರದ್ಯುಮ್ನ ಸ್ಥೂಲಕಳೇವರದೊಳಿದ್ದು ॥ ೨೬ ॥**

ಪದ್ಯಾರ್ಥ :—ನರಸಿಂಹ=ನರಸಿಂಹ ರೂಪಿ ಪರಮಾತ್ಮನು, ಸ್ವರೂಪ ದೊಳಗೆ=ಜೀವನ ಸ್ವರೂಪ ದೇಹದಲ್ಲಿ, ಶರೀರನಾಮದಿ=ಸ್ವರೂಪ ದೇಹ ಎಂಬ ಹೆಸರಿನಿಂದ ಕರೆಸುವನು. ಹದಿನಾರು ಕಳೆಗಳುಳ್ಳ, ಲಿಂಗದಿ=ಲಿಂಗ ಶರೀರದಲ್ಲಿ, ಪುರುಷನಾಮಕನು, ತೋರುವನು. ಅನಿರುದ್ಧನೊಳು=ಅನಿ ರುದ್ಧ ಶರೀರದೊಳು, ಶಾಂತೀರಮಣ=ಶಾಂತೀದೇವಿಯರ ಪತಿಯಾದ, ಅನಿ ರುದ್ಧ ರೂಪದಿಂದ, ಪ್ರೇರಿಸುವ. ಸ್ಥೂಲ ಕಳೇವರದೊಳು=ಸ್ಥೂಲ ದೇಹ ದಲ್ಲಿದ್ದು, ಪ್ರದ್ಯುಮ್ನ=ಪ್ರದ್ಯುಮ್ನ ರೂಪಿಯು, ಪ್ರೇರಿಸುವನು.

ತಾತ್ಪರ್ಯ :—ಈ ಸಂಧಿಯ ೧೦-೧೧ ಮೊದಲಾದ ಕೆಲವು ಪದ್ಯಗ ಳಿಂದ ಜೀವನ ಸ್ವರೂಪದೇಹ ಮೊದಲಾದವುಗಳಲ್ಲಿರುವ ಭಗವದ್ರೂಪಗಳನ್ನು ಹೇಳಿದ್ದರು. ಆದರೆ ಆ ಪದ್ಯಗಳಲ್ಲಿ ಸ್ವರೂಪದೇಹ ಮೊದಲಾದ ದೇಹದ ಒಳಗಿದ್ದು ಜೀವನ ಕೃತ್ಯವನ್ನು ಮಾಡಿ ಮಾಡಿಸುವ ರೂಪಗಳನ್ನು ಮಾತ್ರ ಹೇಳಿದರು. ಈ ಪದ್ಯದಲ್ಲಿ ಶರೀರಾಕಾರನಾಗಿ ಸ್ವರೂಪಾದಿ ದೇಹಗಳಲ್ಲಿ ತೋ ರುವ ಭಗವದ್ರೂಪಗಳನ್ನು ಹೇಳುತ್ತಾರೆ.

ನರಸಿಂಹ ರೂಪಿಯಾದ ಶ್ರೀ ಪರಮಾತ್ಮನು ಜೀವನ ಸ್ವರೂಪದೇಹ ರೂಪದಿಂದ ಸ್ವರೂಪ ಶರೀರಯೆಂಬ ಹೆಸರಿನಿಂದ ಕರೆಸಿಕೊಳ್ಳುತ್ತಾ ಇರುವನು. ಷೋಡಶಕಳೆಗಳುಳ್ಳ ಲಿಂಗ ಶರೀರಾಕಾರನಾಗಿ ಪುರುಷನಾಮಕನಿರುವನು. ಅನಿರುದ್ಧ ದೇಹದಲ್ಲಿ ಶಾಂತೀಪತಿಯಾದ ಅನಿರುದ್ಧನಿರುವನು. ಸ್ಥೂಲ ಕಳೇವರದಲ್ಲಿ ಪ್ರದ್ಯುಮ್ನನಿದ್ದು ಪ್ರೇರಿಸುವನು.

**ಮೊದಲು ತ್ವಕ್ ಚರ್ಮಗಳು ಮಾಂಸ**
**ರುಧಿರ ಮೇದೋಮಜ್ಜಾಸ್ಥಿಗ**
**ಳಿದರೊಳಗೆ ಏಕೋನ ಪಂಚಾಶನ್ಮರುದ್ಗಣವು॥**
**ನಿಧನ ಹಿಂಕಾರಾದಿ ಸಾಮಗ**
**ನದರನಾಮದಿ ಕರೆಸುತೊಂಭ**
**ತ್ತಧಿಕನಾಲ್ವತ್ತೆನಿಪರೂಪದಿ ಧಾತುಗಳೊಳಿಪ್ಪ ॥ ೭೨ ॥**

ಪದಾರ್ಥ :—ಮೊದಲು, ತ್ವಕ್, ಗಾಳಿ, ಬಿಸಲು ತಗಲಿ ಛಳಿ ತಾಪ ಸ್ಪರ್ಶವಾಗುವ ಇಂದ್ರಿಯಕ್ಕೆ ತ್ವಗಿಂದ್ರಿಯವೆಂದು ಹೆಸರು. ಇದು ದೇಹದ ಚರ್ಮಕ್ಕೆ ಮೇಲೆ ಇರುವ ಒಂದು ಧಾತು. ಇದರೊಳಗೆ ಚರ್ಮ, ಮಾಂಸ, ರುಧಿರ=ರಕ್ತ, ಮೇದಸ್ಸು=ಕೊಬ್ಬು, ಮಜ್ಜಾ=ಕೀವು ಅಸ್ಥಿಗಳು ಇದರೊಳಗೆ=ಈ ಸಪ್ತಧಾತುಗಳಲ್ಲಿ, ಏಕೋನ ಪಂಚಾಶನ್ಮ ರುದ್ಗಣವು=೪೯ ಮರುದ್ಗಣವು, ಇರುವವು, ನಿಧನಹಿಂಕಾರಾದಿ=ನಿಧನಹಿಂಕಾರ ಮೊದಲಾದ, ಸಾಮಗನು=ಸಾಮಗಾನ ಪ್ರತಿಪಾದ್ಯನು, ಅವರ ನಾಮದಿ=ಸಪ್ತ ಧಾತುಗಳ ನಾಮಗಳಿಂದ, ಕರೆಸುತ, ಒಂಭತ್ತಧಿಕ ನಾಲ್ವತ್ತೆನಿಪರೂಪದಿ=೪೯ ರೂಪಗಳಿಂದ, ಧಾತುಗಳೊಳು=೭ ಧಾತುಗಳಲ್ಲಿ, ಇಪ್ಪ=ಇರುವನು.

ತಾತ್ಪರ್ಯ ;—ಸಪ್ತಧಾತುಗಳಲ್ಲಿರುವ ಭಗವದ್ರೂಪಗಳನ್ನು ಹೇಳುತ್ತಾರೆ :—ನಮ್ಮ ದೇಹದಲ್ಲಿ, ತ್ವಕ್, ಚರ್ಮ, ಮಾಂಸ, ರಕ್ತ, ಮೇದಸ್ಸು ಮಜ್ಜಾ, ಅಸ್ಥಿಗಳೆಂಬ, ೭ ಧಾತುಗಳಿರುವವು. ಇವು ೭ ರಲ್ಲಿ ಒಂದೊಂದರಲ್ಲಿ ಎಳೇಳು ಮರುತ್ತುಗಳಂತೆ ೭ ಧಾತುಗಳಲ್ಲಿ ೪೯ ಮರುತ್ತುಗಳು ಇರುವರು. ಇವರಲ್ಲಿ ಸಾಮಪ್ರತಿಪಾದ್ಯನಾದ, ಮತ್ತು ಸಾಮ ಶಬ್ದವಾಚ್ಯನಾದ, ಶ್ರೀ ಹರಿಯು ನಿಧನ, ಹಿಂಕಾರ, ಪ್ರಸ್ತಾವ, ಪ್ರತೀಹಾರ, ಉದ್ಗೀಥ, ವಷಟ್‌ಕಾರ **ಆದಿ ನಾಮಗಳೆಂಬ ೭ ರೂಪಗಳಿಂದ, ಏಳೇಳುಮಂದಿ ಮರುತ್ತುಗಳಲ್ಲಿ**

ಒಂದೊಂದು ರೂಪದಂತೆ ೭ ಧಾತುಗಳಲ್ಲಿ ೭ ರೂಪಗಳಿಂದ ಇರುವನು. ಇದರ ವಿಸ್ತಾರವು ಅಧ್ಯಾತ್ಮಮಾಲಾ ಗ್ರಂಥದಲ್ಲಿರುವದು 'ತ್ವಚಪ್ರಸ್ತಾವ ನಾಮಾಚ ವಾಸುದೇವಸ್ತ್ವಥೈವಚ | ರಾಮರೂಪೀ ಹರಿಸ್ತತ್ರ ವರ್ತತೇ ತನ್ನಿಯಾಮಕಃ | ಚರ್ಮಣಿ ಪ್ರತಿಹಾರಾಖ್ಯೋ | ಹ್ಯನಿರುದ್ಧಸ್ತ್ವಥೈವಚ | ಲಕ್ಷ್ಮೀಪತಿಸ್ತು ತತ್ರೈವ ವರ್ತತೇ ತನ್ನಿಯಾಮಕಃ | ಮಾಂಸೇಷೂದ್ಗೀಥ ನಾಮಾಚ ನಾರಾಯಣ ಸುರೂಪವಾನ್ | ರಕ್ತೇನಿಧನ ನಾಮಾಚ ತಥಾ ಸಂಕರ್ಷಣಾಭಿಧಃ | ಶಾಂತ ಸಂವಿಚ್ಚ ತತ್ರೈವ ವರ್ತತೇ ತನ್ನಿಯಾಮಕಃ ಮೇದಸ್ಯಪಿ ವಷಟ್ಕಾರ ನಾಮಾ ಷಡ್ಗುಣ ಏವಚ | ಮಜ್ಜಾಯ ಮಾದಿವಾರಾಹ ರೂಪೀ ಸಾರಾತ್ಮ ರೂಪಧೃಕ್ | ಅಸ್ಥಿಷೂಪದ್ರವೋನಾಮ ನೃಸಿಂಹೋ ಹಂಸ ಏವಚ'

ಇದರರ್ಥ :—ತ್ವಕ್ಕಿನಲ್ಲಿ ಪ್ರಸ್ತಾವನಾಮಕ ಸಾಮವಾಚ್ಯನೂ ವಾಸುದೇವರೂಪಿಯೂ ಇರುವರು. ಅಲ್ಲಿ ರಾಮರೂಪಿಯಾದ ಪರಮಾತ್ಮನು ನಿಯಾಮಕನಾಗಿ ಇರುವನು. ಚರ್ಮದಲ್ಲಿ ಪ್ರತೀಹಾರ ನಾಮಕನು ಮತ್ತು ಅನಿರುದ್ಧನು ಇರುವರು. ಲಕ್ಷ್ಮೀಪತಿಯು ಅಲ್ಲಿ ನಿಯಾಮಕನಾಗಿರುವನು. ಮಾಂಸದಲ್ಲಿ ಉದ್ಗೀಥನಾಮಕನಿರುವನು. ಅಲ್ಲಿ ನಾರಾಯಣ ರೂಪಿಯು ನಿಯಾಮಕನಾಗಿರುವನು. ರಕ್ತದಲ್ಲಿ ನಿಧನನಾಮಕನೂ, ಸಂಕರ್ಷಣನೂ ಇರುವರು. ಅಲ್ಲೇ ಶಾಂತ ಸಂವಿದ್ರೂಪಿಯು ನಿಯಾಮಕನಾಗಿರುವನು. ಮೇದಸ್ಸಿನಲ್ಲಿ ವಷಟ್‌ಕಾರ ನಾಮಕನೂ, ಷಡ್ಗುಣ ರೂಪಿಯೂ ಇರುವರು. ಅಲ್ಲಿ ಸಾರಾತ್ಮನ್ ಇರುವನು. ಅಸ್ಥಿಗಳಲ್ಲಿ ಉಪದ್ರವನಾಮಕನೂ, ಮತ್ತು ನರಸಿಂಹ, ಹಂಸ ಈ ಮೂರ್ತಿಗಳು ಇರುವರು. ಈ ಅರ್ಥಗಳನ್ನೇ ಈ ಪದ್ಯವು ಸೂಚಿಸುವುದು.

**ಸಪ್ತಧಾತುಗಳೊಳ ಹೊರಗೆ ಸಂ**
**ತಪ್ತಲೋಹಗತಾಗ್ನಿಯಂದದಿ**
**ಸಪ್ತಸಾಮಗನಿಪ್ಪನನ್ನಮಯಾದ ಕೋಶದೊಳು |**
**ಲಿಪ್ತನಾಗದೆ ತತ್ತದಾಹ್ವಯ**
**ಕ್ಲಿಪ್ತಭೋಗವ ಕೊಡುತ ಸ್ವಪ್ನಸು**
**ಷುಪ್ತಿ ಜಾಗ್ರತಿಯೊಳ ತೈಜಸ ಪ್ರಾಜ್ಞ ವಿಶ್ವಾಖ್ಯ || ೨೮ ||**

ಪದ್ಯಾರ್ಥ :—ಸಪ್ತಧಾತುಗಳ, ಒಳಹೊರಗೆ, ಅನ್ನಮಯಾದಿ ಕೋಶದೊಳು=ಇರುವ ಅನ್ನಮಯ ಪ್ರಾಣಮಯ ಮೊದಲಾದ ಕೋಶಗಳಲ್ಲಿ ಲಿಪ್ತನಾಗದೆ=ನಿರ್ಲಿಪ್ತನಾಗಿ, ಸಂತಪ್ತ ಲೋಹಗತಾಗ್ನಿಯಂದದಿ=ಚೆನ್ನಾಗಿ ಕಾದ ಕಬ್ಬಿಣದಲ್ಲಿ ಕಾಣುವ ಬೆಂಕಿಯಂತೆ, ಸಪ್ತಸಾಮಗ=ನಿಧನ ಹಿಂಕಾರಾದಿ ಮೇಲೆಹೇಳಿದ ೭ ಸಾಮ ಶಬ್ದವಾಚ್ಯನು, ತತ್ತದಾಹ್ವಯ=ಆಯಾ ಹೆಸರುಗಳಿಂದ ಕೂಡಿ, ಕ್ಲಿಪ್ತಭೋಗವ ಕೊಡುತ, ಇಪ್ಪನು=ಇರುವನು. ಅಲ್ಲಿ ತೈಜಸ ಪ್ರಾಜ್ಞವಿಶ್ವಾಖ್ಯಾ=ತೈಜಸ, ಪ್ರಾಜ್ಞ, ವಿಶ್ವಯೆಂಬ ಮೂರು ರೂಪಗಳಿಂದಿದ್ದು ಸ್ವಪ್ನಸುಷುಪ್ತಿ ಜಾಗ್ರತಿನೀವ=ಸ್ವಪ್ನಾವಸ್ಥೆ, ಸುಷುಪ್ತ್ಯವಸ್ಥೆ, ಜಾಗ್ರದವಸ್ಥೆಗಳನ್ನು, ಈವ=ಕೊಡುವ.

ತಾತ್ಪರ್ಯ :-ಮೇಲೆ ಹೇಳಿದ ೭ ಧಾತುಗಳ ಒಳಗೆ ಅನ್ನಮಯ ಪ್ರಾಣಮಯ, ಮನೋಮಯ, ವಿಜ್ಞಾನಮಯ ಆನಂದಮಯಗಳೆಂಬ ೫ ಕೋಶಗಳಿರುವವು ಆ ಕೋಶಗಳಿಂದ ಕೂಡಿದ ೭ ಧಾತುಗಳಲ್ಲಿ ನಿಧನಾದಿ ೭ ರೂಪಗಳಿರುವವು. ಅಲ್ಲದೆ " ಸಪ್ತಧಾತು ಷುಧ್ಯಾತಂತಃ ಕ್ರಮಾತ್ಕೋಶಾಃ ಪ್ರತಿಷ್ಠಿತಾಃ ತನ್ನಾಮಕಾನಿರುದ್ಧಾದಿ ರೂಪಾಣ್ಯೇಷು ವಿಚಿಂತಯೇತ್ " ಎಂಬ ಅನಿರುದ್ಧಾದಿ ೫ ರೂಪಗಳು ಆಯಾ ಕೋಶಗಳ ಹೆಸರುಗಳಿಂದ, ಆ ಕೋಶಗಳಲ್ಲಿರುವವು. ಆದರೂ ಈ ರೂಪಗಳೆಲ್ಲವು, ಚೆನ್ನಾಗಿ ಕೆಂಪಗೆ ಕಾದಿರುವ ಕಬ್ಬಿಣದಲ್ಲಿ ಕಾಣುವ ಬೆಂಕಿಯಂತೆ ನಿರ್ಲಿಪ್ತವಾಗಿದ್ದು ಆಯಾ ಜೀವರ ಪ್ರಾರಬ್ಧಾದಿಗಳನ್ನನುಸರಿಸಿ ಅವರವರ ಕ್ಲಿಪ್ತವಾದ ಭೋಗಗಳನ್ನು ಕೊಡಿಸುತ್ತಿರುವವು. ಇದಲ್ಲದೆ ವಿಶ್ವ, ತೈಜಸ, ಪ್ರಾಜ್ಞ ಎಂಬ ಮೂರು ರೂಪಗಳಲ್ಲಿದ್ದು ಜಾಗ್ರದವಸ್ಥೆಯನ್ನು, ಸ್ವಪ್ನಾವಸ್ಥೆಯನ್ನು, ಸುಷುಪ್ತ್ಯವಸ್ಥೆಯನ್ನು ಕೊಡುವನು.

**ಶ್ರೀವಿಕೊಂಡಿಹವಲ್ಲಿ ಮಜ್ಜಕ**
**ಳೇವರದ ಲಂಗುಲಿಯು ಪರ್ವದ**
**ತಾವಿನಲಿ ಮುನ್ನೂರ ಅರವತ್ತನಿಪ ತ್ರಿಸ್ಥಳದಿ ||**
**ಸಾವಿರದ ಎಂಭತ್ತು ರೂಪವ**
**ಕೋವಿದರು ಪೇಳುವರು ದೇಹದಿ**
**ದೇವತೆಗಳೊಡಗೂಡಿ ಕ್ರೀಡಿಸುವನು ರಮಾರಮಣ || ೨೯ ||**

ಪದ್ಯಾರ್ಥ :-ಕಳೇವರದಲಿ=ಈಶರೀರದಲ್ಲಿ, ಅಂಗುಲಿಯು=ಕೈಕಾಲು ಬೆರಳುಗಳ, ಪರ್ವದ=ಗೆಣ್ಣುಗಳ, ತಾವಿನಲಿ, ಮಜ್ಜ=ಮಜ್ಜಯೆಂಬ ಧಾತು

ತೀವಿಕೊಂಡಿಹವು=ಅವಕಾಶ ಮಾಡಿಕೊಂಡಿರುವುದು, ಅಲ್ಲಿ=ಅದೇ ಸ್ಥಳದಲ್ಲಿ, ಮುನ್ನೂರ ಅರವತ್ತೆನಿಪ=೩೬೦ ಸಂಖ್ಯಾಯುಳ್ಳ ದಿವಸಾಭಿಮಾನಿಗಳಿಂದ ಕೂಡಿದ ಗೆಣ್ಣುಗಳ, ತ್ರಿಸ್ಥಳದಿ, ಮೂರು ಸ್ಥಳಗಳಲ್ಲಿ, ಸಾವಿರದ ಎಂಭತ್ತು ರೂಪವ=೧೦೮೦ ರೂಪಗಳು ಇರುವುದಾಗಿ, ಕೋವಿದರು=ಜ್ಞಾನಿಗಳು, ಪೇಳುವರು, ದೇಹದಿ—ಈ ಶರೀರಗಳಲ್ಲಿ, ದೇವತೆಗಳೊಡಗೂಡಿ = ೩೬೦ ದಿವಸಗಳ ಅಭಿಮಾನಿ ದೇವತೆಗಳು, ಮತ್ತು ತತ್ವಾಭಿಮಾನಿ ದೇವತೆಗಳು ಇವರಿಂದೊಡಗೂಡಿ, ರಮಾರಮಣ=ಲಕ್ಷ್ಮೀಪತಿಯಾದ ಶ್ರೀಹರಿಯು ಕ್ರೀಡಿಸುವನು.

ತಾತ್ಪರ್ಯ :—" ಪಾದಹಸ್ತಾಂಗುಲಿ ಸ್ಥಾನಿಯಾನಿ ಪರ್ವಾಣಿ ವಿಗ್ರಹೆ | ತತ್ಪರ್ವಸು ಪರಿಜ್ಞಾನಾತ್ಪರ್ವ ನಾಮಾನಿವೈಹರೇ | ಅಶೀತ್ಯುತ್ತರ ಸಾಹಸ್ರರೂಪಾಣ್ಯೇ ತಾನಿಸರ್ವಶಃ | ಯೋವಿಜಾನಾತಿ ತಸ್ಯೈವ ನಿತ್ಯಮಾಯುರ್ವಿವರ್ಧತೆ " ಈ ಶರೀರದ ಪಾದ, ಕರ ಇವುಗಳ ಬೆರಳುಗಳ ಗೆಣ್ಣುಗಳಲ್ಲಿ ಪರ್ವನಾಮಕ ಪರಮಾತ್ಮನ ೧೦೮೦ ರೂಪಗಳನ್ನು ಯಾರು ತಿಳಿಯುತ್ತಾರೊ ಅವರಿಗೆ ಆಯುಷ್ಯವು ವೃದ್ಧಿಯಾಗುವುದೆಂಬ ಮಾನಸ ಸ್ಮೃತಿವಾಕ್ಯವನ್ನೇ ಇಲ್ಲಿ ದಾಸರಾಯರು ಹೇಳಿರುತ್ತಾರೆ :-ಕಾಲು ಕೈಗಳ ಬೆರಳುಗಳ ಗೆಣ್ಣುಗಳಲ್ಲಿ ಮಜ್ಜ ಎಂಬ ಧಾತು ಶೇರಿಕೊಂಡಿರುವುದು. ಪರ್ವಗಳೆಂಬ ಹೆಸರುಳ್ಳ ಪೌರ್ಣಿಮೆ ಅಮಾವಾಸ್ಯೆಗಳು ೧ ವರ್ಷಕ್ಕೆ ೨೪ ಆಗುವವು. ಒಂದೊಂದು ಪರ್ವಕ್ಕೆ ೧೫ ದಿವಸಗಳ ಮೇರೆ ೨೪ ಪರ್ವಗಳಿಗೆ ೨೪ × ೧೫=೩೬೦ ಆಗುವವು. ಇವುಗಳಲ್ಲಿ ಪರ್ವನಾಮಕನಾಗಿ ಪರಮಾತ್ಮನು ಪರ್ವಾಭಿಮಾನಿ ದೇವತೆಗಳಿಂದೊಡಗೂಡಿ ವಾಸಮಾಡುತ್ತಿರುವನು. ಬೆರಳುಗಳ ಪರ್ವಗಳಲ್ಲಿ (ಗೆಣ್ಣುಗಳಲ್ಲಿ) ಒಂದೊಂದು ಬೆರಳಿನಲ್ಲಿಯೂ ಮೂರು ಮೂರು ಸ್ಥಾನಗಳು ಇರುವವು. ಸ್ಥಾನ ಒಂದಕ್ಕೆ ೩೬೦ ರಂತೆ ೩೬೦ × ೩=೧೦೮೦ ಆಗುವವು. ಇಷ್ಟುರೂಪಗಳಿಂದ ಪರ್ವನಾಮಕನಾಗಿ ಶ್ರೀಲಕ್ಷ್ಮೀಪತಿಯು ತತ್ತದಭಿಮಾನಿ ದೇವತೆಗಳಿಂದೊಡಗೂಡಿ ಕ್ರೀಡಿಸುತ್ತಿರುವನು.

**ಕೀಟಪೇಶಸ್ಕಾರಿ ನೆನವಲಿ**
**ಕೀಟ ಭಾವವ ತೊರೆದು ತದ್ವತ್**
**ಖೇಟರೂಪವ ನೈದಿಯಾಡುವ ತೆರದಿ ಭಕುತಿಯಲಿ ||**

**ಕೈಟಭಾರಿಯ ಧ್ಯಾನದಿಂದೆ ಭ**
**ವಾಟವಿಯ ನತಿಶೀಘ್ರದಿಂದಲಿ**
**ದಾಟಸಾರೂಪ್ಯವನು ಯೈದುವರಲ್ಪ ಜೀವಿಗಳು ॥ ೩೦ ॥**

ಪದ್ಯಾರ್ಥ :—ಕೀಟ=ಹಸರು ಬಣ್ಣದ ಒಂದು ಅಂಗುಲ ಉದ್ದ ವಾಗಿರುವ ಒಂದು ಹುಳವು, ಪೇಶಸ್ಕಾರಿ=ಕಣಜದ, ನೆನವಲಿ=ಜ್ಞಾಪಕ ದಿಂದ, ಕೀಟಭಾವವ=ಹುಳುವಿನ ರೂಪವನ್ನು, ತೊರೆದು=ಬಿಟ್ಟು, ತದ್ವತ್ =ಇದರ ನೆನಪಿನಲ್ಲಿರುವ, ಖೇಟರೂಪವನ್ನು=ಅಂತರಿಕ್ಷದಲ್ಲಿ ಹಾರುತ್ತಿರು ವುದರಿಂದ ಖೇಟವೆಂದು ಹೆಸರುಳ್ಳ ಕಣಜದ ರೂಪವನ್ನು, ಯೈದಿ=ತಾಳಿ, ಆಡುವ ತೆರದಿ=ಹಾರುತ್ತ ಓಡಾಡುವಂತೆ, ಭಕುತಿಯಲಿ, ಕೈಟಭಾರಿಯ= ಕೈಟಭನಾಮಕ ದೈತ್ಯನನ್ನು ಸಂಹರಿಸಿದ ಶ್ರೀ ಪರಮಾತ್ಮನ, ಧ್ಯಾನದಿಂದೆ= ಧ್ಯಾನದಿಂದಲೆ, ಭವಾಟವಿಯನು=ಸಂಸಾರವೆಂಬ ಕಾಡನ್ನು, ಅತಿ ಶೀಘ್ರ ದಿಂದಲಿ, ದಾಟಿ, ಅಲ್ಪಜೀವರು ರಮಾ ಬ್ರಹ್ಮಾದಿಗಳಗಿಂತಲೂ ನೀಚರಾದ ಇತರ ಮುಕ್ತಿಯೋಗ್ಯ ಜೀವರೂ ಕೂಡ, ಸಾರೂಪ್ಯವನು, ಯೈದುವರು= ಹೊಂದುವರು.

ತಾತ್ಪರ್ಯ :—ಸರ್ವ ಪ್ರಕಾರದಿಂದಲೂ ಮನಸ್ಸನ್ನು ಭಗವಂತನ ಪಾದಾರವಿಂದದಲ್ಲಿಟ್ಟು ಧ್ಯಾನಮಾಡುತ್ತಿದ್ದರೆ ಪರಮಾತ್ಮನ ಸಾರೂಪ್ಯ ಪದವಿಯನ್ನು ಯೈದುವರೆಂದು ಹೇಳುತ್ತಾರೆ :—

ಲೋಕದಲ್ಲಿ ಕಣಜವು ಗೋಡೆಗಳಲ್ಲಿ ಮಣ್ಣಿನಿಂದ ಒಂದು ಗೂಡು ಕಟ್ಟಿ ಅದರ ಸಣ್ಣವಾದ ದ್ವಾರದಲ್ಲಿ ಹಸರು ಬಣ್ಣದ ರೆಕ್ಕೆಯಿಲ್ಲದ ಹುಳು ಗಳನ್ನು ತಂದಿಟ್ಟು ಆ ಹುಳುಗಳು ಹೊರಗೆ ಹೋಗಲು ಅವಕಾಶವಿಲ್ಲದೆ ದ್ವಾರ ಸಣ್ಣದಾಗಿ ಮಾಡಿ ತಾನು ಆಹಾರಗಳನ್ನು ಕೊಟ್ಟು, ಆ ಹುಳುಗಳನ್ನು ರಕ್ಷಿಸುವುದು. ಭಾಗವತ ಏಕಾದಶಸ್ಕಂದ ೯ನೆಯ ಅಧ್ಯಾಯ ಶ್ಲೋಕ ೨೩ ರಲ್ಲಿ, “ಕೀಟಃ ಪೇಶಸ್ಕೃತಂಧ್ಯಾಯನ್ ಕುಡ್ಯಾಂತೇನ ಪ್ರವೇಶಿತಃ ॥ ಯಾತಿತತ್ಸಾತ್ಮ್ಯತಾಂ ರಾಜನ್ ಪೂರ್ವರೂಪ ಮಸಂತ್ಯಜನ್” ॥ ಇದೇ ರೀತಿಯಾಗಿ ಸಪ್ತಮಸ್ಕಂಧದ ಮೊದಲನೆಯ ಅಧ್ಯಾಯದಲ್ಲಿ “ಕೀಟಃ ಪೇಶ ಸ್ಕೃತಾರುದ್ಧಃ ಕುಡ್ಯೇಯಾಂತ ಮನುಸ್ಮರನ್ । ಸಂರಂಭ ಭಯಯೋಗೇನ ವಿಂದತೆ ತತ್ಸ್ವರೂಪತಾಂ” ॥ ಕಣಜದಿಂದ ಗೋಡೆಯ ಗೂಡಿನಲ್ಲಿ ಇರಿ

ಸಲ್ಪಟ್ಟ ಆ ಹುಳುವು, ಹಗಲೂ ರಾತ್ರಿ ಹೊರಗೆ ಹೋಗಿರುವ ಆ ಕಣಜದ ಬರುವಿಕೆಯನ್ನು ನಿರೀಕ್ಷಿಸುತ್ತಾ ಅದನ್ನೇ ಚಿಂತಿಸುತ್ತಿರುವುದು. ತನ್ನನ್ನು ಸೆಳೆದುಕೊಂಡು ಬಂದು ನಿರ್ಬಂಧದಲ್ಲಿಟ್ಟ ಪ್ರಯುಕ್ತ ಕಣಜದಮೇಲೆ ಸ್ವಲ್ಪ ಕೋಪವೂ, ಅದೇ ನಿಮಿತ್ತದಿಂದ ಸ್ವಲ್ಪ ದ್ವೇಷವೂ, ಭಯವೂ ಸಹ ಇದ್ದರೂ ತನಗೆ ಆಹಾರವನ್ನು ಕೊಟ್ಟು ರಕ್ಷಿಸುವುದರಿಂದ ಸ್ನೇಹ ಬಾಹುಳ್ಯ ದಿಂದ ಕಣಜವನ್ನೇ ಸ್ಮರಿಸುತ್ತ, ಪೂರ್ವದ ಕೀಟರೂಪ ಹೋಗಿ ಅದೇ ಕಣಜದ ರೂಪವೇ ಈಹುಳುವಿಗೂ ಬರುವುದು. ಅಂದರೆ ಈಹುಳುವಿಗೂ ರೆಕ್ಕೆಗಳು ಬಂದು ಕೆಂಪುಬಣ್ಣವು ತಿರುಗಿ ಆ ಕಣಜದಂತೆಯೇ ಇದೂ ಕಣಜವಾಗುವುದು. "ಯತ್ರಯತ್ರ ಮನೋದೇಹಿ ಧಾರಯೇತ್ಸಕಲಂ ಧಿಯಾ ॥ ಸ್ನೇಹಾದ್ವೇಷಾದ್ಭಯಾದ್ವಾಪಿ ಯಾತಿ ತತ್ತತ್ಸ್ವರೂಪತಾಂ" ಎಂಬ ಪ್ರಮಾಣಾನುಸಾರ ಸ್ನೇಹದಿಂದಾಗಲೀ, ದ್ವೇಷದಿಂದಾಗಲೀ, ಭಯ ದಿಂದಾಗಲೀ ಸರ್ವದಾ ಮನಸ್ಸಿನಲ್ಲಿ ಯಾವುದನ್ನು ಚಿಂತಿಸುತ್ತಿರುವರೋ ಅದರದರ ರೂಪವನ್ನು ಹೊಂದುವರೆಂದು ಪ್ರಮಾಣಾರ್ಥ. ಇದರಂತೆ ಭಗ ವಂತನಲ್ಲಿ ಯಾವುದಾದರೂ ಒಂದು ಬಗೆಯಿಂದ ಮನಸ್ಸನ್ನಿಟ್ಟು ಧ್ಯಾನ ಮಾಡಿದರೆ ಪರಮಾತ್ಮನ ಸಾರೂಪ್ಯವು ಪ್ರಾಪ್ತಿಯಾಗುವುದು. ಹಾಗಾದರೆ ದ್ವೇಷಿಗಳಾದ ತಮೋಯೋಗ್ಯರಿಗೂಕೂಡ ದ್ವೇಷದಿಂದ ಪರಮಾತ್ಮನನ್ನು ಚಿಂತಿಸುತ್ತಿದ್ದರೆ ಸಾರೂಪ್ಯಬರುವದೇನೊ ಎಂದು ಶಂಕಾ ಮಾಡಕೂಡದು ಯಾಕೆಂದರೆ, ಭಗವಂತನಲ್ಲಿ ದ್ವೇಷಮಾಡುವವರು ಘೋರವಾದ ತಮಸ್ಸನ್ನು ಹೊಂದುವರಲ್ಲದೆ, "ಕರ್ಮಣಾ ಮನಸಾ ವಾಚಾ ಯೋದ್ವಿಷ್ಯಾದ್ವಿಷ್ಣು ಮವ್ಯಯಂ । ಮಜ್ಜಂತಿ ಪಿತರಸ್ತಸ್ಯ ನರಕೇ ಶಾಶ್ವತೀಃಸಮಾಃ" ಕರ್ಮದಿಂ ದಾಗಲಿ, ಮನಸ್ಸಿನಿಂದಾಗಲಿ, ವಾಕ್ಯದಿಂದಾಗಲಿ ಪರಮಾತ್ಮನಲ್ಲಿ ಯಾರು ದ್ವೇಷಮಾಡುವರೊ ಅವರ ಪಿತೃಗಳೆಲ್ಲರೂ ಶಾಶ್ವತಕಾಲ ನರಕದಲ್ಲಿ ಬಿದ್ದಿರು ವರು, ಎಂದು ಇರುವುದರಿಂದ ದ್ವೇಷಿಗಳಿಗೆ ಸಾರೂಪ್ಯಾದಿ ಮುಕ್ತಿಯು ಎಂದಿಗೂ ಇಲ್ಲ. ಮತ್ತೆ ಮೇಲಿನ ಉಪಮಾನದ ಪ್ರಯೋಜನವೇನೆಂದರೆ, "ಸಂತ್ಯಲ್ಪಾತ್ಯಲ್ಪವಿದ್ವೇಷೆ ಭೋಜನಂ ದಾಸ್ಯತೀತಿತು । ಸ್ನೇಹಬಾಹುಲ್ಯತಃ ಕೀಟಃ ಪೇಶಸ್ಕಾರೀ ಸಮೋಭವೇತ್ । ದ್ವೇಷೇ ಸರ್ವಾತ್ಮನಾನಷ್ಟೇ ಸ್ನೇಹೇ ಚೈವವಿವರ್ಧಿತೆ ॥ ಸ್ವರೂಪತಾ ತದೈವಶ್ಯಾ ತ್ಕೀಟಸ್ಯೈವಂ ಹರೇರಪಿ ॥ ನಹಿಪೇಶಸ್ಕೃತಃ ಕಿಂಚಿತ್ಫಲದಾತೃತ್ವಮಿಷ್ಯತೇ । ಸ್ವಾತಂತ್ರ್ಯಾದ್ವಿದ್ವಿಷಾ

ಣಾಂಹಿಕೇಶವೊನಸುಖಪ್ರದಯಿತಿ" ಎಂಬ ಭಾಗವತ ಏಕಾದಶಸ್ಕಂದದಲ್ಲಿ ಮೇಲೆ ಉದಾಹರಿಸಿದ ಶ್ಲೋಕದ ತಾತ್ಪರ್ಯವಾಕ್ಯವಿದು. ಇದರ ಅಭಿಪ್ರಾಯ :—ಕೀಟಕ್ಕೆ ತನ್ನನ್ನು ಹಿಡಿದುತಂದು ಬಲಾತ್ಕಾರದಿಂದ ಮಣ್ಣಿನ ಗೂಡಿನಲ್ಲಿ ಹಿಂಸೆಪಡಿಸಿದುದರಿಂದ ಅತ್ಯಲ್ಪ ಕೋಪವು ಕಣಜದಮೇಲೆ ಇದ್ದರೂ, ತನಗೆ ಆಹಾರವನ್ನುಕೊಟ್ಟು ರಕ್ಷಿಸುವುದರಿಂದ ಅದರ ಮೇಲೆ ಸ್ನೇಹವು ಹೆಚ್ಚಾಗಿರುವುದು. ಮೊದಲು ಕೆಲವುಕಾಲ ಸ್ವಲ್ಪಮಾತ್ರ ದ್ವೇಷವಿದ್ದರೂ, ಮತ್ತು ಸ್ವಲ್ಪದಿವಸದಲ್ಲಿ ದ್ವೇಷವು ಸಂಪೂರ್ಣವಾಗಿ ನಷ್ಟವಾಗಿ ಕೀಟವು ಸ್ನೇಹದಿಂದಲೇ ಕಣಜವನ್ನು ಸರ್ವದಾ ಚಿಂತಿಸುವುದರಿಂದ ಕಣಜದಂತೆ ಆಗುವುದು. ಇದರಂತೆ ಶ್ರೀಹರಿಯಲ್ಲಿ ಸಂಪೂರ್ಣ ಭಕ್ತಿಯಿಂದ ಚಿಂತಿಸುವುದರಿಂದಲೇ ಪರಮಾತ್ಮನ ಸಾರೂಪ್ಯವು ಪ್ರಾಪ್ತವಾಗುವುದು. ಕೀಟಕ್ಕೆ ಫಲವನ್ನು ಕೊಡುವಯೋಗ್ಯತೆಯು ಕಣಜಕ್ಕಿಲ್ಲ. ಪರಮಾತ್ಮನು ಸ್ವತಂತ್ರನಾದುದರಿಂದ ದ್ವೇಷಿಗಳಿಗೆ ಸುಖಫಲವನ್ನು ಕೊಡುವದಿಲ್ಲ. ಭಕ್ತರಿಗೆ ಮಾತ್ರವೇ ಸುಖವನ್ನು ಕೊಡುವನು. ಹಾಗಾದರೆ "ಸ್ನೇಹಾದ್ವೇಷಾದ್ಭಯಾದ್ವಾಪಿ" ಎಂಬ ಪ್ರಮಾಣದ ಗತಿಯೇನು ಅಂದರೆ, ಜೀವನು ಯೋಗ್ಯನಾಗಿದ್ದು, ದೈತ್ಯರ ಆವೇಶದಿಂದ ಕೆಲಕಾಲ ದ್ವೇಷಮಾಡುತ್ತಿದ್ದು ಸ್ವಲ್ಪದಿವಸದಮೇಲೆ ಸಂಪೂರ್ಣವಾಗಿ ದ್ವೇಷವು ನಷ್ಟನಾದರೆ ಶಿಶುಪಾಲಾದಿಗಳಿಗೆ ಆದಂತೆ ಒಳ್ಳೆಯ ಗತಿಯಾಗುವುದು. ಸ್ವಭಾವದಿಂದಲೂ ದ್ವೇಷಿಗಳಿಗೆ ಪರಮಾತ್ಮನಲ್ಲಿ ದ್ವೇಷವಿದ್ದರೂ ಸರ್ವದಾ ಕೀಟದಂತೆ ಪರಮಾತ್ಮನ ಚಿಂತನಾವಿಶೇಷವು ಇರುವುದಿಲ್ಲ. ಆದ್ದರಿಂದಲೇ ಭಾಗವತ ಸಪ್ತಮಸ್ಕಂಧದಲ್ಲಿ "ಗೋಪ್ಯಃಕಾಮಾದ್ಭಯಾತ್ಕಂಸೋ ದ್ವೇಷಾಚ್ಚೈದ್ಯಾದಯೋನೃಪಾಃ ॥ ಸಂಬಂಧಾದ್ವೃಷ್ಣಯಃ ಸ್ನೇಹಾದ್ಯೂಯಂ ಭಕ್ತ್ಯಾವಯಂವಿಭೋ। ಕತಮೋಽಪಿ ನವೇನಸ್ಯ ಪಂಚಾನಾಂ ಪೂರುಷಂಪ್ರತಿ" ಗೋಪಿಕಾಸ್ತ್ರೀಯರು ಕಾಮಸಹಿತವಾದ ಭಕ್ತಿಯನ್ನೂ, ಕಂಸನು ಭಯದಿಂದಕೂಡಿದ ಭಕ್ತಿಯನ್ನೂ, ದ್ವೇಷದಿಂದಕೂಡಿದ ಭಕ್ತಿಯನ್ನು ಚೈದ್ಯಾದಿಗಳೂ, ಸಂಬಂಧದಿಂದ ವೃಷ್ಣಿಗಳೂ, ಸ್ನೇಹದಿಂದ ನೀವು (ಪಾಂಡವರು) ಭಕ್ತಿಯಿಂದ ನಾವು ಭಕ್ತಿಮಾಡಿರುವೆವು. ವೇನಾಸುರನು ಬರೇದ್ವೇಷವನ್ನು ಮಾತ್ರ ಮಾಡಿರುವನು. ಆದ್ದರಿಂದಲೇ ವೇನಾಸುರನಿಗೆ ಒಳ್ಳೆಯಗತಿ ಆಗಲಿಲ್ಲ. ಶಿಶುಪಾಲನು ಯೋಗ್ಯಜೀವನು. ಅವನೊಳಗಿದ್ದ ದೈತ್ಯನಸಹವಾಸದಿಂದ ದ್ವೇಷಮಾಡಿದನು.

ಅದು ನಿವೃತ್ತಿಯಾಗಲು ಭಕ್ತಿಯೇ ವೃದ್ಧಿಯಾಯಿತು. ಆದ್ದರಿಂದಲೇ ಪರಮಾತ್ಮನನ್ನು ಹೊಂದಿದನೆಂದು ನಾರದರು ಧರ್ಮರಾಜನಿಗೆ ಹೇಳಿರು ವುದಾಗಿ ಮೇಲಿನ ಶ್ಲೋಕಾರ್ಥ. ಇದರಿಂದ, ದ್ವೇಷಿಗಳು ಎಂದಿಗೂ ಸರ್ವದಾ ಧ್ಯಾನಮಾಡುವುದಿಲ್ಲ. ಆದ್ದರಿಂದ ಅವರಿಗೆ ಸಾರೂಪ್ಯವು ಬರಲು ಕಾರಣವಿಲ್ಲ. ಯೋಗ್ಯಜೀವರು ಶಾಪಾದಿಕಾರಣದಿಂದ ಅಸುರಾವೇಶದಿಂದ ಹುಟ್ಟಿದವರು ಮಾತ್ರವೇ ದ್ವೇಷಾದಿಗಳನ್ನು ನಿಮಿತ್ತಮಾತ್ರದಲ್ಲಿಟ್ಟುಕೊಂಡು ಸರ್ವದಾ ಚಿಂತಿಸುತ್ತಿರುವರು. ಅವರಿಗೆ ಒಳ್ಳೆಯಗತಿಯಾಗುವದೆಂದು ತಾತ್ಪರ್ಯ || ೩೦ ||

**ಈಪರಿಯ ದೇಹದೊಳು ಭಗವ |**
**ದ್ರೂಪಗಳು ಮರಿಯದಲೆ ಮನದಿಪ |**
**ದೇಪದೇ ಭಕುತಿಯಲಿ ಸ್ಮರಿಸುತಲಿಪ್ಪ ಭಕುತರನ ||**
**ಗೋಪತಿ ಜಗನ್ನಾಥವಿಠ್ಠಲ ಸ |**
**ಮೀಪಗನು ತಾನಾಗಿಸಂತತ |**
**ಸಾಪರೋಕ್ಷೆಯ ಮಾಡಿ ಪೊರೆವನು ಎಲ್ಲಕಾಲದಲಿ || ೩೧ ||**

ಪದ್ಯಾರ್ಥ :—ಈಪರಿಯ ದೇಹದಲಿ=ಮೇಲೆಹೇಳಿದ ಅನೇಕ ಭಗವ ದ್ರೂಪಗಳಿಂದ ಕೂಡಿದ ದೇಹದೊಳಗೆ, ಭಗವದ್ರೂಪಗಳು=ಭಗವದ್ರೂಪ ಗಳನ್ನು, ಮರಿಯದಲೆ, ಮನದಿ=ಮನಸ್ಸಿನಲ್ಲಿ, ಪದೇಪದೇ=ಹೆಚ್ಚಿಹೆಚ್ಚಿಗೆ (ಅಗಿಂದಾಗ್ಯೆ) ಭಕುತಿಯಲಿ, ಸ್ಮರಿಸುತಲಿಪ್ಪ=ಸ್ಮರಣೆ ಮಾಡುತ್ತಲಿರುವ, ಭಕತರನ=ಭಕ್ತರನ್ನು, ಗೋಪತಿ=ಲೋಕೇಶನಾದ, ಅಥವಾ ಭೂರಕ್ಷಕ ನಾದ, ಜಗನ್ನಾಥ ವಿಠ್ಠಲ=(ದಾಸರಾಯರ ಅಂಕಿತಭೂತನಾದ) ಜಗನ್ನಾಥ ವಿಠ್ಠಲನು, ಸಮೀಪಗನು ತಾನಾಗಿ=ತಾನು ಅವರ ಸಮೀಪದಲ್ಲಿದ್ದು, ಸಂತತ=ಸರ್ವಕಾಲದಲ್ಲೂ, ಸಾಪರೋಕ್ಷೆಯಮಾಡಿ=ಅಪರೋಕ್ಷ ಉಳ್ಳವ ರನ್ನಾಗಿ ಮಾಡಿ (ಅಪರೋಕ್ಷದಲ್ಲಿ ತಾನು ಕಾಣಿಸಿಕೊಳ್ಳುತ್ತಾ) ಎಲ್ಲ ಕಾಲದಲಿ =ಸರ್ವ ಕಾಲಗಳಲ್ಲೂ, ಪೊರೆವ=ರಕ್ಷಿಸುವನು.

ತಾತ್ಪರ್ಯ :—ಸಂಧಿಯನ್ನು ಮುಗಿಸುತ್ತಾ ಧ್ಯಾನಮಾಡುವವರಿಗಾ **ಗುವ ಫಲವನ್ನು ಹೇಳುತ್ತಾರೆ :—**

ಈ ಪ್ರಕಾರ ಸಂಧಿಯಲ್ಲಿ ಹೇಳಿದಂತೆ ನಮ್ಮ ದೇಹದೊಳಗೆ ಇರುವ ಭಗವದ್ರೂಪಗಳನ್ನು ತಿಳಿದು ಕ್ಷಣಬಿಡದೆ ಅವಿಚ್ಛಿನ್ನ ಭಕ್ತಿಯಿಂದ ಸ್ಮರಣೆಮಾಡುತ್ತಿರುವ ಭಕ್ತರಿಗೆ ಶ್ರೀ ಜಗನ್ನಾಥ ವಿಠ್ಠಲಾಂಕಿತ ಗೋಪತಿಯು, ಗೋ ಅಂದರೆ ಭೂಮಿಗೆ ಹೆಸರು. ಭೂಮಿಯನ್ನು ರಕ್ಷಿಸಿದುದರಿಂದ ಶ್ರೀಪತಿಯೆಂದು ಆಯಿತು. ಅಥವಾ ಗೋ ಅಂದರೆ ವೇದಾತ್ಮಿಕರಾದ ದುರ್ಗಾದೇವಿಯರು ಅವರಿಗೆ ಪತಿಯಾದುದರಿಂದ ಗೋಪತಿಯೆಂದು ಹೆಸರು. ಇಂತಹಾ ಪರಮಾತ್ಮನು ಇವರ ಹೃದಯಾಕಾಶದಲ್ಲಿ ನಿಂತು ಅಪರೋಕ್ಷದಲ್ಲಿ ಗೋಚರನಾಗಿ ಸರ್ವದಾ ರಕ್ಷಿಸುವನು.

(ಒಂಭತ್ತನೆಯ ಸಂಧಿಯ ವ್ಯಾಖ್ಯಾನವು ಮುಗಿದುದು)



# ೧೦ ನೆಯ ಸಂಧಿ.

## ಸರ್ವ ಪ್ರತೀಕ ಸಂಧಿ.

**ಆವಪರ ಬೊಮ್ಮನತಿ ವಿಮಲಾಂ**
**ಗಾವಬದ್ಧರು ಯೆಂದೆನಿಪರಾ**
**ಜೀವಭವವೊದಲಾದವುರರನುದಿನದಿ ಹರಿಪದವಾ ||**
**ಸೇವಿಪರಿಗನು ಕೂಲರಲ್ಲದೆ**
**ತಾವು ಇವರನು ಕೆಡಿಸಬಲ್ಲರೆ**
**ಶ್ರೀವಿಲಾಸಾಸ್ಪದನ ದಾಸರಿಗುಂಟೆ ಅಪಜಯವು || ೧ ||**

ಪದ್ಯಾರ್ಥ :—ಆವಪರಬೊಮ್ಮನ = ಯಾವ ಶ್ರೀಪರಬ್ರಹ್ಮನ, ಅತಿ ವಿಮಲವಾದ, ಅಂಗಾವಬದ್ಧರು=ಅಂಗವನ್ನು ಆಶ್ರಯಿಸಿಕೊಂಡಿರುವವರು, ಎಂದೆನಿಪ=ಎಂದೆನಿಸಿಕೊಂಡಿರುವ, ರಾಜೀಭವ ಮೊದಲಾದ=ಬಹ್ಮದೇವರು ಮೊದಲಾದ, ಅಮರರು=ದೇವತೆಗಳು, ಅನುದಿನದಿ=ಪ್ರತಿದಿವಸದಲ್ಲಿಯೂ, ಹರಿಪದವ=ಪರಮಾತ್ಮನ ಪಾದಾಂಬುಜವನ್ನು, ಸೇವಿಪರಿಗೆ=ಸೇವೆಮಾಡುವವರಿಗೆ, ಅನುಕೂಲರಲ್ಲದೆ=ಅನುಕೂಲರಾಗಿರುವರಲ್ಲದೆ, ತಾವು=ಬ್ರಹ್ಮಾದಿ ತತ್ವೇಶರು, ಇವರನ=ಈ ಭಕ್ತರನ್ನು, ಕೆಡಿಸಬಲ್ಲರೆ=ಕೆಡಿಸುವರೆ, ಶ್ರೀವಿಲಾಸಾಸ್ಪದನ=ಲಕ್ಷ್ಮೀದೇವಿಯರ ವಿಲಾಸಕ್ಕೆ ಪಾತ್ರನಾದ ಪರಮಾತ್ಮನ, ದಾಸರಿಗೆ, ಅಪಜಯುವುವುಂಟೇನು, ಎಂದಿಗೂ ಇಲ್ಲ.

ತಾತ್ಪರ್ಯ :—ಪೂರ್ವಸಂಧಿಯಲ್ಲಿ ಜೀವನ ಲಕ್ಷಣವನ್ನು ಸ್ವರೂಪ ದೇಹ, ಲಿಂಗದೇಹ, ಅನಿರುದ್ಧಾದಿ ದೇಹಗಳಲ್ಲಿರುವ ಭಗವದ್ರೂಪಗಳನ್ನು ಹೇಳಿದರು. ಈ ಸಂಧಿಯಲ್ಲಿ ಯಾವಯಾವ ಸ್ಥಳದಲ್ಲಿ ಯಾವಯಾವ ರೀತಿಯಾಗಿ ಭಗವಂತನನ್ನು ಚಿಂತಿಸಬೇಕೆಂಬ ವಿಷಯುವನ್ನು ತಿಳಿಸುವುದಕ್ಕಾಗಿ ಸರ್ವಪ್ರತೀಕ ಅಂದರೆ ಸರ್ವತ್ರ ಚಿಂತಿಸಬೇಕಾದ ಪರಮಾತ್ಮನ ಪ್ರತಿಮಾಸ್ಥಾನ ವೆಂದರ್ಥ ಅಂತಹ ಸಂಧಿಯುನ್ನು ಉಪಕ್ರಮ ಮಾಡುತ್ತಾರೆ. ಅದರಲ್ಲಿ ಮೊದಲನೆಯ ಪದ್ಯದಿಂದ ಭಗವದ್ದಾಸರಿಗೆ ಎಂದಿಗೂ ಪರಾಭವ ವಿಲ್ಲವೆಂದು ಸಂಧಿಯ ಮುಖ್ಯವಾದ ಸಾರಾಂಶವನ್ನು ಹೇಳುತ್ತಾರೆ.

ಶ್ರೀಪರಬ್ರಹ್ಮನ, ಅತಿವಿಮಲವಾದ ಅಂಗಗಳನ್ನು ಆಶ್ರಯಿಸಿ ಕೊಂಡಿರುವುದರಿಂದ ಅಂಗಾವಬದ್ಧರೆಂದು ಬ್ರಹ್ಮಾದಿ ತತ್ವೇಶರಿಗೆ ಹೆಸರು.

ಇಂತಹ ಪರಮಾತ್ಮನ ನಾಭಿಕಮಲದಿಂದ ಜನಿಸಿದ ಬ್ರಹ್ಮದೇವರು ಮೊದ ಲಾದ ದೇವತೆಗಳು, ಪ್ರತಿದಿವಸ ಶ್ರೀಪರಮಾತ್ಮನ ಸೇವೆಯನ್ನೇ ಮಾಡಿಕೊಂ ಡಿರುವ ಭಕ್ತರಿಗೆ ವಿರೋಧವನ್ನು ಎಂದಿಗೂ ಮಾಡುವುದಿಲ್ಲ. ತತ್ವಾಭಿಮಾನಿ ಗಳು ಭಕ್ತಜನರ ಭಕ್ತಿಯನ್ನು ವೃದ್ಧಿಗೊಳಿಸಿ ಸುಖಸಾಧನವನ್ನೇ ಮಾಡಿಸು ವರು. ರಮಾವಿಲಾಸಾಸ್ಪದನಾದ ಶ್ರೀಪರಮಾತ್ಮನ ದಾಸರಿಗೂಕೂಡ ಅಪ ಜಯ ಉಂಟೆ? ಎಂದಿಗೂಇಲ್ಲ. ಹಾಗಾದರೆ ಪಾಂಡವಾದಿಗಳು ಕಷ್ಟಪಟ್ಟ ದ್ದಾಗಿ ಭಾರತಾದಿಗಳಲ್ಲಿ ಹೇಳುವದೆಲ್ಲವೂ ಸುಳ್ಳೆ? ಅಂದರೆ " ತೇಷಾಂ ದುಃಖಾದಿಕಂ ಕಿಂಚಿ ದಸುರಾವೇಶತೋಭವೇತ್ ' ಎಂಬ ಭಾಗವತ ತಾತ್ಪ ರ್ಯಾನುಸಾರ ಪ್ರಾರಬ್ಧಕರ್ಮಾನುಸಾರವಾಗಿ ಕೆಲವು ಭಕ್ತರಿಗೆ ಆಗಾಗ್ಯೆ ದುಃಖಬಂದರೂ ಅದನ್ನು ಅವರೊಳಗಿರುವ ದೈತ್ಯರೇ ಅನುಭವಿ ಸುವರು. ಭಕ್ತರ ಜೀವಕ್ಕೆ ಆಗಾಮಿಸಂಚಿತಾದಿಗಳಿಂದ ಕಿಂಚಿದ್ದುಃಖ ಸಂಭವಿಸಿದರೂ ಅದು ನಶ್ವರವಾದುದರಿಂದ ಮುಕ್ತಿಗೆ ಪ್ರತಿಬಂಧಕವಲ್ಲ. ಮುಖ್ಯ ಭಗವದ್ದಾಸರನ್ನು ಕೆಡಿಸುವದಿಲ್ಲವೆಂದರೆ ಮುಕ್ತಿಗೆ ಪ್ರತಿಬಂಧಕ ವಾದ ಪಾಪವನ್ನು ಮಾಡಿಸುವದಿಲ್ಲ. ಇಂದ್ರಾದಿಗಳಿಗೆ ಅಹಲ್ಯಾ ಜಾರ ತ್ವಾದಿಗಳು ಸಂಭವಿಸಿದರೂ ಹೇಗೆ ಮುಕ್ತಿಗೆ ಪ್ರತಿಬಂಧಕವಾಗಲಿಲ್ಲವೋ ಹಾಗೆ ಭಗವದ್ದಾಸರಿಗೆ ಈ ಲೋಕದಲ್ಲಿ ಕೆಲವು ದುಃಖವು ಕರ್ಮಾನುಸಾರ ವಾಗಿ ಕಂಡು ಬಂದರೂ ಅದರಿಂದ ಮುಕ್ತಿಗೆ ಲೇಶವಾದರೂ ಪ್ರತಿಬಂಧಕ ವಿಲ್ಲವೆಂಬುದೇ ಈ ಪದ್ಯದ ತಾತ್ಪರ್ಯ.

**ಶ್ರೀದನಂಘ್ರಿ ಸರೋಜಯುಗಳೇ**<br>
**ಕಾದಶಸ್ಥಾನಾತ್ಮದೊಳಗಿ**<br>
**ಟ್ಟಾದರದಿ ಸಂತುತಿಸುವವರಿಗೆ ಈನವಗ್ರಹವು ॥**<br>
**ಆದಿತೇಯರು ಸಂತತಾಧಿ**<br>
**ವ್ಯಾಧಿಗಳ ಪರಿಹರಿಸುತವರನ**<br>
**ಕಾದುಕೊಂಡಿಹರೆಲ್ಲ ರೊಂದಾಗೀಶನಾಜ್ಞೆಯಲಿ ॥ ೨ ॥**

ಪದ್ಯಾರ್ಥ :—ಶ್ರೀದನ = ಜ್ಞಾನವನ್ನು ಮತ್ತು ಐಶ್ವರ್ಯವನ್ನು ಕೊಡುವ ಶ್ರೀಪರಮಾತ್ಮನ, ಅಂಘ್ರಿ=ಪಾದಗಳೆಂಬ, ಸರೋಜ=ಕಮಲ ಗಳ, ಯುಗಳ = ದ್ವಂದ್ವವನ್ನು, ಏಕಾದಶಸ್ಥಾನ = ೧೧ನೆಯ ಇಂದ್ರಿಯ ವಾದ, ಆತ್ಮದೊಳಗೆ=ಮನಸ್ಸಿನೊಳಗೆ, ಇಟ್ಟು, ಆದರದಿ, ಸಂತುತಿಸುವ=

ಚೆನ್ನಾಗಿ ಸ್ತೋತ್ರಮಾಡುವ, ಭಕ್ತರಿಗೆ, ಈನವಗ್ರಹವು=ನವಗ್ರಹವೆಂದೆನಿಸುವ, ಆದಿತೇಯರು=ದೇವತೆಗಳು, ಅಥವಾ, ನವಗ್ರಹವು=ಚಂದ್ರಸೂರ್ಯಾದಿ ನವಗ್ರಹಗಳು, ಆದಿತೇಯರು=ತತ್ವಾಭಿಮಾನಿ ದೇವತೆಗಳು, ಯಲ್ಲರೊಂದಾಗಿ =ಇವರೆಲ್ಲರೂ ಒಂದಾಗಿಕೂಡಿ (ಒಂದೇ ಮನಸ್ಸುಳ್ಳವರಾಗಿ), ಈಶನ=ಪರಮಾತ್ಮನ, ಆಜ್ಞೆಯಲಿ=ಅಪ್ಪಣೇಮೇರಿಗೆ, ಸಂತತ=ಸರ್ವಕಾಲಗಳಲ್ಲಿ, ಆಧಿ =ಮನೋವ್ಯಾಧಿ, ವ್ಯಾಧಿಗಳ=ರೋಗಾದಿಗಳು ಇವುಗಳನ್ನು, ಪರಿಹರಿಸುತ ಅವರನ=ಆಭಕ್ತರನ್ನು, ಕಾದುಕೊಂಡಿಹರು=ಕಾದುಕೊಂಡಿರುವರು.

ತಾತ್ಪರ್ಯ :—ಪರಮಾತ್ಮನ ಭಕ್ತರಿಗೆ ಸೂರ್ಯಾಂಗಾರಕ ಶನಿ ಮೊದಲಾದ ನವಗ್ರಹ ದೇವತೆಗಳೂ ಕೂಡ ಸಹಾಯಕರಾಗಿರುವರೆಂದು ಹೇಳುತ್ತಾರೆ.—

ಜ್ಞಾನೈಶ್ವರ್ಯಗಳನ್ನು ಭಕ್ತರಿಗೆ ಕೊಡುವ ಪರಮಾತ್ಮನ ಪಾದ ಕಮಲವನ್ನು ಮನಸ್ಸಿನಲ್ಲಿಟ್ಟು ಸರ್ವದಾ ಭಜಿಸುತ್ತಿರುವ ಭಕ್ತರಿಗೆ ನವಗ್ರಹ ದೇವತೆಗಳ ಸಂಚಾರದಿಂದ "ದ್ವಾದಶಾಷ್ಟಮ ಜನ್ಮಸ್ಥಾಃ ಶನ್ಯರ್ಕಾಂಗಾರಕೋಗುರುಃ | ಕುರ್ವಂತಿ ಪ್ರಾಣಸಂದೇಹಂ ಸ್ಥಾನಭ್ರಷ್ಟಂ ಧನಕ್ಷಯಂ' ಶನಿ, ಸೂರ್ಯ, ಅಂಗಾರಕ, ಗುರು ಇವರುಗಳು ಯಾವನ ಜನ್ಮ ರಾಶಿಯಿಂದ ೧೨, ೮, ನೆ ಸ್ಥಾನಗಳಿಗೆ ಬರುವರೋ ಅವನಿಗೆ, ಪ್ರಾಣಸಂಶಯುವನ್ನುಂಟು ಮಾಡುವರು. ಮತ್ತೂ ಸ್ಥಾನಭ್ರಷ್ಟನನ್ನಾಗಿ ಮಾಡಿಸುವರು. ಧನಕ್ಷಯುವನ್ನು ಮಾಡಿಸುವರು ಎಂಬ ಜ್ಯೋತಿಷ ಶಾಸ್ತ್ರದಂತೆ ಆಗುವ ದುಃಖಗಳು ಆಧಿಗಳು, ವ್ಯಾಧಿಗಳು ಇವುಗಳನ್ನು ಪರಿಹರಿಸಿ, ಭಗವದಾಜ್ಞಾ ಪ್ರಕಾರ ಅವರನ್ನು ರಕ್ಷಿಸುವರು.

**ಮೇದಿನಿಯು ಮೇಲುಳ್ಳ ಗೋಷ್ಪಾ**
**ದೋದಕಗಳೆಲ್ಲ ಮಲತೀರ್ಥವು**
**ಪಾದಪಾದ್ರಿಧರಾತಳವೇ ಸುಕ್ಷೇತ್ರ ಜೀವಗಣ ||**
**ಶ್ರೀದನ ಪ್ರತಿಮೆಗಳವರುಂ**
**ಬೋದನನೇ ನೈವೇದ್ಯ ನಿತ್ಯದಿ**
**ಹಾದಿನಡವದೇ ನರ್ತನಗಳೆಂದರಿತವನೆಯೋಗೀ || ೩ ||**

ಪದ್ಯಾರ್ಥ :—ಮೇದಿನಿಯು ಮೇಲುಳ್ಳ=ಭೂಮಿಯು ಮೇಲಿರುವ, ಗೋಷ್ಪಾದೋದಕಗಳೆಲ್ಲ = ಗೋವಿನ ಹೆಜ್ಜೆಯಲ್ಲಿ ನಿಂತಿರುವ ನೀರು

ಮೊದಲು ಬಾವಿ, ಕೆರೆ ಮೊದಲಾದ ಎಲ್ಲಾ ಜಲಾಶಯುಗಳು, ಅಮಲ ತೀರ್ಥವು=ನಿಷ್ಕಲ್ಮಷವಾದ ತೀರ್ಥವೆಂತಲೂ, ಪಾದಪ=ವೃಕ್ಷಗಳು, ಅದ್ರಿ =ಪರ್ವತಗಳು, ಧರಾತಳವೆ=ಭೂಮಿ ಇವುಗಳೆಲ್ಲವೂ, ಸುಕ್ಷೇತ್ರ=ಉತ್ತಮವಾದ ಕ್ಷೇತ್ರಗಳೆಂತಲೂ, ಜೀವಗಣ=ಸಮಸ್ತ ಜೀವಗಣಗಳೂ, ಶ್ರೀದನ=ಜ್ಞಾನೈಶ್ವರ್ಯ ಪ್ರದನಾದ ಶ್ರೀಹರಿಯ ಪ್ರತಿಮೆಗಳೆಂತಲೂ, ಅವರುಂಬ=ಅವರು ಭೋಜನ ಮಾಡುವ, ಓದನವೆ=ಅನ್ನವೆ, ನೈವೇದ್ಯ, ನಿತ್ಯದಿಹಾದಿನಡಿವದೆ, ನರ್ತನಗಳು ಎಂದರಿತವನೆ = ಎಂದು ತಿಳಿದವನೆ, ಯೋಗೀ=ಜ್ಞಾನಿಯು.

ತಾತ್ಪರ್ಯ :—ಸಕಲವೂ ಪರಮಾತ್ಮನ ಅಧಿಷ್ಠಾನವೆಂದು ತಿಳಿದು ಉಪಾಸನೆ ಮಾಡುವವರಿಗೆ ಅವುಗಳೆಲ್ಲವೂ ತೀರ್ಥಗಳಾಗಿಯೂ, ಕ್ಷೇತ್ರಗಳಾಗಿಯೂ, ಪ್ರತಿಮೆಗಳಾಗಿಯೂ ಪರಿಣಮಿಸುವುವು. ಹೀಗೆ ಉಪಾಸನೆ ಮಾಡುವುದಕ್ಕೆ ವ್ಯಾಪ್ತ್ಯೋಪಾಸನೆಯೆಂದು ಹೆಸರು. ಅಧಿಕಾರಿಗಳನ್ನನುಸರಿಸಿ ಇಂತಹ ವ್ಯಾಪ್ತ್ಯೋಪಾಸನೆಯ ಕ್ರಮವನ್ನು ಹೇಳುತ್ತಾರೆ.

ಸಾಮಾನ್ಯವಾಗಿ ಭೂಮಿಯಲ್ಲಿ ಹಸುವಿನ ಹೆಜ್ಜೆಯಲ್ಲಿ ನಿಂತ ನೀರು ಬಹಳ ಅಲ್ಪವಾಗಿರುವುದಷ್ಟೆ ? ಅಷ್ಟು ಮೊದಲು ಕೆರೆ ಭಾವಿ ಮೊದಲಾದ ಸಕಲ ಉದಕಾಶ್ರಯವು ನಿಷ್ಕಲ್ಮಷವಾದ ತೀರ್ಥಗಳೆಂತಲೂ, ವೃಕ್ಷಗಳು, ಪರ್ವತಗಳು, ಭೂಮಿ ಮೊದಲಾದ ಸಕಲವೂ ಉತ್ತಮ ಕ್ಷೇತ್ರವೆಂತಲೂ, ಜೀವಗಣಗಳೆಲ್ಲವೂ ಪರಮಾತ್ಮನ ಪ್ರತಿಮೆಗಳೆಂತಲೂ, ಅವರು ಭೋಜನ ಮಾಡುವ ಅನ್ನಾದಿಗಳೇ ನೈವೇದ್ಯವೆಂತಲೂ, ನಿತ್ಯದಲ್ಲಿ ಹಾದಿನಡೆಯುವುದೇ ನರ್ತನವೆಂತಲೂ ಯಾವ ಮಹನೀಯರು ತಿಳಿಯುವರೋ ಅವರು ಸಾಮಾನ್ಯರಲ್ಲ. ಅವರನ್ನೇ ಮಹಾ ಯೋಗಿಗಳೆಂದು ಹೇಳಬೇಕು.

**ಸರ್ವದೇಶವು ಪುಣ್ಯದೇಶವು**
**ಸರ್ವಕಾಲವು ಪರ್ವಕಾಲವು**
**ಸರ್ವಜೀವರು ದಾನಪಾತ್ರರು ಮೂರುಲೋಕದೊಳು ||**
**ಸರ್ವಮಾತುಗಳೆಲ್ಲ ಮಂತ್ರವು**
**ಸರ್ವಕೆಲಸಗಳೆಲ್ಲ ಪೂಜೆಯು**
**ಶರ್ವವಂದ್ಯನ ವಿಮಲ ಮೂರ್ತಿಧ್ಯಾನ ಉಳ್ಳವಗೆ || ೪ ||**

ಪದ್ಯಾರ್ಥ :—ಶರ್ವವಂದ್ಯನ=ರುದ್ರದೇವರಿಂದ ನಮಸ್ಕೃತನಾದ, ಶ್ರೀಪರಮಾತ್ಮನ, ವಿಮಲ=ನಿರ್ದುಷ್ಟವಾದ, ಮೂರ್ತಿ=ಮೂರ್ತಿಗಳನ್ನು, ಧ್ಯಾನಉಳ್ಳವಗೆ=ಸರ್ವತ್ರ ಚಿಂತಿಸುವ ವ್ಯಾಪ್ತ್ಯೋಪಾಸಕರಿಗೆ, ಸರ್ವದೇಶವು ಪುಣ್ಯದೇಶವು; ಸರ್ವಕಾಲವು ಪರ್ವಕಾಲವು; ಮೂರುಲೋಕದೊಳು=ಮೂರುಲೋಕದಲ್ಲಿರುವ ಸರ್ವಜೀವರು ದಾನಪಾತ್ರರು; ಸರ್ವಮಾತುಗಳು=ಆಡುವ ಎಲ್ಲಾಮಾತುಗಳೂ, ಎಲ್ಲಮಂತ್ರವು=ಜಪಿಸಬೇಕಾದದು ಎಷ್ಟು ಮಂತ್ರಗಳುಂಟೋ ಅವೆಲ್ಲವೆಂದು ತಿಳಿಯಬೇಕು, ಸರ್ವಕೆಲಸಗಳು=ಮಾಡುವ ಎಲ್ಲಾಕೆಲಸಗಳು, ಎಲ್ಲಪೂಜೆಯು=ಎಲ್ಲವಿಧವಾದ ಭಗವತ್ಪೂಜೆಯು || ೪ ||

ತಾತ್ಪರ್ಯ :—ಮೇಲಿನಪದ್ಯದಲ್ಲಿ ಹೇಳಿದುದನ್ನೇ ವಿವರಿಸುತ್ತಾರೆ:-

ಮೇಲೆಹೇಳಿದಂತೆ ಸರ್ವತ್ರ ಇರುವ ಭಗವದ್ರೂಪವನ್ನು ಚಿಂತಿಸುತ್ತಿರುವ ವ್ಯಾಪ್ತ್ಯೋಪಾಸಕರಿಗೆ ಗಂಗಾದಿಗಳೇ ಪುಣ್ಯತೀರ್ಥಗಳೆಂತಲೂ, ಅಯೋಧ್ಯಾದಿಗಳೇ ಪುಣ್ಯಕ್ಷೇತ್ರಗಳೆಂತಲೂ, ಬ್ರಾಹ್ಮಣಾದಿಗಳೇ ದಾನಪಾತ್ರರೆಂತಲೂ, ಅಷ್ಟಾಕ್ಷರ ದ್ವಾದಶಾಕ್ಷರಗಳೇ ಜಪಿಸಲು ಯೋಗ್ಯವಾದ ಮಂತ್ರಗಳೆಂತಲೂ, ಪ್ರತಿಮಾದಿಗಳೇ ಪೂಜಾರ್ಹವೆಂತಲೂ ಅಲ್ಲ. ತಮ್ಮೊಳಗಿರುವ ಬಿಂಬಮೂರ್ತಿಯನ್ನು ಸರ್ವತ್ರ ಚಿಂತಿಸುವ ಉಪಾಸಕರಿಗೆ "ಪ್ರಣಮೇದ್ದಂಡವದ್ಭೂವಾಆಶ್ವಚಂಡಾಲಗೋಖರಂ" ಎಂಬ ಭಾಗವತ ಏಕಾದಶಸ್ಕಂದದ ವಾಕ್ಯಾನುಸಾರವಾಗಿ ಶ್ವಾನ, ಚಂಡಾಲ, ಗೋವು, ಕತ್ತೆ ಮೊದಲಾದ ಎಲ್ಲದರಲ್ಲಿಯು ಇರುವ ಭಗವದ್ರೂಪಗಳಿಗೆ ಪರಸ್ಪರ ಭೇದವಿಲ್ಲವೆಂದು ಉಪಾಸನೆ ಮಾಡಬೇಕೆಂದು ಸಿದ್ಧವಾಗುವುದು. ಆದರೆ ಈ ಅಧಿಕಾರವು ಸರ್ವಸಾಮಾನ್ಯವಲ್ಲ. "ಪ್ರತಿಮಾಸ್ವ ಪ್ರಬುದ್ಧಾನಾಂ ಸರ್ವತ್ರವಿದಿತಾತ್ಮನಾಂ" ಎಂಬ ಆಚಾರ್ಯರ ವಾಕ್ಯಾನುಸಾರ ಅಪ್ರಬುದ್ಧರು ಅಂದರೆ ಸರ್ವತ್ರ ಇರುವ ಭಗವದ್ರೂಪವನ್ನು ಸಮುತ್ಸೇನತಿಳಿಯುವ ಯೋಗ್ಯತೆ ಇಲ್ಲದವರೆಂದರ್ಥ. ಇಂತಹವರು ಪ್ರತಿಮೆಯಲ್ಲಿಯೇ ಪೂಜೆಮಾಡಬೇಕು. ಆ ಜ್ಞಾನ ಉಳ್ಳವರು ಯಾರೋ ಅವರು ಸರ್ವತ್ರ ಉಪಾಸನೆ ಮಾಡಬಹುದು. ಮತ್ತು ಭಾಗವತ ಏಕಾದಶ ಸ್ಕಂಧ "ಯಾವತ್ಸರ್ವೇಷು ಭೂತೇಷು ಮದ್ಭಾವೋನೋಪಜಾಯತೆ || ತಾವದೇವ ಮುಪಾಸೀತ" ಎಂಬ ಶ್ರೀಕೃಷ್ಣವಾಕ್ಯದಿಂದ ಯಾವರಿವಿಗೂ ಸರ್ವತ್ರ ಇರುವ ನನ್ನರೂಪದಲ್ಲಿ ಅಭೇದಜ್ಞಾನ ಹುಟ್ಟುವುದಿಲ್ಲವೋ ಅವ

ರಿಗೂ ಪ್ರತಿಮಾದಿಗಳಲ್ಲಿ ಪೂಜೆಮಾಡಬೇಕೆಂದು ಹೇಳಿರುವರು. ಆದರೆ ಈ ಉಪಾಸನೆ ಏನೂ ಕಷ್ಟವಲ್ಲ. ಹೇಗೆಂದರೆ:—

ಪರಮಾತ್ಮನು ಸರ್ವತ್ರ ಇದ್ದೇ ಇರುವನು. ಭಗವದ್ರೂಪಗಳಿಗೆ ಪರಸ್ಪರ ಭೇದವಿಲ್ಲ. ಜೀವಜಡರಿಂದ ಮಾತ್ರ ಪರಮಾತ್ಮಭಿನ್ನನೆಂಬ ಇಷ್ಟುಮಾತ್ರ ಜ್ಞಾನ ಸ್ವಲ್ಪವಟ್ಟಿಗೆ ಶಾಸ್ತ್ರ ಓದಿದವರು ತಿಳಿದೇಇರುವರು. ಇಷ್ಟುಮಾತ್ರದಿಂದಲೇ ಸರ್ವತ್ರವ್ಯಾಪ್ತೋಪಾಸನ ಮಾಡುತ್ತೇವೆಂದು ಯಾತ್ರೆಗಳನ್ನು, ಪೂಜಾದಿಗಳನ್ನು, ಜಪಗಳನ್ನು ಬಿಟ್ಟುಬಿಡಬೇಕೆಂಬ ಅರ್ಥವಲ್ಲ. ತಿಳಿಯುವುದೆಂದರೇನು! ಬರೀ ತಿಳಿಯುವುದೇ ಅಲ್ಲ! ಅನುಷ್ಠಾನಕ್ಕೆ ತರಬೇಕು. ಹುಲಿಯನ್ನು ಕಂಡರೂ, ಹಾವನ್ನು ಕಂಡರೂ, ನಮ್ಮಲ್ಲಿರುವ ಭಗವದ್ರೂಪಕ್ಕೂ, ಪ್ರತಿಮಾದಿಗಳಲ್ಲಿರುವ ಭಗವದ್ರೂಪಕ್ಕೂ, ಹುಲಿ ಮೊದಲಾದವುಗಳಲ್ಲಿರುವ ಭಗವದ್ರೂಪಕ್ಕೂ ಪರಸ್ಪರ ಭೇದವಿಲ್ಲವೆಂದು ನಿಶ್ಚಯ ಜ್ಞಾನವಾದರೆ ಪ್ರತಿಮಾದಿಗಳಲ್ಲಿ ನಮಗೆ ಎಷ್ಟು ವಿಶ್ವಾಸವಿರುವುದೊ, ತಿರುಪತಿ ಮೊದಲಾದ ಕ್ಷೇತ್ರದಲ್ಲಿ ಶ್ರೀನಿವಾಸ ಮೊದಲಾದ ಪ್ರತಿಮೆಯಲ್ಲಿ ಹೇಗೆ ನಿರ್ಭೀತಿಯಿಂದಿರುವೆವೋ, ನಮ್ಮ ದೇಹದಿಂದ ನಮಗೆ ಹೇಗೆ ಭಯವಿಲ್ಲವೋ, ಮತ್ತು ಪ್ರೀತಿ ಹೆಚ್ಚಾಗಿರುವುದೋ, ಹಾಗೆ ಹುಲಿಯಲ್ಲಿಯೂ ನಮ್ಮಲ್ಲಿಯೂ ಇರುವವನು ಒಬ್ಬನಾದಮೇಲೆ ಆ ಹುಲಿಯು ನಮ್ಮನ್ನೇನು ಮಾಡುವುದು? ನಾನೇಕೆ ಅವುಗಳನ್ನುಕಂಡು ಹೆದರಬೇಕು? ಇಂತಹ ಜ್ಞಾನವು ಸಂಪೂರ್ಣವಾಗಿ ಅದನ್ನು ಅನುಷ್ಠಾನಕ್ಕೆ ತಂದು ಯಾವಪ್ರಾಣಿಗಳನ್ನು ಕಂಡರೂ ಅಸಹ್ಯಗೊಳ್ಳದಂತೆಯೂ, ಭಯಪಡದಂತೆಯೂ, ಮನಸ್ಸು ಸ್ಥಿರವಾದರೆ ಆಗ ವ್ಯಾಪ್ತ್ಯೋಪಾಸನೆಯ ಅಧಿಕಾರವು ಬಂದಿದೆ ಎಂದು ತಾತ್ಪರ್ಯ. ಇಂತಹ ಜ್ಞಾನವು ಯಾರಿಗೆ ಇರುವುದೋ ಅವರಿಗೆ ಎಲ್ಲಾದೇಶವು ಪುಣ್ಯದೇಶವೇ; ಎಲ್ಲಕಾಲವೂ ಪರ್ವಕಾಲವೇ; ಸಕಲ ಪ್ರಾಣಿಗಳೂ ಪಾತ್ರರೆ; ಎಲ್ಲಮಾತುಗಳೂ ಮಂತ್ರವೇ; ಮಾಡುವಕೆಲಸಗಳೆಲ್ಲವೂ ಭಗವತ್ಪೂಜೆಯೇ ಆಗುವುದೆಂದು ಈ ಪದ್ಯದ ತಾತ್ಪರ್ಯ ॥ ೪ ॥

**ದೇವಖಾತ ತಟಾಕವಾಪಿಸ**
**ರೋವರಗಳಭಿಮಾನಿ ಸುರರುಕ**
**ಳೇವರದೊಳಗಿಹ ರೋಮಕೂಪಗಳೊಳಗೆ ತುಂಬಿಹರು ॥**

**ಆವಿಯದ್ಗಂಗಾದಿ ನದಿಗಳು**
**ಭಾವಿಸುವದೆಪ್ಪತ್ತೆರಡೆನಿಪ**
**ಸಾವಿರ ಸುನಾಡಿಗಳೊಳಗೆ ಪ್ರವಹಿಸುತಲಿಹವೆಂದು ॥ ೫ ॥**

ಪದ್ಯಾರ್ಥ:—ದೇವಖಾತ=ಡೋಣೆಗಳು, ತಟಾಕ=ಕೆರೆಗಳು, ವಾಪಿ =ಇಳಿದು ಸ್ನಾನಾದಿಗಳನ್ನು ಮಾಡಲು ಯೋಗ್ಯವಾದ ಬಾವಿಗಳು, ಸರೋವರ=ಕುಂಟೆಗಳು, ಇವುಗಳ, ಅಭಿಮಾನಿ ಸುರರು=ಅಭಿಮಾನಿ ದೇವತೆಗಳು, ಕಳೇವರದೊಳಗೆ=ಈ ಶರೀರದೊಳಗೆ, ಇಹ=ಇರುವ, ರೋಮಕೂಪಗಳೊಳಗೆ, ತುಂಬಿಹರು, ಆವಿಯದ್ಗಂಗಾದಿ ನದಿಗಳು=ಆಕಾಶಗಂಗೆಯವರೆಗೂ ಇರುವ ಪುಣ್ಯನದಿಗಳೆಲ್ಲ, ಎಪ್ಪತ್ತೆರಡೆನಿಪಸಾವಿರ ಸುನಾಡಿಗಳೊಳಗೆ=೭೨೦೦೦ ನಾಡಿಗಳಲ್ಲಿ ಪ್ರವಹಿಸುತಲಿ, ಇಹವೆಂದು=ಇರುವವೆಂದು ಭಾವಿಸುವುದು.

ತಾತ್ಪರ್ಯ :—ಈ ಶರೀರದಲ್ಲಿಯೇ ತೀರ್ಥಕ್ಷೇತ್ರಾಭಿಮಾನಿಗಳಿರುವರೆಂದು ಹೇಳುತ್ತಾರೆ:—

ಡೋಣೆ, ಕೆರೆ, ಬಾವಿ, ಕುಂಟೆ ಮೊದಲಾದುವುಗಳಿಗೆ ಅಭಿಮಾನಿದೇವತೆಗಳು ನಮ್ಮದೇಹದೊಳಗಿನ ರೋಮಕೂಪಗಳಲ್ಲಿ ವ್ಯಾಪಿಸಿಕೊಂಡಿರುವರು. ಸಾಧಾರಣ ನದೀ ಮೊದಲು ಆಕಾಶ ಗಂಗೆಯವರೆಗೂ ಇರುವ ನದಿಗಳೆಲ್ಲವು ನಮ್ಮ ಶರೀರದ ೭೨೦೦೦ ನಾಡಿಗಳಲ್ಲಿರುವವೆಂದು ಭಾವಿಸಬೇಕು. ಪರಮಾತ್ಮನ ರೋಮಕೂಪಗಳಲ್ಲಿ ಬಾವಿ ಕೆರೆ ಮೊದಲಾದುವುಗಳಭಿಮಾನಿ ದೇವತೆಗಳೂ, ಪರಮಾತ್ಮನ ವಿರಾಟರೂಪ ದೇಹದ ನಾಡಿಗಳಲ್ಲಿ ನದಿಗಳು ಪ್ರವಹಿಸುತ್ತಿರುವವು. ಆ ಪರಮಾತ್ಮನು ನಮ್ಮ ಶರೀರದಲ್ಲಿರುವುದರಿಂದ ನಮ್ಮದೇಹಗಳಲ್ಲಿಯೂ ಇವುಗಳು ಇರುವುವೆಂದು ತಾತ್ಪರ್ಯ ॥ ೫ ॥

**ಮೂರುಕೋಟಿಯುಮೇಲೆ ಶೋಭಿಪ**
**ಈರಧಿಕ ಎಪ್ಪತ್ತುಸಾವಿರ**
**ಮಾರುತಾಂತರ್ಯಾಮಿ ಮಾಧವ ಪ್ರತಿದಿವಸದಲ್ಲಿ ॥**
**ತಾರನಿಸುತಿಹನೆಂದು ತಿಳಿದಿಹ**
**ಸೂರಿಗಳಿ ದೇವತೆಗಳ ವರ**
**ಶರೀರಗಳೇ ಸುಕ್ಷೇತ್ರವವರರ್ಚನೆಯು ಹರಿಪೂಜೆ ॥ ೬ ॥**

ಪದ್ಯಾರ್ಥ :—ಮೂರುಕೋಟಿಯುಮೇಲೆ, ಈರಧಿಕ ಎಪ್ಪತ್ತು ಸಾವಿರಸಂಖ್ಯಾಗಳಿಂದ, ಶೋಭಿಪ=ಪ್ರಕಾಶಿಸುತ್ತಿರುವ, ಮಾರು ತಾಂತ

ರ್ಯಾಮಿ = ವಾಯುದೇವರ ಅಂತರ್ಯಾಮಿಯಾದ, ಮಾಧವ=ಲಕ್ಷ್ಮೀ ಪತಿಯಾದ ಶ್ರೀಪರಮಾತ್ಮನು, ಪ್ರತಿ ದಿವಸದಲ್ಲಿ, ತಾ=ತಾನು, ರಮಿಸುತಿಹನೆಂದು=ನಮ್ಮ ದೇಹದೊಳಗೆ ಸಂತೋಷದಿಂದ ವಿಹರಿಸುತ್ತಿರುವನೆಂದು, ತಿಳಿದಿಹ = ತಿಳಿದಿರುವ, ಸೂರಿಗಳೆ = ಜ್ಞಾನಿಗಳೆ, ದೇವತೆಗಳು ; ಅವರ ಶರೀರಗಳೆ ಸುಕ್ಷೇತ್ರವು, ಅವರರ್ಚನೆಯು=ಅವರ ಪೂಜೆಯೇ, ಹರಿಪೂಜೆ.

ತಾತ್ಪರ್ಯ :—ಮೇಲಿನ ಪದ್ಯದಲ್ಲಿ ಹೇಳಿದಪ್ರಕಾರ ರೋಮಕೂಪ ನಾಡಿಗಳಲ್ಲಿರುವ ನದೀ ಮೊದಲಾದವುಗಳಭಿಮಾನಿದೇವತೆಗಳಲ್ಲಿ ಮುಖ್ಯ ಪ್ರಾಣಾಂತರ್ಗತ ಪರಮಾತ್ಮನ ರೂಪಗಳನ್ನು ಚಿಂತಿಸುವವರನ್ನು ಭೂಲೋಕದಲ್ಲಿ ದೇವತೆಗಳಂತೆ ಭಾವಿಸಬೇಕೆಂದು ಹೇಳುತ್ತಾರೆ.

ಡೋಣೆ ಮೊದಲಾದುವುಗಳಭಿಮಾನಿದೇವತೆಗಳು ೩ ಕೋಟಿಯಮೇಲೆ ಇರುವರು. ೭೨ ಸಾವಿರ ನಾಡಿಗಳಲ್ಲಿ ಅಷ್ಟುನದಿಗಳ ಅಭಿಮಾನಿಗಳು ಇರುವರು. ಇವು ಇಷ್ಟರಲ್ಲಿ ಭಾರತೀರಮಣ ಮುಖ್ಯಪ್ರಾಣಾಂತರ್ಗತನಾಗಿ ಮೂರು ಕೋಟಿಯೂ, ೭೨ ಸಹಸ್ರ ರೂಪಗಳಿಂದ ರೋಮಕೂಪಗಳು, ನಾಡಿಗಳು ಇವುಗಳಲ್ಲಿ ಸಂತೋಷದಿಂದ ಪರಮಾತ್ಮನು ಕ್ರೀಡಿಸುತ್ತಿರುವನೆಂದು ತಿಳಿದವರನ್ನು ಭೂಲೋಕದಲ್ಲಿ ದೇವತೆಗಳೆಂದೇ ಭಾವಿಸಬೇಕು. ಇಂತಹಾ ಮಹಾತ್ಮರ ದೇಹಗಳೇ ಉತ್ತಮಕ್ಷೇತ್ರ. ಇವರ ಪೂಜೆಯನ್ನು ಮಾಡಿದರೆ ಹರಿಯು ತನ್ನನ್ನು ಪೂಜಿಸಿದಂತೆ ಸುಪ್ರೀತನಾಗುವನು. || ೬ ||

**ಶ್ರೀವರನಿಗಭಿಷೇಕ ವೆಂದರಿ**
**ದೀವ ಸುಂಧರೆಯೊಳಗೆ ಬಲ್ಲವ**
**ರಾವ ಜಲದಲಿಮಿಂದರೆಯು ಗಂಗಾದಿ ತೀರ್ಥಗಳು ||**
**ತಾವಲಿದು ಬಂದಲ್ಲೆ ನೆಲೆಗೊಂ**
**ಡೀವರ ಖಿಲಾರ್ಥಗಳನರಿಯದ**
**ಜೀವರ ಮರತರಂಗಿಣಿಯು ನೈದಿದರೆ ಫಲವೇನು || ೭ ||**

ಪದ್ಯಾರ್ಥ:—ಶ್ರೀವರನಿಗೆ=ನಮ್ಮ ದೇಹದಲ್ಲಿ ದೇಹಾಕಾರನಾಗಿ ತೋರುವ ಶ್ರೀಲಕ್ಷ್ಮೀಪತಿಗೆ, ಅಭಿಷೇಕವೆಂದು=ನಮ್ಮ ದೇಹವನ್ನು ತೊಳೆವುದೇ (ನಾವು ಸ್ನಾನಮಾಡುವುದೇ) ಅಭಿಷೇಕವೆಂದು, ಅರಿದು=ತಿಳಿದು, ಬಲ್ಲವರು= ಜ್ಞಾನಿಗಳು, ಈ ವಸುಂಧರೆಯೊಳಗೆ=ಈ ಭೂಮಿಯೊಳಗೆ, ಆವ ಜಲದಲಿ= ಬಾವಿ ಕೆರೆ ಮೊದಲಾದ ಯಾವ ಜಲದಲ್ಲಿ, ಮಿಂದರೆಯು=ಸ್ನಾನಮಾಡಿದರೂ,

ಗಂಗಾದಿತೀರ್ಥಗಳು, ತಾವಲಿದು=ತಾವುಪ್ರಸನ್ನರಾಗಿ, ಬಂದು ಅಲ್ಲಿ ನೆಲೆಗೊಂಡು=ಸ್ನಾನಮಾಡುವ ನೀರಿನಲ್ಲಿ ನೆಲಸಿ, ಅಖಿಳಾರ್ಥಗಳ=ಕೋರಿದ ತೀರ್ಥಗಳ ಸ್ನಾನಫಲವನ್ನು, ಈವರು, ಅರಿಯದ=ಇದನ್ನು ತಿಳಿಯದ, ಜೀವರು=ಮನುಷ್ಯರು, ಅಮರತರಂಗಿಣಿಯು=ದೇವನದಿಯಾದ ಗಂಗೆಯನ್ನು, ಯ್ದಿದರೆ=ಸ್ನಾನಕ್ಕೋಸ್ಕರ ಹೋಗುವುದರಿಂದ ಫಲವೇನು? ‖ ೭ ‖

ತಾತ್ಪರ್ಯ :—ಮುಖ್ಯವಾಗಿ ಅನುಸಂಧಾನದಿಂದ ಸ್ನಾನಮಾಡುವ ಜ್ಞಾನಿಗಳು ಎಲ್ಲಿ ಸ್ನಾನಮಾಡಿದರೂ ಸಕಲ ತೀರ್ಥಗಳ ಸ್ನಾನಫಲವು ಪ್ರಾಪ್ತವಾಗುವುದು. ಅನುಸಂಧಾನವಿಲ್ಲದ ಅಜ್ಞಾನಿಗಳು ಕಾಶಿಗೆ ಹೋದರೂ ನಿಷ್ಫಲವೆಂದು ಹೇಳುತ್ತಾರೆ :—

ನಮ್ಮದೇಹವು ಪರಮಾತ್ಮನಿಗೆ ಪ್ರತಿಮಾಸ್ಥಾನೀಯವೆಂದು ತಿಳಿದು ನಾವು ಸ್ನಾನಮಾಡುವ ಕಾಲದಲ್ಲಿ ಯಾವನೀರಿನಲ್ಲಿ ಸ್ನಾನಮಾಡುತ್ತಿದ್ದರು, "ಗಂಗೇಚ ಯಮುನೇಚೈವ ಗೋದಾವರಿ ಸರಸ್ವತಿ | ನರ್ಮದೇ ಸಿಂಧುಕಾವೇರಿ ಜಲೇಸ್ಮಿನ್ಸನ್ನಿಧಿಂಕುರು" ಎಂಬ ಮಂತ್ರದಿಂದಲೂ, ಪ್ರಯಾಗ=ಪ್ರಯಾಗೆ ಎಂಬಿವೇ ಮೊದಲಾದ ಸ್ನಾನ ವಿಧಿಪ್ರಕಾರ ಸ್ಮರಣಾದಿಗಳನ್ನುಮಾಡಿ ಪುರುಷಸೂಕ್ತ ಪಠನಮಾಡುತ್ತಾ, ತಮ್ಮದೇಹದಲ್ಲಿ ಪರಮಾತ್ಮನನ್ನು ಚಿಂತಿಸಿ ಅಭಿಷೇಕ ಮಾಡುತ್ತೇನೆಂದು ಭಾವಿಸಿ ಸ್ನಾನಮಾಡಿದರೆ ಇವನು ಸ್ಮರಿಸಿದ ಗಂಗಾ ಮೊದಲಾದ ಸಕಲ ತೀರ್ಥಾಭಿಮಾನಿಗಳು ಅಲ್ಲಿಗೆಬಂದು ಆಯಾನದಿಗಳಲ್ಲಿ ಸ್ನಾನಮಾಡಿದ ಫಲವನ್ನು ಕೊಟ್ಟು ಕೃತಾರ್ಥರನ್ನಾಗಿ ಮಾಡುವರು. ಅಷ್ಟುಜ್ಞಾನವಿಲ್ಲದೆ ಬರೀ ಯಾತ್ರೆಯನ್ನು ಮಾಡುತ್ತೇವೆಂದು ಕಾಶಿಗೆ ಹೋಗಿ ಗಂಗೆಯಲ್ಲಿ ಸ್ನಾನಮಾಡಿದರೂ ಗಂಗಾಸ್ನಾನ ಮಾಡಿದ ಸಂಪೂರ್ಣಫಲವು ಬಾರದು. ‖ ೭ ‖

ನದನದಿಗಳಿಳಿಯೊಳಗೆ ಹರಿವವು
ಉದಧಿ ಪರಿಯಂತರದಿ ತರುವಾ
ಯದಲಿ ರಮಿಸುವವಲ್ಲಿ ತನ್ಮಯವಾಗಿ ತೋರದಲೆ ‖
ವಿಧಿನಿಷೇಧಗಳಾಚರಿಸುವರು
ಬಧರು ಭಗವದ್ರೂಪ ಸರ್ವ
ತ್ರದಲಿ ಚಿಂತನೆ ಬರಲು ತ್ಯಜಿಸುವರಖಿಳಕರ್ಮಗಳ ‖ ೮ ‖

ಪದ್ಯಾರ್ಥ :—ಇಳಿಯೊಳಗೆ = ಭೂಮಂಡಲದಲ್ಲಿ, ನದನದಿಗಳು= ನದಗಳೆಂದರೆ ಪೂರ್ವದಿಂದ ಪಶ್ಚಿಮಕ್ಕೆ ಹರಿಯುವವು, ನದೀ ಎಂದರೆ ಪಶ್ಚಿಮದಿಂದ ಪೂರ್ವಕ್ಕೆ ಹರಿಯುವವೆಂದರ್ಥ:-ಇಂತಹ ನದಗಳು, ನದಿಗಳು, ಉದಧಿಪರ್ಯಂತರದಿ=ಸಮುದ್ರದವರೆಗೂ ಬೇರೆಬೇರೆಯಾಗಿ, ಪರಿವವು= ಹರಿಯುತ್ತಿರುವವು, ತರುವಾಯದಲಿ=ಸಮುದ್ರದಲ್ಲಿ ಸೇರಿದಮೇಲೆ, ತೋರದಲೆ=ನದೀರೂಪವಾಗಿ ಕಾಣದೆ, ತನ್ಮಯವಾಗಿ = ಸಮುದ್ರ ರೂಪವಾಗಿಯೇ, ಅಲ್ಲಿ=ಸಮುದ್ರದಲ್ಲಿ, ರಮಿಸುವವು=ಪ್ರವಹಿಸದೆ ನಿಂತುಬಿಡುವವು, ಅದರಂತೆ, ಬುಧರು=ಜ್ಞಾನಿಗಳು, ವಿಧಿನಿಷೇಧಗಳ=ಮಾಡಬೇಕಾದ ಕರ್ಮವನ್ನು ಮಾಡುವುದು, ಬಿಡಬೇಕಾದುದನ್ನು ಬಿಡುವದೂ ಇಂತಹಾ ಕರ್ಮಗಳನ್ನು, ಆಚರಿಸುವರು, (ಭಗವದ್ರೂಪವನ್ನು ಸರ್ವತ್ರ ಚಿಂತನೆಗೆ ಬರುವವರೆಗೂ ಎಂದರ್ಥ.) ಭಗವದ್ರೂಪ=ಪರಮಾತ್ಮನ ರೂಪವು, ಸರ್ವತ್ರದಲಿ= ಎಲ್ಲ ವಸ್ತುಗಳಲ್ಲಿ ಚಿಂತನೆಬರಲು, ಅಖಿಳಕರ್ಮಗಳ=ಸಕಲವಾದ ಕಾಮ್ಯ ಕರ್ಮಗಳನ್ನು ತ್ಯಜಿಸುವರು.

ತಾತ್ಪರ್ಯ :— ವ್ಯಾಪ್ತ್ಯೋಪಾಸಕರು ಫಲಾಪೇಕ್ಷೆಯಿಂದ ವಿಧಿನಿಷೇಧ ರೂಪವಾದ ಕರ್ಮಗಳನ್ನು ಆಚರಿಸುವುದಿಲ್ಲವೆಂದು ಹೇಳುತ್ತಾರೆ.—

ಮಹಾನದಗಳು ನದಿಗಳು ಎಲ್ಲವು ಸಮುದ್ರದಲ್ಲಿ ಹೋಗಿಸೇರುವವರೆಗೂ ಬೇರೆಬೇರೆಯಾಗಿ ಪ್ರವಹಿಸುತ್ತಿರುವವು. ಸೇರಿದ ಕೂಡಲೆ ಹೇಗೆ ಅದರಲ್ಲಿ ಬೆರತು ನದಿಯಾಗಿ ಕಾಣದೆ ಸಮುದ್ರದೊಂದಿಗೆ ಅಡಗಿಹೋಗುವದೊ ಹಾಗೆ ಜ್ಞಾನಿಗಳು ಸರ್ವತ್ರವ್ಯಾಪ್ತನಾದ ಭಗವದ್ರೂಪಚಿಂತನೆಯು ಅನುಷ್ಠಾನಕ್ಕೆ ಬರುವವರೆಗೂ ವಿಧಿನಿಷೇಧರೂಪವಾದ ಕರ್ಮಾಚರಣೆಯನ್ನು ಮಾಡುತ್ತಿರುವರು. ಅದು ಅನುಷ್ಠಾನಕ್ಕೆ ಬಂದಕೂಡಲೆ ವಿಧಿನಿಷೇಧರೂಪ ಕರ್ಮಾಚರಣೆಯನ್ನು ಬಿಟ್ಟುಬಿಡುವರು. ಇಲ್ಲಿ ಸರ್ವಥಾ ಕರ್ಮಗಳನ್ನೇ ಬಿಟ್ಟುಬಿಡುವರೆಂದು ಅರ್ಥವಲ್ಲ. ವಿಧಿಬದ್ಧರಲ್ಲದ ದೇವತೆಗಳೂಕೂಡ ಶ್ರುತ್ಯುಕ್ತ ಕರ್ಮಾನುಷ್ಠಾನವನ್ನು ಮಾಡುತ್ತಿರುವುದಾಗಿ ಭಾಗವತ ತೃತೀಯಸ್ಕಂಧದಲ್ಲಿ "ದೇವಾನಾಂ ಗುಣಲಿಂಗಾನಾಮಾನುಸ್ರಾವಿಕ ಕರ್ಮಿಣಾಂ" ಎಂಬ ಮೂಲದಲ್ಲಿ ಗುಣವೇ ಸ್ವರೂಪವಾಗಿವುಳ್ಳ ದೇವತೆಗಳು, ಆನುಸ್ರಾವಿಕ ಕರ್ಮಿಗಳೆಂದು ಹೇಳಿರುವ ಆನುಸ್ರಾವಿಕ ಶಬ್ದಕ್ಕೆ ಭಾಗವತ ತಾತ್ಪರ್ಯದಲ್ಲಿ "ಆನುಸ್ರಾವಿಕ ಕರ್ಮಾಸೌಶ್ರುತ್ಯುಕ್ತಂ ಯೋನಲಂಘಯೇತ್" ವೇದೋಕ್ತಕರ್ಮಗಳನ್ನು

ಮೀರದೆ ಅನುಷ್ಠಾನಮಾಡುವವನೇ ಆನುಷ್ಠಾನಿಕ ಕರ್ಮಿ ಎಂದು ಹೇಳಿರುವರು. ಮತ್ತೂ "ನಸುರಾಂಪಿಬೇತ" ಸುರಾಪಾನ ಮಾಡಬಾರದು; ಎಂಬೀ ವಾಕ್ಯವು ನಿಷೇಧ ವಾಕ್ಯವು. "ಅಹರಹಃಸಂಧ್ಯಾಮುಪಾಸೀತ" ಪ್ರತಿದಿವಸ ಸಂಧ್ಯಾವಂದನೆ ಮಾಡಬೇಕು, ಎಂಬೀ ವಾಕ್ಯವು ವಿಧಿವಾಕ್ಯವು. ವಿಧಿ ವಾಕ್ಯವನ್ನೂ, ನಿಷೇಧ ವಾಕ್ಯವನ್ನೂ ಅನುಸರಿಸದಿದ್ದರೆ ಪ್ರತ್ಯವಾಯ ಬರುವುದು. ಆದ್ದರಿಂದ ಗೀತಾ ತಾತ್ಪರ್ಯಾದಿ ವಾಕ್ಯಗಳಿಂದ ಈ ವಿಷಯದಲ್ಲಿ ಮುಖ್ಯವಾಗಿ ತಿಳಿಯಬೇಕಾದ ಅಂಶವೇನೆಂದರೆ, ಅಸಂಪ್ರಜ್ಞಾತ ಸಮಾಧಿಯಲ್ಲಿದ್ದು ಭಗವದ್ಧ್ಯಾನಾದಿಗಳನ್ನು ಮಾಡುತ್ತಿರುವಾಗ, ಆವಶ್ಯಕವಾದ ಕರ್ಮಗಳನ್ನು ಬಿಟ್ಟರೆ ಬಾಧಕವಿಲ್ಲ. ಭಗವಂತನನ್ನು ಭಜಿಸುತ್ತಾ, ಪದಗಳನ್ನು ಹಾಡುತ್ತಾ ಮೈಮರತು ನರ್ತನಾದಿಗಳನ್ನು ಮಾಡುತ್ತಿರುವಾಗ ಸಂಧ್ಯಾದಿಗಳನ್ನು ಬಿಟ್ಟರೂ ಬಾಧಕವಿಲ್ಲ. ಏಕೆಂದರೆ ಇವುಗಳೂ ಒಂದುವಿಧಿಗೆ ಸೇರಿದ ಕರ್ಮಗಳೇ. ಆಕಾಲ ಹೊರತು ಇತರ ಕಾಲದಲ್ಲಿ ನಿತ್ಯಕರ್ಮಾನುಷ್ಠಾನವನ್ನು ಮಾಡೇ ಮಾಡಬೇಕು ಅವಧೂತಾಶ್ರಮಿಗಳೂ ಕೂಡ ಕರ್ಮಗಳನ್ನು ಮಾಡುತ್ತಿರುವುದಾಗಿ ಶ್ರೀಮದಾಚಾರ್ಯರ ವಾಕ್ಯವಿರುವುದು. ಆದ್ದರಿಂದ ಕರ್ಮತ್ಯಾಗದ ಅರ್ಥವೇನೆಂದರೆ "ಸ್ವರ್ಗಕಾಮೋಯಜೇತ" ಸ್ವರ್ಗಾಪೇಕ್ಷೆಯುಳ್ಳವರು ಯಾಗ ಮಾಡಬೇಕು, ಎಂಬಿವೇ ಮೊದಲಾದ ಫಲವನ್ನು ತೋರಿಸುವ ವಿಧಿಗಳನ್ನು ಬಿಟ್ಟುಬಿಡುವರು; ಅಂದರೆ ಭಗವತ್ಪ್ರೀತಿಗೋಸ್ಕರ ನಿತ್ಯಕರ್ಮಗಳನ್ನು ಅನುಷ್ಠಾನಮಾಡಿ ಪರಮಾತ್ಮನಿಗೆ ಸಮರ್ಪಿಸುವರು, ಅದರ ಫಲವನ್ನು ಬೇಡರು. ಕರ್ಮತ್ಯಾಗವೆಂದರೆ ಕರ್ಮಫಲತ್ಯಾಗವೆಂದು ಗೀತೆಯಲ್ಲಿ ಸ್ಪಷ್ಟ ಮಾಡಿರುವರು. ಆದ್ದರಿಂದ ಇಲ್ಲಿ ಅಖಿಳಕರ್ಮಗಳನ್ನು ತ್ಯಜಿಸುವರೆಂದರೆ ಸಮಸ್ತ ಕಾಮ್ಯ ಕರ್ಮಗಳನ್ನು (ಫಲಾಪೇಕ್ಷೆಯಿಂದ ಮಾಡುವ ಎಲ್ಲಾಕರ್ಮಗಳನ್ನು) ಬಿಟ್ಟು ನಿಷ್ಕಾಮುಕರಾಗಿ ಕರ್ಮಾಚರಣವನ್ನು ಮಾಡುವರೆಂದು ತಾತ್ಪರ್ಯವು ॥ ೮ ॥

**ಕಲಿಯೆ ಮೊದಲಾದ ಖಿಳದಾನವ**
**ರೊಳಗೆ ಬ್ರಹ್ಮ ಭವಾದಿ ದೇವ**
**ರ್ಕಳು ನಿಯಾಮುಕರಾಗಿ ಹರಿಯಾಜ್ಞಾಯಲಿಯುವರವರ ॥**
**ಕಲುಷಕರ್ಮವ ಮಾಡಿ ಮಾಡಿಸಿ**
**ಜಲರುಹೇಕ್ಷಣ ಗರ್ಪಿಸುತನಿ**
**ಶ್ಚಲ ಸುಭಕ್ತಿ ಜ್ಞಾನಪೂರ್ಣರು ಸುಖಿಪರವರೊಳಗೆ ॥ ೯ ॥**

ಪದ್ಯಾರ್ಥ :—ಕಲಿಯೆ ಮೊದಲಾದ, ಅಖಿಲದಾನವರೊಳಗೆ=ಎಲ್ಲಾ ದೈತ್ಯರೊಳಗೂ, ಬ್ರಹ್ಮಭವಾದಿ=ಬ್ರಹ್ಮರುದ್ರ ಮೊದಲಾದ, ದೇವರ್ಕಳು= ತತ್ವಾಭಿಮಾನಿದೇವತೆಗಳು, ನಿಯಾಮಕರಾಗಿ=ಪ್ರೇರಕರಾಗಿ, ಹರಿಯ ಆಜ್ಞೆ ಯಲಿ, ಅವರವರ, (ಯೋಗ್ಯತಾನುಸಾರವಾದ) ಕಲುಷ ಕರ್ಮವ=ಪಾಪಕ ರ್ಮಗಳನ್ನು, ಮಾಡಿ ಮಾಡಿಸಿ=ಅವರೊಳಗಿದ್ದು ತಾವುಮಾಡಿ ಅವರಿಂದಲೂ ಮಾಡಿಸಿ, ಜಲರುಹೇಕ್ಷಣಗೆ=ಕಮಲನೇತ್ರನಾದ ಶ್ರೀಪರಮಾತ್ಮನಿಗೆ, ಅರ್ಪಿ ಸುತ=ಸಮರ್ಪಣೆ ಮಾಡುತ್ತಾ, ನಿಶ್ಚಲ=ಸ್ಥಿರವಾದ, ಸುಭಕ್ತಿಜ್ಞಾನಪೂ ರ್ಣರು=ಉತ್ತಮ ಜ್ಞಾನಭಕ್ತಿಗಳುಳ್ಳ ಈ ಬ್ರಹ್ಮಾದಿಗಳು, ಅವರೊಳಗೆ= ಆ ಕಲಿ ಮೊದಲಾದವರೊಳಗೆ, ಸುಖಿಸರು=ಸುಖವಾಗಿರುವರು ॥ ೯ ॥

ತಾತ್ಪರ್ಯ:—ಕಲಿ ಮೊದಲಾದ ತಮೋಯೋಗ್ಯರಲ್ಲಿ ಬ್ರಹ್ಮಾದಿಗಳು ಇದ್ದು ಪಾಪಕರ್ಮಗಳನ್ನು ಮಾಡಿಸಿ ಹರಿಗೆ ಸಮರ್ಪಿಸುತ್ತ ನಿರ್ಲಿಪ್ತರಾಗಿರು ವರೆಂದು ಹೇಳುತ್ತಾರೆ:—

ಕಲಿ ಮೊದಲಾದ ಸಕಲ ದೈತ್ಯರಲ್ಲಿಯೂ ಬ್ರಹ್ಮರುದ್ರ ಮೊದಲಾದ ತತ್ವೇ ಶರು ಇದ್ದು ಅವರವರ ಯೋಗ್ಯತಾನುಸಾರ ಭಗವದ್ವೇಷಾದಿ ಪಾಪಕರ್ಮಗೆ ಳನ್ನು ಭಗವದಾಜ್ಞಾಪ್ರಕಾರ ತಾವುಮಾಡಿ ಅವರಿಂದ ಮಾಡಿಸಿ ಅವುಗಳನ್ನು ಪರಮಾತ್ಮನಿಗೆ ಸಮರ್ಪಿಸುತ್ತಾ, ತಾವುಗಳು ನಿಶ್ಚಲವಾದ ಭಕ್ತಿಜ್ಞಾನದಿಂದ ಕೂಡಿ ಅವರೊಳಗೆ ಸುಖದಿಂದ ಇರುವರು ॥ ೯ ॥

**ಆವಜೀವರೊಳಗಿದ್ದರೇನಿ**
**ನ್ನಾವಕರ್ಮವ ಮಾಡಲೇನಿ**
**ನ್ನಾವಗುಣರೂಪಗಳು ಪಾಸನೆಮಾಡಲೇನವರು ॥**
**ಭಾವಜೈಯ್ಯನ ಪರಮಸತ್ಕರು**
**ಣಾವಲೋಕನ ಬಲದಿ ಚರಿಸುವ**
**ದೇವತೆಗಳನು ಮುಟ್ಟಲಾಪವೆ ಪಾಪಕರ್ಮಗಳು ॥ ೧೦ ॥**

ಪದ್ಯಾರ್ಥ :—ಅವರು=ಮೇಲಿನ ಪದ್ಯದಲ್ಲಿ ಹೇಳಿದ, ಮಹಾಭಗವ ದ್ಭಕ್ತರಾದ ಬ್ರಹ್ಮಾದಿ ದೇವತೆಗಳು, ಆವಜೀವರೊಳು ಇದ್ದರೇನು=ಯಾವ ಜೀವರೊಳಗಿದ್ದರೇನು, ಇನ್ನು ಯಾವ ಕರ್ಮವ ಮಾಡಲೇನು, ಆವಗುಣ ರೂಪಗಳ, ಉಪಾಸನೆ ಮಾಡಲೇನು=ಯಾವ ಗುಣಗಳಿಂದ ಕೂಡಿದ ಯಾವ ದೇವತೆಯನ್ನು ಉಪಾಸನ ಮಾಡಿದರೇನು, ಭಾವಜೈಯನ=ಮನ್ಮಥನ ತಂದೆ

ಯಾದ ಶ್ರೀಪರಮಾತ್ಮನ, ಪರಮಸತ್ಕರುಣಾವಲೋಕನಬಲದಿ=ಉತ್ಕೃಷ್ಟ ವಾದ ಕರುಣಾಕಟಾಕ್ಷಬಲದಿಂದ, ಸಂಚರಿಸುವ, ದೇವತೆಗಳನು, ಪಾಪಕ ರ್ಮಗಳು, ಮುಟ್ಟಲಾಪವೆ=ಸಂಬಂಧವಾಗುವವೇ.

ತಾತ್ಪರ್ಯ :— ಬ್ರಹ್ಮಾದಿಗಳು ಕಲಿ ಮೊದಲಾದವರುಗಳಲ್ಲಿದ್ದು ಪಾಪಕರ್ಮಗಳನ್ನು ಮಾಡುವುದರಿಂದ ಪಾಪಲೇಪವಿಲ್ಲವೆಂದು ಹೇಳುತ್ತಾರೆ. 'ದೇವಾನಾಂ ಪುಣ್ಯಪಾಪಾಭ್ಯಾಂ ಸುಖಮೇವೋತ್ತರೋತ್ತರಂ' ಎಂಬ ಭಾಗವತ ಏಕಾದಶಸ್ಕಂದ ತಾತ್ಪರ್ಯಾನುಸಾರ ದೇವತೆಗಳು ಪುಣ್ಯಮಾಡಲಿ ಪಾಪಮಾಡಲಿ, ಅವರಿಗೆ ಸುಖವೇಹೊರತು ದುಃಖವಿಲ್ಲವೆಂದು ಹೇಳಿರುವಂತೆ ಬ್ರಹ್ಮಾದಿ ತತ್ವೇಶ್ವರರು ಕಲಿಮೊದಲಾದ ಯಾವ ಪಾಪಿಗಳಲ್ಲಿದ್ದರೇನು ? ಅವರಲ್ಲಿದ್ದು ಯಾವ ತಾಮಸ ರಾಜಸಾದಿ ಕ್ಷುದ್ರದೇವತೋಪಾಸನೆ ಮಾಡಿದ ರೇನು, ಶ್ರೀಪರಮಾತ್ಮನ ಕರುಣಾಕಟಾಕ್ಷದ ಬಲದಿಂದ ಸಂಚರಿಸುವ ದೇವ ತೆಗಳಿಗೆ ಪಾಪಸಂಬಂಧವಾಗುವವೇ ? ಎಂದಿಗು ಇಲ್ಲವೆಂಬ ತಾತ್ಪರ್ಯ.

**ಪತಿಯೊಡನೆ ಮನಬಂದ ತೆರದಲಿ**
**ಪ್ರತಿದಿವಸಸತಿ ರಮಿಸಿಮೋದಿಸಿ**
**ಸುತರಪಡದಿಳಿಯೊಳು ಜಿತೇಂದ್ರಿಯಳೆಂದು ಕರೆಸುವಳು ॥**
**ಕೃತಿಪತಿಕಥಾಮೃತ ಸುಭೋಜನ**
**ರತಮಹಾತ್ಮರಿಗಿ ತರದೋಷ**
**ಪ್ರತತಿಗಳು ಸಂಬಂದಿಸುವವೆ ಅಚ್ಯುತನದಾಸರಿಗೆ ॥ ೧೧ ॥**

ಪದ್ಯಾರ್ಥ :— ಪತಿಯೊಡನೆ, ಮನಬಂದ ತೆರದಲಿ=ಇಷ್ಟಾನು ಸಾರ, ಪ್ರತಿದಿವಸ, ಸತಿ=ಹೆಂಗಸು, ರಮಿಸಿ=ಭೋಗಿಸಿ, ಮೋದಿಸಿ =ಸುಖವನ್ನುಹೊಂದಿ, ಸುತರಪಡದು=ಮಕ್ಕಳನ್ನು ಪಡೆದು, ಇಳಿಯೊಳು= ಭೂಮಿಯೊಳಗೆ, ಜಿತೇಂದ್ರಿಯಳೆಂದು ಕರೆಸುವಳು, ಕೃತಿಪತಿ=ಕೃತಿನಾಮಕ ಲಕ್ಷ್ಮೀದೇವಿಯರ ಪತಿಯಾದ ಪ್ರದ್ಯುಮ್ನನಾಮಕ ಶ್ರೀಪರಮಾತ್ಮನ, ಕಥಾ =ಕಥೆಯೆಂಬ, ಅಮೃತ = ಅಮೃತದ, ಸುಭೋಜನ= ಉತ್ತಮವಾದ ಭೋಜನದಲ್ಲಿ, ರತ=ಅಸಕ್ತರಾದ, ಮಹಾತ್ಮರಿಗೆ=ಮಹಾತ್ಮರಾದ, ಅಚ್ಯು ತನ ದಾಸರಿಗೆ, ಇತರ ದೋಷ ಪ್ರತತಿಗಳು=ಬೇರೆ ವಿಧವಾದ ಪಾಪರಾಶಿ ಗಳು, ಸಂಬಂಧಿಸುವವೆ=ಸಂಬಂಧವಾಗುವವೇ ? ಇಲ್ಲವೆಂದರ್ಥ.

ತಾತ್ಪರ್ಯ :—ಮೇಲಿನ ಪದ್ಯದಲ್ಲಿ ದೇವತೆಗಳಿಗೆ ಪಾಪಲೇಪವಿಲ್ಲ ವೆಂದು ಹೇಳಿದರು. ಈಗ ಪರಮಾತ್ಮನ ದಾಸರಾದ ಸ್ತ್ರೀಪುರುಷರಿಗೆ ಇತರ

ಪಾಪಸಂಬಂಧವಿಲ್ಲವೆಂದಮೇಲೆ ದೇವತೆಗಳಿಗೆ ಹೇಳುವದೇನು ಎಂಬ ಕೈಮುತ್ಯನ್ಯಾಯುವನ್ನು ಸಮರ್ಥಿಸುತ್ತಾರೆ. ಪರಮಾತ್ಮನ ಕಥಾಮೃತ ಪಾನದಲ್ಲಿ ಮಗ್ನರಾದ ಅಂಥರೆ ಸರ್ವದಾ ಕಥಾಶ್ರವಣಾದಿಗಳನ್ನುಮಾಡುತ್ತಾ ಪಾಡುತ್ತಾ ಇರುವ ಸ್ತ್ರೀಯರು ಪ್ರತಿದಿವಸ ಪತಿಯುಕೂಡ ಬೇಕಾದ ಭೋಗಗಳನ್ನು ಅನುಭವಿಸಿ ಸುಖವನ್ನು ಹೊಂದಿ ಮಕ್ಕಳನ್ನು ಪಡೆದಿದ್ದರೂ ಆಕೆಯನ್ನು ಜಿತೇಂದ್ರಿಯಳು ಅನ್ನುವರು. ಆದ್ದರಿಂದ ಮಹಾತ್ಮರಾದ ಭಗವದ್ಭಾಸರಿಗೆ ಪಾಪ ಸಂಬಂಧಗಳು ಆಗುವದಿಲ್ಲ.

**ಸೂಶಿಬಹ ನದಿಯೊಳಗೆ ತನ್ನಸಾ**
**ಹಸ ತೋರುವೆನೆಂದು ಜಲಕಿದ**
**ರೀಸಿದರೆ ಕೈಸೋತು ಮುಣಗುವ ಹರಿಯುಬಿಟ್ಟವನು ||**
**ಕ್ಲೇಶಯೈದುವ ನಾದಿಯುಲಿಸ**
**ರ್ವೇಶ ಕ್ಲುಪ್ತಿಯು ಮಾಡಿದದುಬಿ**
**ಟ್ಟಾಶೆಯಿಂದಲಿಯುನ್ಯರಾರಾಧಿಸುವ ಮಾನವನು || ೧೨ ||**

ಪದ್ಯಾರ್ಥ :—ಸೂಸಿಬಹ, ನದಿಯೊಳಗೆ=ಸಂಪೂರ್ಣವಾಗಿ ಪ್ರವಹಿಸುತ್ತಿರುವ ನದಿಯೊಳಗೆ, ಹರಿಯುಬಿಟ್ಟವನು=ಶಿಕ್ಕಿದ ಹಡಗನ್ನು ಬಿಟ್ಟವನು, ಅಥವಾ ಹರಿಕೃಪೆ ತಪ್ಪಿದವನು, ತನ್ನಸಾಹಸವ ತೋರುವೆನೆಂದು=ತನ್ನಸಾಹಸವನ್ನು ತೋರುವೆನೆಂದು, ಜಲಕಿದರಿಗೆ=ಪ್ರವಾಹದ ನೀರಿಗಿದಿರಾಗಿ, ಈಸಿದರೆ, ಕೈಸೋತು ಮುಣಗುವನು, ಆದಿಯುಲಿ=ಮೊದಲೇನೆ, ಸರ್ವೇಶಃ=ಸರ್ವಲೋಕಕ್ಕೂ ಈಶ್ವರನಾದ ಶ್ರೀಪರಮಾತ್ಮನು, ಕ್ಲುಪ್ತಿಯುಮಾಡಿದುದು=ಇವನಿಷ್ಟೇ ಸುಖ ದುಃಖಗಳನ್ನನುಭವಿಸಬೇಕೆಂದು ಸಂಕಲ್ಪಮಾಡಿರುವುದನ್ನು, ಬಿಟ್ಟು, ಆಶೆಯಿಂದಲಿ ಹರಿಯನ್ನು ಬಿಟ್ಟವನಾಗಿ, ಅನ್ಯರ=ಅನ್ಯದೇವತೆಗಳನ್ನು, ಆರಾಧಿಸುವ, ಮಾನವನು=ಮನುಷ್ಯನು, ಕ್ಲೇಶಯೈದುವನು=ಕಷ್ಟಪಡುವನು.

ತಾತ್ಪರ್ಯ :—ಪರಮಾತ್ಮನನ್ನು ಬಿಟ್ಟು ಅನ್ಯದೇವತಾ ಭಜನೆಮಾಡುವವನು ಕಷ್ಟಹೊಂದುವನೆಂದು ಸದೃಷ್ಟಾಂತವಾಗಿ ಹೇಳುತ್ತಾರೆ :—

ಎರಡು ದಡಗಳವರಿಗೂ ತುಂಬಿ ಸಂಪೂರ್ಣಪ್ರವಾಹ ಬರುತ್ತಿರುವ ನದೀ ನೀರಿನಲ್ಲಿ ತನ್ನ ಸಾಮರ್ಥ್ಯವನ್ನು ತೋರಿಸುವೆನೆಂದು ಸಾಹಸದಿಂದ ಆ ನೀರಿನ ಅಭಿಮುಖವಾಗಿ ಈಸಿಕೊಂಡು ಬಂದರೆ ಹೇಗೆ ಕೈಸೋತು ನೀರೊಳು

ಮುಣುಗುವನೊ ಹಾಗೆಯೇ, ಈಶ್ವರನು ನಮಗೆ ಮೊದಲೇ ಕ್ಲುಪ್ತಮಾಡಿದ ಭೋಗದಿಂದ ತೃಪ್ತಿಪಡದೆ ದುರಾಶೆಯಿಂದ, ಪರಮಾತ್ಮನನ್ನು ಬಿಟ್ಟು ಅನ್ಯ ದೇವತೆಗಳನ್ನು ಭಜಿಸುವವರು ಕಡೆಗೆ ಇಹಪರದಲ್ಲಿಯೂ ಸಹ ಕಷ್ಟಪಡುವರು.

**ನಾನು ನನ್ನದು ಎಂಬ ಜಡಮತಿ**
**ಮಾನವನು ದಿನದಿನದಿ ಮಾಡುವ**
**ಸ್ನಾನ ಜಪದೇವಾರ್ಚನೆಯು ಮೊದಲಾದ ಕರ್ಮಗಳು ॥**
**ದಾನವರು ಶಳಧ್ವೈವರಲ್ಲದೆ**
**ಶ್ರೀನಿವಾಸನು ಸ್ವೀಕರಿಸ ಮು**
**ದ್ದಾನೆ ಪಕ್ವಕಪಿತ್ಥ ಫಲಬಕ್ಷಿಸಿದವೋಲಹುದು ॥ ೧೩ ॥**

ಪದ್ಯಾರ್ಥ :—ನಾನು ನನ್ನದು ಎಂಬ ಜಡಮತಿ ಮಾನವನು=ಈ ಕಾರ್ಯವನ್ನು ನಾನು ಮಾಡಿದೆನು! ಇವುಗಳೆಲ್ಲವು ನನ್ನವು ಎಂಬ ಅಭಿಮಾನ ಉಳ್ಳ ಮೂರ್ಖ ಮನುಷ್ಯನು, ದಿನದಿನದಿ = ಪ್ರತಿದಿವಸ, ಮಾಡುವ, ಸ್ನಾನ ಜಪ ದೇವಾರ್ಚನೆ ಮೊದಲಾದ, ಕರ್ಮಗಳು = ಸ್ನಾನ ಸಂಧ್ಯಾ ದೇವತಾರ್ಚನ ಮೊದಲಾದ ಕರ್ಮ ಫಲವನ್ನು, ದಾನವರು=ದೈತ್ಯರು, ಶಳ ಧ್ವೈವರಲ್ಲದೆ=ಬಲಾತ್ಕಾರದಿಂದ ಅಪಹಾರ ಮಾಡುವರಲ್ಲದೆ, ಶ್ರೀನಿವಾಸನು, ಸ್ವೀಕರಿಸ = ಸ್ವೀಕಾರಮಾಡಲಾರನು, ಮದ್ದಾನೆ=ಮದಹಿಡಿದ ಆನೆಯು, ಪಕ್ವ=ಪಕ್ವವಾದ, ಕಪಿತ್ಥಫಲ=ಬೇಲದ ಹಣ್ಣನ್ನು, ಭಕ್ಷಿಸಿದವೋಲಹುದು= ತಿಂದಂತೆ ನಿಷ್ಫಲವಾಗುವುದು ॥ ೧೩ ॥

ತಾತ್ಪರ್ಯ :—ಸಕಲ ಕರ್ಮಗಳನ್ನು ಈಶ್ವರನು ಮಾಡಿಸುವನೆಂಬ ಜ್ಞಾನವಿಲ್ಲದೆ ಸ್ವತಂತ್ರಕರ್ತೃತ್ವಾಭಿಮಾನದಿಂದ ನಾನೇ ಮಾಡುವೆನೆಂಬ ಅಭಿ ಮಾನ ಉಳ್ಳವರು ಮಾಡಿದ ದೇವತಾರ್ಚನಾದಿ ಕರ್ಮಗಳು ನಿಷ್ಫಲವೆಂದು ೪ ಪದ್ಯಗಳಿಂದ ಹೇಳುತ್ತಾರೆ:—

"ನಾಹಂಕರ್ತಾ ಹರಿಃಕರ್ತಾ" ಎಂಬ ನ್ಯಾಯದಿಂದ ಎಲ್ಲಾ ಕಾರ್ಯ ವನ್ನು ಪರಮಾತ್ಮನೇ ಮಾಡಿಸುವನು ನಾನು ಮಾಡುವವನಲ್ಲ ಎಂಬ ಜ್ಞಾನ ವನ್ನು ಮರೆತು ಎಲ್ಲಾ ಕಾರ್ಯವನ್ನೂ ಸ್ವತಂತ್ರದಿಂದ ನಾನೇ ಮಾಡುವೆನು, ಈ ವಸ್ತುಗಳೆಲ್ಲವು ನನ್ನವು ಎಂಬ ಅಭಿಮಾನ ಉಳ್ಳ ಮೂರ್ಖನು ಮಾಡುವ ಸ್ನಾನ ಜಪ ದೇವತಾರ್ಚನಾದಿ ಎಲ್ಲಾ ಕರ್ಮಗಳ ಫಲವನ್ನು ದೈತ್ಯರು ಅಪಹ

ರಿಸುವರಲ್ಲದೆ ಶ್ರೀಪರಮಾತ್ಮನು ಸ್ವೀಕರಿಸನು. ಅದು ಹೇಗೆಂದರೆ ಬೇಲದ ಹಣ್ಣನ್ನು ಆನೆಯು ನುಂಗಲು ಹಣ್ಣಿನಲ್ಲಿರುವ ತಿರುಳು ಮಾಯವಾಗಿ ಚಿಪ್ಪು ಮಟ್ಟಿಗೆ ಹೇಗೆ ಹೊರಗೆ ಬರುವುದೋ ಹಾಗೆ.

**ಧಾತ್ರಿಯೊಳಗುಳ್ಳಖಿಳ ತೀರ್ಥ**
**ಕ್ಷೇತ್ರ ಚರಿಸಿದರೇನು ಪಾತ್ರಾ**
**ಪಾತ್ರನರಿತನ್ನಾದಿ ದಾನವಮಾಡಿ ಫಲವೇನು ||**
**ಗಾತ್ರನಿರ್ಮಲನಾಗಿ ಮಂತ್ರ**
**ಸ್ತೋತ್ರ ಪಠಿಸಿದರೇನು ಹರಿಸ**
**ರ್ವತ್ರಗತನೆಂದರಿಯದಲೆ ತಾಕರ್ತೃಎಂಬುವನು || ೧೪ ||**

ಪದ್ಯಾರ್ಥ :—ಧಾತ್ರಿಯೊಳಗುಳ್ಳ=ಭೂಮಿಯೊಳಗುಳ್ಳ, ಅಖಿಳತೀರ್ಥಕ್ಷೇತ್ರ=ಸಮಸ್ತವಾದ ತೀರ್ಥಕ್ಷೇತ್ರ ಯಾತ್ರೆಗಳನ್ನು ಮಾಡಿದರೇನು? ಪಾತ್ರಾಪಾತ್ರನರಿತು = ಪಾತ್ರಾಪಾತ್ರಗಳನ್ನು ತಿಳಿದು, ಅನ್ನಾದಿ ದಾನವ ಮಾಡಿ ಫಲವೇನು? ಗಾತ್ರನಿರ್ಮಲನಾಗಿ=ಸ್ನಾನಾದಿಗಳಿಂದ ಶರೀರವನ್ನು ಶುದ್ಧಿಮಾಡಿಕೊಂಡು, ಮಂತ್ರಸ್ತೋತ್ರ ಪಠಿಸಿದರೇನು; ಹರಿಯು, ಸರ್ವತ್ರ ಗತನೆಂದು ಎಲ್ಲಾಸ್ಥಳಗಳಲ್ಲಿ ಇರುವನೆಂದು, ಅರಿಯದಲೆ=ತಿಳಿದು ಅನುಷ್ಠಾನಮಾಡದೇನೆ, ತಾ ಕರ್ತೃ ಎಂಬುವನು=ತಾನೇ ಸ್ವತಂತ್ರದಿಂದ ಮಾಡುವೆನೆಂದು ತಿಳಿದವನು || ೧೪ ||

ತಾತ್ಪರ್ಯ :—ಯಾವ ಮನುಷ್ಯನು, ಸರ್ವತ್ರ ಇದ್ದು ಸಕಲಕಾರ್ಯವನ್ನೂ ಪರಮಾತ್ಮನೇ ಮಾಡಿಸುವನೆಂದರಿಯದೇ ತಾನೇ ಸ್ವತಂತ್ರದಿಂದ ಮಾಡುವುದಾಗಿ ತಿಳಿದಿರುವನೋ ಅಂತಹವನು ಭೂಮಿಯೊಳಗಿರುವ ಎಲ್ಲಾ ತೀರ್ಥಕ್ಷೇತ್ರಗಳನ್ನು ತಿರುಗಿ ಬಂದರೇನು? ಪಾತ್ರಾಪಾತ್ರ ವಿವೇಕದಿಂದ ಸತ್ಪಾತ್ರರಲ್ಲಿ ಅನ್ನಾದಿದಾನಗಳನ್ನು ಕೊಟ್ಟದ್ದರಿಂದಲೂ ಫಲವಿಲ್ಲ. ಸ್ನಾನಾದಿಗಳನ್ನೂ, ಮಂತ್ರಸ್ತೋತ್ರ ಪಠನಮಾಡಿದರೂ ಫಲವೇನು? ಎಲ್ಲವೂ ನಿಷ್ಫಲ.

**ಕಂಡನೀರೊಳು ಮುಣುಗಿ ದೇಹವ**
**ದಂಡಿಸಲು ಫಲವೇನು ದಂಡಕ**
**ಮಂಡಲಗಳಧರಿಸಿ ಯತಿಯೆಂದೆನಿಸಿ ಫಲವೇನು ||**
**ಅಂಡಜಾಧಿಪನಂಸ ಗನಪದ**

**ಪುಂಡರೀಕದಿ ಮನವಹರ್ನಿಶಿ**
**ಬಂಡುಣಿಯು ವೋಲಿರಿಸಿ ಸುಖಪಡದಿಪ್ಪ ಮಾನವನು ||೧೫||**

ಪದ್ಯಾರ್ಥ :—ಅಂಡಜಾಧಿಪನ=ಪಕ್ಷಿರಾಜನಾದ ಗರುಡನ, ಅಂಸಗನ=ಹೆಗಲುಮೇಲೆ ಕೂತಿರುವ ಶ್ರೀಹರಿಯ, ಪದ ಪುಂಡರೀಕದಿ=ಪಾದ ಕಮಲಗಳಲ್ಲಿ, ಅಹರ್ನಿಶಿ=ಹಗಲು ರಾತ್ರಿಯೂ, ಮನವ=ಮನಸ್ಸನ್ನು, ಬಂಡುಣಿಯುವೋಲ್=ಭ್ರಮರದಂತೆ, ಇರಿಸಿ=ಇಟ್ಟು, ಸುಖಪಡದಿಪ್ಪ=ಸುಖವನ್ನನುಭವಿಸದಿರುವ, ಮಾನವನು=ಮನುಷ್ಯನು, ಕಂಡ ನೀರೊಳು ಮುಣುಗಿ, ದೇಹವ ದಂಡಿಸಲು ಫಲವೇನು? ದಂಡಕಮಂಡಲಗಳಧರಿಸಿ=ದಂಡಕಾಷ್ಟವನ್ನೂ, ಕಮಂಡಲವನ್ನೂ ಹಿಡಿದುಕೊಂಡು, ಯತಿಯೆಂದೆನಿಸಿ=ಸನ್ಯಾಸಿಯೆಂದು ಹೆಸರು ಪಡೆದರೂ ಫಲವೇನು?

ತಾತ್ಪರ್ಯ :—ಗರುಡಾರೂಢನಾದ ಶ್ರೀಪರಮಾತ್ಮನ ಪಾದಕಮಲಗಳಲ್ಲಿ, ಜೇನು ಹುಳುವು ಕಮಲದಲ್ಲಿ ಸೇರುವಂತೆ ಯಾವನು ಮನಸ್ಸನ್ನು ಸ್ಥಿರವಾಗಿ ನಿಲ್ಲಿಸುವುದಿಲ್ಲವೊ ಅಂತಹಾ ಮನುಷ್ಯನು ದೃಷ್ಟಿಗೆಬಿದ್ದ ನೀರೊಳಗೆ ಮುಣುಗಿ ಚಳಿ ಮೊದಲಾದವುಗಳಿಂದ ದೇಹವನ್ನು ಕಷ್ಟಪಡಿಸುವುದರಿಂದ ಪ್ರಯೋಜನವೇನು? ದಂಡಕಾಷ್ಟ ಕಮಂಡಲ ಮೊದಲಾದವುಗಳನ್ನು ಧರಿಸಿ ಯತಿ ಎಂದು ಪ್ರಸಿದ್ಧನಾದರೂ ಪ್ರಯೋಜನವೇನು?

**ವೇದ ಶಾಸ್ತ್ರ ಪುರಾಣ ಕಥೆಗಳ**
**ಓದಿ ಪೇಳಿದರೇನು ಸಕಲ ನಿ**
**ಷೇಧ ಕರ್ಮವ ತೊರೆದು ಸತ್ಕರ್ಮಗಳ ಮಾಡೇನು ||**
**ಓದನಂಗಳ ಜರಿದು ಶ್ವಾಸನಿ**
**ರೋಧ ಗೈಸಿದರೇನು ಕಾಮ**
**ಕ್ರೋಧವಳಿಯದೆ ನಾನು ನನ್ನದು ಎಂಬ ಮಾನವನು ||೧೬||**

ಪದ್ಯಾರ್ಥ :—ಕಾಮ ಕ್ರೋಧವಳಿಯದೆ=ಕಾಮವನ್ನೂ ಕೋಪವನ್ನೂ ಬಿಡದೆ, ನಾನು ನನ್ನದು ಎಂಬ ಮಾನವನು, ವೇದ ಶಾಸ್ತ್ರ ಪುರಾಣ ಕಥೆಗಳ, ಓದಿ ಪೇಳಿದರೇನು=ಓದಿದುದರಿಂದಲೂ, ಹೇಳಿದುದರಿಂದಲೂ, ಏನುಪ್ರಯೋಜನ? ಸಕಲ ನಿಷೇದ ಕರ್ಮವ=ಶಾಸ್ತ್ರದಲ್ಲಿ ಮಾಡಬಾರದೆಂದು ನಿಷೇದ ಮಾಡಿರುವ ಕರ್ಮವನ್ನು, ತೊರದು=ಬಿಟ್ಟು, ಸತ್ಕರ್ಮ

ಗಳ ಮಾಡೇನು=ಉತ್ತಮ ಕರ್ಮಗಳನ್ನು ವಿಧಿಪ್ರಕಾರ ಮಾಡಿದುದರಿಂದ ಲಾದರೂ ಫಲವೇನು? ಓದನಂಗಳ ಜರಿದು=ಅನ್ನ ಆಹಾರಗಳನ್ನು ಬಿಟ್ಟು, ಶ್ವಾಸ ನಿರೋಧಗೈಸಿದರೇನು=ಶ್ವಾಸ ಬಿಗಿಹಿಡಿದು ಯೋಗಿಯೆಂದೆನಿಸಿಕೊಂಡರೂ ಪ್ರಯೋಜನವೇನು? ಎಲ್ಲವೂ ನಿಷ್ಫಲವೆಂದು ಭಾವಿಸಬೇಕು. ||೧೬||

ತಾತ್ಪರ್ಯ :—ಕಾಮ ಕ್ರೋಧವನ್ನು ಬಿಡದೆ, ನಾನು ನನ್ನದು ಎಂಬ ಸ್ವತಂತ್ರಾಭಿಮಾನ ಉಳ್ಳ ಮನುಷ್ಯನು, ಏನು ಪುರಾಣ ವೇದ ಶಾಸ್ತ್ರಗಳನ್ನು ಓದಲಿ ಹೇಳಲಿ, ಅದರಿಂದೇನೂ ಪ್ರಯೋಜನವಿಲ್ಲ. ನಿಷೇಧ ಕರ್ಮವನ್ನು ಬಿಟ್ಟು ವಿಧ್ಯುಕ್ತ ಸತ್ಕರ್ಮಗಳನ್ನು ಅನುಷ್ಟಾನಮಾಡಿದರೂ ಪ್ರಯೋಜನವಿಲ್ಲ. ಮಹಾ ಯೋಗಿ ಯೆಂದೆನಿಸಿಕೊಂಡು ಅನ್ನಾದ್ಯಾ ಹಾರವನ್ನು ಬಿಟ್ಟು ಶ್ವಾಸ ನಿರೋಧ ಮಾಡಿದರೂ ಪರಮಾತ್ಮನೇ ಮಾಡಿಸಿದವನೆಂದು ತಿಳಿದು ಕಾಮ ಕ್ರೋಧವನ್ನು ಜೈಸುವವರೆಗೂ ಏನೂ ಪ್ರಯೋಜನವಾಗುವದಿಲ್ಲ.

**ಏನು ಕೇಳಿದರೇನು ನೋಡಿದ**
**ರೇನು ಓದಿದರೇನು ಪೇಳಿದ**
**ರೇನು ಪಾಡಿದರೇನು ಮಾಡಿದರೇನು ದಿನದಿನದೀ ||**
**ಶ್ರೀನಿವಾಸನ ಜನ್ಮಕರ್ಮಸ**
**ದಾನುರಾಗದಿ ನೆನದು ತತ್ತ**
**ಸ್ಥಾನದಲಿ ತದ್ರೂಪ ತನ್ನಾಮಕನ ಸ್ಮರಿಸದವ || ೧೭ ||**

ಪದ್ಯಾರ್ಥ :—ಶ್ರೀನಿವಾಸನ ಜನ್ಮಕರ್ಮ=ಲಕ್ಷ್ಮೀದೇವಿಯರನ್ನು ವಕ್ಷಸ್ಥಳದಲ್ಲಿಟ್ಟುಕೊಂಡಿರುವ ಶ್ರೀ ಪರಮಾತ್ಮನ ಅವತಾರ ಚರಿತ್ರೆಗಳನ್ನು ಸದಾ=ಸರ್ವಕಾಲದಲ್ಲಿ, ಅನುರಾಗದಿ = ಭಕ್ತಿಯಿಂದ, ನೆನದು=ಸ್ಮರಿಸುತ್ತಾ, ತತ್ತಸ್ಥಾನದಲಿ=ಆಯಾ ಸ್ಥಳಗಳಲ್ಲಿ, ತತ್ತದ್ರೂಪ ತನ್ನಾಮಕನ= ಆಯಾ ರೂಪಗಳಿಂದ ಆಯಾ ಹೆಸರಿನಿಂದ ಕೂಡಿದ ಪರಮಾತ್ಮನನ್ನು, ಸ್ಮರಿಸದವ=ಚಿಂತಿಸದವನು, ಏನು ಕೇಳಿದರೇನು=ಯಾವ ಗ್ರಂಥಗಳನ್ನು ಶ್ರವಣಮಾಡಿದರೇನು? ಯಾವ ಗ್ರಂಥವನ್ನು ಓದಿದರೇನು? ಪೇಳಿದರೇನು ಯಾವ ಗ್ರಂಥವನ್ನು ಪಾಠ ಪುರಾಣಗಳನ್ನು ಹೇಳಿದರೇನು? ಪಾಡಿದರೇನು= ಯಾವ ಪದಗಳನ್ನು ಹಾಡಿದರೇನು? ದಿನದಿನದಿ=ಪ್ರತಿದಿವಸ ಮಾಡಿದರೇನು=ಸತ್ಕರ್ಮಗಳನ್ನು ಮಾಡಿದರೇನು?

ತಾತ್ಪರ್ಯ :—ಶ್ರೀ ಪರಮಾತ್ಮನ ಅವತಾರ ಚರಿತ್ರೆಗಳನ್ನು ಸರ್ವ ಕಾಲದಲ್ಲಿ ಭಕ್ತಿಯಿಂದ ಚಿಂತಿಸುತ್ತ ತೀರ್ಥಗಳಲ್ಲಿ ಕ್ಷೇತ್ರಗಳಲ್ಲಿ ವೇದ ಪುರಾಣಾದಿಗಳಲ್ಲೂ ಸರ್ವ ಪ್ರಾಣಿಗಳಲ್ಲೂ ಸಹ ತತ್ತದ್ರೂಪಿಯಾಗಿ ಆಯಾ ಹೆಸರುಗಳಿಂದ ವ್ಯಾಪ್ತನಾಗಿದ್ದು ಸರ್ವಕಾರ್ಯವನ್ನು ಪರಮಾತ್ಮನೇ ಮಾಡಿ ಸುತ್ತಿರುವನೆಂದು ಉಪಾಸನಾ ಮಾಡದೆ ತಾನೇ ಮಾಡುವೆನೆಂದು ಭಾವಿ ಸುವ ಪುರುಷನು ಯಾವ ಕಥಾ ಕೇಳಿದರೇನು; ಯಾವ ಪ್ರತಿಮೆಗಳನ್ನು ನೋಡಿದರೇನು, ಯಾವ ಗ್ರಂಥವನ್ನೋದಿದರೇನು, ಯಾವ ಗ್ರಂಥವನ್ನು ಪಾಠ ಹೇಳಿದರೇನು, ಪುರಾಣ ಹೇಳಿದರೇನು, ಯಾವುದನ್ನು ಹಾಡಿದರೇನು, ಎಂ ತಹಾ ಸತ್ಕರ್ಮಗಳ ಅನುಷ್ಠಾನ ಮಾಡಿದರೇನು, ಯಾವದರಿಂದಲೂ ಪ್ರಯೋ ಜನವಿಲ್ಲ.

**ಬುದ್ಧಿ ವಿದ್ಯಾ ಬಲದಿ ಪೇಳಿದ**
**ಶುದ್ಧ ಕಾವ್ಯವಿದಲ್ಲ ತತ್ವಸು**
**ಪದ್ಧತಿಗಳನು ತಿಳಿದ ಮಾನವನಲ್ಲ ಬುಧರಿಂದ ||**
**ಮಧ್ವವಲ್ಲಭ ತಾನೆ ಹೃದಯದೊ**
**ಳಿದ್ದು ನುಡಿದಂದದಲಿ ನುಡಿದೆ ನ**
**ಪದ್ಧಗಳ ನೋಡದಲೆ ಕಿವಿಕೊಟ್ಟಾಲಿಪುದು ಬುಧರು || ೧೮ ||**

ಪದ್ಯಾರ್ಥ :—ಬುದ್ಧಿ ವಿದ್ಯಾ ಬಲದಿ=ನನ್ನ ಬುದ್ಧಿ ಚಾತುರ್ಯದಿಂ ದಾಗಲಿ, ವಿದ್ಯಾ ಬಲದಿಂದಾಗಲಿ, ಪೇಳಿದ, ಶುದ್ಧ ಕಾವ್ಯವಿದಲ್ಲ, ಬುಧ ರಿಂದ=ಜ್ಞಾನಿಗಳಿಂದ, ತತ್ವಸುಪದ್ಧತಿಗಳನು=ನಿಶ್ಚಿತವಾದ ಶಾಸ್ತ್ರ ಮಾರ್ಗ ಗಳನ್ನು, ತಿಳಿದ=ಅಭ್ಯಾಸಮಾಡಿದ, ಮಾನವನಲ್ಲ=ಮನುಷ್ಯನಲ್ಲ, ಮಧ್ವವ ಲ್ಲಭ=ಶ್ರೀ ಮನ್ಮಧ್ವಾಚಾರ್ಯರಿಗೆ ಸ್ವಾಮಿಯಾದ ಶ್ರೀ ಪರಮಾತ್ಮನು, ತಾನೆ, ಹೃದಯದೊಳಿದ್ದು=ನನ್ನ ಮನಸ್ಸಿನಲ್ಲಿದ್ದು, ನುಡಿದಂದದಲಿ=ನುಡಿಸಿದಂತೆ, ನುಡಿದೆನು=ಹೇಳಿದೆನು, ಬುಧರು=ಜ್ಞಾನಿಗಳು, ಅಪದ್ಧಗಳ ನೋಡದಲೆ= ಇದರಲ್ಲಿರುವ ದೋಷಗಳನ್ನು ಗಣನೆಗೆ ತಾರದೆ, ಕಿವಿಕೊಟ್ಟಾಲಿಪುದು=ಕಿವಿ ಕೊಟ್ಟು ಕೇಳಬೇಕು. || ೧೮ ||

ತಾತ್ಪರ್ಯ :—ದಾಸರಾಯರು ಕೇವಲ ತಮ್ಮ ಹರಿದಾಸತ್ವವನ್ನು ಪ್ರಕಟಿಸುತ್ತಾರೆ :—

ನಾನು ಗ್ರಂಥವನ್ನೇನೋ ಹೇಳಿರುವೆನು, ಆದರೆ ನಾನು ಬುದ್ಧಿವಂತನೆಂದಾಗಲಿ, ವಿದ್ಯಾವಂತನೆಂದಾಗಲಿ ತಿಳಿದುಕೊಂಡು ಇದನ್ನು ರಚಿಸಲಿಲ್ಲ, ಇದನ್ನು ಕಾವ್ಯ ಲಕ್ಷಣದಿಂದ ಕೂಡಿದ ಶುದ್ಧ ಕಾವ್ಯವೆಂದು ನಾನು ಹೇಳುವುದಿಲ್ಲ. ಜ್ಞಾನಿಗಳಿಂದ ಸಿದ್ಧಾಂತ ಪದ್ಧತಿಯನ್ನು ಚೆನ್ನಾಗಿ ತಿಳಿದವನೂ ನಾನಲ್ಲ. ಆದರೂ ಶ್ರೀಮಧ್ವೇಶನು ತಾನೇನನ್ನೊಳಗೆ ಇದ್ದು ನುಡಿಸಿದಂತೆ ಹೇಳಿರುವೆನು. ಆದ್ದರಿಂದಲೇ ಸಾಧುಗಳು ಇದನ್ನು ಕಿವಿಕೊಟ್ಟು ಕೇಳಬೇಕೆಂದು ಬೇಡುವೆನು. ಎಂದು ದಾಸರಾಯರು ಈ ಪದ್ಯದಿಂದ ಹೇಳಿಕೊಂಡಿರುವರು. ಆದರೆ ನಿಜವಾಗಿ ದಾಸರಾಯರು ದೊಡ್ಡ ಪಂಡಿತರೆಂತಲೂ, ಸುಧಾದಿ ಗ್ರಂಥ ಪ್ರವಚನ ಮಾಡುತ್ತಾ ಇದ್ದರೆಂದು ಇವರ ಚರಿತ್ರೆಯಿಂದ ಸಕಲರಿಗೂ ತಿಳಿದ ವಿಷಯವೆ. ಹಾಗಿದ್ದರೂ ನಾನು ವಿದ್ಯಾವಂತನಲ್ಲ, ಬುದ್ಧಿವಂತನಲ್ಲವೆಂದು ಹೇಗೆ ಹೇಳಿಕೊಂಡರೆಂದರೆ "ವಿದ್ಯಾವಾನ್ ಬುದ್ಧಿವಾನ್" ವಿದ್ಯಾವಂತ ಬುದ್ಧಿವಂತನೆಂಬ ಹೆಸರು ಅಂತರ್ಯಾಮಿ ಪರಮಾತ್ಮನದೇ ಹೊರತು ನನ್ನದಲ್ಲವೆಂದು ತೋರಿಸುವುದಕ್ಕಾಗಿಯೂ, ಈ ಸಂಧಿಯಲ್ಲಿ ಮೇಲೆ ಹೇಳಿರುವಂತೆ ನಾನು ನನ್ನದು ಎಂಬುವನು ಏನು ಮಾಡಿದರೂ ನಿಷ್ಫಲವೆಂದು ತಾವು ಅನುಷ್ಠಾನಕ್ಕೆ ತಂದಿರುವುದನ್ನು ಸ್ಪಷ್ಟಮಾಡುವುದಕ್ಕಾಗಿಯೂ ಈ ಪದ್ಯದಲ್ಲಿ ಹೀಗೆ ಹೇಳಿರುವರು. ಆದ್ದರಿಂದ ಈ ಪದ್ಯದ ಅರ್ಥವನ್ನು ಮಾಡುವ ಬಗೆ ಹೇಗೆಂದರೆ :—

ಬುದ್ಧಿ ವಿದ್ಯಾ ಬಲದಿಂದ ಪೇಳಿದ ಶುದ್ಧ ಕಾವ್ಯವಿದಲ್ಲವೆಂದರೆ, ನಾನೇ ವಿದ್ಯಾವಂತ, ನಾನೇ ಬುದ್ಧಿವಂತನೆಂಬ ಅಹಂಕಾರದಿಂದ ಮಾಡಿದ ಅಶುದ್ಧವಾದ ಕಾವ್ಯವು ಇದಲ್ಲ. ಪರಮಾತ್ಮನೇ ನನ್ನೊಳಗೆ ಇದ್ದು ವಿದ್ಯಾ ಬುದ್ಧಿ ಬಲದಿಂದ ಕೂಡಿ ಮಾಡಿ ಮಾಡಿಸಿದ ಶುದ್ಧವಾದ ಕಾವ್ಯವಿದು, ಎಂಬ ತಾತ್ಪರ್ಯ. ಯದ್ಯಪಿ. ದಾಸರಾಯರು ಶ್ರೀ ರಾಘವೇಂದ್ರ ಸ್ವಾಮಿಗಳವರ ಪೀಠಿಗೆಗೆ ಸೇರಿದ ವರದೇಂದ್ರ ಸ್ವಾಮಿಗಳಲ್ಲಿ ವ್ಯಾಕರಣ ಶಾಸ್ತ್ರಗಳನ್ನು ವೇದಾಂತ ಗ್ರಂಥಗಳನ್ನು ವ್ಯಾಸಂಗಮಾಡಿ ಈ ಎರಡು ಶಾಸ್ತ್ರಗಳನ್ನು ಶಿಷ್ಯರಿಗೆ ಪಾಠ ಹೇಳುತ್ತಿದ್ದರೆಂದು ಪ್ರಸಿದ್ಧಿಯಾಗಿರುವುದು. ಜ್ಞಾನಿಗಳಿಂದ ತತ್ವ ಪದ್ಧತಿಗಳನ್ನು ತಾವು ತಿಳಿದವರಲ್ಲವೆಂದು ಹೇಳಿಕೊಂಡಿರುವರು. ಈ ವಾಕ್ಯಕ್ಕೂ ಜ್ಞಾನಿಗಳಲ್ಲಿದ್ದು ಉಪದೇಶಮಾಡಿದವನೂ, ನನ್ನಲ್ಲಿದ್ದು ಓದಿ, ಓದಿಸಿ, ತಾನು ಪಂಡಿತನೆಂಬ ಹೆಸರನ್ನು ವಹಿಸಿ ನನ್ನೊಳಗಿದ್ದು ಪಂಡಿತನೆಂಬ

ಹೆಸರನ್ನು ನನಗೆ ಕೊಡಿಸಿದವನು ಪರಮಾತ್ಮನೇ ಎಂಬ ಭಾವನೆಯಿಂದ ನಾನು ತಿಳಿದವನಲ್ಲವೆಂದು ಹೇಳಿಕೊಂಡರು.

**ಕಬ್ಬಿನೊಳಗಿಹ ರಸವಿದಂತನಿ**
**ಗಬ್ಬಬಲ್ಲದೆ ಭಾಗ್ಯ ಯೌವನ**
**ಮಬ್ಬಿನಲಿ ಮೈಮರದವಗೆ ಹರಿಸು ಚರಿತಾಮೃತವು ॥**
**ಲಭ್ಯವಾಗದು ಹರಿಪದಾಬ್ಜದಿ**
**ಹಬ್ಬಿದತಿ ಸದ್ಭಕ್ತಿ ರಸವುಂ**
**ಡುಬ್ಬಿಕೊಬ್ಬಿ ಸುಖಾಬ್ಧಿಯೊಳಗಾಡುವವಗಲ್ಲದಲೆ ॥ ೧೯ ॥**

ಪದ್ಯಾರ್ಥ :—ಕಬ್ಬಿನೊಳಗಿಹ = ಕಬ್ಬಿನೊಳಗಿರುವ, ರಸ=ರಸವು, ವಿದಂತನಿಗೆ=ಹಲ್ಲಿಲ್ಲದವನಿಗೆ, ಅಬ್ಬಬಲ್ಲದೆ=ರುಚಿಹತ್ತುವುದೇ, ಅಗಿದು ರಸ ಪಾನಮಾಡಲು ಸಾಧ್ಯವಿಲ್ಲವೆಂದರ್ಥ. ಇದರಂತೆ, ಹರಿಪದಾಬ್ಜದಿ=ಪರಮಾತ್ಮನ ಪಾದಾರವಿಂದದಲ್ಲಿ, ಹಬ್ಬಿದ=ಹೊಂದಿಕೊಂಡಿರುವ, ಅತಿ ಸದ್ಭಕ್ತಿರಸವ = ಅತ್ಯುತ್ಕೃಷ್ಟವಾದ ಭಕ್ತಿರಸವನ್ನು, ಉಂಡು = ಪಾನಮಾಡಿ, ಉಬ್ಬಿ=ಮೈಯುಬ್ಬಿ, ಕೊಬ್ಬಿ=ಅದರಿಂದ ಮತ್ತನಾಗಿ, ಸುಖಾಬ್ಧಿಯೊಳಗಾಡುವವಗಲ್ಲದಲೆ=ಸುಖಸಮುದ್ರದಲ್ಲಿ ಓಲಾಡುವವಗಲ್ಲದೆ, ಭಾಗ್ಯಯೌವನ ಮಬ್ಬಿನಲಿ=ಐಶ್ವರ್ಯಮದ ಯೌವನಮದ ಎಂಬ ಈ ಕತ್ತಲೆಯಲ್ಲಿ, ಮೈಮರತವಗ=ಮತ್ತನಾದವನಿಗೆ, ಹರಿಸುಚರಿತಾಮೃತವು=ಈ ಹರಿಕಥಾಮೃತವು, ಲಭ್ಯವಾಗದು ॥ ೧೯ ॥

ತಾತ್ಪರ್ಯ :—ಈ ಗ್ರಂಥವು ಜ್ಞಾನಿಗಳಿಗೆ ರುಚಿಸುವುದಲ್ಲದೆ ಅಜ್ಞಾನಿಗಳಿಗೆ ರುಚಿಸಲಾರದೆಂದು ಸದೃಷ್ಟಾಂತವಾಗಿ ಹೇಳುತ್ತಾರೆ:—

ಕಬ್ಬನ್ನು ಅಗಿದು ಅದರ ರಸವನ್ನು ಪಾನಮಾಡಬೇಕಾದರೆ ಹಲ್ಲಿದ್ದವರಿಗೆ ಸಾಧ್ಯವೇ ಹೊರತು ಹಲ್ಲಿಲ್ಲದವರಿಗೆ ಹೇಗೆ ಸಾಧ್ಯವಲ್ಲವೊ ಹಾಗೆಯೇ ಪರಮಾತ್ಮನ ಪಾದಾರವಿಂದದಲ್ಲಿ ಹಬ್ಬಿರುವ ದೃಢಭಕ್ತಿರಸವನ್ನು ಪಾನಮಾಡಿ ಅದರಿಂದ ಮೈಯುಬ್ಬಿ ಕೊಬ್ಬೇರಿ ಮತ್ತನಾಗಿ ಸುಖಸಮುದ್ರದಲ್ಲಿ ಓಲಾಡುತ್ತಿರುವವರಿಗೆ ಮಾತ್ರವೇ ಈ ಹರಿಕಥಾಮೃತಸಾರದ ರುಚಿಯು ಗೊತ್ತಾಗುವದಲ್ಲದೆ, ಕಬ್ಬಿನಂತಿರುವ ಹರಿಕಥಾಮೃತಸಾರದ ರಸವನ್ನು, ಜ್ಞಾನವೆಂಬ ಹಲ್ಲು ಇಲ್ಲದ ಅಜ್ಞಾನಿಗಳು ಪಾನಮಾಡಬಲ್ಲರೆ? ಆಗಲಾರದು.

**ಖಗವರಧ್ವಜನಂಘ್ರಿ ಭಕುತಿಯ**
**ಬಗೆಯನರಿಯದ ಮಾನವರಿಗಿದು**
**ಒಗಟನಂದದಿ ತೋರುತಿಪ್ಪುದು ಎಲ್ಲಕಾಲದಲಿ ॥**
**ತ್ರಿಗುಣ ವರ್ಜಿತನಮಲ ಗುಣಗಳ**
**ಪೊಗಳಿಹಿಗ್ಗುವ ಭಾಗವತರಿಗೆ**
**ಮಿಗೆ ಭಕುತಿ ಸುಜ್ಞಾನ ಸುಖವಿತ್ತವರ ರಕ್ಷಿಪುದು ॥ ೨೦ ॥**

ಪದ್ಯಾರ್ಥ :—ಖಗವರಧ್ವಜನ = ಪಕ್ಷಿಶ್ರೇಷ್ಠನಾದ ಗರುಡಧ್ವಜನ, ಅಂಘ್ರಿಭಕುತಿಯ=ಪಾದಾರವಿಂದದ ಭಕ್ತಿಯ, ಬಗೆಯ=ರೀತಿಯನ್ನು, ಅರಿಯದ=ತಿಳಿಯದ, ಮಾನವರಿಗೆ=ಮನುಷ್ಯರಿಗೆ, ಇದು=ಈ ಗ್ರಂಥವು, ಒಗಟನಂದದಿ=ಒಗಟನಂತೆ, ತೋರುತಿಪ್ಪುದು=ಜಾಗ್ರತೆಯಾಗಿ ಅರ್ಥವಾಗುವುದಿಲ್ಲ, ಎಲ್ಲಕಾಲದಲಿ = ಸರ್ವಕಾಲದಲ್ಲಿಯೂ, ತ್ರಿಗುಣವರ್ಜಿತನ= ಪ್ರಾಕೃತವಾದ ಸತ್ವರಜಸ್ತಮೋಗುಣ ಶೂನ್ಯನಾದ ಶ್ರೀಪರಮಾತ್ಮನ, ಅಮಲ=ನಿರ್ಮಲವಾದ, (ದೋಷವಿಲ್ಲದ) ಗುಣಗಳ=ಆನಂದಾದಿ ಗುಣಗಳನ್ನು, ಪೊಗಳಿ=ಸ್ತುತಿಸಿ, ಹಿಗ್ಗುವ=ಸಂತೋಷ ಪಡುವ, ಭಾಗವತರಿಗೆ=ಭಗವದ್ಭಕ್ತರಿಗೆ, ಮಿಗೆ ಭಕುತಿ=ಹೆಚ್ಚಾದ ಭಕ್ತಿಯನ್ನು, ಸುಜ್ಞಾನ ಸುಖವನ್ನು= ಭಗವತ್ಸಂಬಂಧವಾದ ಉತ್ತಮ ಜ್ಞಾನ ಸುಖವನ್ನು, ಇತ್ತು=ಕೊಟ್ಟು, ಅವರ=ಆ ಭಕ್ತರನ್ನು, ರಕ್ಷಿಪುದು. ॥ ೨೦ ॥

ತಾತ್ಪರ್ಯ :-ಮೇಲೆ ಹೇಳಿದುದನ್ನೇ ಧೃಢಮಾಡುವುದಕ್ಕಾಗಿ ಮತ್ತು ಹೇಳುತ್ತಾರೆ :—

ಶ್ರೀ ಪರಮಾತ್ಮನ ಪಾದಾರವಿಂದ ಭಕ್ತಿಮಾರ್ಗವನ್ನೇ ತಿಳಿಯದ ಮನುಷ್ಯರಿಗೆ ಈ ಗ್ರಂಥವು ಒಗಟನಂತೆ ಕಾಣುವುದು, ಅಪ್ರಾಕೃತನಾದ ಪರಮಾತ್ಮನಲ್ಲಿ ದೃಢಭಕ್ತಿಯುಳ್ಳವರಾಗಿ ಅವನ ಮಹಿಮೆಯನ್ನು, ಸರ್ವದಾ ಪಾಡುತ್ತಾ ಪೊಗಳುತ್ತಾ ಸಂತೋಷಪಡುತ್ತಿರುವ ಭಗವದ್ಭಕ್ತರಿಗೆ, ವಿಶೇಷವಾದ ಭಕ್ತಿಯನ್ನು ಜ್ಞಾನವನ್ನು ವೃದ್ಧಿಮಾಡಿ ಸುಖವನ್ನು ಕೊಡುವುದು.

**ಪರಮತತ್ವ ರಹಸ್ಯವಿದು ಭೂ**
**ಸುರರು ಕೇಳ್ವದು ಸಾದರದಿ ನಿ**
**ಷ್ಠುರಿಗಳಿಗೆ ಮೂಢರಿಗೆ ಪಂಡಿತಮಾನಿ ಪಿಶುನರಿಗೆ ॥**

**ಅರಸಿಕರಿಗಿದು ಪೇಳ್ವದಲ್ಲನ**
**ವರತ ಭಗವತ್ಪಾದಯುಗಳಾಂ**
**ಬುರುಹ ಮಧುಕರರೆನಿಸುವರಿಗಿದನರುಪು ಮೋದದಲಿ ॥ ೨೧ ॥**

ಪದ್ಯಾರ್ಥ :—ಇದು=ಈ ಗ್ರಂಥವು, ಪರಮತತ್ವರಹಸ್ಯವು=ಬಹಳ ಗುಟ್ಟಾದ ಉತ್ತಮ ತತ್ವವು, ಭೂಸುರರು=ಬ್ರಾಹ್ಮಣರು, ಸಾದರದಿ=ಆದರ ಪೂರ್ವಕವಾಗಿ, ಕೇಳ್ವದು. ನಿಷ್ಠುರಿಗಳಿಗೆ=ನಿಷ್ಠುರವಾಗಿ ಮಾತನಾಡುತ್ತಿರುವವರಿಗೆ, ಮೂಢರಿಗೆ, ಪಂಡಿತಮಾನಿ=ನಾನೇ ಪಂಡಿತನೆಂಬ ಅಹಂಕಾರ ಉಳ್ಳವರಿಗೆ, ಪಿಶುನರಿಗೆ=ಸರಿಯಾದ ಗುರುಮುಖದಿಂದ ತಿಳಿಯದೆ ಸ್ವಬುದ್ಧಿಯಿಂದ ತಾನು ಹೇಳಿದುದನ್ನೇ ಸ್ಥಾಪಿಸುವವನಿಗೆ, ಅರಸಿಕರಿಗೆ, ಇದು=ಈ ಗ್ರಂಥವು, ಪೇಳ್ವುದಲ್ಲ=ಹೇಳತಕ್ಕದ್ದಲ್ಲ. ಅನವರತ=ಸರ್ವದಾ (ಅವಿಚ್ಛಿನ್ನವಾಗಿ) ಭಗವತ್ಪಾದಯುಗುಳಾಂಬುರುಹ ಮಧುಕರರೆನಿಸುವರಿಗೆ=ಪರಮಾತ್ಮನ ಪಾದಕಮಲದಲ್ಲಿ ಭ್ರಮರರೆನಿಸುವವರಿಗೆ, ಮೋದದಲಿ=ಸಂತೋಷದಿಂದ, ಇದನು=ಈ ಗ್ರಂಥವನ್ನು, ಅರುಪು=ಹೇಳು ॥ ೨೧ ॥

ತಾತ್ಪರ್ಯ :—ಈ ಗ್ರಂಥ ಶ್ರವಣಾದಿಗಳಿಗೆ ಭಗವದ್ಭಕ್ತರೇ ಅಧಿಕಾರಿಗಳೆಂದು ಹೇಳುತ್ತಾರೆ :—

ಈ ಗ್ರಂಥವು ಪರಮ ರಹಸ್ಯವಾದ ಭಗವತ್ತತ್ವದಿಂದ ಕೂಡಿರುವುದು. ಇದನ್ನು ಭಕ್ತರಾದ ಬ್ರಾಹ್ಮಣರು ಲಕ್ಷ್ಯದಲ್ಲಿಡಬೇಕು. ಸರ್ವದಾ ನಿಷ್ಠುರ ವಾಕ್ಯಗಳನ್ನೇ ಮಾತಾಡುತ್ತಿರುವವರು, ಮೂಢರು, ತಾನೇ ಪಂಡಿತರೆಂಬ ಅಹಂಕಾರ ಉಳ್ಳವರು, ಹಟವಾದಿಗಳು, ಅರಸಿಕರು ಇಂತಹವರಿಗೆ ಇದನ್ನು ಹೇಳಬಾರದು. ಸರ್ವಕಾಲದಲ್ಲಿ ಪರಮಾತ್ಮನ ಪಾದಾರವಿಂದದಲ್ಲಿ ದೃಢ ಭಕ್ತಿಯುಳ್ಳವರಾರೊ ಅವರಿಗೇನೇ ಇದನ್ನು ಹೇಳತಕ್ಕದ್ದು ॥ ೨೧ ॥

**ಲೋಕವಾರ್ತೆಯಿದಲ್ಲ ಪರ**
**ಲೋಕೈಕನಾಥನ ವಾರ್ತೆಕೇಳ್ವರಿ**
**ಕಾಕುಮನುಜರಿಗಿದು ಸಮರ್ಪಕವಾಗಿ ಸೊಗಸುವುದೇ ॥**
**ಕೋಕನದ ಪರಿಮಳವು ಷಟ್ಪದ**
**ಸ್ವೀಕರಿಸುವಂದದಲಿ ಜಲಚರ**
**ಭೇಕಬಲ್ಲದೆ ಇದರ ರಸ ಹರಿಭಕ್ತಗಲ್ಲದಲೆ ॥ ೨೨ ॥**

ಪದ್ಯಾರ್ಥ :—ಇದು=ಈ ಗ್ರಂಥವು, ಲೋಕವಾರ್ತೆಯು=ನಟವಿಟ ಸ್ತ್ರೀಪುರುಷಾದಿಗಳನ್ನು ವರ್ಣಿಸುವ ನಾಟಕ ಕಾದಂಬರಿಗಳಲ್ಲ, ಪರಲೋಕೈಕ ನಾಥನ ವಾರ್ತೆ = ವೈಕುಂಠಾದಿ ಲೋಕಗಳಿಗೆ ಸ್ವಾಮಿಯಾದ ಪರಮಾತ್ಮನ ಮಹಿಮೆಯನ್ನು ವರ್ಣಿಸುವ ಕಾವ್ಯ, ಕೇಳ್ವರೆ = ಇದನ್ನು ಪಾಪಿ ಜನರು ಕೇಳ್ವರೆ, ಎಂದಿಗೂ ಕೇಳಲಾರರು. ಏಕೆಂದರೆ, ಕಾಕುಮನುಜರಿಗೆ= ವಿಷಯಸುಖವೇ ಸುಖವೆಂದು ಭಾವಿಸಿ ದೇವರನ್ನು ಮರೆತು ನಾನು ನನ್ನದೆಂಬ ಸ್ವತಂತ್ರ ಕರ್ತೃತ್ವಾಭಿಮಾನಿಗಳಿಗೆ, ಇದು = ಈ ಗ್ರಂಥವು, ಸಮರ್ಪಕವಾಗಿ, ಸೊಗಸುವುದೆ=ತೋರಿಬರುವುದೇ ! ಕೋಕನದ=ಕೆಂಪು ಕಮಲದ, ಪರಿಮಳವು=ಸುವಾಸನೆಯನ್ನು, (ಮಕರಂದವನ್ನು) ಷಟ್ಪದ=ಭ್ರಮರವು, ಸ್ವೀಕರಿಸುವಂದದಲಿ, ಜಲಚರ=ನೀರೊಳಗೆ ಓಡಾಡುತ್ತಿರುವ, ಭೇಕ= ಕಪ್ಪೆಯು, ಬಲ್ಲದೆ=ತಿಳಿಯುವುದೆ, ಅದರಂತೆಯೆ, ಇದರ ರಸ=ಈ ಗ್ರಂಥದ ರುಚಿಯು, ಹರಿಭಕ್ತರಲ್ಲದಲೆ, ಅನ್ಯರಿಗೆ ರುಚಿಸುವುದೆ, ರುಚಿಸಲಾರದು.

ತಾತ್ಪರ್ಯ :—ಲೋಕದಲ್ಲಿ ಪ್ರಾಯಶಃ ಜನರು ಯಾವ ವೃತ್ತಿಯನ್ನು ಆಚರಿಸುತ್ತಿರುವರೊ, ಅದೇ ವೃತ್ತಿಯಲ್ಲಿದ್ದು ತಮ್ಮಂತಿರುವ ಜನರ ಸಹವಾಸ ಮಾಡುವದು, ತಕ್ಕಂತಹ ಕಥೆಗಳನ್ನೇ ಕೇಳುವ ಸಂಪ್ರದಾಯ ಇರುವುದು. ನಟವಿಟ ಗಾಯಕಾದಿಗಳು, ವಿಶೇಷವಾಗಿ ನಾಟಕಾದಿಗಳು ಮೊದಲಾದುವುಗಳಲ್ಲಿ ಪ್ರೀತಿಮಾಡುವರು, ಕಾದಂಬರಿಗಳನ್ನೋದಿ ಆನಂದ ಪಡುವರು. ಹಾಗೆಯೇ ಭಗವದ್ಭಕ್ತರು ಭಗವಂತನ ಕಥಾಶ್ರವಣ, ಪಠನ, ಉತ್ಸವಾದಿಗಳನ್ನು ನೋಡಿ ಆನಂದಿಸುವುದೇ ಸಂಪ್ರದಾಯವು. ಆದ್ದರಿಂದ ಸಾಮಾನ್ಯವಾಗಿ ಪರಮಾತ್ಮನಲ್ಲಿ ಭಕ್ತಿ ಇಲ್ಲದವರಿಗೆ ಈ ಗ್ರಂಥವು ರುಚಿಸಲಾರದು. ಏಕೆಂದರೆ ಇದು ಕೇವಲ ಭಗವಂತನ ಮಹಿಮೆಯನ್ನೇ ಹೇಳುವುದೇ ಹೊರತು ಸ್ತ್ರೀಪುರುಷರ ವರ್ಣನ ಕಾವ್ಯವಲ್ಲ. ಭಗವದ್ಭಕ್ತರಿಗಲ್ಲದೆ ಇತರರಿಗೆ ರುಚಿಸಲಾರದು. ಅದು ಹೇಗೆಂದರೆ, ಭ್ರಮರವು ದೂರದಲ್ಲಿ ಹಾರುತ್ತಿದ್ದರೂ ಕಮಲದಲ್ಲಿರುವ ಮಕರಂದವನ್ನು ವಾಸನೆಯಿಂದ ತಿಳಿದು ಬಂದು ಪಾನಮಾಡುವುದೆ ಹೊರತು, ನೀರಿನೊಳಗೆ ಹರದಾಡುತ್ತಿರುವ ಕಪ್ಪೆಯು ಪಾನಮಾಡಬಲ್ಲದೆ ? ಇದರಂತೆಯೆ ಭಕ್ತರಲ್ಲದ ಇತರರಿಗೆ ರುಚಿಸಲಾರದು.

**ಸ್ವಪ್ರಯೋಜನರಹಿತ ಸಕಲೇ**
**ಷ್ಟಪ್ರದಾಯಕ ಸರ್ವಗುಣಪೂ**

**ರ್ಣ ಅಪ್ರಮೇಯ ಜರಾಮರಣ ವರ್ಜಿತ ವಿಗತಕ್ಲೇಶ ॥**
**ವಿಪ್ರತಮ ವಿಶ್ವಾತ್ಮ ಘೃಣಿ ಸೂ**
**ರ್ಯಪ್ರಕಾಶಾನಂತ ಮಹಿಮ ಘೃ**
**ತ ಪ್ರತೀಕಾರಾಧಿತಾಂಘ್ರಿ ಸರೋಜ ಸುರರಾಜ ॥ ೨೩ ॥**

ಪದ್ಯಾರ್ಥ :—ಸ್ವಪ್ರಯೋಜನರಹಿತ=ಶ್ರೀಪರಮಾತ್ಮನು, ಪರರಿಂದ ಯಾವ ವಿಧವಾದ ಪ್ರಯೋಜನವನ್ನು ಅಪೇಕ್ಷಿಸದೆ, ಸಕಲೇಷ್ಟಪ್ರದಾಯಕ=ಎಲ್ಲರ ಮನೋಭೀಷ್ಟವನ್ನು ಪೂರ್ಣಮಾಡುವವನು; ಸರ್ವಗುಣಪೂರ್ಣ= ಸಕಲಗುಣ ಪೂರ್ಣನಾದವನು ; ಅಪ್ರಮೇಯ=ತಿಳಿಯಲಶಕ್ಯವಾದ ಮಹಿಮೆಯುಳ್ಳವನು; ಜರಾಮರಣ ವರ್ಜಿತ=ಮುದುಕನಾಗುವಿಕೆ, ಸಾಯುವಿಕೆ, ಇಂತಹ ದೋಷಗಳಿಲ್ಲದವನು; ವಿಗತಕ್ಲೇಶ=ಯಾವ ಬಗೆಯ ಕ್ಲೇಶವನ್ನು ಹೊಂದದವನು; ವಿಪ್ರತಮ=ವಿಜ್ಞಾನದಿಂದ ಪ್ರಕಾಶಮಾನರಾದ ಬ್ರಹ್ಮಾದಿಗಳಿಗೆ ಶ್ರೇಷ್ಠನು; ವಿಶ್ವಾತ್ಮ=ಪ್ರಪಂಚವನ್ನೇ ವ್ಯಾಪಿಸಿಕೊಂಡಿರುವವನು; ಘೃಣಿ=ದಯಾವಂತನು; ಸೂರ್ಯಪ್ರಕಾಶ; ಅನಂತಮಹಿಮ=ಪಾರಕಾಣದ ಮಹಿಮೆಯುಳ್ಳವನು; ಘೃತಪ್ರತೀಕಾರಾಧಿತಾಂಘ್ರಿಸರೋಜ=ತುಪ್ಪದರೂಪದಿಂದ ನಿತ್ಯದಲ್ಲಿ ಪರಮಾತ್ಮನ ಭೋಜನಕ್ಕೆ ಅನುಕೂಲಳಾಗುವುದರಿಂದ ಘೃತಪ್ರತೀಕಾ ಎಂಬ ಹೆಸರುಳ್ಳ ರಮಾದೇವಿಯರಿಂದ ಚೆನ್ನಾಗಿ ಪೂಜಿತವಾದ ಪಾದಕಮಲಗಳುಳ್ಳವನು; ಸುರರಾಜ=ಬ್ರಹ್ಮಾದಿದೇವತೆಗಳ ಮಧ್ಯದಲ್ಲಿ ರಾಜಿಸುವುದರಿಂದ ಸುರರಾಜನೆಂದು ಹೆಸರು. ಜಯಜಯ ! ಎಂಬ ಮುಂದಿನ ಪದ್ಯದಲ್ಲಿರುವ ಜಯ ಶಬ್ದದಲ್ಲಿ ಸಮನ್ವಯ ಮಾಡಬೇಕು. ಜಯ ಎಂದರೆ ನಿನ್ನ ಜಯವನ್ನು ಲೋಕದಲ್ಲಿ ಪ್ರದರ್ಶನ ಮಾಡೆಂದು ಪ್ರಾರ್ಥನೆ.

ತಾತ್ಪರ್ಯ :—ಈ ಸಂಧಿಯ ಕಡೆಯ ೩ ಪದ್ಯಗಳಿಂದ ಭಗವಂತನನ್ನು ಸ್ತೋತ್ರಮಾಡುತ್ತಾ ಅವನ ಮಹಿಮೆಯನ್ನು ಪ್ರಕಟಿಸುತ್ತಾರೆ :— ತಾತ್ಪರ್ಯ ಸ್ಪಷ್ಟವಾಗಿಯೇ ಇರುವುದು ॥ ೨೩ ॥

**ವನಚರಾದ್ರಿ ಧರಾಧರನೆ ಜಯ ॥**
**ಮನುಜ ಮೃಗವರ ವೇಷಜಯ ।**
**ಮನತ್ರಿವಿಕ್ರಮ ದೇವಜಯ ಭೃಗುರಾಮ ಭೂಮಜಯ ॥**
**ಜನಕಜಾವಲ್ಲಭನೆ ಜಯರು**
**ಗ್ಮಿಣೀ ಮನೋರಥ ಸಿದ್ಧಿದಾಯಕ**
**ಜಿನವಿಮೋಹಕ ಕಲಿವಿದಾರಣ ಜಯಜಯಾರಮಣ ॥೨೪॥**

ಪದ್ಯಾರ್ಥ :—ವನಚರ=ವನ=ನೀರಿನೊಳು, ಚರ = ಸಂಚರಿಸುವ ಮತ್ಸ್ಯಾವತಾರನೆ, ಜಯ=ಜಯುವನ್ನು ತೋರ್ಪಡಿಸು, ಅದ್ರಿಧರ=ಕೂರ್ಮ ರೂಪದಿಂದ ಮಂದರ ಪರ್ವತವನ್ನು ಹೊತ್ತವನೆ ! ಜಯ ! ಧರಾಧರನೆ= ಭೂಮಿಯನ್ನುದ್ಧರಿಸಿದ ವರಾಹರೂಪಿಯೇ ! ಜಯ ! ಮನುಜ ಮೃಗವರ ವೇಷ=ನರಸಿಂಹ ರೂಪವನ್ನು ಧರಿಸಿದ ಸ್ವಾಮಿ ! ಜಯ ! ಪಾವನ ! ತ್ರಿವಿ ಕ್ರಮದೇವ, ಜಯ, ಭೃಗುರಾಮಭೂಮ=ಪೂಜ್ಯನಾದ ಪರಶುರಾಮ, ಜಯ, ಜನಕಜಾವಲ್ಲಭನೆ=ಸೀತಾಕಾಂತ ಜಯ, ರುಕ್ಮಿಣೀ ಮನೋರಥ ಸಿದ್ಧಿದಾ ಯಕ=ರುಗ್ಮಿಣೀ ಮನಸ್ಸಿನಲ್ಲಿರುವುದನ್ನು ಪೂರ್ಣಗೊಳಿಸಿದ ಶ್ರೀ ಕೃಷ್ಣ, ಜಯ, ಜಿನವಿಮೋಹಕ=ಬುದ್ಧ ರೂಪದಿಂದ ಜನರನ್ನು ಮೋಹಗೊಳಿಸಿದ ವನೇ, ಜಯ, ಕಲಿವಿದಾರಣ = ಕಲ್ಕೀ ರೂಪದಿಂದ ಕಲಿಯುಗದ ಪಾಪಿಗ ಳನ್ನು ನಾಶಗೊಳಿಸಿದ, ಜಯಾರಮಣ=ಜಯಾ ಎಂಬ ಹೆಸರುಳ್ಳ ರಮಾ ದೇವಿಯ ಪತಿಯಾದ ಸಂಕರ್ಷಣನಾಮಕ ಶ್ರೀಹರಿ, ಜಯ=ಜಯುವನ್ನು ಲೋಕದಲ್ಲಿ ತೋರ್ಪಡಿಸು. || ೨೪ ||

ತಾತ್ಪರ್ಯ :—ಪರಮಾತ್ಮನ ಮತ್ಸ್ಯ ಕೂರ್ಮಾದಿ ದಶಾವತಾರಗ ಳನ್ನು ಸ್ತುತಿಸುತ್ತಾರೆ :—

ಅದ್ರಿಧರಾಧರನೆ ಎಂಬ ಪದದಲ್ಲಿ ಧರಶಬ್ದವನ್ನು ಆವೃತ್ತಿ ಮಾಡಿ ಅರ್ಥ ಮಾಡಬೇಕು. ಅದ್ರಿಧರ=ಕೂರ್ಮಾವತಾರ, ಧರಾಧರ=ಭೂಮಿಯನ್ನು ಧರಿಸಿದ ವರಾಹನೆಂದರ್ಥ. ವಾಮನಾವತಾರಮಾಡಿ ದಾನಬೇಡಿ ಭೂಮಿ ಯನ್ನು ಅಳೆಯುವಾಗ ತ್ರಿವಿಕ್ರಮಾವತಾರ ರೂಪವನ್ನು ಸ್ವೀಕರಿಸಿ ಇರುವುದ ರಿಂದ ವಾಮನಾವತಾರವೆ ತ್ರಿವಿಕ್ರಮಾವತಾರವು. ಮಿಕ್ಕ ಪದಗಳ ಅರ್ಥ ವಿಶದವಾಗಿರುವುದು.

**ಸಚ್ಚಿದಾನಂದಾತ್ಮ ಬ್ರಹ್ಮಕ |**
**ರಾರ್ಚಿತಾಂಘ್ರಿ ಸರೋಜಸುಮನಸ |**
**ಪ್ರೋಚ್ಚ ಸನ್ಮಂಗಳದ ಮಧ್ವಾಂತಃಕರಣರೂಢ ||**
**ಅಚ್ಯುತ ಜಗನ್ನಾಥವಿಠ್ಠಲ |**
**ನಿಚ್ಚಮೆಚ್ಚಿದ ಜನರ ಬಿಡಕಾಡ್ |**
**ಗಿಚ್ಚನುಂಡಾರಣ್ಯದೊಳು ಗೋ ಗೋಪರನಕಾಯ್ದ || ೨೫ ||**

ಪದ್ಯಾರ್ಥ :— ಸಚ್ಚಿದಾನಂದಾತ್ಮ=ಸಚ್ಚಿದಾನಂದ ಸ್ವರೂಪನು, ಬ್ರಹ್ಮಕರಾರ್ಚಿತಾಂಘ್ರಿ ಸರೋಜ=ಬ್ರಹ್ಮದೇವರ ಕೈಗಳಿಂದ ಪೂಜಿತವಾದ ಪಾದ ಕಮಲಗಳುಳ್ಳವನು, ಸುಮನಸ=ದೇವತೆಗಳಿಗೆ, ಪ್ರೋಚ್ಚ=ಅತ್ಯಂತ ಉತ್ತಮನು ಅಂದರೆ ದೇವೋತ್ತಮರು ಬ್ರಹ್ಮದೇವರು, ಅವರಿಗಿಂತಲೂ ಉತ್ತಮನೆಂದರ್ಥ. ಸನ್ಮಂಗಳದ=ಉತ್ತಮವಾದ ಶುಭ ಫಲವನ್ನು ಕೊಡುವವನು ಮಧ್ವಾಂತಃಕರಣರೂಢ= ಮಧ್ವಾಚಾರ್ಯರ ಅಂತರಂಗದಲ್ಲಿ ದೃಢವಾಗಿ ಕೂತಿರುವವನು, ಅಚ್ಯುತ=ನಾಶರಹಿತನು. ಅರಣ್ಯದೊಳು= ಯಮುನಾತೀರದಲ್ಲಿರುವ ಒಂದು ಅಡವಿಯಲ್ಲಿ, ಕಾಡುಕಿಚ್ಚನುಂಡು=ಕಾಡನ್ನು ಸುಟ್ಟುಕೊಂಡು ಬರುವ ಬೆಂಕಿಯನ್ನು ನುಂಗಿ, ಗೋ ಗೋಪರನ= ಗೋವುಗಳನ್ನು ಗೋಪಾಲಕರನ್ನು, ಕಾಯ್ದ=ಸಂರಕ್ಷಿಸಿದವನು. ಇಂತಹ ಜಗನ್ನಾಥ ವಿಠ್ಠಲ=ಶ್ರೀ ಬಿಂಬಮೂರ್ತಿ ಜಗನ್ನಾಥ ವಿಠ್ಠಲನು, ನಿಚ್ಚ= ಇವನು ನಿರ್ದುಷ್ಟನೆಂದು, ಮೆಚ್ಚಿದ=ಯಾರಭಕ್ತಿಗೆ ಮೆಚ್ಚುವನೋ, ಅಂತಹಾ ಜನರ=ಜನರನ್ನು, ಬಿಡ=ಸಂರಕ್ಷಣೆಮಾಡದೆ ಬಿಡಲಾರನು.

ತಾತ್ಪರ್ಯ :—ಭಕ್ತವತ್ಸಲನಾದ ಶ್ರೀ ಹರಿಯು ಯಾರನ್ನು ಉದ್ಧರಿಸಬೇಕೆಂದು ತನ್ನ ಮನಸ್ಸಿಗೆ ತೋರುವುದೋ ಅವರನ್ನು ಎಂದಿಗೂ ಬಿಡನು. ಅಂದರೆ ಯಾವನು ತಾನು ಮಾಡುವ ಭಕ್ತಿಯಿಂದ ಪರಮಾತ್ಮನು ಮೆಚ್ಚುವಂತೆ ಮಾಡುವನೊ, ಅವನಿಗೆ ಪರಮಾತ್ಮನು ವಲಿಯುವನೆಂದು ಹೇಳುತ್ತಾ ಈ ಸಂಧಿಯನ್ನು ಮುಗಿಸುತ್ತಾರೆ.

ಶ್ರೀ ಪರಮಾತ್ಮನು ಸಚ್ಚಿದಾನಂದ ಸ್ವರೂಪನು ಬ್ರಹ್ಮದೇವರ ಕರಗಳಿಂದ ಪೂಜಿತವಾದ ಪಾದಕಮಲಗಳುಳ್ಳವನು. ದೇವೋತ್ತಮನು, ಎಲ್ಲಾ ಭಕ್ತರಿಗೂ ಮಂಗಳಪ್ರದನು. ಶ್ರೀಮನ್ಮಧ್ವಾಚಾರ್ಯರ ಹೃತ್ಕಮಲದಲ್ಲಿ ವಾಸ ಮಾಡುವವನು. ಶ್ರೀ ಕೃಷ್ಣಾವತಾರದಲ್ಲಿ ಗೋವುಗಳನ್ನು ಕಾಯುತ್ತಾ ಯಮುನಾನದೀ ತೀರದಲ್ಲಿರುವ ಒಂದು ಕಾಡಿನಲ್ಲಿ ನಂದಗೋಪ ಮೊದಲಾದ ಗೋಪಾಲಕರು ಗೋವುಗಳಿಂದ ಕೂಡಿ ಮಲಗಿರಲು ರಾತ್ರಿಯಲ್ಲಿ ಕಾಡುಕಿಚ್ಚು ಬಂದು ವನವನ್ನು ಸುಡುತ್ತಿರಲು ಅಲ್ಲಿದ್ದವರೆಲ್ಲರೂ ಭೀತರಾಗಿ ಕೃಷ್ಣನನ್ನು ಮೊರೆ ಹೊಕ್ಕರು. ಆಗ ಕೃಷ್ಣನು, "ನಿಮೀಲಯತ ಮಾ ಭೈಷ್ಟ ಲೋಚನಾನೀತ್ಯ ಭಾಷತ | ತಥೈವ ಮೀಲಿತಾಕ್ಷೇಷು ಭಗವಾನಗ್ನಿಮುಲ್ಬಣಂ | ಪೀತ್ವಾಮುಖೇನ ತಾನ್ ಕೃಛ್ರಾದ್ಯೋಗಾಧೀಶೋವ್ಯಮೋಚ

ಯತ್" ಶ್ರೀ ಕೃಷ್ಣನು ಗೋಪಾಲಕರನ್ನು ನೋಡಿ, ಭಯಪಡಬೇಡಿರಿ, ನೀವೆಲ್ಲರೂ ಕಣ್ಣು ಮುಚ್ಚಿಕೊಳ್ಳಿರಿ ಎಂದು ಹೇಳಿ, ಆ ಘೋರವಾದ ಕಾಡು ಕಿಚ್ಚನ್ನು ನುಂಗಿಬಿಟ್ಟು ಯೋಗಿಗಳಿಗರಸನಾದ ಸ್ವಾಮಿಯು ಗೋವುಗಳನ್ನು ಗೋಪಾಲರನ್ನು ಅಗ್ನಿಯಿಂದ ರಕ್ಷಿಸಿದನೆಂದು ಭಾಗವತ ದಶಮಸ್ಕಂಧದಲ್ಲಿ ಹೇಳಿರುವರು. ನಾಶರಹಿತನಾದ ಶ್ರೀ ಜಗನ್ನಾಥ ವಿಠ್ಠಲನು, "ಯಮೇ ವೈಷವೃಣುತೆ ತೇನಲಭ್ಯಃ" ಎಂಬ ಶ್ರುತಿಯಲ್ಲಿ ಹೇಳಿದಂತೆ, ಯಾರು ತನ್ನಲ್ಲಿ ಭಕ್ತಿಮಾಡಿ ತನ್ನನ್ನು ಮೆಚ್ಚಿಸುವರೊ, ತಾನು ಯಾರಭಕ್ತಿಗೆ ಮೆಚ್ಚುವನೋ ಅವರನ್ನು ಎಂದಿಗೂ ಕೈಬಿಡನು.

ಹತ್ತನೆಯ ಸಂಧಿ ವ್ಯಾಖ್ಯಾನವು ಮುಗಿದುದು.



# ೧೧ ನೆಯ ಸಂಧಿ

## ಧ್ಯಾನಪ್ರಕ್ರಿಯಾ ಸಂಧಿ

ಅವತಾರಿಕೆ:—ಹತ್ತು ಸಂಧಿಗಳನ್ನು ರಚಿಸಿ ಕೊನೆಯಲ್ಲಿ 'ಬುದ್ಧಿ ವಿದ್ಯಾಬಲದಿ' ಎಂಬ ೧೮ ನೆಯ ಪದ್ಯಮೊದಲು 'ಲೋಕವಾರ್ತೆ ಇದಲ್ಲ' ಎಂಬ ೨೨ ನೆಯ ಪದ್ಯದವರೆಗೂ ಸ್ವಾಹಂಕಾರ ಖಂಡನ ಪೂರ್ವಕವಾಗಿ ಈ ಗ್ರಂಥದ ಪ್ರಯೋಜನ, ಶ್ರವಣಾದಿಗಳಿಂದಾಗುವ ಫಲಮೊದಲಾದವುಗಳನ್ನು ಹೇಳಿ, ಕಡೆಯ ಮೂರು ಪದ್ಯಗಳಿಂದ ಮಂಗಳ ರೂಪವಾಗಿ ಪರಮಾತ್ಮ ನನ್ನು ಸ್ತುತಿಸಿ ಸಂಧಿಯನ್ನು ಮುಗಿಸಿರುವರು. ಸಾಧಾರಣವಾಗಿ ಗ್ರಂಥ ಕರ್ತೃಗಳು, ಸ್ವಾಹಂಕಾರ ಖಂಡನವನ್ನಾಗಲಿ, ಗ್ರಂಥದ ಪ್ರಯೋಜನವ ನ್ನಾಗಲಿ, ಹೇಳಬೇಕಾದರೆ ಗ್ರಂಥಕ್ಕೆ ಉಪಕ್ರಮಕಾಲದಲ್ಲಿ ಅಥವಾ ಉಪಸಂಹಾರದಲ್ಲಿ ಹೇಳುವುದುಂಟು. ಫಲಸ್ತುತಿ ಹೇಳಬೇಕಾದರೆ ಒಂದೊಂದು ಪ್ರಕ್ರಿಯಾ ಮುಗಿಯುವ ಕಾಲದಲ್ಲಿ, ಹೇಳುತ್ತಾರೆ. ಕಾವ್ಯ ಗಳ ಮಧ್ಯದಲ್ಲಿ ಸ್ವಾಹಂಕಾರ ಖಂಡನಾದಿಗಳನ್ನಾಗಲಿ, ಗ್ರಂಥದ ಪ್ರಯೋ ಜನ ಫಲಾದಿಗಳನ್ನು ಹೇಳುವ ಸಂಪ್ರದಾಯವಿಲ್ಲ. ಹೀಗಿರಲು ದಾಸರಾ ಯರು ೯ ಸಂಧಿಗಳವರೆಗೂ ಸುಮ್ಮನಿದ್ದು ೧೦ ನೆಯ ಸಂಧಿಯಲ್ಲಿ ಹೀಗೆ ಹೇಳಿದುದಕ್ಕೆ ಕಾರಣವಿಲ್ಲದೆ ಇರಲಿಕ್ಕಿಲ್ಲವೆಂದು ತೋರುತ್ತದೆ.

ಭಗವದ್ಗೀತೆಯಲ್ಲಿ ಮೊದಲನೆಯ ೬ ಅಧ್ಯಾಯಗಳಲ್ಲಿ ಜ್ಞಾನೋಪಾ ಯವನ್ನೂ, ೨ ನೆಯ ೬ ಅಧ್ಯಾಯಗಳಲ್ಲಿ ಸಾಧನವನ್ನೂ, ೩ ನೆಯ ೬ ಅಧ್ಯಾ ಯಗಳಲ್ಲಿ ಇವುಗಳ ವಿಸ್ತಾರವನ್ನು ಹೇಳಿರುವರು. ಕರ್ಮಯೋಗ, ಭಕ್ತಿ ಯೋಗ, ಜ್ಞಾನಯೋಗವೆಂಬ ಮೂರರಲ್ಲಿ ಕರ್ಮಯೋಗಿಗಳು ಮನುಷ್ಯರೆಂ ತಲೂ, ಭಕ್ತಿಯೋಗಿಗಳು ದೇವತೆಗಳೆಂತಲೂ, ಸನಕಾದಿ ಋಷಿ ಮೊದಲಾದ ವರು ಜ್ಞಾನಯೋಗಿಗಳೆಂತಲೂ, ಭಾಗವತ ತಾತ್ಪರ್ಯದಲ್ಲಿ ಭಾಗಿಸಿರುವರು. ಆದರೂ ಭಕ್ತಿಗೆ ಮುಖ್ಯಾಧಿಕಾರಿಗಳು ದೇವಾದಿಗಳಾದರೂ ಮನುಷ್ಯೋತ್ತ ಮರಿಗೂ ಸಾಧಾರಣವಾಗಿ ಭಕ್ತಿ ಜ್ಞಾನ ಸಾಧನಗಳುಂಟೇ ಉಂಟು. ಅದ ರಲ್ಲಿಕರ್ಮ ಲಕ್ಷಣವಾವುದು? ಭಕ್ತಿ ಹೇಗೆ ಹುಟ್ಟುವುದು? ಜ್ಞಾನವು ಹೇಗೆ ದೊರಕುವುದು ಎಂಬ ವಿಷಯವನ್ನು ಸರಿಯಾಗಿ ತಿಳಿದುಕೊಳ್ಳದೇ, ಉಪವಾಸಾದಿಗಳಿಂದ ಶರೀರ ದಂಡನವೇ ಕರ್ಮವೆಂತಲೂ, ಶ್ವಾಸನಿರೋ

ಧವೆ ಧ್ಯಾನವೆಂತಲೂ, ಭಾವಿಸಿ ಸಾಧನಮಾರ್ಗ ಗೊತ್ತಿಲ್ಲದೆ ಕಷ್ಟ ಪಡುತ್ತಿರುವ ಜನರ ಉದ್ಧಾರಕ್ಕೋಸ್ಕರ ದಾಸರಾಯರು ಕರುಣದಿಂದ ಮೊದಲನೆಯ ೧೦ ಸಂಧಿಗಳಲ್ಲಿ ಗೀತೆಯಲ್ಲಿ ಹೇಳಿದಂತೆ ಜ್ಞಾನೋಪಾಯವನ್ನು, ೧೧ ರಿಂದ ೧೭ ನೆಯ ಸಂಧಿಯುವರೆಗೂ ಸಾಧನೋಪಾಯುವನ್ನು ಮುಂದೆ ಕಡೆಯುವರಿಗೂ ಇವುಗಳನ್ನೇ ವಿಶದಮಾಡಿರುವರೆಂದು ಹೇಳಬಹುದಾಗಿದೆ.

ಇದರಲ್ಲಿ ಮೊದಲು ಮಂಗಳಾಚರಣ ಸಂಧಿಯಾದಮೇಲೆ, ೨ನೆಯ ಕರುಣಾಸಂಧಿಯಲ್ಲಿ ಪರಮಾತ್ಮನು ಪರಮ ದಯಾಳುವಾದ್ದರಿಂದ ಭಕ್ತರು ಏನುತಪ್ಪುಮಾಡಿದರೂ ಕ್ಷಮಿಸುವನು ; ಆದ್ದರಿಂದ ಮಾಡಿದುದನ್ನು ಪರಮಾತ್ಮನೇ ಮಾಡಿಸಿದನೆಂದು ಭಾವಿಸಿ ಫಲಾಪೇಕ್ಷೆಯನ್ನು ಬಿಟ್ಟು ಕರ್ಮಗಳನು ಮಾಡಿ ಪರಮಾತ್ಮನಿಗೆ ಸಮರ್ಪಿಸಬೇಕೆಂದು ತಿಳಿಸಿ ವ್ಯಾಪ್ತಿ ಸಂಧಿಯಲ್ಲಿ ಕರ್ಮಗಳನ್ನು ತಾನೇ ಮಾಡುವೆನೆಂದು ಭಾವಿಸಿ ಕರ್ಮಮಾಡಲು ನಿಷ್ಫಲವಾಗುವುದು; ನಮ್ಮ ದೇಹದೊಳಗೂ, ಇಂದ್ರಿಯಗಳಲ್ಲಿಯೂ ಪರಮಾತ್ಮನೇ ವ್ಯಾಪ್ತನಾಗಿ ಸಕಲವೂ ಮಾಡಿಸುವನೆಂದು ಭಾವಿಸಿ ಕರ್ಮಮಾಡಿದರೇನೇ ಕರ್ಮಸಾಫಲ್ಯವಾಗುವುದೆಂದು ಭಗವಂತನ ವ್ಯಾಪ್ತಿಯನ್ನು ಬೋಧಿಸಿದರು. ಭೋಜನ ರಸವಿಭಾಗ ಸಂಧಿಯಲ್ಲಿ ಶ್ರೀಪರಮಾತ್ಮನು ಭೋಜ್ಯಪದಾರ್ಥಗಳಲ್ಲಿ ಅನೇಕರೂಪಗಳಿಂದಿದ್ದು ರಸವನ್ನು ಸ್ವೀಕರಿಸುವನೆಂಬಿವೇ ಮೊದಲಾದವುಗಳನ್ನು ತಿಳಿದು ಭೋಜನಮಾಡುವುದೂ ಸಹ ಒಂದು ಸತ್ಕರ್ಮವೆಂದೇ ಭಾವಿಸಬೇಕೆಂದರು. ವಿಭೂತಿ ಸಂಧಿಯಲ್ಲಿ ನದಿ ಮೊದಲಾದುವುಗಳಲ್ಲಿ ಸ್ನಾನಮಾಡುವಾಗಲೂ, ಪ್ರತಿಮಾ ಸಾಲಿಗ್ರಾಮಾದಿಗಳ ಪೂಜಾದಿಗಳನ್ನು ಮಾಡುವಾಗಲೂ, ಸಹ ಅಲ್ಲಲ್ಲಿ ಭಗವದ್ರೂಪಗಳನ್ನು ಚಿಂತಿಸಿ ಪೂಜಿಸಿದರೇನೇ ಕರ್ಮಸಫಲವಾಗುವದೆಂದು ಹೇಳಿದರು. ಇದರಂತೆ ಪಂಚಮಹಾಯಜ್ಞವೆಂದರೆ ಅಗ್ನಿಯಲ್ಲಿ ಆಹುತಿಕೊಟ್ಟು ಹೋಮಿಸುವುದೇ ಯಜ್ಞಕರ್ಮವಲ್ಲವೆಂತಲು, ತಂದೆ, ತಾಯಿ, ಭೂಮಿ, ಮೇಘ, ಆಕಾಶವೆಂಬ ಪಂಚಾಗ್ನಿಯಲ್ಲಿ ಅನುಸಂಧಾನದಿಂದ ಧ್ಯಾನಮಾಡುವುದೇ ಯಾಗವೆಂದು ಯಜ್ಞಕರ್ಮಲಕ್ಷಣವನ್ನು ಹೇಳಿದರು. ಪಂಚತನ್ಮಾತ್ರಾ ಸಂಧಿಯಲ್ಲಿ ಶಬ್ದಸ್ಪರ್ಶಾದಿ ವ್ಯಾಪಾರಗಳೆಲ್ಲವೂ ಪರಮಾತ್ಮನೇ ಅನಂತಾನಂತ ರೂಪಗಳಿಂದ ಪೃಥಿವ್ಯಾದಿಗಳಲಿದ್ದು ಮಾಡಿಸುವನೆಂದು ತಿಳಿದು ಮಾಡುವ ಕರ್ಮಗಳೇ ಕರ್ಮಗಳೆಂದು ಸೂಚಿಸಿದರು. ಮಾತೃಕಾ ಸಂಧಿಯಲ್ಲಿ ಅಕಾರಾದ್ಯಕ್ಷರ ಪ್ರತಿಪಾದ್ಯನು ಪರಮಾತ್ಮನೇ

ಆದ್ದರಿಂದ ನಾವು ಆಡುವ ಮಾತುಗಳೂಕೂಡ ಭಗವದ್ವಾಚಕವೆಂದು ತಿಳಿದು ಏನುಮಾತನಾಡಿದರೂ ಎಲ್ಲವೂ ಪೂಜಾರೂಪವೇ ಆಗುವುದೆಂದು ಸೂಚಿಸಿದರು. ಜೀವಪ್ರಕ್ರಿಯ ಸಂಧಿಯಲ್ಲಿ ಜೀವರ ಯೋಗ್ಯತಾ ತಿಳಿದು ಉತ್ತಮಾಧಿಷ್ಠಾನದಲ್ಲಿ ಪೂಜಿಸುವುದೇ ಪೂಜಾಕ್ರಿಯೆಯೆಂದು ತೋರಿಸಿದರು. ಸರ್ವಪ್ರತೀಕ ಸಂಧಿಯಲ್ಲಿ ಕೆರೆ ಕುಂಟೆ ಮೊದಲಾದ ಎಲ್ಲಾ ನೀರುಗಳಲ್ಲಿಯೂ, ಎಲ್ಲಾ ಭೂಮಿಯಲ್ಲಿಯೂ, ಎಲ್ಲಾ ವಸ್ತುಗಳಲ್ಲಿಯೂ ಶ್ರೀಹರಿ ಇರುವನೆಂದು ತಿಳಿದು ಸ್ನಾನಾದಿಗಳನ್ನು ಮಾಡಿದರೆ ತೀರ್ಥಗಳಲ್ಲಿ ಸ್ನಾನಮಾಡಿದ ಫಲವೂ, ಯಾತ್ರಾಫಲವೂ ಪ್ರಾಪ್ತಿಯಾಗುವದೆಂದು ಹೇಳಿದರು. ಹೀಗೆ ೧೦ ಸಂಧಿಗಳಲ್ಲಿ ಭಗವದ್ಗೀತೆಯಲ್ಲಿ ಹೇಳಿದಂತೆಯೇ "ಬುದ್ಧಿರ್ಯೋಗೇತ್ವಿಮಾಂಶ್ಶೃಣು | ಯೋಗಸ್ಥಃಕುರು ಕರ್ಮಾಣಿ ಸಂಗಂತ್ಯಕ್ತ್ವಾ ಧನಂಜಯ | ಸಿಧ್ಯಸಿಧ್ಯೋಃ ಸಮೋಭೂತ್ವಾ ಸಮತ್ವಂ ಯೋಗಉಚ್ಯತೆ" ಎಂಬಿವೇ ಮೊದಲಾದ ವಾಕ್ಯಗಳಿಂದ ಯೋಗವೆಂದರೆ ಉಪಾಯವೆಂತಲೂ, ಕರ್ಮಫಲತ್ಯಾಗವೇ ಸನ್ಯಾಸವೆಂತಲೂ, ಹೇಳಿ ಇವುಗಳನ್ನು ಜ್ಞಾನೋಪಾಯವೆಂದು ಸ್ಪಷ್ಟಮಾಡಿರುವರು. ಆ ಸಂಧಿಯ ಕಡೆಯ ಭಾಗದಲ್ಲಿ ಸ್ವಾಹಂಕಾರ ಖಂಡನಪೂರ್ವಕ ಫಲಸ್ತುತಿ ಮಂಗಳಾಚರಣಗಳನ್ನು ಮುಗಿಸಿದರೆಂದು ತೋರುವುದು. ಮುಂದಿನ ಸಂಧಿಮೊದಲು ೧೭ನೆಯ ಸಂಧಿಯವರೆವಿಗೂ ಮುಕ್ತಿಗೆ ಸಾಧನರೂಪವಾದ ಧ್ಯಾನಪ್ರಕ್ರಿಯ ನಾಡಿಪ್ರಕ್ರಿಯ ನಾಮಸ್ಮರಣೆ ಮೊದಲಾದ ಸಂಧಿಗಳನ್ನು ಉಪಕ್ರಮಿಸುತ್ತಾರೆ; ಅದರಲ್ಲಿ ತನಗಿರುವ ಅಲ್ಪಭಕ್ತಿಯಿಂದ ಭಗವತ್ಪ್ರೀತಿಗೋಸ್ಕರ ಕರ್ಮಾದಿಗಳನ್ನು ಮಾಡಿ ಭಕ್ತಿ ಅವಿಚ್ಛಿನ್ನವಾಗಿ ನಿಂತಮೇಲೆ ಮಾಡಬೇಕಾದುದು ಭಗವದ್ಧ್ಯಾನ, ನಾಮಸ್ಮರಣೆ, ಧ್ಯಾನಮಾಡಬೇಕಾದರೆ ಧ್ಯಾನಕ್ಕೆ ಗೋಚರವಾಗುವ ಪದಾರ್ಥದ ಸ್ವರೂಪಜ್ಞಾನವುಅವಶ್ಯಕವು. ಅದಕ್ಕಾಗಿ ಧ್ಯಾನ ಸಾಧನವಾಗುವಂತೆ ಧ್ಯಾನಪ್ರಕ್ರಿಯೆಯೆಂಬ ಸಂಧಿಯನ್ನು ಉಪಕ್ರಮಮಾಡುತ್ತಾರೆ:—

**ಪಾದುಕಿಯು ಕಂಟಕ ಶಿಕತ**  
**ಮೊದಲಾದವನುದಿನ ಬಾಧಿಸುವವೇ**  
**ಕಾದಶೇಂದ್ರಿಯಗಳಲಿ ಬಿಡದೆ ಹೃಷೀಕಪನ ಮೂರ್ತಿ ||**  
**ಸಾದರದಿ ನೆನೆವವನು ಏನಪ**  
**ರಾಧಗಳು ಮಾಡಿದರು ಸರಿಯೆನಿ**  
**ರೋಧಗೈಸವು ಮೋಕ್ಷಮಾರ್ಗಕೆ ದುರಿತರಾಶಿಗಳು || ೧ ||**

ಪದ್ಯಾರ್ಥ :—ಪಾದುಕಿಯ = ಪಾದರಕ್ಷೆಗಳನ್ನು ಧರಿಸಿದ ಪುರುಷನನ್ನು, ಕಂಟಕ=ಮುಳ್ಳುಗಳು, ಶಿಕತ=ಉಸುಬು ಮೊದಲಾದವು, ಬಾಧಿಸುವವೇ? ಅನುದಿನ=ಪ್ರತಿದಿವಸ, ಏಕಾದಶೇಂದ್ರಿಯಗಳಲಿ=ಮನಸ್ಸಿನಿಂದ ಕೂಡಿದ ಚಕ್ಷುಶ್ರೋತ್ರಾದಿ ದಶೇಂದ್ರಿಯಗಳಲ್ಲಿ, ಬಿಡದೆ, ಹೃಷೀಕಪನ=ಇಂದ್ರಿಯಾಭಿಮಾನಿಯಾದ ಹೃಷೀಕೇಶನಾಮಕ ಶ್ರೀಪರಮಾತ್ಮನ, ಮೂರ್ತಿ=ಸ್ವರೂಪವನ್ನು, ಸಾದರದಿ = ಆದರದಿಂದ ಕೂಡಿದವನಾಗಿ, ನೆನೆವವನು=ಚಿಂತಿಸುವವನು, ಏನಪರಾಧಗಳು ಮಾಡಿದರು ಸರಿಯೆ, ದುರಿತರಾಶಿಗಳು=ಆ ಪಾಪರಾಶಿಗಳು, ಮೋಕ್ಷಮಾರ್ಗಕೆ, ನಿರೋಧಗೈಸವು = ಪ್ರತಿಬಂಧಕ ಮಾಡಲಾರವು || ೧ ||

ತಾತ್ಪರ್ಯ :--ಪಾದರಕ್ಷೆಯನ್ನು ಕಾಲಿನಲ್ಲಿ ಧರಿಸಿಕೊಂಡು ಕಲ್ಲುಮುಳ್ಳುಗಳುಳ್ಳ ಸ್ಥಳಗಳಲ್ಲಿ ನಡೆದರೂ ಹೇಗೆ ಅವನನ್ನು ಬಾಧಿಸಲಾರವೋ, ಹಾಗೆಯೇ, ೧೧ ಇಂದ್ರಿಯಗಳಲ್ಲಿ ಇಂದ್ರಿಯಾಧಿಪತಿಯಾದ ಹೃಷೀಕೇಶನಿರುವನೆಂದು ಆದರದಿಂದ ಧ್ಯಾನಿಸುವವರು, ಏನು ಅಪರಾಧಗಳನ್ನು ಮಾಡಿದರೂ ಆ ಪಾಪರಾಶಿಗಳು ಮೋಕ್ಷಮಾರ್ಗಕ್ಕೆ ಎಂದಿಗೂ ಪ್ರತಿಬಂಧಕವಾಗಲಾರವು. ಭಗವದ್ಭಕ್ತರು ಆಚರಿಸುವ ಪಾಪಗಳು, ಅವರು ಯೋಗ್ಯತೆಮೀರಿ ಮಾಡುವ ಹೆಚ್ಚು ಪುಣ್ಯಗಳನ್ನು ಮಾತ್ರ ನಾಶಗೊಳಿಸುವುವೇ ಹೊರತು ಕ್ಲುಪ್ತಾನಂದಕ್ಕೆ ಬೇಕಾದಷ್ಟು ಕ್ಲುಪ್ತಪುಣ್ಯವನ್ನು ನಾಶಮಾಡಿ ಮುಕ್ತಿಗೆ ಪ್ರತಿಬಂಧಕವಾಗಲಿ, ಮುಕ್ತಿಯಲ್ಲಿ ಕ್ಲುಪ್ತಾನಂದಕ್ಕೆ ಕಮ್ಮಿಯಾಗಲಿ ಎಂದಿಗೂ ಆಗುವುದಿಲ್ಲ. ಅಹಲ್ಯಾ ಜಾರತ್ವದಿಂದ ದೇವೇಂದ್ರನಿಗೂ, ಗುರುಸ್ತ್ರೀ ಗಮನದಿಂದ ಚಂದ್ರನಿಗೂ ಮುಕ್ತಿಯಲ್ಲಿ ಸುಖಕ್ಕೆ ಏನೇನು ಕಮ್ಮಿಯಾಗಲಿಲ್ಲ. ಇದರಂತೆ ಧ್ಯಾನಾಸಕ್ತರು ಏನಾದರೂ ಪಾಪವನ್ನು ಮಾಡಿದ್ದರೂ ಪಾಪರಾಶಿಗಳೆಲ್ಲಾ ಭಸ್ಮವಾಗುವದೇ ಹೊರತು ಮುಕ್ತಿಗೆ ಪ್ರತಿಬಂಧಕವಾಗುವದಿಲ್ಲವೆಂದು ತಾತ್ಪರ್ಯ. ಈ ಪದ್ಯದಿಂದ ಈ ಸಂಧಿಯಲ್ಲಿ ಹೇಳುವ ಧ್ಯಾನವಿಷಯದ ಅಭಿಪ್ರಾಯವನ್ನು ಸೂಚಿಸಿದಂತಾಯಿತು || ೧ ||

ನಿಷ್ಕಾಮೋಪಾಸನೆಯೆ ಮುಕ್ತಿಸಾಧನವೆಂದು ಹೇಳುತ್ತಾರೆ :—

**ಹಗಲು ನಂದಾದೀಪದಂದದಿ**
**ನಿಗಮವೇದ್ಯನ ಪೂಜಿಸುತ ಕೈ**
**ಮುಗಿದು ನಾಲ್ಕರೊಳೊಂದು ಪುರುಷಾರ್ಥವನು ಬೇಡದಲೆ ||**

**ಜಗದುದರ ಕೊಟ್ಟದನು ಭುಂಜಿಸಿ**
**ಮಗ ಮಡದಿ ಪ್ರಾಣೇಂದ್ರಿಯಾತ್ಮಾ**
**ದಿಗಳು ಭಗವದಧೀನವೆಂದಡಿಗಡಿಗೆ ನೆನವುತಿರು ॥ ೨ ॥**

ಪದ್ಯಾರ್ಥ :—ಹಗಲು ನಂದಾದೀಪದಂದದಿ = ಹಗಲು ಕಾಲದಲ್ಲಿ ದೇವರ ಮುಂದಿಟ್ಟ ನಂದಾದೀಪದಂತೆ [ಬೆಳಕಿನ ಉದ್ದೇಶ್ಯವಿಲ್ಲದೆ ದೇವರ ಪ್ರೀತಿಗೋಸ್ಕರವೇ ಇಟ್ಟಿರುವಂತೆ] ನಿಗಮವೇದ್ಯನ=ವೇದಪ್ರತಿಪಾದ್ಯನಾದ ಶ್ರೀಪರಮಾತ್ಮನನ್ನು, ಪೂಜಿಸುತ, ಕೈಮುಗಿದು, ನಾಲ್ಕರೊಳೊಂದು ಪುರುಷಾರ್ಥವನು=ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕರಲ್ಲಿ ಯಾವದೊಂದು ಪುರುಷಾರ್ಥವನ್ನೂ, ಬೇಡದಲೆ, ಜಗದುದರ=ಜಗತ್ತನ್ನು ಹೊಟ್ಟೆಯಲ್ಲಿ ಧರಿಸಿದ ಶ್ರೀಪರಮಾತ್ಮನು, ಕೊಟ್ಟದನು, ಭುಂಜಿಸಿ, ಮಗಮಡದಿ ಪ್ರಾಣೇಂದ್ರಿಯಾತ್ಮಾದಿಗಳು=ಮಕ್ಕಳು, ಹೆಂಡತಿ, ಪ್ರಾಣ, ಇಂದ್ರಿಯಗಳು, ತನ್ನಜೀವ, ಅಥವಾ ಶರೀರ ಇವುಗಳೆಲ್ಲವೂ, ಭಗವದಧೀನವೆಂದು, ಅಡಿಗಡಿಗೆ =ಹೆಜ್ಜೆಹೆಜ್ಜೆಗೆ ಅಂದರೆ ಆಗಿಂದಾಗ್ಯೆ, ನೆನವುತಿರು ॥ ೨ ॥

ತಾತ್ಪರ್ಯ :—ಹಗಲು ಕಾಲದಲ್ಲಿ ನಂದಾ ದೀಪವನ್ನಿಡುವುದು ಹೇಗೆ ಕತ್ತಲು ಪರಿಹಾರಕ್ಕಲ್ಲದೆ ಕೇವಲ ದೇವರ ಪ್ರೀತಿಗೋಸ್ಕರವೂ, ಹಾಗೆಯೆ ನಿತ್ಯದಲಿ ದೇವರನ್ನು ಪೂಜಿಸುತ್ತಿರಬೇಕು. ಯಾವದನ್ನೂ ಬೇಡಬಾರದು. ದೇವರ ಸಂಕಲ್ಪದಿಂದ ಯಾವಕಾಲಕ್ಕೆ ಏನು ಪ್ರಾಪ್ತವಾಗವುದೊ ಅದನ್ನು ಅನುಭವಿಸುತ್ತಾ ಇವೆಲ್ಲವೂ ಈಶ್ವರ ಸಂಕಲ್ಪವೆಂದು ಭಾವಿಸುತ್ತಾ ತನ್ನ ಹೆಂಡರು, ಮಕ್ಕಳು, ಪ್ರಾಣ, ಇಂದ್ರಿಯಗಳು, ಈದೇಹ ಮೊದಲಾದ ಸಕಲವೂ ಪರಮಾತ್ಮನ ಅಧೀನವೆಂದು ನಂಬಬೇಕು. ಈ ವಿಷಯದಲ್ಲಿ ಕನಕದಾಸರವರು, "ತನುನಿನ್ನದು ಜೀವನನಿನ್ನದು । ಅನುದಿನವಲಿ ಬಾಹೊ ಸುಖ ದುಃಖ ನಿನ್ನದಯ್ಯ" ಎಂದು ಮಾಡಿರುವ ಪದದಂತೆ ಭಾವಿಸಿ, ಸರ್ವದಾ ಪರಮಾತ್ಮನನ್ನು ಸ್ಮರಿಸುತ್ತಿರಬೇಕು.

ಜೀವನಿಗೂ ಪರಮಾತ್ಮನಿಗೂ ಇರುವ ವೈಲಕ್ಷಣ್ಯವನ್ನು ತಿಳಿದು ಜೀವ ಭಿನ್ನ ಪರಮಾತ್ಮನೆಂದು ಪೂಜಿಸಬೇಕೆಂದು ಹೇಳುತ್ತಾರೆ.

**ಅಸ್ವತಂತ್ರನು ಜೀವಹರಿಸ**
**ರ್ವಸ್ವತಂತ್ರನು ನಿತ್ಯಸುಖಮಯ**
**ನಿಸ್ವಬದ್ಧಲ್ಪಜ್ಞ ಶಕ್ತಿಸುದುಃಖಿನಿರ್ವಿಣ್ಣ ॥**

**ಹ್ರಸ್ವದೇಹಿ ಸನಾಥಜೀವನು**
**ವಿಶ್ವವ್ಯಾಪಕ ಕರ್ತುಬ್ರಹ್ಮ ಸ**
**ರಸ್ವತೀ ಶಾದ್ಯಮರನುತ ಹರಿಯೆಂದು ಕೊಂಡಾಡು ॥ ೩ ॥**

ಪದ್ಯಾರ್ಥ :—ಜೀವ=ಜೀವನು, ಅಸ್ವತಂತ್ರನು, ಹರಿ = ಹರಿಯು, ಸರ್ವಸ್ವತಂತ್ರನು, ನಿತ್ಯಸುಖಮಯ=ನಿತ್ಯವಾದ ಸುಖಸ್ವರೂಪನು, ಜೀವನು, ನಿಸ್ವ=ದರಿದ್ರನು, ಬದ್ಧ=ವಿಧಿನಿಷೇಧಗಳಿಂದ ಬದ್ಧನು, ಅಲ್ಪಜ್ಞ=ಸ್ವಲ್ಪಮಾತ್ರ ಜ್ಞಾನಉಳ್ಳವನು, ಅಲ್ಪಶಕ್ತಿಯುಳ್ಳವನು, ಸುದುಃಖಿ=ದುಃಖಸ್ವರೂಪನು, ನಿರ್ವಿಣ್ಣ=ದೀನನಾಗಿ ಕಂಗೆಟ್ಟವನು, ಹ್ರಸ್ವದೇಹಿ = ಅತಿ ಸೂಕ್ಷ್ಮವಾದ ಆಕಾರಉಳ್ಳವನು. ಸನಾಥ=ಪರಮಾತ್ಮನೆಂಬ ನಾಥನಿಂದ ಕೂಡಿರುವನು, ಹರಿ=ಶ್ರೀಪರಮಾತ್ಮನು, ವಿಶ್ವವ್ಯಾಪಕ, ಕರ್ತೃ=ಸೃಷ್ಟ್ಯಾದಿ ಸಕಲ ಕರ್ತವ್ಯ ಶಕ್ತಿಯುಳ್ಳವನು, ಬ್ರಹ್ಮಸರಸ್ವತೀಶಾದಿ=ಬಹ್ಮದೇವರು, ಸರಸ್ವತೀ, ರುದ್ರದೇವರು ಮೊದಲಾದ, ಅಮರನುತ=ದೇವತೆಗಳಿಂದ ನಮಸ್ಕಾರ ಮಾಡಿಸಿಕೊಳ್ಳಲ್ಪಡುವವನು ಎಂದು ಕೊಂಡಾಡು ॥ ೩ ॥

ತಾತ್ಪರ್ಯ :—ಜೀವನು ಅಸ್ವತಂತ್ರನು, ಪರಮಾತ್ಮನು ಸರ್ವಸ್ವತಂತ್ರನು, ನಿತ್ಯಸುಖಸ್ವರೂಪನು, ವಿಶ್ವವ್ಯಾಪಕನು, ಬ್ರಹ್ಮರುದ್ರಾದಿಗಳಿಂದ ಸ್ತುತ್ಯನು, ಸೃಷ್ಟ್ಯಾದಿಕರ್ತನು. ಜೀವನು ದರಿದ್ರನು, ನಿತ್ಯಬದ್ಧನು, ಅಲ್ಪಜ್ಞನು, ಅಲ್ಪಶಕ್ತಿಯುಳ್ಳವನು, ದುಃಖಪೂರ್ಣನು, ದೀನನು. ಅತಿಸೂಕ್ಷ್ಮಸ್ವರೂಪನು. ಪರಮಾತ್ಮನಿಂದ ಸನಾಥನಾಗಿರುವನು, ಭಗವದನುಗ್ರಹದಿಂದಲೆ ಜ್ಞಾನ, ಶಕ್ತಿ, ಸುಖಾದಿಗಳು ಜೀವನಿಗೆ ಆಗುವುವು. ಎಂದು ತಿಳಿದು ಪರಮಾತ್ಮನನ್ನು ಸ್ತುತಿಸಬೇಕು. ॥ ೩ ॥

೭೨ ಸಹಸ್ರನಾಡಿಗಳಲ್ಲಿ ಅಷ್ಟುರೂಪಗಳಿಂದ ಪರಮಾತ್ಮನಿರುವನೆಂದು ಉಪಾಸನಾ ಮಾಡಬೇಕೆಂಬ ವಿಷಯವನ್ನು ಶಿಷ್ಯೋಪದೇಶಸಹಿತ ಸೂಚಿಸುತ್ತಾರೆ.

**ಮತ್ತೆ ವಿಶ್ವಾದ್ಯೆಂಟುರೂಪೊಂ**
**ಭತ್ತರಿಂದಲಿ ಪೆಚ್ಚಿಸಲು ಯು**
**ಪ್ಪತ್ತೆರಡು ರೂಪಗಳಹವು ಒಂದೊಂದು ಸಾಹಸ್ರ ॥**

**ಪೃಥಕ್ ಪೃಥಕ್ ನಾಡಿಗಳೊಳಗೆಸ**
**ರ್ವೋತ್ತಮನ ತಿಳಿಯೆಂದು ಭೀಷ್ಮನು**
**ಬಿತ್ತರಿಸಿದನು ಧರ್ಮತನಯಗೆ ಶಾಂತಿಪರ್ವದಲಿ || ೪ ||**

ಪದ್ಯಾರ್ಥ :—ಮತ್ತೆ, ವಿಶ್ವಾದ್ಯೆಂಟುರೂಪ=ವಿಶ್ವ, ತೈಜಸ, ಪ್ರಾಜ್ಞ, ತುರೀಯ, ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮ ಎಂಬ ೮ ರೂಪಗಳನ್ನು, ಒಂಭತ್ತರಿಂದಲಿ ಪೆಚ್ಚಿಸಲು=ಅವ್ಯಕ್ತ, ಮಹತ್ತತ್ವ, ಅಹಂಕಾರತತ್ವ, ಮನಸ್ಸು, ಪಂಚ ಮಹಾಭೂತಗಳೆಂಬ ೯ ರಲ್ಲಿ ಒಂದೊಂದರಲ್ಲಿಯೂ ಎಂಟೆಂಟು ರೂಪಗಳಂತೆ (೮×೯=೭೨) ಎಪ್ಪತ್ತೆರಡು ರೂಪಗಳು, ಅಹವು=ಆಗುವವು. ಒಂದೊಂದು ಸಹಸ್ರ=೭೨ ರೂಪಗಳಲ್ಲಿ ಒಂದೊಂದರಲ್ಲಿಯೂ, ಒಂದು ಸಹಸ್ರರೂಪಗಳಂತೆ ೭೨ ಸಹಸ್ರರೂಪಗಳಿಂದ, ಪೃಥಕ್‌ಪೃಥಕ್=ಪ್ರತ್ಯೇಕ ಪ್ರತ್ಯೇಕವಾಗಿ, ನಾಡಿಗಳೊಳಗೆ=೭೨ ಸಹಸ್ರನಾಡಿಗಳೊಳಗೆ, ಸರ್ವೋತ್ತಮನ=ಸರ್ವೋತ್ತಮನಾದ ಶ್ರೀಹರಿಯನ್ನು, ತಿಳಿಯೆಂದ, ಭೀಷ್ಮನು = ಭೀಷ್ಮಾಚಾರ್ಯರು, ಶಾಂತಿಪರ್ವದಲಿ = ಶಾಂತಿಪರ್ವದೊಳಗಿನ ಮೋಕ್ಷಧರ್ಮದಲ್ಲಿ, ಧರ್ಮತನಯಗೆ=ಧರ್ಮರಾಜನಿಗೆ, ಬಿತ್ತರಿಸಿದನು=ವಿಸ್ತರಿಸಿದನು=ವಿಸ್ತಾರವಾಗಿ ಹೇಳಿದರು. || ೪ ||

ತಾತ್ಪರ್ಯ :—ಶ್ರೀ ಪರಮಾತ್ಮನು ವಿಶ್ವಾದಿ ೮ ರೂಪಗಳಿಂದ, ಮೂಲಪ್ರಕೃತಿ ಅಥವಾ ಅವ್ಯಕ್ತತತ್ವ, ಮಹತತ್ವ ಅಹಂಕಾರತತ್ವ, ಮನಸ್ಸು, ಪಂಚಮಹಾಭೂತಗಳು ಅಂತು ಒಂಭತ್ತರಲ್ಲಿ ಒಂದೊಂದರಲ್ಲೂ ೮ ರೂಪಗಳಂತೆ ೯×೮=೭೨ ರೂಪಗಳಾದವು. ಈ ೭೨ ರೂಪಗಳಲ್ಲಿ ಒಂದೊಂದರಲ್ಲೂ ಒಂದೊಂದು ಸಹಸ್ರ ರೂಪಗಳಂತೆ ೭೨ ಸಹಸ್ರ ರೂಪಗಳಿಂದ ದೇಹದೊಳಗಿನ ೭೨ ಸಹಸ್ರನಾಡಿಗಳಲ್ಲಿ ಶ್ರೀಪರಮಾತ್ಮನು ಇರುವನೆಂದು ಚಿಂತಿಸು ಎಂದು ಭೀಷ್ಮಾಚಾರ್ಯರು ಧರ್ಮರಾಜನಿಗೆ ಉಪದೇಶ ಮಾಡಿದರೆಂದು ಮಹಾಭಾರತ ಶಾಂತಿಪರ್ವದ ಮೋಕ್ಷಧರ್ಮದಲ್ಲಿ ಹೇಳಿದೆ. ಕೆಲವು ಪ್ರತಿಗಳಲ್ಲಿ 'ವಿತ್ತರಿಸಿದನು ಧರ್ಮತನಯುಗೆ ಭೀಷ್ಮಪರ್ವದಲಿ' ಎಂಬ ಪಾಠವನ್ನು ಅವಲಂಬಿಸಿ ಕೆಲವು ವ್ಯಾಖ್ಯಾನ ಕರ್ತೃಗಳು. ಭೀಷ್ಮಪರ್ವದಲ್ಲಿ ಭೀಷ್ಮಾಚಾರ್ಯರು ಧರ್ಮತನಯುಗೆ ಹೇಳಿದರೆಂದು ಅರ್ಥಮಾಡಿರುವರು. ಭೀಷ್ಮಪರ್ವದಲ್ಲಿ ಭೀಷ್ಮಾಚಾರ್ಯರಿಗೂ ಧರ್ಮರಾಜನಿಗೂ ಸಂವಾದ ರೂಪವಾದ ಉಪದೇಶ ಕಥೆಯೇ ಇಲ್ಲ. ಧರ್ಮರಾಜನು ಯುದ್ಧಾರಂಭದಲ್ಲಿ

ಭೀಷ್ಮಾಚಾರ್ಯರನ್ನು ಕಂಡು ಯುದ್ಧಕ್ಕೆ ಅಪ್ಪಣೆಯನ್ನು ಪಡೆದನು. ಎರಡನೆಯ ಸಲ, ಭೀಷ್ಮಾಚಾರ್ಯರ ಯುದ್ಧದಲ್ಲಿ ೯ನೆಯ ರಾತ್ರಿ, ಧರ್ಮರಾಜನು ಬಂದು ನಿಮ್ಮ ಸಂಹಾರಕ್ಕೆ ಉಪಾಯವೇನೆಂದು ಕೇಳಿ ತಿಳಿದುಕೊಂಡನು. ಇವೆರಡೇ ಸಂದರ್ಭವಿರುವದರಿಂದ "ಶಾಂತಿಪರ್ವದಲಿ" ಎಂಬ ಪಾಠವೇ ಸಾಧುಪಾಠವೆಂತ ಕಾಣುತ್ತದೆ || ೪ ||

ಮಹತ್ತತ್ವಾದಿ ೮ ಪ್ರಕೃತಿಗಳಲ್ಲಿ ಚಿಂತಿಸಬೇಕಾದ ಭಗವದ್ರೂಪಗಳನ್ನು ಹೇಳುತ್ತಾರೆ:—

**ಎಂಟು ಪ್ರಕೃತಿಗಳೊಳಗೆ ವಿಶ್ವಾ**
**ದ್ಯೆಂಟು ರೂಪದಲಿದ್ದು ಭಕುತರ**
**ಕಂಟಕವ ಪರಿಹರಿಸುತಲಿ ಪಾಲಿಸುವ ಪ್ರತಿದಿನದಿ ॥**
**ನೆಂಟನಂದದಿ ಎಡಬಿಡದೆ ವೈ**
**ಕುಂಠರಮಣ ತನ್ನವರನಿ**
**ಷ್ಕಂಟಕ ಸುಮಾರ್ಗದಲಿ ನಡಿಸುವ ದುರ್ಜನರ ಬಿಡುವ ॥೫॥**

ಪದ್ಯಾರ್ಥ :—ಎಂಟುಪ್ರಕೃತಿಗಳೊಳಗೆ=ಪಂಚಭೂತಗಳು, ಅಹಂಕಾರ, ಬುದ್ಧಿ, ಮನಸ್ಸು, ಹೀಗೆ ೮ ಪ್ರಕೃತಿಗಳೊಳಗೆ, ವಿಶ್ವಾದಿ=ವಿಶ್ವ ಮೊದಲಾದ, ಎಂಟುರೂಪದಲಿದ್ದು, ಭಕ್ತರ, ಕಂಟಕವ=ಮುಳ್ಳಿನಂತಿರುವ ಆಪತ್ತುಗಳನ್ನು, ಪರಿಹರಿಸುತಲಿ, ಪ್ರತಿದಿನದಿ, ಪಾಲಿಸುವ, ನೆಂಟನಂದದಿ=ಬಂಧುಜನರಂತೆ, ಎಡಬಿಡದೆ=ಕ್ಷಣವಾದರೂ ಬಿಡದೆ, ವೈಕುಂಠ ರಮಣ=ಶ್ರೀಹರಿಯು, ತನ್ನವರ=ತನ್ನ ಭಕ್ತರನ್ನು, ನಿಷ್ಕಂಟಕ ಸುಮಾರ್ಗದಲಿ=ಮುಳ್ಳು ಕಲ್ಲುಗಳಿಲ್ಲದ ರಸ್ತೆಯಂತಿರುವ, ವಿಘ್ನಾದಿಗಳಿಲ್ಲದ ಸನ್ಮಾರ್ಗದಲಿ, ನಡಿಸುವ.

ತಾತ್ಪರ್ಯ ;—"ಭೂಮಿರಾಪೋಽನಲೋವಾಯುಃ ಖಂಮನೋಬುದ್ಧಿರೇವಚ | ಅಹಂಕಾರಇತೀಯಂಮೆ ಭಿನ್ನಾಪ್ರಕೃತಿರಷ್ಟಧಾ" ಎಂಬ ಗೀತಾ ೭ ನೆಯ ಅಧ್ಯಾಯದ ವಾಕ್ಯದಂತೆ, ಪ್ರಕೃತಿಯು, ಭೂಮಿ, ಉದಕ, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ, ಅಹಂಕಾರವೆಂದು ೮ ಪ್ರಕಾರ ಭಿನ್ನವಾಗಿರುವುದು. ಈ ಎಂಟು ಪ್ರಕೃತಿಗಳೊಳಗೆ, ಶ್ರೀಹರಿಯು ೮ ರೂಪಗಳಿಂದ ಇದ್ದು ಭಕ್ತರಿಗೆ ಬರುವ ಆಪತ್ತುಗಳನ್ನು ಪರಿಹರಿಸುತ್ತ ನಿತ್ಯದಲಿ ಇವರನ್ನು ರಕ್ಷಿಸುತ್ತಿರುವನು. ಮತ್ತು ಬಂಧುಜನರಂತೆ ಕ್ಷಣಬಿಡದೆ ವೈ

ಕುಂಠಪತಿಯು, ತನ್ನವರನ್ನು ಯಾವವಿಧವಾದ ಪ್ರತಿಬಂಧಕವಿಲ್ಲದ ಸನ್ಮಾರ್ಗ ದಲ್ಲಿ ಪ್ರೇರಿಸುತ್ತ ಉದ್ಧರಿಸುವನು. ಇಂತಹ ಮಾರ್ಗವು ದುರ್ಜನರಿಗೆ ದೊರಕುವುದಿಲ್ಲ

ಇಂದ್ರಿಯಾಭಿಮಾನಿಗಳಲ್ಲಿ ಚಿಂತಿಸಬೇಕಾದ ರೂಪವನ್ನು ಹೇಳುತ್ತಾರೆ.

**ಸ್ವರಮಣನು ಶಕ್ತ್ಯಾದಿರೂಪದಿ |**
**ಕರಣಮಾನಿಗಳೊಳಗೆ ನೆಲಸಿ |**
**ದ್ದರ ವಿದೂರನು ಸ್ಥೂಲವಿಷಯುಗಳುಂಡುಣಿಪನಿತ್ಯ ||**
**ಅರಿಯದಲೆ ನಾನುಂಬೆನೆಂಬವ |**
**ನಿರಿಯಗಳ ನುಂಬುವನು ನಿಶ್ಚಯ |**
**ಮರಳಿ ಮರಳಿ ಭವಾಟವಿಯ ಸಂಚರಿಸಿ ಬಳಲುವನು || ೬ ||**

ಪದ್ಯಾರ್ಥ:—ಅರವಿದೂರನು=ದೋಷದೂರನಾದ, ಸ್ವರಮಣನು= ತಾನೆ ಸ್ತ್ರೀ ಪುರುಷರೂಪಗಳಿಂದ ಆನಂದವನ್ನು ಹೊಂದುತ್ತಿರುವ ಶ್ರೀ ಪರ ಮಾತ್ಮನು, ಶಕ್ತ್ಯಾದಿ ರೂಪದಿ=ಶಕ್ತಿ ಪ್ರತಿಷ್ಠಾ ಮೊದಲಾದ ೧೧ ರೂಪ ಗಳಿಂದ, ಕರಣಮಾನಿಗಳೊಳಗೆ=೧೧ ಇಂದ್ರಿಯಾಭಿಮಾನಿ ದೇವತೆಗಳೊಳಗೆ ನೆಲಸಿದ್ದು=ವಾಸವಾಗಿದ್ದು, ಸ್ಥೂಲ ವಿಷಯಗಳ=ಐಹಿಕವಾದ ವಿಷಯ ಭೋಗಗಳನ್ನು, ನಿತ್ಯ=ನಿತ್ಯದಲ್ಲೂ, ಉಂಡು=ತಾನು ಅನುಭವಿಸಿ, ಉಣಿಪ =ಜೀವರನ್ನು ಭೋಗಿಸುವಂತೆ ಮಾಡುವನು. ಅರಿಯದಲೆ=ಇದನ್ನರಿಯದೆ ನಾನುಂಬೆನೆಂಬವ=ನಾನೇ ವಿಷಯ ಭೋಗಾದಿಗಳನ್ನು ಸ್ವತಂತ್ರದಿಂದ ಅನುಭವಿಸುತ್ತೇನೆಂಬುವನು, ನಿಶ್ಚಯ=ನಿಶ್ಚಯವಾಗಿ, ನಿರಯಗಳನು= ನರಕಗಳನ್ನು, ಉಂಬುವನು=ಅನುಭವಿಸುವನು, ಮರಳಿ ಮರಳಿ=ಮತ್ತು ಮತ್ತು, ಭವಾಟವಿಯ=ಸಂಸಾರವೆಂಬ ಅಡವಿಯಲ್ಲಿ, ಸಂಚರಿಸಿ ಬಳಲು ವನು=ಕಷ್ಟ ಪಡುವನು.

ತಾತ್ಪರ್ಯ:—ದೋಷದೂರನಾದ ಶ್ರೀ ಪರಮಾತ್ಮನು ಸ್ವರಮಣ ನೆಂದರು. 'ಮಹಾ ಸೌಂದರ್ಯ ಯುಕ್ತೇಷು ನಿರ್ದೋಷೇಷುಚ ಸರ್ವ ದಾ| ರಮತೇ ಸ್ತ್ರೀ ಸ್ವರೂಪಾಣಿ ಪುಂರೂಪಾಣಿ ವಿಧಾಯಚ ' ಎಂಬ ತತ್ತ್ವ ರತ್ನಮಾಲಾ ಎಂಬ ಗ್ರಂಥವಚನ ರೀತ್ಯಾತಾನೇ ಸುಂದರವಾದ ಸ್ತ್ರೀ ರೂಪಗಳನ್ನು ಪುರುಷ ರೂಪಗಳನ್ನು ಸ್ವೀಕರಿಸಿ ಸುಖಪಡುತ್ತಿರುವುದರಿಂದ ಸ್ವರಮಣನೆಂದು ಪರಮಾತ್ಮನಿಗೆ ಹೆಸರು. ಚಕ್ಷುಃ ಶ್ರೋತ್ರಾದಿ ದಶೇಂದ್ರಿ

ಯಗಳು ಮನಸ್ಸು ೧. ಹೀಗೆ ೧೧ ಇಂದ್ರಿಯಗಳಲ್ಲಿ, ಶಕ್ತಿ ಪ್ರತಿಷ್ಠಾ, ಸಂವಿತ್, ಸ್ಫೂರ್ತಿ, ಪ್ರಕೃತಿ, ಕಲಾ, ವಿದ್ಯಾ. ಮತಿ. ನಿಯತಿ. ಮಾಯಾ ಕಾಲ ಎಂಬ ೧೧ ರೂಪಗಳಿಂದಲೂ ದೇಹದಲ್ಲಿ ದೇಹಾಕಾರ (ಪುರುಷ ರೂಪ) ದಿಂದಲೂ, ಹೀಗೆ ೧೨ ರೂಪಗಳಿಂದಿದ್ದು ವಿಷಯ ಭೋಗಗಳನ್ನು ತಾನನುಭವಿಸಿ ಜೀವರಿಗೆ ಉಣಿಸುವನು. ಇದನ್ನರಿಯದೆ ತಾನೇ ಸ್ವತಂತ್ರದಿಂದ ಅನುಭವಿಸುವನೆಂದು ತಿಳಿದುಕೊಳ್ಳುವವನು ನಿಶ್ಚಯವಾಗಿ ನರಕಕ್ಕೆ ಹೋಗುವನು. ಅಲ್ಲದೆ ಮತ್ತು ಮತ್ತು ಸಂಸಾರಾಟವಿಯಲ್ಲಿ ಅಲೆಯುತ್ತಾ ಕಷ್ಟಪಡುತ್ತಿರುವನು.

ಷಡ್ರಸಗಳಲ್ಲಿಯೂ ನಾಡಿಗಳಲ್ಲಿಯೂ ಚಿಂತಿಸಬೇಕಾದ ಭಗವದ್ರೂಪಗಳನ್ನು ಹೇಳುತ್ತಾರೆ.

**ಸುರುಚಿರುಚಿರ ಸುಗಂಧ ಸುಚಿಯಂ**
**ದಿರುತಿಹನು ಷಡ್ರಸಗಳೊಳುಹ**
**ನ್ನೆರಡು ರೂಪದಲಿಪ್ಪ ಶ್ರೀಭೂದರ್ಗಿಯುರಸಹಿತ||**
**ಸ್ವರಮಣನು ಎಪ್ಪತ್ತೆರಡುಸಾ**
**ವಿರ ಸಮೀರನ ರೂಪದೊಳಗಿ**
**ದ್ದುರು ಪರಾಕ್ರಮ ಕರ್ತೃನೆನಿಸುವ ನಾಡಿಗಳೊಳಗಿದ್ದು ||೭||**

ಪದ್ಯಾರ್ಥ :—ಸುರುಚಿ, ರುಚಿರ, ಸುಗಂಧ, ಸುಚಿ, ಎಂಬ ಹೆಸರುಗಳಿಂದ, ಷಡ್ರಸಗಳೊಳು=ಸಿಹಿ, ಕಹಿ, ಉಪ್ಪು, ಹುಳಿ, ಖಾರ, ವಗರು ಎಂಬ ೬ ರಸಗಳಲ್ಲಿ ಒಂದೊಂದರಲ್ಲಿಯೂ, ಇರುತಿಹನು=ಈನಾಲ್ಕು ರೂಪಗಳಿಂದ ಇರುತ್ತಿರುವನು. ಇದಲ್ಲದೆ, ಹನ್ನೆರಡು ರೂಪದಲಿ=ಶಕ್ತಿ ಪ್ರತಿಷ್ಠಾ ಮೊದಲಾದ ೧೨ ರೂಪಗಳಿಂದ, ಶ್ರೀ ಭೂದುರ್ಗಿಯ ರಸಹಿತ=ಶ್ರೀದೇವಿ ಭೂದೇವಿ, ದುರ್ಗಾದೇವಿಯರಿಂದೊಡಗೂಡಿ, ಷಡ್ರಸಗಳೊಳು=೬ ರಸಗಳಲ್ಲಿ ಒಂದೊಂದರಲ್ಲಿಯೂ ಎರಡೆರಡು ರೂಪಗಳಂತೆ, ಇಪ್ಪ=ಇರುವನು, ಸ್ವರಮಣನು, ಎಪ್ಪತ್ತೆರಡುಸಾವಿರ=೭೨೦೦೦ ಸಂಖ್ಯಾವುಳ್ಳ, ಸಮೀರನ=ವಾಯುದೇವರ, ರೂಪನೊಳಗೆ, ಇದ್ದು, ಅಷ್ಟುರೂಪಗಳಿಂದಲೂ, ನಾಡಿಗಳೊಳಿದ್ದು=೭೨೦೦೦ ನಾಡಿಗಳೊಳಗಿದ್ದು, ಉರುಪರಾಕ್ರಮ=ಮಹಾಪರಾಕ್ರಮಶಾಲಿಯಾದ ಶ್ರೀಹರಿಯು, ಕರ್ತೃ=ಸಕಲಕಾರ್ಯ ಕರ್ತನೆಂದು ಎನಿಸುವ=ಅನಿಸಿಕೊಳ್ಳುವನು. || ೭ ||

ತಾತ್ಪರ್ಯ :—ಷಡ್ರಸಗಳ ಪೈಕಿ ಒಂದೊಂದರಲ್ಲಿಯೂ ಸುರುಚಿ, ರುಚಿರ, ಸುಗಂಧ, ಸುಚಿ ಎಂಬ ೪ ರೂಪಗಳಿಂದ ಪರಮಾತ್ಮನಿರುವನು. ಸುರುಚಿ ಅಂದರೆ=ಒಳ್ಳೆಯ ರುಚಿಯಾಗಿರುವಿಕೆ, ರುಚಿರ ಅಂದರೆ ರುಚಿಕರ ವಾದ ಪದಾರ್ಥವನ್ನು ತಿನ್ನುವಾಗ ಮತ್ತೂ ಬೇಕೆಂಬ ಆಶೆಹುಟ್ಟುವಷ್ಟು ರಸ ವತ್ತಾಗಿರುವಿಕೆ; ಸುಗಂಧ=ಸುವಾಸನೆಯಾಗಿರುವಿಕೆ, ಸುಚಿ=ರೂಪದುಷ್ಟ ಮೊದಲಾದ ದೋಷವಿಲ್ಲದೆ ಪವಿತ್ರವಾಗಿರುವಿಕೆ, ಹೀಗೆ ೪ ಗುಣಗಳು ಒಂ ದೊಂದು ರಸದಲ್ಲಿಯೂ ಇರುವವು. ಈ ೪ ರೂಪಗಳಿಂದ ಭಗವಂತನೇ ರಸ ಗಳಲ್ಲಿರುವನು. ಮತ್ತು ಶಕ್ತಿ, ಪ್ರತಿಷ್ಟಾ ಮೊದಲಾದ ೧೨ ರೂಪಗಳಿಂದ ಒಂದೊಂದು ರಸದಲ್ಲಿ ಎರಡೆರಡು ರೂಪಗಳಂತೆ ೬ ರಸಗಳಲ್ಲಿ ೧೨ ರೂಪ ಗಳಿಂದ ಇರುವನು. ಇದಲ್ಲದೆ, ೭೨ ಸಾವಿರ ನಾಡಿಗಳಲ್ಲಿ ವಾಯು ದೇವರು ೭೨ ಸಾವಿರ ರೂಪಗಳಿಂದ ವಾಸಮಾಡುತ್ತಿರುವರು. ಅವರಂತರ್ಯಾಮಿ ಯಾಗಿ ೭೨೦೦೦ ರೂಪಗಳಿಂದ ನಾಡಿಗಳಲ್ಲಿದ್ದು ಮಹಾ ಪರಾಕ್ರಮಶಾಲಿ ಯಾದ ಪರಮಾತ್ಮನು ಈ ಸ್ಥೂಲ ದೇಹದಿಂದ ಮಾಡಿಸಬೇಕಾದ ಕೃತ್ಯ ಗಳನ್ನು ಮಾಡಿಸುತ್ತಾ ಕರ್ತಾ ಎಂಬ ಹೆಸರನ್ನು ಪಡೆದಿರುವನು.

ಪರಮಾತ್ಮನ ಭಕ್ತರು ಮಾಡಿದ ಪಾಪಕರ್ಮವೂ ಸಹ ಪುಣ್ಯಫಲವನ್ನೇ ಕೊಡುವುದು; ಅಭಕ್ತರು ಮಾಡಿದ ಪುಣ್ಯಕರ್ಮವೂ ಪಾಪಫಲವನ್ನೇ ಕೊಡು ವುದೆಂದು ಹೇಳುತ್ತಾರೆ :—

**ನಿನ್ನ ಸರ್ವತ್ರದಲಿ ನೆನೆವವ**
**ರನ್ಯಕರ್ಮವ ಮಾಡಿದರುಸರಿ**
**ಪುಣ್ಯಕರ್ಮಗಳೆನಿಸುವವು ಸಂದೇಹವಿನಿತಿಲ್ಲ ॥**
**ನಿನ್ನಸ್ಮರಿಸದೆ ಸ್ನಾನ ಜಪ ಹೋ**
**ಮಾನ್ನ ವಸ್ತ್ರಗಜಾಶ್ವ ಭೂಧನ**
**ಧಾನ್ಯ ಮೊದಲಾದಖಿಳ ಧರ್ಮವ ಮಾಡಿ ಫಲವೇನು ॥ ೮ ॥**

ಪದ್ಯಾರ್ಥ :—(ಎಲೈ ದೇವನೆ !) ನಿನ್ನ=ನಿನ್ನನ್ನು, ಸರ್ವತ್ರದಲಿ= ಎಲ್ಲಾ ಸ್ಥಳಗಳಲ್ಲಿಯೂ, ನೆನೆವವರು=ಸ್ಮರಿಸುವವರು, ಅನ್ಯಕರ್ಮವ=ಪುಣ್ಯ ವಲ್ಲದ ಕರ್ಮವನ್ನು, ಮಾಡಿದರು ಸರಿ, ಅವು, ಪುಣ್ಯಕರ್ಮಗಳೆನಿಸುವವು, ಸಂದೇಹವಿನಿತಿಲ್ಲ=ಈ ವಿಷಯದಲ್ಲಿ ಸಂದೇಹವಿಲ್ಲ, ನಿನ್ನ ಸ್ಮರಿಸದೆ, ಸ್ನಾನ, ಜಪ, ಹೋಮ, ಅನ್ನದಾನ, ವಸ್ತ್ರದಾನ, ಗಜ=ಆನೆಗಳು, ಅಶ್ವ=ಕುದುರೆ

ಗಳು, ಭೂ=ಭೂಮಿ, ಧನ, ಧಾನ್ಯ ಮೊದಲಾದ, ಅಖಿಳ=ಸಕಲ ದಾನ ರೂಪವಾದ, ಧರ್ಮವ=ಧರ್ಮಗಳನ್ನು, ಮಾಡಿ ಫಲವೇನು || ೮ ||

ತಾತ್ಪರ್ಯ:—"ಧರ್ಮೋಽಭವತ್ಯಧರ್ಮೋಽಪಿ ಕೃತೋಽಭಕ್ತೈಸ್ತವಾಚ್ಯುತ | ಪಾಪಂಭವತಿಧರ್ಮೋಽಪಿ ಯೋಽನಭಕ್ತೈಃಕೃತೋಽಹರಿ" ಎಂಬ ಸದಾಚಾರಸ್ಮೃತಿ ವಾಕ್ಯವನ್ನು ಮನಸ್ಸಿನಲ್ಲಿಟ್ಟುಕೊಂಡು, ಅದೇ ಅರ್ಥವನ್ನೇ ಸೂಚಿಸುತ್ತಾ ಮೇಲಿನ ಪ್ರಮಾಣದಲ್ಲಿದ್ದಂತೆ ಪರಮಾತ್ಮನನ್ನೇ ಸಂಬೋಧನ ಮಾಡಿ ಹೇಳುತ್ತಾರೆ:—ಎಲೈ ದೇವಾಧಿದೇವ! ಭಕ್ತರು ಸರ್ವತ್ರ ನಿನ್ನನ್ನು ಸ್ಮರಿಸುತ್ತಾ ಯಾವ ಕರ್ಮಗಳನ್ನು ಮಾಡಿದಾಗ್ಯೂ, ಯಾವನು "ನಾಹಂ ಕರ್ತಾ ಹರಿಃಕರ್ತಾ" ಎಂಬ ಜ್ಞಾನದಿಂದ, ನಾನು ಅಸ್ವತಂತ್ರನು, ಪರಮಾತ್ಮನು ಮಾಡಿಸಿದಂತೆ ನಾನು ಮಾಡಿದೆನು ಎಂಬ ಜ್ಞಾನದಿಂದ ಕರ್ಮಗಳನ್ನು ಮಾಡುವನೋ ಅವನು ಮಾಡಿದ ಪಾಪಕರ್ಮಗಳೂ ಕೂಡ ಪುಣ್ಯಫಲವನ್ನೇ ಕೊಡುವುವು. ಈ ವಿಷಯದಲ್ಲಿ ಸಂದೇಹ ಪಡಬೇಕಾದುದೇ ಇಲ್ಲ. ದೇವೇಂದ್ರನು ವೃತ್ರಾಸುರನನ್ನು ಕೊಂದುದರಿಂದ ಮಹಾತ್ಮನೆಂದು ಕೀರ್ತಿಯನ್ನೇ ಪಡೆದನು. ಭೀಷ್ಮದ್ರೋಣ ಪ್ರಭೃತಿಗಳು ಬ್ರಾಹ್ಮಣರು; ಪಾಂಡವರಿಗೂ, ಶ್ರೀ ಕೃಷ್ಣನಿಗೂ ವಿರೋಧಿಗಳಾದ ದುರ್ಯೋಧನಾದಿಗಳ ಪಕ್ಷವನ್ನು ವಹಿಸಿ ಪಾಂಡವರಮೇಲೆ ಕೈಮಾಡಿದರು. ಆದರೂ ಭೂಭಾರ ಹರಣಮಾಡಲು ಅವತರಿಸಿದ ಪರಮಾತ್ಮನಿಗೆ ಸೇವಾ ರೂಪವಾಗಿ ಭೂಭಾರ ಹರಣಮಾಡಿದ ಪುಣ್ಯಫಲವನ್ನೇ ಹೊಂದಿದರು. ದುರ್ಯೋಧನನೂ ಪಾಂಡವರೊಂದಿಗೆ ಯುದ್ಧಮಾಡಿದನು; ಅವನಿಗೆ ಅದು ಪಾಪಸಾಧನವೇ ಆಯಿತು. ಆದ್ದರಿಂದಲೇ ದಾಸರಾಯರು, ಎಲೈ ದೇವ! ನಿನ್ನನ್ನು ಸ್ಮರಿಸದೆ ಯಾವ ದಾನ ಧರ್ಮಗಳನ್ನು ಮಾಡಿದರೂ ನಿಷ್ಫಲವಾಗುವುದು; ಎಂದು ಹೇಳಿದರು || ೮ ||

ಜನರಿಗೆ ಇಷ್ಟವಾದ ಅಂದರೆ, ಭೋಗಿಸಲು ಯೋಗ್ಯವಾದ ಪದಾರ್ಥಗಳಲ್ಲಿಯೂ, ದೇಹದೊಳಗಿನ ಕೋಶಗಳಲ್ಲಿಯೂ ಚಿಂತಿಸಬೇಕಾದ ಭಗವದ್ರೂಪಗಳನ್ನು ಹೇಳುತ್ತಾರೆ:—

**ಇಷ್ಟಭೋಗ್ಯಪದಾರ್ಥದೊಳು ಶಿಪಿ**
**ವಿಷ್ಟನಾಮದಿ ಸರ್ವಜೀವರ**
**ತುಷ್ಟಿಬಡಿಸುವ ದಿನದಿನದಿ ಸಂತುಷ್ಟನಾಗಿ ॥**

**ಕೋಷ್ಟದೊಳು ನೆಲಸಿದ್ದು ರಸಮಯ**
**ಪುಷ್ಟಿಗೈಸುತ್ತಿಂದ್ರಿಯಗಳೊಳು**
**ಪ್ರೇಷ್ಟನಾಗಿದ್ದೆಲ್ಲ ವಿಷಯಗಳುಂಬ ತಿಳಿಸದಲೆ ॥ ೯ ॥**

ಪದ್ಯಾರ್ಥ:—ಇಷ್ಟ=ಇಷ್ಟವಾದ, ಭೋಗ್ಯ=ಭೋಗಿಸಲು ಯೋಗ್ಯವಾದ, ಪದಾರ್ಥದೊಳು=ಪದಾರ್ಥಗಳಲ್ಲಿ, ಶಿಪಿವಿಷ್ಟನಾಮದಿ=ಶಿಪಿವಿಷ್ಟ ಎಂಬ ಹೆಸರಿನಿಂದ, ಇದ್ದು, ಸಂತುಷ್ಟತಾನಾಗಿ=ತಾನು ತೃಪ್ತನಾಗಿ, ದಿನದಿನದಿ=ಪ್ರತಿದಿನವೂ, ಸರ್ವಜೀವರ=ಎಲ್ಲಾ ಪ್ರಾಣಿಗಳನ್ನು, ತುಷ್ಟಿಬಡಿಸುವ=ತೃಪ್ತಿಪಡಿಸುವವನು, ರಸಮಯ=ರಸಮಯ ನಾಮಕನು, ಕೋಷ್ಟದೊಳು=ಅನ್ನಾದಿಕೋಶಗಳಲ್ಲಿ, ನೆಲಸಿದ್ದು=ವಾಸವಾಗಿದ್ದು, ಪುಷ್ಟಿಗೈಸುತ=ಪ್ರಾಣಿಗಳ ದೇಹಗಳಿಗೆ ಪುಷ್ಟಿಯನ್ನು ಮಾಡಿಸುತ್ತ, ಇಂದ್ರಿಯಗಳೊಳು, ಪ್ರೇಷ್ಟನಾಗಿದ್ದು, ಪ್ರೀತಿ ವಿಷಯನಾಗಿದ್ದು, ತಿಳಿಸದಲೆ=ಪ್ರಾಣಿಗಳಿಗೆ ತನ್ನ ಕರ್ತೃತ್ವವನ್ನುತಿಳಿಸದೆ, ವಿಷಯಗಳುಂಬ=ವಿಷಯಸುಖವನ್ನನುಭವಿಸುವನು.

ತಾತ್ಪರ್ಯ :—ಪ್ರಾಣಿಗಳು ಪ್ರೀತಿಯಿಂದ ಭೋಗಿಸಲು ಯೋಗ್ಯವಾದ ಪದಾರ್ಥಗಳಲ್ಲಿ ಶಿಪಿವಿಷ್ಟನೆಂಬ ಹೆಸರುಳ್ಳ ಪರಮಾತ್ಮನು ಇದ್ದು ತಾನು ತೃಪ್ತನಾಗಿ ಎಲ್ಲಾ ಜೀವರನ್ನು ತೃಪ್ತಿಪಡಿಸುವನು. 'ಯಜ್ಞೋ ವೈವಿಷ್ಣುಃ ಪಶವಃ ಶಿಪಿರ್ಯಜ್ಞ ಏವೈ ಪಶುಷುಪ್ರವಿಷ್ಟಃ' ಎಂಬ ಶ್ರುತಿಯನ್ನನುಸರಿಸಿ, ವಿಷ್ಣುವಿಗೆ ಯಜ್ಞ ಎಂದು ಹೆಸರು; ಶಿಪಿ ಎಂದರೆ ಯಜ್ಞಪಶು; ಯಜ್ಞನಾಮಕನು ಪಶುಗಳಲ್ಲಿ ಪ್ರವಿಷ್ಟನಾಗಿರುವುದರಿಂದ ಶಿಪಿವಿಷ್ಟನೆಂದು ಪರಮಾತ್ಮನಿಗೆ ಹೆಸರು. ದೇಹದೊಳಗಿರುವ ಅನ್ನಮಯಾದಿ ಕೋಷ್ಟ (ಕೋಶ) ಗಳಲ್ಲಿ ರಸಮಯನೆಂಬ ಪರಮಾತ್ಮನು ಇದ್ದು ದೇಹಗಳನ್ನು ಪುಷ್ಟಿಯಾಗುವಂತೆ ಮಾಡುವನು. ಇಂದ್ರಿಯಗಳಲ್ಲಿ ಎಲ್ಲರಿಗೂ ಬೇಕಾದವನಾಗಿದ್ದು ಜೀವರಿಗೆ ತಿಳಿಸದೇನೆ, ವಿಷಯಭೋಗವನ್ನುಂಡು ಉಣಿಸುವನು.

ಜ್ಞಾನ ಕರ್ಮೇಂದ್ರಿಯಗಳಲ್ಲಿ ಚಿಂತಿಸಬೇಕಾದ ಭಗವದ್ರೂಪಗಳನ್ನು ಹೇಳುತ್ತಾರೆ :—

**ಕಾರಣಾಹ್ವಯ ಜ್ಞಾನಕರ್ಮ**
**ಪ್ರೇರಕನು ತಾನಾಗಿ ಕ್ರಿಯಗಳ**
**ತೋರುವನು ಕರ್ಮೇಂದ್ರಿಯಾಧಿಪರೊಳಗೆ ನೆಲಸಿದ್ದು ॥**
**ಮೂರುಗುಣಮಯ ದ್ರವ್ಯಗತದಾ**

**ಕಾರತನ್ನಾಮದಲಿ ಕರೆಸುವ**
**ತೋರಿಕೊಳ್ಳದೆ ಜನರಮೋಹಿಪ ಮೋಘಕಲ್ಪಕನು ॥೧೦॥**

ಪದ್ಯಾರ್ಥ :—ಕಾರಣಾಹ್ವಯ=ಕಾರಣರೂಪಿ ಎಂಬ ಹೆಸರಿನಿಂದ, ಜ್ಞಾನಕರ್ಮಪ್ರೇರಕನು=ಜ್ಞಾನೇಂದ್ರಿಯ, ಕರ್ಮೇಂದ್ರಿಯ ಪ್ರೇರಕನು, ತಾನಾಗಿ, ಕರ್ಮೇಂದ್ರಿಯಾಧಿಪರೊಳಗೆ=ಕರಚರಣಾದಿ ಇಂದ್ರಿಯಾಭಿಮಾನಿ ದೇವತೆಗಳೊಳಗೆ, ನೆಲಸಿದ್ದು, ಕ್ರಿಯಗಳ=ಜ್ಞಾನಕರ್ಮ ಕ್ರಿಯೆಗಳನ್ನು, ತೋರುವನು=ಮಾಡುವ ಮಾರ್ಗವನ್ನು ತೋರುವನು. ಮೂರುಗುಣಮಯ ದ್ರವ್ಯಗ=ಸತ್ವರಜಸ್ತಮೋ ಗುಣಾತ್ಮಕವಾದ ಪದಾರ್ಥಗಳಲ್ಲಿದ್ದು, ತದಾ ಕಾರ, ತನ್ನಾಮದಲಿ=ಆಯಾ ಪದಾರ್ಥಗಳ ಆಕಾರದಿಂದ, ಅದೇ ಹೆಸರಿನಿಂದ ಕರೆಸಿಕೊಳ್ಳುತ್ತ, ತೋರಿಕೊಳ್ಳದೆ=ತಾನು ಇದ್ದುದಾಗಿ, ತೋರಿಸಿಕೊಳ್ಳದೆ, ಅಮೋಘ ಕಲ್ಪಕನು=ವ್ಯರ್ಥವಲ್ಲದ ಸಂಕಲ್ಪ ಉಳ್ಳವನು-(ಸತ್ಯಸಂಕಲ್ಪನು) ಜನರ=ಅಜ್ಞಜನರನ್ನು, ಮೋಹಿಪ=ಮೋಹಪಡಿಸುವನು.

ತಾತ್ಪರ್ಯ :—ಶ್ರೀ ಪರಮಾತ್ಮನು, ಕಾರಣನೆಂಬ ಹೆಸರಿನಿಂದ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳ ಅಭಿಮಾನಿದೇವತೆಗಳೊಳಗಿದ್ದು ಜ್ಞಾನೇಂದ್ರಿಯ ಕರ್ಮೇಂದ್ರಿಯ ಪ್ರೇರಕನಾಗಿ ಜ್ಞಾನಕರ್ಮಕ್ರಿಯೆಗಳನ್ನು ತೋರ್ಪಡಿಸುವನು. ಸತ್ವರಜಸ್ತಮಸ್ಸೆಂಬ ತ್ರಿಗುಣಸಂಬಂಧವಾದ ಪದಾರ್ಥಗಳಲ್ಲಿ ಆಯಾ ಪದಾರ್ಥದ ಆಕಾರವುಳ್ಳವನಾಗಿ ಆಯಾ ಹೆಸರಿನಿಂದ ಕರಿಸಿಕೊಳ್ಳುತ್ತಾ, ಸತ್ಯಸಂಕಲ್ಪನಾದ ಶ್ರೀಹರಿಯು, ತನ್ನ ಆಕಾರವನ್ನು ತೋರಿಸಿಕೊಳ್ಳದೆ, ಜನರನ್ನು ಮೋಹಪಡಿಸುತ್ತಿರುವನು, ವಿಷ್ಣುರಹಸ್ಯ ೪ನೆಯ ಅಧ್ಯಾಯ 'ಘಟಾಕಾರಂಭವತ್ಯೇವ ಘಟಸ್ಥಂ ಸಲಿಲಂಯಥಾ | ತತ್ತದಾಕಾರವಾನ್ ವಿಷ್ಣುಃ ತತ್ತದ್ವಸ್ತು ಸ್ಥಿತಃಸ್ತಥಾ॥ ೫ ॥ ತನ್ಮೂಢಾನ್ನೈವಜಾನಂತಿ ಮಾಯಾಮುಷಿತ ಚಕ್ಷುಷಃ ॥ ದೇಹೋಽಹಂ ಭಾವಿನೋಽನ್ಯತ್ರ ಮಮತಾ ಬುದ್ಧಯಃಸದಾ ॥ ೮ ॥ ಅನಿಚ್ಛಂತೋಽಪಿ ಭುಂಜಂತಿ ದುಃಖಾನಿ ವಿವಿಧಾನ್ಯಪಿ ॥ ೯ ॥' ಘಟದಲ್ಲಿರುವ ನೀರು ಘಟಾಕಾರವಾಗಿ ಹೇಗೆ ಕಾಣುವುದೋ, ಹಾಗೆ ಪರಮಾತ್ಮನು ಆಯಾ ವಸ್ತುಗಳಲ್ಲಿ ಆಯಾ ಆಕಾರಗಳಿಂದಲೇ ಇರುವನು. ಅದನ್ನು ಮೂಢಜನರು ಅರಿಯದೆ, ಪರಮಾತ್ಮನ ಮಾಯೆಯಿಂದ ಮೋಹಿತರಾಗಿ, ದೇಹವೇ ತಾವೆಂತಲು, ಮಿಗಿಲಾದ ವಸ್ತುಗಳು ತಮ್ಮವೆಂತಲೂ, ಭಾವಿಸಿ, ತಾವು ಅಪೇಕ್ಷಿಸದಿದ್ದರೂ ನಾನಾವಿಧವಾದ ದುಃಖವನ್ನೇ

ಅನುಭವಿಸುವರು, ಎಂದು ಹೇಳಿರುವರು. ಇದೇ ಅಭಿಪ್ರಾಯವನ್ನೇ ಈ ಪದ್ಯದಲ್ಲಿ ತೋರಿಸಿದಾರೆ || ೧೦ ||

ಮೇಲೆ ಹೇಳಿದುದನ್ನೇ ವಿಶದಮಾಡುತ್ತಾರೆ.—

**ದ್ರವ್ಯನೆನಿಸುವ ಭೂತಮಾತ್ರದೊ**
**ಳವ್ಯಯನು ಕರ್ಮೇಂದ್ರಿಯಗಳೊಳು**
**ಭವ್ಯಸತ್ಕ್ರಿಯನೆನಿಪ ಜ್ಞಾನೇಂದ್ರಿಯಗಳೊಳಗಿದ್ದು ||**
**ಸ್ತವ್ಯಕಾರಕನೆನಿಸಿ ಸುಖಮಯ**
**ಸೇವ್ಯ ಸೇವಕನೆನಿಸಿ ಜಗದೊಳು**
**ಹವ್ಯವಾಹನ ಸರಣಿಯೊಳಗಿಪ್ಪಂತೆ ಇರುತಿಪ್ಪ || ೧೧ ||**

ಪದ್ಯಾರ್ಥ:--ಭೂತಮಾತ್ರದೊಳು=ಪಂಚ ಮಹಾಭೂತಗಳಲ್ಲಿಯೂ ತನ್ಮಾತ್ರಾಗುಣಗಳಲ್ಲಿಯೂ, ಅವ್ಯಯನು = ನಾಶರಹಿತನಾದ ಸ್ವಾಮಿಯು, ದ್ರವ್ಯನೆನಿಸುವ=ದ್ರವ್ಯನೆಂದೆನಿಸುವನು, ಕರ್ಮೇಂದ್ರಿಯಗಳೊಳು=ಕರಚರಣಾದಿ ಕರ್ಮೇಂದ್ರಿಯಗಳಲ್ಲಿ, ಭವ್ಯನೆನಿಪ=ಕುಶಲನೆಂಬ ಹೆಸರಿನಿಂದಿರುವನು ಜ್ಞಾನೇಂದ್ರಿಯಗಳೊಳು, ಇದ್ದು, ಸತ್ಕ್ರಿಯನೆನಿಪ=ಸತ್ಕ್ರಿಯ ನೆನಿಸುವನು, ಸರ್ವಜೀವರ ದೇಹದಲ್ಲಿ ಇದ್ದು, ಸುಖಮಯ=ಸುಖಸ್ವರೂಪನು, ಸ್ತವ್ಯ=ಸ್ತುತ್ಯನೆಂತಲೂ, ಕಾರಕನೆಂತಲೂ, ಎನಿಸಿ=ಇರುವನಲ್ಲದೆ ಮತ್ತೆ ಕೆಲವರಲ್ಲಿ ಸೇವ್ಯಸೇವಕನೆನಿಸಿ, ಜಗದೊಳು=ಈ ಜಗತ್ತಿನಲ್ಲಿ, ಹವ್ಯವಾಹನನು = ಅಗ್ನಿಯು, ಅರಣಿಯೊಳಗಿಪ್ಪಂತೆ=(ಅಶ್ವತ್ಥಕಟ್ಟಿಗೆಯಿಂದ ಮಾಡಲ್ಪಟ್ಟು ಯಾಗಶಾಲೆಯಲ್ಲಿ ಅಗ್ನಿ ಹುಟ್ಟುವುದಕ್ಕಾಗಿ ಕಡೆಯಲು (ಮಥನೆ ಮಾಡಲು) ಅರ್ಹವಾದ ಕಾಷ್ಟಕ್ಕೆ ಅರಣಿ ಎಂದು ಹೆಸರು) ಕಾಷ್ಟಕ್ಕೆ ಸಂಬಂಧ ಪಡದೆ ಅದರೊಳಗಿರುವಂತೆ, ಇರುತಿಪ್ಪ || ೧೧ ||

ತಾತ್ಪರ್ಯ:-ಶ್ರೀಹರಿಯು ಪಂಚಭೂತಗಳಲ್ಲಿ ದ್ರವ್ಯನಾಮದಿಂದಲೂ, ಶಬ್ದಸ್ಪರ್ಶಾದಿ ಮಾತ್ರಾಗುಣಗಳಲ್ಲಿ ಅವ್ಯಯನೆಂತಲೂ, ಕರ್ಮೇಂದ್ರಿಯಗಳಲ್ಲಿ ಕುಶಲನಾಮದಿಂದಲೂ, ಜ್ಞಾನೇಂದ್ರಿಯಗಳಲ್ಲಿ ಸತ್ಕ್ರಿಯ ರೂಪದಿಂದಲೂ, ಇದ್ದು ಸ್ತುತ್ಯನು ಸ್ತೋತ್ರಮಾಡುವವನೂ ಸುಖಸ್ವರೂಪನೂ ತಾನೇ ಆಗಿ ಕೆಲವರಲ್ಲಿದ್ದು ಸೇವ್ಯನಾಗಿಯೂ, ಕೆಲವರಲ್ಲಿ ಸೇವಕನಾಗಿಯೂ ಆಯಾ ಕಾರ್ಯಗಳನ್ನು ಮಾಡಿ ಮಾಡಿಸುತ್ತಿರುವನು. ಕಾಷ್ಟದೊಳಗಿನ ಅಗ್ನಿಯಂತೆ ನಿರ್ಲಿಪ್ತನಾಗಿರುವನು. ಕಾಷ್ಟದಲ್ಲಿ ಅಗ್ನಿ ಇರುವದೆಂದು

ಗೊತ್ತಾಗಬೇಕಾದರೆ ದೊಡ್ಡದಾದ ಕಾಷ್ಟವನ್ನು ಕೆಳಗೆಇಟ್ಟು, ಅದರ ಮೇಲೆ ಕಡಗೋಲಿನಂತೆ ಉದ್ದವಾದ ಕಟ್ಟಿಗೆಯಿಂದ ಭೈರಿಗಿ ಹಿಡಿಯುವಂತೆ, ಅಥವಾ ಮೊಸರು ಕಡೆಯುವಂತೆ, ಕಡಿಯಲು ಬೆಂಕಿ ಹುಟ್ಟುವುದು. ಬೆಂಕಿಯು ಹುಟ್ಟಿ ಕಟ್ಟಿಗೆಗೆ ಸಂಬಂಧವಾದಕೂಡಲೆ ಕಾಷ್ಟವನ್ನು ಸುಡುವುದು. ಅದೇ ಅಗ್ನಿಯು ಮಥನ ಮಾಡುವುದಕ್ಕೆ ಮೊದಲು ಕಾಷ್ಟದಲ್ಲಿದ್ದರೂ ಇತರರಿಗೆ ಕಾಣದಂತೆ ಇರುವುದು. ಹಾಗೆ ಶ್ರೀಪರಮಾತ್ಮನು ಸರ್ವತ್ರಇದ್ದರೂ ನಿರ್ಲಿಪ್ತನಾಗಿ ಭಗವತ್ಸ್ವರೂಪವನ್ನು ಧ್ಯಾನದಿಂದ ಮಥನಮಾಡುವ ಸುಜ್ಞರಿಗೆ ಮಾತ್ರ ಗೋಚರಿಸುತ್ತಾ ಇರುವನು.

ಮನಸ್ಸು ಮೊದಲಾದ ಇಂದ್ರಿಯಗಳಲ್ಲಿಯೂ, ದೇಹದೊಳಗೂ ಚಿಂತಿಸ ಬೇಕಾದ ಭಗವದ್ರೂಪಗಳನ್ನು ಹೇಳುತ್ತಾರೆ.

**ಮನವೆ ಮೊದಲಾದಿಂದ್ರಿಯಗಳೊ**
**ಳಗ ನಿಲದೇವನು ಶುಚಿಯೆನಿಸಿಕೊಂ**
**ಡನವರತ ನೆಲಸಿಪ್ಪ ಶುಚಿಷದ್ಧೂತನೆಂದೆನಿಸಿ ॥**
**ತನುವಿನೊಳಗಿಪ್ಪನು ಸದಾವಾ**
**ಮನಹೃಷೀಕೇಶಾಖ್ಯ ರೂಪದ**
**ಲನುಭವಕೆ ತಂದೀವ ವಿಷಯಜಸುಖವ ಜೀವರಿಗೆ ॥ ೧೨ ॥**

ಪದ್ಯಾರ್ಥ :—ಮನವೆ ಮೊದಲಾದ, ಇಂದ್ರಿಯಗಳೊಳು, ಅನಿಲ ದೇವನು=ವಾಯುದೇವರು, ಶುಚಿ ಎನಿಸಿಕೊಂಡು, ಅನವರತ=ಸದಾಕಾಲ ದಲ್ಲಿಯೂ, ನೆಲಸಿಪ್ಪ=ಇರುತ್ತಿರುವರು, ಈವಾಯುದೇವರ, ಅಂತರ್ಯಾಮಿ ಯಾಗಿ, ಶುಚಿಷತ್ ಎಂಬ ನಾಮದಿಂದಲೂ, ಸರ್ವೇಂದ್ರಿಯಗಳೊಳಗೆ, ಹೋತನೆಂದೆನಿಸಿ, ಹೋತನಾಮಕ ವಾಯುದೇವರ ಅಂತರ್ಯಾಮಿಯಾಗಿ ಹೋತನೆಂತಲೂ, ಇಪ್ಪನು=ಇರುವನು, ತನುವಿನೊಳಗೆ=ಶರೀರದಲ್ಲಿ, ಸದಾ ವಾಮನ ಹೃಷೀಕೇಶಾಖ್ಯರೂಪದಲಿ, ಈ ಎರಡು ರೂಪಗಳಿಂದ, ಶುಚಿ-ಷತ್ ಹೋತಾ ಎಂಬ ಹೆಸರಿನಿಂದ ಕೂಡಿಇದ್ದು, ಜೀವರಿಗೆ, ವಿಷಯಜ=ವಿಷಯ ದಿಂದಾಗುವ, ಸುಖವ = ಸುಖವನ್ನೂ, ಅನುಭವಕೆ, ತಂದೀವ = ತಂದು ಕೊಡುವನು. ॥ ೧೨ ॥

ತಾತ್ಪರ್ಯ :—ಮನಸ್ಸು ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೆಂಬ ೧೧ ಇಂದ್ರಿಯಗಳಲ್ಲಿ ಶುಚಿ ಎಂಬ ಹೆಸರಿನಿಂದ ವಾಯು ದೇವರು ಇರುವರು.

ಅವರ ಅಂತರ್ಯಾಮಿಯಾಗಿ ಶುಚಿಷತ್ ಎಂಬ ರೂಪದಿಂದ ಶ್ರೀ ಪರಮಾತ್ಮ ನಿರುವನು. ಮಿಕ್ಕ ಎಲ್ಲಾ ಇಂದ್ರಿಯಗಳಲ್ಲಿಯೂ ಹೋತನಾಮಕ ವಾಯು ದೇವರಲ್ಲಿ ಹೋತನಾಮಕನಾಗಿ ಪರಮಾತ್ಮನಿರುವನು. ಶರೀರದಲ್ಲಿ ವಾಮನ ಹೃಷೀಕೇಶ ಎಂಬ ಎರಡು ರೂಪಗಳಿಂದ ಇದ್ದು ಭೋಜನ ಪಾನ ಸ್ತ್ರೀಯಾದಿ ಭೋಗ ಮೊದಲಾದ ಎಲ್ಲಾ ವಿಷಯ ಸುಖಗಳನ್ನು ಜೀವರಿಗೆ ಅನುಭವಕ್ಕೆ ಬರುವಂತೆ ಮಾಡುವನು.

ಪುಣ್ಯಪಾಪ ಪ್ರೇರಕರಾದ ತತ್ವಾಭಿಮಾನಿ ದೇವ ದೈತ್ಯರೊಳಗೂ ಪ್ರೇರ್ಯರಾದ ಜೀವರಾಶಿಗಳಲ್ಲೂ ಸಹ ಇದ್ದು ಕಾರ್ಯಮಾಡುವನೆಂದು ಹೇಳುತ್ತಾರೆ :—

**ಪ್ರೇರಕ ಪ್ರೇರ್ಯರೊಳು ಪ್ರೇರ್ಯ**
**ಪ್ರೇರಕನು ತಾನಾಗಿ ಹರಿನಿ**
**ರ್ವೈರದಿಂದ ಪ್ರವರ್ತಿಸುವ ತನ್ನಾಮರೂಪದಲಿ ॥**
**ತೋರಿಕೊಳ್ಳದೆ ಸರ್ವರೊಳು ಭಾ**
**ಗೀರಥಿಯ ಜನಕನು ಸಕಲ ವ್ಯಾ**
**ಪಾರಗಳ ತಾಮಾಡಿ ಮಾಡಿಸಿನೋಡಿ ನಗುತಿಪ್ಪ ॥ ೧೩ ॥**

ಪದ್ಯಾರ್ಥ :—ಪ್ರೇರಕ ಪ್ರೇರ್ಯರೊಳು=ಪುಣ್ಯಾಪಾಪಗಳನ್ನು ಮಾಡುವ ವಿಷಯದಲ್ಲಿ ಪ್ರೇರಣೆಮಾಡುವ ತತ್ವಾಭಿಮಾನಿ ದೇವದೈತ್ಯರೊಳಗೂ, ಪ್ರೇರಿತರಾಗುವ ಸರ್ವಜೀವರೊಳಗೂ, ಪ್ರೇರ್ಯಪ್ರೇರಕನು=ಪ್ರೇರಣೆಮಾಡಿಸಿಕೊಳ್ಳುವವನೂ, ಮಾಡುವವನೂ, ತಾನಾಗಿ, ಹರಿ, ನಿರ್ವೈರದಿಂದ=ಪರಸ್ಪರ ದೇವದೈತ್ಯರಲ್ಲಿ ದ್ವೇಷವನ್ನು ಬೆಳಿಸದೆ, ತನ್ನಾಮರೂಪದಲಿ=ಆಯಾ ದೇವದೈತ್ಯರು, ಮತ್ತು ಪ್ರಾಣಿಗಳ ನಾಮರೂಪಗಳಲ್ಲಿ, ಪ್ರವರ್ತಿಸುವ=ಪ್ರವರ್ತಿಸುವನು, ಭಾಗೀರಥಿಯ ಜನಕನು=ಗಂಗೆಯನ್ನು ಪಡೆದ ಶ್ರೀ ಪರಮಾತ್ಮನು, ತೋರಿಕೊಳ್ಳದೆ=ತನ್ನ ವ್ಯಾಪಾರವನ್ನು ತೋರಗೊಡಿಸದೆ, ಸರ್ವರೊಳು=ಎಲ್ಲಾ ಪ್ರಾಣಿಗಳಲ್ಲೂ, ಇದ್ದು, ಸಕಲ ವ್ಯಾಪಾರಗಳ, ತಾನು, ಮಾಡಿ ಮಾಡಿಸಿ ನೋಡಿ ನಗುತಿಪ್ಪ ॥ ೧೩ ॥

ತಾತ್ಪರ್ಯ :—ನಮ್ಮ ದೇಹಗಳಲ್ಲಿ ತತ್ವಾಭಿಮಾನಿ ದೇವತೆಗಳು ೨೪ ಮಂದಿ ಹೇಗೆ ಇರುವರೊ ಹಾಗೆ ದೈತ್ಯರೂ ಇರುವರು. ಪುಣ್ಯಕರ್ಮಗಳನ್ನು ದೇವತೆಗಳು ಪ್ರೇರಿಸುವರು; ಅದರಂತೆ ಪಾಪಕರ್ಮಗಳಿಗೆ ದೈತ್ಯರು ಪ್ರೇರಕ

ರಾಗಿರುವರು. ತ್ರಿವಿಧ ಜೀವರಾಶಿಗಳೂ ಕೂಡ ಈ ತತ್ವೇಶರ ಪ್ರೇರಣೆಯಿಂದಲೇ ಪುಣ್ಯಪಾಪಗಳನ್ನು ಮಾಡುವರು. ಆ ಶಕ್ತಿಯು ತತ್ವೇಶರಿಗೆ ಇರುವುದಿಲ್ಲ ಆದರೆ ಪರಮಾತ್ಮನು, ತತ್ವೇಶರಾದ ದೇವತೆಗಳಲ್ಲಿಯೂ ದೈತ್ಯರಲ್ಲಿಯೂ, ಸಕಲ ಪ್ರಾಣಿಗಳಲ್ಲಿಯೂ ಅದೇ ಆಕಾರ ಅದೇ ಹೆಸರಿನಿಂದ ಇದ್ದು ತತ್ವೇಶರು ಪ್ರೇರಿಸುವ ಪುಣ್ಯಪಾಪ ಕರ್ಮಗಳನ್ನು ಪ್ರೇರಿಸುವನು. ಪ್ರೇರ್ಯರಾದ ಸಕಲ ಪ್ರಾಣಿಗಳಲ್ಲಿಯೂ ಇದ್ದು ತಾನೇ ಮಾಡುವನು. ಹೀಗೆ ಪ್ರೇರ್ಯಪ್ರೇರಕ ತಾನೇ ಆಗಿ ಸಕಲ ಕರ್ಮಗಳನ್ನು ಮಾಡಿ ಮಾಡಿಸಿ ತಾನು ನಿರ್ವೈರದಿಂದ, ನಿರ್ಲಿಪ್ತನಾಗಿ ನೋಡಿ ನಗುತ್ತಿರುವನು.

ಸರ್ವತ್ರ ಹರಿಯನ್ನು ತಿಳಿದು ಪುಣ್ಯಪಾಪಾದಿ ಸಕಲ ದ್ವಂದ್ವ ಕರ್ಮಗಳನ್ನು ಪರಮಾತ್ಮನಿಗೆ ಅರ್ಪಿಸಬೇಕೆಂದು ಹೇಳುತ್ತಾರೆ :—

**ಹರಿಯೆ ಮುಖ್ಯನಿಯಾಮಕನು ಎಂ**
**ದರಿತು ಪುಣ್ಯಾಪುಣ್ಯ ಹರ್ಷಾ**
**ಮರ್ಷಲಾಭಾಲಾಭ ಸುಖದುಃಖಾದಿ ದ್ವಂದ್ವಗಳ ॥**
**ನಿರುತ ಅವನಂಘ್ರಿಗೆ ಸಮರ್ಪಿಸಿ**
**ನರಕ ಭೂಸ್ವರ್ಗಾಪ ವರ್ಗದಿ**
**ಕರಣನಿಯಾಮಕನ ಸರ್ವತ್ರದಲಿ ನೆನವುತಿರು ॥ ೧೪ ॥**

ಪದ್ಯಾರ್ಥ :-ಹರಿಯೆ, ಮುಖ್ಯನಿಯಾಮಕನು=ಎಲ್ಲಾ ಕರ್ಮಗಳನ್ನು ಮಾಡಿಸುವವನು, ಎಂದರಿತು, ಪುಣ್ಯ, ಅಪುಣ್ಯ=ಪಾಪ, ಹರ್ಷ=ಸಂತೋಷ, ಅಮರ್ಷ=ಕೋಪ, ಲಾಭ, ಅಲಾಭ=ನಷ್ಟ, ಸುಖ, ದುಃಖ ಮೊದಲಾದ, ದ್ವಂದ್ವಗಳನ್ನು, ನಿರುತ=ಸರ್ವದಾ, ಅವನಂಘ್ರಿಗೆ=ಆ ಪರಮಾತ್ಮನ ಪಾದಗಳಿಗೆ, ಸಮರ್ಪಿಸಿ, ನರಕ, ಭೂ=ಭೂಮಿ, ಸ್ವರ್ಗ, ಅಪವರ್ಗದಿ=ಮುಕ್ತಿಯಲ್ಲಿ, ಸರ್ವತ್ರದಲಿ=ಎಲ್ಲಾ ಸ್ಥಳಗಳಲ್ಲಿಯೂ, ಕರಣನಿಯಾಮಕನ=ಇಂದ್ರಿಯ ಪ್ರೇರಕನಾದ ಹೃಷೀಕೇಶನನ್ನು, ನೆನವುತಿರು=ಚಿಂತಿಸುತ್ತಿರು ॥೧೪॥

ತಾತ್ಪರ್ಯ :-ಶ್ರೀಹರಿಯೆ ಸಕಲ ಕರ್ಮಗಳನ್ನು ಮಾಡಿಸುವವನೆಂದು ತಿಳಿದು ಪುಣ್ಯಪಾಪಗಳನ್ನು ಶ್ರೀಪರಮಾತ್ಮನಿಗೆ ಸಮರ್ಪಣೆ ಮಾಡಬೇಕು. ಸಂತೋಷ, ವ್ಯಸನ, ಲಾಭ, ನಷ್ಟ, ಸುಖದುಃಖ ಮೊದಲಾದ ದ್ವಂದ್ವಗಳು ಏನುಬಂದರೂ ಅವೆಲ್ಲವೂ ಭಗವದಿಚ್ಛೆಯೆಂದು ಭಾವಿಸಿ ಪರಮಾತ್ಮನಿಗೆ ಸಮರ್ಪಿಸಿ, ನರಕ, ಭೂಮಿ, ಸ್ವರ್ಗ, ಮುಕ್ತಿಮೊದಲಾದ ಯಾವಸ್ಥಳಕ್ಕೆ ನಾವು

ಹೋದರೂ ನಮ್ಮ ಇಂದ್ರಿಯ ನಿಯಾಮಕನಾದ ಶ್ರೀಹರಿಯೇ ಅಲ್ಲಿದ್ದು ಆಯಾ ಸುಖದುಃಖಾದಿಗಳನ್ನು ಕೊಡಿಸುವನೆಂದು ಎಲ್ಲಾ ಕಡೆಯಲ್ಲಿ ಪರಮಾತ್ಮನನ್ನು ಚಿಂತಿಸಬೇಕು.

ಸ್ವತಂತ್ರ ಕರ್ತೃತ್ವಾಭಿಮಾನವನ್ನು ಬಿಟ್ಟು, ಫಲಾಪೇಕ್ಷೆಯಿಂದ ವಿಧಿ ನಿಷೇಧಗಳನ್ನಾಚರಿಸದೆ, ನಿಷ್ಕಾಮಭಕ್ತಿಯಿಂದ ಭಗವಂತನನ್ನು ಪೂಜಿಸೆಂದು ಹೇಳುತ್ತಾರೆ:—

**ಮಾಣವಕ ತತ್ಫಲಗಳನು ಸಂ**
**ಧಾನವಿಲ್ಲದೆ ಕರ್ಮಗಳ ಸ್ವೇ**
**ಚ್ಛಾನುಸಾರದಿ ಮಾಡಿ ಮೋದಿಸುವಂತೆ ಪ್ರತಿದಿನದಿ ॥**
**ಜ್ಞಾನಪೂರ್ವಕ ವಿಧಿನಿಷೇಧಗ**
**ಳೇನು ನೋಡದೆಮಾಡು ಕರ್ಮಪ್ರ**
**ಧಾನ ಪುರುಷೇಶನಲಿ ಭಕುತಿಯ ಬೇಡು ಕೊಂಡಾಡು ॥೧೫॥**

ಪದ್ಯಾರ್ಥ :—ಮಾಣವಕ=ಬಾಲಕನು, ತತ್ಫಲಗಳನು=ತಾನು ಮಾಡುವ ಕಾರ್ಯದ ಪ್ರತಿ ಫಲಗಳನ್ನು, ಅನುಸಂಧಾನವಿಲ್ಲದೆ=ಹೊಂದಬೇಕೆಂಬ ಅಪೇಕ್ಷೆಯಿಲ್ಲದೆ, ಕರ್ಮಗಳನ್ನು, ಸ್ವೇಚ್ಛಾನುಸಾರದಿ=ತನ್ನ ಇಚ್ಛಾಬಂದಂತೆ, ಮಾಡಿ, ಮೋದಿಸುವಂತೆ=ಸಂತೋಷಪಡುವಂತೆ, ಪ್ರತಿ ದಿನದಿ, ಜ್ಞಾನಪೂರ್ವಕ=ಜ್ಞಾನಪೂರ್ವಕವಾಗಿ, ವಿಧಿನಿಷೇಧಗಳೇನು ನೋಡದೆ=ಇದು ವಿಧಿ, ಇದು ನಿಷೇಧವೆಂದು ಗಣನೆಗೆ ತಾರದೆ, ಕರ್ಮ ಪ್ರಧಾನ ಪುರುಷೇಶನ=ಪ್ರಧಾನ ಕರ್ಮ ಭೂತನಾದ ಪುರುಷೋತ್ತಮನೆ ಸಕಲ ಕರ್ತನು, ಅವನು ಮಾಡಿಸಿದುದನು ನಾನು ಮಾಡಿದೆನೆಂದು ಭಾವಿಸಿ, ಮಾಡು=ಕರ್ಮಗಳನ್ನು ಮಾಡು, ಭಕ್ತಿಯಬೇಡು, ನಿನ್ನಲ್ಲಿ ಭಕ್ತಿಯನ್ನು ಕೊಡೆಂದು ಸ್ವಾಮಿಯನ್ನು ಬೇಡು, ಕೊಂಡಾಡು.

ತಾತ್ಪರ್ಯ :—'ಬುಧೋ ಬಾಲಕವತ್ಕ್ರೀಡೇತ್' | 'ಆತ್ಮಕ್ರೀಡ ಆತ್ಮರತಃ ವಿಚಾರಾಮಿಹ ಬಾಲವತ್' ಎಂಬ ಭಾಗವತ ಏಕಾದಶಸ್ಕಂಧದ ವಾಕ್ಯದಂತೆ, ಜ್ಞಾನಿಯಾದರೂ ಹುಡುಗನಂತೆ ವಿಹರಿಸುತ್ತಿರಬೇಕು. ಎಂದೊಂದು ಕಡೆಯಲ್ಲೂ, ಮತ್ತೊಂದು ಕಡೆಯಲ್ಲಿ ಅವಧೂತ ಬ್ರಾಹ್ಮಣನಿಗೂ ಯದುರಾಜನಿಗೂ ಸಂವಾದ ನಡೆದ ಸಂದರ್ಭದಲ್ಲಿ, ಹುಡುಗನು ಹೇಗೆ ತನಗೆ ತೋರಿದ ಆಟವನ್ನಾಡುತ್ತಾ ತನ್ನೊಳಗೆ ತಾನೇ ಸಂತೋಷಪಡುತ್ತಿರುವನೋ

ಹಾಗೆಯೇ 'ನಾನು ಮಾಡುವದೆಲ್ಲವೂ ಪರಮಾತ್ಮನೇ ಮಾಡಿಸುವನೆಂಬ ಭಾವ ನೆಯಿಂದ ಮಾಡಿ; ನನಗೆ ನಾನೇ ಸಂತೋಷಪಡುತ್ತಾ ಹುಡುಗನಂತೆ ವಿಹರಿಸುತ್ತಿರುವೆನು' ಎಂದು ಅವಧೂತನು ಹೇಳಿಕೊಂಡಿರುವನು. ಅದರಂತೆ ಇಲ್ಲಿಯೂ ತಿಳಿಯಬೇಕು. ಹುಡುಗರು ಹೇಗೆ ತಮಗೆ ತೋರಿದಂತೆ ಆಟಗಳನ್ನಾಡುತ್ತಾ ಅದರ ಪ್ರತಿಫಲದ ಅಪೇಕ್ಷೆಯೇ ಇಲ್ಲದೆ ಸಂತೋಷಿಸುತ್ತಿರುವರೋ ಹಾಗೆ ಸಕಲವು ಪರಮಾತ್ಮನೇ ಮಾಡಿಸುವನೆಂಬ ನಿಶ್ಚಯ ಜ್ಞಾನದಿಂದ, ಇದು ವಿಧಿ; ಇದನ್ನು ಮಾಡಿದರೆ ಇಷ್ಟಾರ್ಥ ಸಿದ್ಧಿಯಾಗುತ್ತದೆ, ಇದು ನಿಷೇಧ ಕಾರ್ಯ, ಇದು ಮಾಡಿದರೆ ನಾನು ಕೆಟ್ಟುಹೋಗುವೆನು, ಆದ್ದರಿಂದ ಈ ವಿಧಿಯನ್ನು ಮಾಡುವೆನು, ಈ ನಿಷೇಧವನ್ನು ಬಿಡುವೆನು ಎಂಬ ಕರ್ತೃತ್ವಾಭಿಮಾನವನ್ನು ಬಿಟ್ಟು, ವಿಧಿಯನ್ನು ಮಾಡುವವನೂ ನಾನಲ್ಲ, ನಿಷೇಧವನ್ನು ಬಿಡುವವನೂ ನಾನಲ್ಲ, ಎಲ್ಲಾ ಕಾರ್ಯವು ಶ್ರೀ ಪರಮಾತ್ಮನದೆ ಎಂದು ಭಾವಿಸಿ ಭಗವಂತನು ಯಾವ ಕಾಲದಲ್ಲಿ ಏನು ಮಾಡಿಸಿದರೂ ಅದನ್ನು ಮಾಡಿ ಪರಮಾತ್ಮನಿಗೆ ಒಪ್ಪಿಸಬೇಕು. ಈ ವಿಷಯದಲ್ಲಿ ಭಾಗವತ ಪಂಚಮಸ್ಕಂಧದಲ್ಲಿ ಹೇಳಿರುವ, ಜಡಭರತನ ಇತಿಹಾಸವು ದೃಷ್ಟಾಂತವು, ಅದೇನಂದರೆ--ಋಷಭದೇವರ ಮಗನಾದ ಭರತರಾಜನು ಸಕಲ ಸಂಗವನ್ನು ತ್ಯಾಗಮಾಡಿ ವನದಲ್ಲಿ ಇದ್ದಾಗೆ ಪ್ರಾರಬ್ಧ ಕರ್ಮವಶದಿಂದ ಒಂದು ಜಿಂಕೆಯ ಮರಿಯ ಸಹವಾಸವು ಅವನಿಗೆ ದೊರಕಿ, ಕಡೆಗೆ ಮರಣಕಾಲದಲ್ಲಿ ಅದೇ ಜಿಂಕೆಯನ್ನೆ ಸ್ಮರಿಸಿಕೊಂಡು ದೇಹವನ್ನು ಬಿಟ್ಟದ್ದರಿಂದ ಮುಂದಿನ ಜನ್ಮದಲ್ಲಿ ಜಿಂಕೆಯಾಗಿ ಹುಟ್ಟಿದನು. ಆ ಜನ್ಮದಲ್ಲಿ ಪೂರ್ವ ಪುಣ್ಯಪ್ರಭಾವದಿಂದ ಪರಮಾತ್ಮನಲ್ಲಿ ಭಕ್ತಿ ಹುಟ್ಟಿ ಕಾಲಾಂತರದಲ್ಲಿ ದೇಹವನ್ನು ಬಿಟ್ಟು ಬ್ರಾಹ್ಮಣೋತ್ತಮನಾಗಿ ಹುಟ್ಟಿದನು. ಬ್ರಾಹ್ಮಣ ಜನ್ಮದಲ್ಲಿಯೂ ಪೂರ್ವ ಪುಣ್ಯದಿಂದ ಹಿಂದಿನ ಯರಡು ಜನ್ಮಗಳ ಜ್ಞಾಪಕವೂ ಬಂದುದರಿಂದ ಮಹಾಜ್ಞಾನಿಯಾಗಿದೇಹಾಭಿಮಾನವನ್ನು ಬಿಟ್ಟು ಬಾಲ್ಯದಿಂದಲೂ ವಿರಕ್ತನಾಗಿ ಇದ್ದು, ಒಂದಾನೊಂದು ಕಾಲದಲ್ಲಿ ಸ್ವೇಚ್ಛಾವಿಹಾರ ಮಾಡುತ್ತಾ ಬರುವಾಗ, ರಹೂಗಣನೆಂಬ ಭಗವದ್ಭಕ್ತನಾದ ರಾಜನೋರ್ವನು ತತ್ವೋಪದೇಶವನ್ನು ಹೊಂದುವುದಕ್ಕಾಗಿ, ಕಪಿಲರಾಶ್ರಮಕ್ಕೆ ಹೋಗುವ ಮಾರ್ಗದಲ್ಲಿ ಅವನ ಪಾಲಕಿಯನ್ನು ಹೊರುವದಕ್ಕೆ ಮನುಷ್ಯನನ್ನು ಒದಗಿಸಲು, ಅಪ್ಪಣೆ ಪಡದಿದ್ದ ಒಬ್ಬ ಗ್ರಾಮಾಧಿಕಾರಿಯು ಈ ಬ್ರಾಹ್ಮಣೋತ್ತಮನನ್ನು ಪಾಲಕಿ ಹೊರುವದಕ್ಕೆ ಕಳುಹಿಸಿದನು.

ಮಹಾವಿರಕ್ತನಾದ ಈ ಬ್ರಾಹ್ಮಣನು, ಅದೂ ಒಂದು ಭಗವತ್ಸೇವೆಯೆಂದು ಭಾವಿಸಿ ಪಾಲಕಿಯನ್ನು ಹೊತ್ತುಕೊಂಡು ಹೋಗುವಾಗ, ಕ್ರಿಮಿಕೀಟಾದಿಗಳಮೇಲೆ ಎಲ್ಲಿ ಹೆಜ್ಜೆ ಬೀಳುವದೋ ಎಂಬ ಭಯದಿಂದ ತನ್ನ ಹೆಜ್ಜೆಯ ಮೇಲೇನೆ ದೃಷ್ಟಿಯನ್ನು ಇಟ್ಟುಕೊಂಡು ಹೋಗುವಾಗ ಸರಿಯಾದ ಮಾರ್ಗದಲ್ಲಿ ನಡಿಯದೆ ತಗ್ಗು ದಿನ್ನೆಯಲ್ಲಿ ನಡಿಯುತ್ತಾ ಇರಲು ಪಾಲಕಿಯು ಕೀಳುಮೇಲಾಗುತ್ತಿತ್ತು. ರಾಜನು ಅದನ್ನು ಕಂಡು ಒಂದೆರಡಾವರ್ತಿ ಹಾಸ್ಯರೂಪವಾಗಿ ಅವನಿಗೆ ಹೇಳಿದರೂ, ಆ ಬ್ರಾಹ್ಮಣೋತ್ತಮನು, ಪೂರ್ವದಂತೆಯೇ ತಗ್ಗು ದಿನ್ನೆಗಳಲ್ಲಿ ನಡಿಯುತ್ತಿರುವದನ್ನು ಕಂಡು ಆ ರಾಜನು ಬಹು ಕೋಪದಿಂದ 'ಕಿಮರೇತ್ವಂ ಜೀವನ್ಮೃತೋಽಸಿ ಮಾಂತಿರಸ್ಕೃತ್ಯ ಭರ್ತೃಶಾಸನ ಮತಿಚರಸಿ, ಪ್ರಮತ್ತಸ್ಯತೇ ಕರೋಮಿ ಚಿಕಿತ್ಸಾಂದಂಡಪಾಣಿರಿವ'.

ಎಲೈ ನೀಚನೇ! ಏನು ಬದುಕಿದ ಹೆಣವಾಗಿರುವೆ! ನಾನಾರೆಂಬುವದು ನಿನಗೆ ಗೊತ್ತಿಲ್ಲವೆ? ಪ್ರಭುವಾದ ನನ್ನನ್ನು ತಿರಸ್ಕರಿಸಿ ನನ್ನ ಅಪ್ಪಣೆಯನ್ನು ಮೀರಿನಡೆಯುತ್ತಿರುವೆ? ಪ್ರಮತ್ತನಾಗಿರುವೆ? ಈಗ ನಾನು ನಿನ್ನನ್ನು ಯಮನಂತೆ ಶಿಕ್ಷಿಸುವೆನು ಎಂದನು. ಇದನ್ನು ಕೇಳಿದ ಬ್ರಾಹ್ಮಣೋತ್ತಮನು ನಕ್ಕು, ಹೇಳಿದ ವಾಕ್ಯವೇನೆಂದರೆ:—(ಪಂಚಮಸ್ಕಂಧ ಅಧ್ಯಾಯ೧೦, ಶ್ಲೋಕ ೧೧) ಬ್ರಾಹ್ಮಣ ಉವಾಚ| ತ್ವಯೋದಿತಂ ವ್ಯಕ್ತಮ ವಿಪ್ರಲಬ್ಧಂ ಭರ್ತುಃ ಸಮೇಸ್ಯಾದ್ಯದಿ ವೀರಭಾರಃ| ಗಂತುರ್ಯದಿಸ್ಯಾದಧಿಗಮ್ಯ ಮಧ್ವಾ ಪೀವೇತಿ ಚಾಸೌನವಿದಾಂ ಪ್ರವಾದಃ' ಎಲೈ ರಾಜನೇ, ಭಾರವನ್ನು ಹೊರುವವನೂ, ಹೊತ್ತುಕೊಂಡು ನಡೆಯುವವನೂ ನಾನಾಗಿದ್ದು ನಾನು ನಡೆದು ಹೋಗಲು ಸಾಧ್ಯವಾದ ಮಾರ್ಗವೂ ಒಂದಿದ್ದರೆ ನೀನು ಹೇಳಿದುದೆಲ್ಲವೂ ನಿಜವೇ ಆಗಬಹುದು. ಅದೇ ಸುಳ್ಳು, ಭಾರವನ್ನು ಹೊತ್ತವನೂ ನಾನಲ್ಲ; ಮಾರ್ಗವನ್ನು ನಡೆಯುವವನೂ ನಾನಲ್ಲ. ಮಾರ್ಗವೂ ಇದಲ್ಲ ಎಂದುತ್ತರವನ್ನಿತ್ತನು. ಮತ್ತು ರಾಜನು ಮೊದಲು ಹಾಸ್ಯವಾಗಿ ಮಾತನಾಡುವಾಗ ಇವನು 'ಸುಚಿರಂ ನಾತಿಪೀವಾನ್' ಇತ್ಯಾದಿ ವಾಕ್ಯಗಳಿಂದ ಇವನನ್ನು ಸ್ಥೂಲಕಾಯನೆಂದು ಹಾಸ್ಯಮಾಡಿದ್ದನು, ಅದಕ್ಕೆ ಉತ್ತರರೂಪವಾಗಿ 'ಪೀವೇತಿ ಚಾಸೌನವಿದಾಂಪ್ರವಾದ' ನನ್ನನ್ನು ಟೊಣ್ಯನೆಂದು ಹಾಸ್ಯಮಾಡಿರುವೆ ಇದು ತಿಳಿದವರ ಮಾತಲ್ಲ ಅಂದರೆ ಶುದ್ಧ ಮೂರ್ಖರು ಆಡುವ ಮಾತೆಂದರ್ಥ. ಜೀವನು ಪರಿಮಿತಿ ಇಲ್ಲದ ಅತಿ ಸೂಕ್ಷ್ಮರೂಪ ಉಳ್ಳವನು. ದೇಹ

ಮಾತ್ರವೇ ಸ್ಥೂಲವಾಗುವುದು, ಕೃಶವಾಗುವುದು. ದೇಹವು ಜಡವಾದುದ ರಿಂದ ಕರ್ತೃತ್ವಾದಿಗಳು ದೇಹಕ್ಕಲ್ಲ. ನೀನು ಎಂಬ ಸಂಬೋಧನೆಯು ಜೀವಕ್ಕೇ ಹೊರತು ದೇಹಕ್ಕಲ್ಲ. ಜೀವನಿಗೆ ಸ್ಥೂಲಕಾಯವಾವದು ! ಕೃಶ ವಾವದು ? ಆದ್ದರಿಂದ ಇದು ಮೂರ್ಖರ ಮಾತೆಂದು ಭಾವನೆ. ಪ್ರತ್ಯಕ್ಷ ವಾಗಿ ತಾನು ಪಾಲಕಿಯನ್ನು ಹೊತ್ತಿರುವನು, ಮಾರ್ಗ ನಡೆಯುತ್ತಿರುವನು. ವಿಷಮುವಾದ ಮಾರ್ಗವು ಕಾಣುತ್ತಿರುವುದು. ಹೀಗಿರಲು ಈ ಬ್ರಾಹ್ಮಣೋ ತ್ತಮನು, ' ಹೊತ್ತವನೂ ನಾನಲ್ಲ, ನಡೆಯುವವನೂ ನಾನಲ್ಲ. ಮಾರ್ಗವೂ ಇದಲ್ಲ' ವೆಂದು ಹೇಗೆ ಹೇಳಿದನೆಂದರೆ, ದೇಹ ಜಡವಾದುದರಿಂದಲೂ, ಜೀವ ನು ಅಸ್ವತಂತ್ರನು, ಅಶಕ್ತನೂ ಆದುದರಿಂದಲೂ, ' ಭರ್ತಾರಸಸ್ ಭ್ರಿಯ ಮಾಣೋಬಿ ಭರ್ತಿಯವೃತ್ರಿಧಾತು ಪೃಥಿವೀ ಮುತದ್ಯಾಂ ' ಎಂಬಿನೇ ಮೊ ದಲಾದ ಶ್ರುತಿಯಲ್ಲಿ ಹೇಳಿದಂತೆ, ಹೊರುವವನೂ, ನಡೆಯುವವನೂ, ಮಾರ್ಗ ಭೂತನೂ ಪರಮಾತ್ಮನೇ ಆಗಿ ಎಲ್ಲಾ ಕಾರ್ಯಗಳನ್ನು ಮಾಡಿ ಮಾಡಿಸುವ ನೆಂಬ ಭಾವನೆಯಿಂದ ಭರತರಾಜನು ರಾಜನಿಗೆ ಹೀಗೆ ಉತ್ತರವನ್ನು ಕೊಟ್ಟನು. ಇದೇ ಅಭಿಪ್ರಾಯವನ್ನೇ ಈ ಪದ್ಯದಲ್ಲಿ ಹೇಳಿರುವರೆಂದು ತಿಳಿ ಯಬೇಕು. ಪರಮಾತ್ಮನ ಪೂಜೆಯನ್ನೂ ಸೇವೆಯನ್ನೂ ಮಾಡಿ ಫಲವನ್ನು ಬೇಡಬಾರದು. ಭಕ್ತಿಯನ್ನು ಬೇಡು, ಕೊಂಡಾಡು, ಎಂದು ದಾಸರಾಯರು ಹೇಳಿರುವರು. ಭಕ್ತಿಯನ್ನಾದರೂ ಬೇಡಬಹುದೆ ? ಅದು ಕಾಮ್ಯವಲ್ಲವೆ ? ಅಂದರೆ ಭಕ್ತಿಜ್ಞಾನ ಇವುಗಳು ಫಲವಲ್ಲ. ಭಕ್ತಿ ಮಾಡುವುದು ಭಗವದನು ಗ್ರಹಕ್ಕಾಗಿ, ಅದರಿಂದಾಗುವ ಫಲ-ಮುಕ್ತಿ, ಅದನ್ನು ಮಾತ್ರ ಬೇಡಬಾರದು. ಭಾಗವತ ಏಕಾದಶಸ್ಕಂಧದಲ್ಲಿ ' ಸಾಲೋಕ್ಯ ಸಾರ್ಷ್ಟಿ ಸಾಮೀಪ್ಯ ಸಾರೂ ಪ್ಯೈಕತ್ವಮಿತ್ಯುತ | ದೀಯಮಾನಂ ನಗೃಣ್ಹಂತಿ ವಿನಾಮತ್ಸೇವನಂಜನಾಃ' ಸಾಲೋಕ್ಯ=ಪರಮಾತ್ಮನ ಲೋಕದಲ್ಲಿ ವಾಸಮಾಡುವದು, ಸಾರ್ಷ್ಟಿ=ಪರ ಮಾತ್ಮನಿಗೆ ಸಮವಾದ ಐಶ್ವರ್ಯ ಹೊಂದುವದು, ಸಾಮೀಪ್ಯ=ಪರಮಾ ತ್ಮನ ಸಮೀಪದಲ್ಲಿ ವಾಸಮಾಡುವುದು, ಸಾರೂಪ್ಯ=ಪರಮಾತ್ಮನಂತೆ ರೂಪ ಹೊಂದುವುದು, ಏಕತ್ವ=ಸಾಯುಜ್ಯ ಹೊಂದುವುದು ಇಂತಹ ೫ ವಿಧ ಮುಕ್ತಿಯನ್ನೂ ಕೂಡ ನನ್ನ ಏಕಾಂತ ಭಕ್ತರು ಬೇಡುವುದಿಲ್ಲ ಎಂದು ಪರ ಮಾತ್ಮನು ಉದ್ಧವನಿಗೆ ಭೋಧಿಸಿರುವನು. ಹೀಗೆ ಮುಕ್ತಿಯು ಫಲರೂಪ ವಾದುದರಿಂದ ಅದನ್ನು ಬೇಡುವದೂ ಕಾಮ್ಯವಾಗುವುದು. ಭಕ್ತಿಯು

ಕರ್ಮರೂಪವಾದ್ದರಿಂದ ಅದನ್ನು ಬೇಡುವದು ಕಾಮ್ಯವಲ್ಲ.

ಸಕಲಕ್ಕೂ ಪರಮಾತ್ಮನೇ ಕಾರಣನೆಂದು ನಂಬಿದವರನ್ನು ಪರಮಾತ್ಮನು ದೇಹಾನು ಬಂಧಿಗಳಂತೆ ರಕ್ಷಿಸುವನೆಂದು ಹೇಳುತ್ತಾರೆ.

**ಹಾನಿವೃದ್ಧಿ ಜಯಾಪಜಯುಗಳು |**
**ಏನು ಕೊಟ್ಟರು ಭುಂಜಿಸುತಲ |**
**ಕ್ಷ್ಮೀ ನಿವಾಸನ ಕರುಣವನೆ ಸಂಪಾದಿಸನುದಿನದಿ ॥**
**ಜ್ಞಾನ ಸುಖಮಯ ತನ್ನವರ ಪರ |**
**ಮಾನುರಾಗದಿ ಸಂತೈಪದೇ |**
**ಹಾನು ಬಂಧಿಗಳಂತೆ ಒಳ ಹೊರಗಿದ್ದು ಕರುಣಾಳು ||೧೬||**

ಪದ್ಯಾರ್ಥ :—ಹಾನಿ ವೃದ್ಧಿ ಜಯಾಪಜಯುಗಳು=ಕ್ಷೀಣಹೊಂದುವಿಕೆ, ವೃದ್ಧಿ ಹೊಂದುವಿಕೆ, ಜಯ, ಅಪ ಜಯ ಮೊದಲಾದವು, ಏನು ಕೊಟ್ಟರು=ಯಾವ ಕಾಲಕ್ಕೆ ಈಶ್ವರ ಪ್ರೇರಣೆಯಿಂದ ಯಾವುದು ಪ್ರಾಪ್ತವಾಗುವುದೋ ಅದನ್ನು, ಭುಂಜಿಸುತ=ಅನುಭವಿಸುತ, ಲಕ್ಷ್ಮೀ ನಿವಾಸನ=ಶ್ರೀನಿವಾಸನ, ಕರುಣವನೇ, ಅನುದಿನದಿ=ಪ್ರತಿ ದಿವಸದಲ್ಲಿಯೂ ಸಂಪಾದಿಸು. ಜ್ಞಾನಸುಖಮಯ=ಜ್ಞಾನಾನಂದ ಸ್ವರೂಪನಾದ ಶ್ರೀ ಹರಿಯು, ತನ್ನವರ=ತನ್ನ ಭಕ್ತರನ್ನು, ದೇಹಾನು ಬಂಧಿಗಳಂತೆ=ದೇಹ ಸಂಬಂಧ ಉಳ್ಳ ಬಂಧುಗಳಂತೆ, ಪರಮಾನುರಾಗದಿ=ಪರಮ ಪ್ರೀತಿಯಿಂದ, ಒಳ ಹೊರಗಿದ್ದು, ಕರುಣಾಳು, ಸಂತೈಪ=ಸಂತೈಸುವನು. ||೧೬||

ತಾತ್ಪರ್ಯ :—ವೃದ್ಧಿ, ಕ್ಷಯ ಜಯ ಪರಾಜಯ ಮೊದಲಾದುವುಗಳಲ್ಲಿ ಯಾವ ಕಾಲದಲ್ಲಿ ಈಶ್ವರ ಸಂಕಲ್ಪದಿಂದ ಏನು ಬರುವುದೊ "ಈಶಾವಾಸ್ಯಮಿದಂ ಸರ್ವಂ ಯಜ್ಜಗತ್ಯಾಂ ಜಗನ್ಮನಃ | ತೇನತ್ಯಕ್ತೇನ ಭುಂಜೀಥಾಮಾಗೃಧಃ ಕಸ್ಯಚಿದ್ಧನಂ" ಎಂಬ ಈಶಾ ವಾಸ್ಯೋಪನಿಷತ್ತಿನ ವಾಕ್ಯದಂತೆ ಬಂದುದನ್ನು ಅನುಭವಿಸುತ್ತ, ಶ್ರೀ ಪರಮಾತ್ಮನ ಅನುಗ್ರಹವನ್ನು ಮಾತ್ರ ಸರ್ವದಾ ಸಂಪಾದಿಸ ಬೇಕು. ಹಾಗೆ ಮಾಡುವವರನ್ನು ಜ್ಞಾನಾನಂದ ಸ್ವರೂಪನಾದ ಶ್ರೀ ಹರಿಯು, ಕರುಣಾಳುವಾದ್ದರಿಂದ ಅತಿ ಸಮೀಪ ಬಂಧುಗಳಂತೆ ಅವರ ಒಳಗೂ ಹೊರಗೂ ಇದ್ದು ಪರಮ ಪ್ರೀತಿಯಿಂದ ಸಂರಕ್ಷಿಸುವನು.

ತಾನು ಮಾಡುವ ವ್ಯಾಪಾರಗಳು ಇಂತಹವೆಂದು ಯಾರಿಗೂ ತಿಳಿಸದೇ

ಸಕಲೇಂದ್ರಿಯ ವ್ಯಾಪಾರಗಳನ್ನು ತಾನೇ ಮಾಡಿ ಮಾಡಿಸುವನೆಂದು ಹೇಳು ತ್ತಾರೆ:—

**ಆ ಪರಮ ಸಕಲೇಂದ್ರಿಯಗಳೊಳು |**
**ವ್ಯಾಪಕನು ತಾನಾಗಿ ವಿಷಯವ |**
**ತಾ ಪರಿಗ್ರಹಿಸುವನು ತಿಳಿಸದೆ ಸರ್ವ ಜೀವರೊಳು ||**
**ಪಾಪರಹಿತ ಪುರಾಣ ಪುರುಷ ಸ |**
**ಮೀಪದಲಿ ನೆಲಸಿದ್ದು ನಾನಾ |**
**ರೂಪಧಾರಕ ತೋರಿಕೊಳ್ಳದೆ ಕರ್ಮಗಳ ಮಾಳ್ಪ ||೧೭||**

ಪದ್ಯಾರ್ಥ :—ಆ=ಪೂರ್ವದಲ್ಲಿ ಹೇಳಿದ, ಪರಮ=ಪರಮಾತ್ಮನು, ಸಕಲೇಂದ್ರಿಯಗಳೊಳು, ವ್ಯಾಪಕನು ತಾನಾಗಿ, ಸಜೀವರೊಳು=ಎಲ್ಲಾ ಜೀವರೊಳಗಿದ್ದು, ತಿಳಿಸದೆ=ಜೀವರಿಗೆ ಗೊತ್ತಾಗದೆ, ತಾ=ತಾನು; ವಿಷ ಯವನು=ವಿಷಯ ಭೋಗಗಳನ್ನು, ಪರಿಗ್ರಹಿಸುವನು=ಸ್ವೀಕರಿಸುವನು. ಪಾಪರಹಿತ=ಪಾಪಲೇಪವಿಲ್ಲದ, ಪುರಾಣಪುರುಷ=ಪುರಾತನ ಪುರುಷನಾದ ಶ್ರೀ ಪರಮಾತ್ಮನು, ಸಮೀಪದಲಿ ನೆಲಸಿದ್ದು=ಜೀವರ ಸಮೀಪದಲ್ಲಿದ್ದು, ತೋರಿಕೊಳ್ಳದೆ=ತಾನು ಇರುವದನ್ನು ತಿಳಿಸಿಕೊಳ್ಳದೆ, ನಾ ನಾ ರೂಪಧಾರಕ ಬಂಧು ಬಳಗಗಳ ರೂಪ ಧಾರಕನಾಗಿದ್ದು, ಕರ್ಮಗಳ ಮಾಳ್ಪ ||೧೭||

ತಾತ್ಪರ್ಯ :—ಶ್ರೀ ಪರಮಾತ್ಮನು ಸಕಲ ಪ್ರಾಣಿಗಳ ಸರ್ವೇಂದ್ರಿಯ ಗಳೊಳು ವ್ಯಾಪಿಸಿಕೊಂಡು ಜನರಿಗೆ ತಿಳಿಸದೆ ವಿಷಯ ಸುಖವನ್ನು ತಾನು ಪರಿಗ್ರಹಿಸುವನು. ನಿರ್ದೋಷಿಯಾದ, ಪಾಪ ಲೇಪ ಸಂಬಂಧವಿಲ್ಲದ ಪುರಾಣ ಪುರುಷನಾದ ಶ್ರೀ ಹರಿಯು, ಬಂಧು, ಬಳಗ, ಆನೆ, ಕುದುರೆ ಮೊದ ಲಾದ ರೂಪಗಳಿಂದ, ಅವುಗಳಲ್ಲಿ ತಾನಿರುವುದನ್ನು ಯಾರಿಗೂ ತಿಳಿಸದೆ ಅವ ರವರಿಂದ ಯಾವ ಯಾವ ಕಾರ್ಯಗಳು ಆಗಬೇಕೊ ಅವುಗಳನ್ನು ತಾನೇ ಮಾಡುವನು.

ಅವತಾರಿಕೆ :—ಮೇಲೆ ಹೇಳಿದುದನ್ನೇ ವಿವರ ಮಾಡುತ್ತಾರೆ:—

**ಖೇಚರರು ಭೂಚರರು ವಾರಿನಿ |**
**ಶಾಚರರೊಳಿದ್ದವರ ಕರ್ಮಗ |**
**ಳಾಚರಿಸುವನು ಘನಮಹಿಮ ಪರಮಾಣ್ವನೋಪಾದಿ ||**

**ಗೋಚರಿಸನು ಬಹು ಪ್ರಕಾರಾ |**
**ಲೋಚನೆಯ ಮಾಡಿದರು ಮನಸಿಗೆ |**
**ಕೀಚಕಾರಿಪ್ರಿಯ ಕವಿಜನ ಗೇಯ ಮಹರಾಯ ||೧೮||**

ಪದ್ಯಾರ್ಥ:—ಘನ ಮಹಿಮ=ಮಹಾಮಹಿಮೆಯುಳ್ಳ ಶ್ರೀಹರಿಯು, ಖೇಚರರು=ಆಕಾಶದಲ್ಲಿ ಸಂಚರಿಸುವ ಪಕ್ಷಿಗಳು, ಭೂಚರರು=ಭೂಮಿಯಲ್ಲಿ ಚರಿಸುವ ಪಶು ಮನುಷ್ಯಾದಿಗಳು, ವಾರಿಚರರು=ನೀರಿನೊಳಗೆ ಸಂಚರಿಸುವ ಮೀನು ಮೊದಲಾದವು, ನಿಶಾಚರರೊಳು=ರಾಕ್ಷಸರು ಮೊದಲಾದವರು ಇವರೊಳಗಿದ್ದು, ಪರಮಲ್ಪನೋಪಾದಿ = ಅತ್ಯಲ್ಪವಾದ ಮೀನು ಮೊದಲಾದ ಪ್ರಾಣಿಗಳಂತೆ, ಕರ್ಮಗಳ, ಆಚರಿಸುವನು = ನಡಿಸುವನು. ಕೀಚಕಾರಿಪ್ರಿಯ=ಕೀಚಕನನ್ನು ಸಂಹರಿಸಿದ ಭೀಮಸೇನಾವತಾರ ಮಾಡಿದ ವಾಯು ದೇವರಿಗೆ ಮುಖ್ಯ ಪ್ರೀತಿ ಪಾತ್ರನಾದ, ಕವಿಜನಗೇಯ=ಜ್ಞಾನಿಜನರಿಂದ ಸ್ತುತ್ಯನಾದ, ಮಹರಾಯ=ಬ್ರಹ್ಮಾದಿಗಳಿಗಧಿಪತಿಯಾದುದರಿಂದ ಚಕ್ರವರ್ತಿಯೆಂತಿರುವ, ಶ್ರೀ ಹರಿಯು, ಬಹು ಪ್ರಕಾರ, ಆಲೋಚನೆಯ ಮಾಡಿದರು, ಮನಸ್ಸಿಗೆ ಗೋಚರಿಸನು=ತನ್ನ ಸಂಪೂರ್ಣ ಮಹಿಮೆಯನ್ನು ತಿಳಿಯ ಗೊಡಿಸನು ||೧೮||

ತಾತ್ಪರ್ಯ—ಅಂತರಿಕ್ಷದಲ್ಲಿ ಸಂಚರಿಸುವ ಪಕ್ಷಿಗಳು, ದೇವತೆಗಳು, ಗಂಧರ್ವರು ಮೊದಲಾದವರು, ಭೂಚರರಾದ ಪಶು ಮನುಷ್ಯಾದಿಗಳು, ಜಲದಲ್ಲಿ ಚರಿಸುವ ಮೀನು ಮೊದಲಾದವು, ರಾತ್ರಿಯಲ್ಲಿ ಸಂಚಾರ ಮಾಡುವ ರಾಕ್ಷಸಾದಿಗಳು ಇವರುಗಳಲ್ಲಿದ್ದು ಮಹಾ ಮಹಿಮೆಯುಳ್ಳವನಾದರೂ, ಕೇವಲ ಅಲ್ಪ ಪ್ರಾಣಿಗಳಂತೆ ಆಯಾ ಜೀವರ ಕೃತ್ಯವನ್ನು ಮಾಡಿ ಮಾಡಿಸುವನು. ವಾಯು ದೇವರಿಗೆ ಮುಖ್ಯ ಪ್ರೀತಿ ವಿಷಯನು, ಜ್ಞಾನಿಗಳಿಂದ ಸ್ತುತ್ಯನು, ಬ್ರಹ್ಮಾದಿಗಳಿಂವ ಪೂಜಾ ರೂಪವಾದ ಕಪ್ಪವನ್ನು ಕೈಗೊಳ್ಳುವನಾದುದರಿಂದ ಮಹಾ ರಾಯನು ಅಂದರೆ ಚಕ್ರವರ್ತಿಯು ಅದ ಶ್ರೀ ಪರಮಾತ್ಮನು ತನ್ನ ಭಕ್ತರಿಗೆ ಆವರವರ ಯೋಗ್ಯತಾನುಸಾರ ತಾನಾಗಿ ಗೋಚರನಾಗಬೇಕಲ್ಲದೆ ದೇಹಿಗಳು ಎಷ್ಟು ಪ್ರಕಾರ ಆಲೋಚನೆ ಮಾಡಿದರೂ ಪರಮಾತ್ಮನು ಗೊಚರಿಸುವದಿಲ್ಲ. ಮಹಾರಾಜ ಎಂಬ ನಾಮವು ಪರಮಾತ್ಮನಿಗೆ ಅನ್ವರ್ಥಕ ಮಿಕ್ಕ ರಾಜರುಗಳಿಗೆ ಔಪಚಾರಿಕ ಭಾಗವತ ದಶಮ ಸ್ಕಂಧ ಶ್ರುತಿಗೀತೆಯಲ್ಲಿ (ಅಧ್ಯಾಯ ೮೭ ಶ್ಲೋಕ ೩೦) ವರ್ಷ ಭುಜೋಽಖಿಳ ಕ್ಷಿತಿ ಪತೇರಿವ ವಿಶ್ವಸೃ

ಜೋವಿದಧತಿಯತ್ರಯೇತ್ವದಿ ಕೃತಾಭವತಶ್ಚಕಿತಾಃ ||

"ತ್ವಮೇಕಃ ಸ್ವರಾಡಖಿಳ ಕಾರಕಶಕ್ತಿಧರ ಸ್ತವ ಬಲಿಮುದ್ವಹಂತಿ ಸಮುದಂತಿ ಚಯೇ ನಿಮಿಷಾಃ" ಎಲೈ ಸ್ವಾಮಿ ! ನೀನು ಒಬ್ಬನೇ ಚಕ್ರವರ್ತಿಯು. ಎಲ್ಲಾ ಕಾರ್ಯಗಳನ್ನು ಎಲ್ಲರಿಂದಲೂ ಮಾಡಿಸುವ ಶಕ್ತಿಯುಳ್ಳವನು; ಬಹ್ಮಾದಿ ದೇವತೆಗಳೆಲ್ಲರೂ ಇತರರಿಂದ ತಾವು ಪೂಜಾದಿಗಳನ್ನು ಸ್ವೀಕರಿಸಿ ನಿನಗೆ ಪೂಜಾ ರೂಪವಾದ ಕಪ್ಪವನ್ನು ಒಪ್ಪಿಸುವರು. "ಖಂಡಾಧೀಶಾಃ ಸಾರ್ವಭೌಮಸ್ಯ ಯದ್ವದ್ಬ್ರಹ್ಮೇಶಾದ್ಯಾಃ ಕುರ್ವತೇ ತೇನುಶಾಸ್ತಿಂ" ಎಂಬ ಶಾಂಡಿಲ್ಯ ಶ್ರುತಿಯಲ್ಲಿಯೂ ಇದೇ ಅರ್ಥವು ಪ್ರತಿಪಾದಿತವಾಗಿದೆ ||೧೮||

ಸರ್ವ ಜೀವರಲ್ಲಿಯೂ ಇದ್ದು ಕರ್ಮಗಳನ್ನು ಪರಮಾತ್ಮನೇ ಮಾಡಿ ಮಾಡಿಸಿ ಎಲ್ಲರಿಗೂ ಸ್ವಾಮಿ ಎನಿಸುವನೆಂದು ಹೇಳುತ್ತಾರೆ.

**ಒಂದೆ ಗೋತ್ರ ಪ್ರವರ ಸಂಧ್ಯಾ**
**ವಂದನೆಗಳನು ಮಾಡಿ ಪ್ರಾಂತಕೆ**
**ತಂದೆ ತನಯರು ಬೇರೆ ತಮ್ಮಯ ಪೆಸರ ಗೊಂಬಂತೆ ||**
**ಒಂದೆ ದೇಹದೊಳಿದ್ದು ನಿಂದ್ಯಾ**
**ನಿಂದ್ಯಕರ್ಮವ ಮಾಡಿ ಮಾಡಿಸಿ**
**ಇಂದಿರೇಶನು ಸರ್ವ ಜೀವರೊಳೀಶನೆನಿಸುವನು ||೧೯||**

ಪದ್ಯಾರ್ಥ—ಒಂದೆ ಗೋತ್ರಪ್ರವರ=ಒಂದೇ ಪ್ರವರ ಉಳ್ಳ ತಂದೆ ಮಕ್ಕಳು, ಸಂಧ್ಯಾ ವಂದನೆಗಳನ್ನು ಮಾಡಿ, ಪ್ರಾಂತಕೆ=ಕಡೆಗೆ ತಂದೆ ತನಯರು=ಆ ತಂದೆ ಮಕ್ಕಳು, ಬೇರೆ ತಮ್ಮಯ ಪೆಸರುಗೊಂಬಂತೆ=ತಮ್ಮ ತಮ್ಮ ಹೆಸರನ್ನು ಮಾತ್ರ ಬೇರೆ ಬೇರೆ ಹೇಳಿಕೊಳ್ಳುವಂತೆ, ಇಂದಿರೇಶನು=ಲಕ್ಷ್ಮೀಪತಿಯು, ಒಂದೆ ದೇಹದೊಳಿದ್ದು, ನಿಂದ್ಯಾ ನಿಂದ್ಯ ಕರ್ಮವ=ಪುಣ್ಯ ಪಾಪ ಕರ್ಮಗಳನ್ನು ಮಾಡಿ ಮಾಡಿಸಿ ಸರ್ವ ಜೀವರೊಳಗೆ, ಈಶನೆನಿಸುವನು=ಸ್ವಾಮಿಯೆನಿಸುವನು.

ತಾತ್ಪರ್ಯ—ಒಂದೆ ಗೋತ್ರ ಒಂದೆ ಪ್ರವರದಲ್ಲಿ ಹುಟ್ಟಿದ ತಂದೆ ಮಕ್ಕಳು ಸಂಧ್ಯಾವಂದನೆ ಮಾಡಿ ಕೊನೆಗೆ ಒಂದೇ ಗೋತ್ರ ಒಂದೇ-ಪ್ರವರವನ್ನು ಉಚ್ಚರಿಸಿ ಹೆಸರುಗಳನ್ನು ಮಾತ್ರ ಬೇರೆಬೇರೆ ಹೇಳಿಕೊಳ್ಳುವರು,

ಹಾಗೆಯೇ ಪರಮಾತ್ಮನು ಒಂದೊಂದು ದೇಹದಲ್ಲಿಯೂ ಇದ್ದು ಪುಣ್ಯ ಪಾಪ ಕರ್ಮಗಳನ್ನು ತಾನೆ ಮಾಡಿ ಮಾಡಿಸಿ ಕಡೆಗೆ ತಾನು ಈಶನೆನಿಸುವನು. ಅಂದರೆ ತಂದೆ ಮಕ್ಕಳು ಗೋತ್ರಾದಿಗಳನ್ನುಚ್ಚರಿಸುವಾಗ ಒಂದೇ ಆದರೂ ಹಸರು ಹೇಳುವಾಗ ಬೇರೆಬೇರೆ ಹೇಗೆ ಆಗುವರೊ ಹಾಗೆ ಜೀವನೊಳಗಿದ್ದು ಕರ್ಮಗಳನ್ನು ಮಾಡಿ ಮಾಡಿಸುವವನು ಒಬ್ಬನೇ ಆದರೂ ಫಲಾನುಭವಕಾಲದಲ್ಲಿ ಅಸ್ವತಂತ್ರನಾದ ಜೀವನು ಬೇರೆ ಸ್ವಾಮಿಯಾದ ಪರಮಾತ್ಮನು ಬೇರೆಯಾಗಿಯೇ ಆಗುವರು. ಅಂದರೆ ಜೀವನು ಸುಖದುಃಖ ಭಾಗಿಯಾಗುವನು, ಪರಮಾತ್ಮನು ನಿರ್ಲಿಪ್ತನಾಗಿರುವನು.

ತನ್ನನ್ನು ಸ್ಮರಿಸುವವರನ್ನು ಉದ್ಧರಿಸುವನೆಂಬ ವಿಷಯವನ್ನು ಎರಡು ದೃಷ್ಟಾಂತಗಳಿಂದ ಸ್ಥಾಪಿಸುತ್ತಾರೆ.

**ಕಿಟ್ಟಗಟ್ಟದ ಲೋಹಪಾವಕ**
**ಸುಟ್ಟುವಿಂಗಡ ಮಾಡುವಂತೆ ಘ**
**ರಟವ್ರೀಹಿಗಳೊಳಿಪ್ಪ ತಂಡುಲ ಕಡೆಗೆ ತೆಗೆವಂತೆ ||**
**ದಿಠ್ಠಲಾಯೊಂದೊವ್ಮೆ ವ್ಯೆಮರ**
**ದಟ್ಟಹಾಸದಿ ಕರಿಯೆ ದುರಿತಗ**
**ಳಟ್ಟುಳಿಯು ಬಿಡಿಸವನ ತನ್ನೊಳಗಿಟ್ಟು ಸಲಹುವನು ||೨೦||**

ಪದ್ಯಾರ್ಥ ;— ಕಿಟ್ಟಗಟ್ಟಿದ ಲೋಹ=ಕಿಟ್ಟವೆಂಬ ಮಲದಿಂದ ಕೂಡಿವ ಕಬ್ಬಿಣವನ್ನು, ಪಾವಕ=ಬೆಂಕಿಯು, ಸುಟ್ಟು, ವಿಂಗಡ ಮಾಡುವಂತೆ ಕಿಟ್ಟವನ್ನೂ ಕಬ್ಬಿಣವನ್ನೂ ಬೇರೆ ಮಾಡುವಂತೆ, ಮತ್ತು ಘರಟ=ಭತ್ತವನ್ನು ಕುಟ್ಟಿ ಅಕ್ಕಿಯನ್ನು ಬೇರೆಯಾಗಿ ಮಾಡುವ ಕಟ್ಟಿಗೆಯಿಂದ ಮಾಡಿದ ಕುಟ್ಟುವ ಯಂತ್ರವು, ವ್ರೀಹಿಗಳೊಳಿಪ್ಪ=ಭತ್ತದೊಳಗಿರುವ ತಂಡುಲ=ಅಕ್ಕಿಯನ್ನು ಕಡೆಗೆತೆಗಿ ವಂತೆ=ಬೇರೆಯಾಗಿ ತೆಗೆಯುವಂತೆ, ಒವ್ಮೆ=ಒಂದಾವರ್ತಿ, ವಿಠ್ಠಲಾ ಎಂದು ವ್ಯೆ ಮರೆದು ಭಕ್ತಿಯಿಂದ ಸ್ಮೃತಿ ತಪ್ಪಿ, ಅಟ್ಟಹಾಸದಿ= ಉಚ್ಚಧ್ವನಿಯಿಂದ, ಕರಿಯೆ, ದುರಿತಗಳ=ಪಾಪಗಳನ್ನು, ಅಟ್ಟ=ದೂರಮಾಡಿ ಉಳಿಯು=ಭೀಜಭೂತವಾದ ಲಿಂಗ ಶರೀರವನ್ನು, ಬಿಡಿಸಿ=ಅಕ್ಕಿಯಮೇಲಿನ ಹೊಟ್ಟು ಒಡೆದು ಬೇರ್ಪಡಿಸಿದಂತೆ ಭಂಗಪಡಿಸಿ, ಇವನ=ಈ ಭಕ್ತನನ್ನು, ತನ್ನೊಳಗಿಟ್ಟು=ತನ್ನ ಲೋಕದಲ್ಲಿ ಅಥವ ತನ್ನ ಸಮೀಪದಲ್ಲಿಟ್ಟು ಮುಕ್ತನನ್ನಾಗಿ ಮಾಡಿ ಸಲಹುವನು.

ತಾತ್ಪರ್ಯ :—ಕಬ್ಬಿಣದಲ್ಲಿ ಕಿಟ್ಟವೆಂಬ ಒಂದು ವಿಧವಾದ ಮಲ ವಿರುವುದು. ಕಬ್ಬಿಣವನ್ನು ಚೆನ್ನಾಗಿ ಕಾಯಿಸಲು ಆ ಕಿಟ್ಟವು ಹೋಗಿ ಕಬ್ಬಿಣವು ಸ್ವಚ್ಛವಾಗಿ ಬೇರೆಯಾಗುವದು. ಇದೇ ಪ್ರಕಾರ ಮರದಿಂದ ಮಾಡಿದ ವನಿಕೆಯಿಂದ ಭತ್ತವನ್ನು ಕುಟ್ಟದರೆ ಅಕ್ಕಿ ಬೇರೆ ಹೊಟ್ಟು ಬೇರೆಯಾಗುವದು. ಅದು ಹೇಗೋ ಹಾಗೆ ಭಕ್ತಿಯಿಂದ ಮೈ ಮರೆತು ವಿಠ್ಠಲಾ ಎಂದು ಉಚ್ಚ ಧ್ವನಿಯಿಂದ ಕರೆಯಲು, ಇವನ ಪಾಪಗಳನ್ನು ಪರಿಹರಿಸಿ ಉತ್ಪತ್ತಿಗೆ ಬೀಜ ಭೂತವಾದ ಲಿಂಗಶರೀರವನ್ನು ಭಂಗಮಾಡಿ ಮುಕ್ತಿಯನ್ನು ಕೊಟ್ಟು ಉದ್ಧರಿಸುವನು. ಇಲ್ಲಿ ಲೋಹದಲ್ಲಿರುವ ಕಿಟ್ಟವನ್ನು ಬೆಂಕಿಯು ಸುಟ್ಟು ಬೇರ್ಪಡಿಸುವಂತೆ ಪಾಪವನ್ನು ಸುಡುವನೆಂತಲೂ ಕುಟ್ಟುವ ವನಿಕೆಯಿಂದ ಕುಟ್ಟದರೆ ಹೊಟ್ಟನ್ನು ಪುಡಿಮಾಡಿ ಅಕ್ಕಿಯನ್ನು ಬೇರೆ ಮಾಡಿದಂತೆ ಲಿಂಗಶರೀರವು ಭಂಗವಾಗಿ ಜೀವನ ಸ್ವರೂಪ ದೇಹಕ್ಕೆ ಮುಕ್ತಿ ಕೊಡುವನು.

ಸಮುದ್ರದಲ್ಲಿ ಜಲಚರ ಪ್ರಾಣಿಗಳು ಸ್ವೇಚ್ಛೆಯಿಂದ ತಮ್ಮ ತಮ್ಮ ಸ್ಥಾನಗಳಲ್ಲಿ ಚರಿಸುವಂತೆ ಪರಮಾತ್ಮನಲ್ಲಿ ಬ್ರಹ್ಮಾದಿ ಜೀವರು ಆಯಾ ಸ್ಥಳಗಳಲ್ಲಿ ವಿಹರಿಸುತ್ತಿರುವರೆಂದು ಹೇಳುತ್ತಾರೆ.

**ಜಲಧಿಯೊಳು ಸ್ವೇಚ್ಛಾನುಸಾರದಿ**
**ಜಲಚರಪ್ರಾಣಿಗಳು ತತ್ತ**
**ಸ್ಥಳಗಳಲಿ ಸಂತೋಷಪಡುತಲಿ ಸಂಚರಿಸುವಂತೆ ॥**
**ನಳಿನನಾಭನೊಳಬ್ಜಭವಮು**
**ಪ್ಪೊಳಲುರಿಕಮೈಗಣ್ಣಮೊದಲಾ**
**ಹಲವುಜೀವರಗಣವು ವರ್ತಿಸುತಿಹದುನಿತ್ಯದಲಿ ॥ ೨೧ ॥**

ಪದ್ಯಾರ್ಥ :—ಜಲಧಿಯೊಳು= ಸಮುದ್ರದೊಳಗೆ, ಸ್ವೇಚ್ಛಾನುಸಾರದಿ=ತಂತಮ್ಮ ಇಚ್ಛಾನುಸಾರವಾಗಿ ಜಲಚರ ಪ್ರಾಣಿಗಳು=ನೀರಿನೊಳಗೆ ಚರಿಸುವ ಮೀನು ಮೊಸಳೆ ಮೊದಲಾದವುಗಳು,ತತ್ತ ಸ್ಥಳಗಳಲಿ=ಆಯಾ ಸ್ಥಳಗಳಲ್ಲಿ, ಸಂತೋಷ ಪಡುತಲಿ ಸಂಚರಿಸುವಂತೆ, ನಳಿನನಾಭನೊಳು= ಪದ್ಮನಾಭನೊಳಗೆ, ಅಬ್ಜಭವ=ಕಮಲದಲ್ಲಿ ಹುಟ್ಟದ ಬ್ರಹ್ಮದೇವರು, ಮುಪ್ಪೊಳಲುರಿಕ=ಮೂರು ಪಟ್ಟಣಗಳನ್ನು ಸುಟ್ಟ ರುದ್ರದೇವರೂ, ಮೈಗಣ್ಣ ಮೊದಲಾದ=ಮೈಯಲ್ಲೆಲ್ಲಾ ಕಣ್ಣುಗಳುಳ್ಳ ದೇವೇಂದ್ರ ಮೊದಲಾದ, ಹಲವು ಜೀವರಗಣವು=ನಾನಾವಿಧರಾದ ಜೀವಗಣಗಳು, ನಿತ್ಯದಲ್ಲಿ=ನಿರಂ

ತರವಾಗಿ, ವರ್ತಿಸುತಿಹದು=ಸಂಚರಿಸುತ್ತಿರುವರು.

ತಾತ್ಪರ್ಯ:—ಸಮುದ್ರದಲ್ಲಿ ಮೀನು ಮೊಸಳೆ ಮೊದಲಾದ ಜಲಚರ ಪ್ರಾಣಿಗಳು ಸ್ವೇಚ್ಛೆಯಾಗಿ ಸಂಚರಿಸುತ್ತಾ ಹೇಗೆ ಸಂತೋಷದಿಂದ ಇರುತ್ತಿರುವವೊ ಹಾಗೆಯೇ ಪರಮಾತ್ಮನ ಉದರದಲ್ಲಿ ಬ್ರಹ್ಮ ರುದ್ರಾದಿ ದೇವತೆಗಳು ತಮ್ಮ ತಮ್ಮ ಸ್ಥಾನಗಳಲ್ಲಿ ತಾವು ತಾವು ಸ್ವೇಚ್ಛೆಯಾಗಿ ವಿಹರಿಸುತ್ತ ಸಂತೋಷದಿಂದ ಭಗವಂತನನ್ನು ಧ್ಯಾನಿಸುತ್ತಿರುವರು.

ಅನ್ವಯ ವ್ಯತಿರೇಕ ಪೂಜಾಪ್ರಕಾರವನ್ನು ೫ ಪದ್ಯಗಳಿಂದ ಹೇಳುತ್ತ ಅದರಲ್ಲಿ ಮೊದಲೆರಡು ಪದ್ಯಗಳಿಂದ ಅನ್ವಯಪೂಜೆಯ ಲಕ್ಷಣವನ್ನು ಹೇಳುತ್ತಾರೆ.

**ವಾಸುದೇವನು ಒಳಹೊರಗೆ ಆ**
**ಭಾಸಕನು ತಾನಾಗಿ ಬಿಂಬಪ್ರ**
**ಕಾಶಿಸುವತದ್ರೂಪ ತನ್ನಾಮದಲಿ ಸರ್ವತ್ರ ||**
**ಈಸಮನ್ವಯ ಯೆಂದೆನಿಪಸದು**
**ಪಾಸನೆಯ ಗೈವವನು ಮೋಕ್ಷಾ**
**ನ್ವೇಷಿಗಳೊಳುತ್ತಮನು ಜೀವನ್ಮುಕ್ತನವನಿಯೊಳು ||೨೨||**

ಪದ್ಯಾರ್ಥ—ವಾಸುದೇವನು ಒಳಹೊರಗೆ ಆಭಾಸಕನು=ಜೀವನ ಸ್ವರೂಪದೇಹದಲ್ಲಿ ಪ್ರತಿಬಿಂಬಿತನು, ತಾನಾಗಿ, ಬಿಂಬ=ಬಿಂಬರೂಪದಿಂದ, ಸರ್ವತ್ರ, ತದ್ರೂಪ, ತನ್ನಾಮದಲಿ=ಆಯಾ ರೂಪಗಳು, ಆಯಾ ಹೆಸರುಗಳಿಂದ ಪ್ರಕಾಶಿಸುವ=ಪ್ರಕಾಶಿಸುವನು. ಈ ಸಮನ್ವಯ ಯೆಂದೆನಿಪ= ಬಿಂಬರೂಪ, ಪ್ರತಿಬಿಂಬ ರೂಪಗಳಿಂದ ತಾನೇ ಇದ್ದು ಸಕಲ ಕಾರ್ಯಗಳ ಮಾಡಿಸುವನೆಂಬ ಸದುಪಾಸನೆಯ=ಈ ಉತ್ತಮವಾದ ರೀತಿಯಿಂದ ಉಪಾಸನೆಯನ್ನು, ಗೈವವನು=ಮಾಡುವವನು, ಮೋಕ್ಷಾನ್ವೇಷಿಗಳೊಳು= ಮೋಕ್ಷಾಪೇಕ್ಷಿಗಳೊಳಗೆ, ಉತ್ತಮನು, ಅವನಿಯೊಳು=ಭೂಮಿಯಲ್ಲಿ ಜೀವನ್ಮುಕ್ತನು.

ತಾತ್ಪರ್ಯ :—ಶ್ರೀ ವಾಸುದೇವನು ಈ ಜಗತ್ತಿನ ಒಳಹೊರಗೆ ವ್ಯಾಪ್ತನಾಗಿರುವನು. ಬಿಂಬರೂಪಯುತನಾಗಿ, ಜೀವನ ಸ್ವರೂಪ ದೇಹದಲ್ಲಿ ಪ್ರತಿಬಿಂಬಿತನಾಗಿ, ಸರ್ವ ಪ್ರಾಣಿಗಳಲ್ಲಿ ಆಯಾ ರೂಪಗಳಿಂದ ಆಯಾ ಹೆಸರುಗಳಿಂದ ಪ್ರಕಾಶಿಸುತ್ತಿರುವನು. ಬಿಂಬರೂಪಿಯಾಗಿ ಯಾವ ಪರಮಾತ್ಮ

ನಿರುವನೋ ಅದೇ ಪರಮಾತ್ಮನೇ ಪ್ರತಿಬಿಂಬನಾದ ಜೀವನೊಳಗಿರುವನು. ಈ ಎರಡು ಭಗವದ್ರೂಪಗಳಿಗೆ ಪರಸ್ಪರ ಭೇದವಿಲ್ಲವೆಂಬ ಉತ್ತಮರೀತಿಯ ಉಪಾಸನೆಯುನ್ನು ಮಾಡುವವನು ಮುಕ್ತಿ ಯೋಗ್ಯರಲ್ಲಿ ಉತ್ತಮನು ಮತ್ತು ಭೂಮಿಯಲ್ಲಿ ಜೀವನ್ಮುಕ್ತನು.

ಪರಮಾತ್ಮನಲ್ಲಿ ಅವಿಚ್ಛಿನ್ನವಾದ ಭಕ್ತಿಯಿಂದ ಉತ್ತಮಾಧಿಷ್ಠಾನ ದಲ್ಲಿರುವ ಭಗವದ್ರೂಪಗಳಿಗೆ ರಸಭೂತವಾದ ಉತ್ತಮ ಪದಾರ್ಥಗಳನ್ನರ್ಪಿ ಸುತ್ತ ಪೂಜಿಸಬೇಕೆಂದು ಹೇಳುತ್ತಾರೆ.

**ಭೋಗ್ಯವಸ್ತುಗಳೊಳಗೆ ಯೋಗ್ಯಾ**<br>
**ಯೋಗ್ಯ ರಸಗಳನರಿತು ಯೋಗ್ಯಾ**<br>
**ಯೋಗ್ಯರಲಿ ನೆಲಸಿಪ್ಪ ಹರಿಗೆ ಸಮರ್ಪಿಸನುದಿನದಿ ||**<br>
**ಭಾಗ್ಯಬಡತನ ಬರಲುಹಿಗ್ಗದೆ**<br>
**ಕುಗ್ಗಿಸೊರಗದೆ ಸದುಭಕುತಿವೈ**<br>
**ರಾಗ್ಯಗಳನೆಮಾಡು ನಿರ್ಭಾಗ್ಯನೆನಿಸದಲೇ || ೨೩ ||**

ಪದ್ಯಾರ್ಥ:—ಭೋಗ್ಯವಸ್ತುಗಳೊಳಗೆ=ನಾವು ಭೋಗಪಡಲು ಯೋಗ್ಯವಾದ ಪದಾರ್ಥಗಳಲ್ಲಿ ಯೋಗ್ಯಾಯೋಗ್ಯ ರಸಗಳನರಿತು=ಈ ಪದಾರ್ಥವು ಭೋಗಿಸಲುಯೋಗ್ಯವು, ಇದು ಯೋಗ್ಯವಲ್ಲದ್ದು ಎಂದು ಗುರುಮುಖದಿಂದಾಗಲಿ, ಶಿಷ್ಟಾಚಾರದಿಂದಾಗಲಿ, ಶಾಸ್ತ್ರಗಳಿಂದಾಗಲಿ ತಿಳಿದು, ಯೋಗ್ಯಾಯೋಗ್ಯರಲಿ ನೆಲಸಿಪ್ಪ=ದೇವ ಬ್ರಾಹ್ಮಣ ಚಂಡಾಲ ಪಶ್ವಾದಿಗಳಲ್ಲಿರುವ. ಹರಿಗೆ=ಭಗವದ್ರೂಪಗಳಿಗೆ, ಅನುದಿನದಿ = ಪ್ರತಿದಿವಸದಲ್ಲಿ ಸಮರ್ಪಿಸು, ಭಾಗ್ಯ ಬಡತನ ಬರಲು. ಹಿಗ್ಗದೆ ಕುಗ್ಗಿ ಸೊರಗದೆ=ಭಾಗ್ಯ ಬಂತೆಂದು ಹಿಗ್ಗದೆ, ಬಡತನ ಬಂತೆಂದು ಕುಗಿ ಸೊರಗದೆ, ನೀನು, ನಿರ್ಭಾಗ್ಯನೆನಿಸದಲೆ=ಜನ್ಮವನ್ನು ವ್ಯರ್ಥವೆಂದೆನಿಸದೆ, ಸದುಭಕುತಿ=ಪರಮಾತ್ಮನಲ್ಲಿ ಒಳ್ಳೆ ಭಕ್ತಿಯನ್ನು, ವೈರಾಗ್ಯಗಳನೆ, ಸಂಸಾರದಲ್ಲಿ ವೈರಾಗ್ಯವನ್ನು ಮಾಡು.

ತಾತ್ಪರ್ಯ:—ನಾವು ಭೋಗಪಡಲು ಯೋಗ್ಯವಾದ ಪದಾರ್ಥಗಳಲ್ಲಿ ದೇವರ ನೈವೇದ್ಯಕ್ಕರ್ಹವಾದ ಉತ್ತಮ ಪದಾರ್ಥಗಳು ಯಾವವು? ನಿಷಿದ್ಧಗಳು ಯಾವವು? ಎಂಬುದನ್ನ ಗುರುಮುಖದಿಂದಾಗಲಿ ಶಾಸ್ತ್ರದಿಂದಾಗಲಿ ತಿಳಿದು, ಸಾತ್ವಿಕರು, ರಾಜಸರು, ತಾಮಸರೆಂಬ ಮೂರುವಿಧ ಜೀವ

ರಲ್ಲಿ ವಾಸವಾಗಿರುವ ಶ್ರೀಪರಮಾತ್ಮನಿಗೆ ಸಾತ್ವಿಕ, ರಾಜಸ, ತಾಮಸಾತ್ಮಕವಾದ ಭೋಗ್ಯಪದಾರ್ಥಗಳನ್ನು ಸಮರ್ಪಿಸಬೇಕು. ಅಂದರೆ ಸಾತ್ವಿಕರು ಸಾತ್ವಿಕಾಹಾರವನ್ನು ಸೇವಿಸುತ್ತ ಸ್ವಸ್ತ್ರೀನಿರತರಾಗಿರುವರು. ರಾಜಸರುತಾಮಸರು ತಮ್ಮತಮ್ಮ ಯೋಗ್ಯತಾನುಸಾರವಾದ ರಾಜಸತಾಮಸ ಪದಾರ್ಥಗಳು ಉಳ್ಳೀಗಡ್ಡೆ, ಸೋರೇಕಾಯಿ ಮೊದಲಾದ ಪದಾರ್ಥಗಳಲ್ಲಿಯೂ ವೇಶ್ಯಾಮೊದಲಾದ ಪರವನಿತೆಯರಲ್ಲಿಯೂ ಆಸಕ್ತರಾಗಿ ಸಂತೋಷಪಡುತ್ತಿರುವರು. ಶ್ರೀಪರಮಾತ್ಮನು ಅವರವರೊಳಗಿದ್ದು ಅವರವರ ಯೋಗ್ಯತಾನುಸಾರವಾಗಿ ಫಲಕೊಡುವದಕ್ಕಾಗಿ ಸಾತ್ವಿಕ ತಾಮಸ ಮೊದಲಾದ ಪದಾರ್ಥಗಳ ರಸವನ್ನು ತಾನು ಸ್ವೀಕರಿಸಿ ಅವರವರ ಯೋಗ್ಯತಾನು ಗುಣವಾದ ಫಲವನ್ನು ಕೊಡುವನು. ಇವುಗಳನ್ನು ತಿಳಿದು ಸಾತ್ವಿಕರಾದ ಭಗವದ್ಭಕ್ತರಲ್ಲಿರುವ ಪರಮಾತ್ಮನಿಗೆ ಸಾತ್ವಿಕ ಪದಾರ್ಥಗಳನ್ನು ಸಮರ್ಪಿಸಬೇಕು. ತಾಮಸಾದಿ ಪದಾರ್ಥಗಳ ಸ್ವೀಕಾರದಿಂದ ಪರಮಾತ್ಮನಿಗೆ ದೋಷಪ್ರಾಪ್ತಿಯುಂಟೆಂಬ ಶಂಕೆಯನ್ನು ಮಾಡಬಾರದು. ಏಕೆಂದರೆ ನಿಷಿದ್ಧಾನಿಷಿದ್ಧ ಭೋಗ್ಯವಸ್ತುಗಳಲ್ಲಿ ಯಾವ ಪರಮಾತ್ಮನಿರುವನೋ ಭೋಗಿಸುವವರಲ್ಲಿಯೂ ಅದೇ ಪರಮಾತ್ಮನೇ ಇರುವದರಿಂದ ಭೋಗ್ಯವಸ್ತುಗಳಿಗೂ ಭೋಗಿಜೀವರಿಗೂ ಪರಸ್ಪರ ಭೇದವುಂಟೇ ಹೊರತು ಅವುಗಳಲ್ಲಿರುವ ಭಗವದ್ರೂಪಗಳಿಗೆ ಸ್ವಲ್ಪವಾದರೂ ಭೇದವಿರುವದಿಲ್ಲ. ಆದ್ದರಿಂದ ಯಾವಯಾವ ಪ್ರಾಣಿಗಳು ಯಾವಯಾವದನ್ನು ಪ್ರೀತಿಸುವರೊ ಅವರವರಲ್ಲಿರುವ ಪರಮಾತ್ಮನಿಗೆ ಆಯಾ ಪದಾರ್ಥಗಳನ್ನೇ ಸಮರ್ಪಿಸಬೇಕು; ಹೀಗೆ ಸಮರ್ಪಿಸಿ ಪೂಜಿಸುವದಕ್ಕೆ ಅನ್ವಯ ಪೂಜೆ ಎಂದು ಹೆಸರು. ಹೀಗೆ ಸರ್ವತ್ರವ್ಯಾಪ್ತವಾದ ಭಗವದ್ರೂಪಗಳಲ್ಲಿ ಪರಸ್ಪರ ಭೇಧವನ್ನು ಚಿಂತಿಸದೆ ಪೂಜಿಸುವದರಿಂದ ಬೆಂಕಿಯಲ್ಲಿ ಬೆಂಕಿ ಹಾಕಿದಂತೆ ಒಂದಾಗುವದು. ಈರೀತಿ ತಿಳಿದು ಪೂಜಿಸಿದರೆ ಪರಮಾತ್ಮನು ಸುಪ್ರೀತನಾಗುವನು. ಇದಲ್ಲದೆ ಭಾಗ್ಯಬಂದಾಗ ಹಿಗ್ಗಬಾರದು; ಬಡತನ ಬಂದಾಗ ಕುಗ್ಗಿಸೊರಗಬಾರದು. ಯಾವಕಾಲಕ್ಕೆ ಯಾವದು ಬಂದರೂ ಈಶ್ವರ ಚಿತ್ತಾನುಸಾರ ಬಂತೆಂದು ಭಾವಿಸಿ ಜನ್ಮವನ್ನು ಸಾರ್ಥಕಮಾಡಿಕೊಂಡು ಜ್ಞಾನ ವೈರಾಗ್ಯ ಭಕ್ತಿಯಿಂದ ಭಗವಂತನನ್ನು ಆರಾಧಿಸುತ್ತಿರಬೇಕು.

ವ್ಯತಿರೇಕಪೂಜೆಯ ಲಕ್ಷಣವನ್ನು ಹೇಳುತ್ತಾರೆ.

**ಸ್ಥಳಜಲಾದ್ರಿಗಳಲ್ಲಿ ಜನಿಸುವ**
**ಫಲಸುಪುಷ್ಪಜಗಂಧರಸ ಶ್ರೀ**
**ತುಲಸಿಮೊದಲಾದಖಿಳ ಪೂಜಾಸಾಧನಪಧಾರ್ಥ ॥**
**ಹಲವುಬಗೆಯಿಂದರ್ಪಿಸುತ ಬಾರ**
**ಬೊಳೆಯ ಜನಕಗೆ ನಿತ್ಯನಿತ್ಯದಿ**
**ತಿಳಿವುದಿದು ವ್ಯತಿರೇಕ ಪೂಜೆಗಳೆಂದು ಕೋವಿದರು ॥ ೨೪ ॥**

ಪದ್ಯಾರ್ಥ :—ಸ್ಥಳ=ಭೂಮಿ, ಜಲ=ನೀರು, ಅದ್ರಿಗಳಲಿ=ಬೆಟ್ಟಗಳಲ್ಲಿ, ಜನಿಸುವ=ಹುಟ್ಟುವ, ಫಲಸುಪುಷ್ಪಜ=ಫಲಗಳಿಂದಲೂ ಪುಷ್ಪಗಳಿಂದಲೂ, ಹುಟ್ಟುವ, ಗಂಧ=ವಾಸನಾ ವಿಶೇಷವು, ರಸ=ಮಾಧುರ್ಯಾದಿ ರಸವಿಶೇಷವು ಇವುಗಳನ್ನು, ಶ್ರೀ ತುಲಸಿ ಮೊದಲಾದ ಅಖಿಳ ಪೂಜಾ ಸಾಧನ ಪದಾರ್ಥ = ಸಮುಸ್ತವಾದ ಪೂಜೆಗೆ ಯೋಗ್ಯವಾದ ಪದಾರ್ಥಗಳನ್ನು, ಹಲವು ಬಗೆಯಿಂದ=ಬಹು ಬಗೆಯಿಂದ, ಬಾಂಬೊಳೆಯ ಜನಕಗೆ=ಗಂಗೆಯನ್ನು ಪಡೆದ ಪರಮಾತ್ಮನಿಗೆ, ನಿತ್ಯ ನಿತ್ಯದಿ=ಪ್ರತಿನಿತ್ಯ, ಅರ್ಪಿಸುತ= ಅರ್ಪಿಸುವದು, ಈ ಪೂಜೆಯು, ಕೋವಿದರು=ಪಂಡಿತರು ವ್ಯತಿರೇಕ ಪೂಜೆ ಎಂದು ತಿಳಿಯುವರು ||೨೪||

ತಾತ್ಪರ್ಯ:- ಭೂಮಿ, ನೀರು ಬೆಟ್ಟ ಇವುಗಳಲ್ಲಿ ಹುಟ್ಟುವ ಫಲ ಪುಷ್ಪಗಳ ರಸ ಗಂಧಗಳನ್ನ ಶ್ರೀ ತುಳಸಿ ಮೊದಲಾದ ಸಮುಸ್ತ ಪೂಜಾ ಯೋಗ್ಯ ಪದಾರ್ಥಗಳನ್ನು ನಾನಾ ಬಗೆಯಿಂದ ಶ್ರೀ ಪರಮಾತ್ಮನಿಗೆ ಅರ್ಪಿಸಬೇಕು. ಈ ಪೂಜೆಯನ್ನು ಜ್ಞಾನಿಗಳು ವ್ಯತಿರೇಕ ಪೂಜೆ ಎನ್ನುವರು.

ಮೇಲಿನ ಪದ್ಯಗಳಲ್ಲಿ ಹೇಳಿದ ಅನ್ವಯ ವ್ಯತಿರೇಕ ಪೂಜೆಗಳಿಗೆ ಭೇದವನ್ನು ತಿಳಿಯುವದು ಅಲ್ಪಮತಿಗಳಿಗೆ ಕಷ್ಟವೆಂದು ಆಲೋಚಿಸಿ ಸ್ಪಷ್ಟ ಮಾಡಿ ತೋರಿಸುತ್ತಾರೆ.

**ಶ್ರೀಕರನ ಸರ್ವತ್ರದಲಿ ಅವ**
**ಲೋಕಿಸುತ ಗುಣರೂಪ ಕ್ರಿಯವ್ಯತಿ**
**ರೇಕತಿಳಿಯದಲನ್ವಯಿಸು ಬಿಂಬನಲಿವುರಿಯದಲೆ ॥**
**ಸ್ವೀಕರಿಸುವನು ಕರುಣದಿಂದ ನಿ**
**ರಾಕರಿಸದೆ ಕೃಪಾಳುಭಕ್ತರ**
**ಶೋಕಗಳ ಪರಿಹರಿಸಿ ಸುಖವಿತ್ತನವರತ ಪೊರೆವ ॥ ೨೫ ॥**

ಪದ್ಯಾರ್ಥ :—ಶ್ರೀಕರನ=ಐಶ್ವರ್ಯ ಪ್ರದನಾದ ಶ್ರೀ ಪರಮಾತ್ಮನನ್ನು ಸರ್ವತ್ರದಲಿ, ಅವಲೋಕಿಸುತ=ಚಿಂತಿಸುತ, ಗುಣ=ಆನಂದಾದಿ ಗುಣಗಳ ಲ್ಲಾಗಲಿ, ರೂಪ=ಸರ್ವತ್ರ ವ್ಯಾಪ್ತವಾದ ರೂಪಗಳು, ಮತ್ಸ್ಯಾದ್ಯವತಾರ ರೂಪಗಳು ಇವುಗಳಲ್ಲಾಗಲಿ, ಕ್ರಿಯ=ಸ್ವಾಮಿ ಭೃತ್ಯಾದಿಗಳಲ್ಲಿದ್ದು ಮಾಡಿ ಮಾಡಿಸುವ ಕ್ರಿಯಾದಿಗಳಲ್ಲಾಗಲಿ, ವ್ಯತಿರೇಕ ತಿಳಿಯದಲೆ=ಭೇದಗಳನ್ನು ಚಿಂತಿಸದೆ, ಬಿಂಬನಲಿ= ನಮ್ಮ ದೇಹದಲ್ಲಿರುವ ಬಿಂಬ ಮೂರ್ತಿಯಲ್ಲಿ, ಅನ್ವಯಿಸು=ಏಕೀಭಾವವನ್ನು ಚಿಂತಿಸು ಸ್ವೀಕರಿಸುವನು, ಕರುಣದಿಂದ, ನಿರಾಕರಿಸದೆ, ಕೃಪಾಳು ಭಕ್ತರ ಶೋಕಗಳ ಪರಿಹರಿಸಿ, ಸುಖವಿತ್ತು=ಸುಖ ವನ್ನು ಕೊಟ್ಟು, ಅನವರತ=ಯಾವಾಗಲೂ, ಪೊರೆವ=ರಕ್ಷಿಸುವನು ||೨೫||

ತಾತ್ಪರ್ಯ—ಮೇಲಿನ ಪದ್ಯದಲ್ಲಿ ಹೇಳಿದಂತೆ ಸ್ಥಳ ಜಲ ಪರ್ವತಗಳಲ್ಲಿ ಹುಟ್ಟಿದ ಫಲಪುಷ್ಪಾದಿಗಳಲ್ಲಿಯೂ ಸಹ ಭಗವಂತನೇ ತದ್ರೂಪ ತದಾಕಾರ ನಾಗಿರುವನೆಂದು ಭಾವಿಸಿ ನಮ್ಮ ಬಿಂಬ ಮೂರ್ತಿಯಾದ ಶ್ರೀ ಪರಮಾತ್ಮ ನಿಗೂ, ತುಳಸ್ಯಾದಿಗಳಲ್ಲಿಯೂ, ಶ್ವಾನ ಚಂಡಾಲಾದಿಗಳಲ್ಲಿಯೂ ಇರುವ ಭಗವಂತನ ಆನಂದಾದಿ ರೂಪಗಳಲ್ಲಾಗಲಿ ಕಾರ್ಯಗಳ ಮಾಡುವ ಶಕ್ತಿಯ ಲ್ಲಾಗಲಿ ಸ್ವಲ್ಪವಾದರೂ ವ್ಯತ್ಯಾಸವನ್ನು ಎಣಿಸದೆ ಬಿಂಬ ರೂಪಿಯೇ ಪ್ರತಿ ಮಾದಿಗಳಲ್ಲಿಯೂ ಸರ್ವತ್ರದಲ್ಲಿಯೂ ಇರುವನು. ತುಳಸ್ಯಾದಿಗಳಲ್ಲಿರುವ ಭಗವಂತನನ್ನು ಬಿಂಬರೂಪಿಯಾದ ಶ್ರೀ ಪರಮಾತ್ಮನಲ್ಲಿ ಸಮರ್ಪಿಸುವೆನು ಎಂದು ಅರ್ಪಿಸಬೇಕು. ಪೂಜಾದ್ರವ್ಯ ರೂಪವಾದ ಭಗವಂತನನ್ನು ಬಿಂಬ ನಲ್ಲಿ ಅನ್ವಯಿಸುವದೇ ಅನ್ವಯ ಪೂಜೆಯುಂತಲೂ, ಇದಕ್ಕೆ ವಿರುದ್ಧವಾಗಿ, ತುಳಸ್ಯಾದಿಗಳಲ್ಲಿಯೂ ಭೋಗ್ಯ ಪದಾರ್ಥಗಳಲ್ಲಿಯೂ ಭಗವಂತನನ್ನು ತಿಳಿ ದಿದ್ದರೂ, ಆ ವಸ್ತುಗಳನ್ನು ಬೇರೆಯಾಗಿ ಚಿಂತಿಸಿ, ಸಾಲಿಗ್ರಾಮ ಪ್ರತಿಮಾ ದಿಗಳಲ್ಲಿ ಭಗವತ್ಪ್ರೀತಿಗೋಸ್ಕರ ಸಮರ್ಪಿಸುವದು ವ್ಯತಿರೇಕ ಪೂಜೆಯೆಂ ತಲೂ ತಿಳಿಯಬೇಕು. ಅನ್ವಯ ಪೂಜೆಯಲ್ಲಿ ಸರ್ವತ್ರವ್ಯಾಪ್ತವಾಗಿರುವ ಭಗವದ್ರೂಪಗಳ ಗುಣ ರೂಪ ಕ್ರಿಯಾದಿಗಳಲ್ಲಿ ವ್ಯತ್ಯಾಸವನ್ನು ಚಿಂತಿಸ ಬಾರದೆಂದರೇನು. ಪದಾರ್ಥಗಳೆಲ್ಲವೂ ಒಂದೆ ಎಂದು ಅರ್ಥವಲ್ಲ. ಇವು ಗಳಲ್ಲಿರುವ ಭಗವಂತನ ಗುಣ ಕ್ರಿಯೆಗಳಿಗೆ ಭೇದವಿಲ್ಲ; ಹೇಗೆಂದರೆ ಭಾಗವತ ಶ್ರುತಿಗೀತೆಯಲ್ಲಿ 'ನಹಿ ವಿಕೃತಂತ್ಯಜಂತಿತನಕಸ್ಯ ತದಾತ್ಮತಯಾ' ಉತ್ತಮ ವಾದ ಚಿನ್ನದಿಂದ ಒಡವೆಗಳು ಮಾಡಿಸಿದರೆ ಆ ಒಡವೆಗಳ ಆಕಾರ ಭೇದ

ದಿಂದ ಹೆಸರುಗಳಲ್ಲಿ ಮಾತ್ರ ಭೇದವಾಗುವದೇ ಹೊರತು ಚಿನ್ನದಲ್ಲಿ ವ್ಯತ್ಯಾಸ ವಿರುವದಿಲ್ಲ. ಬಣ್ಣ, ಗುಣ ಕ್ರಿಯಾ ಇವುಗಳಲ್ಲಿ ಹೇಗೆ ಭೇದವಾಗದೊ ಹಾಗೆಯೆ ರಾಮ ಕೃಷ್ಣಾದಿ ರೂಪಗಳಿಗೂ ಪಶು ಪಕ್ಷಿ ವೃಕ್ಷಾದಿಗಳಿಗೂ ಪರ ಸ್ಪರ ಬೇದ ಕಾಣುವದರಿಂದಲೂ ಆಯಾ ಹೆಸರು ಆಯಾ ರೂಪಗಳಿಂದ ಪರ ಮಾತ್ಮನಿದ್ದರೂ ಭಗವತ್ಸರೂಪ ಗುಣ ಕ್ರಿಯಾದಿಗಳಲ್ಲಿ ಕಿಂಚಿತ್ತಾದರೂ ಭೇದ ಚಿಂತಿಸಬಾರದು. ಈ ಪ್ರಕಾರ ಭಗವಂತನನ್ನು ಏಕ ಭಾವದಿಂದ ಪೂಜಿಸಿದರೆ ಆ ಪೂಜೆಯನ್ನು ನಿರಾಕರಿಸದೆ ಕೃಪಾಳುವಾದ ಸ್ವಾಮಿಯು ಕರು ಣದಿಂದ ಅದನ್ನು ಸ್ವೀಕರಿಸಿ ಭಕ್ತರ ಶೋಕಗಳನ್ನು ಪರಿಹರಿಸಿ ಮುಕ್ತಿ ಸುಖ ವನ್ನಿತ್ತು ರಕ್ಷಿಸುವನು.

ವ್ಯತಿರೇಕಾನ್ವಯ ಪೂಜೆಯ ಪ್ರಕರಣವನ್ನು ಮುಗಿಸುತ್ತಾ ಅಪೂಜೆಗಳ ಫಲವನ್ನು ಹೇಳುತ್ತಾರೆ.

**ಇನಿತು ವ್ಯತಿರೇಕಾನ್ವಯುಗಳೆಂ**
**ದೆನಿಪ ಪೂಜಾವಿಧಿಗಳನೆ ತಿಳಿ**
**ದನಿಮಿಷೇಶನ ತೃಪ್ತಿಪಡಿಸುತಲಿರು ನಿರಂತರದಿ ॥**
**ಘನಮಹಿಮ ಕೈಕೊಂಡು ಸ್ಥಿತಿಮೃತಿ**
**ಜನುಮಗಳ ಪರಿಹರಿಸಿ ಸೇವಕ**
**ಜನರೊಳಿಟ್ಟಾನಂದಪಡಿಸುವ ಭಕ್ತವತ್ಸಲನು ॥ ೨೬ ॥**

ಪದ್ಯಾರ್ಥ :—ಇನಿತು=ಈ ಪ್ರಕಾರವಾಗಿ, ವ್ಯತಿರೇಕಾನ್ವಯಗಳೆಂ ದೆನಿಪ=ವ್ಯತಿರೇಕ ಪೂಜೆ, ಅನ್ವಯ ಪೂಜೆ ಎಂಬುವ ಪೂಜಾವಿಧಿಗಳನ್ನು ತಿಳಿದು, ಅನಿಮಿಷೇಶನ= ದೇವತೆಗಳೊಡೆಯನಾದ ಶ್ರೀ ಪರಮಾತ್ಮನನ್ನು ನಿರಂತರದಿ=ಬಿಡದೆ (ಅವಿಚ್ಛಿನ್ನವಾಗಿ), ತೃಪ್ತಿ ಪಡಿಸುತಲಿರು = ಪರಮಾ ತ್ಮನು ಪೂಜೆಯಿಂದ ಸಂತುಷ್ಟನಾಗುವಂತೆ ಮಾಡುತ್ತಿರು; ಘನಮಹಿಮ= ಮಹಾ ಮಹಿಮೆಯುಳ್ಳ ಶ್ರೀ ಹರಿಯು, ಕೈಕೊಂಡು= ಸ್ವೀಕರಿಸಿ, ಸ್ಥಿತಿ= ಇರುವಿಕೆ, ಮೃತಿ=ಮರಣ, ಜನುಮಗಳ=ಹುಟ್ಟುವಿಕೆ ಇವುಗಳನ್ನು ಪರಿ ಹರಿಸಿ, ಸೇವಕ ಜನರೊಳು=ಭಕ್ತಾಗ್ರೇಸರರಾದ ಬ್ರಹ್ಮಾದಿಗಳ ಸಮೀಪ ದಲ್ಲಿ ಇಟ್ಟು=ಮುಕ್ತಸ್ಥಾನದಲ್ಲಿಟ್ಟು, ಭಕ್ತ ವತ್ಸಲನು, ಆನಂದಪಡಿಸುವ= ಸುಖ ಪಡಿಸುವನು ॥೨೬॥

ತಾತ್ಪರ್ಯ—ಮೇಲಿನ ನಾಲ್ಕು ಪದ್ಯಗಳಲ್ಲಿ ವಿವರಿಸಿದಂತೆ ಅನ್ವಯ ವ್ಯತಿರೇಕ ಪೂಜೆಗಳನ್ನು ತಿಳಿದು ದೇವೋತ್ತಮನಾದ ಶ್ರೀ ಪರಮಾತ್ಮನನ್ನು ಚಿಂತಿಸಿ ಆತನು ಮೆಚ್ಚುವಂತೆ ಮಾಡಿದರೆ, ಪರಮಾತ್ಮನು ಭಕ್ತವತ್ಸಲನಾದುದರಿಂದ ಜನನ ಮರಣ ರೂಪವಾದ ಸಂಸಾರ ಬಂಧನವನ್ನು ಬಿಡಿಸಿ, ಮುಕ್ತಿಯನ್ನು ಕೊಟ್ಟು, ಆ ಮುಕ್ತ ಸ್ಥಾನದಲ್ಲಿ ಮುಕ್ತರಾದ ಬ್ರಹ್ಮಾದಿಗಳ ಮಧ್ಯದಲ್ಲಿ ನಮ್ಮನ್ನು ಇಟ್ಟು ಸುಖಪಡಿಸುವನು.

ಈ ಪದ್ಯ ಮೊದಲು ಸಂಧಿಯ ಕೊನೆಯ ವರೆಗೂ ಪರಮಾತ್ಮನ ಜಡ ಚೇತನಾತ್ಮಕ ಪ್ರತಿಮಾದಿಗಳ ಗೋಳಕ ಚಿಂತನಾಕ್ರಮವನ್ನು ಹೇಳುತ್ತಾರೆ.

**ಜಲಜನಾಭನಿಗೆರಡು ಪ್ರತಿಮೆಗ**
**ಳಿಳೆಯೊಳಗೆ ಜಡಚೇತನಾತ್ಮಕ**
**ಚಲದೊಳೀರ್ಬಗೆ ಸ್ತ್ರೀಪುರುಷ ಭೇದದಲಿ ಜಡದೊಳಗೆ ॥**
**ತಿಳಿವದಾಹಿತ ಪ್ರತಿಮೆ ಸಹಜಾ**
**ಚಲಗಳೆಂದೀರ್ಬಗೆ ಪ್ರತೀಕದಿ**
**ಲಲಿತಪಂಚತ್ರಯ ಸುಗೋಳಕವರಿತು ಭಜಿಸುತಿರು ॥ ೨೭ ॥**

ಪದ್ಯಾರ್ಥ—ಜಲಜನಾಭನಿಗೆ = ಕಮಲನಾಭನಿಗೆ, ಇಳೆಯೊಳಗೆ= ಭೂಮಿಯಲ್ಲಿ, ಜಡಚೇತನಾತ್ಮಕ=ಜಡ ಪ್ರತಿಮೆಗಳೆಂತಲೂ, ಚೇತನಪ್ರತಿಮೆಗಳೆಂತಲೂ ಎರಡು ಪ್ರತಿಮೆಗಳು=ಎರಡು ಬಗೆಯ ಪ್ರತಿಮೆಗಳು ಇರುವವು, ಚಲದೊಳು=ಅವು ಎರಡರ ಪೈಕಿ ಚಲ ಪ್ರತಿಮೆಗಳಲ್ಲಿ ಸ್ತ್ರೀ ಪುರುಷ ಭೇದದಲಿ, ಈರ್ಬಗೆ= ಎರಡು ಬಗೆಗಳುಂಟು. ಜಡದೊಳಗೆ, ಆಹಿತ ಪ್ರತಿಮೆ, ಸಹಜಾಚಲ ಪ್ರತಿಮೆ ಎಂತಲೂ, ಈರ್ಬಗೆ=ಎರಡು ಬಗೆಗಳುಂಟು, ಪ್ರತೀಕದಿ=ಪ್ರತೀಕಗಳಲ್ಲಿ, ಲಲಿತ=ಮನೋಹರವಾದ ಪಂಚತ್ರಯ ಸುಗೋಳಕವರಿತು=೫ x ೩. ಹೀಗೆ ಎರಡು ಪ್ರಕಾರವಾದಗೋಳಕಗಳನ್ನು ತಿಳಿದು ಭಜಿಸುತಿರು.

ತಾತ್ಪರ್ಯ :—ಶ್ರೀಪದ್ಮನಾಭನಿಗೆ ಜಡಪ್ರತಿಮೆಯೆಂತಲೂ, ಚೇತನ ಪ್ರತಿಮೆಯೆಂತಲೂ ಎರಡು ಪ್ರಕಾರಗಳುಂಟು. ಚಲಪ್ರತಿಮೆಗಳು ಸ್ತ್ರೀ ಪುರುಷ ಭೇದದಿಂದ ಎರಡು ಪ್ರಕಾರ, ಜಡಪ್ರತಿಮೆಗಳಲ್ಲಿ ಆಹಿತ ಪ್ರತಿಮೆಯೆಂತಲೂ, ಸಹಜಾಚಲ ಪ್ರತಿಮೆಯಂತಲೂ ಎರಡು ಪ್ರಕಾರ ಇರುವವು. ಆಹಿತಪ್ರತಿಮೆಯೆಂದರೆ ಪಂಚಲೋಹಗಳಿಂದ ಮಾಡಲ್ಪಟ್ಟವು. ಸಹಜಾ

ಚಲವೆಂದರೆ ಸಾಲಗ್ರಾಮಾದಿಗಳು. ಈ ಪ್ರತಿಮೆಗಳಲ್ಲಿ ಪ್ರತಿಮೆಗಳೇ ದೇವರೆಂದು ಭಾವಿಸದೆ ಗೋಳಕಪಂಚಕ, ಗೋಳಕತ್ರಯ ಈವಿಧವಾಗಿ ಚಿಂತಿಸಬೇಕು. ಸಾಲಿಗ್ರಾಮದಲ್ಲಿ ಮಾತ್ರ ಗೋಳಕ ಚಿಂತನೆಯಿಲ್ಲ, ಸ್ವಯಂವ್ಯಕ್ತವೆಂದು ಪ್ರಸಿದ್ಧವಾದ ಪ್ರತಿಮೆಗಳಲ್ಲಿ ಗೋಳಕತ್ರಯ ಚಿಂತನೆಮಾಡಬೇಕು, ಹೇಗೆಂದರೆ ಕಣ್ಣಿಗೆ ಕಾಣುವ ಪ್ರತಿಮೆ ೧. ಅದರಲ್ಲಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ವಾಯುದೇವರಿಂದ ಚಿಂತ್ಯವಾದ ಪ್ರತಿಮೆ ೧ ಲಕ್ಷ್ಮೀಆವರಕಾತ್ಮಕವಾದ ಪ್ರತಿಮೆ ೧ ಹೀಗೆ ಮೂರು ಗೋಳಕಗಳು. ಅದರಲ್ಲಿ ಲಕ್ಷ್ಮೀಸಮೇತನಾದ ಪರಮಾತ್ಮನನ್ನು ಚಿಂತಿಸುವದು. ಇದಕ್ಕೆ ಗೋಳಕತ್ರಯವೆಂದು ಹೆಸರು. ಸಾಧಾರಣ ಬಡಗಿಯುವರಿಂದ ಮಾಡಲ್ಪಟ್ಟ ಪ್ರತಿಮೆಗಳಲ್ಲಿ ೫ ಗೋಳಕಗಳನ್ನು ಚಿಂತಿಸಬೇಕು. ಗೋಚರಿಸುವ ಪ್ರತಿಮೆ ೧. ಅದರಲ್ಲಿ ವಿಶ್ವಕರ್ಮ ನಿರ್ಮಿಸಿದ ಪ್ರತಿಮೆ ೧. ಅದರಲ್ಲಿ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಪ್ರತಿಮೆ ೧. ಅದರಲ್ಲಿ ವಾಯುದೇವರ ಆವರಣರೂಪ ಪ್ರತಿಮೆ ೧. ಅದರಲ್ಲಿ ಲಕ್ಷ್ಮೀ ಆವರಣಾತ್ಮಕವಾದ ಪ್ರತಿಮೆ ೧. ಹೀಗೆ ೫ ಗೋಳಕಗಳನ್ನು ತಿಳಿಯಬೇಕು. ಶಿವವಿಗ್ರಹ, ಲಿಂಗ ಮೊದಲಾದವುಗಳಲ್ಲಿ ಲಿಂಗ ೧. ವಿಶ್ವಕರ್ಮ ನಿರ್ಮಿತ ೧. ಯಾವದೇವತಾ ರೂಪವೆಂದು ನೋಡುತ್ತೇವೋ ಅದು ೧. ಅದರಲ್ಲಿ ವಾಯುದೇವರು ೧ ಅಂತರ್ಯಾಮಿ ವಿಷ್ಣು ೧ ಹೀಗೆ ೫ ಗೋಳಕಗಳನ್ನು ತಿಳಿದು ಪ್ರತಿಮಾದಿಗಳನ್ನು ಪೂಜಿಸಬೇಕು.

ಚಲಪ್ರತಿಮೆಗಳಲ್ಲಿ ಸ್ತ್ರೀಪುರುಷ ಭೇದದಿಂದ ಎರಡು ಪ್ರಕಾರವೆಂದು ಮೇಲಿನ ಪದ್ಯದಲ್ಲಿ ಹೇಳಿದರು. ಈಗ ಪುರುಷರಲ್ಲಿ ಚಿಂತಿಸಬೇಕಾದ ಭಗವದ್ರೂಪವನ್ನು ಹೇಳುತ್ತಾರೆ.

**ವಾರಿಜಾಸನ ವಾಯುವೀಂದ್ರ ಉ**
**ಮಾರಮಣ ನಾಕೇಶಸ್ಮರಹಂ**
**ಕಾರಿಕಪ್ರಾಣಾದಿಗಳು ಪುರುಷಕಳೇವರದಿ ॥**
**ತೋರಿಕೊಳದ ನಿರುದ್ಧದೋಷವಿ**
**ದೂರನಾರಾಯಣ ರೂಪಶ**
**ರೀರವಾನಿಗಳಾಗಿ ಭಜಿಸ ತಪಃಖವ ಕೊಡ ತಿಹರು ॥ ೨೪ ॥**

ಪದ್ಯಾರ್ಥ :—ವಾರಿಜಾಸನ=ಬ್ರಹ್ಮದೇವರು, ವಾಯು, ವೀಂದ್ರ ಪಕ್ಷಿಶ್ರೇಷ್ಠನಾದ ಗರುಡ, ಉಮಾರಮಣ = ಪಾರ್ವತೀಪತಿಯಾದ ರುದ್ರದೇ

ವರು, ನಾಕೇಶ=ಸ್ವರ್ಗಾಧಿ ಪತಿಯಾದ ದೇವೇಂದ್ರ, ಸ್ಮರ=ಮನ್ಮಥ, ಅಹಂಕಾರಿಕ ಪ್ರಾಣಾದಿಗಳು, ಪುರುಷ ಕಳೇವರದಿ = ಪುರುಷರ ಶರೀರಗಳಲ್ಲಿ, ತೋರಿಕೊಳದೆ = ಕಾಣಿಸಿಕೊಳ್ಳದೆ ಶರೀರಾಭಿ ಮಾನಿಗಳಾಗಿ, ಅನಿರುದ್ಧ ದೋಷ ವಿದೂರನಾರಾಯಣರೂಪ=ಅನಿರುದ್ಧರೂಪ, ದೋಷದೂರನಾದ ನಾರಾಯಣರೂಪ, ಇವೆರಡು ರೂಪಗಳನ್ನು ಭಜಿಸುತ ಸುಖಕೊಡುತಿಹರು

ತಾತ್ಪರ್ಯ:— ಪುರುಷದೇಹಗಳಲ್ಲಿ ಬ್ರಹ್ಮ, ವಾಯು, ಗರುಡ, ರುದ್ರ ಇಂದ್ರ, ಮನ್ಮಥ, ಅಹಂಕಾರಿಕ ಪ್ರಾಣನೊದಲಾದ ದೇವತೆಗಳು ಶರೀರಾಭಿ ಮಾನಿಗಳಾಗಿ ಆ ಶರೀರಗಳಲ್ಲಿರುವ ಅನಿರುದ್ಧ ನಾರಾಯಣ ರೂಪಗಳನ್ನು ಭಜಿಸುತ್ತ ಪ್ರಾಣಿಗಳಿಗೆ ಸುಖವನ್ನು ಕೊಡುವರೆಂದು ಎಲ್ಲಾ ಪುರುಷದೇಹದಲ್ಲಿ ಚಿಂತಿಸಿ ಪುರುಷರೆಲ್ಲರೂ ಪುರುಷ ರೂಪವಾದ ಪರಮಾತ್ಮನ ಚಲಪ್ರತಿಮೆಯೆಂದು ಪೂಜಿಸಬೇಕು.

ಸ್ತ್ರೀಯರಲ್ಲಿ ಚಿಂತಿಸಬೇಕಾದ ಭಗವದ್ರೂಪಗಳನ್ನು ಆಶರೀರಾಭಿಮಾನಿಗಳಾದ ದೇವಸ್ತ್ರೀಯರ ರೂಪಗಳನ್ನು ಹೇಳುತ್ತಾರೆ.

**ಸಿರಿಸರಸ್ವತಿ ಭಾರತಿಸೌ**
**ಪರ್ಣಿವಾರುಣಿ ಪಾರ್ವತೀಮುಖ**
**ರಿರುತಿಹರು ಸ್ತ್ರೀಯರೊಳಗಭಿಮಾನಿಗಳು ತಾವೆನಿಸಿ ||**
**ಅರುಣಸ್ವರ್ಣನಿ ಭಾಂಗಶ್ರೀಸಂ**
**ಕರುಷಣ ಪ್ರದ್ಯುಮ್ನರೂಪಗ**
**ಳಿರಳುಹಗಲು ಉಪಾಸನವಗೈವು ತಲೆಮೋದಿಪರು || ೨೯ ||**

ಪದ್ಯಾರ್ಥ :—ಸಿರಿ=ಲಕ್ಷ್ಮೀ, ಸರಸ್ವತಿ, ಭಾರತಿ, ಸೌಪರ್ಣಿ=ಗರುಡನ ಪತ್ನಿ, ವಾರುಣಿ=ಶೇಷನ ಪತ್ನಿ, ಪಾರ್ವತೀಮುಖರು=ಪಾರ್ವತಿ ಮೊದಲಾದವರು, ಸ್ತ್ರೀಯರೊಳಗೆ ಅಭಿಮಾನಿಗಳು ತಾವೆನಿಸಿ=ಸ್ತ್ರೀಯರ ಶರೀರಾಭಿಮಾನಿಗಳೆಂದೆನಿಸಿ (ಸ್ತ್ರೀಯರ ದೇಹಗಳಲ್ಲಿರುತ್ತಾ ಆದೇಹದೊಳಗಿರುವ) ಅರುಣ = ಕೆಂಪುವರ್ಣ ಉಳ್ಳವನಾಗಿಯೂ, ಸ್ವರ್ಣನಿಭಾಂಗ=ಚಿನ್ನದಂತೆ ಪ್ರಕಾಶಿಸುವ ಶರೀರದಿಂದಲೂ ಕೂಡಿವ ಶ್ರೀ ಸಂಕರ್ಷಣ ಪ್ರದ್ಯುಮ್ನ ರೂಪಗಳನ್ನು ಇರಳು ಹಗಲು=ರಾತ್ರಿ ಹಗಲುಗಳಲ್ಲಿ ಅಂದರೆ ಸರ್ವಕಾಲದಲ್ಲಿ, ಉಪಾಸನಗೈವುತ = ಉಪಾಸನೆ ಮಾಡುತ್ತಾ, ಮೋದಿಪರು = ಸಂತೋಷಪಡುತ್ತಿರುವರು.

**ತಾತ್ಪರ್ಯ** :—ಸ್ತ್ರೀಯರೆಲ್ಲರನ್ನು ಶ್ರೀಪರಮಾತ್ಮನ ಚಲಪ್ರತಿಮೆಗಳನ್ನಾಗಿ ಭಾವಿಸಿ ಆದೇಹಗಳಲ್ಲಿ ಲಕ್ಷ್ಮೀ, ಸರಸ್ವತಿ, ಭಾರತಿ, ಸೌಪರ್ಣಿ, ವಾರುಣಿ, ಪಾರ್ವತಿ ಇವರೆ ಮೊದಲಾದ ದೇವತಾಸ್ತ್ರೀಯರು ಇದ್ದು ಆ ದೇಹದೊಳಗೆ ಕೆಂಪುವರ್ಣ ಶರೀರವುಳ್ಳವನಾಗಿಯೂ ಸ್ವರ್ಣಚ್ಛಾಯವಾದ ಶರೀರದಿಂದಲೂ ಕೂಡಿದ ಸಂಕರ್ಷಣ ಪ್ರದ್ಯುಮ್ನರೂಪಗಳನ್ನು ರಾತ್ರಿಹಗಲು ಸೇವಿಸುತ್ತ ಸುಖದಿಂದಿರುವರೆಂದು ಸ್ತ್ರೀದೇಹಗಳಲ್ಲಿ ಭಗವಂತನನ್ನು ಪೂಜಿಸಬೇಕು. ಲೋಕದಲ್ಲಿ ಸಾಧಾರಣರಾದ ಲೋಹಕಾರದಿಂದ ಮಾಡಲ್ಪಟ್ಟ ಪಂಚಲೋಹ ಪ್ರತಿಮೆಗಳಲ್ಲಿ ಚಿಂತಿಸಬೇಕಾದ ದೇವತೆಗಳನ್ನೂ ಭಗವದ್ರೂಪಗಳನ್ನೂ ಹೇಳುತ್ತಾರೆ.

**ಕೃತಪ್ರತೀಕದಿಟಂಕಿ ಭಾರ್ಗವ**
**ಹುತವಹಾನಿಲ ಮುಖ್ಯ ದಿವಿಜರು**
**ತುತಿಸಿಕೊಳುತಭಿಮಾನಿಗಳು ತಾವಾಗಿ ನೆಲಸಿದ್ದು ||**
**ಪ್ರತಿದಿವಸ ಶ್ರೀತುಲಸಿಗಂಧಾ**
**ಕ್ಷತೆ ಕುಸುಮಫಲದೀಪ ಪಂಚಾ**
**ಮೃತದಿಪೂಜಿಪ ಭಕುತರಿಗೆಕೊಡುತಿಹರು ಪುರುಷಾರ್ಥ ||೩೦||**

ಪದ್ಯಾರ್ಥ :—ಕೃತಪ್ರತೀಕದಿ=ಮಾಡಲ್ಪಟ್ಟ ಪಂಚಲೋಹ ಪ್ರತೀಕಗಳಲ್ಲಿ, ಟಂಕಿ=ಟಂಕಿನಾಮಕ ಪರಮಾತ್ಮನು, ಭಾರ್ಗವ=ಪರಶುರಾಮದೇವರು, ಹುತವಹ=ಅಗ್ನಿ, ಅನಿಲಮುಖ್ಯ= ವಾಯುದೇವರೆ ಮೊದಲಾದ, ದಿವಿಜರು=ದೇವತೆಗಳು, ತುತಿಸಿಕೊಳುತ=ಜನರಿಂದ ಸ್ತುತಿಮಾಡಿಸಿಕೊಳ್ಳುತ್ತ, ಅಭಿಮಾನಿಗಳು ತಾವಾಗಿ ಪ್ರತಿಮೆಗಳ ಅಭಿಮಾನಿಗಳಾಗಿ, ನೆಲಸಿದ್ದು =ವಾಸವಾಗಿದ್ದು, ಪ್ರತಿದಿವಸ=ಪ್ರತಿದಿವಸದಲ್ಲಿಯೂ, ಶ್ರೀತುಲಸಿ, ಗಂಧ, ಅಕ್ಷತೆ, ಕುಸುಮ=ಪುಷ್ಪ, ಫಲ, ದೀಪ, ಪಂಚಾಮೃತದಿ=ಪಂಚಾಮೃತಾಭಿಷೇಕ, ಇವುಗಳಿಂದ, ಪೂಜಿಪ=ಪೂಜೆಯನ್ನು ಮಾಡುವ, ಭಕುತರಿಗೆ, ಪುರುಷಾರ್ಥ=ಧರ್ಮಾರ್ಥ ಕಾಮಮೋಕ್ಷಗಳೆಂಬ ನಾಲ್ಕುವಿಧ ಪುರುಷಾರ್ಥಗಳನ್ನು ಕೊಡುತಿಹರು || ೩೦ ||

ತಾತ್ಪರ್ಯ:-ಬೆಳ್ಳಿ,ಬಂಗಾರ, ಕಬ್ಬಿಣ, ತಾಬ್ರ, ಸೀಸ ಎಂಬ ಅಯಿದು ಲೋಹ ಮಿಶ್ರಮಾಡಿ, ಸಿದ್ಧವಾದ ಪ್ರತಿಮೆಗಳಲ್ಲಿ ಟಂಕಿನಾಮಕ ಪರಮಾತ್ಮನು

ಪರಶುರಾಮ ದೇವರುಸಹ ಅಭಿಮಾನಿಗಳಾಗಿರುವರು. ಈ ಮೂರ್ತಿಗಳನ್ನು ಸೇವಿಸುತ್ತ, ಅಗ್ನಿ, ವಾಯು, ಮೊದಲಾದ ದೇವತೆಗಳು ಅಮುಖ್ಯಾಭಿಮಾನಿಗಳಾಗಿರುವರು ಹೀಗೆ ತಿಳಿದು ಪ್ರತಿದಿವಸದಲ್ಲಿಯೂ ಪ್ರತಿಮೆಯನ್ನು ಶ್ರೀತುಲಸಿ, ಗಂಧ, ಅಕ್ಷತೆ, ಪುಷ್ಪಫಲ, ಪಂಚಾಮೃತಾದಿಗಳಿಂದ ಪೂಜಿಸಿದರೆ, ಅಂತಹ ಭಕ್ತರಿಗೆ ಅದರೊಳಗೆ ಅಭಿಮಾನಿ ದೇವತೆಗಳ ದ್ವಾರಾಪರಮಾತ್ಮನು ಪ್ರಸನ್ನನಾಗಿ ಚತುರ್ವಿಧ ಪುರುಷಾರ್ಥಗಳನ್ನು ಕೊಡುವನು.

ಆಹಿತಾಚಲ ಪ್ರತಿಮೆಗಳಲ್ಲಿ ಚಿಂತಿಸಬೇಕಾದ ಅಭಿಮಾನಿ ದೇವತೆಗಳನ್ನೂ ಪರಮಾತ್ಮನ ರೂಪವನ್ನೂ ಹೇಳುತ್ತಾರೆ.

**ನಗಗಳಭಿಮಾನಿಗಳೆನಿಪ ಸುರ**<br>
**ರುಗಳು ಸಹಜಾಚಲಗಳಿಗೆ ಮಾ**<br>
**ನಿಗಳೆನಿಸಿ ಶ್ರೀವಾಸುದೇವನ ಪೂಜಿಸುತಲಿಹರು ॥**<br>
**ಸ್ವಗತಭೇದವಿವರ್ಜಿತನ ನಾಲ್**<br>
**ಬಗೆಪ್ರತೀಕದಿ ತಿಳಿದು ಪೂಜಿಸೆ**<br>
**ವಿಗತ ಸಂಸಾರಾಬ್ಧಿದಾಟಿಸಿ ಮುಕ್ತರನುಮಾಳ್ಪ ॥ ೩೧ ॥**

ಪದ್ಯಾರ್ಥ :—ನಗಗಳಭಿಮಾನಿಗಳೆನಿಪ= ಪರ್ವತಗಳಿಗಭಿಮಾನಿಗಳೆನಿಸುವ, ಸುರರುಗಳು=ದೇವತೆಗಳು, ಸಹಜಾಚಲಗಳಿಗೆ=ಶಾಲಿಗ್ರಾಮ ಮೊದಲಾದ ಜಡಪ್ರತಿಮೆಗಳಿಗೆ, ಮಾನಿಗಳೆನಿಸಿ, ಶ್ರೀವಾಸುದೇವನ, ಪೂಜಿಸುತಿಹರು = ಪೂಜಿಸುತಿರುವರು, ಸ್ವಗತಭೇದವಿವರ್ಜಿತನ =ಸರ್ವತ್ರವ್ಯಾಪ್ತವಾದ ರೂಪಗಳಲ್ಲಿ ಪರಸ್ಪರಭೇದವಿಲ್ಲದಿರುವ ಶ್ರೀಪರಮಾತ್ಮನನ್ನು ನಾಲ್ಬಗೆಪ್ರತೀಕದಿ ಸ್ತ್ರೀ, ಪುರುಷ, ಆಹಿತ, ಸಹಜಾಚಲ ಎಂಬ ನಾಲ್ಕುಬಗೆಯ ಪ್ರತಿಮೆಗಳಲ್ಲಿ, ತಿಳಿದುಪೂಜಿಸೆ=ಪೂಜೆಯನ್ನು ಮಾಡಲು, ವಿಗತ=ವಿ=ಪಕ್ಷಿಯಾದ ಗರುಡನ ಮೇಲೆಗತ=ಕೂತು ಸಂಚರಿಸುತ್ತಿರುವ ಪಕ್ಷಿವಾಹನನಾದ ಶ್ರೀಹರಿಯು ಸಂಸಾರಾಬ್ಧಿದಾಟಿಸಿ=ಸಂಸಾರ ಸಮುದ್ರದಿಂದ ಪಾರಗಾಣಿಸಿಮುಕ್ತರನ= ಮುಕ್ತರನ್ನಾಗಿಮಾಳ್ಪ=ಮಾಡುವನು ॥ ೩೧ ॥

ತಾತ್ಪರ್ಯ :—ಮೇರುಮಂದರಾದಿ ಪರ್ವತಾಭಿಮಾನಿಗಳೇ ಶಾಲಿಗ್ರಾಮ ಮೊದಲಾದವುಗಳಿಗೆ ಅಭಿಮಾನಿಗಳಾಗಿ ಒಳಗಿದ್ದು ಅಲ್ಲಿ ಅಂತರ್ಯಾಮಿಯಾಗಿರುವ ವಾಸುದೇವಮೂರ್ತಿಯನ್ನು ಸೇವಿಸುತ್ತ ಇರುವರು. ಸಕಲ

ಸ್ಥಳಗಳಲ್ಲಿ ವ್ಯಾಪ್ತವಾದ ಭಗವದ್ರೂಪಗಳಲ್ಲಿ ಪರಸ್ಪರ ಭೇದವಿಲ್ಲದಿರುವದರಿಂದ ಸ್ವಗತಭೇದ ವಿವರ್ಜಿತನೆಂದು ಹೆಸರು. ಇಂತಹ ಶ್ರೀಪರಮಾತ್ಮನೆ ಚಲಾಚಲಗಳೆಂಬ ಎರಡು ಪ್ರತಿಮೆಗಳಲ್ಲಿ ಒಂದೊಂದರಲ್ಲಿ ಎರಡು ಪ್ರಕಾರದಂತೆ ನಾಲ್ಕು ವಿಧಗಳುಂಟೆಂದು ಮೇಲೆ ಹೇಳಿದರು. ಅಂತಹ ಸ್ತ್ರೀಪುರುಷ ಆಹಿತ, ಸಹಜಾಚಲ ಎಂಬ ನಾಲ್ಕುಬಗೆಯ ಪ್ರತಿಮೆಗಳಲ್ಲಿ ಮೇಲೆ ವಿವರಿಸಿದಂತೆ ಭಗವದ್ರೂಪಗಳನ್ನು ತಿಳಿದು ಪೂಜಿಸಲು ಪಕ್ಷಿವಾಹನನಾದ ಸ್ವಾಮಿಯು ಭಕ್ತರನ್ನು ಸಂಸಾರ ಸಮುದ್ರದಿಂದ ದಾಟಿಸಿ ಅವರಿಗೆ ಮುಕ್ತಿಯನ್ನು ಕೊಡುವನು.

ಸಂಧಿಯನ್ನು ಮುಗಿಸುತ್ತ ಅದರಲ್ಲಿ ಹೇಳಿರುವ ಅಭಿಪ್ರಾಯವನ್ನು ಸಂಗ್ರಹಿಸಿ ನಿರೂಪಿಸುತ್ತಾರೆ.

**ಆವಕ್ಷೇತ್ರಕೆ ಪೋದರೇನಿ**
**ನ್ನಾವ ತೀರ್ಥದಿ ಮುಳುಗಳೇನಿ**
**ನ್ನಾವ ಜಪತಪಹೋಮದಾನವ ಮಾಡಿ ಫಲವೇನು ||**
**ಶ್ರೀವರ ಜಗನ್ನಾಥ ವಿಠ್ಠಲನ**
**ಈ ವಿಧದಿ ಜಂಗಮಸ್ಥಾವರ**
**ಜೀವರೊಳು ಪರಿಪೂರ್ಣನೆಂದರಿಯದಿಹ ಮಾನವರು ||೩೨||**

ಪದ್ಯಾರ್ಥ :—ಶ್ರೀವರ=ಶ್ರೀ ಲಕ್ಷ್ಮೀದೇವಿಗೆ ಶ್ರೇಷ್ಟನಾದ ಜಗನ್ನಾಥ ವಿಠ್ಠಲನ=ಜಗನ್ನಾಥ ವಿಠ್ಠಲಾಂಕಿತನಾದ ಶ್ರೀ ಹರಿಯನ್ನು, ಈ ವಿಧದಿ=ಈ ಮೇಲಿನ ಪದ್ಯಗಳಲ್ಲಿ ಹೇಳಿದ ರೀತಿಯಾಗಿ ಜಂಗಮಸ್ಥಾವರ ಜೀವರೊಳು=ಚಲಾಚಲ ರೂಪವಾದ ಮನುಷ್ಯ, ಪಶು, ಪರ್ವತ ವೃಕ್ಷಾದಿ ಸರ್ವತ್ರದಲ್ಲಿಯೂ, ಪರಿಪೂರ್ಣನೆಂದರಿಯದಿಹ=ತುಂಬಿರುವನೆಂದು ತಿಳಿಯದಿರುವ, ಮಾನವರು=ಮನುಷ್ಯರು, ಯಾವ ಕ್ಷೇತ್ರಕ್ಕೆ ಪೋದರೇನು, ಇನ್ನಾವತೀರ್ಥದಿ ಮುಣುಗಲೇನು=ಮತ್ತೆ ಯಾವ ಪುಣ್ಯ ತೀರ್ಥಗಳಲ್ಲಿ ಸ್ನಾನ ಮಾಡಿದರೇನು, ಇನ್ನಾವ ಜಪತಪ ಹೋಮದಾನವ ಮಾಡಿದರೇನು.

ತಾತ್ಪರ್ಯ :—ಈ ಸಂಧಿಯಲ್ಲಿ ವಿವರಿಸಿದಂತೆ ಜಡವಾದ ಉದಕ ವೃಕ್ಷಗಳು ಪರ್ವತ ಮೊದಲಾದವುಗಳಲ್ಲಿಯೂ, ಪಂಚ ಲೋಹಗಳಲ್ಲಿಯೂ ಶಿಲೆಗಳಿಂದ ಮಾಡಲ್ಪಟ್ಟ ಪ್ರತಿಮಾದಿಗಳು ಶಾಲಿಗ್ರಾಮ ಮೊದಲಾದವು

ಗಳಲ್ಲಿಯೂ, ಮನುಷ್ಯರು ಪಶು ಮೊದಲಾದವುಗಳಲ್ಲಿ ಸ್ತ್ರೀ ಪುರುಷರುಗಳಲ್ಲಿ ಸಹ ಭಗವದ್ರೂಪಗಳನ್ನು ಅಭೇದದಿಂದ ಚಿಂತಿಸುವವರು ಎಲ್ಲಿ ಹೋದರೂ ಎಲ್ಲಿ ಸ್ನಾನ ಮಾಡಿದರೂ ತೀರ್ಥಕ್ಷೇತ್ರ ಯಾತ್ರಾದಿ ಫಲಗಳು ಬರುವವು. ಇದನ್ನು ತಿಳಿಯದೆ ಪರಮಾತ್ಮನು ತಿರುಪತಿಯಲ್ಲಿಯೇ ಇರುವನು. ತೀರ್ಥ ವೆಂದರೆ ಗಂಗಾದಿಗಳೇ ಎಂದು ಭಾವಿಸಿ ಕೆಲವು ಸ್ಥಳಗಳಲ್ಲಿ ಭಗವಂತನಿರು ವನೆಂತಲೂ ಕೆಲವು ಕಡೆಗಳಲ್ಲಿ ಇಲ್ಲವೆಂತಲೂ ನಂಬಿರುವ ಮನುಷ್ಯರು ಯಾವ ಕ್ಷೇತ್ರಗಳಿಗೆ ಹೋದರೇನು, ಯಾವ ತೀರ್ಥಗಳಲ್ಲಿ ಸ್ನಾನಮಾಡಿದರೂ ಜಪ, ತಪಸ್ಸು, ಹೋಮದಾನ ಮೊದಲಾದ ಏನೇನು ಪುಣ್ಯ ಕರ್ಮಗಳನ್ನು ಮಾಡಿ ದರೂ ನಿಷ್ಫಲವೆಂದು ಭಾವಿಸಬೇಕು.

ಹನ್ನೊಂದನೆಯ ಸಂಧಿಯ ಟಿಪ್ಪಣವು ಮುಗಿದುದು

——— o ———

# ಹನ್ನೆರಡನೆಯ ಸಂಧಿ

## ನಾಡೀಪ್ರಕರಣ ಸಂಧಿ

ಈ ಸಂಧಿಯಲ್ಲಿ ನಮ್ಮ ದೇಹಗತವಾದ ನಾಡಿಗಳು ಎಷ್ಟು, ಯಾವ ಯಾವ ಅಂಗಗಳಲ್ಲಿ ಎಷ್ಟೆಷ್ಟು ನಾಡಿಗಳಿರುವವು, ಅಲ್ಲಿನ ಭಗವದ್ರೂಪಗಳು ಎಷ್ಟು ಎಂಬಿವೇ ಮೊದಲಾದ ಅಂಶಗಳನ್ನು ಹೇಳುತ್ತಾರೆ. ಅದರಲ್ಲಿ ಪ್ರಥಮ ಪದ್ಯದಿಂದ ಸಂಧಿಯ ಅಭಿಪ್ರಾಯವನ್ನು ಸೂಚಿಸುವರು.

**ವಾಸುದೇವನು ಪ್ರಾಣಮುಖ ತ**
**ತ್ವೇಶರಿಂದಲಿ ಸೇವೆಕೈಕೊಳು**
**ತೀ ಶರೀರದೊಳಿಪ್ಪ ಮೂವತ್ತಾರುಸಾಹಸ್ರ ॥**
**ಈ ಸುನಾಡಿಗಳೊಳಗೆ ಶ್ರೀಭೂ**
**ಮಿಾಸಮೇತ ವಿಹಾರಗೈವ ಪ**
**ರೇಶನಮಲಸುವ ರ್ಮೂತಿಗಳ ಚಿಂತಿಸುತ ಹಿಗ್ಗುತಿರು ॥ ೧ ||**

ಪದ್ಯಾರ್ಥ :—ವಾಸುದೇವನು=ಸರ್ವತ್ರ ವಾಸವಾಗಿರುವ ಶ್ರೀ ಪರಮಾತ್ಮನು, ಪ್ರಾಣಮುಖತತ್ವೇಶರಿಂದಲಿ=ಚಿತ್ತಾದ್ಯಭಿಮಾನಿಗಳಾದ ವಾಯು ದೇವರು ಮೊದಲಾದ ತತ್ವಾಭಿಮಾನಿ ದೇವತೆಗಳಿಂದ, ಸೇವೆ ಕೈಕೊಳುತ= ಸೇವೆಯನ್ನು ಸ್ವೀಕರಿಸುತ್ತ, ಈ ಶರೀರದೊಳಿಪ್ಪ=ಈ ದೇಹದೊಳಗಿರುವ, ಮೂವತ್ತಾರುಸಾಹಸ್ರ, ಈ ಸುನಾಡಿಗಳೊಳಗೆ=ಮೂವತ್ತಾರು ಸಹಸ್ರ ಸಂಖ್ಯಾವುಳ್ಳ ಇಷ್ಟು ನಾಡಿಗಳಲ್ಲಿ ಶ್ರೀ ಭೂಮಿಾಸಮೇತ=ಶ್ರೀದೇವಿ ಭೂದೇವಿ ಸಮೇತ, ವಿಹಾರಗೈವ=ವಿಹರಿಸುತ್ತಿರುವ, ಪರೇಶನ=ಇಂತಹ ಪರಮಾತ್ಮನ ಅಮಲ ಸುಮೂರ್ತಿಗಳ=ನಿರ್ದೋಷವಾದ ಉತ್ತಮ ಮೂರ್ತಿಗಳನ್ನು, ಚಿಂತಿಸುತ ಹಿಗ್ಗುತಿರು.

ತಾತ್ಪರ್ಯ :—ಶ್ರೀ ಪರಮಾತ್ಮನು ಈ ದೇಹದೊಳಗಿರುವ ತತ್ವಾಭಿಮಾನಿ ದೇವತೆಗಳಿಂದ ಸೇವೆಯನ್ನು ಸ್ವೀಕರಿಸುತ್ತ ಈ ದೇಹದಲ್ಲಿರುವ ಪುರುಷ ನಾಡಿಗಳಾದ ೩೬೦೦೦ ನಾಡಿಗಳಲ್ಲಿ ಅಷ್ಟುರೂಪಗಳಿಂದ ಶ್ರೀ ಭೂ-ದೇವೇರ ಸಮೇತನಾಗಿ ವಿಹರಿಸುತ್ತಿರುವನು. ಇಂತಹ ೩೬೦೦೦ ರೂಪಗಳನ್ನು ನಾಡಿಗಳಲ್ಲಿ ಚಿಂತಿಸುತ್ತ ಸಂತೋಷದಿಂದಿರಬೇಕು.

ಮೇಲೆ ಹೇಳಿದ ೩೬೦೦೦ ನಾಡಿಗಳಲ್ಲಿ ಯಾವ ಯಾವ ಅಂಗಗಳೊಳಗೆ ಎಷ್ಟೆಷ್ಟು ನಾಡಿಗಳಿರುವವೆಂದು ಹೇಳುತ್ತಾರೆ.

**ಚರಣಗಳೊಳಿಹ ನಾಡಿಗಳು ಹ**
**ನ್ನೆರಡುಸಾವಿರ ಮಧ್ಯದೇಹದೊ**
**ಳಿರುತಿಹವು ಹದಿನಾಲ್ಕು ಬಾಹುಗಳೊಳಗೆ ಈರೆರಡು ||**
**ಶಿರದೊಳಾರುಸಾಹಸ್ರ ಚಿಂತಿಸಿ**
**ಇರಳುಹಗಲಭಿಮಾನಿ ದಿವಿಜರ**
**ನರಿತು ಪಾಸನೆಗೈವರಿಳೆಯೊಳು ಸ್ವರ್ಗವಾಸಿಗಳು || ೨ ||**

ಪದ್ಯಾರ್ಥ :—ಚರಣಗಳೊಳು=ಪಾದಗಳಲ್ಲಿ ಇಹ=ಇರುವ, ನಾಡಿಗಳು ೧೨೦೦೦, ಮಧ್ಯದೇಹದೊಳು=ಶರೀರ ಮಧ್ಯಭಾಗದಲ್ಲಿ ೧೪೦೦೦ ನಾಡಿಗಳಿರುವವು, ಬಾಹುಗಳೊಳಗೆ=ಕೈಗಳಲ್ಲಿ ಈರೆರಡು=೪೦೦೦, ಶಿರದೊಳು=ತಲೆಯಲ್ಲಿ ೬೦೦೦, ಈ ಪ್ರಕಾರ ೩೬೦೦೦ ನಾಡಿಗಳನ್ನು ಚಿಂತಿಸಿ ಇರಳು ಹಗಲಭಿಮಾನಿ ದಿವಿಜರ=ವರ್ಷವಂದಕ್ಕೆ ೩೬೦ ಹಗಲು, ೩೬೦ ರಾತ್ರಿಗಳಂತೆ ೧೦೦ ವರ್ಷಗಳಿಗೆ ೩೬೦೦೦ ಹಗಲು, ೩೬೦೦೦ ರಾತ್ರಿ ನಾಡಿಗಳಲ್ಲಿ ತಿಳಿದು ಉಪಾಸನೆ ಗೈವರು=ಉಪಾಸನೆ ಮಾಡುವವರು ಇಳೆಯೊಳು, ಸ್ವರ್ಗವಾಸಿಗಳು=ದೇವತೆಗಳೆನಿಸುವರು.

ತಾತ್ಪರ್ಯ :—ಮೇಲಿನ ಪದ್ಯದಲ್ಲಿ ಹೇಳಿದ ೩೬೦೦೦ ನಾಡಿಗಳ ಪೈಕಿ ೧೨೦೦೦ ಪಾದಗಳಲ್ಲಿಯೂ, ೧೪೦೦೦ ಮಧ್ಯಶರೀರದಲ್ಲಿಯೂ, ೪೦೦೦ ಬಾಹುಗಳಲ್ಲಿಯೂ, ತಲೆಯಲ್ಲಿ ೬೦೦೦ ಅಂತು ೩೬೦೦೦ ನಾಡಿಗಳು ಶರೀರದಬಲ ಭಾಗದಲ್ಲಿರುವವು. ಅದರಂತೆ ೩೬೦೦೦ ನಾಡಿಗಳು ಎಡಭಾಗದಲ್ಲಿರುವವು. ಇವುಗಳಲ್ಲಿ ೧೦೦ ವರ್ಷಗಳಿಗಾಗುವ ೩೬೦೦೦ ಹಗಲು, ೩೬೦೦೦ ರಾತ್ರಿ. ಇವುಗಳಿಗಭಿಮಾನಿದೇವತೆಗಳೇ ಈ ದೇಹದೊಳಗೆ ಎಡಬಲ ನಾಡಿಗಳು ೭೨೦೦೦ ದಲ್ಲಿ ಇರುವರೆಂದು ಚಿಂತಿಸಿ ಉಪಾಸನೆ ಮಾಡುವವರು ಭೂಮಿಯಲ್ಲಿದ್ದರೂ ಅವರನ್ನು ದೇವತೆಗಳೆಂದು ಹೇಳಬೇಕು. ಅಂದರೆ ದೇವತೆಗಳು ಹೇಗೆ ಮಾನ್ಯರೊ ಹಾಗೆ ಇವರೂ ಮಾನ್ಯರು.

ಈ ೭೨೦೦೦ ನಾಡಿಗಳಲ್ಲಿಯೂ ಪರಮಾತ್ಮನನ್ನು ಯಾವರೀತಿಯಲ್ಲಿ ಚಿಂತಿಸಬೇಕೆಂದು ಹೇಳುತ್ತಾರೆ.

**ಬೃಹತಿನಾಮಕ ವಾಸುದೇವನು**
**ವಹಿಸಿ ಸ್ತ್ರೀಪುರುಷದೋಷವಿ**
**ರಹಿತ ಎಪ್ಪತ್ತೆರಡುಸಾವಿರ ನಾಡಿಗಳೊಳಿದ್ದು ||**
**ದ್ರುಹಿಣಮೊದಲಾದಮರಗಣ ಸ**
**ನ್ಮಹಿತಸರ್ವಪ್ರಾಣಿಗಳ ಮಹಾ**
**ಮಹಿಮ ಸಂತೈಸುವನು ಸಂತತ ಪರಮಕರುಣಾಳು || ೩ ||**

ಪದ್ಯಾರ್ಥ :-ಬೃಹತಿನಾಮಕ=ಬೃಹತೀಛಂದಸ್ಸಿನ ಪ್ರತಿಪಾದ್ಯನಾದ ಬೃಹತೀನಾಮಕನಾದ ವಾಸುದೇವನು, ಸ್ತ್ರೀಪುರುಷ=೭೨೦೦೦ ಸ್ತ್ರೀಪುರುಷ ರೂಪಗಳನ್ನು (೩೬೦೦೦ ಪುರುಷರೂಪ ೩೬೦೦೦ ಸ್ತ್ರೀರೂಪಗಳನ್ನು), ವಹಿಸಿ= ಧರಿಸಿ, ದೋಷವಿರಹಿತ=ಸದಾ ದೋಷದೂರನಾಗಿರುವ ಶ್ರೀ ಹರಿಯು, ೭೨೦೦೦ ನಾಡಿಗಳೊಳಿದ್ದು, ದ್ರುಹಿಣಮೊದಲಾದಮರಗಣ=ಬ್ರಹ್ಮದೇವರು ಮೊದಲಾದ ದೇವತಾಸಮೂಹದಿಂದ, ಸನ್ಮಹಿತ=ಚನ್ನಾಗಿ ಪೂಜಿತನಾಗಿ ರುವ, ಮಹಾಮಹಿಮ=ಬಹಳ ಮಹಿಮೆಯುಳ್ಳ ಶ್ರೀ ಪರಮಾತ್ಮನು, ಸರ್ವ ಪ್ರಾಣಿಗಳನ್ನು, ಸಂತತ = ಸರ್ವಕಾಲದಲ್ಲಿಯೂ, ಪರಮ ಕರುಣಾಳು= ದಯಾಳುವಾದ ಸ್ವಾಮಿಯು, ಸಂತೈಸುವನು = ರಕ್ಷಿಸುತ್ತ ಸಮಾಧಾನ ಪಡಿಸುವನು || ೩ ||

ತಾತ್ಪರ್ಯ :—ಈ ದೇಹದಲ್ಲಿ ಮೇಲೆಹೇಳಿದ ರೀತಿಯಾಗಿ ೭೨೦೦೦ ನಾಡಿಗಳಿರುವವು. ಆ ನಾಡಿಗಳಲ್ಲಿ ೩೬೦೦೦ ಪುರುಷರಎಡಭಾಗದಲ್ಲಿ ಸ್ತ್ರೀನಾಡಿಗ ಳೆಂತಲೂ, ೩೬೦೦೦ ಬಲಭಾಗದಲ್ಲಿ ಪುರುಷನಾಡಿಗಳೆಂತಲೂ ಎರಡುಭಾಗಗಳಾ ಗಿರುವವು. ಬೃಹತೀಛಂದಸ್ಸಿನ ಪ್ರತಿಪಾದ್ಯನಾದುದರಿಂದಲೂ 'ಬೃಹಪೂರ್ಣ' ಎಂಬ ಧಾತುವಿನಿಂದ ಪೂರ್ಣನಾದುದರಿಂದಲೂ ಬೃಹತೀ ಎಂಬ ಹೆಸರುಳ್ಳ ಶ್ರೀ ಪರಮಾತ್ಮನು ೩೬೦೦೦ ಸ್ತ್ರೀರೂಪಗಳನ್ನೂ ೩೬೦೦೦ ಪುರುಷರೂಪ ಗಳನ್ನೂ ವಹಿಸಿ ಮೇಲೆಹೇಳಿದ ಸ್ತ್ರೀಪುರುಷ ನಾಡಿಗಳಲ್ಲಿ ಇದ್ದು ತತ್ವೇಶರಾದ ಬ್ರಹ್ಮಾದಿದೇವತೆಗಳಿಂದ ಪೂಜ್ಯನಾಗಿ ಪರಮಕರುಣದಿಂದ ಮಹಾಮಹಿಮೆ ಯುಳ್ಳವನಾಗಿ ನಿತ್ಯವೂ ಸಂರಕ್ಷಿಸುವನು.

ಮೇಲಿನ ಪದ್ಯದಲ್ಲಿ ಹೇಳಿದಂತೆ ನಾಡಿಗಳಲ್ಲಿ ಭಗವಂತನನ್ನು ತಿಳಿದು ಪೂಜಿಸಿದ ಫಲವನ್ನು ಹೇಳುತ್ತಾರೆ.

**ನೂರುವರ್ಷಕೆದಿವಸ ಮೂವ**
**ತ್ತಾರುಸಾವಿರ ವಹವುನಾಡಿ ಶ**
**ರೀರದೊಳಗ ನಿತಿಹವುಯೆಂದರಿತೊಂದು ದಿವಸದಲಿ ॥**
**ಸೂರಿಗಳ ಸತ್ಕರಿಸಿದವ ಪ್ರತಿ**
**ವಾರದಲಿ ದಂಪತಿಗಳರ್ಚನೆ**
**ತಾರಚಿಸಿದವ ಸತ್ಯಸಂಶಯವಿಲ್ಲ ವೆಂದೆಂದು ॥ ೪ ॥**

ಪದ್ಯಾರ್ಥ :—ನೂರುವರ್ಷಕ್ಕೆ, ದಿವಸ=ದಿನಗಳು, ಮೂವತ್ತಾರು ಸಾವಿರವು, ಅಹವು=ಆಗುವವು, ಇನಿತು=ಇಷ್ಟು ಸಂಖ್ಯಾಉಳ್ಳ, ನಾಡಿ= ನಾಡಿಗಳು, ಶರೀರದೊಳು, ಇಹವು=ಇರುವವು, ಯೆಂದರಿತು=ಹೀಗೆ ತಿಳಿದು, ಒಂದು ದಿನಸದಲಿ, ಸೂರಿಗಳ = ಜ್ಞಾನಿಗಳನ್ನು, ಸತ್ಕರಿಸಿದವ = ಪೂಜಿಸಿ ದವನು. ಪ್ರತಿವಾರದಲಿ=೧೦೦ ವರ್ಷದವರೆಗೂ ಪ್ರತಿದಿವಸದಲ್ಲಿಯೂ, ದಂಪತಿಗಳರ್ಚನೆ=ದಂಪತಿ ಪೂಜೆಯನ್ನು, ತಾ=ತಾನು, ರಚಿಸಿದವ=ಮಾ ಡಿದ ಫಲವನ್ನು ಹೊಂದುವವನು ಆಗುವನು. ಸತ್ಯ=ಇದು ಸತ್ಯವು. ಎಂ ದೆಂದೂ ಸಂಶಯವಿಲ್ಲ.

ತಾತ್ಪರ್ಯ :— ಮನುಷ್ಯಮಾನದಿಂದ ಮನುಷ್ಯರಿಗೆ ೧೦೦ ವರ್ಷ ಗಳು ಆಯುಷ್ಯವು. ಈ ನೂರು ವರ್ಷಗಳಿಗೆ ೩೬ ಸಹಸ್ರ ದಿವಸಗಳು ಅಂದರೆ ಹಗಲು ೩೬ ಸಹಸ್ರ ರಾತ್ರಿ ೩೬ ಸಹಸ್ರವೆಂದರ್ಥ. ದಿವಸವೆಂದರೆ ಹಗಲೂ ರಾತ್ರಿಯೂ ಸೇರಿದುದಕ್ಕೆ ಹೆಸರು. ೩೬ ಸಹಸ್ರ ದಿವಸವೆಂದು ಹೇಳಿದುದರಿಂದ ರಾತ್ರಿ ಹಗಲು ಸೇರಿ ಒಂದು ಸಂಖ್ಯಾವನ್ನು ಇಲ್ಲಿ ಹೇಳಿ ದರು. ಮೇಲಿನ ಪದ್ಯದಲ್ಲಿ ರಾತ್ರಿ ಹಗಲು ಬೇರೆ ಬೇರೆ ಹೇಳಿದ್ದರಿಂದ ೭೨ ಸಹಸ್ರವೆಂದು ಹೇಳಿದರು. ಬೃಹತೀ ಛಾಂದಸ್ಸಿಗೆ ಅಕ್ಷರಗಳು ೩೬ ಬೃಹತೀ ಸಹಸ್ರಗಳಾದವು. ಅವುಗಳಿಗೆ ಪ್ರತಿಪಾದ್ಯನೇ, ೩೬ ಸಹಸ್ರ ದಿವಸಗಳಿಗೆ ಪ್ರತಿಪಾದ್ಯನು. ಅಂತಹಾ ಸ್ವಾಮಿಯೇ ಹಗಲು ೩೬ ಸಹಸ್ರ, ರಾತ್ರಿ ೩೬ ಸಹಸ್ರ ಸಂಖ್ಯಾವುಳ್ಳ ಸ್ತ್ರೀ ಪುರುಷ ನಾಡಿಗಳಲ್ಲಿರುವನೆಂದು ಭಾವಿಸಿ ಒಂದು ದಿವಸದಲ್ಲಿ ಜ್ಞಾನಿಗಳನ್ನು ಕರೆದು ಪೂಜಿಸಿದರೆ ೧೦೦ ವರ್ಷಗಳು ಹಗಲು ರಾತ್ರಿ ಪೂಜಿಸಿದರೆ ಯಾವ ಫಲವೋ ಆ ಫಲವು ಪ್ರಾಪ್ತವಾಗುವದು. ಈ ವಿಷಯದಲ್ಲಿ ಸಂಶಯಪಡಬೇಕಾದುದು ಇಲ್ಲ

ಅವತಾರಿಕೆ :— ೭೨ ಸಹಸ್ರ ನಾಡಿಗಳ ಪೈಕಿ ಒಂದೊಂದು ನಾಡಿ

ಯಲ್ಲಿಯೂ ೨೪ ತತ್ವೇಶರಿದ್ದು ಶ್ರೀ ಹರಿಯನ್ನು ಧ್ಯಾನಿಸುತ್ತಿರುವರೆಂದು ಹೇಳುತ್ತಾರೆ.

**ಚತುರವಿಂಶತಿ ತತ್ವಗಳು ತ**
**ತ್ಪತಿಗಳೆನಿಸುವ ಬ್ರಹ್ಮಮುಖದೇ**
**ವತೆಗಳನುದಿನ ಪ್ರತಿ ಪ್ರತಿ ನಾಡಿಗಳೊಳಿರುತಿದ್ದು ॥**
**ಚತುರದಶ ಲೋಕದೊಳು ಜೀವ**
**ಪ್ರತತಿಗಳ ಸಂರಕ್ಷಿಸುವ ಶಾ**
**ಶ್ವತನ ತತ್ತಸ್ಥಾನದಲಿ ನೋಡುತಲಿ ಮೋದಿಪರು ॥ ೫ ॥**

ಪದ್ಯಾರ್ಥ :—ಚತುರವಿಂಶತಿ ತತ್ವಗಳು=೨೪ ತತ್ವಗಳು, ತತ್ಪತಿಗಳೆನಿಸುವ=ಆ ತತ್ವಗಳಿಗೆ ಅಭಿಮಾನಿಗಳೆನಿಸುವ, ಬ್ರಹ್ಮಮುಖ ದೇವತೆಗಳು=ಬ್ರಹ್ಮದೇವರು ಮೊದಲಾದದೇವತೆಗಳು, ಅನುದಿನ=ಪ್ರತಿದಿವಸದಲ್ಲಿಯೂ, ಪ್ರತಿಪ್ರತಿ ನಾಡಿಗಳೊಳಿರುತಿದ್ದು=ಪ್ರತಿಯೊಂದು ನಾಡಿಯಲ್ಲಿಯೂ ಇರುತ್ತ, ಚತುರ ದಶಲೋಕದೊಳು=೧೪ ಲೋಕದೊಳಗಿನ, ಜೀವಪ್ರತತಿಗಳ=ಜೀವ ಸಂಘಗಳನ್ನು, ಸಂರಕ್ಷಿಸುವ, ಶಾಶ್ವತನ=ಯಾವಾಗಲೂ ಒಂದೇರೀತಿಯಾಗಿರುವಶ್ರೀ ಪರಮಾತ್ಮನನ್ನು, ತತ್ತಸ್ಥಾನದಲಿ=ಆಯಾ ನಾಡಿಗಳಲ್ಲಿ, ನೋಡುತಲಿ, ಮೋದಿಪರು=ಸಂತೋಷಪಡುತ್ತಿರುವರು.

ತಾತ್ಪರ್ಯ :— ೨೪ ತತ್ವಗಳು, ತತ್ವಾಭಿಮಾನಿಗಳಾದ ಬ್ರಹ್ಮಾದಿ ದೇವತೆಗಳು ಈ ದೇಹದೊಳಗಿರುವ ೭೨ ಸಹಸ್ರ ನಾಡಿಗಳ ಪ್ರತಿಯೊಂದು ನಾಡಿಯಲ್ಲಿಯೂ ವಾಸವಾಗಿದ್ದು ಆ ನಾಡಿಗಳಲ್ಲಿರುವ ಶ್ರೀ ಭಗವದ್ರೂಪಗಳನ್ನು ನೋಡುತ್ತಾ ಸಂತೋಷಪಡುತ್ತಿರುವರು.

ಅವತಾರಿಕೆ :—ಆ ನಾಡಿಗಳಲ್ಲಿಯೂ ತತ್ವೇಶರಲ್ಲಿಯೂ ಸಹ ಇರುವ ಒಟ್ಟು ಭಗವದ್ರೂಪಗಳನ್ನು ಹೇಳುತ್ತಾರೆ :—

**ಸತ್ಯಸಂಕಲ್ಪನು ಸದಾ ಎಂ**
**ಪ್ಪತ್ತೆರಡು ಸಾಹಸ್ರದೊಳು ಮೂ**
**ವತ್ತುನಾಲಕುಲಕ್ಷದೈವತ್ತಾರು ಸಾಹಸ್ರ ॥**
**ಚಿತ್ರಕೃತಿ ಒಡಗೂಡಿ ಪರಮ ಸು**
**ನಿತ್ಯ ಮಂಗಳಮೂರ್ತಿ ಭಕ್ತರ**
**ಕೆತ್ತಿಗನು ತಾನಾಗಿ ಸರ್ವತ್ರದಲಿ ಸಂತೈಸ ॥ ೬ ॥**

ಪದ್ಯಾರ್ಥ :—ಸತ್ಯಸಂಕಲ್ಪನು, ಶ್ರೀ ಪರಮಾತ್ಮನು ಸದಾ, ಎಪ್ಪತ್ತೆರಡು ಸಾಹಸ್ರದೊಳು=೭೨ ಸಹಸ್ರನಾಡಿಗಳಲ್ಲಿ, ಮೂವತ್ತುನಾಲಕುಲಕ್ಷ ದೈವತ್ತಾರು ಸಾಹಸ್ರ=೩೪೫೬೦೦೦ ಸಂಖ್ಯಾಕವಾದ ರೂಪಗಳುಳ್ಳವನಾಗಿ, ಚಿತ್ಪ್ರಕೃತಿ ಒಡಗೂಡಿ=ಚೇತನ ಪ್ರಕೃತಿಯಾದ ಲಕ್ಷ್ಮೀದೇವಿಯರಿಂದೊಡಗೂಡಿ, ಪರಮ=ಸರ್ವೋತ್ತಮನಾದ, ಸುನಿತ್ಯ ಮಂಗಳಮೂರ್ತಿ=ನಿತ್ಯ ಮಂಗಳ ವಿಗ್ರಹನಾದ ಶ್ರೀ ಹರಿಯು, ಭಕ್ತರ, ತೆತ್ತಿಗನು=ಯೋಗಕ್ಷೇಮಗಳನ್ನು ವಹಿಸಿರುವವನು, ತಾನಾಗಿ, ಸರ್ವತ್ರದಲ್ಲಿ, ಸಂತೈಪ=ಸಂತೋಷಪಡಿಸುವನು.

ತಾತ್ಪರ್ಯ :—ಸರ್ವೋತ್ತಮನೂ, ನಿತ್ಯ ಮಂಗಳ ವಿಗ್ರಹನೂ, ಸತ್ಯ ಸಂಕಲ್ಪನೂ ಆದ ಶ್ರೀ ಹರಿಯು ೭೨ ಸಹಸ್ರ ನಾಡಿಗಳ ಪ್ರತಿಯೊಂದರಲ್ಲಿಯೂ, ತತ್ವಗಳು ೨೪ ತತ್ವಾಭಿಮಾನಿಗಳು ೨೪ ಹೀಗೆ ೪೮ ರೂಪಗಳಂತೆ ೭೨೦೦೦ × ೪೮=೩೪೫೬೦೦೦ ಸಂಖ್ಯಾಗಳು ಆಗುವವು. ಇಷ್ಟು ರೂಪಗಳಿಂದ ಈ ದೇಹನಾಡಿಗಳಲ್ಲಿ ಲಕ್ಷ್ಮೀಸಮೇತನಾಗಿದ್ದು ಭಕ್ತರ ಯೋಗಕ್ಷೇಮಗಳನ್ನು ತಾನೇ ವಹಿಸಿ ಪ್ರತಿ ನಿತ್ಯದಲ್ಲಿಯೂ ಸರ್ವತ್ರದಲ್ಲಿಯೂ ಅವರನ್ನು ರಕ್ಷಿಸುವನು.

ಅವತಾರಿಕೆ:—ಮೇಲಿನ ವಿಷಯವನ್ನೇ ಕ್ರೋಡೀಕರಿಸಿ ಹೇಳುತ್ತಾರೆ.

**ಮಣಿಗಳೊಳಗಿಹ ಸೂತ್ರದಂದದಿ**
**ಪ್ರಣವಪಾದ್ಯನು ಸರ್ವಚೇತನ**
**ಗಣದೊಳಿದ್ದನವರತ ಸಂತೈಸುವನು ತನ್ನವರ ||**
**ಪ್ರಣತಕಾಮದ ಭಕ್ತಚಿಂತಾ**
**ಮಣಿ ಚಿದಾನಂದೈಕದೇಹನು**
**ಅಣುಮಹದ್ಗತನಲ್ಪರೋಪಾದಿಯಲಿ ನೆಲೆಸಿಪ್ಪ || ೭ ||**

ಪದ್ಯಾರ್ಥ :—ಮಣಿಗಳೊಳು=ಹಾರವನ್ನಾಗಿ ಪೋಣಿಸಿರುವ ಮಣಿಗಳ ಮಧ್ಯದಲ್ಲಿ, ಇಹ=ಇರುವ, ಸೂತ್ರದಂದದಿ=ಧಾರದಂತೆ, ಪ್ರಣವಪಾದ್ಯನು = ಓಂಕಾರ ಪ್ರತಿಪಾದ್ಯನು, ಸರ್ವಚೇತನಗಣದೊಳಿದ್ದು, ಅನವರತ=ಸರ್ವಕಾಲದಲ್ಲಿಯೂ, ತನ್ನವರ=ತನ್ನ ಭಕ್ತರನ್ನು, ಸಂತೈಸುವನು. ಪ್ರಣತಕಾಮದ=ನಮಸ್ಕಾರ ಮಾಡುವವರ ಮನೋಭೀಷ್ಟವನ್ನು ಪೂರೈಸುವ, ಭಕ್ತಚಿಂತಾಮಣಿ = ಭಕ್ತರಿಗೆ ಚಿಂತಾಮಣಿಯಂತಿರುವ, ಚಿದಾನಂದೈಕ

ದೇಹನು=ಸ್ಥಿರವಾದ ಆನಂದವೇ ದೇಹವಾಗುಳ್ಳ, ಶ್ರೀ ಹರಿಯು, ಅಣು ಮಹದ್ಗತನು = ಸೂಕ್ಷ್ಮಸ್ಥೂಲಶರೀರಗಳಲ್ಲಿ ಇರುತ್ತಾ, ಅಲ್ಪರೋಪಾದಿ ಯಲಿ = ಕೇವಲ ಅಲ್ಪಶಕ್ತಿಯುಳ್ಳವರಂತೆ, ನೆಲೆಸಿಪ್ಪ = ತೋರಿಸಿಕೊಳ್ಳುತ್ತಿರುವನು || ೭ ||

ತಾತ್ಪರ್ಯ :—ಶ್ರೀ ಪರಮಾತ್ಮನು ತನ್ನನ್ನು ಪೂಜಿಸುವವರ ಮನೋಭೀಷ್ಟವನ್ನು ಪೂರೈಸುವುದರಿಂದ ಪ್ರಣತಕಾಮದನೆಂದು ಹೆಸರು. ಚಿಂತಾಮಣಿಯೆಂದರೆ ಚಿಂತಿಸಿದುದನ್ನು ಕೊಡುವ ಒಂದು ಮಣಿ ವಿಶೇಷವು. ಭಕ್ತರ ವಿಷಯದಲ್ಲಿ ಪರಮಾತ್ಮ ಅದರಂತೆ ಇರುವನೆಂದರ್ಥ. ಸರ್ವದಾ ಆನಂದ ಸ್ವರೂಪನು, ಪರಮಾಣುವಾದ ಪದಾರ್ಥಗಳಲ್ಲಿಯೂ, ಜೀವರುಗಳಲ್ಲಿಯೂ, ದೊಡ್ಡದಾದ ಬ್ರಹ್ಮಾಂಡಕ್ಕೆ ಆವರಕನಾಗಿಯೂ ಇರುವ ಸೂಕ್ಷ್ಮಸ್ಥೂಲ ರೂಪಗಳನ್ನು ಸ್ವೀಕರಿಸುವ ಮಹಾಸಮರ್ಥನಾದರೂ, ಅಲ್ಪಮನುಷ್ಯರಂತೆ ಕಾಣಿಸಿಕೊಳ್ಳುತ್ತಾ ಸಕಲ ಚೇತನ ಅಂದರೆ ಸರ್ವಜೀವರಾಶಿಗಳಲ್ಲಿಯೂ ಮಣಿಗಳನ್ನು ಪೋಣಿಸಿರುವ ಸೂತ್ರದಂತೆ ಆಧಾರಭೂತನಾಗಿದ್ದು ಸರ್ವಕಾಲದಲ್ಲಿಯೂ ಭಕ್ತರನ್ನುದ್ಧರಿಸುವನು.

ಅವತಾರಿಕೆ :—ನಾಡಿಗಳ ಮೂಲಸ್ಥಾನದಲ್ಲಿ ಚಿಂತಿಸಬೇಕಾದ ಭಗವದ್ರೂಪಗಳನ್ನು ಹೇಳುತ್ತಾರೆ :—

**ಈ ಸುಷುಮ್ನಾದ್ಯಖಿಳ ನಾಡೀ**
**ಕೇಶ ನಾಭೀಮೂಲದಲಿ ವೃಷ**
**ಣಾಸನದ ಮಧ್ಯದಲಿ ಇಪ್ಪದು ತುಂದಿನಾಮದಲಿ ||**
**ಆಸರೋಜಾಸನ ಮುಖರು ಮೂ**
**ಲೇಶನಾ ನಂದಾದಿಸುಗುಣೋ**
**ಪಾಸನೆಯ ಗೈವುತಲಿ ದೇಹಗಳೊಳಗೆ ಇರುತಿಹರು || ೮ ||**

ಪದ್ಯಾರ್ಥ :—ಈ ಸುಷುಮ್ನಾದ್ಯಖಿಳ ನಾಡೀಕೇಶ=ಈ ಸುಷುಮ್ನಾ ವೊದಲಾದ ಎಲ್ಲಾ ನಾಡೀಸಂಘಗಳು, ನಾಭೀಮೂಲದಲಿ = ಹೊಕ್ಕಳಿಗೆ ಕೆಳಭಾಗದಲ್ಲಿ, ವೃಷಣಾಸನದ ಮಧ್ಯದಲಿ = ವೃಷಣಗಳಿಗೂ ಆಸನಕ್ಕೂ ಮಧ್ಯಪ್ರದೇಶದಲ್ಲಿ, ತುಂದಿನಾಮದಲಿ=ತುಂದಿಯೆಂಬ ಹೆಸರುಳ್ಳ ಸ್ಥಾನದಲ್ಲಿ, ಇಪ್ಪದು=ಇರುವುದು. ದೇಹದೊಳಗೆ, (ಆ ತುಂದಿಯಲ್ಲಿ) ಮೂಲೇಶ ನಾಮಕ ಪರಮಾತ್ಮನ, ಆನಂದಾದಿ ಸುಗುಣೋಪಾಸನೆಯ=ಆನಂದಾದಿ

ಉತ್ಕೃಷ್ಟವಾದ ಗುಣಗಳನ್ನು, ಉಪಾಸನೆಯ ಗೈವುತಲಿ=ಉಪಾಸನೆಯನ್ನು ಮಾಡುತ್ತ, ಆ ಸರೋಜಾಸನ ಮುಖರು=ತತ್ವಾಭಿಮಾನಿಗಳಾದ ಬ್ರಹ್ಮಾದಿ ದೇವತೆಗಳು, ಇರುತಿಹರು || ೮ ||

ತಾತ್ಪರ್ಯ :-ಸುಷುಮ್ನಾನಾಡಿಯೇ ಪ್ರಧಾನವಾಗಿವುಳ್ಳ ೭೨ ಸಹಸ್ರ ನಾಡಿಗಳೂ (ನಾಭಿಗೆ ಕೆಳಗೆ ಆಸನದವರೆಗೂ ಇರುವ ಸ್ಥಾನಕ್ಕೆ ತುಂದಿ ಯೆಂದು ಹೆಸರು) ಆ ತುಂದಿಯ ಮೂಲಸ್ಥಾನದಲ್ಲಿ, ಮೇಲೆಹೇಳಿದ ಸುಷುಮ್ನ ಮೊದಲಾದ ಪ್ರಧಾನ ನಾಡಿಗಳೂ ಸೇರಿ ೭೨೧೦೧ ನಾಡಿಗಳಿಗೆ ಕೇಶಭೂತವಾದ ಒಂದು ಗ್ರಂಥಿಯು ಇರುವುದು. ಅದರಲ್ಲಿ ಮೂಲೇಶ ನಾಮಕ ಪರಮಾತ್ಮನು ವಾಸವಾಗಿರುವನು. ಅಲ್ಲಿ ಬ್ರಹ್ಮಾದಿತತ್ವೇಶರು ಆ ಮೂಲೇಶನ ಆನಂದಾದಿಗುಣಗಳನ್ನು ಉಪಾಸನೆಮಾಡುತ್ತಾ ವಾಸ ಮಾಡುತ್ತಿರುವರು || ೮ ||

ವಿಶೇಷಾರ್ಥ:—ಈ ನಾಡಿಯನ್ನು ಹಿಂದೆ ೯ನೆಯ ಸಂಧಿಯ ೧೭ನೆಯ ಪದ್ಯದ ಮೊದಲು ಕೆಲವು ಪದ್ಯಗಳವರೆಗೂ ದಾಸರಾಯರು ವಿವರಿಸಿರುವರು. ಆ ಪ್ರಕರಣದ ವ್ಯಾಖ್ಯಾನದಲ್ಲಿ ಪ್ರಮಾಣ ಸಹಿತ ಸುಷುಮ್ನಾ ನಾಡಿಯ ಪ್ರಭೇದಗಳನ್ನು ಬರೆದಿದೆ. ಇನ್ನೂ ಹೆಚ್ಚಿನ ಭಾಗಗಳು ಇಲ್ಲಿ ಬರೆದಿವೆ. ತುಂದಿಯೆಂಬ ಹೆಸರುಳ್ಳ ವೃಷಣದ ಬುಡದಲ್ಲಿರುವ ಒಂದು ಗೆಡ್ಡೆಯು ಈ ನಾಡಿಗಳಿಗೆ ಮೂಲಾಧಾರವು. ಅದರಲ್ಲಿ ಪ್ರಧಾನ ನಾಡಿಗಳು ೧೦೧, ಅವರಲ್ಲಿಯೂ ಪ್ರಧಾನವಾದುವು ೫ ನಾಡಿಗಳು, ಅದರ ವಿವರ :— ಮಧ್ಯದಲ್ಲಿರುವುದು ಸುಷುಮ್ನಾ ನಾಡಿಯು, ಇದರ ೪ ದಿಕ್ಕುಗಳಲ್ಲಿ, ಇಡಾ, ಪಿಂಗಳ, ವಜ್ರಿಕಾ, ಧಾರಿಣೀ ಎಂಬ ೪ ನಾಡಿಗಳು ಇರುವವು. ಈ ನಾಲ್ಕು ನಾಡಿಗಳಲ್ಲಿ ಒಂದೊಂದು ಇಪ್ಪತ್ತೈದ (೨೫) ರಂತೆ ಕವಲುಗಳು ಒಡೆದು ೨೫×೪ = ೧೦೦ ಆದವು. ಮಧ್ಯನಾಡಿ ೧ ಅಂತು ೧೦೧ ನಾಡಿಗಳು, ಈ ನಾಡಿಗಳ ಒಂದೊಂದರಿಂದಲೂ ಶಾಖೆಗಳು ಹುಟ್ಟಿರುವವು. ಒಟ್ಟು ೧೦೧×೧೦೦=೧೦೧೦೦ ಹತ್ತು ಸಾವಿರದ ನೂರು ಆದವು. ಇವುಗಳಲ್ಲಿ ೧೦೦ ನಾಡಿಗಳು ಒಂದೊಂದರಲ್ಲಿ ೧೦ ಶಾಖೆಗಳುಳ್ಳವಾಗಿಯೂ, ಮತ್ತೊಂದು ನೂರು ನಾಡಿಗಳು ೯ ಶಾಖೆಗಳಿಂದ ಕೂಡಿರುವವಾಗಿಯೂ, ಮುನ್ನೂರು ನಾಡಿಗಳು ೮ ಶಾಖೆಗಳುಳ್ಳವಾಗಿಯೂ, ಉಳಿದ ೯೬೦೦ ನಾಡಿಗಳು ೬ ಶಾಖೆಗಳುಳ್ಳವಾಗಿ ಇರುವವು. ಇವುಗಳನ್ನು ಒಟ್ಟುಮಾಡಿದರೆ :—

| | |
|---|---|
| ಮೂಲನಾಡಿಗಳು | ೧೦೧೦೦ |
| ಇದರಲ್ಲಿ ೧೦ ಶಾಖೆಗಳುಳ್ಳ ನಾಡಿಗಳು | ೧೦೦ × ೧೦ = ೧೦೦೦ |
| ೯ ಶಾಖೆಗಳುಳ್ಳವು | ೧೦೦ × ೯ = ೯೦೦ |
| ೮ ,, | ೩೦೦ × ೮ = ೨೪೦೦ |
| ೬ ,, | ೯೬೦೦ × ೬ = ೫೭೬೦೦ |
| ಒಟ್ಟು | ೧೦೧೦೦ ೬೧೯೦೦ |

ಈ (೬೧೯೦೦) ಅರವತ್ತೊಂದು ಸಾವಿರದ ಒಂಭತ್ತುನೂರಕ್ಕೆ ಮೂಲವಾದ (೧೦೧೦೦) ಹತ್ತುಸಾವಿರದನೂರನ್ನು ಕೇರಿಸಿದರೆ ಒಟ್ಟು (೬೧೯೦೦+೧೦೧೦೦)=೭೨೦೦೦ ನಾಡಿಗಳಾಗುವವು. ಇವುಗಳಿಗೆ ಮೂಲಭೂತವಾದ ನಾಡಿಗಳು ೧೦೧, ಅಂತು ೭೨೧೦೧ ನಾಡಿಗಳಿರುವವು. ಇದಕ್ಕೆ ಆಧಾರವಾಗಿ ವಿಜಯದಾಸರಾಯರವರ ಸುಳಾದಿ ಇರುವುದು. 'ಹತ್ತೈದು ವಿಂಶತಿ ಮೇಲೆರಡುಸಾವಿರ ಮತ್ತೆ ನೂರೊಂದು ನಾಡಿ ದೇಹದೊಳಗೆ, ತತ್ತಳಿಸುತಿಪ್ಪದು ಬಲಸವ್ಯಾವಿಡಿದು ಇನಿತು ಕೇಳುವುದು ನಾಡಿಗಳಶಾಖಾಹತ್ತು। ಹತ್ತೊಂದು ಮುಖ್ಯ ನಾಡಿಯು ನೂರಾರಿಂದ ಬಿತ್ತರಿಸಿ ಗುಣಿಸಿ, ಅಯುತಾ ನೂರು ಸತ್ಯವಾಯಿತು ನೋಡೆ ಇದಕೆ, ವಿವರ ಉಂಟು. ಉತ್ತಮಗೆಣದಾವರು ತಿಳಿಯಬೇಕು. ಹತ್ತು ಹತ್ತು ಗುಣಿಸಿ ಅದರನ್ನು ಅಷ್ಟರಿಂದ ಮತ್ತೆ ಹೆಚ್ಚಿಸಾಲು ಸಾವಿರವಹುದು. ಇತ್ತ ಮುಂದಕ್ಕೆ ನೂರು ಇಟ್ಟುಕೊಂಡು ಒಂಭತ್ತರಿಂದಲೆ ಗುಣಿಸೆ ಒಂಭತ್ತು ನೂರು. ಸುತ್ತಾದೀರಿನ್ನು ತ್ರಯನೂರು ಎಂಟಾರಿಂದ ಚಿತ್ತಾದಲಿ ಗುಣಿಸೆ ಆದುದಿದಕೆ ಇಪ್ಪತ್ತು ನಾಲ್ಕುನೂರು, ಆ ತರುವಾಯ, ಒಂಭತ್ತು ಸಾವಿರದಾರುನೂರು, ಅರ್ಥಿಯಿಂದಲಿ ಇದೆ. ಆರಾರಿಂದಾಲಿ ಗುಣಿಸೆ ಹತ್ತೈದು ಏಳುಸಾವಿರ ನೂರಾರು, ಇತ್ತಂಡದಿಂದ ಪೂರ್ವೋತ್ತರ ನೋಡೆ ಅರವತ್ತೊಂದುಸಾವಿರದೆಂಟೊಂದು ನೂರು, ಮತ್ತೆ ಇದರಕೆಳಗೆ ಮೇಲೀನ ಆಯುತಾನೂರು, ಇತ್ತರೆ ಸಪ್ತೆರಡುಯುತನಾಡಿಯು ನಿತ್ಯವೇ ಸರಿ, ಇದಕೆ ನೂರೊಂದು ಮುಖ್ಯನಾಡಿ, ತತ್ತಳಗೊಳದೆ ಕೂಡಿಸಲು, ಮೊತ್ತ ಉಳ್ಳದ್ದಕ್ಕೆ ಹೆಚ್ಚುವಾದಿಷ್ಟೆ ನಾಡಿಗಳು ಮರ್ತ್ಯ ಲೋಕಾದಜನರು ಗುಣಿಸಿದರು ಅತ್ಯಂತ ಮಹಿಮನಮ್ಮ ವಿಜಯ ವಿಠ್ಠಲರೆಯಾ ಸ್ತೋತ್ರಮಾಡಿದವರ ಮನಕೆ ಇಂತು ತಿಳಿಪುವ' ಎಂಬೀ ಸುಳಾದಿಯಲ್ಲಿ ಹೇಳಿರುವ ಅರ್ಥವನ್ನೇ

ಮೇಲೆ ಬರೆದಿರುವುದರಿಂದ ಈ ಸುಳಾದಿಗೆ ಬೇರೆ ಅರ್ಥ ಬರೆಯಬೇಕಾಗಿಲ್ಲ. ಇನ್ನೂ ಇದಕ್ಕೆ ಆಧಾರಗಳು ಷಟ್ ಪ್ರಶ್ನೋಪನಿಷತ್ತಿನ ಭಾಷ್ಯದಲ್ಲಿಯೂ, ನಾಡೀಕಲ್ಪಲತಾಯೆಂಬ ಗ್ರಂಥದಲ್ಲಿಯೂ ಸಹ ಇರುವವು. ಗ್ರಂಥ ವಿಸ್ತಾರ ಭಯದಿಂದ ಅವುಗಳನ್ನು ಬರೆಯಲಿಲ್ಲ.

ಅವತಾರಿಕೆ :—ಮೇಲೆ ಹೇಳಿದ ನಾಡಿಗಳಲ್ಲಿ ನದ್ಯಭಿಮಾನಿಗಳನ್ನು ತಿಳಿದು ಸ್ನಾನ ಮಾಡಿದರೆ ಮಹಾ ಫಲವೆಂದು ಹೇಳುತ್ತಾರೆ.

**ಸೂರಿಗಳು ಚಿತ್ತೈಸುವದು ಭಾ**
**ಗೀರಥಿಯು ಮೊದಲಾದ ತೀರ್ಥಗ**
**ಳೀರಧಿಕ ಯೆಪ್ಪತ್ತು ಸಾವಿರ ನಾಡಿಯೊಳಗಿಹವು ||**
**ಈ ರಹಸ್ಯವನಲ್ಪ ಜನರಿಗೆ**
**ತೋರಿ ಪೇಳದೆ ನಾಡಿ ನದಿಯೊಳು**
**ಧೀರರನುದಿನ ಮಜ್ಜನವ ಮಾಡುತಲೆ ಸುಖಿಸುವರು || ೯ ||**

ಪದ್ಯಾರ್ಥ :—ಸೂರಿಗಳು=ಜ್ಞಾನಿಗಳು, ಚಿತ್ತೈಸುವದು=ಕೇಳುವದು, ಭಾಗೀರಥಿಯು ಮೊದಲಾದ=ಗಂಗೆ ಮೊದಲಾದ, ತೀರ್ಥಗಳು, ಈರಧಿಕಯೆಪ್ಪತ್ತುಸಾವಿರ ನಾಡಿಯೊಳಗೆ=೭೨ ಸಾವಿರನಾಡಿಗಳೊಳಗೆ, ಇಹವು =ಇರುವವು. ಈ ರಹಸ್ಯವ, ಅಲ್ಪಜನರಿಗೆ, ತೋರಿ ಪೇಳದೆ=ಹೇಳಿ ತಿಳಿಸದೆ, ಧೀರರು=ದೃಢವಾದ ನಂಬಿಕೆಯುಳ್ಳವರು, ನಾಡಿ ನದಿಯೊಳು=ನಾಡಿಗಳಲ್ಲಿ ಅಂತರ್ಹಿತವಾಗಿರುವ ನದಿಗಳಲ್ಲಿ, ಅನುದಿನ=ಪ್ರತಿದಿವಸದಲ್ಲಿಯೂ ಮಜ್ಜನ ಮಾಡುತಲೆ=ಸ್ನಾನ ಮಾಡುತ್ತಲೇ (ನಾಡಿಗಳಲ್ಲಿ ಭಾಗೀರಥೀ ಮೊದಲಾದ ನದಿಗಳಿರುವವೆಂದು ತಿಳಿದು ಚಿಂತಿಸುವದೇ ಸ್ನಾನವೆಂಬತಾತ್ಪರ್ಯ) ಸುಖಿಸುವರು.

ತಾತ್ಪರ್ಯ :—ಈ ವಿಷಯದಲ್ಲಿ ಜ್ಞಾನಿಗಳು ಚಿತ್ತವನ್ನಿಡಬೇಕು. ಮೇಲೆ ಹೇಳಿದ (೭೨೦೦೦) ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿ, ಗಂಗಾ, ತುಂಗಾ ಮೊದಲಾದ ಸಕಲ ತೀರ್ಥಾಭಿಮಾನಿ ದೇವತೆಗಳು ವಾಸವಾಗಿರುವರು. ಈ ವಿಷಯವು ಬಹಳ ಗೋಪ್ಯವಾದುದು. ಪಾಮರರಿಗೆ ಹೇಳಿದರೆ ಹಾಸ್ಯವಾಗಿ ಕಾಣುವುದು. ಅಂತಹವರಿಗೆ ಹೇಳಬಾರದು. ಈ ನಂಬಿಕೆ ಉಳ್ಳವರು ನಿತ್ಯದಲ್ಲಿಯೂ ತಮ್ಮ ನಾಡಿಗಳಲ್ಲಿ ನದಿಗಳೆಲ್ಲವೂ ಇರುವವೆಂದು ಭಾವಿಸಿ ಅವುಗಳಲ್ಲಿ ಸ್ನಾನಮಾಡುತ್ತೇವೆಂದು ಮನಸಾ ಚಿಂತಿಸಲು, ಸಕಲ ತೀರ್ಥಗಳಲ್ಲಿ ಸ್ನಾನ ಮಾಡಿದ ಫಲವು ಬರುವುದು.

**ಅವತಾರಿಕೆ:— ಎಡಬಲ ನಾಡಿಗಳಲ್ಲಿರುವ ದೇವತೆಗಳನ್ನು ಹೇಳು ತ್ತಾರೆ.**

**ತಿಳಿವದೀ ದೇಹದೊಳಗಿಹ ಯಡ**
**ಬಲದ ನಾಡಿಗಳೊಳಗೆ ದಿವಿಜರು**
**ಜಲಜ ಸಂಭವವಾಯು ವಾಣ್ಯಾದಿಗಳು ಬಲದಲ್ಲಿ ||**
**ಯಲರುಣಿಪ ವಿಹಗೇಂದ್ರ ಛಳಿಬೆ**
**ಟ್ಟಳಿಯ ಷಣ್ಮಹಿಷಿಯರು ವಾರುಣಿ**
**ಕುಲಿಶಧರ ಕಾಮಾದಿಗಳು ಯಡಭಾಗದೊಳಗಿಹರು || ೧೦ ||**

ಪದ್ಯಾರ್ಥ :—ಈ ದೇಹದೊಳಗೆ, ಇಹ=ಇರುವ, ಎಡಬಲದ ನಾಡಿ ಗಳೊಳಗೆ, ದಿವಿಜರು=ದೇವತೆಗಳನ್ನು, ತಿಳಿವದು, ಈ ಪ್ರಕಾರ ತಿಳಿಯಬೇಕು ಜಲಜಸಂಭವ=ಬ್ರಹ್ಮದೇವರು, ವಾಯು=ವಾಯುದೇವರು, ವಾಣ್ಯಾದಿ ಗಳು=ಸರಸ್ವತೀ ಮೊದಲಾದ, ದಿವಿಜರು=ದೇವತೆಗಳು, ಬಲದಲ್ಲಿ=ಬಲ ಭಾಗದ ನಾಡಿಗಳಲ್ಲಿ, ಇರುವರೆಂದು ತಿಳಿಯಬೇಕು. ಎಡಭಾಗದೊಳು, ಎಲ ರುಣಿಪ=ಗಾಳಿಯನ್ನು ನುಂಗುವನು ಎಂದರೆ ಸರ್ಪವೆಂದರ್ಥ, ಅರ್ಥಾತ್ ಶೇಷದೇವರು, ವಿಹಗೇಂದ್ರ=ಪಕ್ಷಿಶ್ರೇಷ್ಟನಾದ ಗರುಡ, ಛಳಿ ಬೆಟ್ಟಳಿಯ= ಹಿಮಾಲಯ ಪರ್ವತನ ಅಳಿಯನಾದ ರುದ್ರದೇವರು, ಷಣ್ಮಹಿಷಿಯರು=ಕೃಷ್ಣ ನ ಪತ್ನಿಯರಲ್ಲಿ ಜಾಂಬುವತೀ ಮೊದಲಾದ ಆರು ಮಂದಿಯರು, ವಾರುಣಿ= ಶೇಷದೇವರ ಹೆಂಡತಿ, ಕುಲಿಶಧರ=ವಜ್ರವನ್ನು ಧರಿಸಿದ ದೇವೇಂದ್ರನು, ಕಾಮಾದಿಗಳು=ಮನ್ಮಥ ಮೊದಲಾದವರು, ಇಹರು=ಇರುವರು.

ತಾತ್ಪರ್ಯ :—ಈ ದೇಹದಲ್ಲಿ ಹಗಲು ನಾಡಿಗಳು ೩೬ ಸಹಸ್ರ, ಬಲ ಭಾಗದಲ್ಲಿಯೂ, ರಾತ್ರಿ ನಾಡಿಗಳು ೩೬ ಸಹಸ್ರ ಎಡಭಾಗದಲ್ಲಿಯೂ ಇರು ವವು. ಬಲದ ನಾಡಿಗಳು ಪುರುಷನಾಡಿಗಳೆಂತಲೂ, ಎಡಭಾಗದ ನಾಡಿಗ ಳಿಗೆ ಸ್ತ್ರೀ ನಾಡಿಗಳೆಂತಲೂ ಹೆಸರು. ಇದಲ್ಲದೆ ಬಲ ಎಡದಲ್ಲಿರುವ ನಾಡಿಗ ಳಲ್ಲಿ ೫೦೦—೫೦೦ ನಾಡಿಗಳಿಗೆ ದಕ್ಷಿಣಾಯನ ನಾಡಿಗಳು, ಉತ್ತರಾಯನ ನಾಡಿಗಳು ಎಂತಲೂ ಹೆಸರುಂಟು. ಶಾಂಡಿಲ್ಯ ತತ್ವದಲ್ಲಿ 'ದೇಹೇತಿ ಪ್ರಸ್ತು ನಾಡ್ಯಃಸ್ಯುಃ ಪಿಂಗಳೇಡಾಸುಷುಮ್ನಕಾಃ || ದಕ್ಷಿಣಾಪಿಂಗಳಾನಾಮ ಇಡಾ ವಾಮಾಪ್ರಕೀರ್ತಿತಾ || ಪಿಂಗಳಾಯಾಃ ಶತಂ ಪಂಚನಾಡ್ಯೋವೈ ದಕ್ಷಿಣಾ ಯನಾಃ | ತಾವಂತ ಏವಾಚೇಡಾಯಾಃ ನಾಡ್ಯಸ್ತೇಚೋತ್ತರಾಯಣಾಃ ||'

ಈ ದೇಹದಲ್ಲಿ ಪ್ರಧಾನನಾಡಿಗಳು ಮೂರು ಇರುವವು ಮಧ್ಯದಲ್ಲಿ, ಸುಷು ಮ್ನಾ, ಬಲದಲ್ಲಿ ಪಿಂಗಳಾ, ಎಡದಲ್ಲಿ ಇಡಾ. ಪಿಂಗಳಾನಾಡಿಯಿಂದ ಹುಟ್ಟಿದ ಐನೂರು ನಾಡಿಗಳಿಗೆ ದಕ್ಷಿಣಾಯನ ನಾಡಿಗಳೆಂತಲೂ, ಇಡಾನಾಡಿಯಿಂದ ಹುಟ್ಟಿದ ೫೦೦ ನಾಡಿಗಳಿಗೆ ಉತ್ತರಾಯನ ನಾಡಿಗಳೆಂತಲೂ ಹೆಸರು. ಎಂದು ಹೇಳಿರುವರು. ಇಂತಹ ಬಲ ಎಡ ನಾಡಿಗಳಲ್ಲಿ ದೇವತೆಗಳು ವಾಸ ಮಾಡುತ್ತಿರುವರೆಂದು ತಿಳಿಯಬೇಕು. ಬಲಭಾಗದ ನಾಡಿಗಳಲ್ಲಿ ಬ್ರಹ್ಮದೇ ವರು ಸರಸ್ವತೀ ಮೊದಲಾದವರು ವಾಸವಾಗಿರುವರು. ಎಡಭಾಗದ ನಾಡಿ ಗಳಲ್ಲಿ ಶೇಷದೇವರು, ಗರುಡದೇವರು, ರುದ್ರದೇವರು, ಜಾಂಬುವತಿ, ಮಿತ್ರ ವಿಂದಾ, ಕಾಳಿಂದೀ, ನೀಲಾ, ಭದ್ರಾ, ಲಕ್ಷಣಾ ಎಂಬ ಷಣ್ಮಹಿಷಿಯರು, ಶೇಷದೇವರ ಹೆಂಡತಿ ಮೊದಲಾದವರು, ಇರುವರು.

ಅವತಾರಿಕೆ :— ಈ ನಾಡಿಗಳಲ್ಲಿ ಶ್ರೀಹರಿಯು ದೇವತೆಗಳೊಂದೊಡ ಗೂಡಿ, ವಾಸಮಾಡುತ್ತಾ, ಸಾಧನಗಳನ್ನು ಮಾಡಿಸುತ್ತಾನೆಂದು ಹೇಳು ತ್ತಾರೆ.

**ಇಕ್ಕೆಲದೊಳಿಹ ನಾಡಿಯೊಳು ದೇ**
**ವಕ್ಕಳಿಂದೊಡನಾಡುತಲಿ ಪೊಂ**
**ಬಕ್ಕಿದೇರನು ಜೀವರಧಿಕಾರಾನು ಸಾರದಲಿ ॥**
**ತಕ್ಕ ಸಾಧನವ ಮಾಡಿ ಮಾಡಿಸು**
**ತಕ್ಕರದಿ ಸಂತೈಪ ಭಕ್ತರ**
**ದಕ್ಕ ಗೊಡನಸುರರ್ಗೆ ಸತ್ಪುಣ್ಯಗಳನಪಹರಿಪ ॥ ೧೧ ॥**

ಪದ್ಯಾರ್ಥ :- ಇಕ್ಕೆಲದೊಳು = ಎರಡು ಭಾಗದೊಳಗೆ, ಇಹ = ಇರುವ, ನಾಡಿಯೊಳು, ದೇವಕ್ಕಳಿಂದ = ದೇವತೆಗಳಿಂದ, ಒಡನಾಡುತಲಿ = ಒಡಗೂಡಿ ವಿಹರಿಸುತ್ತ, ಪೊಂಬಕ್ಕಿದೇರನು = ಗರುಡನೇ ರಥವಾಗುಳ್ಳ ಶ್ರೀಪರಮಾತ್ಮನು ಜೀವರ = ಸಾತ್ವಿಕ, ರಾಜಸ, ತಾಮಸರೆಂಬ ಮೂರುವಿಧ ಜೀವರ, ಅಧಿಕಾ ರಾನುಸಾರದಲಿ = ಯೋಗ್ಯತಾನು ಸಾರವಾಗಿ, ತಕ್ಕ ಸಾಧನವಮಾಡಿ, ಮಾಡಿ ಸುತ, ಭಕ್ತರ = ಭಕ್ತರನ್ನು, ಅಕ್ಕರದಿ = ಪ್ರೀತಿಯಿಂದ, ಸಂತೈಪ = ಸಂತೈಸು ವನು, ಅಸುರರ್ಗೆ = ದೈತ್ಯರಿಗೆ, ಸತ್ಪುಣ್ಯಗಳ = ಉತ್ತಮವಾದ ಪುಣ್ಯಫಲಗ ಳನ್ನು, ದಕ್ಕಗೊಡನು = ದಕ್ಕಲೀಸನು, ಅಪಹರಿಪ = ತಾನು ಅವರೊಳಗಿದ್ದು ಮಾಡಿಮಾಡಿಸಿದ ಪುಣ್ಯ ಸ್ವಲ್ಪ ವಿದ್ದರೂ ಅದನ್ನೂ ತಾನೇ ಅಪಹರಿಸುವನು.

ತಾತ್ಪರ್ಯ:—ಇಂತೀ ಶರೀರದೊಳಗಿನ ನಾಡಿಗಳಲ್ಲಿ ಗರುಡವಾಹನನಾದ ಶ್ರೀಹರಿಯು, ದೇವತೆಗಳಿಂದೊಡಗೂಡಿ ವಾಸಮಾಡುತ್ತ, ಮೂರು ವಿಧಜೀವರ ಯೋಗ್ಯತಾನುಸಾರವಾಗಿ ತಕ್ಕಸಾಧನಗಳನ್ನು ಮಾಡಿ ಅವರಿಂದಲೂ ಮಾಡಿಸಿ ಭಕ್ತರಿಗೆ ಪುಣ್ಯಫಲವನ್ನು ಕೊಟ್ಟು ಉದ್ಧರಿಸುವನು. ದ್ವೇಷಿಗಳಾದ ದೈತ್ಯರಲ್ಲಿದ್ದು ಮಾಡಿ ಮಾಡಿಸುವ ಪುಣ್ಯಫಲವನ್ನು ತಾನು ಅಪಹರಿಸಿ ಅವರಿಗೆ ಆ ಫಲದಕ್ಕದಂತೆ ಮಾಡುವನು

ಅವತಾರಿಕೆ :—ಸುಷುಮ್ನಾನಾಡಿಯಲ್ಲಿ ವಾಯುದೇವರು ಅದರ ಶಾಖಿನಾಡಿಗಳಲ್ಲಿ ಸೂರ್ಯಾದಿಗಳೂ ಇರುವರೆಂದು ಹೇಳುತ್ತಾರೆ

**ತುಂದಿವಿಡಿದಾ ಶಿರದ ಪರಿಯಂ**
**ತೊಂದೆ ವ್ಯಾಪಿಸಿ ಇಹದು ತಾವರೆ**
**ಕಂದ ನಿಹನದರೊಳಗೆ ಇದಕೀರೈದು ಶಾಖೆಗಳು ||**
**ಒಂದಧಿಕ ದಶಕರಣಗಳು ಸಂ**
**ಬಂಧಗೈದಿಹ ವಲ್ಲಿ ರವಿಶಶಿ**
**ಸಿಂಧು ನಾಸತ್ಯಾದಿಗಳು ನೆಲೆಗೊಂಡಿಹರು ಸತತ ||೧೨||**

ಪದ್ಯಾರ್ಥ :—ತುಂದಿವಿಡಿದು=ಹೊಕ್ಕಳಿಗೆ ಕೆಳಭಾಗದಲ್ಲಿರುವ ಕೆಳಹೊಟ್ಟೆಯು ಮೊದಲು, ಶಿರದಪರಿಯಂತ=ತಲೆಯವರೆಗೂ, ಒಂದೇವ್ಯಾಪಿಸಿಹದು=ಬ್ರಹ್ಮನಾಡಿಯು ಒಂದೇ ವ್ಯಾಪಿಸಿಕೊಂಡು ಇರುವುದು, ಅದರೊಳಗೆ, ತಾವರೆಕಂದ=ತಾವರೆಯ ಪುಷ್ಪದಿಂದ ಜನಿಸಿದವರು ಅಂದರೆ ಪರಮಾತ್ಮನ ನಾಭಿಯಕಮಲದಿಂದ ಜನಿಸಿದ ಬ್ರಹ್ಮದೇವರು, ಆ ಹೆಸರುಳ್ಳ ವಾಯುದೇವರೆಂದರ್ಥ. ಅಂತಹ ವಾಯುದೇವರು ಅಥವಾ ಬ್ರಹ್ಮವಾಯುಗಳು, ಇಹನು=ಇರುವರು, ಇದಕೆ=ಈ ಬ್ರಹ್ಮನಾಡಿಗೆ, ಈರೈದುಶಾಖೆಗಳು=೧೦ ಶಾಖೆಗಳು ಇರುವವು. ಈ ಬ್ರಹ್ಮನಾಡಿ ೧. ಅದರ ಶಾಖೆಯ ನಾಡಿಗಳು ೧೦, ಒಟ್ಟು ೧೧ ನಾಡಿಗಳಲ್ಲಿ, ಒಂದಧಿಕ ದಶಕರಣಗಳು = ಜ್ಞಾನೇಂದ್ರಿಯ ೫, ಕರ್ಮೇಂದ್ರಿಯ ೫, ಮನಸ್ಸು ೧, ಅಂತು ೧೧ ಇಂದ್ರಿಯಗಳು, ಸಂಬಂಧಿಸಿರುವವು, ಅಲ್ಲಿ=ಆ ಇಂದ್ರಿಯ ಸಂಬಂಧದಿಂದ ಕೂಡಿದ ನಾಡಿಗಳಲ್ಲಿ, ರವಿ=ಸೂರ್ಯನು, ಶಶಿ=ಚಂದ್ರನು, ಸಿಂಧು = ವರುಣನು, ನಾಸತ್ಯಾದಿಗಳು ಅಶ್ವಿನೀದೇವತೆ ಮೊದಲಾದವರು, ಸತತ=ಸರ್ವಕಾಲದಲ್ಲಿಯೂ ನೆಲೆಗೊಂಡಿಹರು=ವಾಸವಾಗಿರುವರು.

**ತಾತ್ಪರ್ಯ** :—ಹೊಕ್ಕಳಿಗೆ ಕೆಳಭಾಗದ ಹೊಟ್ಟೆಗೆ, ತುಂದಿಯೆಂದು ಹೆಸರು. ಆ ತುಂದಿಯು ವೃಷಣದ ಬುಡದವರೆಗೂ ಇರುವುದು. ತುಂದಿಯ ಮೂಲಸ್ಥಾನ ಹಿಡಿದು ತಲೆಯವರೆಗೂ ಬ್ರಹ್ಮನಾಡಿಯು ವ್ಯಾಪಿಸಿಕೊಂಡಿರುವುದು. ಅದರಲ್ಲಿ ಶ್ರೀ ಬ್ರಹ್ಮದೇವರು ಮತ್ತು ವಾಯುದೇವರು ಇರುವರು. ಇಲ್ಲಿ ವಾಯುದೇವರನ್ನು ಬೇರೆಯಾಗಿ ಹೇಳದಿದ್ದರೂ, ಮುಂದಿನ ಪದ್ಯದಲ್ಲಿ ಸ್ಪಷ್ಟವಾಗಿ ಹೇಳಿರುವುದರಿಂದಲೂ, ವಾಯುದೇವರೇ ಬ್ರಹ್ಮದೇವರಾಗುವುರಿಂದಲೂ, ಬ್ರಹ್ಮದೇವರನ್ನು ಹೇಳಿದ್ದರಿಂದ ವಾಯುದೇವರನ್ನು ಹೇಳಿದಂತಾಯಿತೆಂಬ ಭಾವ. ಈ ಬ್ರಹ್ಮನಾಡಿಗೆ ೧೦ ನಾಡಿಗಳು ಶಾಖೆಗಳಾಗಿ ಹೊರಟಿರುವವು. ಬಹ್ಮನಾಡಿಯನ್ನು ಸೇರಿಸಿ ಒಟ್ಟು ಹನ್ನೊಂದು ನಾಡಿಗಳು, ಈ ಹನ್ನೊಂದು ನಾಡಿಗಳಲ್ಲಿ ಮನಸ್ಸು ೧, ಜ್ಞಾನೇಂದ್ರಿಯಗಳು ೫, ಕರ್ಮೇಂದ್ರಿಯಗಳು ೫, ಅಂತು ೧೧ ಇಂದ್ರಿಯಗಳು ಸಂಬಂಧಿಸಿ ಇರುವವು. ಅವುಗಳಲ್ಲಿ ಸೂರ್ಯ, ಚಂದ್ರ, ವರುಣ, ಅಶ್ವಿನೀದೇವತೆಗಳು ಮೊದಲಾದವರು ವಾಸವಾಗಿರುವರು. (ಮೇಲೆ ೧೦೧ ನಾಡಿಗಳ ಲೆಖ್ಖವನ್ನು ಹೇಳಿದಾಗ ಸುಷುಮ್ನಾ ನಾಡಿಯನ್ನು ಒಂದನ್ನಾಗಿ ತೆಗೆದುಕೊಂಡು, ಮಿಕ್ಕನಾಲ್ಕು ನಾಡಿಗಳಲ್ಲಿ ೨೫ ರಂತೆ ಶಾಖೆಯನ್ನು ಹೇಳಿ, ಒಟ್ಟು ೧೦೧ ಎಂದು ಹೇಳಿದರು. ಈಗ ಸುಷುಮ್ನಾ ನಾಡಿಯ ಶಾಖೆಯನ್ನು ಹೇಳುವರು.

ಅವತಾರಿಕೆ :--ಬ್ರಹ್ಮನಾಡಿಯಲ್ಲಿ ವಾಯುದೇವರು ಮಾಡುವ ಕಾರ್ಯಗಳನ್ನು ಹೇಳುತ್ತಾರೆ.

**ಪೊಕ್ಕಳ ಎಡಿದೊಂದೆನಾಡಿಯು**
**ಸುಕ್ಕದಲೆ ಧಾರಾಳ ರೂಪದಿ**
**ಸಿಕ್ಕಿಹದು ನಡುದೇಹದೊಳಗೆ ಸುಷುಮ್ನ ನಾಮದಲಿ ॥**
**ರಕ್ಕಸರನೊಳಪೊಗ ಗುಡದೆ ದಶ**
**ದಿಕ್ಕನೊಳಗೆ ಸಮೀರದೇವನು**
**ಲೆಕ್ಕಿಸದೆ ಮತ್ತೊಬ್ಬರನು ಸಂಚರಿಪ ದೇಹದೊಳು ॥ ೧೩ ॥**

ಪದ್ಯಾರ್ಥ :—ಪೊಕ್ಕಳವಿಡಿದು=ಹೊಕ್ಕಳ ಬುಡಮೊದಲು, ಒಂದೇ ನಾಡಿಯು, ಸುಕ್ಕದಲೆ=ವಕ್ರಾದಿಗಳಿಲ್ಲದೆ, ಧಾರಾಳರೂಪದಿ=ನೆಟ್ಟಗೆ, ನಡುದೇಹದೊಳಗೆ ಸುಷುಮ್ನ ನಾಮದಲಿ = ಸುಷುಮ್ನಾಎಂಬ ಹೆಸರಿನಿಂದ ಸಿಕ್ಕಿಹದು=ಇರುತ್ತಿರುವದು. ಸಮೀರದೇವನು= ವಾಯುದೇವರು, ರಕ್ಕ

ಸರನು = ರಾಕ್ಷಸರನ್ನು, ಒಳಪೋಗಗುಡದೆ = ಒಳಗೆ ಹೋಗಗೊಡಿಸದೆ, ಮತ್ತೊಬ್ಬರನು ಲಕ್ಕಿಸದೆ, ದೇಹದೊಳು, ದಶದಿಕ್ಕಿನೊಳಗೆ=ಹತ್ತು ದಿಕ್ಕು ಗಳಲ್ಲಿಯೂ, ಸಂಚರಿಪ=ತಿರುಗುತ್ತಿರುವನು.

ತಾತ್ಪರ್ಯ :—ಮೇಲಿನ ಪದ್ಯದಲ್ಲಿ ಹೇಳಿದಂತೆ ಹೊಕ್ಕಳಕೆಳಗಿನಿಂದ ಹೊರಟ ಸುಷುಮ್ನಾನಾಡಿಯು, ಮಧ್ಯದಲ್ಲಿ ನೆಟ್ಟಗೆ ಸುರಕುಗಳಿಲ್ಲದೆ, ತಲೆಯು ವರೆಗೂ ಹೋಗಿರುವುದು. ಅದರಲ್ಲಿ ವಾಯುದೇವರಿದ್ದುಕೊಂಡು ದೇಹ ದೊಳಗೆ ೧೦ ದಿಕ್ಕುಗಳಲ್ಲಿಯೂ ತಿರುಗುತ್ತಾ ರಾಕ್ಷಸರನ್ನು ಆನಾಡಿಯ ಸಮೀಪದಲ್ಲಿ ಬರಗೊಡಿಸದೆ ಮತ್ತಾರನ್ನೂ ಲಕ್ಷ್ಯಮಾಡದೆ ಸಂರಕ್ಷಿಸು ತ್ತಿರುವರು.

ಅವತಾರಿಕೆ :—ಈ ನಾಡಿಯು ಕವಲುಗಳಲ್ಲಿರುವ ದೇವತಾರೂಪ ಭಗ ವದ್ರೂಪಗಳನ್ನು ಹೇಳಿ, ಈ ಪ್ರಕರಣವನ್ನು ಮುಗಿಸುತ್ತಾರೆ.

**ಇನಿತು ನಾಡೀ ಶಾಖೆಗಳು ಈ**
**ತನುವಿನೊಳಗಿಹವೆಂದು ಯೇಕಾ**
**ತ್ಮನು ದ್ವಿಸಪ್ತತಿ ಸಾವಿರಾತ್ಮಕನಾಗಿ ನಾಡಿಯೊಳು ॥**
**ವನಿತೆಯಿಂದೊಡಗೂಡಿ ನಾರಾ**
**ಯಣ ದಿವಾರಾತ್ರಿಯೊಳಗೀಪರಿ**
**ವನಜ ಜಾಂಡದೊಳಖಿಳ ಜೀವರೊಳಿದ್ದು ಮೋಹಿಸುವ ॥೧೪॥**

ಪದಾರ್ಥ :—ಇನಿತು = ಈ ಪ್ರಕಾರವಾಗಿ, ನಾಡೀಶಾಖೆಗಳು= ನಾಡಿಯ ಕವಲುಗಳು, ಈ ತನುವಿನೊಳಗೆ=ದೇಹದೊಳಗೆ, ಇಹವೆಂದು= ಇರುವವೆಂತಲೂ, ಏಕಾತ್ಮನು=ತನ್ನ ಅನಂತಾನಂತ ರೂಪಗಳಲ್ಲಿ ಭೇಧವಿಲ್ಲ ದಿರುವುದರಿಂದ ಏಕಾತ್ಮನೆನಿಸುವ, ನಾರಾಯಣ=ಶ್ರೀನಾರಾಯಣನು, ದ್ವಿಸ ಪ್ತತಿ ಸಾವಿರಾತ್ಮಕನಾಗಿ=೭೨ ಸಹಸ್ರರೂಪಗಳನ್ನು ಧರಿಸಿ, ವನಿತೆಯಿಂದೊ ಡಗೂಡಿ=ಅಷ್ಟು ರೂಪಗಳನ್ನುಧರಿಸಿದ ಲಕ್ಷ್ಮೀದೇವಿಯರಿಂದೊಡಗೂಡಿ, ದಿವಾ ರಾತ್ರಿಯೊಳಗೆ=ಹಗಲು ರಾತ್ರಿಯಲ್ಲಿ, ಈಪರಿ=ಈರೀತಿಯಾಗಿ, ವನಜ ಜಾಂಡದೊಳು=ಬ್ರಹ್ಮಾಂಡದೊಳಗೆ, ಅಖಿಳಜೀವರೊಳು=ಎಲ್ಲಾ ಪ್ರಾಣಿ ಗಳಲ್ಲಿ, ಇದ್ದು, ಮೋಹಿಸುವ=ತಾನು ಇದ್ದುದನ್ನು ತಿಳಿಸದೆ ಜನರನ್ನು ಮೋ ಹ ಗೊಳಿಸುವನೆಂತಲೂ, ತಿಳಿದು ಉಪಾಸನೆ ಮಾಡಬೇಕೆಂತಲೂ ಅರ್ಥ.

ತಾತ್ಪರ್ಯ :—ಈ ಪ್ರಕಾರ ದೇಹದೊಳಗೆ ನಾಡಿಯು ಕನಲು ಒಟ್ಟು ೭೨ ಸಹಸ್ರದ ೧೦೧ ಇರುವವೆಂದು ಹೇಳಿರುವರಷ್ಟೆ ? ಈ ನಾಡಿಗಳಲ್ಲಿ ಪರಮಾತ್ಮನು ಒಬ್ಬನೇ ಆದರೂ ೭೨ ಸಹಸ್ರದ ೧೦೧ ರೂಪಗಳನ್ನು ತಾನು ಧರಿಸಿಕೊಂಡು ಇದರಂತೆ ೭೨,೧೦೧ ರೂಪಗಳನ್ನು ಧರಿಸಿಕೊಂಡಿರುವ ಲಕ್ಷ್ಮೀದೇವಿಯರಿಂದೊಡಗೊಡಿ, ಹಗಲೂ ರಾತ್ರಿಯೂಸಹ ಈಬ್ರಹ್ಮಾಂಡದೊಳಗಿರುವ ಎಲ್ಲಾ ಪ್ರಾಣಿಗಳಲ್ಲಿ ಇದ್ದು ಜನರನ್ನು ಮೋಹಗೊಳಿಸುತ್ತಿರುವನೆಂದು ತಿಳಿದು ಉಪಾಸನೆ ಮಾಡಬೇಕೆಂಬ ತಾತ್ಪರ್ಯ.

ಅವತಾರಿಕೆ :—ಈ ವಿಧವಾಗಿ ತಿಳಿದು ಭಗವಂತನನ್ನು ಉಪಾಸನೆ ಮಾಡುವದು ಭಕ್ತಜನರಿಗೆ ಅಲ್ಲದೆ ಅಯೋಗ್ಯ ಜನರಿಗೆ ಸಾಧ್ಯವಲ್ಲವೆಂದು ಹೇಳುತ್ತಾರೆ.

**ದಿನದಿನದಿ ವರ್ಧಿಸುವ ಕುಮುದಾ**
**ಪ್ತನ ಮಯೂಖದ ಸೊಬಗಗತ ಲೋ**
**ಚನ ನವಲೋಕಿಸಿ ಮೋದಪಡಬಲ್ಲನೆ ನಿರಂತರದಿ ॥**
**ಕುನರಗೀ ಸುಕಥಾಮೃತದ ಭೋ**
**ಜನದಸುಖ ದೊರಕುವುದೆ ಲಕುಮೀ**
**ಮನೋಹರನ ಸದ್ಗುಣವ ಕೀರ್ತಿಪ ಭಕ್ತಗಲ್ಲದೆಲೆ ॥ ೨೫ ॥**

ಪದ್ಯಾರ್ಥ :—ದಿನದಿನದಿ=ದಿನದಿನಕ್ಕೂ, ವರ್ಧಿಸುವ = ಕಳೆಹೆಚ್ಚುತ್ತಿರುವ, ಕುಮುದಾಪ್ತನ = ಚಂದ್ರನ, ಮಯೂಖದ = ಕಿರಣಗಳ, ಸೊಬಗನ್ನು, ಗತಲೋಚನ=ಕಣ್ಣಿಲ್ಲದವನು, ಅವಲೋಕಿಸಿ=ನೋಡಿ, ನಿರಂತರದಿ, ಮೋದಪಡಬಲ್ಲನೆ=ಸಂತೋಷ ಪಡಬಲ್ಲನೆ ? ಇದರಂತೆ, ಲಕುಮೀ ಮನೋಹರನ=ಲಕ್ಷ್ಮೀದೇವಿಯರ ಮನಸ್ಸನ್ನು ಅಪಹರಿಸುವ ರೂಪವುಳ್ಳ ಶ್ರೀ ಪರಮಾತ್ಮನ, ಸದ್ಗುಣವ=ಉತ್ತಮವಾದ (ಚರಿತ್ರೆಗಳನ್ನು) ಗುಣಗಳನ್ನು, ಕೀರ್ತಿಪ=ಕೊಂಡಾಡುತ್ತಿರುವ ಭಕ್ತಗಲ್ಲದೆ, ಕುನರಗೆ=ಹೀನಬುದ್ಧಿಯಿಂದ ಭಗವದ್ವೇಷ, ಭಕ್ತರದ್ವೇಷಾದಿಗಳನ್ನು ಬೆಳೆಸುತ್ತಿರುವ ಕುತ್ಸಿತಮನುಷ್ಯರಿಗೆ, ಈ ಸುಕಥಾಮೃತದ=ಈ ಉತ್ತಮವಾದ ಹರಿಕಥೆ ಎಂಬ ಅಮೃತ, ಭೋಜನದ ಸುಖ, ದೊರಕುವದೆ ? ಎಂದೂ ದೊರಕಲಾರದೆಂದರ್ಥ.

ತಾತ್ಪರ್ಯ :—ದಿನೇದಿನೇ ವೃದ್ಧಿಯಾಗುತ್ತಿರುವ ಚಂದ್ರಕಿರಣದ ಸೊಬಗನ್ನು ನೋಡಿ ಆನಂದ ಪಡಬೇಕಾದರೆ ಕಣ್ಣಿದ್ದವರಿಗೆ ಸಾಧ್ಯವೇ ಹೊರತು ಕುರುಡನಿಗೆ ಹೇಗೆ ಸಾಧ್ಯವಲ್ಲವೋ ಹಾಗೆ ಈ ಹರಿಕಥೆ ಎಂಬ ಉತ್ಕೃಷ್ಟವಾದ ಅಮೃತವನ್ನು ಪಾನಮಾಡಲು ಭಗವದ್ಭಕ್ತರಿಗಲ್ಲದೆ ಜ್ಞಾನ ಶೂನ್ಯನಾಗಿ ಭಗವದ್ವೇಷ, ಭಗವದ್ಭಕ್ತರ ದ್ವೇಷಗಳನ್ನು ಮಾಡುತ್ತಿರುವ ಕುತ್ಸಿತ ಮನುಷ್ಯನಿಗೆ ಈ ಸುಖವು ದೊರಕುವುದೆಂತು? ಎಂದಿಗೂ ಇಲ್ಲ.

ಅವತಾರಿಗೆ :—ನಾಡಿಗಳಲ್ಲಿ ಇಂದ್ರಾದಿ ದೇವತೆಗಳಿದ್ದು ಪರಮಾತ್ಮನನ್ನು ಉಪಾಸನೆ ಮಾಡುತ್ತಿರುವರೆಂದು ಹೇಳುತ್ತಾರೆ :—

**ಈತನುವಿನೊಳಗಿಹವು ಓತ**
**ಪ್ರೋತರೂಪದಿ ನಾಡಿಗಳು ಪುರು**
**ಹೂತ ಮುಖರಲ್ಲಿಹರು ತಮ್ಮಿಂದಧಿಕರೊಡಗೂಡಿ ॥**
**ಭೀತಿಗೊಳಿಸುತ ದಾನವರಸಂ**
**ಘಾ (ಧಾ) ತನಾಮಕ ಹರಿಯ ಗುಣಸಂ**
**ಪ್ರೀತಿಯಲಿ ಸದುಪಾಸನೆಯಗೈವುತಲೆ ಮೋದಿಪರು ॥೧೬॥**

ಪದ್ಯಾರ್ಥ :—ಈತನುವಿನೊಳಗೆ= ಈ ದೇಹದೊಳಗೆ, ಓತಪ್ರೋತರೂಪದಿ= ವಸ್ತ್ರದಲ್ಲಿ ಹೇಗೆ ಅಡ್ಡೆಳೆ, ಉದ್ದೆಳೆಹಾಕಿನೆಯ್ದಿರುವರೋ, ಹಾಗೆ ಅಡ್ಡವಾಗಿಯೂ, ಉದ್ದವಾಗಿಯೂ ಹಬ್ಬಿರುವ ಕವಲುಗಳುಳ್ಳದ್ದಾಗಿ (ಇಹವು) ಅಲ್ಲಿ,= ಆನಾಡಿಗಳಲ್ಲಿ, ಪುರಹೂತಮುಖರು= ಇಂದ್ರನೇ ಮೊದಲಾದವರು, ತಮ್ಮಿಂದಧಿಕರೊಡಗೂಡಿ= ತಮಗಿಂತಲೂ ಉತ್ತಮರಾದ ಗರುಡಶೇಷಾದಿಗಳಿಂದೊಡಗೂಡಿ, ದಾನವರ = ರಾಕ್ಷಸರನ್ನು, ಭೀತಿಗೊಳಿಸುತ = ಭಯಪಡಿಸುತ್ತಾ, ಸಂಘಾತನಾಮಕ= ಯಾರಿಗೂ ಗೋಚರನಾಗದೆ ಅಂತಃಪ್ರವಿಷ್ಟನಾಗಿರುವುದರಿಂದ ಸಂಘಾತನೆಂಬ ಹೆಸರುಳ್ಳ, ಅಥವಾ ' ಸಂಧಾತ ' ಎಂಬ ಪಾಠಾಂತರವು ಇರುವುದು. ಸಂಧಾತ ಎಂದರೆ ಎಲ್ಲರನ್ನೂ ಚನ್ನಾಗಿ ಪೋಷಿಸುವವನೆಂದರ್ಥ. ಇಂತಹ ಹೆಸರುಳ್ಳ, ಹರಿಯ, ಗುಣ= ಗುಣಗಳನ್ನು, ಸಂಪ್ರೀತಿಯಲಿ= ಪರಮಪ್ರೀತಿಯಿಂದ, ಸದುಪಾಸನೆಗೈವುತಲೆ= ಉತ್ತಮವಾದ ಉಪಾಸನೆಯನ್ನು ಮಾಡುತ್ತ, ಮೋದಿಪರು= ಆನಂದಪಡುತ್ತಿರುವರು.

ತಾತ್ಪರ್ಯ :—ನಾಡಿಗಳು ಈ ಶರೀರದಲ್ಲಿ ಧಾರಗಳನ್ನು ಅಡ್ಡೆಳೆ, ಉದ್ದೆಳೆ ಹಾಕಿ ವಸ್ತ್ರಗಳನ್ನು ನೇಯುವಂತೆ ಅಡ್ಡಕವಲುಗಳು ಉದ್ದ ಕವಲು

ಗಳು ಹೊರಟು ಒಂದಕ್ಕೊಂದು ಹೆಣೆದುಕೊಂಡಿರುವವು. ಆ ನಾಡಿಗಳಲ್ಲಿ ಇಂದ್ರಾದಿ ದೇವತೆಗಳು ತಮಗಿಂತಲೂ ಉತ್ತಮರಾದ ಗರುಡ, ಶೇಷ, ರುದ್ರರು, ಸೌಪರ್ಣೀ, ವಾರುಣೀ ಪಾರ್ವತೀ, ಸರಸ್ವತೀ, ಭಾರತೀ, ವಾಯು ದೇವರು, ಬ್ರಹ್ಮದೇವರು ಗಳಿಂದೊಡಗೂಡಿ ದೇಹದಲ್ಲಿರುವ ದೈತ್ಯ ರನ್ನು ಭಯಪಡಿಸುತ್ತಾ ಸಂಘಾತ, ಅಥವಾ ಸಂಧಾತ ಎಂಬ ಹೆಸರಿನಿಂದ, ಈ ದೇಹದೊಳಗಿರುವ ಪರಮಾತ್ಮನನ್ನು ಉಪಾಸನೆ ಮಾಡುತ್ತಾ ಆನಂದ ಪಡು ತ್ತಿರುವರು.

ಅವತಾರಿಕೆ :—ಜಲಚರ, ಭೂಚರ, ಖೇಚರಪ್ರಾಣಿಗಳಲ್ಲಿ ಭಗವಂತ ನಿದ್ದು ನಾನಾವಿಧ ಕಾರ್ಯಗಳನ್ನು ಮಾಡಿಸುವನೆಂದು ಹೇಳುತ್ತಾರೆ.

> ಜಲಟ ಕುಕ್ಕುಟ ಖೇಟ ಜೀವರ
> ಕಳೇವರಗಳೊಳಗಿದ್ದು ಕಾಣಿಸಿ
> ಕೊಳದೆ ತತ್ತದ್ರೂಪ ತನ್ನಾಮದಲಿ ಕರೆಸುತಲಿ॥
> ಜಲರುಹೇಕ್ಷಣ ವಿವಿಧ ಕರ್ಮ
> ಗಳ ನಿರಂತರದಿ ಮಾಡಿ ತತ್ತ
> ತ್ಫಲಗಳುಣ್ಣದೆ ಸಂಚರಿಸುವನು ನಿತ್ಯ ಸುಖಪೂರ್ಣ ॥೧೭॥

ಪದ್ಯಾರ್ಥ :—ಜಲಟ=ನೀರಿನಲ್ಲಿ ಸಂಚರಿಸುವ ಪ್ರಾಣಿಗಳು, ಕುಕ್ಕುಟ =ಭೂಮಿಯಲ್ಲಿ ಸಂಚರಿಸುವವು, ಖೇಟ = ಅಂತರಿಕ್ಷದಲ್ಲಿ ಸಂಚರಿಸುವ ಪ್ರಾಣಿಗಳು, ಹೀಗೆ ಮೂರುವಿಧ ಪ್ರಾಣಿಗಳ, ಕಳೇವರಗಳೊಳಗಿದ್ದು=ಶರೀರ ಗಳಲ್ಲಿದ್ದು, ಕಾಣಿಸಿಕೊಳದೆ = ಯಾರಿಗೂ ಗೋಚರಿಸದೆ, ತತ್ತದ್ರೂಪ = ಆಯಾರೂಪಗಳಿಂದಲೂ, ತನ್ನಾಮದಲಿ=ಆಯಾ ಹೆಸರುಗಳಿಂದಲೂ, ಕರೆಸು ತಲಿ=ಕರೆಸಿಕೊಳ್ಳುತ್ತ ಜಲರುಹೇಕ್ಷಣ=ಕಮಲಾಕ್ಷನು, ವಿವಿಧ ಕರ್ಮಗಳ= ನಾನಾವಿಧ ಕರ್ಮಗಳನ್ನು, ನಿರಂತರದಿ=ನಿತ್ಯದಲ್ಲಿ, ಮಾಡಿ, ತತ್ಫಲಗಳುಣದೆ =ಅವುಗಳ ಫಲಗಳನ್ನನುಭವಿಸದೆ, ನಿತ್ಯಸುಖಪೂರ್ಣ=ಶಾಶ್ವತವಾದ ಸುಖ ಪೂರ್ಣನಾದ ಶ್ರೀಹರಿಯು, ಸಂಚರಿಸುವನು.

ತಾತ್ಪರ್ಯ :—"ಅಟಗತೌ" ಯಂಬ ದಾತುವಿನಿಂದ, ಜಲಟ ಎಂ ದರೆ ನೀರಿನೊಳು ಸಂಚರಿಸುವ ಪ್ರಾಣಿಗಳೆಂದರ್ಥ. ಕುಕ್ಕುಟ ಅಂದರೆ ವಾಡಿಕೆಯಲ್ಲಿ ಕೋಳಿಗಳಿಗೆ ಹೆಸರಾದರೂ ಸಾಮಾನ್ಯವಾಗಿ ಭೂಮಿಯಲ್ಲಿ ಸಂಚರಿಸುವ ಎಲ್ಲಾ ಪ್ರಾಣಿಗಳನ್ನು ತೆಗೆದುಕೊಳ್ಳಬೇಕು. ಖೇಟ ಅಂದರೆ

ಅಂತರಿಕ್ಷ ಚಾರಿಗಳು. ಇಂತಹ ತ್ರಿವಿಧ ಪ್ರಾಣಿಗಳಲ್ಲಿಯೂ, ಇದ್ದು ಕಮಲ ನೇತ್ರನಾದ, ನಿತ್ಯಸುಖ ಪೂರ್ಣನಾದ ಶ್ರೀಹರಿಯು, ಆ ಪ್ರಾಣಿಗಳು ಮಾಡುವ ನಾನಾವಿಧ ಕರ್ಮಗಳನ್ನು ತಾನುಮಾಡಿ ಅವುಗಳ ಫಲವನ್ನು ಮಾತ್ರ ತಾನುಣ್ಣದೆ ಸುಖದಿಂದ ಸಂಚರಿಸುತ್ತಿರುವನು || ೧೭ ||

ಅವತಾರಿಕೆ :—ದಾಸರಾಯರು ಸಚ್ಛಿಷ್ಯರಿಗೆ ನೈಷ್ಕರ್ಮ್ಯಗಳು ಆಚರಿಸಬೇಕಾದ ಗುಟ್ಟಾದ ಮಾರ್ಗವನ್ನು ಉಪದೇಶಮಾಡುತ್ತಾರೆ :—

**ತಿಳಿದುಪಾಸನೆಗೈವುತೀ ಪರಿ**
**ಮಲಿನ ನಂತಿರು ದುರ್ಜನರ ಕಂ**
**ಗಳಿಗೆ ಗೋಚರಿಸದೆ ವಿಪಶ್ಚಿತರೊಡನೆ ಗರ್ವಿಸದೆ ||**
**ಮಳೆ ಬಿಸಲು ಹಶುತೃಷಿ ಜಯಾಜಯ**
**ಖಳರ ನಿಂದಾನಿಂದ್ಯ ಭಯಗಳಿ**
**ಗಳು ಕದಲೆ ಮದ್ದಾನೆಯಂದದಿ ಚರಿಸುಧರೆಯೊಳಗೆ || ೧೮ ||**

ಪದ್ಯಾರ್ಥ :—ಈಪರಿ ತಿಳಿದು, ಉಪಾಸನೆ ಗೈವುತ=ಉಪಾಸನೆಯನ್ನು ಮಾಡುತ್ತ ದುರ್ಜನರ ಕಂಗಳಿಗೆ ಗೋಚರಿಸದಲೆ=ಇವನು ಹೀಗೆ ಉಪಾಸನೆ ಮಾಡುವ ಯೋಗಿ ಯೆಂದು ತೋರಗೊಡಿಸದೆ, ವಿಪಶ್ಚಿತರೊಡನೆ= ಜ್ಞಾನಿಗಳ ಸನ್ನಿಧಾನದಲ್ಲಿ, ಗರ್ವಿಸದೆ=ನಾನು ಜ್ಞಾನಿಯೆಂದು ಗರ್ವವನ್ನು ಮಾಡದೆ, ಮಲಿನನಂತಿರು=ಜ್ಞಾನಶೂನ್ಯನಂತೆ ಕಾಣುತ್ತಿರು. ಮಳೆ, ಬಿಸಲು, ಹಶಿವು, ತೃಷಿ=ಬಾಯಾರಿಕೆ, ಜಯ ಅಪಜಯ, ಖಳರ=ಅಯೋಗ್ಯರ, ನಿಂದಾ =ದೂಷಣ, ಅನಿಂದಾ=ಭೂಷಣ, ಭಯ, ಇವುಗಳಿಗೆ, ಅಳುಕದಲೆ=ಭಯಪಡದೆ ಅಂದರೆ ದೂಷಣಾದಿಗಳಿಗೆ ಕೊರಗದೆ ಭೂಷಣಾದಿಗಳಿಗೆ ಹಿಗ್ಗದೆ, ಧರೆಯೊಳಗೆ=ಭೂಮಿಯಲ್ಲಿ, ಮದ್ದಾನೆಯಂದದಿ, ಚರಿಸು

ತಾತ್ಪರ್ಯ :—ಮೇಲಿನ ಪದ್ಯಗಳಲ್ಲಿ ಹೇಳಿದಂತೆ, ತಿಳಿದು ಉಪಾಸನೆ ಮಾಡುತ್ತ ನಿನ್ನ ಜ್ಞಾನವನ್ನು ದುಷ್ಟ ಜನರಿಗೆ (ತಮೋ ಯೋಗ್ಯರಿಗೆ) ತೋರ್ಪಡಿಸದೆ 'ಬುಧೋಬಾಲವತ್ಕ್ರೀಡೇತ್ಕುಶಲೋಜಡವಚ್ಚರೇತ್' ಎಂದು ಭಾಗವತದಲ್ಲಿ ಹೇಳಿದಂತೆ ಜ್ಞಾನಿಯಾದರೂ ಮಾನಾಪಮಾನಾದಿಗಳಿಗೆ ಹಿಗ್ಗಿ, ಕುಗ್ಗದೆ, ಹುಡುಗನಂತೆ ತೋರಿಸಿಕೊಳ್ಳಬೇಕು. ಎಂತಹ ಕುಶಲನಾದರೂ ಮಂದಮತಿ ಅಥವಾ ಹುಚ್ಚನಂತೆ ಕಾಣಿಸಿಕೊಳ್ಳಬೇಕು. ಯೋಗ್ಯರಾದ ಭಗವದ್ಭಕ್ತರೊಂದಿಗೆ ನೀನು ಶೇರಿದಾಗ ನಾನು ಜ್ಞಾನಿಯೆಂದು ಅಹಂಕಾರ

ಪಡದೆ ಅವರಲ್ಲಿ ವಿನಯದಿಂದಿರು. ಶೀತ, ಉಷ್ಣ, ಹಸಿವು, ಬಾಯಾರಿಕೆ, ಜಯ ಅಪಜಯ, ಅಯೋಗ್ಯರು ಮಾಡುವ ನಿಂದಾ, ಸ್ತುತಿ, ಅವರಿಂದಾಗುವ ಹೆದರಿಕೆ, ಇವುಗಳಿಗೆ ಕೊರಗದೆ, ಹಿಗ್ಗದೆ, 'ಏತರ ಭಯ ಶ್ರೀನಾಥನ ಪರಮಪ್ರೀತಿಯ ಪಡೆದವಗೆ| ಬಂಧು ಜನರು ತನಗೊಂಪಿದಾಕ್ಷಣ ಬಾದ ಭಾಗ್ಯವೇನೋ| ಹಿಂದೆಮುಂದೆ ತನ ನಿಂದಿಸಿ ನುಡಿಯಲು ಕುಂದಾದದ್ದೇನೋ || ಮಂದರಧರ ಗೋವಿಂದನ ಮಾನಸ ಮಂದಿರದೊಳು ತಂದಿಟ್ಟವಗಿನ್ಯಾತರ ಭಯ' ಎಂಬ ದಾಸರ ವರವಾಕ್ಯದಂತೆಯೂ, 'ಸುಖದುಃಖೇ ಸಮೇಕೃತ್ವಾ ಲಾಭಾಲಾಭೌಜಯಾಜಯೌ' ಎಂಬ ಗೀತಾ ವಾಕ್ಯದಂತೆಯೂ, ಮೇಲೆ ಹೇಳಿದ ದ್ವಂದ್ವವಾದ ಸುಖದುಃಖಗಳನ್ನು ಸಮವಾಗಿ ತಿಳಿದು ಮದಗಜವು ಹೇಗೆ ಒಬ್ಬರಿಗೆ ಹೆದರದೆ ಸ್ವೇಚ್ಛೆಯಿಂದ ವಿಹರಿಸುವುದೋ ಹಾಗೆ ಸಂಚರಿಸುತ್ತಿರು,

ಅವತಾರಿಕೆ :—ಸರ್ವತ್ರ ಉಪಾಸನೆ ಮಾಡುವ ಕ್ರಮವನ್ನು ವಿವರಿಸುತ್ತಾರೆ :—

> **ಕಾನನಗ್ರಾಮಸ್ಥ ಸರ್ವ**
> **ಪ್ರಾಣಿಗಳು ಪ್ರತಿದಿವಸದಲಿಯೇ**
> **ನೇನು ಮಾಡುವ ಕರ್ಮಗಳು ಹರಿಪೂಜೆಯೆಂದರಿದು ॥**
> **ಧೇನಿಸುತ ಸದ್ಭಕ್ತಿಯಲಿ ಪವ**
> **ಮಾನ ಮುಖ ದೇವಾಂತರಾತ್ಮಕ**
> **ಶ್ರೀನಿವಾಸನಿಗರ್ಪಿಸುತ ಮೋದಿಸುತ ನಲಿಯುತಿರು ॥೧೯॥**

ಪದ್ಯಾರ್ಥ :—ಕಾನನ=ಅಡವಿಯಲ್ಲಿ, ಗ್ರಾಮಸ್ಥ = ಗ್ರಾಮಗಳಲ್ಲಿ ವಾಸಮಾಡುವ, ಸರ್ವಪ್ರಾಣಿಗಳು ಪ್ರತಿದಿವಸವಲ್ಲಿ, ಏನೇನು ಮಾಡುವ ಕರ್ಮಗಳು=ಯಾವಯಾವ ಕಾರ್ಯಗಳನ್ನು ಮಾಡುತ್ತಿರುವುವೊ ಅವೆಲ್ಲಾ ಕಾರ್ಯಗಳು, ಹರಿಪೂಜೆಯೆಂದರಿತು, ಸದ್ಭಕ್ತಿಯಲಿ, ಧೇನಿಸುತ, ಪವಮಾನ ಮುಖ ದೇವಾಂತರಾತ್ಮಕ=ವಾಯುದೇವರು ಮೊದಲಾದ ದೇವತೆಗಳ ಅಂತರಾತ್ಮನಾದ, ಶ್ರೀನಿವಾಸನಿಗರ್ಪಿಸುತ, ಮೋದಿಸುತ=ಸಂತೋಷಪಡುತ್ತ ನಲಿಯುತಿರು=ನರ್ತನಾದಿಗಳನ್ನು ಮಾಡುತ್ತಿರು.

ತಾತ್ಪರ್ಯ :—ಅರಣ್ಯಗಳಲ್ಲಿರುವ ಹುಲಿ, ಸಿಂಹ ಮೊದಲಾದ ಪ್ರಾಣಿ

ಗಳು, ಗ್ರಾಮಸ್ಥವಾದ ಶ್ವಾನಸೂಕರ ಗೋವುಮೊದಲಾದವು ಆಯಾ ಪ್ರಾಣಿಗಳ ಯೋಗ್ಯತಾನುಸಾರ ಹಿಂಸಾದಿಗಳೋ, ಉಪಕಾರಗಳೋ, ಅವವು ಏನೇನು ಕಾರ್ಯಗಳನ್ನು ಮಾಡುತ್ತಿರುವವೋ ಅವುಗಳನ್ನು ನೋಡಿದಾಗ. ಆಯಾ ಪ್ರಾಣಿಗಳಲ್ಲಿ ಪರಮಾತ್ಮನೇ ಆಯಾ ರೂಪಗಳಿಂದಿದ್ದು ಆಯಾ ಕಾರ್ಯಗಳನ್ನು ಮಾಡುತ್ತಿರುವನೆಂದು ಭಾವಿಸಿ ಅಲ್ಲಲ್ಲಿ ಭಗವದ್ರೂಪಗಳನ್ನು ಚಿಂತಿಸುವುದೇ ಹರಿಪೂಜೆಯೆಂದು ತಿಳಿದು ಸರ್ವತ್ರ ಪರಮಾತ್ಮನನ್ನು ಉತ್ತಮ ಭಕ್ತಿಯಿಂದ ಧ್ಯಾನಿಸುತ್ತಾ ವಾಯುದೇವರು ಮೊದಲಾದ ದೇವತೆಗಳ ಅಂತರ್ಯಾಮಿಯಾದ ಶ್ರೀಲಕ್ಷ್ಮೀಪತಿಗೆ ಮೇಲೆ ಹೇಳಿದಂತೆ ಚಿಂತನೆರೂಪವಾದ ಪೂಜೆಯನ್ನೂ ಸಹ ಸಮರ್ಪಿಸುತ್ತಾ ಆನಂದದಿಂದ ಕುಣಿಯುತ್ತಿರು. ಗುರು ಪರಂಪರಾ ಪ್ರಾಪ್ತವಾದ ಪರಮ ರಹಸ್ಯವಾದ ಉಪಾಸನಾ ಮಾರ್ಗವನ್ನು ಉಪದೇಶ ಮಾಡಿರುವರೆಂದು ತಿಳಿಯಬೇಕು.

ಮೇಲೆ ಹೇಳಿದಂತೆ ಉಪಾಸನೆ ಮಾಡುವುದರಿಂದಾಗುವ ಫಲವನ್ನು ಹೇಳುತ್ತಾರೆ.

**ನೋಕನೀಯನು ಲೋಕದೊಳು ಶುನಿ**
**ಸೂಕರಾದಿಗಳೊಳಗೆ ನೆಲಸಿ**
**ದ್ಯೇಕ ಮೇವಾದ್ವಿತೀಯ ಬಹು ರೂಪಾಹ್ವಯಗಳಿಂದ ॥**
**ಹಾಕರಿಸು ತೊಳಗಿದ್ದು ತಿಳಿಸದೆ**
**ಶ್ರೀಕಮಲಭವ ಮುಖ್ಯ ಸಕಲದಿ**
**ವೌಕಸ ಗಣಾರಾಧ್ಯ ಕೈಕೊಂಡನುದಿನದಿ ಪೊರೆವ ॥ ೨೦ ॥**

ಪದ್ಯಾರ್ಥ:—ನೋಕನೀಯನು=ಸಣ್ಣವನಲ್ಲದವನು (ಯಾವಾಗಲೂ ಲೋಕದಲ್ಲಿ ಮೊಟ್ಟಮೊದಲು, ಹುಟ್ಟಿದ ಬ್ರಹ್ಮಾದಿಗಳಿಗೂ ತಂದೆಯಾದುದರಿಂದ ಎಲ್ಲರಿಗಿಂತಲೂ ದೊಡ್ಡವನೆಂದರ್ಥ) ಲೋಕದೊಳು, ಶುನಿ=ನಾಯಿ ಸೂಕರಾದಿಗಳೊಳಗೆ=ಹಂದಿ ಮೊದಲಾದವುಗಳಲ್ಲಿ, ನೆಲಸಿದ್ದು, ಏಕಮೇವಾದ್ವಿತೀಯ=ಯಾವಾಗಲೂ ಸರ್ವೋತ್ತಮನಾಗಿಯೂ, ಸರ್ವ ಸ್ವತಂತ್ರನಾಗಿಯೂ ಇರುವವನೊಬ್ಬನೇ ಆದುದರಿಂದ 'ಏಕಮೇವ' ಬ್ರಹ್ಮ ಎಂಬ ವಸ್ತು ಒಂದೆ ಎಂಬ ಹೆಸರು ಪಡೆದವನು. ಅದ್ವಿತೀಯನೆಂದರೆ ಸಮನಿಯಿಲ್ಲ ಎಂದರ್ಥ. ಅಥವಾ 'ಅದ್ವಿತೀಯಂ ವಸ್ತು ಏಕಮೇವ' ಲೋಕದಲ್ಲಿ ಅನೇ

ಕಜೀವರಾಶಿಗಳಿದ್ದರೂ ಸಮರಿಲ್ಲದ ಸರ್ವೋತ್ತಮ ವಸ್ತು 'ಬ್ರಹ್ಮ' ಎಂಬ ಹೆಸರುಳ್ಳ ಒಂದೇ ವಸ್ತು ಎಂದರ್ಥ. ಇಂತಹ ಸ್ವಾಮಿಯು, ಬಹು ರೂಪಾತ್ಮಯು, ಮತ್ಸ್ಯ ಕೂರ್ಮ ರಾಮಕೃಷ್ಣಾದಿ ಬಹು ರೂಪಗಳನ್ನು ಧರಿಸಿ ಬಹು ಹೆಸರುಗಳಿಂದ ತಾ ಕರೆಸುತ, ಒಳಗಿದ್ದು, ಎಲ್ಲಾ ಪ್ರಾಣಿಗಳ ಹೆಸರಿನಿಂದ ಎಲ್ಲಾ ಪ್ರಾಣಿಗಳಲ್ಲಿದ್ದು, ತಿಳಿಸದೆ=ಯಾರಿಗೂ ತೋರ್ಪಡಿಸಿಕೊಳ್ಳದೆ, ಶ್ರೀ ಲಕ್ಷ್ಮೀದೇವಿಯರು, ಕಮಲಭವ=ಬ್ರಹ್ಮದೇವರು, ಮೊದಲಾದ ಸಮಸ್ತ ದೇವತಾಗಣಗಳಿಂದ ಆರಾಧ್ಯನಾದ ಶ್ರೀ ಹರಿಯು, ಕೈಕೊಂಡು, ಅನುದಿನದಿ =ಪ್ರತಿ ದಿವಸದಲ್ಲಿಯೂ, ಪೊರೆವ=ರಕ್ಷಿಸುವನು.

ತಾತ್ಪರ್ಯ :—ಕನೀಯನು ಅಂದರೆ ಸಣ್ಣವನೆಂದರ್ಥ. ನೋಕನೀಯನೆಂದರೆ ಅಲ್ಲದವನು. ಪ್ರಪಂಚದಲ್ಲಿ ಎಲ್ಲರಿಗಿಂತಲೂ ದೊಡ್ಡವನೆಂಬ ತಾತ್ಪರ್ಯ. ಅದ್ವಿತೀಯನೆಂದರೆ ಸಮವಿಲ್ಲದವನೆಂದರ್ಥ. ಇಂತಹ ಗುಣಗಳುಳ್ಳ ವಸ್ತು ಒಂದೇ ಇರುವದೇ ಹೊರತು ಎರಡಿಲ್ಲ. ಆ ವಸ್ತುವೇ ಪರಬ್ರಹ್ಮ. ಆ ಪರಬ್ರಹ್ಮನೇ ನಾರಾಯಣನೆಂದು ತಿಳಿಯಬೇಕು. ಅದಕ್ಕೆ ಆಧಾರವೇನೆಂದರೆ, ' ಬ್ರಹ್ಮವಿದಾಪ್ನೋತಿಪರಂ ' ಎಂಬ ಶ್ರುತಿಯಿಂದ ಬ್ರಹ್ಮನನ್ನು ತಿಳಿದವನು ಪರನನ್ನು ಹೊಂದುವನು ಬ್ರಹ್ಮನನ್ನು ತಿಳಿದವನು ಮತ್ತೊಬ್ಬನನ್ನು ಹೊಂದುವನು ಎಂಬ ವಚನವು ಕೂಡುವುದಿಲ್ಲ. ಆದ್ದರಿಂದ ಬ್ರಹ್ಮನ ಸ್ವರೂಪವನ್ನು ತಿಳಿದವನು ಬ್ರಹ್ಮನನ್ನು ಹೊಂದುವನೆಂದು ಹೇಳಬೇಕಾಗಿತ್ತು. ಪರನನ್ನು ಹೊಂದುತ್ತಾನೆಂದು ಹೇಳಿದ್ದರಿಂದ ಬ್ರಹ್ಮನೇ ಪರನು ಎಂದು ಹೇಳಿದಂತಾಯಿತು. ಇದಲ್ಲದೆ ಬ್ರಹ್ಮನೆಂತಲೂ ಪರನೆಂತಲೂ ಶ್ರೀ ನಾರಾಯಣನಿಗೆ ಹೆಸರೆಂದು ಸ್ಪಷ್ಟವಾಗಿ ಭಾಗವತ ಪ್ರಥಮಸ್ಕಂಧದ ಮೊದಲನೆಯ ಶ್ಲೋಕದ ವಿಜಯಧ್ವಜೀಯದಲ್ಲಿ ' ಯದೇತತ್ಪರ ಬ್ರಹ್ಮ ವೇದವಾದೇಷು ಪಠ್ಯತೇ || ಸಏವಃ ಪುಂಡರೀಕಾಕ್ಷಃ ಸ್ವಯಂ ನಾರಾಯಣಃ ಪರಃ || ' ವೇದಾದಿಗಳಲ್ಲಿ ಅಲ್ಲಲ್ಲಿ ಪರಬ್ರಹ್ಮನೆಂದು ಯಾವ ವಸ್ತುವನ್ನು ಹೇಳುತ್ತಿರುವವೋ ಅದೇ ಪರಬ್ರಹ್ಮನೇ ಕಮಲನೇತ್ರನಾದ ಪರಶಬ್ದವಾಚ್ಯನಾದ ಶ್ರೀನಾರಾಯಣನು ಎಂದು ಸ್ಪಷ್ಟಮಾಡಿರುವರು. ಅದೇ ಪ್ರಥಮಸ್ಕಂಧದಲ್ಲಿ, ಬ್ರಹ್ಮೇತಿ ಪರಮಾತ್ಮೇತಿ ಭಗವಾನಿತಿ ಶಬ್ದ್ಯತೆ' ಎಂದು ಹೇಳಿದ ವಾಕ್ಯಗಳಿಂದಲೂ ಪರಬ್ರಹ್ಮನೇ ನಾರಾಯಣನೆಂದು ಸ್ಪಷ್ಟವಾಗು

ವದು. ಮತ್ತು ಭಾಗವತ ಏಕಾದಶಸ್ಕಂಧ ೨ ನೆಯ ಅಧ್ಯಾಯ ೪೨ ನೆಯ ಶ್ಲೋಕದ ತಾತ್ಪರ್ಯದಲ್ಲಿ.

ಪೂರ್ಣತ್ವಾದಾತ್ಮ ಶಬ್ದೋಕ್ತಃ ಕಶ್ಚಿತ್ಸರ್ವ ಸದೋತ್ತಮಃ || ಸೋಪಿನಾರಾಯಣೋನಾನ್ಯಃ ಸದಾಸರ್ವೇಷು ಸಂಸ್ಥಿತಃ || ತದ್ವಶಾಇತರೇ ಸರ್ವೇಶ್ರೀ ಬ್ರಹ್ಮೇಶ ಪುರಸ್ಸರಾಃ || ಪೂರ್ಣನಾದುದರಿಂದ ಆತ್ಮನೆಂಬ ಹೆಸರು. ಅವನೇ ನಾರಾಯಣನೇ ಹೊರತು ಮತ್ತಾರೂ ಇಲ್ಲ. ಅವನೇ ಸರ್ವವ್ಯಾಪ್ತನಾಗಿರುವನು. ಶ್ರೀಲಕ್ಷ್ಮೀ ಬ್ರಹ್ಮವಾಯು ಈಶ್ವರ ಮೊದಲಾದವರು ಅವನ ವಶದಲ್ಲಿರುವರು ಎಂದು ಹೇಳಿರುವರು. ಇತ್ಯಾದಿ ಅನೇಕ ಪ್ರಮಾಣಗಳಿಂದ ಜೀವನ ವ್ಯತಿರಿಕ್ತ ಪರಮಾತ್ಮನೊಬ್ಬನೇ ಸರ್ವೋತ್ತಮನು. ಜೀವನಿಗೂ ಪರಮಾತ್ಮನಿಗೂ ವೈಲಕ್ಷಣ್ಯವಿರುವುದರಿಂದ ಏಕಮೇವಾ ದ್ವಿತೀಯಂ ಎಂಬ ಪದವು ಜೀವರು ಬೇರೆ ಇಲ್ಲ ಪರಮಾತ್ಮನೊಬ್ಬನೇ ಎಂಬ ಅದ್ವೈತ ಸಾಧನವು ಎಂದು ಭಾವಿಸಬಾರದು. ಜೀವರು ಬೇರೆ ಇದ್ದೇ ಇರುವರು. ಪರಮಾತ್ಮನ ರೂಪಗಳಲ್ಲಿ ಪರಸ್ಪರ ಭೇದವಿಲ್ಲ. ಸರ್ವತಂತ್ರ ಸ್ವತಂತ್ರನಾಗಿ ಸಮರಹಿತನಾಗಿರುವವನು ಪರಮಾತ್ಮನೊಬ್ಬನೇ ಎಂಬ ತಾತ್ಪರ್ಯ. ಇಂತಹಾ ಸ್ವಾಮಿಯು ಒಬ್ಬನೇ ಆದರೂ ಅನಂತಾನಂತ ರೂಪಗಳಿಂದ ಸರ್ವತ್ರವಾಸವಾಗಿರುತ್ತ ಬಹು ರೂಪಗಳಿಂದ ಬಹು ನಾಮಗಳನ್ನು ಪಡೆದಿರುವನು. ಶ್ವಾನ ಸೂಕರಾದಿ ಪ್ರಾಣಿಗಳಲ್ಲಿ ತತ್ತದಾಕಾರನಾಗಿದ್ದರೂ, ಯಾರಿಗೂ ತೋರಿಸಿಕೊಳ್ಳದೆ ಇರುವನು. ನಾವು ಮಾಡುವ ಪೂಜಾಧ್ಯಾನಾದಿಗಳನ್ನು ರಮಾಬ್ರಹ್ಮಾದಿ ವಂದ್ಯನಾದ ಶ್ರೀಹರಿಯು, ಸ್ವೀಕರಿಸಿ ನಿತ್ಯದಲ್ಲಿಯೂ ಸಂರಕ್ಷಿಸುವನು.

ಅವತಾರಿಕೆ :—ಹೀಗೆ ತಿಳಿದು ಉಪಾಸನೆ ಮಾಡುವವರೇನು ಮಾಡಿದರೂ ಅವೆಲ್ಲವೂ ಹರಿಪೂಜೆಯೆಂಬ ವಿಷಯದಲ್ಲಿ ದಾರ್ಢ್ಯವು ಹುಟ್ಟುವುದಕ್ಕಾಗಿ ಶಪಥಮಾಡಿ ಹೇಳುತ್ತಾರೆ :—

**ಇನಿತುಪಾಸನೆಗೈವುತಿಹ ಸ**
**ಜ್ಜನರು ಸಂಸಾರದಲಿ ಪ್ರತಿಪ್ರತಿ**
**ದಿನಗಳಲಿ ಏನೇನು ಮಾಡುವದೆಲ್ಲ ಹರಿಪೂಜೆ ||**

**ಎನಿಸಿಕೊಂಬವು ಸತ್ಯವೀಮಾ**
**ತಿಸಲಿ ಸಂಶಯಬಡುವ ನರನ**
**ಲ್ಪನು ಸುನಿಶ್ಚಯು ಬಾಹ್ಯ ಕರ್ಮವ ಮಾಡಿ ಫಲವೇನು ॥೨೧॥**

ಪದ್ಯಾರ್ಥ :—ಇನಿತು=ಈ ಪ್ರಕಾರವಾಗಿ, ಉಪಾಸನೆಗೈವುತಿಹ = ಉಪಾಸನೆ ಮಾಡುತ್ತಿರುವ, ಸಜ್ಜನರು, ಸಂಸಾರದಲಿ, ಪ್ರತಿಪ್ರತಿದಿನಗಳಲಿ =ಪ್ರತಿಒಂದು ದಿವಸದಲ್ಲಿ, ಏನೇನು ಮಾಡುವದೆಲ್ಲ=ಯಾವಯಾವ ಕಾರ್ಯಗ ಳನ್ನು ಮಾಡುವರೋ, ಅವೆಲ್ಲವು, ಹರಿಪೂಜೆ, ಎನಿಸಿಕೊಂಬವು, ಸತ್ಯ, ಈ ಮಾತಿಸಲಿ, ಸಂಶಯ ಬಡುವನರನು, ಅಲ್ಪನು. ಸುನಿಶ್ಚಯು ಬಾಹ್ಯಕರ್ಮವ ಮಾಡಿ ಫಲವೇನು.

ತಾತ್ಪರ್ಯ :—ಈ ಪ್ರಕಾರ ಮೇಲೆ ಹೇಳಿದ ರೀತಿಯಿಂದ ಉಪಾಸನೆ ಮಾಡುತ್ತಿರುವ ಸಜ್ಜನರು ಪ್ರತಿದಿವಸದಲ್ಲಿ ಏನೇನು ಕಾರ್ಯವನ್ನು ಮಾಡಲಿ, ಅವೆಲ್ಲವೂ ಹರಿಯ ಪೂಜೆಯೆಂದೆನಿಸಿಕೊಳ್ಳುವವು. ಇದು ಸತ್ಯವೆಂದು ತಿಳಿ ಯಿರಿ. ಈ ವಿಷಯದಲ್ಲಿ ಸ್ವಲ್ಪವಾದರೂ ಸಂಶಯ ಪಡಬೇಡಿ. ಹಾಗೆ ಸಂಶಯ ಪಡುವವನು, ಬಹಳ ಅಲ್ಪ ಮನುಷ್ಯನು. ಇದು ನಿಶ್ಚಯ. ಹೀಗೆ ಉಪಾಸನೆಮಾಡುವ ಕ್ರಮವನ್ನರಿಯದವನು ಬಾಹ್ಯಪೂಜೆ ಅಂದರೆ ಪ್ರತಿಮಾಗಳನ್ನಿಟ್ಟುಕೊಂಡು ಆಡಂಬರ ಪೂಜೆಯನ್ನು ಮಾಡಿದ್ದರಿಂದ ಫಲ ವೇನು ? ಆ ಪೂಜೆಯು ಜನಮೆಚ್ಚುವುದಕ್ಕೆ ಆಗುವದೇ ಹೊರತು ಭಗವಂ ತನನ್ನು ಮೆಚ್ಚಿಸಲು ಆಗುವುದಿಲ್ಲ ಎಂದು ದಾಸರಾಯರು ಶಾಪಪೂರ್ವಕವಾಗಿ ಆಪ್ತಶಿಷ್ಯ ಜನರಿಗಾಗಿ ಈ ಬೋಧನಾಮಾಡಿರುವರೆಂದು ತಿಳಿಯಬೇಕು.

ಅವತಾರಿಕೆ :—ಮುಕ್ತಿಯೋಗ್ಯರಲ್ಲಿಯೂ ತಮೋಯೋಗ್ಯರಲ್ಲಿಯೂ ಪರಮಾತ್ಮನೇ ಇದ್ದು ಭಕ್ತಿ ದ್ವೇಷಾದಿಗಳನ್ನು ಮಾಡಿಸುವನೆಂದು ಹೇಳು ತ್ತಾರೆ.

**ಭೋಗ್ಯ ಭೋಕ್ತೃಗಳೊಳಗೆ ಹರಿತಾ ಭೋಗ್ಯ**
**ಭೋಕ್ತನು ಎನಿಸಿ ।**
**ಯೋಗ್ಯಾಯೋಗ್ಯ ರಸಗಳ ದೇವದಾನವ ಗಣಕೆ ಉಣಿಸುವನ ॥**
**ಭಾಗ್ಯನಿಧಿ ಭಕ್ತರಿಗೆ ಸದ್ವೈ**
**ರಾಗ್ಯ ಭಕ್ತಿಜ್ಞಾನವೀವಾ**
**ಯೋಗ್ಯರಿಗೆ ದ್ವೇಷಾದಿಗಳ ತನ್ನಲ್ಲಿ ಕೊಡುತಿಪ್ಪ ॥ ೨೨ ॥**

ಪದ್ಯಾರ್ಥ :—ಭೋಗ್ಯ ಭೋಕ್ತೃಗಳೊಳಗೆ=ಭೋಗಿಸಲು ಯೋಗ್ಯವಾದ ವಸ್ತುಗಳೊಳಗೂ, ಭೋಗವನ್ನನುಭವಿಸುವವರ ಒಳಗೂ, ಹರಿಯು, ತಾ=ತಾನು, ಭೋಗ್ಯಭೋಕ್ತನು, ಎನಿಸಿ, ಯೋಗ್ಯಾಯೋಗ್ಯ ರಸಗಳ= ಭೋಗಿಸಲು ಯೋಗ್ಯವಾದ ವಸ್ತುಗಳ ರಸಗಳನ್ನು, ಅಯೋಗ್ಯವಾದ ರಸಗಳನ್ನೂ, ದೇವದಾನವಗಣಕೆ=ದೇವತಾ ಗಣಗಳಿಗೂ, ದೈತ್ಯಗಣಗಳಿಗೂ, ಅವರವರಿಗೆ ಬೇರೆಬೇರೆ ಉಣಿಸುವನು. ಭಾಗ್ಯನಿಧಿ=ಭಕ್ತಿವೈರಾಗ್ಯವೆಂಬ ಭಾಗ್ಯ ಉಳ್ಳ ಸಜ್ಜನರಿಗೆ ನಿಧಿಯಂತಿರುವ ಶ್ರೀಹರಿಯು, ಭಕ್ತರಿಗೆ, ಸದ್ವೈರಾಗ್ಯ, ಭಕ್ತಿ, ಜ್ಞಾನವ, ಈವ=ಕೊಡುವ, ಅಯೋಗ್ಯರಿಗೆ, ತನ್ನಲ್ಲಿ, ದ್ವೇಷಾದಿಗಳ =ದ್ವೇಷಾದಿಗಳನ್ನು ಕೊಡುತಿಪ್ಪ

ತಾತ್ಪರ್ಯ :—ಲೋಕದಲ್ಲಿ ಬೇಕಾದ ಭೋಗಗಳನ್ನು ಅನುಭವಿಸುವದಕ್ಕೆ ದುಷ್ಟನಾದ ಪದಾರ್ಥಗಳು, ಉತ್ತಮ ಪದಾರ್ಥಗಳು, ಅನೇಕವಾಗಿರುವವು. ಭೋಜನ ಪದಾರ್ಥಗಳಲ್ಲಿ ಗೋಧಿ, ಅಕ್ಕಿ, ಬಾಳೆ, ಹಲಸು, ಸುವರ್ಣ ಮೊದಲಾದ ಗಡ್ಡೆಗಳು, ಇವುಗಳು ಸಾತ್ವಿಕಾಹಾರವೆಂತಲೂ, ಹೀರೇಕಾಯಿ, ಪಡವಳಕಾಯಿ, ಕಡ್ಲೆ, ತೊಗರಿ ಮೊದಲಾದವು ರಾಜಸವೆಂತಲೂ, ಬದನೇಕಾಯಿ, ಈರುಳ್ಳಿ ಮೊದಲಾದವು, ತಂಗಳು ಮೊದಲಾದವು ತಾಮಸವೆಂತಲೂ ಧರ್ಮಶಾಸ್ತ್ರಗಳಲ್ಲಿ ಹೇಳಿರುವರು. ಇದರ ವಿಸ್ತಾರವನ್ನು, ವರಾಹ ಪುರಾಣ ಚಾತುರ್ಮಾಸ್ಯ ಮಾಹಾತ್ಮ್ಯ, ಸ್ಮೃತ್ಯರ್ಥ ಸಾಗರವೆಂಬ, ಛಲಾರಿ ಆಚಾರ್ಯಕೃತ ಧರ್ಮಶಾಸ್ತ್ರ ಮೊದಲಾದವುಗಳಲ್ಲಿ ನೋಡತಕ್ಕದ್ದು. ಈ ಮೂರುವಿಧ ಪದಾರ್ಥಗಳು ಎಲ್ಲರಿಗೂ ರುಚಿಸುವದಿಲ್ಲ. ಆದ್ದರಿಂದಲೆ ‘ ಲೋಕೋ ಭಿನ್ನರುಚಿಃ ’ ಎಂದು ಹೇಳಿರುವರು. ಮುಖ್ಯವಾಗಿ ಸಾತ್ವಿಕರಿಗೆ ಸಾತ್ವಿಕ ಪದಾರ್ಥವೂ, ರಾಜಸರಿಗೆ ರಾಜಸ ಪದಾರ್ಥವೂ, ತಾಮಸರಿಗೆ ತಾಮಸ ಪದಾರ್ಥವೂ ರುಚಿಸುವುದು. ಶ್ರೀಹರಿಯು ತ್ರಿಗುಣರಹಿತನೇ ಆದರೂ ಈ ಮೂರು ವಿಧವಾದ ಪದಾರ್ಥಗಳಲ್ಲಿಯೂ ತದ್ರೂಪ ತದಾಕಾರನಾಗಿ, ನಿರ್ಲಿಪ್ತನಾಗಿ ಇರುವನು. ಸಾತ್ವಿಕ ರಾಜಸ ತಾಮಸ ಜನರಲ್ಲಿಯೂ ಇದ್ದು ಆ ರಸಗಳನ್ನು ಅಂದರೆ ಅವುಗಳ ರುಚಿಯನ್ನು ಆಯಾಜೀವರಿಗೆ ಕೊಡಿಸುವನು. ಭೋಗ್ಯವಸ್ತು ಅಂದರೆ ಬರಿ ಭೋಜನಮಾಡುವ ವಸ್ತುಗಳೇ ಅಲ್ಲ. ಉಡುವುದು, ತೊಡುವುದು, ಭೂಷಣಾದಿಗಳನ್ನು ಧರಿಸುವುದು. ಸ್ತ್ರೀಯಾದಿ ಭೋಗಗಳು ಎಲ್ಲವೂ ಬಂದಂತಾಯಿತು. ವೇಷ ಭೂಷಣಾದಿಗಳು,

ಉಡುವದು, ಮೊದಲಾದ ಒಂದೊಂದರಲ್ಲಿಯೂ ಒಂದೇ ಕುಲ, ಒಂದೇ ಮತದಲ್ಲಿ ಹುಟ್ಟಿದವರಲ್ಲಿಯೂ ಈಗಿನ ಕಾಲದಲ್ಲಿ ಎಷ್ಟು ಭೇದಗಳಾಗಿ ರುಚಿಸುವುದೆಂಬುದು ವಾಚಕರ ಮನಸ್ಸಿಗೆ ಬರದೇ ಇರಲಿಕ್ಕಿಲ್ಲ. ಉದಾಹರಣಕ್ಕಾಗಿ ಕೆಲವು ಮಾತ್ರ ಸೂಚಿಸಲ್ಪಡುತ್ತವೆ. ವೇಷಗಳಲ್ಲಿ ಪೂರ್ವಕಾಲದ ಬ್ರಾಹ್ಮಣವೇಷವೆಂದರೆ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಮತಗಳಲ್ಲಿ ಹುಟ್ಟಿದವರು ಆಯಾ ಮತದ ಚಿಹ್ನೆಗಳನ್ನು ಧರಿಸಿಕೊಂಡು, ಅವರನ್ನು ನೋಡುವಾಗಲೇ ಅವರವರ ಮತವನ್ನು ಚೆನ್ನಾಗಿ ತೋರಿಸಿ ಕೊಡುತ್ತಿದ್ದಿತು. ವೈಷ್ಣವರು-ಮಾಧ್ವರು ಊರ್ಧ್ವ ಪುಂಡ್ರಗಳನ್ನು ಧರಿಸಿ ಗಂಧ, ಅಂಗಾರ, ಅಕ್ಷತೆಗಳನ್ನು ಧರಿಸಿಕೊಂಡು, ೧೨ ಮೊಳಗಳುಳ್ಳ ಧೋತ್ರಗಳನ್ನುಟ್ಟು ಅಂತಹಾ ಧೋತ್ರವನ್ನೇ ಹೊದ್ದುಕೊಂಡು ನೋಡುವಾಗಲೆ ಇವರು ಮಾಧ್ವಆಚಾರ್ಯರೆಂತ ಕಾಣಿಸಿಕೊಳ್ಳುತ್ತಿದ್ದರು. ರಾಯರುಗಳು ಮಾತ್ರ ವೇಷಗಳಲ್ಲಿ ವ್ಯತ್ಯಾಸವಿಲ್ಲದೆ ತಲೆಗೆ ಪೇಟಾ ಸುತ್ತಿಕೊಂಡು ಬಗಲುಬಂದಿ ಅಂಗಿಯನ್ನು ತೊಟ್ಟುಕೊಳ್ಳುತ್ತಿದ್ದರು. ಸ್ಮಾರ್ತರು ವಿಭೂತಿಗಳನ್ನು ರುದ್ರಾಕ್ಷಿಗಳನ್ನು ಧರಿಸುತ್ತಿದ್ದರು. ಶ್ರೀವೈಷ್ಣವರು, ತ್ರಿನಾಮಗಳನ್ನು ಚೆನ್ನಾಗಿ ಧರಿಸುತ್ತಿದ್ದರು. ಈಗ ಈ ಮೂರು ಮತದವರ ಭೇದಗಳನ್ನು ಕಾಣಬೇಕಾದರೆ ನೀವು ಬ್ರಾಹ್ಮಣರೇ ಎಂದು ಮೊದಲನೆಯ ಪ್ರಶ್ನೆ ಮಾಡಬೇಕಾಗಿದೆ. ನಂತರ ಯಾವ ಮತದವರು ಎಂದು ಕೇಳಿ ತಿಳಿದುಕೊಳ್ಳಬೇಕಾಗುವುದು. ಅದಂತಿರಲಿ! ಪ್ರಕೃತ ಆಯಾವೇಷ ಭೂಷಣಗಳು ಅವರವರಿಗೆ ರುಚಿಸದಿದ್ದರೆ ಅವರು ಆ ವೇಷಗಳನ್ನು ಧರಿಸುತ್ತಿದ್ದರೆ? ಇಲ್ಲ! ಆದ್ದರಿಂದ ಇಂತಹವೆಲ್ಲವು ಭೋಗ್ಯವಸ್ತುಗಳೆ. ಎಲ್ಲ ವಸ್ತುಗಳಲ್ಲಿಯೂ ಪರಮಾತ್ಮನು ತದ್ರೂಪ ತದಾಕಾರನಾಗಿದ್ದು ಅವುಗಳನ್ನು ಧರಿಸಲು ಯೋಗ್ಯರು ಯಾರೋ ಅವರಲ್ಲಿ ಪರಮಾತ್ಮನು ತದಾಕಾರನಾಗಿದ್ದು ಆಯಾ ವಸ್ತುಗಳಲ್ಲಿ ಆಯಾ ಜನರ ಯೋಗ್ಯತಾನುಸಾರ ರುಚಿ ಹುಟ್ಟಿಸಿ ಅವುಗಳನ್ನು ಭೋಗಿಸುವಂತೆ ಮಾಡಿ ಆಯಾ ಫಲವನ್ನು ಅವರಿಗೆ ಉಣಿಸುವನು. ಮತ್ತು, ಭಾಗವತ ಏಕಾದಶಸ್ಕಂಧ ತಾತ್ಪರ್ಯದಲ್ಲಿ 'ಸಏವತು ಸ್ವಭಕ್ತೇಷು ಸ್ಥಿತ್ವಾನು ಗ್ರಹಕಾರಕಃ || ಅಜ್ಞೇಷ್ವಜ್ಞಾನ ಯಂತಾಚ ದ್ವಿಷತ್ಸು ದ್ವೇಷಕಾರಕಃ' ಅದೇ ಪರಮಾತ್ಮನೇ ಭಕ್ತರಲ್ಲಿದ್ದು ಅನುಗ್ರಹ ಮಾಡುವನು. ಅಜ್ಞಾನಿಗಳಲ್ಲಿದ್ದು ಅಜ್ಞಾನವನ್ನು ವೃದ್ಧಿಮಾಡಿಸುವನು. ದ್ವೇಷಿಗಳಲ್ಲಿದ್ದು ತನ್ನಲ್ಲಿ ದ್ವೇಷವನ್ನು ಹುಟ್ಟಿಸುವನು; ಎಂದು ಹೇ

ಳಿರುವರು, ಅದೇ ಅಭಿಪ್ರಾಯವನ್ನೇ ಇಲ್ಲಿ ಹೇಳಿರುತ್ತಾರೆ :—ಭಕ್ತಿ ಜ್ಞಾನಾದಿಗಳೇ ಐಶ್ವರ್ಯವೆಂದು ಭಾವಿಸುವ ಭಕ್ತರಿಗೆ ನಿಧಿಯಂತಿರುವ ಶ್ರೀ ಪರಮಾತ್ಮನು, ಅವರಲ್ಲಿದ್ದು ಉತ್ತಮವಾದ ವೈರಾಗ್ಯ, ಭಕ್ತಿ, ಜ್ಞಾನಗಳನ್ನು ಕೊಡಿಸುವನು. ತಮೋಯೋಗ್ಯರಿಗೆ ತನ್ನಲ್ಲಿ ದ್ವೇಷಾದಿಗಳನ್ನೇ ವೃದ್ಧಿಮಾಡಿಸುತ್ತಿರುವನು. ಹೀಗೆ ಮಾಡುವುದಕ್ಕೆ, ಅವರವರ ಯೋಗ್ಯತೆಯೇ ಮುಖ್ಯಕಾರಣವೆಂದು ಭಾವಿಸಬೇಕು.

ಅವತಾರಿಕೆ :—ಯಾಚಕರಲ್ಲಿಯೂ, ದಾತರಲ್ಲಿಯೂ ಚಿಂತಿಸಬೇಕಾದ ಭಗವದ್ರೂಪಗಳನ್ನು ಹೇಳುತ್ತಾರೆ.

**ಈ ಚತುರ್ದಶ ಭುವನದೊಳಗೆ ಚ**
**ರಾ ಚರಾತ್ಮಕ ಜೀವರಲ್ಲಿವಿ**
**ರೋಚನಾತ್ಮಜ ವಂಚಕನು ನೆಲಸಿದ್ದು ದಿನದಿನದಿ॥**
**ಯಾಚಕನು ಎಂದೆನಿಸಿಕೊಂಬ ಮ**
**ರೀಚಿ ದಮನಸುಹಂಸರೂಪಿ ನಿ**
**ಷೇಚಕಾಹ್ವಯನಾಗಿ ಜನರಭಿಲಾಷೆ ಪೂರೈಪ ॥೨೩॥**

ಪದ್ಯಾರ್ಥ :—ಈಚತುರ್ದಶ ಭುವನದೊಳಗೆ=ಈ ೧೪ ಲೋಕದೊಳಗೆ, ಚರಾಚರಾತ್ಮಕ ಜೀವರಲಿ=ಸ್ಥಾವರಜಂಗಮ ಜೀವರಾಶಿಗಳಲ್ಲಿ, ವಿರೋಚನಾತ್ಮಜ ವಂಚಕನು=ವಿರೋಚನನ ಮಗನಾದ ಬಲಿಚಕ್ರವರ್ತಿಯ, ವಂಚಕನಾದ ವಾಮನನು, ನೆಲಿಸಿದ್ದು=ವಾಸವಾಗಿದ್ದು, ದಿನದಿನದಿ=ಪ್ರತಿದಿವಸದಲ್ಲಿಯೂ, ಯಾಚಕನು ಎಂದೆನಿಸಿಕೊಂಬ. ಮರೀಚಿದಮನ=ಮರೀಚಿ ಅಂದರೆ 'ಮೃಗತೃಷ್ಣಾ ಮರೀಚಿಕಾ' ಎಂಬ ಕೋಶದಿಂದ ದೂರದಲ್ಲಿರುವ ಹಸರನ್ನು ಕಂಡು ಮೃಗಗಳು, ಇಲ್ಲಿಗಿಂತಲೂ ಅಲ್ಲಿ ಹುಲ್ಲುಹೆಚ್ಚಿಗೆ ಇರುವುದೆಂಬ ಭ್ರಾಂತಿಗೊಂಡು ತಾವಿದ್ದಲ್ಲಿ ಇರುವ ಹುಲ್ಲನ್ನು ಬಿಟ್ಟು ಹೆಚ್ಚು ಆಶೆಯಿಂದ ಮುಂದೆ ಮುಂದೆ ಹೋಗುತ್ತಿರುವವು. ಇದಕ್ಕೆ ಮೃಗತೃಷ್ಣೆ ಎಂದು ಹೆಸರು. ಇದರಂತೆ ದೂರದಲ್ಲಿ ಸೌಳು ಮಣ್ಣಿನಮೇಲೆ ಬಿಸಿಲು ಬಿದ್ದಿರಲು, ಅದನ್ನು ನೋಡಿ ಸಮೀಪದಲ್ಲಿ ಕಮಲದ ಬಳ್ಳಿ ಮೊದಲಾದವುಗಳಿಂದ ಆವರಿಸಲ್ಪಟ್ಟ ಉದಕವನ್ನು ಬಿಟ್ಟು, ಬರೀ ಬಿಸಲನ್ನೇ ನೋಡಿ ನೀರೆಂಬ ಭ್ರಾಂತಿಯಿಂದ ಜನರು ಓಡುತ್ತಿರುವರು. ಅದಕ್ಕೂ ಮೃಗತೃಷ್ಣೆಯೆಂದು ಹೇಳುವದುಂಟು. ಈ ಮೃಗತೃಷ್ಣೆಯನ್ನು ಭಾಗವತಾದಿಗಳಲ್ಲಿ ಸಂಸಾರಕ್ಕೆ ಉಪಮಾನ ಕೊಟ್ಟ

ರುವರು. ಹೇಗೆ ಹತ್ತಿರವಿರುವ ನೀರನ್ನು ಕಂಡುಕೊಳ್ಳಲಾರದೆ ದೂರದಲ್ಲಿನ ಮಣ್ಣಿನಮೇಲಿನ ಬಿಸಿಲನ್ನು ನೀರೆಂದು ಭಾವಿಸಿ ಓಡುತ್ತಿರುವುದು ದುಃಖ ಕರವೋ, ಹಾಗೆಯೇ ಉತ್ತಮವಾದ ಮನುಷ್ಯ ಜನ್ಮದಲ್ಲಿ ಹುಟ್ಟಿ, ತನ್ನೊ ಳಗಿರುವ ಪರಮಾತ್ಮನನ್ನು ಕಂಡುಕೊಳ್ಳದೆ ವಿಷಯಭೋಗದಲ್ಲಿರುವ ಅಲ್ಪ ಸುಖಕ್ಕಾಗಿ ಮಹಾಪ್ರಯತ್ನ ಮಾಡುವುದರಿಂದ ಸಂಸಾರವನ್ನು ಮೃಗತೃಷ್ಣೆಗೆ ಸಮವೆಂದು ಹೇಳಿರುವರು. ಸಾಮಾನ್ಯವಾಗಿ ಮರೀಚಿ ಅಂದರೆ ಸೂರ್ಯ ರಶ್ಮಿ, ಸೌಳು ಮಣ್ಣಿನಮೇಲೆ ಬೀಳುವ ಬಿಸಲಿಗೆ ಮರೀಚಿಕಾ ಎಂದಿರುವರು. ಮರೀಚಿ ಶಬ್ದವೇ ಮರೀಚಿಕಾ ಶಬ್ದವೆಂದು ಭಾವಿಸಬೇಕು ಪ್ರಕೃತ ಮರೀಚಿ ಅಂದರೆ, ಮೃಗತೃಷ್ಣಾ ರೂಪ ಸಂಸಾರ, ಅದನ್ನು ದಮನ = ನಾಶಮಾಡುವ ಸುಹಂಸರೂಪಿ=ದುಃಖನಾಶಕನಾದುದರಿಂದ ಹಂಸನಾಮಕನಾದ ಶ್ರೀ ಪರ ಮಾತ್ಮನು, ನಿಷೇಚಕಾಹ್ವಯನಾಗಿ=ಎಲ್ಲರ ಮನೋಭೀಷ್ಟವನ್ನು ಪೂರೈಸುವ ವನಾದುದರಿಂದ ನಿಷೇಚಕನೆಂಬ ಹೆಸರು ಪಡೆದವನಾಗಿ ಜನರಭಿಲಾಷೆ ಪೂರೈ ಪ. ಇದಕ್ಕೆ ಮರೀಚಿ, ದಮನ, ಹಂಸ ಎಂಬ ಮೂರು ರೂಪದಿಂದ ನಿಷೇಚಕ ನಾಮಕನಾಗಿರುವನೆಂದು ಅರ್ಥಾಂತರವೂ ಉಂಟು.

ತಾತ್ಪರ್ಯ :—ಈ ಹದಿನಾಲ್ಕು ಲೋಕಗಳೊಳಗೆ ಸ್ಥಾವರ ಜಂಗಮ ರಾದ ಜೀವರೊಳಗೆ ಶ್ರೀ ವಾಮನದೇವರು ವಾಸವಾಗಿದ್ದು ಒಬ್ಬರನ್ನೊಬ್ಬರು ಬೇಡುವ ಕಾರ್ಯವನ್ನು ಮಾಡಿಸುತ್ತಿರುವರು. ವಿಷ್ಣುಸಹಸ್ರ ನಾಮದಲ್ಲಿ ಪ್ರತಿಪಾದ್ಯವಾಗಿರುವ ಸಹಸ್ರನಾಮಗಳಲ್ಲೊಂದು 'ಮರೀಚಿರ್ದ ಮನೋಹಂಸಃ' ಮರೀಚಿ, ದಮನ, ಹಂಸ ಎಂಬ ಮೂರು ರೂಪಗಳನ್ನು ತೆಗೆದುಕೊಂಡಿರು ವರು. ಮರೀಚಿ ಅಂದರೆ ಸಾಮಾನ್ಯವಾಗಿ (ರಶ್ಮಿ) ಸೂರ್ಯಾದಿಗಳ ಕಿರಣಗಳಿಗೆ ಹೆಸರು. ಸ್ವಯಂ ರಶ್ಮಿಭೂತನಾಗಿರುವುದರಿಂದ ಮರೀಚಿ ಎಂದು ಪರಮಾತ್ಮ ನಿಗೇಹೆಸರು. ಅಥವಾ ವಿಷ್ಣು ಸಹಸ್ರನಾಮ ವ್ಯಾಖ್ಯಾನದಲ್ಲಿ 'ಚಲನಾನ್ಮರೀ ಚಿಃ' ಎಲ್ಲಾ ಪ್ರಾಣಿಗಳಲ್ಲಿ ಇದ್ದು ಚಲನ ಮಾಡಿಸುವ ಶಕ್ತಿಯು ಪರ ಮಾತ್ಮನಿಗಿದ್ದುದರಿಂದ ಮರೀಚಿ ಎಂದು ಹೆಸರು. ಈ ಪದ್ಯಕ್ಕೆ ಪದ್ಯಾರ್ಥವನ್ನು ಬರೆಯುವಾಗ ಮರೀಚಿದಮನ ಎಂದು ಒಂದೇ ಪದವನ್ನು ಮಾಡಿ ಸಂಸಾರ ನಾಶಕನೆಂಬರ್ಥವನ್ನು ಸೂಚಿಸಿರುತ್ತದೆ. ಹಾಗಾ ದರೆ ಈ ಮರೀಚಿ, ದಮನ, ಎಂಬ ಮೂರು ರೂಪಗಳು ಆಗುವದಿಲ್ಲವೆಂಬ ಆಕ್ಷೇಪಣೆ ಬರುವುದು, ಅದರ ಪರಿಹಾರ ಹೇಗೆಂದರೆ; ಪದಮಾಡುವಾಗ,

ಮರೀಚಿ ಪದವನ್ನು ಎರಡುಸಲ ಉಚ್ಚರಿಸಿದರೆ ಸರಿಹೋಗುತ್ತದೆ; ಹೇಗೆಂದರೆ ಮರೀಚಿ, ಮರೀಚಿ ದಮನ, ಹಂಸ ಎಂಬ ಮೂರು ರೂಪಗಳೆಂದು ಅರ್ಥ ಮಾಡಬೇಕು. ಹೀಗೆ ಅರ್ಥಮಾಡುವುದರಿಂದ ದಾಸರಾಯರ ಮತಕ್ಕೆ ವಿರುದ್ಧ ವೇನೂ ಬರುವುದಿಲ್ಲವೆಂದು ಯೋಚಿಸಿ ಈ ಒಂದರ್ಥವನ್ನು ಪದ್ಯಾರ್ಥದಲ್ಲಿ ಹೆಚ್ಚಿಗೆ ಶೇರಿಸಿರುತ್ತದೆ. ಅದನ್ನು ಸಾಧುವೆಂದು ಕಂಡರೆ ಅಂಗೀಕರಿಸ ಬಹುದು. ಇಲ್ಲವಾದರೆ ಬಿಡಬಹುದು. ದಮನ ಅಂದರೆ 'ಸಂಸಾರಂ ದಮಯತೀತಿ ದಮನಃ' ಸಂಸಾರವನ್ನು ನಾಶಮಾಡುವುದರಿಂದ ದಮನ ಎಂದು ಹೆಸರು. ಮರೀಚಿ ಪದವನ್ನು, ದಮನ ಪದವನ್ನು ಬೇರೆಬೇರೆ ಮಾಡಿ ಅರ್ಥ ಹೇಳಬೇಕಾದರೆ ದಮನ ಶಬ್ದಕ್ಕೆ ಸಂಸಾರ ನಾಶಕನೆಂದರ್ಥ, ಮರೀಚಿ ಶಬ್ದಕ್ಕೆ ಮೇಲೆ ಹೇಳಿದಂತೆ ಪ್ರಕಾಶಮಾನನು, ಅಥವಾ ಚಲನ ಶಕ್ತಿಯುಳ್ಳವನೆಂದರ್ಥ, ಹಂಸನೆಂದರೆ 'ದುಃಖಂ ಸರ್ವಂ ಹಂತೀತಿ ಹಂಸಃ' ಸಕಲ ದುಃಖವನ್ನು ನಾಶಮಾಡುವುದರಿಂದ ಹಂಸನೆಂದು ಹೆಸರು. ಹೀಗೆ ಮರೀಚಿ, ದಮನ ಹಂಸ ಎಂಬ, ವಿಶ್ವಾದಿ ಸಹಸ್ರರೂಪಗಳೊಳಗೆ ಶೇರಿದ ಮೂರುರೂಪಗಳಿಂದ ಎಲ್ಲಾ ಜನರಲ್ಲಿ ಇದ್ದು 'ನಿಷೇಚಕ' ಎಂಬ ಹೆಸರಿನಿಂದ ಎಲ್ಲರ ಮನೋಭೀಷ್ಟವನ್ನು ಪೂರೈಸುವನು. ನಿಷೇಚಕ=ವರ್ಷಿಸುವುದು ಎಂದರ್ಥವಾಗುವುದು. ಮನೋಭೀಷ್ಟವನ್ನು ವರ್ಷಿಸುವವನು ಎಂಬ ತಾತ್ಪರ್ಯ.

ಅವತಾರಿಕೆ :—ಶ್ರೀ ಪರಮಾತ್ಮನು ಸಕಲ ಪ್ರಾಣಿಗಳನ್ನು ಬ್ರಹ್ಮಾ ವಿಷ್ಣು ಮಹೇಶ್ವರ ಎಂಬ ಮೂರು ರೂಪಗಳಿಂದ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುತ್ತಾನೆಂದು ಹೇಳುತ್ತಾನೆ.

**ಅನ್ನದನ್ನಾದನ್ನಮಯ ಸ್ವಯ**
**ಮನ್ನ ಬ್ರಹ್ಮಾದ್ಯಖಿಳ ಚೇತನ**
**ಕನ್ನ ಕಲ್ಪಕ ನಾಹನನಿರುದ್ಧಾದಿ ನಾಮದಲಿ ॥**
**ಅನ್ಯರನಪೇಕ್ಷಿಸದೆ ಗುಣಕಾ**
**ರುಣ್ಯ ಸಾಗರ ಸೃಷ್ಟಿಸುವನು ಹಿ**
**ರಣ್ಯ ಗರ್ಭನೊಳಿದ್ದು ಪಾಲಿಸುವನು ಜಗತ್ರಯವಾ ॥ ೨೪ ॥**

ಪದ್ಯಾರ್ಥ:—ಅನ್ನದ=ಅನ್ನವನ್ನು ಪರರಿಗೆ ಕೊಡುವವನು, ಅನ್ನಾದ =ಜನರೊಳಗಿದ್ದು ಅನ್ನವನ್ನು ಭುಂಜಿಸುವನು. ಅನ್ನಮಯ=ಸಕಲ ಪ್ರಾಣಿಗಳಿಗೂ ಅನ್ನ ಭೂತನು, ಸ್ವಯಮನ್ನ=ಸ್ವಯಂ ಅನ್ನ ಶಬ್ದವಾಚ್ಯನು,

ಬ್ರಹ್ಮಾದ್ಯಖಿಳಚೇತನಕೆ, ಅನ್ನ ಕಲ್ಪಕನು=ಅನ್ನವನ್ನು ಕಲ್ಪಿಸುವವನು. ಹೀಗೆ ೫ ವಿಧ ಕಾರ್ಯವನ್ನು, ಅನಿರುದ್ಧಾದಿ ರೂಪದಲಿ=ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣನೆಂಬ ೫ ರೂಪಗಳಿಂದ, ಅಹನು=ಮಾಡುವವನಾಗುವನು. ಅನ್ಯರನು=ಮತ್ತೊಬ್ಬರನ್ನು, ಅಪೇಕ್ಷಿಸದೆ, ಗುಣಕಾರುಣ್ಯಸಾಗರ=ಗುಣ=ಆನಂದಾದಿ ಗುಣಗಳು, ಕಾರುಣ್ಯ=ಜನರಲ್ಲಿ ದಯೆ ಮಾಡುವಿಕೆ, ಇವೆರಡು ವಿಷಯಗಳಲ್ಲಿ, ಸಾಗರ=ಸಮುದ್ರನಂತೆ ಇರುವ, ಅಥವಾ, ಕಾರುಣ್ಯಸಾಗರ=ಕರುಣಾಸಮುದ್ರನಾದ ಶ್ರೀ ಹರಿಯು, ಗುಣ=ಪ್ರಾಕೃತ ಗುಣ ಶೂನ್ಯನಾದರೂ ಸೃಷ್ಟ್ಯಾದಿಗಳನ್ನು ಮಾಡುವುದಕ್ಕಾಗಿ ಗುಣಗಳನ್ನು ಸ್ವೀಕರಿಸುವುದರಿಂದ ಗುಣನೆಂಬ ಹೆಸರುಳ್ಳ ಶ್ರೀ ಹರಿಯು, ರಜೋಗುಣವನ್ನು ಸ್ವೀಕರಿಸಿ, ಹಿರಣ್ಯಗರ್ಭನೊಳಿದ್ದು, ಬ್ರಹ್ಮದೇವರಲ್ಲಿದ್ದು, ಸೃಷ್ಟಿಸುವನು, ಜಗತ್ರಯವ=ಮೂರು ಲೋಕವನ್ನು, ಪಾಲಿಸುವ=ಸ್ವಯಂ ವಿಷ್ಣುರೂಪದಿಂದ ಸತ್ವ ಗುಣವನ್ನು ಸ್ವೀಕರಿಸಿ ಪಾಲಿಸುವನು, ಉಪಲಕ್ಷಣದಿಂದ ಸಂಹಾರವನ್ನು ತೆಗೆದುಕೊಳ್ಳಬೇಕು. ತಮೋಗುಣವನ್ನು ಸ್ವೀಕರಿಸಿ ರುದ್ರರೂಪದಿಂದ ಸಂಹರಿಸುವನು.

ತಾತ್ಪರ್ಯ :—ಶ್ರೀ ಪರಮಾತ್ಮನು ಅನಿರುದ್ಧಾದಿ ೫ ರೂಪಗಳಿಂದ ಅನ್ನದ, ಅನ್ನಾದ, ಅನ್ನಮಯ, ಅನ್ನ, ಅನ್ನಕಲ್ಪಕ ಹೀಗೆ ೫ ಕರ್ಮಗಳನ್ನು ಮಾಡುವನು, ಅನ್ನದ ಅಂದರೆ 'ಅನ್ನಂದದಾತೀತಿ ಅನ್ನದಃ' ಎಲ್ಲರಿಗೂ ಅನ್ನವನ್ನು ಕೊಡುವವನಿಗೆ ಹೆಸರು. ಅನಿರುದ್ಧ ರೂಪದಿಂದ ಎಲ್ಲಾ ಅನ್ನದಾತರಲ್ಲಿದ್ದು ಅನ್ನಪ್ರದನಾಗುವನು. ಪ್ರದ್ಯುಮ್ನ ರೂಪಿಯು ಎಲ್ಲಾ ಪ್ರಾಣಿಗಳಲ್ಲಿ ಇದ್ದು ಭೋಜನವನ್ನು ಮಾಡುವನು. 'ಅನ್ನಮತ್ತೀತಿ ಅನ್ನಾದಃ' ಅನ್ನವನ್ನು ಭಕ್ಷಿಸುವುದರಿಂದ ಅನ್ನಾದನೆಂದು ಹೆಸರು. ಆದ್ದರಿಂದ ಪ್ರದ್ಯುಮ್ನನು ಅನ್ನಾದನೆಂದೆನಿಸುವನು. ಅನ್ನಮಯ=ವಾಸುದೇವ ಮೂರ್ತಿಯು ಅನ್ನ ಸ್ವರೂಪನಾಗಿರುವನು. ಸ್ವಯಮನ್ನಂ ಅಂದರೆ 'ಅತ್ತೀತ್ಯನ್ನಂ' ಎಲ್ಲಾ ಪ್ರಪಂಚವನ್ನೂ ಭಕ್ಷಿಸುವುದರಿಂದ ಅನ್ನನೆಂದು ಹೆಸರು. ಈ ಕಾರ್ಯವು ಸಂಕರ್ಷಣ ರೂಪದಿಂದ ಆಗುವುದು. ನಾರಾಯಣ ರೂಪದಿಂದ ಬ್ರಹ್ಮಾದಿ ಸಕಲ ಚೇತನ ಗಣಗಳಿಗೂ ಅನ್ನವನ್ನು ಸೃಷ್ಟಿಸುವನು. ಈ ಕಾರ್ಯಗಳನ್ನು ಮಾಡುವುದರಿಂದ ತನಗೆ ಆರಿಂದಲೂ ಯಾವ ಕಾರ್ಯವೂ

ಆಗಬೇಕಾದುದಿಲ್ಲ. ಹಾಗಾದರೆ ಏಕೆ ಈ ಕಾರ್ಯಗಳನ್ನು ಮಾಡುವನೆಂದರೆ, ಕಾರುಣ್ಯ ಸಾಗರನೆಂದರು, ಕರುಣಾಸಮುದ್ರನಾದುದರಿಂದಲೇ ಮಾಡುವನು. ಅಲ್ಲದೆ ರಜೋ ಗುಣವನ್ನು ಉಪಾದಾನವಾಗಿ ಸ್ವೀಕರಿಸಿ ಬ್ರಹ್ಮದೇವರೊಳಗಿದ್ದು ಜಗತ್ತನ್ನು ಸೃಷ್ಟಿಸುವನು. ಸ್ವಯಂ ವಿಷ್ಣುರೂಪದಿಂದ ಸತ್ವಗುಣೋಪಾದಾನದಿಂದ ಪಾಲಿಸುವನು. ತಮೋಗುಣದಿಂದ ರುದ್ರದೇವರಲ್ಲಿದ್ದು ಸಂಹಾರ ಮಾಡುವನು. ಈ ಸೃಷ್ಟ್ಯಾದಿಗಳಿಂದ ಪರಮಾತ್ಮನಿಗೇನೂ ಆಗಬೇಕಾದುದಿಲ್ಲ, ಪರಾಪೇಕ್ಷೆ ಇಲ್ಲದೆ ಜನರುದ್ಧಾರಕ್ಕಾಗಿ ಕರುಣಾಸಮುದ್ರನಾದುದರಿಂದಲೆ ಈ ಕಾರ್ಯಗಳನ್ನು ಮಾಡುವನೆಂಬ ತಾತ್ಪರ್ಯ.

ಅವತಾರಿಕೆ :— ಪರಮಾತ್ಮನ ಗುಣಕಾರುಣ್ಯವನ್ನು ವಿಸ್ತರಿಸುತ್ತಾರೆ.

**ತ್ರಿಪದ ತ್ರಿದಶಾಧ್ಯಕ್ಷ ತ್ರಿಸ್ಥ**
**ತ್ರಿಪಥಗಾಮಿನಿ ಪಿತ ತ್ರಿವಿಕ್ರಮ**
**ಕೃಪಣವತ್ಸಲ ಕುವಲಯದಳಶ್ಯಾಮ ನಿಸ್ಸೀಮ ॥**
**ಅಪರಿಮಿತ ಚಿತ್ಸುಖ ಗುಣಾತ್ಮಕ**
**ವಪುಷ ವೈಕುಂಠಾದಿ ಲೋಕಾ**
**ಧಿಪ ತ್ರಯಿಯಾಮಯ ತನ್ನವರ ನಿಷ್ಕಪಟದಿಂ ಪೊರೆವ ॥ ೨೫ ॥**

ಪದ್ಯಾರ್ಥ :—ತ್ರಿಪದ=ಮೂರು ಪಾದಗಳಿಂದ ಕೂಡಿದ ಗಾಯತ್ರಿ ಪ್ರತಿಪಾದ್ಯನು, ತ್ರಿದಶಾಧ್ಯಕ್ಷ=ತ್ರಿದಶ=ದೇವತೆಗಳಿಗೆ, ಅಧ್ಯಕ್ಷ=ಅಧಿಪತಿಯು, ತ್ರಿಸ್ಥ=ಶ್ವೇತದ್ವೀಪ, ಅನಂತಾಸನ, ವೈಕುಂಠವೆಂಬ ಮೂರು ಸ್ಥಳಗಳಲ್ಲಿ ವಾಸಮಾಡುವವನು. ತ್ರಿಪಥಗಾಮಿನಿ=ಮೂರು ಮಾರ್ಗವಾಗಿ ಪ್ರವಹಿಸುತ್ತಿರುವ ಗಂಗೆಯ, ಪಿತ=ತಂದೆಯು, ತ್ರಿವಿಕ್ರಮ=ಮೂರು ಹೆಜ್ಜೆಯಿಂದ ಲೋಕವನ್ನೆಲ್ಲಾ ಅಳೆದವನು, ಕೃಪಣ ವತ್ಸಲ=ತನ್ನ ಭಕ್ತರಾಗಿದ್ದು ಇಂದ್ರಿಯ ನಿಗ್ರಹ ಮಾಡಲು ಸಾಧ್ಯವಿಲ್ಲದವರು ಯಾರೋ ಅವರಲ್ಲಿ ವಾತ್ಸಲ್ಯ ಉಳ್ಳವನು, ಕುವಲಯದಳಶ್ಯಾಮ = ನೀಲವರ್ಣವಾದ ಕುವಲಯ ಪುಷ್ಪದ ವರ್ಣದಿಂದ ಕೂಡಿದವನು ನಿಸ್ಸೀಮ=ಎಲ್ಲೆ ಇಲ್ಲದ ಬಲಗುಣಾದಿಗಳಿಂದ ಕೂಡಿದವನು, ಅಪರಿಮಿತ=ಪರಿಮಿತಿ ಇಲ್ಲದ, ಚಿತ್ಸುಖ=ಶಾಶ್ವತ ಸುಖ ಸ್ವರೂಪನು, ಗುಣಾತ್ಮಕ=ಆನಂದಾದಿ ಗುಣಗಳೇ, ವಪುಷ=ಶರೀರವಾಗಿ

ಉಳ್ಳವನು, ವೈಕುಂಠಾದಿ ಲೋಕಾಧಿಪ=ವೈಕುಂಠ ಮೊದಲಾದ ಮೂರು ಲೋಕಕ್ಕೆ ಅರಸನು, ತ್ರಯಿಮಯ=ವೇದ ಪ್ರತಿಪಾದ್ಯನು ಅಥವಾ ವೇದ ಸ್ವರೂಪನು, ಇಂತಹ ಸ್ವಾಮಿಯು, ತನ್ನವರ=ತನ್ನ ಭಕ್ತರನ್ನು, ನಿಷ್ಕಪಟ ದಿಂದ, ಪೊರೆವ=ರಕ್ಷಿಸುವನು.

ತಾತ್ಪರ್ಯ:—'ತ್ರಿಪದಾಗಾಯತ್ರಿ' ಎಂದು ಪ್ರಸಿದ್ಧವಾಗಿರುವುದು. ಅಂತಹ ಗಾಯತ್ರೀ ಪ್ರತಿಪಾದ್ಯನು, 'ತ್ರಿದಶಾ ವಿಬುಧಾಃ ಸುರಾಃ' ಎಂದು ಅಮರ ಇರುವುದರಿಂದ ತ್ರಿದಶ ಅಂದರೆ ದೇವತೆಗಳು. ಅವರಿಗೆ ಅಧ್ಯಕ್ಷ. 'ಗಂಗಾತ್ರಿಪಥಗಾಮಿನೀ' ಎಂಬ ಪ್ರಮಾಣಾನುಸಾರವಾಗಿ ಗಂಗೆಯನ್ನು ಪಡೆದವನೆಂದರ್ಥ. ವಾಮನಾವತಾರಮಾಡಿ ಬಲಿಯನ್ನು ಮೂರಡಿ ಭೂಮಿ ಯನ್ನು ಬೇಡಿದಾಗ ಮೂರು ಹೆಜ್ಜೆಗಳಿಂದ ೧೪ ಲೋಕಗಳನ್ನು ಅಳೆದ ವನು, ಕ್ರಮ ಅಂದರೆ ಹೆಜ್ಜೆಗೆ ಹೆಸರು, ಆದ್ದರಿಂದ ತ್ರಿವಿಕ್ರಮ ಎಂದು ಹೆಸ ರಾಯಿತು. ಕೃಪಣ ಅಂದರೆ ಲೋಭಿಗಳಿಗೆ ಹೇಳುವುದುಂಟು. ಕೃಪಣವತ್ಸಲ ಅಂದರೆ ಲೋಭಿಗಳಲ್ಲಿ ವಾತ್ಸಲ್ಯ ಉಳ್ಳವನೆಂದರ್ಥವಲ್ಲ. ಭಾಗವತ ಏಕಾ ದಶಸ್ಕಂಧದಲ್ಲಿ ಕೃಪಣನು ಯಾರೆಂದು ಉದ್ಧವನು ಪ್ರಶ್ನೆ ಮಾಡಿದಾಗ ಶ್ರೀ ಪರಮಾತ್ಮನು ಹೇಳಿದುದು 'ಕೃಪಣೋಯೋಽಜಿತೇಂದ್ರಿಯಃ' ಎಂದು ೧೯ ನೆಯ ಅಧ್ಯಾಯ ೪೫ ನೆಯ ಶ್ಲೋಕದಲ್ಲಿ ವಿವರಮಾಡಿರುವರು, ಈ ಶ್ಲೋ ಕದ ವಿಜಯಧ್ವಜೀಯ ವ್ಯಾಖ್ಯಾನದಲ್ಲಿ ತಾತ್ಪರ್ಯ ಶ್ಲೋಕವನ್ನು ಉದಾ ಹರಿಸಿ ಆ ಪದದ ಅರ್ಥವನ್ನು ನಿಃಸಂಶಯ ಮಾಡಿರುವರು. ಅದಾವುದೆಂದರೆ 'ವಿಷಯೇದೋಷ ಬುದ್ಧಿಸ್ಸನ್ ಇಂದ್ರಿಯಾಣಾಂ ವಶೇಸ್ಥಿತಃ || ಕೃಪಣಃ ಸತುಸಂಪ್ರೋಕ್ತೋ ಗುಣಬುದ್ಧಿ ವಿಪರ್ಯಯಃ' ಪರಮಾತ್ಮನಲ್ಲಿ ಭಕ್ತಿಯ ನ್ನಿಟ್ಟು ಸಂಸಾರ ಸುಖವನ್ನು ಸುಖವೆಂದು ಭಾವಿಸದೆ ಅದರಲ್ಲಿ ದೋಷ ಗ್ರಹ ಣವನ್ನೂ ಮಾಡಿರೋಣ, ಅವರಾಶೆಯನ್ನು ಬಿಟ್ಟಿರೋಣ, ಇಷ್ಟಿದ್ದರೂ ಇಂದ್ರಿ ಯಗಳನ್ನು ತನ್ನ ವಶಮಾಡಿಕೊಳ್ಳಲು ಸಾಧ್ಯವಿಲ್ಲದೇ ಇರುವವನೇ ಕೃಪಣನು. ಅಂದರೆ ಇವನಲ್ಲಿ ಇರುವ ಗುಣಕ್ಕೂ, ಬುದ್ಧಿಗೂ ಪರಸ್ಪರ ವಿರುದ್ಧ ಧರ್ಮ ವಾಗಿರುವುದು. ಗುಣವು ವಿಷಯಾಸಕ್ತಿಯನ್ನು ಬಿಟ್ಟು ಪರಮಾತ್ಮನನ್ನು ಭಜಿಸುವುದು. ಬುದ್ಧಿಯೋ, ಇಂದ್ರಿಯಗಳನ್ನು ವಶಮಾಡಲೊಲ್ಲದು, ಇಂ ತಹವರು 'ಸ್ವಾಮಿ ! ಇಂದ್ರಿಯಗಳನ್ನು ವಶಮಾಡಿಕೊಳ್ಳಲು ಶಕ್ತರಲ್ಲದ ನಮ್ಮನ್ನುದ್ಧರಿಸೆಂದು' ಪಶ್ಚಾತ್ತಾಪದಿಂದ ಬೇಡಿಕೊಳ್ಳುತ್ತಿರುವರು. ಅವ

ರಲ್ಲಿ ವಾತ್ಸಲ್ಯ ಉಳ್ಳವನೆಂದರ್ಥ. ತ್ರಯೀಮಯ ಎಂದರೆ 'ಶ್ರೀರ್ಭೂಮಿ ರಿತಿ ರೂಪಾಭ್ಯಾಂ ಪ್ರಕೃತಿರ್ವಿಷ್ಣುನಾಸಹ || ಶೇತೇ ಶ್ರುತಿ ಸ್ವರೂಪೇಣ ಸ್ತೌತಿಬ್ರಹ್ಮಲಯೇ ಹರಿಂ' ಎಂಬ ಶ್ರುತಿಗೀತೆಯ ತಾತ್ಪರ್ಯಾನುಸಾರವಾಗಿ ವೇದವು ಲಕ್ಷ್ಮೀ ಸ್ವರೂಪವೇ ಆದರೂ ಅದರಲ್ಲಿ ಪರಮಾತ್ಮನು ವ್ಯಾಪಿಸಿ ಕೊಂಡಿರುವುದರಿಂದ ವೇದಸ್ವರೂಪನೆಂದು ಹೇಳುವುದಕ್ಕೆ ಬಾಧಕವೇನೂ ಇಲ್ಲ. ಇಂತಹಾ ಸ್ವಾಮಿಯು ವಂಚನೆ ಇಲ್ಲದೆ ಭಕ್ತರನ್ನು ರಕ್ಷಿಸುವನೆಂಬ ಭಾವ. ಆದರೆ ಈ ವಿಷಯದಲ್ಲಿ ಸ್ವಲ್ಪ ಆಕ್ಷೇಪಣೆ ಬರಬಹುದು, ಹೇಗೆಂದರೆ, ಬಲಿಚಕ್ರವರ್ತಿಯನ್ನು ವಾಮನ ರೂಪದಿಂದ ವಂಚಿಸಿದನು ಪಾಂಡವ ರಿಗೆಭಗವದನುಗ್ರಹವಿದ್ದುದೇ ಆದರೆ ವನವಾಸಾದಿಗಳು ಪ್ರಾಪ್ತವಾಗುತ್ತಿ ರಲಿಲ್ಲ. ಪಾಂಡವರು ವನವಾಸಕ್ಕೆ ಹೋದಮೇಲೆ ಅವರನ್ನು ಕಂಡು 'ನಾನು ಊರಲ್ಲಿದ್ದಿದ್ದರೆ ನಿಮಗೆ ಇಂತಹ ಅನರ್ಥವು ಪ್ರಾಪ್ತಿಯಾಗುತ್ತಿರ ಲಿಲ್ಲ, ನಾನು ಸಾಲ್ವರಾಜನ ಸಂಗಡ ಯುದ್ಧಕ್ಕೆ ಹೋಗಿದ್ದಕಾಲದಲ್ಲಿ ಈ ಅನ ರ್ಥವು ನಿಮಗೆ ಪ್ರಾಪ್ತವಾಯಿತೆಂದು ನೆಪಹೇಳಿಬಿಟ್ಟನು. ಭಗವದಿಚ್ಛೆ ಇದ್ದಿದ್ದರೆ ಸಾಕ್ಷಾತ್ತಾಗಿ ಕೃಷ್ಣನಿಗೆ ಸೋದರಳಿಯನೂ, ಪರಮ ಪ್ರಿಯನಾದ ಅರ್ಜುನನ ಮಗನೂ ಆದ, ಅಭಿಮನ್ಯು ಸಾಯುತ್ತಿದ್ದನೇ ? ಇವುಗಳೆಲ್ಲವೂ ವಂಚನೆಯಲ್ಲವೆ, ನಿಷ್ಕಪಟದಿಂದ ಭಕ್ತರನ್ನು ಪೊರೆವ ಎಂದು ಹೇಗೆ ಹೇಳ ಬಹುದು? ಅಂದರೆ ಇವುಗಳು ಭಕ್ತರನ್ನು ವಂಚಿಸಲು ಮಾಡಿದ ಕಾರ್ಯಗಳ ಲ್ಲ, ಬಲಿಯನ್ನು ಬೇಡಿದುದರಿಂದ ಅವನ ಕೀರ್ತಿಯನ್ನು ಶಾಶ್ವತವಾಗಿಪ್ರಖ್ಯಾ ತಿ ಪಡಿಸಿದಂತಾಯಿತು ವನವಾಸಾದಿಗಳಿಂದ ಪಾಂಡವರ ಯೋಗ್ಯತೆಯೂ ದುರ್ಯೋಧನಾದಿಗಳ ಅಯೋಗ್ಯತೆಯೂ ವ್ಯಕ್ತವಾದಂತಾಯಿತು, ಅಭಿ, ಮನ್ಯು ಹುಟ್ಟುವಕಾಲದಲ್ಲಿಯೆ '೧೬ನೆಯ' ವರ್ಷದಲ್ಲಿ ನಿನ್ನ ಮಗ ನು ನಿನ್ನಲ್ಲಿ ಬರುವನೆಂದು ಚಂದ್ರನಿಗೆ ಪರಮಾತ್ಮನು ವರಕೊಟ್ಟದುದರಿಂದ ಅದನ್ನು ಸತ್ಯಮಾಡಲು ಅವನನ್ನು ಕೊಲ್ಲಿಸಿದನು. ಹೀಗೆ ಸತ್ಯಸಂಕಲ್ಪನಾದ ಸ್ವಾಮಿಯು ತಾನು ಮಾಡುವಕಾರ್ಯದಿಂದ ಭಕ್ತರಿಗೆ ಕೆಲವುಕಾಲ ಕಷ್ಟವಾ ದಂತೆ ಕಂಡುಬಂದರೂ ಅದರಿಂದ ಅವರಿಗೆ ಅನಂತ ಸುಖವೇ ಆಗುವುದು. ಭಕ್ತರಿಗೆ ಕಷ್ಟಕೊಡುವುದರ ಕಾರಣವನ್ನು ಅವನೇ ಬಲ್ಲ. ಅಂತಹ ಕಷ್ಟದ ಫಲವನ್ನು ಅವನ ಏಕಾಂತ ಭಕ್ತರು ಬಲ್ಲರು. ಇದಕ್ಕೆ ಅನೇಕ ದಾಸರಾಯ ರುಗಳು ಭಗವಂತನನ್ನು ಕಷ್ಟವನ್ನೇ ಕೊಡೆಂದು ಬೇಡಿಕೊಂಡಿರುವುದೆ ಸಾಕ್ಷಿ.

ಅಂತು ಸರ್ವಪ್ರಕಾರದಿಂದಲೂ ಭಕ್ತರನ್ನು ಉದ್ಧರಿಸಬೇಕೆಂಬುವುದೇ ಅವನ ಇಚ್ಛೆಯೇ ಹೊರತು ಕೆಡಿಸುವ ಉದ್ದೇಶವೆಂದಿಗೂ ಇಲ್ಲ. ಆದ್ದರಿಂದಲೆ ದಾಸರಾಯರು ಈ ಮಾತನ್ನು ಹೇಳಿದರೆಂದು ತಿಳಿಯಬೇಕು.

ಅವತಾರಿಕೆ :—ಸರ್ವತ್ರವ್ಯಾಪ್ತನಾದ ಭಗವಂತನ ಸ್ವರೂಪವನ್ನು ತಿಳಿಯಲು ಯಾರಿಗೂ ಸಾಧ್ಯವಲ್ಲವೆಂಬುದನ್ನು ಸದೃಷ್ಟಾಂತವಾಗಿ ಹೇಳುತ್ತಾರೆ.

**ಲವಣಮಿಶ್ರಿತ ಜಲವು ತೋರ್ಪದು**
**ಲವಣದೋಪಾದಿಯಲಿ ಜಿಹ್ವೆಗೆ**
**ವಿವರಗೈಸಲು ಶಕ್ಯವಾಗುವದೇನೊ ನೋಳ್ಪರಿಗೆ ||**
**ಸ್ವವಶವ್ಯಾಪೀಯನಿಸಿ ಲಕ್ಷ್ಮೀ**
**ಧವ ಚರಾಚರದೊಳಗೆ ತುಂಬಿಹ**
**ನವಿದಿತನ ಸಾಕಲ್ಯ ಬಲ್ಲವರಾರು ಸುರರೊಳಗೆ ||೨೬||**

ಲವಣಮಿಶ್ರಿತ=ಉಪ್ಪುಶೇರಿದ ಜಲವು, ಲವಣದೋಪಾದಿಯಲಿ= ಉಪ್ಪಿನಂತೆಯೆ, ಜಿಹ್ವೆಗೆ=ನಾಲಿಗೆಗೆ, ತೋರ್ಪದು=ತೋರುವುದು, ನೋಳ್ಪರಿಗೆ=ನೋಡುವ ಜನರಿಗೆ, ವಿವರಗೈಸಲು=ಉಪ್ಪನ್ನು ಬೇರೆ ಮಾಡಿ ತೋರಿಸಲು, ಶಕ್ಯವಾಗುವದೇನೊ, ಲಕ್ಷ್ಮೀಧವ = ಲಕ್ಷ್ಮೀಪತಿಯು, ಸ್ವವಶವ್ಯಾಪೀಯೆನಿಸಿ = ಸ್ವತಂತ್ರದಿಂದ ತಾನೆ ಸರ್ವತ್ರ ವ್ಯಾಪ್ತನೆಂದೆನಿಸಿ, ಚರಾಚರದೊಳಗೆ = ಸ್ಥಾವರ ಜಂಗಮಾತ್ಮಕವಾದ ಪ್ರಪಂಚದಲ್ಲಿ, ತುಂಬಿಹನು, ಅವಿದಿತನ=ತನ್ನ ಸ್ವರೂಪವು ಇಂತಹದೆಂದು ಪರರಿಗೆ ಕಾಣಿಸಿ ಕೊಳ್ಳದವನ, ಸುರರೊಳಗೆ=ದೇವತೆಗಳೊಳಗೆ, ಸಾಕಲ್ಯ=ಚೆನ್ನಾಗಿ, ಬಲ್ಲವರಾರು !

ತಾತ್ಪರ್ಯ :—ನೀರಿನಲ್ಲಿ ಉಪ್ಪನ್ನು ಸೇರಿಸಿ, ಆ ನೀರನ್ನು ಬಾಯಲ್ಲಿ ಹಾಕಿಕೊಂಡರೆ ಮಾತ್ರ ಉಪ್ಪು ಕಾಣುವುದು. ನೀರನ್ನು ಕಣ್ಣಿಂದ ನೋಡಿದರೆ ಉಪ್ಪು ಕಾಣುವುದೆ ? ಆ ಉಪ್ಪನ್ನು ಬೇರ್ಪಡಿಸಿ ತೋರಿಸಲು ಸುಲಭಸಾಧ್ಯವೆ ? ಹಾಗೆ ಶ್ರೀ ಪರಮಾತ್ಮನು ನೀರಿನಲ್ಲಿ ಉಪ್ಪು ಬೆರತಂತೆ ಸರ್ವತ್ರ ತುಂಬಿರುವನು, ಇಂತಹ ಭಗವಂತನ ಸ್ವರೂಪವನ್ನು ಅರಿಯಲು ರಮಾದೇವಿಯರಿಗೆ ಸಾಧ್ಯವಲ್ಲ, ಹಾಗಿರಲು ಇನ್ನು ಇತರ ದೇವತೆಗಳು ಅವನ ಸ್ವರೂಪವನ್ನು ಪ್ರಪಂಚದಿಂದ ಬೇರ್ಪಡಿಸಿ ಸಾಕಲ್ಯೇನ ಕಾಣುವುದೆಂತು ? ದೇವತೆಗಳೇ ಕಾಣದಮೇಲೆ ಮನುಷ್ಯರ ಪಾಡೇನು ? ಅವನ ಅನುಗ್ರಹದಿಂದ ಎತ್ತಿಂ

ಚಿತ್ ಬಲ್ಲನೇ ಹೊರತು ಸಾಕಲ್ಯವಾಗಿ ಯಾರೂ ಅರಿಯರು. ಭಗವದನು ಗ್ರಹವಿಲ್ಲದವರು ಏನೇನೂ ಅರಿಯರೆಂದು ತಿಳಿಯಬೇಕು.

ಅವತಾರಿಕೆ :- ಸರ್ವತ್ರ ಪರಮಾತ್ಮನಿದ್ದು ತನ್ನನ್ನು ಭಜಿಸುವವರನ್ನು ಸಂಸಾರದಿಂದ ಉದ್ಧರಿಸುವನೆಂದು ಹೇಳುತ್ತಾರೆ.—

ವ್ಯಾಪ್ಯನಂದದಿ ಸರ್ವಜೀವರೊ
ಳಿಪ್ಪ ಚಿನ್ಮಯ ಘೋರಭವಸಂ
ತಪ್ಯಮಾನರುಭಜಿಸೆ ಭಕುತಿಗಳಿಂದ ಲಿಹಪರದಿ ॥
ಪ್ರಾಪ್ಯನಾಗುವ ನವರವಗುಣಗ
ಳೊಪ್ಪಿಕೊಂಬನು ಭಕ್ತವತ್ಸಲ
ತಪ್ಪಿಸುವ ಜನ್ಮಾದಿದೋಷಗಳ ವರಿಗನವರತ ॥೨೭॥

ಪದ್ಯಾರ್ಥ:—ಚಿನ್ಮಯ=ಚಿದಾನಂದ ಸ್ವರೂಪನು, ವ್ಯಾಪ್ಯನಂದದಿ =ಮತ್ತೊಬ್ಬರಿಂದ ವ್ಯಾಪಿಸಲ್ಪಟ್ಟವನಂತೆ, ಸರ್ವಜೀವರೊಳಿಪ್ಪ, ಘೋರ ಭವ=ಭಯಂಕರವಾದ ಸಂಸಾರ ತಾಪದಿಂದ, ಸಂತಪ್ಯಮಾನರು=ಚೆನ್ನಾಗಿ ತಾಪಗೊಂಡವರು, ಭಕುತಿಗಳಿಂದಲಿ, ಭಜಿಸೆ=ಭಜಿಸಲು, ಇಹಪರದಿ=ಈ ಲೋಕದಲ್ಲಿಯೂ, ಪರಲೋಕದಲ್ಲಿಯೂಸಹ ಪ್ರಾಪ್ಯನಾಗುವ=ಅವರಿಗೆ ಲಭ್ಯ ನಾಗುವನು, ಅವರ, ಅವಗುಣವ = ದುರ್ಗುಣಗಳನ್ನು, ಭಕ್ತವತ್ಸಲ, ಒಪ್ಪಿ ಕೊಂಬನು, ಅವರಿಗೆ=ಆ ಭಜಿಸುವ ಭಕ್ತರಿಗೆ, ಅನವರತ = ಶಾಶ್ವತವಾಗಿ, ಜನ್ಮಾದಿ ದೋಷಗಳ=ಜನನ ಮರಣಾದಿ ಕ್ಲೇಶಗಳನ್ನು ತಪ್ಪಿಸುವ.

ತಾತ್ಪರ್ಯ :—ವ್ಯಾಪ್ತನೆಂದರೆ ಒಳಗೂ ಹೊರಗೂ, ಸಂಪುಟದಂತೆ ಸಕಲ ಪ್ರಾಣಿಗಳನ್ನೂ ಆವರಿಸಿಕೊಂಡಿರುವವನು. ವ್ಯಾಪ್ಯನೆಂದರೆ ಆವರಿಸಿಕೊ ಳ್ಳಲ್ಪಟ್ಟವ ನೆಂದರ್ಥ. ಚಿದಾನಂದ ಸ್ವರೂಪನಾದ ಶ್ರೀಹರಿಯು, ವ್ಯಾಪ್ಯ ರಾದ ಸಾಮಾನ್ಯ ಜೀವರಂತೆ ಸರ್ವ ಜೀವರೊಳಗೂ ಇರುವನು. ಅದರಲ್ಲಿ ಘೋರವಾದ ಸಂಸಾರದಿಂದ ಸಂತಪ್ತರಾಗಿ ಭಕ್ತಿಯಿಂದ ತನ್ನನ್ನು ಮೊರೆ ಹೊಕ್ಕವರಾರೊ, ಅವರಿಗೆ 'ಭಕ್ತವತ್ಸಲನೆಂದು ಬಿರಿದು ಪೊತ್ತಾಮೇಲೆ ಭಕ್ತ ರಧೀನನಾಗಿರಬೇಡವೆ' ಎಂಬ ದಾಸರಾಯರ ವಾಕ್ಯದಂತೆ ಸ್ವಯಂ ವಶ ನಾಗುವನು. ಅವರಲ್ಲಿರುವ ಅವಗುಣಗಳನ್ನು ಲಕ್ಷೀಕರಿಸನು. ಭಕ್ತವತ್ಸಲ ನಾದ ಸ್ವಾಮಿಯು, ಆ ಭಕ್ತರಿಗೆ ಬರುವ ಜನನ ಮರಣಾದಿ ಕಷ್ಟಗಳನ್ನು ಪರಿಹರಿಸಿ, ಶಾಶ್ವತ !ಸುಖವನ್ನು ಕೊಡುವನು.

**ಅವತಾರಿಕೆ :**—ಸರ್ವಪ್ರಕಾರದಿಂದಲೂ ನೀನೇ ಗತಿ ಎಂದು ನಂಬಿದ ವರಿಗೆ ಶ್ರೀ ಪರಮಾತ್ಮನು ಭಕ್ತಿಜ್ಞಾನಾದಿಗಳನ್ನು ಕೊಟ್ಟು ಎಲ್ಲಾರೀತಿಯಿಂದಲೂ ಅವರನ್ನು ರಕ್ಷಿಸುವನೆಂದು ಹೇಳುತ್ತಾರೆ.

**ಹಲವು ಬಗೆಯಲಿ ಹರಿಯು ಮನದಲಿ**
**ವಲಿಸಿ ನಿಲ್ಲಿಸಿ ಏನುಮಾಡುವ**
**ಕೆಲಸಗಳ ನವನಂಘ್ರಿ ಪೂಜೆಗಳೆಂದು ನೆನವುತಿರು ॥**
**ಹಲಧರಾನುಜ ತಾನೆ ಸರ್ವ**
**ಸ್ಥಳಗಳಲಿ ನೆಲಿಸಿದ್ದು ನಿಶ್ಚಂ**
**ಚಲಭಕುತಿ ಸುಜ್ಞಾನಭಾಗ್ಯವ ಕೊಟ್ಟು ಸಂತೈಪ ॥೨೮॥**

ಪದ್ಯಾರ್ಥ :—ಹಲವುಬಗೆಯಲಿ= ನಾನಾ ಪ್ರಕಾರದಿಂದಲೂ, ಹರಿಯು, ಮನದಲಿ, ವಲಿಸಿ=ಪ್ರಸನ್ನನಾಗುವಂತೆ ಮಾಡಿ, ನಿಲ್ಲಿಸಿ = ಸ್ಥಿರವಾಗಿ ನಿಲ್ಲಿಸಿ, ಏನುಮಾಡುವ ಕೆಲಸಗಳನು=ಯಾವ ಕೆಲಸವನ್ನು ಮಾಡಿದರೂ ಆ ಕೆಲಸಗಳನ್ನು, ಅವನ=ಪರಮಾತ್ಮನ, ಅಂಘ್ರಿಪೂಜೆಯೆಂದು=ಪಾದ ಪೂಜೆಯೆಂದು, ನೆನವುತಿರು=ಚಿಂತಿಸುತ್ತಿರು, ಹಲಧರಾನುಜ=ಬಲರಾಮನ ತಮ್ಮನಾದ ಶ್ರೀ ಕೃಷ್ಣನು ತಾನೆ, ಸರ್ವಸ್ಥಳಗಳಲಿ, ನೆಲಸಿದ್ದು, ನಿಶ್ಚಂಚಲ ಭಕುತಿ ಸುಜ್ಞಾನ ಭಾಗ್ಯವ, ಕೊಟ್ಟು ಸಂತೈಪ.

ತಾತ್ಪರ್ಯ :—ಸರ್ವಪ್ರಕಾರದಿಂದಲೂ ಪರಮಾತ್ಮನಲ್ಲಿ ದೃಢವಾದ ಭಕ್ತಿಯನ್ನಿಟ್ಟು ಮಾಡುವ ಭಕ್ತಿಯಿಂದ ಪರಮಾತ್ಮನು ವಲಿಯುವಂತೆ ಮಾಡಿಕೊಂಡು ನಿಶ್ಚಂಚಲವಾಗಿ ಮನಸ್ಸಿನಲ್ಲಿ ಪರಮಾತ್ಮನನ್ನು ನಿಲ್ಲಿಸಿ ನೀನು ಮಾಡುವ ಪ್ರತಿ ಒಂದು ಕೆಲಸವೂ ಪರಮಾತ್ಮನ ಪೂಜೆ ಎಂದೇ ಭಾವಿಸು. ಹೀಗೆ ಮಾಡುವುದರಿಂದ ಶ್ರೀ ಕೃಷ್ಣನು ತಾನೇ ಸರ್ವತ್ರ ಇದ್ದು ನೀನು ಮಾಡುವ ಎಲ್ಲಾ ಕೆಲಸವನ್ನೂ ತನ್ನ ಪೂಜೆಯೆಂದೇ ಸ್ವೀಕರಿಸಿ ಅವಿಚ್ಛಿನ್ನವಾದ ಭಕ್ತಿಯನ್ನು, ದಿವ್ಯವಾದ ಜ್ಞಾನ ಸಂಪತ್ತನ್ನು ಕೊಟ್ಟು ನಿನ್ನನ್ನು ಉದ್ಧರಿಸುವನು. ಎಂದು ದಾಸರಾಯರು ಸಚ್ಛಿಷ್ಯರಿಗೆ ಪ್ರೀತಿಯಿಂದ ಉಪದೇಶ ರೂಪವಾಗಿ ಹೇಳಿರುತ್ತಾರೆ ||೨೮||

**ದೋಷಗಂಧವಿದೂರ ನಾನಾ**
**ವೇಷಧಾರಕ ನೀಜಗತ್ರಯ**

**ಪೋಷಕ ಪುರಾತನ ಪುರುಷ ಪುರುಹೂತ ಮುಖವಿನುತ ॥**
**ಶೇಷವರ ಪರ್ಯಂಕ ಶಯನನಿ**
**ಭೀಷಣ ಪ್ರಿಯ ವಿಜಯ ಸಖ ಸಂ**
**ತೋಷಬಡಿಸುವ ಸುಜನರಿಗಿಷ್ಟಾರ್ಥಗಳ ಪೂರೈಸಿ ॥೨೯॥**

ಪದ್ಯಾರ್ಥ :—ದೋಷ ಗಂಧವಿದೂರ=ದೋಷವೆಂಬ ವಾಸನೆಯೇ ಸೋಕದವನು; ನಾನಾ ವೇಷಧಾರಕ = ಸರ್ವತ್ರ ವ್ಯಾಪಕನಾಗಿಯೂ, ಮತ್ಸ್ಯ ಕೂರ್ಮಾದಿ ಅವತಾರ ರೂಪಗಳಿಂದಲೂ ಅನೇಕ ವಿಧ ರೂಪಗಳನ್ನು ಧರಿಸುವವನು; ಈ ಜಗತ್ರಯ ಪೋಷಕ=ಮೂರು ಲೋಕ ವಾಸಿಗಳಾದ ಪ್ರಾಣಿಗಳನ್ನು ಪೋಷಣೆ ಮಾಡುವವನು; ಪುರಾತನ ಪುರುಷ=ಆದಿ ಇಲ್ಲದ ವನು; ಪುರುಹೂತ ಮುಖವಿನುತ=ಇಂದ್ರಾದಿ ದೇವತೆಗಳಿಂದ ಸ್ತುತ್ಯನು; ಶೇಷವರ ಪರ್ಯಂಕ ಶಯನ= ಶೇಷನೆಂಬ ಉತ್ತಮವಾದ ಹಾಸಿಗೆಯ ಮೇಲೆ ಮಲಗಿರುವವನು; ವಿಭೀಷಣಪ್ರಿಯ; ವಿಜಯಸಖ=ಅರ್ಜುನನಿಗೆ ಸಖನು; ಇಂತಹಾ ಪರಮಾತ್ಮನು, ಸುಜನರ, ಇಷ್ಟಾರ್ಥಗಳ, ಪೂರೈಸಿ, ಸಂತೋಷ ಪಡಿಸುವನು. ॥೨೮॥

ತಾತ್ಪರ್ಯ :—ದೋಷಗಂಧವಿದೂರನೆಂದರೆ ಲೇಶವಾದರೂ ದೋಷ ದವಾಸನೆಯು ಹತ್ತಿದಿದ್ದವನೆಂದರ್ಥ. ವಿಷ್ಣುರಹಸ್ಯ ೧೫ನೆಯ ಅಧ್ಯಾಯ ೩೧ ನೆಯ ಶ್ಲೋಕದಲ್ಲಿ "ಯಥಾನಾಲೋಕತೇ ಸೂರ್ಯಸ್ತಮೋಲೇಶಮಪಿ ಕ್ವಚಿತ್॥ ತಥಾದುಃಖಸ್ಯಲೇಶೋಽಪಿ ಕರ್ಹಿಚಿನ್ನಮಯೇಕ್ಷತೆ" ಸೂರ್ಯನು ಲೇಶವಾದರು ಕತ್ತಲನ್ನು ಹೇಗೆ ಕಾಣಲಾರನೊ ಹಾಗೆ ನಾನು ಯಾವ ಕಾಲ ದಲ್ಲಾದರೂ ದುಃಖದ ಲೇಶವನ್ನೂ ಕಾಣಲಾರೆನು. ಎಂದು ಹಯಗ್ರೀವ ರೂಪಿ ಶ್ರೀ ಪರಮಾತ್ಮನು ಬ್ರಹ್ಮದೇವರಿಗೆ ಹೇಳಿರುವನು; ಅದೇ ಅಭಿಪ್ರಾಯ ವನ್ನೇ "ದೋಷಗಂಧವಿದೂರ" ನೆಂದು ದಾಸರಾಯರು ಹೇಳಿರುವರು ॥೨೯॥

**ಶ್ರೀಮಹೀಸೇವಿತ ಪದಾಂಬುಜ**
**ಭೂಮಸದ್ಭಕ್ತ್ಯೈಕಲಭ್ಯಪಿ**
**ತಾಮಹಾದ್ಯಮರಾ ಸುರಾರ್ಚಿತಪಾದ ಪಂಕೇಜಾ ॥**
**ವಾಮ ವಾಮನ ರಾಮ ಸಂಸಾ**
**ರಾಮಯೌಷಧ ಹೇ ಮಮಕುಲ**
**ಸ್ವಾಮಿ ಸಂತೈಸೆನಲು ಬಂದೊದಗುವನು ಕರುಣಾಳು ॥೩೦॥**

ಪದ್ಯಾರ್ಥ :—ಶ್ರೀ = ಲಕ್ಷ್ಮೀದೇವಿಯುವರು, ಮಹೀ=ಭೂದೇವಿಯುರು, ಇವರುಗಳಿಂದ, ಸೇವಿತಪದಾಂಬುಜ= ಸೇವಿಸಿಕೊಳ್ಳಲ್ಪಟ್ಟ ಪಾದ ಕಮಲ ಉಳ್ಳವನೆ; ಭೂಮ=ಎಲ್ಲೈ ಪೂರ್ಣ! ಸದ್ಭಕ್ತ್ಯೈಕಲಭ್ಯ=ಉತ್ತಮವಾದ ಭಕ್ತಿ ಒಂದಕ್ಕೆ ವಶನಾಗುವವನೆ! ಪಿತಾಮಹಾದಿ=ಬ್ರಹ್ಮ ದೇವರು ಮೊದಲಾದ, ಅಮರ=ದೇವತೆಗಳಿಂದಲೂ, ಅಸುರ=ಅಸು ಅಂದರೆ ಮುಖ್ಯ ಪ್ರಾಣದೇವರು; ಅವರಲ್ಲಿ ರತರು ಅಂದರೆ ಆಸಕ್ತಿಉಳ್ಳ ಗರುಡ ಶೇಷಾದಿ ಸಕಲ ದೇವತೆಗಳಿಂದರ್ಥ; ಇಂತಹಾ ಸಕಲ ದೇವತಾಗಣಗಳಿಂದಲೂ, ವಾಯು ದೇವರನ್ನು ಗುರುತ್ವೇನ ಭಾವಿಸಿದ ಸಕಲ ಮನುಷ್ಯರಿಂದಲೂ ಕೂಡ, ಅರ್ಚಿತ=ಪೂಜಿತವಾದ; ಪಾದ ಪಂಕೇಜ=ಪಾದ ಕಮಲಗಳುಳ್ಳವನೆ! ವಾಮ=ಮನೋಹರನೆ! ವಾಮನ! ರಾಮ! ಸಂಸಾರಾಮಯೌಷಧ=ಸಂಸಾರವೆಂಬ ರೋಗಕ್ಕೆ ಔಷಧಭೂತನೆ! ಹೇ ಮಮಕುಲಸ್ವಾಮಿ = ಎಲ್ಲೈ ನನ್ನ ಕುಲಕ್ಕೆ ಸ್ವಾಮಿಯಾದವನೆ! ಸಂತೈಸು! ಎನಲು = ಪ್ರಾರ್ಥಿಸಲು, ಕರುಣಾಳು, ಬಂದೊದಗುವನು. ||೩೦||

ತಾತ್ಪರ್ಯ :— " ಪಿತಾಮಹಾದ್ಯಮರಾ ಸುರಾರ್ಚಿತ " ಎಂದು ದಾಸರಾಯರು ಪದ ಪ್ರಯೋಗ ಮಾಡಿರುವರು. ಇದರಲ್ಲಿ ಪಿತಾಮಹಾದಿ=ಬ್ರಹ್ಮದೇವರು ಮೊದಲಾದ, ಅಮರ=ದೇವತೆಗಳಿಂದಲೂ, ಅಸುರಾರ್ಚಿತ=ದೈತ್ಯರುಗಳಿಂದಲೂ ಪೂಜಿತವಾದ ಪಾದ ಕಮಲಗಳುಳ್ಳವನೆಂದು ಸಾಮಾನ್ಯವಾಗಿ ಅರ್ಥವಾಗುವುದು. ಅಸುರರು ಎಂಬ ಪದಕ್ಕೆ ದೈತ್ಯರೆಂದು ಅರ್ಥ ಮಾಡಿದರೆ, ದೈತ್ಯರಿಂದ ಪೂಜಿತವಾದ ಪಾದ ಕಮಲ ಉಳ್ಳವನು ಪರಮಾತ್ಮನೆಂದು ಹೇಳಲು, ದೈತ್ಯರು ಪರಮಾತ್ಮನನ್ನು ಪೂಜಿಸುವುದು ಅಸಂಭವವೆಂದು ಯೋಚಿಸಿ ಕೆಲವು ವ್ಯಾಖ್ಯಾನ ಕರ್ತರು, "ಅಸುಷುರತಃ ಅಸುರಃ" ಪ್ರಾಣಗಳಲ್ಲಿರುವುದರಿಂದ ಅಸುರ ಎಂದು ಪ್ರಾಣದೇವರಿಗೆ ಹೆಸರೆಂದು ಅರ್ಥ ಮಾಡಿರುವರು. ಹೀಗೆ ಅರ್ಥ ಮಾಡುವುದರಲ್ಲಿ ಒಂದು ಬಾಧಕ ಕಾಣುವುದು. ಹೇಗೆಂದರೆ; ಬ್ರಹ್ಮಾದಿ ದೇವತೆಗಳಿಂದಲೂ, ವಾಯುದೇವರಿಂದಲೂ, ಅರ್ಚಿತವಾದ ಪಾದ ಕಮಲಗಳುಳ್ಳವನೆಂದರ್ಥವಾಗುವುದು. ಬ್ರಹ್ಮ ಮೊದಲಾದ ದೇವತೆಗಳು ಅಂದಮೇಲೆ ವಾಯುದೇವರು ಅವರಲ್ಲಿ ಸೇರಿಯೇ ಇರುವರು. ಅಸುರ ಶಬ್ದದಿಂದ ಪ್ರತ್ಯೇಕ ವಾಯುದೇವರನ್ನು ಗ್ರಹಣಮಾಡು

ವುದು ಪುನರುಕ್ತಿ ದೋಷಕ್ಕೆ ಕಾರಣವಾಗುವುದು. ಆದ್ದರಿಂದ ಅಸುರ ಶಬ್ದವನ್ನು ಪ್ರಾಣದೇವರ ಪರ ಮಾಡುವುದು ಯೋಚಿಸತಕ್ಕದ್ದಾಗಿದೆ. ಹಾಗಾದರೆ ಇದಕ್ಕೆಹೇಗೆ ಅರ್ಥಮಾಡಬೇಕೆಂದರೆ; ಈ ದೇಹದಲ್ಲಿನ ೨೪ ತತ್ವೇಶರ ಪೈಕಿ ಪ್ರಾಣದೇವರೇ ಯುವರಾಜರಂತೆ ೨೩ ತತ್ವೇಶರಿಗೂ ಉತ್ತಮರು. ಎಲ್ಲಾ ತತ್ವೇಶರಿಲ್ಲದಿದ್ದರೂ ಒಬ್ಬ ವಾಯು ದೇವರಿದ್ದರೆ ಪ್ರಾಣವಿದೆ ಎನ್ನುವರು. ಎಲ್ಲಾ ತತ್ವೇಶರು ಇದ್ದರೂ ವಾಯುದೇವರು ಒಬ್ಬರು ಇಲ್ಲದಿದ್ದರೆ ಆ ಶರೀರದಿಂದ ಯಾವಕಾರ್ಯವು ಆಗುವಂತಿಲ್ಲ. ಈ ವಿಷಯವನ್ನು ತೃತೀಯ ಸ್ಕಂಧ ಭಾಗವತದಲ್ಲಿ "ಅಗ್ನಿರ್ವಾಚಾ ಮುಖಂಭೇಜೆ" ಎಂಬಶ್ಲೋಕ ವೊದಲು ಅಗ್ನಿದೇವರು ಮುಖದಲ್ಲಿ ಪ್ರವೇಶ ಮಾಡಿದರು. ವಿರಾಟ್ ಶರೀರವು ಏಳಲಿಲ್ಲ. ಎಂದು ಉಪಕ್ರಮ ಮಾಡಿ ೨೩ ತತ್ವೇಶರು ಶರೀರದಲ್ಲಿ ಪ್ರವೇಶಮಾಡಿದರೂ ವಿರಾಟ್ ಶರೀರವುಏಳಲಿಲ್ಲ. "ಚಿತ್ತೇನಹೃದಯಂ ಚೈತ್ಯಃಕ್ಷೇತ್ರಜ್ಞಃ ಪ್ರಾವಿಶದ್ಯದಾ | ವಿರಾಟ್ತದೈವ ಪುರುಷಃ ಸಲಿಲಾದುದತಿಷ್ಟತ" ಚಿತ್ತಾಭಿಮಾನಿಬ್ರಹ್ಮದೇವರು; ವಾಯು ದೇವರೇ ಬ್ರಹ್ಮದೇವರು. ಅವರಂತರ್ಯಾಮಿ ಕ್ಷೇತ್ರಜ್ಞನು ಹೀಗೆ ಬ್ರಹ್ಮವಾಯುಗಳಿಂದ ಕೂಡಿ ಅಂತರ್ಯಾಮಿಯಾದ ಕ್ಷೇತ್ರಜ್ಞನು ಪ್ರವೇಶಮಾಡಿದ ಕೂಡಲೆ ವಿರಾಟ್ ಶರೀರವು ಎದ್ದಿತು. ಎಂದು ಪ್ರಾಣದೇವರಿಗೆ ಸರ್ವ ಚೇತನೋತ್ತಮತ್ವವನ್ನು ಸ್ಥಾಪಿಸಿರುವರು. ಅಸು ಅಂದರೆ ಪ್ರಾಣ. ಪ್ರಾಣ ಶಬ್ದ ವಾಚ್ಯರೆ ವಾಯುದೇವರು. "ಅಸೌರತಾಃ ಅಸುರಾಃ" ಅಂದರೆ ಪ್ರಾಣದೇವರಲ್ಲಿ ಯಾರು ನಿರತರಾಗಿ ಅವರನ್ನು ನಂಬಿ, ವಾಯು ಮತವನ್ನು ಆಶ್ರಯಿಸಿರುವರೋ ಅವರಿಗೆ ಅಸುರಾಃ ಎಂಬ ಹೆಸರು ಕೂಡುವುದು. " ಪಿತಾಮಹಾದ್ಯಮರಾ ಸುರಾರ್ಚಿತ " ಎಂಬ ಸ್ಥಳದಲ್ಲಿ ಬ್ರಹ್ಮಾದಿ ದೇವತೆಗಳಿಂದಲೂ, ದೇವತೆಗಳಲ್ಲದ ಇತರರಾದ ವಾಯು ಮತಾವಲಂಬಿಗಳಿಂದಲೂ ಸಹ ಪೂಜಿತವಾದ ಪಾದ ಕಮಲ ಉಳ್ಳವನೆಂಬ ಅರ್ಥವು ಸಾಧುವೆಂದು ಕಾಣುವುದು. ಯಾರು ವಾಯು (ಮಧ್ವ) ಮತವನ್ನಾಶ್ರಯಿಸಿದವರೊ ಅವರೇ ಹರಿಸರ್ವೋತ್ತಮ, ವಾಯು ಜೀವೋತ್ತಮ ಜ್ಞಾನದಿಂದ ಕೂಡಿ ಶ್ರೀ ಹರಿಯೇ ಸರ್ವೋತ್ತಮನೆಂದು ಭಜಿಸುವರು, ಇತರರು ಹಾಗೆ ಭಜಿಸುವುದಿಲ್ಲ. ಅದ್ವೈತಿಗಳು ಈಶ್ವರ ಬ್ರಹ್ಮವಾದಿಗಳು; ವಿಶಿಷ್ಟಾದ್ವೈತಿಗಳು ಕೇವಲ ವಿಷ್ಣುದೀಕ್ಷಾ ಬದ್ಧರಾಗಿ ವೈಷ್ಣವರಾಗಿದ್ದರೂ "ಯಸ್ತ್ವಾಂದ್ವೇಷ್ಟಿ ಸಮಾಂದ್ವೇಷ್ಟಿ" ನನ್ನ ಭಕ್ತರಲ್ಲಿ ದ್ವೇಷಮಾಡುವವರನ್ನು

ನನ್ನಲ್ಲಿ ದ್ವೇಷ ಮಾಡಿದಂತೆಯೇ ಭಾವಿಸುವೆನು; ಎಂದು ಪರಮಾತ್ಮನ ವಾಕ್ಯವಿರುವುದು; ಇದಕ್ಕೆ ವಿರೋಧವಾಗಿ, ರುದ್ರಾದಿಗಳಲ್ಲಿ ಅವರು ದ್ವೇಷವನ್ನು ಬೆಳಸುವರು. ಆದ್ದರಿಂದ ಮಧ್ವಮತಾವಲಂಬಿಗಳು ಮಾತ್ರವೇ ತಾರತಮ್ಯ ಪ್ರಕಾರ ಭಗವಂತನನ್ನು ಭಜಿಸುವರು. ||೩೦||

ಅವತಾರಿಕೆ:—ಅನಿಮಿತ್ತ ಬಂಧುವಾದ ಸ್ವಾಮಿಯು ನಿಷ್ಕಾಮದಿಂದಲೆ ಸಾತ್ವಿಕಾದಿ ಪ್ರಾಣಿಗಳನ್ನು ಸೃಷ್ಟಿಸಿ ಸಂರಕ್ಷಣೆ ಮಾಡುವನೆಂದು ಹೇಳುತ್ತಾರೆ:—

**ದನುಜದಿವಿಜರೊಳಿದ್ದು ಅವರವ**
**ರನುಸರಿಸಿ ಕರ್ಮಗಳ ಮಾಳ್ಪನು**
**ಜನನ ಮರಣಾದ್ಯಖಿಳ ದೋಷವಿದೂರ ಎನ್ನೊಡನೆ ||**
**ಜನಿಸುವನು ಜೀವಿಸುವ ಸಂರ**
**ಕ್ಷಣೆಯ ಮಾಡುವನೆಲ್ಲಕಾಲದಿ**
**ಧನವ ಕಾಯ್ದಿಹ ಸರ್ಪನಂತನಿಮಿತ್ತ ಬಾಂಧವನು. ||೩೧||**

ಪದ್ಯಾರ್ಥ :—ದನುಜ ದಿವಿಜರೊಳಿದ್ದು= ದೈತ್ಯರಲ್ಲಿಯೂ ದೇವತೆಗಳಲ್ಲಿಯೂ ಇದ್ದು, ಅವರವರನು, ಅನುಸರಿಸಿ, ಕರ್ಮಗಳ ಮಾಳ್ಪನು ಜನನ ಮರಣಾದ್ಯಖಿಳ ದೋಷವಿದೂರ=ಹುಟ್ಟುವಿಕೆ, ಸಾಯುವಿಕೆ ಮೊದಲಾದ ದೋಷಗಳಿಲ್ಲದವನು, ಎನ್ನೊಡನೆ= ನಾವು ಹುಟ್ಟುವಾಗ, ಜನಿಸುವನು, ಜೀವಿಸುವ= ನಾವು ಜೀವಿಸಿರುವಾಗ ನಮ್ಮಲ್ಲಿದ್ದು ಬೆಳೆಯುತ್ತಾ ಬರುವನು. ಎಲ್ಲ ಕಾಲದಲಿ, ಧನವ ಕಾಯ್ದಿಹ ಸರ್ಪನಂತೆ=ನಿಧಿಯನ್ನು ಕಾದುಕೊಂಡಿರುವ ಹಾವಿನಂತೆ, ನಿಷ್ಕಾಮುಕನಾಗಿ, ಅನಿಮಿತ್ತ ಬಾಂಧವನು, ರಕ್ಷಣೆ ಮಾಡುವನು. ||೩೧||

ತಾತ್ಪರ್ಯ :—ಶ್ರೀ ಪರಮಾತ್ಮನು ದೇವತೆಗಳಲ್ಲಿದ್ದು ಅವರು ಮಾಡುವ ಭಗವದ್ಭಕ್ತಿ, ಸ್ತೋತ್ರ ಪೂಜೆ ಮೊದಲಾದವುಗಳನ್ನು ಅವರನ್ನನುಸರಿಸಿ ತಾನು ಮಾಡುವನು. ದೈತ್ಯರೊಳಗಿದ್ದು ತನ್ನೊಳು ದ್ವೇಷಾದಿಗಳು ದೇವತಾದ್ವೇಷಾದಿ ತಮಸ್ಸಾಧನವಾದಕಾರ್ಯಗಳನ್ನು ಅವರನ್ನನುಸರಿಸಿ ತಾನು ಮಾಡುವನು ಪರಮಾತ್ಮನಿಗೆ ಜನನ ಮರಣಾದಿ ದೋಷಗಳಿಲ್ಲದಿದ್ದರೂ, ಜೀವರು ಗರ್ಭಪ್ರವೇಶಮಾಡಿ ಶರೀರಗಳಿಂದ ಭೂಮಿಯಲ್ಲಿ ಜನಿಸಿದಾಗ ತಾನೂ ಜನಿಸುವನು. ಅವರು ಬೆಳೆಯುವಾಗ ತಾನೂ ಬೆಳೆಯುತ್ತಾ

ಬರುವನು. ಹಣವನ್ನು ಕಾದುಕೊಂಡಿರುವ ಸರ್ಪವು ಹೇಗೆ ಆ ಹಣವನ್ನು ತನ್ನ ಉಪಯೋಗಕ್ಕಾಗಿ ಅಪೇಕ್ಷಿಸದೆ ನಿಷ್ಕಾಮುಕವಾಗಿ ಕಾದುಕೊಂಡು ಮತ್ತೊಬ್ಬರಿಗೆ ಅದನ್ನು ಕೊಡದೆ ರಕ್ಷಿಸುವುದೋ ಹಾಗೆ ಪರಮಾತ್ಮನು ಯಾವ ನಿಮಿತ್ತವೂ ಇಲ್ಲದೆ ಜೀವರಿಗೆ ಬಾಂಧವನೆನಿಸಿ, ಸರ್ವಕಾಲಗಳಲ್ಲಿಯೂ ಅವರನ್ನು ಬಾಂಧುಗಳಂತೆ ರಕ್ಷಿಸುವನು.

ಅವತಾರಿಕೆ:—ಪರಮಾತ್ಮನು ಜೀವರಿಗೆ ಕಾಣದಿರುವ ಅನಾದಿ ಕರ್ಮಗಳನ್ನು ಅವರಿಂದ ಮಾಡಿಸಿ ನೋಡುವವರಿಗೆ ಆ ಕರ್ಮಗಳನ್ನು ತೋರ್ಪಡಿಸುವನೆಂಬ ವಿಷಯವನ್ನು ಸದೃಷ್ಟಾಂತವಾಗಿ ತಿಳಿಸುತ್ತಾರೆ.

**ಬಿಸರುಹಾಪ್ತಾಗಸದಿ ತಾನುದ**
**ಯಿಸಲು ವೃಕ್ಷಂಗಳ ನೆಳಲು ಪಸ**
**ರಿಸುವ ಇಳಿಯೊಳಗಸ್ತಮಿಸಲಲ್ಲಲ್ಲೆ ಲೀನಿಪವು ||**
**ಶ್ವಸನ ಮುಖ್ಯಮರಾಂತರಾತ್ಮಕ**
**ನೊಶದೊಳಿರುತಿಪ್ಪವು ಜಗತ್ರಯ**
**ಬಸರೊಳಿಂಬಿಟ್ಟೆಲ್ಲ ಕರ್ಮವ ತೋರ್ಪ ನೋಳ್ಪರಿಗೆ || ೩೨ ||**

ಪದ್ಯಾರ್ಥ :—ಬಿಸರುಹಾಪ್ತ=ಕಮಲಕ್ಕೆ ಆಪ್ತನಾದ ಸೂರ್ಯನು, ಆಗಸದಿ=ಆಕಾಶದಲ್ಲಿ, ತಾನು ಉದಯಿಸಲು, ವೃಕ್ಷಂಗಳ ನೆಳಲು, ಪಸರಿಸುವವು=ಗಿಡದ-ಬುಡದಲ್ಲಿ ಹರಡಿ ಇರುವವು. ಇಳಿಯೊಳಗೆ=ಭೂಮಿಯಲ್ಲಿ, ಅಸ್ತಮಿಸಲು=ಸೂರ್ಯನು ಅಸ್ತಮಯವಾಗಲು, ಅಲ್ಲಲ್ಲೆ, ಲೀನಿಪವು=ಅಲ್ಲಲ್ಲೇ ಮರೆಯಾಗುವುವು. ಶ್ವಸನ ಮುಖ್ಯ=ವಾಯುದೇವರು ಮೊದಲಾದ, ಅಮರಾಂತರಾತ್ಮಕನ=ದೇವತೆಗಳ ಅಂತರಾತ್ಮಕನಾದ ಶ್ರೀ ಹರಿಯ ಒಶದೊಳಗಿರುತಿಪ್ಪವು (ಜಗತ್ರಯವು). ಜಗತ್ರಯ=ಮೂರು ಲೋಕಗಳನ್ನು ಒಸರೊಳು=ತನ್ನ ಹೊಟ್ಟೆಯಲ್ಲಿ, ಇಂಬಿಟ್ಟು=ಚೆನ್ನಾಗಿ ಇಟ್ಟುಕೊಂಡು, ನೋಳ್ಪರಿಗೆ, ಎಲ್ಲ ಕರ್ಮವ, ತೋರ್ಪ=ತೋರ್ಪಡಿಸುವನು.

ತಾತ್ಪರ್ಯ ;—ಸೂರ್ಯನು ಉದಯವಾದರೆ ಗಿಡಮರಗಳ ನೆಳಲು ಚೆನ್ನಾಗಿ ಕಾಣುವುದು. ಅಸ್ತಮಯವಾಗಲು, ಅಲ್ಲಲ್ಲೆ ಮರೆಯಾಗುವುದು. ಇದೇ ರೀತಿಯಲ್ಲಿ ಶ್ರೀ ಬ್ರಹ್ಮ ವಾಯು ಮೊದಲಾದ ದೇವತೆಗಳ ಅಂತರಾತ್ಮಕನಾದ ಶ್ರೀ ಪರಮಾತ್ಮನ ವಶದಲ್ಲಿ ಈ ಮೂರು ಲೋಕಗಳೂ ಇರುವವು. ಅವುಗಳನ್ನು ತನ್ನ ಉದರದಲ್ಲಿಟ್ಟುಕೊಂಡು ಪ್ರಳಯಕಾಲದಲ್ಲಿ ಮಲಗಿರು

ವಾಗ ಯಾವ ಯಾವ ಜೀವರ ಕಾರ್ಯವೇನು ಎಂಬುವುದು ಯಾವ ಜೀವರಿಗೂ ಗೊತ್ತಿರುವುದಿಲ್ಲ. ಜೀವರನ್ನು ಸೃಷ್ಟಿಗೆ ತಂದಕೂಡಲೆ ಅವರವರು ಮಾಡಬೇಕಾದ ಕರ್ಮಗಳನ್ನು ಅವರವರಿಂದ ಮಾಡಿಸಿ ಆಯಾ ಕರ್ಮಗಳನ್ನು ನೋಳ್ಪರಿಗೆ ತೋರ್ಪಡಿಸುವನು. ಸೂರ್ಯನು ಅಸ್ತಮಯವಾದಕಾಲದಲ್ಲಿ ನೆಳಲು ಕಾಣದೆ ಉದಯವಾದ ಮೇಲೆ ಹೇಗೆ ಕಾಣುವುದೋ ಹಾಗೆ, ಪ್ರಳಯಕಾಲದಲ್ಲಿ ಜನರ ಕರ್ಮಗಳು ಕಾಣುವುದಿಲ್ಲ, ಸೃಷ್ಟ್ಯಾದಿ ವ್ಯಾಪಾರವನ್ನು ಬಿಟ್ಟು ಪರಮಾತ್ಮನು ಯೋಗ ನಿದ್ರೆಯಲ್ಲಿರುವುದರಿಂದ ಅಸ್ತಮಯೋಪಮಾನ. ಸೃಷ್ಟಿಯಾದಮೇಲೆ ಉದಯವಾದಂತೆ ಜನರ ವ್ಯಾಪಾರಗಳನ್ನು ತೋರ್ಪಡಿಸುವನು.

**ತ್ರಿಭುವನೈಕಾರಾಧ್ಯ ಲಕ್ಷ್ಮೀ**
**ಸುಭುಜಯುಗಳಾಲಿಂಗಿತಾಂಗ**
**ಸ್ವಭು ಸುಖಾತ್ಮ ಸುವರ್ಣವರ್ಣ ಸುಪರ್ಣ ವರವಾಹನ ||**
**ಅಭಯದನಂತಾರ್ಕ ಶಶಿಸಂ**
**ನಿಭ ನಿರಂಜನ ನಿತ್ಯದಲಿ ತನ**
**ಗಭಿನಮಿಸುವರಿಗೀವ ಸರ್ವಾರ್ಥಗಳ ತಡಿಯದಲೆ || ೩೩ ||**

ಪದ್ಯಾರ್ಥ :—ತ್ರಿಭುವನೈಕಾರಾಧ್ಯ=ಮೂರು ಲೋಕದ ಜನರಿಂದಲೂ ಮುಖ್ಯ ಪೂಜ್ಯನಾದ, ಲಕ್ಷ್ಮೀಸುಭಜಯುಗಳಾಲಿಂಗಿತಾಂಗ=ಲಕ್ಷ್ಮೀದೇವಿಯವರ ಎರಡು ಬಾಹುಗಳಿಂದ ಆಲಿಂಗನ ಮಾಡಿಸಿಕೊಳ್ಳಲ್ಪಟ್ಟ ಶರೀರ ಉಳ್ಳ, ಸ್ವಭು=ತನ್ನ ಇಚ್ಛೆಯಿಂದ ತಾನೇ ಭೂಮಿಯಲ್ಲಿ ಅವತರಿಸುವ, ಸುಖಾತ್ಮ=ಸುಖ ಸ್ವರೂಪನಾದ, ಅಥವಾ, ಸ್ವಭು ಸುಖಾತ್ಮ=ತನ್ನಿಂದ ತಾನೇ ಹುಟ್ಟಿದ ಸುಖ ಸ್ವರೂಪನಾದ, (ಸ್ವರಮಣನೆಂದರ್ಥ). ಸುವರ್ಣವರ್ಣ=ಚಿನ್ನದಂತೆ ದೇಹಕಾಂತಿಯುಳ್ಳ, ಸುಪರ್ಣ ವರವಾಹನ=ಗರುಡನೆಂಬ ಉತ್ತಮವಾದ ವಾಹನ ಉಳ್ಳ, ಅಭಯದ=ಎಲ್ಲರಿಗೂ ಅಭಯವನ್ನು ಕೊಡುವ, ಅನಂತಾರ್ಕ ಶಶಿಸನ್ನಿಭ=ಅನಂತ ಸೂರ್ಯರಂತೆ ಪ್ರಕಾಶ ಉಳ್ಳವನಾದರೂ ಅನೇಕ ಚಂದ್ರರಂತೆ ಶೀತ ಕಿರಣನಾದ, (ದಯೆಯೆಂಬ ಶೀತಳ ರಸಗಳಿಂದ ಪೂರ್ಣನೆಂದರ್ಥ.) ನಿರಂಜನ=ದೋಷರಹಿತನಾದ ಶ್ರೀ ಪರಮಾತ್ಮನು, ನಿತ್ಯದಲಿ ತನಗೆ ಅಭಿನಮಿಸುವರಿಗೆ=ನಮಸ್ಕಾರ ಮಾಡುವವರಿಗೆ, ತಡಿಯದಲೆ=ಸಾವಕಾಶ ಮಾಡದೆ, ಸರ್ವಾರ್ಥಗಳ=ಸಕಲ ಪುರುಷಾರ್ಥಗಳನ್ನು, ಈವ=ಕೊಡುವ.

**ತಾತ್ಪರ್ಯ :—** ಸ್ಪಷ್ಟವಾಗಿರುವುದು.

**ಅವತಾರಿಕೆ ;—**ಪ್ರತಿ ದಿವಸದ (ತ್ರಿಷವಣ) ತ್ರಿಸಂಧ್ಯಾಕಾಲಗಳಿಗೂ ನಮ್ಮ ಆಯುಷ್ಯದ ತ್ರಿಭಾಗದ ಕಾಲದಲ್ಲಿಯೂ ಭಗವದ್ರೂಪಗಳನ್ನು ತಿಳಿದು ಪೂಜಿಸುವುದೇ ತ್ರಿಷವಣದಲ್ಲಿ ಹೋಮಿಸುವ ಯೋಗವೆಂದು ಹೇಳುತ್ತಾರೆ.

**ಕವಿಗಳಿಂದಲಿ ತಿಳಿದು ಪ್ರಾತಃ**
**ಸವನ ಮಾಧ್ಯಂ ದಿನವು ಸಾಯುಮ**
**ಸವನಗಳು ವಸುರುದ್ರ ಆದಿತ್ಯರೊಳು ರಾಜಿಸುವ ॥**
**ಪವನನೊಳು ಕೃತಿಜಯ ಸುಮಾಯಾ**
**ಧವನ ಮೂರ್ತಿ ತ್ರಯವ ಚಿಂತಿಸಿ**
**ದಿವಸವೆಂಬಾಹುತಿಗಳಿಂದರ್ಚಿಸುತ ಸುಖಿಸುತಿರು ॥ ೩೪ ॥**

**ಪದ್ಯಾರ್ಥ :—** ಕವಿಗಳಿಂದಲಿ=ಜ್ಞಾನಿಗಳಿಂದ, ಪ್ರಾತಃ ಸವನ= ಪ್ರಾತಃ ಸಂಧ್ಯಾಕಾಲದ, ಆಹುತಿಯ ಲಕ್ಷಣವನ್ನು, ಮಾಧ್ಯಂ ದಿನವು= ಮಧ್ಯಾಹ್ನಕಾಲದ ಆಹುತಿಯ ಕ್ರಮವನ್ನೂ, ಸಾಯುಮ ಸವನಗಳು=ಸಾ ಯಂಕಾಲ ಸಂಧ್ಯಾ ಆಹುತಿ ಕ್ರಮವನ್ನು, ತಿಳಿದು, ಈ ಮೂರು ಸವನಗಳಿಗೆ ಭಿಮಾನಿಗಳಾದ, ವಸು ರುದ್ರ ಆದಿತ್ಯರೊಳು=ವಸುಗಣ, ರುದ್ರಗಣ, ಆದಿ ತ್ಯಗಣ ಇವರೊಳಗೆ, ರಾಜಿಸುವ=ಅಂತರ್ಯಾಮಿಯಾಗಿ ಶೋಭಿಸುವ, ಪವ ನನೊಳು=ಭಾರತೀರಮಣ ಮುಖ್ಯ ಪ್ರಾಣದೇವರೊಳಗೆ, ಕೃತಿ ಜಯ ಸು ಮಾಯಾ ಧವನ=ಕೃತಿ, ಜಯಾ, ಮಾಯಾ ಎಂಬ ಮೂರು ಲಕ್ಷ್ಮೀರೂಪ ಗಳ ಪತಿಗಳಾದ ಪ್ರದ್ಯುಮ್ನ, ಸಂಕರ್ಷಣ, ವಾಸುದೇವರ, ಮೂರ್ತಿ ತ್ರಯವ =ಮೂರು ರೂಪಗಳನ್ನು, ಚಿಂತಿಸಿ, ದಿವಸವೆಂಬ, ಆಹುತಿಗಳಿಂದ, ಅರ್ಚಿ ಸುತ, ಸುಖಿಸುತಿರು.

**ತಾತ್ಪರ್ಯ :—**ಯಾಗಗಳಲ್ಲಿ ಮೂರು ಕಾಲಗಳಲ್ಲಿ ಆಹುತಿ ಕೊಡುವು ದಕ್ಕೆ ತ್ರಿಸವನವೆಂದು ಸಂಕೇತ. ಈ ಪ್ರಾತಃ ಸವನ ಮಧ್ಯಾಹ್ನ ಸವನ, ಸಾ ಯಂ ಸವನವೆಂಬ ಮೂರು ಸವನಗಳಿಗೂ ಅಭಿಮಾನಿಗಳು ವಸುಗಣ, ರುದ್ರ ಗಣ ಆದಿತ್ಯಗಣರು. ಈ ಮೂರು ಗಣಗಳಲ್ಲಿಯೂ ಭಾರತೀರಮಣ ಮುಖ್ಯ ಪ್ರಾಣದೇವರಿರುವರು. ಅವರೊಳಗೆ, ಕೃತಿರಮಣ ಪ್ರದ್ಯುಮ್ನ, ಜಯಾರಮಣ ಸಂಕರ್ಷಣ ಮಾಯಾರಮಣ ವಾಸುದೇವನೆಂಬ ಮೂರು ರೂಪಗಳಿಂದ ಪರ ಮಾತ್ಮನು ವಾಸಮಾಡುವನೆಂದು ತಿಳಿದು, ಆ ಪರಮಾತ್ಮನಿಗೆ ನಮ್ಮ ಆಯು

ಷ್ಯದ ದಿನಗಳನ್ನೇ ಹವಿಸ್ಸೆಂದು ಭಾವಿಸಿ ಪೂಜಿಸಿದರೆ ಯಾಗ ಮಾಡಿದ ಉತ್ತಮ ಫಲವೇ ಬರುವುದೆಂಬ ತಾತ್ಪರ್ಯ.

ಅವತಾರಿಕೆ :—ಮೇಲಿನ ಪದ್ಯದಲ್ಲಿ ತ್ರಿಷವಣಕ್ಕೂ ಅಭಿಮಾನಿಗಳು ವಸುಗಣ, ರುದ್ರಗಣ, ಆದಿತ್ಯ ಗಣಗಳೆಂತಲೂ, ಆ ಗಣಗಳಲ್ಲಿ ಪ್ರದ್ಯುಮ್ನ ಸಂಕರ್ಷಣ, ವಾಸುದೇವ ಹೀಗೆ ಮೂರು ರೂಪಗಳಿರುವವೆಂದು ಹೇಳಿದರು. ಈ ಪದ್ಯದಿಂದ ಮನುಷ್ಯಾಯುಷ್ಯವನ್ನು ತ್ರಿಸವನಕ್ಕೆ ಹಂಚಿ ಯಾವ ಯಾವ ಗಣಗಳಲ್ಲಿ ಎಷ್ಟೆಷ್ಟು ವರ್ಷಗಳು ಇರುತ್ತಾರೆಂಬುವುದನ್ನು ಹೇಳುತ್ತಾರೆ.

**ಚತುರ ವಿಂಶತ್ಯಬ್ದ ವಸುದೇ**
**ವತೆಗಳೊಳು ಪ್ರದ್ಯುಮ್ನ ನಿಪ್ಪನು**
**ಚತುಶ್ಚತ್ವಾರಿಂಶತಿಗಳಲಿ ಸಂಕರ್ಷಣಾಖ್ಯ ||**
**ಹುತ ವಹಾಕ್ಷನೊಳಿಹನು ಮಾಯಾ**
**ಪತಿಯು ಹದಿನಾರಧಿಕದ್ವಾತ್ರಿಂ**
**ಶತಿ ವರುಷಗಳಲಿಪ್ಪನಾದಿತ್ಯನೊಳು ಸಿತಕಾಯ || ೩೫ ||**

ಪದ್ಯಾರ್ಥ :—ಚತುರ ವಿಂಶತ್ಯಬ್ದ=೨೪ ವರ್ಷಗಳವರೆಗೂ, ವಸುದೇವತೆಗಳೊಳು=ಅಷ್ಟವಸುಗಳಲ್ಲಿ, ಪ್ರದ್ಯುಮ್ನ ನಿಪ್ಪನು. ಚತುಶ್ಚತ್ವಾರಿಂಶತಿಗಳಲಿ=೪೪ ವರ್ಷಗಳವರೆಗೂ, ಹುತವಹಾಕ್ಷನೊಳು=ಅಗ್ನಿನೇತ್ರರಾದ ರುದ್ರದೇವರಲ್ಲಿ, ಸಂಕರ್ಷಣಾಖ್ಯ=ಸಂಕರ್ಷಣ ನಾಮಕ ಪರಮಾತ್ಮನು, ಇಹನು=ಇರುವನು. ಸಿತಕಾಯ=ಬಿಳಪು ಬಣ್ಣವಾದ ಶರೀರವುಳ್ಳ, ಮಾಯಾಪತಿಯು=ವಾಸುದೇವನು, ಹದಿನಾರಧಿಕ ದ್ವಾತ್ರಿಂಶತಿ ವರುಷಗಳಲಿ =೧೬+೩೨=೪೮ ವರ್ಷಗಳವರೆಗೂ, ಆದಿತ್ಯನೊಳು=ಸೂರ್ಯನಲ್ಲಿ, ಇಪ್ಪ =ಇರುತ್ತಿರುವನು.

ತಾತ್ಪರ್ಯ :—ಮನುಷ್ಯಾಯುಷ್ಯದಲ್ಲಿ ಮೊದಲು ೨೪ ವರ್ಷಗಳು ಅಷ್ಟವಸುಗಳಭಿಮಾನಿಗಳೆನಿಸುವ ಪ್ರಾತಃ ಸವನಕಾಲವೆಂದೆನಿಸುವುದು. ಆ ವಸುದೇವತೆಗಳೊಳಗೆ ಪ್ರದ್ಯುಮ್ನ ರೂಪೀ ಶ್ರೀ ಪರಮಾತ್ಮನಿರುವನು. ಅದರ ಮೇಲೆ ೪೪ ವರ್ಷಗಳವರೆಗೂ ಮಾಧ್ಯಾಹ್ನ ಸವನ, ಅದರಭಿಮಾನಿಗಳು ರುದ್ರಗಣ, ಅವರಲ್ಲಿ ಸಂಕರ್ಷಣ ರೂಪದಿಂದ ಪರಮಾತ್ಮನು ವಾಸಮಾಡುವನು. ತದನಂತರ ೪೮ ವರ್ಷಗಳವರೆಗೂ ಸಾಯಂ ಸವನ, ಅದರಭಿಮಾನಿಗಳು ಆದಿತ್ಯಗಣ, ಅವರಲ್ಲಿ ವಾಸುದೇವಮೂರ್ತಿ ವಾಸಮಾಡುವನು.

**ಷೋಡಶೋತ್ತರ ಶತ ವರ್ಷದಲಿ**
**ಷೋಡಶೋತ್ತರ ಶತ ಸುರೂಪದಿ**
**ಕ್ರೀಡಿಸುವವಸುರುದ್ರ ಆದಿತ್ಯರೊಳು ಸತಿಸಹಿತ ॥**
**ವ್ರೀಡವಿಲ್ಲದೆ ಭಜಪ ಭಕ್ತರ**
**ಪೀಡಿಸುವದುರಿತೌಘಗಳದೂ**
**ರೋಡಿಸುತ ಬಳಿಯಲಿ ಬಿಡದೆ ನೆಲಸಿಪ್ಪ ಭಯಹಾರಿ ॥ ೩೬ ॥**

ಪದ್ಯಾರ್ಥ :— ಷೋಡಶೋತ್ತರ ಶತವರ್ಷದಲಿ=ಮೇಲಿನ ಪದ್ಯದಲ್ಲಿ ಹೇಳಿದ ವರ್ಷಗಳ ಒಟ್ಟು ಸಂಖ್ಯಾ ೧೧೬, ಇವುಗಳಲ್ಲಿ, ಷೋಡಶೋತ್ತರ ಶತಸುರೂಪದಿ=೧೧೬ ಉತ್ತಮ ರೂಪಗಳಿಂದ ಶ್ರೀ ಪರಮಾತ್ಮನು ವಸು ರುದ್ರ ಆದಿತ್ಯರೊಳು, ವಸುಗಣ, ರುದ್ರಗಣ, ಆದಿತ್ಯಗಣಗಳಲ್ಲಿ, ಸತಿಸಹಿತ=ಹೆಂಡರಿಂದೊಡಗೂಡಿ, ಕ್ರೀಡಿಸುವ=ವಿಹರಿಸುತ್ತಿರುವನು. ವ್ರೀಡವಿಲ್ಲದೆ=ನಾಚಿಕೆ ಇಲ್ಲದೆ, ಭಜಿಪ, ಭಕ್ತರ, ಪೀಡಿಸುವ ದುರಿತೌಘಗಳ=ಭಕ್ತರನ್ನು ಕಷ್ಟಪಡಿಸುವ ದುಃಖಸಮೂಹಗಳನ್ನು ಅಥವಾ ಪಾಪ ಸಂಘಗಳನ್ನು, ದೂರೋಡಿಸುತ, ಭಯಹಾರಿ=ಭಯಪರಿಹಾರಕನಾಗಿ, ಬಳಿಯಲ್ಲಿ, ಬಿಡದೆ ನೆಲಸಿಪ್ಪ=ವಾಸವಾಗಿರುವನು.

ತಾತ್ಪರ್ಯ :—ಮೇಲಿನ ಪದ್ಯದಲ್ಲಿ ಮೂರು ಸವನಗಳನ್ನು ಆಯುಷ್ಯ ವರ್ಷಗಳಲ್ಲಿ ಹಂಚುವಾಗ ಮೊದಲು ಸವನ ೨೪ ವರ್ಷಗಳು, ಎರಡನೆಯದು ೪೪ ವರ್ಷಗಳು ಮೂರನೆಯ ಸವನಕ್ಕೆ ೪೮ ವರ್ಷಗಳೆಂದು ಹೇಳಿದರು. ಒಟ್ಟು ೧೧೬ ವರ್ಷಗಳಾದವು. ಮನುಷ್ಯರಿಗೆ ೧೦೦ ವರ್ಷಗಳಾಯುಷ್ಯವಿರಲು ೧೧೬ ವರ್ಷಗಳನ್ನು ಹೇಳಿದವರ ಅಭಿಪ್ರಾಯವೇನೆಂದರೆ, ಛಾಂದೋಗ್ಯಭಾಷ್ಯ ೩ ನೆಯ ಅಧ್ಯಾಯದಲ್ಲಿ 'ವಿಷ್ಣುಪೂಜಾರ್ಥ ಯಜ್ಞೋಹ ಮಿತ್ಯುಪಾಸನ ಮಾದರಾತ್॥ಕುರ್ವೀತ ಪುರುಷೋನಿತ್ಯಂ ತಸ್ಯಯತ್ಷೋಡಶೋತ್ತರಂ॥ಶತಮಾಯುಸ್ತತ್ಸವನತ್ರಯ ಮೀರಿತ ಮುತ್ತಮಂ ॥ ಚತುರ್ವಿಂಶತ್ತು ಯತ್ಪೂರ್ವಂ ಪ್ರಾತಃಸವನ ಮೇವತತ್॥ಪ್ರಾರ್ಥಯಿತ್ವಾ ವಸೂಂಸ್ತದ್ಗಂ ಪುಮಾನ್ ವೃತ್ತ್ಯಮುಪಾಸುದೇತ್ ॥ ಮಧ್ಯೇ ಚತುಶ್ಚತ್ವಾರಿಂಶನ್ ಮಾಧ್ಯಮಂ ಸವನಂ ಸ್ಮೃತಂ॥ರುದ್ರಾಣಾಂ ಪ್ರಾರ್ಥನೇನಾತ್ರ ಪುಮಾನ್ ವೃತ್ತ್ಯಮುಪಾಸುದೇತ್॥ ತತೋಷ್ಟ ಚತ್ವಾರಿಂಶತ್ತು ತೃತೀಯಂ ಸವನಂ ಸ್ಮೃತಂ ॥ ಆದಿತ್ಯಾನಾಂ ಪ್ರಾರ್ಥನೇನತದ್ಗಂ ವೃತ್ತ್ಯಮುಪಾಸುದೇದಿತಿ ಸರ್ವಯಜ್ಞೇ " ಇದರರ್ಥ:—

ವಿಷ್ಣುಪೂಜಾರ್ಥವಾಗಿ ನಾನೇ ಯಜ್ಞಭೂತನು; ಅಂದರೆ ನನ್ನ ಸ್ವರೂಪವೇ ಯಜ್ಞವು, ಎಂದು ಪುರುಷನು ಪ್ರತಿನಿತ್ಯದಲ್ಲೂ ಉಪಾಸನೆ ಮಾಡಬೇಕು. ಹೀಗೆ ಮಾಡುವುದರಿಂದ ಅವನಿಗೆ ಆಯುಷ್ಯವು (೧೧೬) ನೂರ ಹದಿನಾರು ವರ್ಷಗಳಾಗುವವು. ಈ ಆಯುಷ್ಯ ವರ್ಷಗಳನ್ನೇ ಯಾಗದಲ್ಲಿ ಹೋವಿಸುವ ಸವನವನ್ನಾಗಿ ಹಂಚಬೇಕು. ಅದರಲ್ಲಿ ಮೊದಲು ೨೪ ವರ್ಷಗಳವರೆವಿಗೂ ಪ್ರಾತಃ ಸವನವೆನಿಸುವುದು ಆ ಸವನಕ್ಕೆ ಅಭಿಮಾನಿಗಳು ವಸುಗಣವು. ಆ ವಸುಗಳನ್ನು ಪ್ರಾರ್ಥಿಸಿ ಆ ವರ್ಷದವರೆವಿಗೂ ಇರುವ ಅಪಮೃತ್ಯುವನ್ನು ಪರಿಹರಿಸಿಕೊಳ್ಳಬೇಕು. ಅಂದರೆ ಅವರ ಅಂತರ್ಯಾಮಿ ಪ್ರದ್ಯುಮ್ನದೇವರು ಪರಿಹರಿಸುವರೆಂಬ ತಾತ್ಪರ್ಯ. ಅದರಮೇಲೆ ಆಯುಷ್ಯದ ಮಧ್ಯಕಾಲದ ೪೪ ವರ್ಷಗಳು ಮಧ್ಯಮ ಸವನವೆನಿಸುವುದು. ಆಕಾಲಾಭಿಮಾನಿಗಳಾದ ರುದ್ರಗಣವನ್ನು ಪ್ರಾರ್ಥಿಸಿ ಆಕಾಲದ ಮೃತ್ಯುವನ್ನು ಪರಿಹರಿಸಿಕೊಳ್ಳಬೇಕು. ಅದರ ಮೇಲೆ ೪೮ ವರ್ಷಗಳು ಮೂರನೆಯ ಸವನವೆನಿಸುವುದು. ಆ ಕಾಲದ ಅಭಿಮಾನಿಗಳಾದ ಆದಿತ್ಯಗಣವನ್ನು ಆರಾಧಿಸಿ ಆಕಾಲದ ಮೃತ್ಯುವನ್ನು ಕಳೆದುಕೊಳ್ಳಬೇಕು. ಎಂದು ಸರ್ವಯಜ್ಞವೆಂಬ ಗ್ರಂಥದಲ್ಲಿ ಹೇಳಲ್ಪಟ್ಟಿರುವುದು. ಹೀಗೆ ಮಾಡಿದವರಾರಾದರೂ ಇರುವರೆ ಎಂಬ ವಿಷಯದಲ್ಲಿ ಶಿಷ್ಟಾಚಾರವನ್ನು ತೋರಿಸುವುದಕ್ಕಾಗಿ ಐತರೇಯ ಇತರಾದೇವಿಯ ಕುಮಾರನಾದ ಮಹಿದಾಸ ನಾಮಕ (ಪರಮಾತ್ಮನಲ್ಲದ ಮತ್ತೊಬ್ಬ ಇತರಾ ಕುಮಾರನಾದ ಮಹಿದಾಸನೆಂಬ) ಋಷಿಯು ಇಂತಹಾ ಉಪಾಸನೆಯನ್ನು ಮಾಡಿ ೧೧೬ ವರ್ಷಗಳು ಬದುಕಿದ್ದನು. ಆದ್ದರಿಂದ ಹೀಗೆ ಉಪಾಸನೆಯನ್ನು ಮಾಡುವವರು ೧೧೬ ವರ್ಷ ಆಯುಷ್ಯವಂತರಾಗುವರೆಂದು ಛಾಂದೋಗ್ಯೋಪನಿಷದ್ಭಾಷ್ಯದಲ್ಲಿ ಇರುವುದು. ಅದೇ ಅಭಿಪ್ರಾಯವನ್ನೇ ದಾಸರಾಯರು ಮೇಲಿನ ಪದ್ಯದಲ್ಲಿ ತೋರಿಸಿ ಈ ಪದ್ಯದಲ್ಲಿ ಆ ವರ್ಷಗಳಂತರ್ಯಾಮಿ ಭಗವದ್ರೂಪ ಚಿಂತನೆಯ ಫಲವನ್ನು ಹೇಳುತ್ತಾರೆ:—೧೧೬ ವರ್ಷಗಳಲ್ಲಿ ೧೧೬ರೂಪಗಳಿಂದ ಭಾರ್ಯಾ ಸಮೇತನಾಗಿ ಶ್ರೀಹರಿಯು ವಸು, ರುದ್ರ, ಆದಿತ್ಯರೊಳಗೆ ಕ್ರೀಡಿಸುತ್ತಿರುವನು. ಲಜ್ಜೆಯನ್ನು ಬಿಟ್ಟು ಯಾವ ಮನುಷ್ಯರು ಹೀಗೆ ಭಜಿಸುವರೊ ಅಂತಹಾ ಭಕ್ತರನ್ನು ಪೀಡಿಸುವ ಅಪಮೃತ್ಯು ಮೊದಲಾದ ದುಃಖ ಸಮೂಹಗಳು ಏನಿದ್ದರೂ ಅವುಗಳನ್ನು ದೂರ ಓಡಿಸುತ್ತಾ, ಅವರ ಸಮೀಪದಲ್ಲೇ ಸರ್ವದಾ ಇದ್ದು, ಭಯಹಾರಕನು, ಸಂರಕ್ಷಿಸುತ್ತಿರುವನು.

ಈ ಮೂರು ಸವನಗಳಲ್ಲಿರುವ ಒಟ್ಟು ಭಗವದ್ರೂಪಗಳನ್ನು ಹೇಳು ತ್ತಾರೆ :—

ಮೂರಧಿಕ ಎಂಭತ್ತು ಸಹಸ್ರೈ
ನೂರು ಇಪ್ಪತ್ತೆನಿಪ ರೂಪದಿ
ತೋರುತಿಪ್ಪ ದಿವಾನಿಶಾಧಿಪರೊಳಗೆ ನಿತ್ಯದಲಿ ॥
ಭಾರತೀ ಪ್ರಾಣರೊಳಗಿದ್ದು ನಿ
ವಾರಿಸುತ ಭಕ್ತರ ದುರಿತ ಹಿಂ
ಕಾರ ನಿಧನ ಪ್ರಥಮರೂಪದಿ ಪಿತೃಗಳನೆ ಪೊರೆವ ॥ ೩೭ ॥

ಪದ್ಯಾರ್ಥ :—ಮೂರಧಿಕ ಎಂಭತ್ತು ಸಹಸ್ರೈನೂರ ಇಪ್ಪತ್ತೆನಿಪ (೮೩೫೨೦) ರೂಪಗಳಿಂದ, ದಿವಾನಿಶಾಧಿಪರೊಳಗೆ ಮೇಲೆ ಹೇಳಿದ ೧೧೬ ವರ್ಷಗಳ, ಹಗಲು ರಾತ್ರಿಗಳಧಿಪತಿ ದೇವತೆಗಳೊಳಗೆ, ನಿತ್ಯದಲಿ, ತೋರು ತಿಪ್ಪ. ಭಾರತೀ ಪ್ರಾಣರೊಳಗೆ=ಭಾರತೀ ದೇವಿ ಪ್ರಾಣದೇವರ ಅಂತರ್ಯಾ ಮಿಯಾಗಿ, ಹಿಂಕಾರ, ನಿಧನ, ಪ್ರಥಮ ರೂಪದಿ=ಪ್ರಸ್ತಾವ ರೂಪಗಳಿಂದ ತಚ್ಛಬ್ದವಾಚ್ಯರಾದ ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ರೂಪಗಳಿಂ ದಿದ್ದು, ಭಕ್ತರ, ದುರಿತ, ನಿವಾರಿಸುತ, ಪಿತೃಗಳನೆ, ಪೊರೆವ.

ತಾತ್ಪರ್ಯ:—ಮೇಲಿನ ಪದ್ಯದಲ್ಲಿ ಹೇಳಿದ ೧೧೬ ವರ್ಷಗಳಿಗೆ, ವರ್ಷ ಒಂದಕ್ಕೆ ೩೬೦ ಹಗಲಿನಂತೆ ಒಟ್ಟು ಹಗಲು ೧೧೬×೩೬೦=೪೧೭೬೦ ಇದ ರಂತೆ ರಾತ್ರಿ ೪೧೭೬೦, ಒಟ್ಟು ೮೩೫೨೦ ರೂಪಗಳಿಂದ, ಹಿಂಕಾರ, ನಿಧನ, ಪ್ರಸ್ತಾವ ರೂಪಗಳಿಂದ ತೋರುವನು. ಇದರ ವಿವರ;ಮೊದಲು ಸವನದ ೨೪ ವರ್ಷಗಳಿಗಾಗುವ ೨೪×೩೬೦=೮೬೪೦ ಹಗಲು,ಅಷ್ಟೇ ರಾತ್ರಿ, ಇವುಗ ಳಿಗೆ ಹಿಂಕಾರನಾಮಕ ಪ್ರದ್ಯುಮ್ನನು, ಎರಡನೆಯ ಸವನ ೪೪ವರ್ಷಗಳಿಗಾ ಗುವ ಹಗಲು, ೪೪×೩೬೦=೧೫೮೪೦; ರಾತ್ರಿ ೧೫೮೪೦, ಇಷ್ಟು ಹಗಲು ರಾತ್ರಿಗಳಿಗೆ ನಿಧನನಾಮಕ ಸಂಕರ್ಷಣನು,ಮೂರನೆಯ ಸವನ ೪೮ ವರ್ಷಗ ಳಿಗಾಗುವ ಹಗಲು, ೪೮×೩೬೦=೧೭೨೮೦,ರಾತ್ರಿ ೧೭೨೮೦, ಈ ಹಗಲು ರಾತ್ರಿಗಳಿಗೆ ಪ್ರಥಮರೂಪದಿ ಅಂದರೆ ಪ್ರಥಮಾವತಾರವಾದುದರಿಂದ ಪ್ರಸ್ತಾ ವನಾಮಕ ವಾಸುದೇವ ರೂಪದಿಂದವೆಂಬರ್ಥ. “ ನಿಧನ ಹಿಂಕಾರ ಪ್ರಥಮ ರೂಪದಿ' ಎಂದು ದಾಸರಾಯರುಹೇಳಿರುವರು, ಇದರಲ್ಲಿರುವ ಪ್ರಥಮಶಬ್ದಕ್ಕೆ ಪ್ರಸ್ತಾವ ಎಂದು ಹೇಗೆ ಅರ್ಥವೆಂದರೆ ಛಾಂದೋಗ್ಯ ಭಾಷ್ಯ ೨ನೆಯ ಅಧ್ಯಾ

ಯು ಎರಡನೆಯ ಉಪನಿಷದ್ವಾಕ್ಯದಲ್ಲಿ 'ಪ್ರಥಮಾವತಾರ ರೂಪತ್ವಾದ್ವಾಸುದೇವಃ ಪರಃ ಪುಮಾನ್||ಪ್ರಸ್ತಾವೋ ನಿಧನಂಚಾಪಿ ಸಂಕರ್ಷಣ ಉದಾಹೃತಃ || ಸಂಕರ್ಷಣೋಹಿ ಸಂಹರ್ತಾ ಪ್ರದ್ಯುಮ್ನಃ ಪರಮೇಶ್ವರಃ || ಹಿಂಕಾರ ಇತಿ ಸಂಪ್ರೋಕ್ತೋ ಹೀತಿ ಸೃಷ್ಟಿರುದೀರ್ಯತೆ' ಪ್ರಥಮಾವತಾರ ರೂಪವಾದುದರಿಂದ, ಪರಮಪುರುಷನಾದ ವಾಸುದೇವನು ಪ್ರಸ್ತಾವನೆನಿಸುವನು. ಸಂಕರ್ಷಣನು ಸಂಹಾರ ಕರ್ತನಾದುದರಿಂದ ನಿಧನನೆನಿಸುವನು. ಪ್ರದ್ಯುಮ್ನನು ಸೃಷ್ಟಿಕರ್ತನಾದುದರಿಂದ, 'ಹಿಂಕರೋತೀತಿ ಹಿಂಕಾರಃ' ಹಿ ಅಂದರೆ ಸೃಷ್ಟಿ; ಅದನ್ನು ಮಾಡುವವನಾದುದರಿಂದ ಹಿಂಕಾರನೆಂದೆನಿಸುವನು. ಎಂದು ಹೇಳಿರುವರು. ಆದ್ದರಿಂದ ಇಲ್ಲಿ ಪ್ರಥಮ ಎಂಬ ಪದಕ್ಕೆ ಪ್ರಸ್ತಾವ ಎಂತಲೂ ಹಿಂಕಾರ ನಿಧನ, ಪ್ರಸ್ತಾವ ಶಬ್ದಗಳಿಗೆ ಪ್ರದ್ಯುಮ್ನ, ಸಂಕರ್ಷಣ, ವಾಸುದೇವರೆಂತಲೂ ಅರ್ಥಮಾಡಲು ಕಾರಣವಾಯಿತು. ಇಂತಹಾ ಮೂರು ರೂಪಗಳಿಂದ ಭಾರತೀ ಪ್ರಾಣದೇವರಂತರ್ಯಾಮಿಯಾಗಿ ಒಟ್ಟು ಲಕ್ಷ೨೦ ರಾತ್ರಿ ಹಗಲುಗಳಿಗೆ ಅಭಿಮಾನಿಗಳಾದ ವಸು, ರುದ್ರ, ಆದಿತ್ಯರೊಳಗೆ ಇದ್ದು, ಭಕ್ತರಿಗೆ ಬರುವ ದುರಿತಗಳನ್ನು ಪರಿಹರಿಸುತ್ತ, ಅವರ ಪಿತೃಗಳನ್ನು ರಕ್ಷಿಸುತ್ತ ಇರುವನೆಂಬ ತಾತ್ಪರ್ಯ.

ಪರಮಾತ್ಮನು ಸರ್ವತ್ರ ಇದ್ದರೂ ನಿರ್ಲಿಪ್ತನಾಗಿರುವನೆಂಬ ವಿಷಯವನ್ನು ಸದೃಷ್ಟಾಂತವಾಗಿ ತಿಳಿಸುತ್ತಾರೆ:—

**ಬುದ್ಧಿ ಪೂರ್ವಕ ಉತ್ತಮೋತ್ತಮ**
**ಶುದ್ಧ ಊರ್ಣಾಂಬರವ ಪಂಕದೊ**
**ಳದ್ದಿ ತೆಗೆಯಲು ಲೇಪವಾಗುವುದೆ ಪರೀಕ್ಷಿಸಲು ||**
**ಪದ್ಮನಾಭನು ಸರ್ವಜೀವರೊ**
**ಳಿದ್ದರೇನು ಗುಣತ್ರಯಂಗಳಿಂ**
**ಬದ್ಧನಾಗುವ ನೇನೊನಿತ್ಯ ಸುಖಾತ್ಮ ಚಿನ್ಮಯನು. || ೩೮ ||**

ಪದ್ಯಾರ್ಥ :—ಬುದ್ಧಿಪೂರ್ವಕ=ಬುದ್ಧಿಪೂರ್ವಕವಾಗಿ, ಉತ್ತಮೋತ್ತಮ, ಶುದ್ಧ,ಅತ್ಯುತ್ತಮವಾದ, ಶುದ್ಧವಾದ, ಊರ್ಣಾಂಬರವ=ರೇಷಿಮೆ ವಸ್ತ್ರವನ್ನು, ಪರೀಕ್ಷಿಸಲು, ಪಂಕದೊಳು=ಕೆಸರಿನೊಳಗೆ, ಅದ್ದಿ ತೆಗೆಯಲು, ಲೇಪವಾಗುವುದೆ=ಕೆಸರು ಆಊರ್ಣವಸ್ತ್ರದ ಒಳಗೆ ಸಂಬಂಧಿಸುವುದೇ; ಆಗುವುದಿಲ್ಲ. ಪದ್ಮನಾಭನು, ಸರ್ವ ಜೀವರೊಳಿದ್ದರೇನು; ನಿತ್ಯಸುಖಾತ್ಮ=

ನಿತ್ಯ ಸುಖಸ್ವರೂಪನೂ, ಚಿನ್ಮಯನು=ಚಿತ್ಸ್ವರೂಪನೂ ಆದ ಹರಿಯು, ಗುಣತ್ರಯಗಳಿಂದ = ಸತ್ವಾದಿ ಮೂರು ಗುಣಗಳಿಂದ, ಬದ್ಧನಾಗುವ ನೇನೋ? ಎಂದಿಗೂ ಆಗಲಾರನು.

ತಾತ್ಪರ್ಯ :—ಪರಮ ಉತ್ತಮವಾದ ಶುದ್ಧ ರೇಷ್ಮೆಯ ವಸ್ತ್ರವನ್ನು ಪರೀಕ್ಷಿಸುವುದಕ್ಕಾಗಿ ಕೆಸರಿನೊಳಗದ್ದಿದರೂ ಆ ವಸ್ತ್ರಕ್ಕೆ ಕೆಸರು ಹೇಗೆ ಹತ್ತದೊ ಹಾಗೆ ಪರಮಾತ್ಮನು ತ್ರಿಗುಣಬದ್ಧರಾದ ಸಕಲ ಪ್ರಾಣಿಗಳಲ್ಲಿದ್ದರೂ ಗುಣಬದ್ಧನಾಗದೆ ನಿರ್ಲಿಪ್ತನಾಗಿ ಇರುವನು. ಚಿದಾನಂದ ಸ್ವರೂಪನಾದ ಪರಮಾತ್ಮನನ್ನು ಈ ಪ್ರಾಕೃತ ಗುಣಗಳು ಬಂಧಿಸುವವೇ? ಎಂದಿಗೂ ಇಲ್ಲ ವೆಂಬ ತಾತ್ಪರ್ಯ.

ಪರಮಾತ್ಮನ ಗುಣವನ್ನೇ ವಿವರಿಸುತ್ತಾರೆ,

**ಸಕಲ ದೋಷ ವಿದೂರ ಶಶಿಪಾ**
**ವಕ ಸಹಸ್ರಾನಂತ ಸೂರ್ಯ**
**ಪ್ರಕರ ಸನ್ನಿಭಗಾತ್ರ ಲಕುಮಿಕಳತ್ರ ಸುರಮಿತ್ರ ||**
**ವಿಖನ ಸಾಂಡದೊಳಿಪ್ಪ ಬ್ರಹ್ಮಾ**
**ದ್ಯಖಿಳ ಚೇತನ ಗಣಕೆ ತಾನೆ**
**ಸಖನೆನಿಸಿಕೊಂಡ ಕುಟಿಲಾತ್ಮಕ ನಿಪ್ಪನವರಂತೆ || ೩೯ ||**

ಪದ್ಯಾರ್ಥ :—ಸಕಲ ದೋಷವಿದೂರ=ಯಾವ ವಿಧವಾದ ದೋಷವೂ ಇಲ್ಲದವನು, ಸಹಸ್ರಾನಂತ=ಕೊನೆಗಾಣದ ಸಹಸ್ರ ಸಂಖ್ಯಾ ಉಳ್ಳ, ಶಶಿ=ಚಂದ್ರನು, ಪಾವಕ=ಅಗ್ನಿಯು, ಸೂರ್ಯ ಇವರುಗಳ, ಪ್ರಕರ= ಸಮೂಹಕ್ಕೆ, ಸನ್ನಿಭ=ಸಮವಾದ ಕಾಂತಿಯಿಂದ ಶೋಭಿಸುವ, ಗಾತ್ರ= ಶರೀರ ಉಳ್ಳ, ಲಕುಮಿ ಕಳತ್ರ=ಲಕ್ಷ್ಮೀದೇವಿಯರೇ ಭಾರ್ಯರಾಗುಳ್ಳ, ಸುರ ಮಿತ್ರ=ದೇವತೆಗಳಿಗೆ ಮಿತ್ರನಾದ ಶ್ರೀ ಹರಿಯು, ವಿಖನ ಸಾಂಡದೊಳ = ಬ್ರಹ್ಮಾಂಡದೊಳಗೆ, ಇಪ್ಪ=ಇರುವ, ಬ್ರಹ್ಮಾದಿ=ಬ್ರಹ್ಮ ಮೊದಲಾದ, ಅಖಿಳ ಚೇತನಗಣಕೆ= ಸಮಸ್ತವಾದ ಚೇತನ ಗಣಗಳಿಗೆ, ತಾನೆ, ಅಕುಟಿಲಾತ್ಮಕ=ನಿರ್ವಂಚಕನಾಗಿ, ಸಖನೆನಿಸಿಕೊಂಡು, ಅವರಂತೆ, ಬ್ರಹ್ಮಾದಿ ಚೇತನರಂತೆ, ಇಪ್ಪ=ಇರುವನು.

ತಾತ್ಪರ್ಯ :—ಶ್ರೀ ಹರಿಯು, ಜನನ ಮರಣ ಮೊದಲಾದ ಯಾವ ದೋಷವೂ ಇಲ್ಲದವನು. ಅನೇಕ ಸಹಸ್ರ ಚಂದ್ರ, ಅಗ್ನಿ, ಸೂರ್ಯರಂತೆ

ಪ್ರಕಾಶಿಸುವ ದೇಹಕಾಂತಿಯುಳ್ಳವನು. ಚಂದ್ರ, ಅಗ್ನಿ, ಸೂರ್ಯ ಹೀಗೆ ಮೂರು ಉಪಮಾನ ಕೊಟ್ಟಿರುವರು. ಇದರ ಪ್ರಯೋಜನವೇನೆಂದರೆ, ದೃಷ್ಟಾಂತದಲ್ಲಿ ಸರ್ವಸಾಮ್ಯ ಕೂಡುವುದಿಲ್ಲ. ಒಂದೊಂದು ಭಾಗದಲ್ಲಿ ಒಂದೊಂದು ಉಪಮಾನವನ್ನು ತೆಗೆದುಕೊಳ್ಳಬೇಕು. ಅನಂತ ಚಂದ್ರನಂತೆ ಎಂಬ ಉಪಮಾನವು ಆಹ್ಲಾದ ವಿಷಯದಲ್ಲಿ ತೆಗೆದುಕೊಳ್ಳಬೇಕು. ಚಂದ್ರನಂತೆ ಆಹ್ಲಾದ ಗುಣವು, ಸೂರ್ಯನಂತೆ ಪ್ರಕಾಶವು, ಪಾಪಗಳನ್ನು ದಹನ ಮಾಡುವ ವಿಷಯದಲ್ಲಿ ಅಗ್ನಿಯೆಂತೆಯೂ, ಇರುವನೆಂದು ಭಾವಿಸಿ ಮೂರು ಉಪಮಾನವನ್ನು ಕೊಟ್ಟಿರುವರು. ಮಿಗಲಾದ ವಿಶೇಷಣಗಳು ವಿಶದವಾಗಿರುವವು. ಇಂತಹ ಸ್ವಾಮಿಯು ಬ್ರಹ್ಮಾಂಡದೊಳಗಿರುವ, ಬ್ರಹ್ಮಾದಿ ಸಕಲ ಚೇತನ ರಾಶಿಗಳಿಗೂ ಸಖನೆಂದೆನಿಸಿ ಕೃತ್ರಿಮವಿಲ್ಲದೆ ಅವರಂತೆ ಅವರಲ್ಲಿರುವನು.

ಶ್ರೀ ಹರಿಯು ಆಕಾಶದಂತೆ ಸರ್ವತ್ರ ವ್ಯಾಪ್ತನಾಗಿ ಸಕಲರಿಗೂ ಅವಕಾಶವನ್ನು ಕೊಡುತ್ತಾ ಶೋಭಿಸುವನೆಂದು ಹೇಳುತ್ತಾರೆ.

**ದೇಶ ಭೇದಗಳಲ್ಲಿ ಇಪ್ಪಾ**
**ಕಾಶದೋಪಾದಿಯಲಿ ಚೇತನ**
**ರಾಶಿಯೊಳು ನೆಲಸಿಪ್ಪನ ವ್ಯವಧಾನದಲಿ ನಿರುತಾ ||**
**ಶ್ರೀ ಸಹಿತ ಸರ್ವತ್ರ ನಿರವಾ**
**ಕಾಶ ಕೊಡುವಂದದಲಿ ಕೊಡುತನಿ**
**ರಾಶೆಯಲಿ ಸರ್ವಾಂತರಾತ್ಮಕ ಶೋಭಿಸುವ ಸುಖದಾ ||೪೦||**

ಪದ್ಯಾರ್ಥ :—ದೇಶಭೇದಗಳಲ್ಲಿ=ಘಟ, ಗಿಂಡಿ ಮೊದಲಾದ ಸ್ಥಳ ಭೇದಗಳಲ್ಲಿ, ಇಪ್ಪ=ಇರುವ, ಆಕಾಶದೋಪಾದಿಯಲಿ, ಚೇತನ ರಾಶಿಯೊಳು=ಜೀವರಾಶಿಯೊಳಗೆ, ನಿರುತ=ಯಾವಾಗಲೂ, ಅವ್ಯವಧಾನದಲಿ=ಘಟಾದಿಗಳು ಹೇಗೆ ಇರುವವೋ ಅದೇ ಆಕಾರವಾಗಿ, ಅವುಗಳ ಸಂದು ಮೊದಲಾದ ಎಲ್ಲಾ ಸ್ಥಳಗಳಲ್ಲಿಯೂ, ಅವಕಾಶವಿಲ್ಲದೆ, ಆಕಾಶವು ಹೇಗೆ ವ್ಯಾಪಿಸಿಕೊಂಡಿರುವುದೊ ಹಾಗೆ ನಿರವಕಾಶನಾಗಿ, ನೆಲಸಿಪ್ಪನು=ಶ್ರೀ ಪರಮಾತ್ಮನು ವಾಸವಾಗಿರುವನು. ಶ್ರೀ ಸಹಿತ=ಲಕ್ಷ್ಮೀದೇವಿಯರಿಂದೊಡಗೂಡಿ ಸರ್ವತ್ರ=ಎಲ್ಲಾ ಸ್ಥಳಗಳಲ್ಲಿಯೂ, ಆಕಾಶ=ಆಕಾಶವು, ಇರವ=ವಾಸಸ್ಥಾನವನ್ನು, ಕೊಡುವಂದದಲಿ, ಕೊಡುತ=ಪರಮಾತ್ಮನು ಕೊಡುತ, ನಿರಾ

ಶೆಯುಲಿ=ಪರರಿಂದ ತಾನು ಪ್ರತಿಫಲವನ್ನಪೇಕ್ಷಿಸದೆ, ಸರ್ವಾಂತರಾತ್ಮಕ= ಎಲ್ಲರ ಅಂತರ್ಯಾಮಿಯಾಗಿ, ಸುಖದ=ಸುಖವನ್ನು ಕೊಡುತ್ತ, ಶೋಭಿಸುವ.

ತಾತ್ಪರ್ಯ :—ತಂಬಿಗೆ, ಗಿಂಡಿ, ತಪ್ಪಲೆ, ಮೊದಲಾದವು ಹೇಗೆ ಒಂದೊಂದೂ ಬೇರೆ ಬೇರೆ ಆಕಾರವಾಗಿರುವವೋ, ಅದೇ ಆಕಾರದಿಂದ ಅದರೊಳಗೆ ನಿರವಕಾಶವಾಗಿ ಆಕಾಶವು ಹೇಗೆ ವ್ಯಾಪಿಸಿಕೊಂಡಿರುವುದೋ, ಹಾಗೆಯೇ ಪರಮಾತ್ಮನು ಜೀವರಾಶಿಗಳ ಸ್ವರೂಪದೇಹಗಳು, ಮತ್ತು ಸ್ಥೂಲ ದೇಹಗಳು ಯಾವ ಯಾವ ಆಕಾರವಾಗಿರುವವೋ ಆಯಾ ಆಕಾರನಾಗಿ ಆಯಾ ದೇಹಗಳಲ್ಲಿ ನಿರವಕಾಶನಾಗಿ ತುಂಬಿರುವನು. ಮತ್ತು ಆಕಾಶವು ಹೇಗೆ ಸಕಲ ಪ್ರಾಣಿಗಳು ವಾಸಮಾಡಲು ಸ್ಥಳಗಳನ್ನು ಕೊಡುವುದೊ, ಅಂದರೆ ತಂಬಿಗೆ ಮೊದಲಾದವುಗಳಲ್ಲಿ ಆಕಾಶವು ವ್ಯಾಪಿಸಿಕೊಂಡಿದ್ದರೂ ನೀರು ಮೊದಲಾದವುಗಳಿಗೆ ಸ್ಥಳವನ್ನು ಕೊಡುವುದು. ಅದರಂತೆ ಪರಮಾತ್ಮನು ತಾನು ಲಕ್ಷ್ಮೀಸಮೇತ ಸರ್ವತ್ರ ತುಂಬಿದ್ದರೂ ತನ್ನೊಳಗೆ ಸರ್ವ ಪ್ರಾಣಿಗಳಿಗೂ ವಾಸಸ್ಥಾನಗಳನ್ನು ಕಲ್ಪಿಸಿ ಕೊಡುತ್ತಾ ಸರ್ವರಿಗೂ ಸುಖವನ್ನು ಕೊಡುತ್ತ, ಸರ್ವಾಂತರಾತ್ಮಕನಾಗಿ ಸರ್ವತ್ರ ವ್ಯಾಪ್ತನಾಗಿ ಶೋಭಿಸುವನು.

**ಶ್ರೀವಿರಿಂಚಾದ್ಯ ಮರಗಣ ಸಂ**
**ಸೇವಿತಾಂಘ್ರಿ ಸರೋಜ ಈ ಜಡ**
**ಜೀವರಾಶಿಗಳೊಳ ಹೊರಗೆ ನೆಲಸಿದ್ದು ನಿತ್ಯದಲಿ ||**
**ಸಾವಕಾಶನು ಎನಿಸಿ ತನ್ನ ಕ**
**ಳೇವರದಲಿಂಬಿಟ್ಟು ಸಲಹುವ**
**ದೇವ ದೇವಕಿ ರಮಣ ದಾನವ ಹರಣ ಜಿತಮರಣ || ೪೧ ||**

ಪದ್ಯಾರ್ಥ :—ಶ್ರೀ ವಿರಿಂಚಾದಿ=ಲಕ್ಷ್ಮೀದೇವಿಯರು, ಮತ್ತು ಬ್ರಹ್ಮ ಮೊದಲಾದ, ಅಮರಗಣ=ದೇವತಾಗಣದಿಂದ, ಸಂಸೇವಿತಾಂಘ್ರಿಸರೋಜ=ಚೆನ್ನಾಗಿ ಸೇವಿತವಾದ ಪಾದ ಕಮಲಗಳುಳ್ಳ ಶ್ರೀ ಹರಿಯು, ಈ ಜಡ ಜೀವರಾಶಿಗಳ=ವೃಕ್ಷಗಳು, ಬಳ್ಳಿಗಳು, ಭತ್ತ ಮೊದಲಾದವು ಉತ್ಪತ್ತಿಯಾಗುವ ಸಸ್ಯ ಮೊದಲಾದ ಜಡ ಜೀವರಾಶಿಗಳ, ಒಳ ಹೊರಗೆ, ನಿತ್ಯದಲಿ, ನೆಲಸಿದ್ದು, ಸಾವಕಾಶನು ಎನಿಸಿ=ತನ್ನೊಳಗೆ ಅವುಗಳಿಗೆ ಅವಕಾಶ ಕೊಡುವವನೆಂದು ಪ್ರಖ್ಯಾತನಾಗಿ, ದೇವ=ಸೃಷ್ಟ್ಯಾದಿ ಕರ್ತನಾದ, ದೇವಕಿರಮಣ=

ಲಕ್ಷ್ಮೀಪತಿಯಾದ, ದಾನವ ಹರಣ=ದೈತ್ಯರ ಪ್ರಾಣಹಾರಕನಾದ, ಜಿತ ಮರಣ=ಜಯಿಸಲ್ಪಟ್ಟ ಮರಣ ಉಳ್ಳ, (ಮರಣವನ್ನು ಜಯಿಸಿದವನೆಂದರೆ ಮರಣವಿಲ್ಲದವನೆಂದರ್ಥ.) ಶ್ರೀ ಪರಮಾತ್ಮನು, ತನ್ನ ಕಳೇವರದಲ್ಲಿ=ತನ್ನ ದೇಹದೊಳಗೆ, ಇಂಬಿಟ್ಟು=ಚೆನ್ನಾಗಿಟ್ಟುಕೊಂಡು, (ಜಡಜೀವರಾಶಿಗಳನ್ನು) ಸಲಹುವ=ಸಂರಕ್ಷಣೆ ಮಾಡುವನು.

ತಾತ್ಪರ್ಯ :—ಜಡಜೀವರು ಅಂದರೆ ಸ್ಥಾವರಾದಿಗಳು ಎಂದರ್ಥ. ಚೇತನ ಜೀವರೆಂತಲೂ, ಜಡಜೀವರೆಂತಲೂ, ಎರಡು ಪ್ರಕಾರ. ಸ್ವರೂಪ ದೇಹದಲ್ಲಿಯೂ ಸಹ ಇರುವವು. ಮೇಲಿನ ಪದ್ಯದಲ್ಲಿ ಚೇತನ ಜೀವರಲ್ಲಿ ಪರಮಾತ್ಮನ ಇರುವಿಕೆಯನ್ನು ಹೇಳಿದರು. ಹಾಗೆಯೇ ಲಕ್ಷ್ಮೀದೇವಿಯರು, ಬ್ರಹ್ಮ ಮೊದಲಾದ ದೇವತಾಗಣಗಳು, ಇವರಿಂದ ಚೆನ್ನಾಗಿ ಸೇವಿತವಾದ ಪಾದ ಕಮಲಗಳುಳ್ಳ, ಶ್ರೀ ಪರಮಾತ್ಮನು ಜಡಜೀವರಾದ ಅಂದರೆ 'ವನಸ್ಪತ್ಯೋಷಧಿಲತಾತ್ವಕ್ ಸಾರಾವೀರುಧಾದ್ರುಮಾಃ' ಎಂಬ ಭಾಗವತ ತೃತೀಯಸ್ಕಂಧ ವಾಕ್ಯದಿಂದ ಜಡಜೀವರಲ್ಲಿ ೬ ಪ್ರಕಾರವೆಂದು ತೆಗೆದುಕೊಂಡಿರುವರು. ಬರೀ ಜಡವೆಂದರೆ ಘಟ, ಪರ್ವತ, ನಮ್ಮ ದೇಹ ಮೊದಲಾದವುಗಳು, ಜಡಜೀವರೆಂದರೆ ಮೇಲೆ ಹೇಳಿದ ೬ ಪ್ರಕಾರವುಳ್ಳ ಸ್ಥಾವರಗಳು. ವನಸ್ಪತಿ ಅಂದರೆ 'ಫಲಂತಿಯೇ ವಿನಾಪುಷ್ಪೈಸ್ತಾನ್ ವದಂತಿ ವನಸ್ಪತೀನ್' ಎಂದು ತೃತೀಯಸ್ಕಂಧ ವಿಜಯಧ್ವಜೀಯದಲ್ಲಿ ಹೇಳಿರುವರು, ಅಂದರೆ ಪುಷ್ಪವಿಲ್ಲದೆ ಫಲವಾಗುವ ಹಳಸಿನ ಮರ ಮೊದಲಾದವುಗಳಿಗೆ ವನಸ್ಪತಿ ಎಂದು ಹೆಸರು. 'ಫಲಪಾಕಾಂತಾ ಓಷಧಯಃ ವ್ರೀಹ್ಯಾದಯಃ' ಫಲಪಾಕವಾದ ಕೂಡಲೇ ಒಣಗಿ ಹೋಗುವ, ಭತ್ತ ಮೊದಲಾದವು ಆಗುವ ಸಸ್ಯಗಳಿಗೆ ಓಷಧಿ ಎಂದು ಹೆಸರು. ಲತಾ ಅಂದರೆ ಬಳ್ಳಿಗಳು; ತ್ವಕ್ ಸಾರ ಅಂದರೆ ಮೇಲೆ ಗಟ್ಟಿಯಾಗಿಯೂ, ಒಳಗೆ ಟೊಳ್ಳಾಗಿರುವ ಬಿದರು ಮೊದಲಾದವು. ವೀರುಧ ಅಂದರೆ ಹೊದರು ಆಗುವ ದರ್ಭೆ ಮೊದಲಾದವು. ತೃಣಜೀವರಾದ ಹುಲ್ಲು ಮೊದಲಾದುವು ಇದಕ್ಕೆ ಶೇರಿದುದು. ದ್ರುಮ ಅಂದರೆ ಹುಣಸೆ, ಮಾವು ಮೊದಲಾದ ವೃಕ್ಷಗಳು. ಹೀಗೆ ೬ ಪ್ರಕಾರವಾದ ಜಡಜೀವರ ಒಳ ಹೊರಗೂ ಸಹ ಶ್ರೀ ಪರಮಾತ್ಮನು ವಾಸವಾಗಿರುವನು. ಅಲ್ಲದೆ ತನಗೆ ದೇಹಭೂತವಾದ ಬ್ರಹ್ಮಾಂಡದಲ್ಲಿ ಅವುಗಳಿಗೆ ಸ್ಥಳವನ್ನು ಕೊಟ್ಟು ದಿನೇ ದಿನೇ ವೃದ್ಧಿಯಾಗುವಂತೆ ಮಾಡಿ ಅವುಗಳನ್ನು ರಕ್ಷಿಸುವನು. ಮುಕ್ತಿಯಲ್ಲಿಯೂ ಈ

ಜಡ ಜೀವರಿಗೆ ತನ್ನ ಲೋಕದೊಳಗೂ, ಪ್ರಳಯದಲ್ಲಿ ತನ್ನ ದೇಹದಲ್ಲಿಯೂ ಅವಕಾಶವನ್ನು ಕೊಟ್ಟು ರಕ್ಷಿಸುವನೆಂಬ ತಾತ್ಪರ್ಯ. ದೇವ, ದೇವಕಿ ರಮಣ, ಎಂದು ಪರಮಾತ್ಮನಿಗೆ ವಿಶೇಷಣವನ್ನು ಕೊಟ್ಟಿರುವರು.

'ದಿವ್‌ಕ್ರೀಡಾಯಾಂ' ಎಂಬ ಧಾತುವಿನಿಂದ ದೇವನೆಂದರೆ ಸೃಷ್ಟಿಕರ್ತನೆಂದು ಅರ್ಥ. ದೇವಕೀರಮಣ ಎಂದು ದಾಸರಾಯರು ಪದಪ್ರಯೋಗ ಮಾಡಿರುವರು. ಇದಕ್ಕೆ ವ್ಯಾಖ್ಯಾನ ಕರ್ತರೊಬ್ಬರು ದೇವಕಿ ಪುತ್ರನೆಂದು ಅರ್ಥಮಾಡಿರುವರು. ದಾಸರಾಯರ ಅಭಿಪ್ರಾಯವು ದೇವಕೀ ಪುತ್ರನೆಂದೇ ಇದ್ದುದಾದರೆ ದೇವಕೀ ತನಯ ಅನ್ನಬಹುದಾಗಿತ್ತು. ಅದರಿಂದ ಛಂದೋ ಭಂಗವಾಗಲಿ ಪ್ರಾಸಹಾನಿಯಾಗಲಿ ಯಾವ ದೋಷವು ಬರುತ್ತಿರಲಿಲ್ಲ. ಹೀಗಿರಲು ದೇವಕೀ ರಮಣ ಎಂದು ಪ್ರಯೋಗ ಮಾಡಿದುದು ಒಂದು ವಿಶೇಷವಿಲ್ಲದೆ ಮಾಡಿರಲಿಕ್ಕಿಲ್ಲ. ಲೋಕದಲ್ಲಿ ನಂದನ ಎಂಬ ಪದವನ್ನು ಮಕ್ಕಳಿಗೂ, ರಮಣ ಎಂಬ ಶಬ್ದವು ಪತಿಗಳಿಗೂ ರೂಢಿಯಲ್ಲಿರುವದೇ ಹೊರತು ರಮಣನೆಂದು ಮಕ್ಕಳಿಗೆ ಎಲ್ಲಿಯೂ ಇಲ್ಲ. "ನಂದಯತೀತಿ ನಂದನ" ಆಟಪಾಟಗಳಿಂದಲೂ ತನ್ನ ಗುಣಗಳಿಂದಲೂ ತಾಯಿ ತಂದೆಗಳನ್ನು ಆನಂದಪಡಿಸುವುದರಿಂದ ನಂದನ ಎಂಬ ಹೆಸರು ಮಕ್ಕಳಿಗೆ ಬಂದಿರುವುದು. ರಮಣನೆಂದರೆ 'ರಮು ಕ್ರೀಡಾಯಾಂ' ಕ್ರೀಡಿಸುವುದರಿಂದ, ರಮಣ ಎಂದು ಹೆಸರು. ರಮಯತೀತಿರಾಮಃ ಎಂದು ರಾಮಾದಿ ಶಬ್ದಗಳಿಗೆ ಹೇಳಿದಂತೆ ರಮಣ ಶಬ್ದಕ್ಕೆ ಸುಖಪಡಿಸುವವನೆಂದು ಏಕೆ ಅರ್ಥ ಮಾಡಬಾರದೆಂದರೆ, ರಮಣ ಶಬ್ದಕ್ಕೆ ಹಾಗೆ ಯಾರೂ ಮಾಡಲಿಲ್ಲ. ಲೋಕರಮಣನೆಂದು ಪದ ಪ್ರಯೋಗ ಮಾಡಿರುವರು. ಅಲ್ಲಿ ಲೋಕ ಪತಿಯೆಂದರ್ಥ. (ಹಸ್ತಿನಾಪುರಕ್ಕೆ ಗಜಪುರವೆಂದು ಹೇಳುವಂತೆ) ರಮಣ ಶಬ್ದಕ್ಕೆ ಪತಿ ಪರ್ಯಾಯವಾಗಿ ಅರ್ಥಮಾಡಿ, ಲೋಕಪತಿ ಅನ್ನುವುದಕ್ಕೆ ಪ್ರತಿಯಾಗಿ ಲೋಕ ರಮಣ ಅಂದಿರುವರು. ಆನಂದ ಪಡಿಸುವವನೆಂದ ಮಾತ್ರದಿಂದಲೇ ರಮಣನೆಂದರೆ ಮಗನೆಂದು ಅರ್ಥ ಮಾಡಲು ಆಗುವದಿಲ್ಲ. ಹಾಗಾದರೆ ಪತಿ ಶಬ್ದವು ಮಗನಿಗೆ ಬರುವುದು. ಭರ್ತಾ ಎಂತಲೂ ಮಗನಿಗೆ ಹೇಳಬಹುದು. ಹೇಗೆಂದರೆ 'ಭರಣಾದ್ಭರ್ತಾ; ಪಾಲನಾತ್ಪತಿ;' ಇವೆರಡು ಪದಗಳು ಸಂರಕ್ಷಿಸುವವರಿಗೆ ಹೆಸರು. ಮಗನುದೊಡ್ಡವನಾದ ಮೇಲೆ ತಾಯಿಯನ್ನು ಸಂರಕ್ಷಿಸುವನು. ಅಂದಮೇಲೆ ಅವನನ್ನು ತಾಯಿಗೆ ಪತಿ ಭರ್ತಾ ಅನ್ನಬೇಕಾಯಿತು. ಅರ್ಥದಲ್ಲಿ ಸರಿಹೊಂದರೂ ಲೋಕ ರೂಢಿ

ಯಲ್ಲಿಲ್ಲದ ಪದ ಪ್ರಯೋಗ ಎಂದಿಗೂ ಸಮಂಜಸವಾಗುವದಿಲ್ಲ. ಆಭಾಸ ವಾಗಿ ಕಾಣುವುದು. ಆದ್ದರಿಂದ ರಮಣಶಬ್ದಕ್ಕೆ ಪತಿ ಎಂದೇ ಅರ್ಥ ಮಾಡಬೇಕು. ನಂದನ ಶಬ್ದಕ್ಕೆ ಅರ್ಥಾತ್ ಪತಿಪರವಾಗಿ ಮಾಡಬಹುದೇ ಆಗ ಲಿ ರಮಣ ಶಬ್ದಕ್ಕೆ ಪುತ್ರ ಪರವಾಗಿ ಅರ್ಥ ಮಾಡುವುದು ಸರಿಯೆಂದು ಕಾಣು ವುದಿಲ್ಲ. ಆದ್ದರಿಂದ ಇಲ್ಲಿ ದೇವಕೀ ರಮಣನೆಂದರೆ ಲಕ್ಷ್ಮೀಪತಿಯೆಂದೇ ದಾಸರಾಯರ ಅಭಿಪ್ರಾಯವೆಂದು ಊಹಿಸಬೇಕಾಗಿದೆ. ದೇವಕೀ ಶಬ್ದಕ್ಕೆ ಲಕ್ಷ್ಮೀ ಎಂಬ ಅರ್ಥವು ಎಲ್ಲಿರುವುದೆಂದರೆ:—

ಭಾಗವತ ಪ್ರಥಮಸ್ಕಂಧ ೮ ನೆಯ ಅಧ್ಯಾಯ ೨೪ ನೆಯ ಶ್ಲೋಕ, "ಕೃಷ್ಣಾಯ ವಾಸುದೇವಾಯ ದೇವಕೀನಂದನಾಯಚ || ನಂದಗೋಪ ಕುಮಾರಾಯ ಗೋವಿಂದಾಯ ನಮೋ ನಮಃ" ಎಂಬ ಶ್ಲೋಕದಲ್ಲಿರುವ "ದೇವಕೀನಂದನಾಯ" ಎಂಬ ಪದಕ್ಕೆ ವಿಜಯಧ್ವಜೀಯ ವ್ಯಾಖ್ಯಾನ ದಲ್ಲಿ "ದೇವಕೀ ಲಕ್ಷ್ಮೀಃತಾಂನಂದಯಿತುಂ ಶೀಲಮಸ್ಯೇತಿ ದೇವಕೀ ನಂದನಃ" ದೇವಕಿ ಅಂದರೆ ಲಕ್ಷ್ಮೀ; ಆಕೆಗೆ ಆನಂದವನ್ನು ಕೊಡುವ ಯೋಗ್ಯತೆಯು ಇವನಲ್ಲಿದ್ದುದರಿಂದ ದೇವಕೀ ನಂದನನೆಂದು ಲಕ್ಷ್ಮೀಪತಿಗೆ ಹೆಸರು ಎಂದು ಹೇಳಿರುವರು. ದೇವಕೀ ಶಬ್ದಕ್ಕೆ ಲಕ್ಷ್ಮೀಪರವಾಗಿ ಅರ್ಥವು ಯಾವ ನಿರ್ವಚನದ ಮೇಲೆ ಆಗುವದೆಂದರೆ; "ದೇವಾನಾಂ ಕಂ ಸುಖಂ ದಾತುಂ ಶೀಲಮಸ್ಯಾ ಅಸ್ತೀತಿ ದೇವಕೀ ಲಕ್ಷ್ಮೀಃ" ಕಂ ಅಂದರೆ ಸುಖವು; ದೇವತೆಗಳಿಗೆ ಸುಖವನ್ನು ಕೊಡುವ ಯೋಗ್ಯತೆಯು ಈಕೆಗೆ ಇರುವುದರಿಂದ ದೇವಕೀ ಎಂದು ಲಕ್ಷ್ಮೀ ದೇವಿಯರಿಗೆ ಹೆಸರು. ಅಥವಾ ದೇವವತ್ ಕಂ ಯಸ್ಯಾಃ ಸಾ ದೇವಕೀ ಅಂದರೆ ಪರಮಾತ್ಮನಿಗೆ ಅರ್ಧಾಂಗಿಯಾದುದರಿಂದ ಪರಮಾತ್ಮನಂತೆ ಸುಖವನ್ನು ಹೊಂದುವುದರಿಂದಲೂ ಲಕ್ಷ್ಮೀ ದೇವಿಯರಿಗೆ ದೇವಕೀ ಎಂದು ಹೆಸರು. ಈ ನಿರ್ವಚನದಿಂದ ದೇವಕೀ ನಂದನ ಅಂದರೆ ಲಕ್ಷ್ಮೀಪತಿ ಎಂದು ಅರ್ಥ ಮಾಡಿರುವರು. ದಾಸರಾಯರು ಇದೇ ಆಧಾರದ ಮೇಲೆಯೇ ದೇವಕೀರಮಣನೆಂದು ಪ್ರಯೋಗ ಮಾಡಿರುವರೆಂದು ನಿಶ್ಚಯಿಸ ಬೇಕಾಗುತ್ತದೆ ||೪೧||

೧೧೬ ವರ್ಷಗಳಲ್ಲಿ ಬಿಡುವ ಶ್ವಾಸಗಳನ್ನು ಹಂಸ ಮಂತ್ರ ಜಪವೆಂದು ಭಾವಿಸಿ ಭಜಿಸಿದರೆ ಭಗವದನುಗ್ರಹವಾದೀತೆಂದು ಮೂರು ಪದ್ಯಗಳಿಂದ ಹೇಳುತ್ತಾರೆ:—

**ಮಾಸ ಒಂದಕೆ ಪ್ರತಿ ದಿವಸದಲಿ**
**ಶ್ವಾಸಗಳ ಹವಷ್ಟಚತ್ವಾ**
**ರಿಂಶತಿ ಸಹಸ್ರಾಧಿಕಾರು ಸುಲಕ್ಷ ಸಂಖ್ಯೆಯುಳಿ ||**
**ಹಂಸ ನಾಮಕ ಹರಿಯು ಷೋಡಶ**
**ಈ ಶತಾಬ್ದದಿ ಭಜಿಸೆ ವಲಿವದ**
**ಯಾಸಮುದ್ರ ಕುಚೇಲ ಗೊಲಿದಂದದಲಿ ದಿನದಿನದಿ ||೪೨||**

ಪದ್ಯಾರ್ಥ:—ಮಾಸ ಒಂದಕೆ, ಪ್ರತಿ ದಿವಸದಲಿ=ಒಂದು ತಿಂಗಳಿಗೆ ಇರುವ ಪ್ರತಿ ದಿವಸವನ್ನು ಎಣಿಸಿದರೆ ೩೦ ದಿವಸಗಳಾಗುವವು. ಈ ಒಂದು ಮಾಸ ಅಂದರೆ ೩೦ ದಿವಸಗಳಲ್ಲಿ ಅಷ್ಟಚತ್ವಾರಿಂಶತಿ ಸಹಸ್ರಾಧಿಕ=(೪೮೦೦೦) ನಾಲ್ವತ್ತೆಂಟು ಸಹಸ್ರ ಹೆಚ್ಚಾದ, ಆರು ಸುಲಕ್ಷ ಸಂಖ್ಯೆಯುಳಿ=ಒಟ್ಟು (೬೪೮೦೦೦) ಆರು ಲಕ್ಷದ ನಾಲ್ವತ್ತೆಂಟು ಸಹಸ್ರ ಸಂಖ್ಯೆ ಉಳ್ಳ, ಶ್ವಾಸಗಳು, ಅಹವು = ಆಗುವವು. ಶೋಡಶ ಈಶತಾಬ್ದದಿ= ಈ ನೂರು ಹದಿನಾರು ವರುಷಗಳಲ್ಲಿ, ಹಂಸ ನಾಮಕ ಹರಿಯು=ತಿಂಗಳು ಒಂದಕ್ಕೆ ೬೪೮೦೦೦ ಶ್ವಾಸಗಳಂತೆ ೧೧೬ ವರ್ಷಗಳಿಗಾಗುವ ೧೩೯೨ ತಿಂಗಳ ವರೆವಿಗೂ ಬಿಡುವ ಶ್ವಾಸಗಳನ್ನು ಹಂಸನಾಮಕನಾದ ಪರಮಾತ್ಮನ ಮಂತ್ರ ಜಪವೆಂದು ತಿಳಿಸು, ದಿನದಿನದಿ=ನಿತ್ಯದಲ್ಲಿಯೂ, ಭಜಿಸೆ, ದಯಾಸಮುದ್ರ= ಕರುಣಾಸಮುದ್ರನು, ಕುಚೇಲಗೊಲಿದಂದದಲಿ = ಕುಚೇಲ (ಸುಧಾಮ) ನೆಂಬ ಬ್ರಾಹ್ಮಣನಿಗೆ ಒಲಿದಂತೆ, ಒಲಿವ=ಒಲಿವನು. ||೪೨||

ತಾತ್ಪರ್ಯ :—ಪ್ರತಿ ದಿವಸದಲ್ಲಿಯೂ ನಾವು ಬಿಡುವ ಶ್ವಾಸಗಳು ೨೧೬೦೦, ಈ ಶ್ವಾಸಗಳೇ ಪ್ರಾಣದೇವರು ನಮ್ಮೊಳಗಿದ್ದು ಮಾಡಿಸುವ ಹಂಸ ಮಂತ್ರ ಜಪವೆಂದು ಮೊದಲನೆಯ ಮಂಗಳಾಚರಣ ಸಂಧಿಯಲ್ಲಿ "ಆರು ಮೂರೆರಡೊಂದು ಸಾವಿರ" ಎಂಬ ಪದ್ಯದಿಂದ ವಿವರಮಾಡಲ್ಪಟ್ಟದೆ. ಹೀಗೆ ದಿನ ಒಂದಕ್ಕೆ ೨೧೬೦೦ ಆದರೆ ಮಾಸ ಒಂದಕ್ಕೆ ೨೧೬೦೦×೩೦= (೬೪೮೦೦೦) ಆರು ಲಕ್ಷದ ನಾಲ್ವತ್ತೆಂಟು ಸಾವಿರ ಶ್ವಾಸಗಳು ಆಗುವವು. ಈ ಪ್ರಕಾರ ಮೇಲೆ ಹೇಳಿದಂತೆ ೧೧೬ ವರ್ಷಗಳ ವರೆವಿಗೂ ನಿತ್ಯದಲ್ಲೂ ನಾವು ಬಿಡುವ ಶ್ವಾಸಗಳೆಲ್ಲವೂ ಶ್ರೀ ಹಂಸ ನಾಮಕ ಪರಮಾತ್ಮನ ಮಂತ್ರೋಪಾಸನೆಯೆಂದು ತಿಳಿದು ಭಜಿಸಿದರೆ ಶ್ರೀ ಕೃಷ್ಣನು ಕುಚೇಲನೆಂಬ

ಬ್ರಾಹ್ಮಣನಿಗೆ ಒಂದು ಹಿಡಿ ಅವಲಕ್ಕಿಗೆ ಒಲಿದು ಇಹಪರವನ್ನು ಕೊಟ್ಟಂತೆ ಇಹಪರದಲ್ಲಿ ಸುಖವನ್ನು ಕೊಡುವನು. ||೪೨||

**ಸ್ಥೂಲ ದೇಹದೊಳಿದ್ದು ವರ್ಷಕೆ**
**ಏಳಧಿಕ ಎಪ್ಪತ್ತು ಲಕ್ಷದ**
**ಮೇಲೆ ಎಪ್ಪತ್ತಾರು ಸಾವಿರ ಶ್ವಾಸ ಜಪಗಳನು ॥**
**ಗಾಳಿದೇವನು ಕರುಣದಲಿ ಈ**
**ರೇಳು ಲೋಕದೊಳುಳ್ಳ ಚೇತನ**
**ಜಾಲದೊಳು ಮಾಡುವನು ತ್ರಿಜಗದ್ವ್ಯಾಪ್ತ ಪರಮಾಪ್ತ ॥೪೩॥**

ಪದ್ಯಾರ್ಥ :—ಸ್ಥೂಲ ದೇಹದೊಳಿದ್ದು, ವರ್ಷಕೆ=ವರ್ಷ ಒಂದಕ್ಕೆ, ಏಳಧಿಕ ಎಪ್ಪತ್ತು ಲಕ್ಷದ=೭೭ ಲಕ್ಷದ, ಮೇಲೆ ಎಪ್ಪತ್ತಾರು ಸಾವಿರ, (ಒಟ್ಟು ೭೭೭೬೦೦೦) ಎಪ್ಪತ್ತೇಳು ಲಕ್ಷದ ೭೬ ಸಾವಿರದ, ಶ್ವಾಸಜಪಗಳನು, ಗಾಳಿದೇವನು=ವಾಯು ದೇವರು, ಕರುಣದಲಿ=ಪ್ರತಿ ಫಲಾಪೇಕ್ಷೆಯಿಲ್ಲದೆ ಕೇವಲ ಕರುಣದಿಂದಲೆ, ಈರೇಳು ಲೋಕದಳುಳ್ಳ=೧೪ ಲೋಕಗಳಲ್ಲಿರುವ, ಚೇತನಜಾಲದೊಳು=ಜೀವರ ಸ್ಥೂಲ ದೇಹದೊಳಗೆ ಇದ್ದು ತ್ರಿಜಗದ್ವ್ಯಾಪ್ತ=ಮೂರುಲೋಕದಲ್ಲಿಯೂ ವ್ಯಾಪ್ತನಾಗಿ, ಪರಮಾಪ್ತ = ಎಲ್ಲರಿಗೂ ಪರಮ ಆಪ್ತರಾಗಿದ್ದು, ಮಾಡುವರು. ||೪೩||

ತಾತ್ಪರ್ಯ :—ವಾಯುದೇವರು, ೧೪ ಲೋಕಗಳಲ್ಲಿಯೂ ವ್ಯಾಪ್ತರಾಗಿ, ಎಲ್ಲಾ ಪ್ರಾಣಿಗಳಿಗೂ ಪರಮ ಆಪ್ತರಾಗಿ, ೧೪ ಲೋಕಗಳಲ್ಲಿರುವ ಸರ್ವ ಪ್ರಾಣಿಗಳ ಸ್ಥೂಲ ದೇಹಗಳಲ್ಲಿದ್ದು, ಆ ಪ್ರಾಣಿಗಳಿಂದ ತಾವು ಯಾವ ವಿಧವಾದ ಪ್ರತಿ ಫಲವನ್ನು ಅಪೇಕ್ಷಿಸದೆ, ಭಗವದಾಜ್ಞಾನುಸಾರ, ಭಗವತ್ಪ್ರೀತಿಗೋಸ್ಕರ, ಜೀವರಲ್ಲಿ ಕರುಣದಿಂದಲೇ ತಿಂಗಳು ಒಂದಕ್ಕೆ ೬೪೮೦೦೦ ಶ್ವಾಸಗಳಂತೆ ವರ್ಷ ಒಂದಕ್ಕೆ ( ೬೪೮೦೦೦×೧೨=೭೭೭೬೦೦೦ ) ಆರು ಲಕ್ಷದ ನಾಲ್ವತ್ತೆಂಟು ಸಾವಿರವನ್ನು ೧೨ರಿಂದ ಗುಣಿಸಿದರೆ, ಆಗುವ, ಎಪ್ಪತ್ತೇಳು ಲಕ್ಷದ ಎಪ್ಪತ್ತಾರುಸಾವಿರ ಶ್ವಾಸ ಜಪಗಳನ್ನು ಪ್ರತಿ ವರ್ಷದಲ್ಲಿಯೂ ತಾವು ಮಾಡಿ ಜೀವರಿಂದಲೂ ಮಾಡಿಸುತ್ತಿರುವರು. ಈ ಶ್ವಾಸ ಜಪ ಮಂತ್ರ ಮೊದಲಾದವು ಮಂಗಳಾಚರಣ ಸಂಧಿಯಲ್ಲಿ “ಆರು ಮೂರೆರಡೊಂದು ಸಾವಿರ” ಎಂಬ ಪದ್ಯಕ್ಕೆ ಮಾಡಿರುವ ವ್ಯಾಖ್ಯಾನದಲ್ಲಿ ವಿಸ್ತಾರವಾಗಿ ಬರೆಯಲ್ಪಟ್ಟಿವೆ. ||೪೩||

ಈರೆರಡು ದೇಹಗಳೊಳಿದ್ದು ಸ
ಮೀರ ದೇವನು ಶ್ವಾಸ ಜಪನಾ
ನೂರಧಿಕವಾಗಿಪ್ಪ ಎಂಭತ್ತಾರು ಸಾಹಸ್ರ ||
ಕಾರಚಿಸುವನು ದಿವಸ ಒಂದಕೆ
ಮೂರು ವಿಧ ಜೀವರೊಳಿದ್ದು ಖ
ರಾರಿ ಕರುಣಾಬಲ ವಿದೆಂತುಟೋ ಪವನ ರಾಯನೊಳು ||೪೪||

ಪದ್ಯಾರ್ಥ :—ಮೂರುವಿಧ ಜೀವರೊಳು=ಸಾತ್ವಿಕ, ರಾಜಸ, ತಾಮಸರೆಂಬ ಮೂರು ವಿಧ ಜೀವರೊಳಗೆ, ಇದ್ದು=ಇರುವುದಲ್ಲದೆ, ಆ ಜೀವರ ಈರೆರಡು ದೇಹದೊಳು=ಸ್ವರೂಪ, ಲಿಂಗ, ಅನಿರುದ್ಧ, ಸ್ಥೂಲಗಳೆಂಬ ನಾಲ್ಕು ದೇಹಗಳಲ್ಲಿಯೂ ಸಹ, ಇದ್ದು, ಸಮೀರದೇವನು=ವಾಯುದೇವರು, ನಾನೂರಧಿಕವಾಗಿಪ್ಪ ಎಂಭತ್ತಾರು ಸಹಸ್ರ=(೮೬,೪೦೦) ಎಂಭತ್ತಾರು ಸಾವಿರದ ನಾನೂರು, ಶ್ವಾಸಜಪ=ಶ್ವಾಸಜಪಗಳನ್ನು ದಿವಸ ಒಂದಕ್ಕೆ ತಾ, ರಚಿಸುವನು. ಪವನರಾಯನೊಳು=ವಾಯುದೇವರಲ್ಲಿ, ಖರಾರಿ=ಖರನೆಂಬ ರಾಕ್ಷಸನನ್ನು ಕೊಂದ ಶ್ರೀರಾಮದೇವರ ಅಂದರೆ ಶ್ರೀಪರಮಾತ್ಮನ, ಕರುಣಾಬಲವಿದೆಂತುಟೋ=ಕರುಣಾಬಲವು ಎಷ್ಟರಮಟ್ಟಿಗೆ ಇದೆಯೆಂದು ಹೇಳೋಣ! ಅಂದರೆ ಭಗವಂತನ ಸಂಪೂರ್ಣಾನುಗ್ರಹಕ್ಕೆ ಪಾತ್ರರೆಂದರ್ಥ.

ತಾತ್ಪರ್ಯ :—ವಾಯುದೇವರು ಪ್ರಾಣಿಗಳಲ್ಲಿದ್ದು ಶ್ವಾಸಜಪಗಳನ್ನು ಮಾಡಿಸುವುದು ಈ ಸ್ಥೂಲದೇಹದಲ್ಲಿ ಮಾತ್ರವೇಅಲ್ಲ, ಸಾತ್ವಿಕಾದಿ ತ್ರಿವಿಧ ಜೀವರಿಗೂ ಸ್ವರೂಪದೇಹ, ಲಿಂಗದೇಹ, ಅನಿರುದ್ಧದೇಹ, ಸ್ಥೂಲದೇಹವೆಂದು ೪ ಪ್ರಕಾರಉಂಟು. ಈ ೪ ದೇಹಗಳಲ್ಲಿಯೂ ಇದ್ದು ಶರೀರ ಒಂದರಲ್ಲಿ ದಿವಸ ಒಂದಕ್ಕೆ ೨೧,೬೦೦ ಶ್ವಾಸಗಳಂತೆ ೪ ದೇಹಗಳಲ್ಲಿ ದಿನ ಒಂದಕ್ಕೆ ೨೧,೬೦೦×೪=೮೬,೪೦೦. ೮೬ ಸಾವಿರದ ೪ ನೂರು ಆಗುವುವು. ಇಷ್ಟು ಶ್ವಾಸ ಜಪಗಳನ್ನು ತಾವು ಕಲ್ಪಿಸುವರು, ಅಂದಮೇಲೆ ಖರದ್ವೇಷಿಯಾದ ಶ್ರೀರಾಮನ ಅಂದರೆ ಯಾವ ಪರಮಾತ್ಮನು ರಾಮಾವತಾರಮಾಡಿ ಆಂಜನೇಯನಲ್ಲಿ ಪರಮಾನುಗ್ರಹ ಮಾಡಿದನೋ ಅದೇ ಪರಮಾತ್ಮನೇ ಮೂಲರೂಪದಿಂದ ಮೂಲರೂಪಿಯಾದ ವಾಯುದೇವರಲ್ಲಿ ಸಂಪೂರ್ಣ ಕರುಣಾ ಕಟಾಕ್ಷವನ್ನು ಇಟ್ಟೇ ಇರುವನು. ಆಕರುಣಾಬಲವು ಎಷ್ಟಿದೆಯೆಂದು ವರ್ಣಿಸಲು ಯಾರಿಗೆ ಸಾಧ್ಯ? ಅಪಾರವಾದ ಕರುಣಾಬಲದಿಂದ ಕೂಡಿರುವರೆಂಬ ತಾತ್ಪರ್ಯ.

ಸಂಧಿಯನ್ನೂ, ಪ್ರಕರಣವನ್ನೂ ಸಹಾ ಮುಗಿಸುತ್ತಾ, ಸ್ವಾತಂತ್ರ್ಯಕರ್ತೃತ್ವವನ್ನು ಖಂಡಿಸಿ ಪರಮಾತ್ಮನೇ ಈ ಗ್ರಂಥವನ್ನು ಮಾಡಿಸಿದವನೆಂದು ಸೂಚಿಸುತ್ತಾರೆ —

**ಶ್ರೀಧರ ಜಗನ್ನಾಥ ವಿಠ್ಠಲನು**
**ತಾದಯದಿ ವದನದೊಳು ನುಡಿದೊ**
**ಪಾದಿಯಲಿ ನಾನುಡಿದೆನಲ್ಲದೆ ಕೇಳಿ ಬುಧಜನರು ||**
**ಸಾಧುಲಿಂಗ ಪ್ರದರ್ಶಕರು ನಿ**
**ಷೇಧಿಸಿದರೇನಹುದು ಎನ್ನಪ**
**ರಾಧವೇನಿದರೊಳಗೆ ಪೇಳ್ವದು ತಿಳಿದು ಕೋವಿದರು || ೪೫ ||**

ಪದ್ಯಾರ್ಥ :—ಶ್ರೀಧರ=ಲಕ್ಷ್ಮೀದೇವಿಯರನ್ನು ವಕ್ಷಸ್ಥಳದಲ್ಲಿ ಧರಿಸಿದ, ಜಗನ್ನಾಥ ವಿಠ್ಠಲನು, ತಾ=ತಾನು, ದಯದಿ = ಕರುಣದಿಂದ, ವದನದೊಳು=ನನ್ನ ಬಾಯಿಯೊಳಗಿದ್ದು, ನುಡಿದೋಪಾದಿಯಲಿ=ನುಡಿಸಿದಂತೆ, ನಾ=ನಾನು ನುಡಿದೆನು, ಅಲ್ಲದೆ ಸ್ವಾತಂತ್ರ್ಯದಿಂದ ನಾನು ಯಾವದೂ ಹೇಳಿದವನಲ್ಲ, ಬುಧಜನರು=ಜ್ಞಾನಿಜನರು, ಕೇಳಿ=ತಿಳಿಯಿರಿ, ಸಾಧುಲಿಂಗ ಪ್ರದರ್ಶಕರು=ಸಾಧುಗಳಂತೆ ವೇಷಗಳನ್ನು ಧರಿಸಿರುವವರು, ನಿಷೇಧಿಸಿದರೆ=ಇದು ಸರಿಯಲ್ಲವೆಂದು ದೂಷಿಸಿದರೆ, ಏನಹುದು=ಏನಾದೀತು, ಇದರೊಳಗೆ, ಎನ್ನ ಅಪರಾಧವೇನು ? ಕೋವಿದರು=ಜ್ಞಾನಿಗಳು ತಿಳಿದುಪೇಳ್ವದು.

ತಾತ್ಪರ್ಯ :—ಜಗನ್ನಾಥ ವಿಠ್ಠಲಾಂಕಿತ ಶ್ರೀಧರನು; ನನ್ನ ಬಾಯಿಯೊಳಗೆ ಇದ್ದು ನುಡಿಸಿದಂತೆ ನಾನು ಹೇಳಿರುವೆನೇ ಹೊರತು ನನ್ನ ಸ್ವತಂತ್ರ ಬುದ್ಧಿಯಿಂದ ಈ ಗ್ರಂಥದಲ್ಲಿ ನಾನು ಯಾವದೂ ಹೇಳಲಿಲ್ಲ, ಇದನ್ನು ಜ್ಞಾನಿಗಳು ತಿಳಿದಿರಲಿ ! ಸಜ್ಜನರಂತೆಯೂ, ತಪಸ್ವಿಗಳಂತೆಯೂ, ವೇಷಧಾರಿಗಳಾದ ಕೆಲವರು ಅಂದರೆ ಅಂತಃ ಶುದ್ಧಿ ಇಲ್ಲದವರು ಈ ಗ್ರಂಥವನ್ನು ದೂಷಿಸುವರು, ಅದರಿಂದ ಕುಂದಾದುದೇನು ! ಇದರಲ್ಲಿ ನನ್ನಪರಾಧವೇನು? ಜ್ಞಾನಿಗಳು ಇದನ್ನು ಯೋಚಿಸತಕ್ಕದ್ದು. ಎಂದು ದಾಸರಾಯರು ಈ ಗ್ರಂಥಕರ್ತೃತ್ವ ಶಕ್ತಿಯು ತಮ್ಮಂತರ್ಯಾಮಿ ಭಗವಂತನದೇ ಹೊರತು, ತಮ್ಮಾಧಿಕಾರವು ಇದರಲ್ಲಿ ಲೇಶಮಾತ್ರವೂ ಇರುವುದಿಲ್ಲವೆಂದು ಪರಮಾತ್ಮನಿಗೆ ಸಮರ್ಪಿಸಿರುವರು.

ಎಂಬಲ್ಲಿಗೆ ಹರಿಕಥಾಮೃತಸಾರದ ಭಾವಪ್ರಕಾಶಿಕೆಯಲ್ಲಿ ೧೨ನೆಯ ನಾಡೀಪ್ರಕರಣ ಸಂಧಿಯು ಸಮಾಪ್ತವಾದುದು.

———o———

# ಹರಿಕಥಾಮೃತಸಾರ.

## ನಾಮಸ್ಮರಣೆ ಸಂಧಿಯೆಂಬ ೧೩ನೆಯದು ಪ್ರಾರಂಭ.

ಈ ಕಲಿಯುಗದಲ್ಲಿ ಎಲ್ಲಾ ಸಾಧನಕ್ಕಿಂತಲೂ ನಾಮೋಚ್ಚಾರಣವನ್ನು ಮಾತ್ರಭಕ್ತಿಯಿಂದ ಮಾಡಿದರೆ ಅದಕ್ಕೆ ಸಮವಾದುದು ಯಾವುದೂ ಇಲ್ಲವೆಂದು 'ನಾಮ್ನೋಽಸ್ತಿ ಯಾವತೀ ಶಕ್ತಿಃ ಪಾಪ ನಿರ್ಹರಣೇಹರೇಃ ‖ ತಾವತ್ಕರ್ತುಂ ನಶಕ್ನೋತಿ ಪಾತಕಂ ಪಾತಕೀಜನಃ" ಪರಮಾತ್ಮನ ನಾಮವನ್ನು ಭಕ್ತಿಯಿಂದ ಉಚ್ಚರಿಸಿದರೆ ಅದು ಎಷ್ಟು ಪಾಪಗಳನ್ನು ಪರಿಹಾರಮಾಡುವುದೋ ಅಷ್ಟು ಪಾಪಗಳನ್ನು ಮಹಾಪಾಪಿಯಾದ ಒಬ್ಬ ಮನುಷ್ಯನು ಅವನ ಆಯುಷ್ಯದಲ್ಲಿ ಮಾಡಲು ಸಾಧ್ಯವಾಗುವುದಿಲ್ಲವೆಂದು ಶ್ರೀಮದಾಚಾರ್ಯರ ವಾಕ್ಯವೇ ಇರುವುದು. ಆದ್ದರಿಂದ ದಾಸರಾಯರು ನಾಮಸ್ಮರಣೆಯ ಮಹಿಮೆಯನ್ನೂ ಅದನ್ನು ಮಾಡುವರೀತಿಯನ್ನೂ ಹೇಳುತ್ತಾ ಪ್ರಸಕ್ತಿಯಿಂದ ಸತ್ಸಾಧನೆಗೆ ಮುಖ್ಯಕಾರಣವಾದ ಭಗವದ್ಭಕ್ತರ ಮಹಿಮೆ ಎಂತಹುದೆಂಬ ವಿಚಾರವನ್ನೂ, ಪುಣ್ಯಪಾಪಗಳ ವಿಚಾರವನ್ನೂ, ಪಾಂಚಭೂತಿಕರಾದ ಜೀವರ ಭೋಜ್ಯಪದಾರ್ಥಗಳಲ್ಲಿ ಮಾಡಬೇಕಾದ ಅನುಸಂಧಾನಕ್ರಮವನ್ನೂ, ಶ್ರೀ ಪರಮಾತ್ಮನನ್ನು, ಹೊಂದುವ ರೀತಿಯನ್ನೂಸಹ ಈ ಸಂಧಿಯಲ್ಲಿ ಹೇಳುತ್ತಾರೆ :—ಅದರಲ್ಲಿ ಪ್ರಥಮ ಪದ್ಯದಿಂದ ಸಂಧಿಸೂಚನೆಯನ್ನು ಮಾಡುತ್ತ ಯಾವರೀತಿಯಿಂದ ನಾಮಸ್ಮರಣೆ ಮಾಡಿದರೂ ಮಹಾಫಲ ಉಂಟೆಂದು ಹೇಳುತ್ತಾರೆ :—

ಹರಿಕಥಾ ಮೃತಸಾರ ಗುರುಗಳ ‖ ಪ ‖

**ಮಕ್ಕಳಾಡಿಸುವಾಗ ಮಡದಿಯೊ**
**ಳಕ್ಕರದಿ ನಲಿವಾಗ ಹಯಪ**
**ಲ್ಲಕ್ಕಿ ಗಜ ಮೊದಲಾದ ವಾಹನಗಳೇರಿ ಮೆರೆವಾಗ ‖**
**ಬಿಕ್ಕುವಾಗಾಕಳಿಸುತಲಿ ದೇ**
**ವಕ್ಕಿ"ತನಯನ ಸ್ಮರಿಸುತಿಹ ನರ**
**ಸಿಕ್ಕುವನೆ ಯಮದೂತರಿಗೆ ಅವಲ್ಲಿ ನೋಡಿದರು ‖ ೧ ‖**

ಪದ್ಯಾರ್ಥ :—ಮಕ್ಕಳಾಡಿಸುವಾಗ, ಮಕ್ಕಳನ್ನು ಎತ್ತಿಕೊಂಡು ಮುದ್ದಿಟ್ಟು ಲಾಲಿಸುವಾಗಲೂ, ಅವುಗಳ ಆಟಪಾಟಗಳನ್ನು ನೋಡಿ ಸಂ

ತೋಷ ಪಡುವಾಗಲೂ, ಆಟವನ್ನು ಆಡಿಸುವಾಗಲೂ, ಮಡದಿಯೊಳ್= ಹೆಂಡತಿಯೊಂದಿಗೆ, ಅಕ್ಕರದಿ = ಪ್ರೀತಿಯಿಂದ, ನಲಿವಾಗ=ಭೋಗಿಸುವ ಕಾಲದಲ್ಲಿಯೂ, ಹಯ=ಕುದುರೆ, ಪಲ್ಲಕ್ಕಿ, ಗಜ = ಆನೆ, ಮೊದಲಾದ ವಾಹನಗಳ, ಏರಿ=ಹತ್ತಿಕೊಂಡು ಮೆರೆವಾಗ, ಬಿಕ್ಕುವಾಗ, ಆಕಳಿಸುತಲಿ, ದೇವಕ್ಕಿತನಯನ, ಶ್ರೀಕೃಷ್ಣನ, ತದಾತ್ಮಕ ಶ್ರೀಹರಿಯನ್ನು, ಸ್ಮರಿಸುತಿಹ, ಸ್ಮರಣೆಮಾಡುತ್ತಿರುವ, ನರ=ಮನುಷ್ಯನು, ಆವಲ್ಲಿ ನೋಡಿದರು, ಎಲ್ಲಿ ಹುಡಿಕಿದರೂ, ಯಮದೂತರಿಗೆ, ಶಿಕ್ಕುವನೆ?

**ತಾತ್ಪರ್ಯ:**—ಶ್ರೀ ಪರಮಾತ್ಮನ ನಾಮಸ್ಮರಣೆ ಮಾಡುವುದಕ್ಕೆ ಸ್ನಾನಾದಿಗಳನ್ನು ಮಾಡಿ ಜಪಾದಿಗಳನ್ನು ಜಪಿಸುವಂತೆ ಇಂತಹ ಕಾಲಗಳಲ್ಲೇ ಮಾಡಬೇಕು. ಮಿಕ್ಕ ಕಾಲದಲ್ಲಿ ಮಾಡಬಾರದೆಂತಿಲ್ಲ. ಸ್ಮರಣೆ ಮಾಡುವುದಕ್ಕೆ ಸರ್ವದಾ ಕಾಲವೆ. ಗರುಡ ಪುರಾಣದಲ್ಲಿ 'ಪುತ್ರಾದೀನಾಂ ಚುಂಬನೇಚ್ಛೈವ ಕಾಲೆ ಸವೇಣು ಹಸ್ತಂ ಸಸ್ಮರೇತ್ಕೃಷ್ಣಮೇವ || ಸುಸಂಗಕಾಲೆ ಸ್ವಸ್ತ್ರಿಯಶ್ಚೈವ ನಿತ್ಯಂ ಗೋಪ ಸ್ತ್ರೀಣಾಂ ಪೀನಪಯೋಧರಂ ಧೃತಂ' ಮಕ್ಕಳನ್ನು ಚುಂಬನಾದಿಗಳನ್ನು ಮಾಡುವಾಗ ವೇಣುಗೋಪಾಲಕೃಷ್ಣನನ್ನು ಸ್ಮರಿಸಬೇಕು. ತನ್ನ ಭಾರ್ಯಳಲ್ಲಿ ಭೋಗಿಸುವ ಕಾಲದಲ್ಲಿ ಗೋಪಿಕಾಸ್ತ್ರೀಯರ ಪೀನವಾದ ಕುಚಗಳನ್ನು ಧರಿಸಿರುವ ಶ್ರೀ ಕೃಷ್ಣನನ್ನು ಸ್ಮರಿಸಬೇಕು. ಎಂದು ಹೇಳಿರುವರು. ಇದೇ ಅರ್ಥವನ್ನೇ ದಾಸರಾಯರು 'ಈ ಪದ್ಯದಿಂದ ಹೇಳಿರುವರು. ಮಕ್ಕಳಾಡಿಸುವಾಗ, ಅವು ವಿಚಿತ್ರವಾದ ಆಟಗಳನ್ನಾಡುತ್ತಿದ್ದರೆ ಅದನ್ನು ನೋಡಿ ಭಗವಂತನು ಶಿಶುರೂಪಿಯಾಗಿ ಅಲ್ಲಿದ್ದು ಹೀಗೆ ಆಟವಾಡುತ್ತಿರುವನೆಂದು ಚಿಂತಿಸಬೇಕು. ಸ್ತ್ರೀಯಾದಿ ಭೋಗ ಕಾಲದಲ್ಲಿಯೂ ದಂಪತಿಗಳಲ್ಲಿ ದಂಪತಿ ರೂಪಿಯಾಗಿ ಪರಮಾತ್ಮನಿದ್ದು ಕ್ರೀಡಿಸುತ್ತಿರುವನೆಂದು ಪರಮಾತ್ಮನನ್ನು ಸ್ಮರಿಸಬೇಕು. 'ಆಸೀನಃ ಸಂವಿಶಂಸ್ತಿಷ್ಠ್ಟನ್ ಭುಂಜಾನಃ ಪರ್ಯಟನ್ ಪಿಬನ್ || ಚಿಂತಯಾನೋ ಹೃಷೀಕೇಶಮಪಶ್ಯತ್ತನ್ಮಯಂ ಜಗತ್' ಎಂಬ ಭಾಗವತ ದಶಮಸ್ಕಂಧದ ವಾಕ್ಯದಂತೆ ಕೂಡುವಾಗಲೂ, ಮಲಗುವಾಗಲೂ, ನಿಲ್ಲುವಾಗಲೂ, ಭುಂಜಿಸುವಾಗಲೂ, ಸಂಚರಿಸುವಾಗಲೂ, ಪಾನಮಾಡುವಾಗಲೂ, ಪರಮಾತ್ಮನನ್ನು ಚಿಂತಿಸುತ್ತಾ ಜಗತ್ತೆಲ್ಲ ತನ್ಮಯವಾಗಿಯೇ ಕಂಡನೆಂದು ಹೇಳಿರುವರು. ಇದೊಂದು ಸ್ಮರಣೆಗೆ ಸಾಧನವೆಂದರ್ಥ. ಮತ್ತು ಷಷ್ಠಸ್ಕಂಧದಲ್ಲಿ, 'ಪತಿತಃಸ್ಖಲಿತೋ ಭಗ್ನಃ

ಸಾದಷ್ಟಸ್ತ್ವಪ್ತ ಆಹತಃ||ಹರಿರಿತ್ಯವಶೇನಾಹ ಪುಮಾನ್ನಾ ಈತಿ ಯಾತನಾಂ" ಬೀಳುವಾಗಲೂ, ಎಡುವವಾಗಲೂ, ಯಾವುದಾದರು ಗಾಯ ಮೊದಲಾದವು ತಗಲಿದಾಗಲು, ತುಟಿಯನ್ನು ಕಚ್ಚಿಕೊಂಡಾಗಲು, ಸಂತಪ್ತನಾಗಿರುವಾಗಲು ಏಟು ತಿಂದಕಾಲದಲ್ಲೂ ಸಹ, ಅಯ್ಯೋ ಅಪ್ಪ, ಅನ್ನದೆ ಹರಿ ಹರಿ ಅಂದರೆ ಸಾಕು. ಅವನು ಯಮಯಾತನೆಯನ್ನು ಹೊಂದನು, ಎಂದು ಹೇಳಿರುವರು. ಆದರೆ 'ಅಭಕ್ತ್ಯೋದಾಕೃತಂ ನೈ ಫಲದಾತೃ ಭವಿಷ್ಯತಿ' ಎಂಬ ಷಷ್ಟಸ್ಕಂಧದ ತಾತ್ಪರ್ಯಾನುಸಾರವಾಗಿ, ಭಕ್ತಿಯಿಲ್ಲದೆ ನಾಮೋಚ್ಚಾರಣೆ ಮಾಡಿದರೆ ಎನೂ ಫಲವಾಗುವುದಿಲ್ಲ. ಎಂದು ಸ್ಪಷ್ಟವಾಗಿರುವುದರಿಂದ ಭಕ್ತಿಯಿಂದ ಮಾತ್ರ ಮೇಲೆ ಹೇಳಿದಂತೆ ನಾಮೋಚ್ಚಾರಣೆ ಮಾಡಿದರೆ ಯಮದೂತರನ್ನು ಕಾಣುವುದಿಲ್ಲ.

ಅದರಂತೆಯೇ ದಾಸರಾಯರು ಕುದುರೆಯಮೇಲೂ, ಪಲ್ಲಕ್ಕಿಯ ಒಳಗೂ, ಆನೆ ಮೊದಲಾದ ವಾಹನಗಳಮೇಲೆ ಕೂತು ಮೆರೆಯುವಾಗಲೂ, ಪರಮಾತ್ಮನನ್ನು ಭಕ್ತಿಯಿಂದ ಸ್ಮರಿಸಿದ ಮನುಷ್ಯನು ಯಮದೂತರಿಗೆ ಸಿಕ್ಕನು. ಎಂದು ಹೇಳಿರುವರು. ಇದೇ ಪ್ರಕಾರ ಭಾಗವತ ಷಷ್ಟಸ್ಕಂಧದಲ್ಲಿ 'ಸಕೃನ್ಮನಃ ಕೃಷ್ಣ ಪದಾರವಿಂದ ಯೋರ್ನಿವೇಶಿತಂ ತದ್ಗುಣರಾಗಿಯೈರಿಹ||ನತೇ ಯಮಂ ಪಾಶಭೃತಶ್ಚ ತದ್ಭಟಾನ್ ಸ್ವಪ್ನೇಪಿ ಪಶ್ಯಂತಿ ಹಿಚೀರ್ಣ ನಿಷ್ಕೃತಾಃ' ಪರಮಾತ್ಮನ ಪಾದಾರವಿಂದದಲ್ಲಿ ಚೆನ್ನಾಗಿ ಮನಸ್ಸನ್ನಿಟ್ಟು ಒಂದಾವರ್ತಿಯಾದರೂ ಪರಮಾತ್ಮನ, ಗುಣನಾಮ ಕರ್ಮನಾಮಗಳನ್ನು ಅರ್ಥಜ್ಞಾನ ಪೂರ್ವಕವಾಗಿ ಉಚ್ಚರಿಸಿದರೆ ಅವರು ಯಮನನ್ನೇ ಆಗಲಿ, ಪಾಶಗಳನ್ನು ಧರಿಸಿದ ಯಮಭಟರನ್ನಾಗಲಿ ಸ್ವಪ್ನದಲ್ಲೂ ಕೂಡ ಕಾಣುವುದಿಲ್ಲ. ಏಕೆಂದರೆ, ಇದರಿಂದ ಮಾಡಲ್ಪಟ್ಟ ಪ್ರಾಯಿಶ್ಚಿತ್ತ ಉಳ್ಳವರಾಗಿರುವರು ಎಂದು ಹೇಳಿರುವರು. ಅದೇ ಅಭಿಪ್ರಾಯವನ್ನೇ 'ಶಿಕ್ಕುವನೇ ಯಮದೂತರಿಗೆ ಆವಲ್ಲಿ ನೋಡಿದರು' ಎಂದು ದಾಸರಾಯರು ಹೇಳಿರುವರು.

ಮೇಲೆ ಹೇಳಿದುದನ್ನೇ ಪುನಃ ವಿವರಿಸುತ್ತಾರೆ.

**ಸರಿತ್ಪ್ರವಹಗಳಲ್ಲಿ ದಿವ್ಯಾಂ**
**ಬರದಿ ಪತ್ರಾದಿಯಲಿ ಹರ್ಷಾ**
**ಮರುಷ ವಿಸ್ಮೃತಿಯಿಂದಲಾಗಲಿ ಒಮ್ಮೆ ಬಾಯ್ದೆರದು||**
**ಹರಿ ಹರೀ ಹರಿ ಎಂಬ ಎರಡ**

ವಿಲ್ಲವೆಂತಲೂ ಭಾವಿಸಿ ವೇದೋಕ್ತ ಸ್ಥೂಲಕರ್ಮಗಳನ್ನು ಅನುಷ್ಠಿಸುವವರು ತ್ರೈವಿದ್ಯರು. ಅಂತಹವರಿಗೆ ಶ್ರೀಮನ್ನಾರಾಯಣನು ದುರ್ಗಮನು= ಸುಲಭನಲ್ಲ, ಎಂದೆನಿಪ,ಸಂತತ=ಯಾವಾಗಲು ತ್ರಿಗುಣಾತೀತ=ಸ್ವಯಂ ತಾನು ಈ ಮೂರು ಗುಣಗಳ ಸಂಬಂಧವಿಲ್ಲದವನು. ಆತ್ರೈವಿದ್ಯರ್ಗೆ= ತ್ರಿಗುಣ ಕಾರ್ಯಗಳಿಗಿರುವ ಸ್ವರ್ಗ ಭೂಮಿ ನರಕಸ್ಥಾನಗಳಲ್ಲಿನ ಸುಖದುಃಖ ಭೋಗಗಳನ್ನು ಉಣಿಸುತಿಪ್ಪನು, ಅವರವರ ಅನುಷ್ಠಾನ ಭೇದಗಳನ್ನನು ಸರಿಸಿ, ಸ್ವರ್ಗ ಭೂ ನರಕದಲಿ ಸಂಚಾರವನೆ ಮಾಡಿಸುವ,

ತಾತ್ಪರ್ಯ :—ಈ ತ್ರೈವಿದ್ಯರುಗಳಲ್ಲಿ ಕೆಲವರು ಸತ್ವಭಾಗ ಅಧಿಕ ವಾಗುಳ್ಳವರು. ಕೆಲವರು ರಜೋಭಾಗ ಅಧಿಕವಾಗುಳ್ಳವರು. ಮತ್ತು ಕೆಲವರು ತಮೋಭಾಗ ಅಧಿಕವಾಗುಳ್ಳವರು. ಹೀಗೆ ಅಧಿಕಾಂಶವಾದ ಸತ್ವಾದಿ ಗುಣಗಳನ್ನು ಅನುಸರಿಸಿ ವಿವಿಧ ದೇವತೆಗಳನ್ನು ಪೂಜಿಸುವಕಾರಣ ಸ್ವರ್ಗ ಭೂಮಿ ನರಕಗಳಲ್ಲಿ ಫಲಾನುಭವ ಬರುವುದು. ಸಾತ್ವಿಕ ಮೊದ ಲಾದ ಮೂವರು ಹೊರತು ತ್ರಿಗುಣಾತೀತರು (ನಿರ್ಗುಣರು) ಎಂದು ಬೇರೆ ಇರುವರು. ಸಾತ್ವಿಕರು ಮುಕ್ತಿಯೋಗ್ಯರು. ಆದರೆ ಅವರಿಗೆ ಇಷ್ಟು ಕಲ್ಪಸಾಧನವೆಂತಲೂ, ಕೆಲವರಿಗೆ ಇಷ್ಟು ಜನ್ಮಗಳು ಸಾಧನವಾಗಬೇ ಕೆಂತಲೂ, ತ್ರಿವಿಧರಿಗೂ ನಿಯಮವುಂಟು. ಅದರಲ್ಲಿ ಸಾತ್ವಿಕರು ತಮ್ಮ ಸಾಧನವಾಗುವವರೆಗೂ ಸತ್ವಗುಣಸಂಬಂಧದಲ್ಲಿರುವರು. ಸಾಧನಪೂರ್ತಿ ಯಾದಕೂಡಲೆ ಅವರೇ ನಿರ್ಗುಣರು (ಗುಣಾತೀತರು) ಆಗುವರು. ಸತ್ವ ಗುಣ ಸಂಬಂಧವಿರುವವರೆಗೂ ಸ್ವರ್ಗಸುಖವನ್ನೋ, ರಾಜ್ಯವನ್ನೋ, ಭೋಗವನ್ನೋ ಅಪೇಕ್ಷಿಸುವರು. ನಿರ್ಗುಣರಾದಮೇಲೆ "ಸಾಲೋಕ್ಯ ಸಾರ್ಷ್ಟಿ ಸಾಮೀಪ್ಯ ಸಾರೂಪ್ಯೈಕತ್ವಮಿತ್ಯುತದೀಯಮಾನಂನಗೃಣ್ಹಂತಿ ವಿನಾಮತ್ಸೇವನಂಜನಾಃ ॥" ಸಾಲೋಕ್ಯಾದಿ ೫ ವಿಧ ಮುಕ್ತಿಯನ್ನೂ ಸಹ ಬೇಡರು ಎಂದು ಪರಮಾತ್ಮನೇ ಹೇಳಿರುವನು. ಈ ಜ್ಞಾನವು ಗುಣಾತೀತರಿಗೆ ಮಾತ್ರ ಹುಟ್ಟುವುದು. ಇದೇ ಅರ್ಥವನ್ನೇ ದಾಸರಾ ಯರು ಈ ಪದ್ಯದಿಂದ ಹೇಳಿರುತ್ತಾರೆ. ಮೇಲೆ ಹೇಳಿದಂತೆ ತ್ರಿಗುಣಾ ತೀತರಾದ ಸಾಧನ ಪೂರ್ತಿಯಾದ ಸಾತ್ವಿಕರಿಗೆ ಗುಣಸಂಬಂಧ ದೋಷಗ ಳೆಂದರೆ, ಸ್ವರ್ಗಕ್ಕೆ ಹೋಗಿ ಕೆಲವುಕಾಲ ಸುಖಾನುಭವ ಮಾಡಿ ಮತ್ತು ಭೂಮಿಯಲ್ಲಿ ಹುಟ್ಟುವುದು. ಅಲ್ಲಿಯೂ ಅನಿತ್ಯ ಸುಖವನ್ನನುಭವಿಸು

ವುದು ; ಇವೇ ಮೊದಲಾದ ದೋಷಗಳನ್ನುಂಟುಮಾಡಿಸದೆ ಮುಕ್ತಿಯನ್ನು ಕೊಟ್ಟು ಉದ್ಧರಿಸುವನು. ಇದಲ್ಲದೆ ಇನ್ನು ಸಾಧನಪೂರ್ತಿಯಾಗದಿರುವ ಸಾತ್ವಿಕರು ಕೆಲವು ಕಾಲ ಸಾಧನೆ ಪೂರ್ತಿ ಮಾಡಿಕೊಳ್ಳಲು ಅವರ ಸುಖಗಳೆಲ್ಲವನ್ನೂ ಸ್ವರ್ಗದಲ್ಲಿಯೇ ಅನುಭವಿಸುವರು. ಮಧ್ಯಮ ಭಕ್ತರಾದ ಮನುಷ್ಯೋತ್ತಮರು "ವಿಷ್ಣೋಸ್ತುಮಧ್ಯಮೋಭಕ್ತೋ ನಿರಯಂನ್ನೈವ ಗಚ್ಛತಿ" ಎಂಬ ಏಕಾದಶ ಸ್ಕಂಧದ ತಾತ್ಪರ್ಯಾನುಸಾರವಾಗಿ ಎಂದಿಗೂ ನರಕಕ್ಕೆ ಹೋಗುವುದಿಲ್ಲ. ಭೂಮಿಯಲ್ಲಿಯೇ ಸುಖವನ್ನು ಅನುಭವಿಸುವರು. ಕಾಲಾಂತರದಲ್ಲಿ ಇವರಿಗೂ ಮುಕ್ತಿಯಾಗುವುದು. ರಾಜಸರು ಭೂಮಿಯಲ್ಲಿ ದುಃಖಮಿಶ್ರವಾದ ಸುಖವನ್ನೇ ಅನುಭವಿಸುತ್ತಿರುವರು. ತಾಮಸರು ಪ್ರಾಯಶಃ ನರಕವಾಸಿಗಳು. ಕೆಲವು ಕಾಲ ಭೂಮಿಯಲ್ಲಿ ದುಃಖ, ಕೆಲವು ಕಾಲ ಸುಖ ಹೀಗೆ ಅನುಭವಿಸುತ್ತಾ ಇರುವರು. ಸಾತ್ವಿಕರಲ್ಲಿ ನಿರ್ಗುಣರು ಹೇಗೆ ಉತ್ತಮರೋ ಹಾಗೆ ತಾಮಸರಲ್ಲಿ ನಿರ್ಗುಣೋಪಾಸನೆ ಎಂದರೆ ಪರಮಾತ್ಮನು ನಿರ್ಗುಣನು, ನಿರಾಕಾರನು ಎಂದು ಉಪಾಸನೆಯನ್ನು ಮಾಡುವವರೆಂದು ಅರ್ಥ. ಈ ಉಪಾಸನೆಯನ್ನು ಮಾಡಬಾರದೆಂದು ಶ್ರೀಮಧ್ವಾಚಾರ್ಯರು ಖಂಡಿಸಿರುವರು. ಇದರಲ್ಲಿಯೂ ಅನ್ಯಥೋಪಾಸಕರಿಗೆ ಅಂಧಂತಮಸ್ಸೇ ಪ್ರಾಪ್ತಿ ಎಂದು ಹೇಳಿರುವರು. ಅನ್ಯಥೋಪಾಸಕರೆಂದರೆ ನಾನೇ ಬ್ರಹ್ಮನೆಂದು ಉಪಾಸನೆ ಮಾಡುವವರೆಂದರ್ಥ. ಇದೇ ತಮಸ್ಸಿಗೆ ಸಾಧನವು. ||೧೮||

ಅವತಾರಿಕೆ :—ಈ ತ್ರಿವಿಧ ಜೀವರಲ್ಲಿ ಪರಮಾತ್ಮನಿರುವುದರಿಂದ ಪರಮಾತ್ಮನಿಗೂ ಸುಖದುಃಖ ಲೇಪಗಳುಂಟೋ ಏನೋ ಎಂಬ ಮಂದ ಬುದ್ಧಿಗಳ ಶಂಕೆಯನ್ನು ಈ ಮುಂದಿನ ಪದ್ಯದಿಂದ ಪರಿಹರಿಸುತ್ತಾರೆ.

**ಮೂವರೊಳಗಿದ್ದರು ಸರಿಯೆ ಸುಖ**
**ನೋವುಗಳು ಸಂಬಂಧವಾಗವು**
**ಪಾವನಕೆ ಪಾವನ ಪರಾತ್ಪರ ಪೂರ್ಣ ಸುಖವನಧಿ ||**
**ಈವನರುಹಭವಾಂಡದೊಳು ಸ್ವಕ**
**ಳೇವರ ತದಾಕಾರಮಾಡಿಪ**
**ರಾವರೇಶಚರಾಚರಾತ್ಮಕ ಲೋಕಗಳ ಪೊರೆವ ||**

ಪದ್ಯಾರ್ಥ :—ಮೂವರೊಳಗೆ=ಸಾತ್ವಿಕ ರಾಜಸ ತಾಮಸ ಜೀವರೊಳಗೆ, ಇದ್ದರು ಸರಿಯೆ ಸುಖನೋವುಗಳು=ಸುಖದುಃಖಗಳು,ಸಂಬಂಧ

ವಾಗೆವು=ಪರಮಾತ್ಮನಿಗೆ ಲೇಪವಾಗೆವು, ಪಾವನಕೆ ಪಾವನ=ಏಕೆಂದರೆ ಆತನು ಪರಮ ಪವಿತ್ರಗಳೆಂಬ ವಸ್ತುಗಳಿಗೂ ಪವಿತ್ರತೆಯನ್ನು ಕೊಡುವವನು, ಪರಾತ್ಪರ=ಜಗತ್ತಿಗೆ ಉತ್ತಮರೆಂಬ ರಮಾ ಬ್ರಹ್ಮಾದಿಗಳಿಗಿಂತ ಅತಿ ಉತ್ತಮನು, ಪೂರ್ಣ ಸುಖವನಧಿ ಪೂರ್ಣಸುಖ ಸಮುದ್ರನು, ಈ ವನರುಹಭವಾಂಡದೊಳು=ವನರುಹ=ಕಮಲ, ಅದರಲ್ಲಿ ಭವ=ಉತ್ಪನ್ನರಾದವರು ಬ್ರಹ್ಮ. ಅಂಡವೆಂದರೆ=ಆ ಹೆಸರುಳ್ಳ ಬ್ರಹ್ಮಾಂಡದೊಳಗೆ ಸ್ವಕಳೇವರ, ತದಾಕಾರ ಮಾಡಿ=ತನ್ನ ಶರೀರವೆಂದೆನಿಸುವ ಜಗತ್ತನ್ನು ತತ್ತದಾಕಾರದಿಂದ (ನಾನಾ ರೂಪಗಳಿಂದ) ಸೃಜಿಸಿ, ಪರಾವರೇಶ= ಉತ್ತಮರಾದ ರಮಾ ಮೊದಲು ಅಲ್ಪರಾದ ತೃಣಜೀವ ಪರಿಯಂತ ಸರ್ವರಿಗೂ ನಿಯಾಮಕನಾದ, ಚರಾಚರಾತ್ಮಕ=ಜಂಗಮ ಸ್ಥಾವರಗಳಲ್ಲಿ ಅಂತರ್ಯಾಮಿಯಾಗಿದ್ದು ಲೋಕಗಳ, ಪೊರೆವ=ಕಾಯುವವನು.

ತಾತ್ಪರ್ಯ :—ಶ್ರೀ ಪರಮಾತ್ಮನು ಬ್ರಹ್ಮಾದಿ ಸ್ಥಾವರಾಂತವಾದ ಸಕಲ ಪ್ರಾಣಿಗಳಿಗೂ ಸ್ವಾಮಿಯು; ಪೂರ್ಣ ಸುಖಸಮುದ್ರನು. ಜಲಧಿಯೆಂದು ಸಮುದ್ರನಿಗೆ ಹೆಸರುಂಟು. ವನಧಿ ಎಂದರೂ ಅದೇ ಅರ್ಥ. ಹೇಗೆಂದರೆ—"ವನಂಭಾಸ್ಯಪ್ಸುಕಾನನೇ" ಎಂಬ ಕೋಶದಿಂದ ವನ ಶಬ್ದವು ಅಗ್ನಿ ಮೊದಲಾದವುಗಳಿಂದ ಹುಟ್ಟುವ ಪ್ರಕಾಶದಲ್ಲಿಯೂ, ನೀರಿನಲ್ಲೂ, ವನದಲ್ಲೂ ಬರುವುದು. ಆದ್ದರಿಂದ ಪೂರ್ಣ ಸುಖವನಧಿ ಅಂದರೆ ಪೂರ್ಣ ಸುಖಜಲಧಿ ಎಂದೇ ಅರ್ಥವೆಂದು ತಿಳಿಯಬೇಕು. ವನರುಹ ಭವಾಂಡವೆಂಬ ಶಬ್ದಕ್ಕೂ ಇದೇ ಅರ್ಥ. ಕಮಲಭವ ಅಂದರೆ ಕಮಲದಿಂದ ಹುಟ್ಟಿದವರು ಬ್ರಹ್ಮ. ಆ ಹೆಸರುಳ್ಳ ಅಂಡ ಅಂದರೆ ಬ್ರಹ್ಮಾಂಡವೆಂದರ್ಥ. ಇಂತಹ ಬ್ರಹ್ಮಾಂಡದಲ್ಲಿ ಸ್ಥಾವರ ಜಂಗಮ ಪ್ರಾಣಿಗಳ ಆಕಾರಗಳನ್ನು ತಾನು ಧರಿಸಿ ಸಕಲರಲ್ಲಿಯೂ ಇದ್ದು ಎಲ್ಲರನ್ನೂ ರಕ್ಷಿಸುವನು. ||೧೯||

ಅವತಾರಿಕೆ :—ಆದ್ದರಿಂದ ಮನುಷ್ಯನು ತನ್ನ ಸ್ವಾತಂತ್ರ್ಯ ಕರ್ತೃತ್ವಾಭಿಮಾನವನ್ನು ಬಿಟ್ಟು ಪರಮಾತ್ಮನೇ ಸರ್ವ ಕರ್ತೃವೆಂದು ನಿಶ್ಚಯಿಸಿ ಧ್ಯಾನಿಸಿದರೆ ಸರ್ವಪ್ರಕಾರದಿಂದಲೂ ಅವನನ್ನು ರಕ್ಷಿಸುವನೆಂದು ಹೇಳುತ್ತಾರೆ—

ಅನಿಮಿತ್ತ ನಿರಂತರಸ್ವಾ
ಧೀನಕರ್ತೃತ್ವವನು ಮರದೇ
ನೇನುಮಾಡುವುದೆಲ್ಲ ಹರಿ ಒಳಹೊರಗೆ ನೆಲಸಿದ್ದು॥
ತಾನೆ ಮಾಡುವನೆಂದರಿದು ಮ
ದ್ದಾನೆಯಂದದಿ ಸಂಚರಿಸುಪವ
ಮಾನವಂದಿತ ಒಂದರಕ್ಷಣ ಬಿಟ್ಟಗಲನಿನ್ನ ॥

ಪದ್ಯಾರ್ಥ :—ಅನಿಮಿತ್ತ=ಯಾವ ಪ್ರತಿಫಲವನ್ನೂ ಅಪೇಕ್ಷಿಸದೆ, ನಿರಂತರ=ನಿತ್ಯದಲ್ಲಿಯೂ, ಸ್ವಾಧೀನ ಕರ್ತೃತ್ವವನು ಮರೆದು=ಸ್ವತಂತ್ರ ಕರ್ತೃತ್ವವನ್ನು ಮರೆತು, ಏನೇನು ಮಾಡುವದೆಲ್ಲ=ಮಾಡುವ ಎಲ್ಲಾ ಕಾರ್ಯಗಳನ್ನೂ, ಹರಿ ಒಳಹೊರಗೆ ನೆಲಸಿದ್ದು=ಹರಿಯೇ ಮಾಡುವನೆಂದು, ಅರಿದು=ತಿಳಿದು, ಮದ್ದಾನೆಯಂದದಿ=ಭಯವಿಲ್ಲದೆ ಹರ್ಷದಿಂದ, ಸಂಚರಿಸು, ಪವಮಾನವಂದಿತ=ಮುಖ್ಯಪ್ರಾಣರಿಂದ ಪೂಜಿತನಾಗಿ ಅವರಲ್ಲಿ ನೆಲಸಿರುವ ಶ್ರೀಹರಿಯು ನಿನ್ನ ಒಂದರಕ್ಷಣ ಬಿಟ್ಟಗಲ=ಎಡಬಿಡದೆ ರಕ್ಷಿಸುವನೆಂದರ್ಥ.

ತಾತ್ಪರ್ಯ :—ಪವಮಾನವಂದಿತ ಎಂಬ ವಿಶೇಷಣದಿಂದ ಪರಮಾತ್ಮನು ಎಲ್ಲರಲ್ಲಿಯೂ ಮುಖ್ಯ ಪ್ರಾಣಾಂತರ್ಯಾಮಿಯಾಗಿದ್ದು ಅವರ ದ್ವಾರ ಸಕಲ ವ್ಯಾಪಾರವನ್ನು ಮಾಡಿಸುವನೆಂದು ತಿಳಿದು ಭಜಿಸುವುದು ಅವಶ್ಯಕವೆಂದು ಸೂಚಿಸುತ್ತಾರೆ. ॥೨೦॥

ಅವತಾರಿಕೆ :— ಮೇಲೆ ಹೇಳಿದಂತೆ ನಾವು ಮಾಡುವ ಸಕಲ ಕ್ರಿಯೆಗಳೂ ನಮ್ಮ ಹೃದ್ಗತನಾದ ಬಿಂಬರೂಪಿಯು ಕರ್ತೃಕವೆಂದು ಆ ಪರಮಾತ್ಮನನ್ನು ಭಜಿಸದೆ ಬಾಹ್ಯ ಪೂಜಾ ಏನು ಮಾಡಿದರೂ ಫಲವಿಲ್ಲವೆಂದು ಹೇಳುತ್ತಾರೆ.

ಹಲವು ಕರ್ಮವ ಮಾಡಿ ದೇಹವ
ಬಳಲಿಸದೆ ದಿನದಿನದಿ ಹೃದಯಾ
ಕಮಲ ಸದನದಿ ವಿರಾಜಿಸುವ ಹರಿಮೂರ್ತಿಯನೆ ಭಜಿಸು ॥
ತಿಳಿಯದೀ ಪೂಜಾಪ್ರಕರಣವ
ಫಲಸುಪುಷ್ಪಾಗ್ರ್ಯೋದಕ ಶ್ರೀ
ತುಳಸಿದಳವರ್ಪಿಸಲು ಒಪ್ಪನು ವಾಸುದೇವಸದಾ ॥

ಪದ್ಯಾರ್ಥ :—ಹಲವು ಕರ್ಮವ=ನಾನಾ ವಿಧವಾದ ವ್ರತೋಪವಾಸ ನಿಯಮಾದಿ ಕರ್ಮಗಳನ್ನು ಮಾಡಿ, ದೇಹವ ಬಳಲಿಸದೆ=ದೇಹಕ್ಕೆ

ಆಯಾಸವನ್ನು ಕೊಟ್ಟು ನೋಯಿಸದೆ, ದಿನದಿನದಿ=ನಿತ್ಯದಲ್ಲಿಯೂ, ಹೃದಯಾಮಲಸದನದಿ=ಹೃದಯಕಮಲವೆಂಬ ನಿರ್ಮಲವಾದ ಮನೆಯಲ್ಲಿ, ವಿರಾಜಿಸುವ=ಪ್ರಕಾಶಿಸುವ ಹರಿಮೂರ್ತಿಯನೆ=ಭಗವದ್ರೂಪಗಳನ್ನು ಗುರುಗಳು ಪೇಳಿದಂತೆ ತಿಳಿದು ಭಜಿಸು, ಈ ಪೂಜಾಪ್ರಕರಣವ ತಿಳಿಯದೆ=ಈ ರೀತಿಯಲ್ಲಿ ಪೂಜಿಸುವುದನ್ನು ಅರಿಯದೆ ಫಲ ಸುಪುಷ್ಪ, ಅಗ್ರ್ಯೋದಕ, ಶ್ರೀ ತುಳಸಿ ದಳಗಳಿಂದ, ಸದಾ=ಹಗಲಿರುಳು, ಫಲ ಸುಪುಷ್ಪಾದಿಗಳಿಂದ, ಅರ್ಪಿಸಲು, ವಾಸುದೇವನು ಒಪ್ಪನು=ಅದನ್ನು ಪೂಜೆ ಎಂದು ವಾಸುದೇವನು ಕೈಕೊಳ್ಳನು.

ತಾತ್ಪರ್ಯ :—ನಾನಾ ವಿಧವಾದ ವ್ರತಗಳು, ಉಪವಾಸಗಳನ್ನು ಮಾಡಿ ದೇಹವನ್ನು ಶುಷ್ಕ ಮಾಡಿ ಮುಕ್ತಿಗೆ ಸಾಧನಭೂತವಾದ ಈ ಶರೀರವನ್ನು ಕೆಡಿಸಿಕೊಳ್ಳುವುದರಿಂದ ಫಲವಿಲ್ಲ. ನಿನ್ನ ಹೃದಯಕಮಲ ಮಂದಿರದಲ್ಲಿ ಶೋಭಿಸುವ ಬಿಂಬ ಮೂರ್ತಿಯಾದ ಶ್ರೀಹರಿಯೇ ಸರ್ವ ಕರ್ತನೆಂದು ತಿಳಿದು ಸರ್ವಸಮರ್ಪಣೆಯಿಂದ ಭಜಿಸು; ಇದೇ ಭಗವತ್ಪೂಜೆಯು. ಈ ಪೂಜಾಪ್ರಕರಣವನ್ನು ತಿಳಿಯದೆ ಬರೇ ಹುವ್ವು, ತುಳಸಿ, ಗಂಧ, ಮೊದಲಾದ ಬಾಹ್ಯ ಪೂಜೆಯಿಂದ ಪರಮಾತ್ಮನು ಪ್ರೀತನಾಗುವುದಿಲ್ಲ. ಈ ವಾಕ್ಯದಿಂದ ಬಾಹ್ಯಪೂಜಾ ಮಾಡಬಾರದೆಂಬ ಅಭಿಪ್ರಾಯವಲ್ಲ. ಯಾವ ಕಾರ್ಯವನ್ನು ಮಾಡಿದರೂ ಪರಮಾತ್ಮನೇ ಕರ್ತಾ ಎಂಬ ಜ್ಞಾನವಿಲ್ಲದೆ ನಾನು ಪೂಜೆ ಮಾಡಿದೆನು; ಹುವ್ವು, ತುಳಸಿ ತಂದು ಲಕ್ಷಾರ್ಚನೆ ಮಾಡಿದೆನು ವಿಷ್ಣುಪಂಚಕೋಪಾಸ ಮಾಡಿರುತ್ತೇನೆ. ಭೀಷ್ಮಪಂಚಕಮಾಡಿರುತ್ತೇನೆಂದು ಸ್ವತಂತ್ರಕತೃತ್ವದಿಂದಾ ಮಾಡಿದುದಾಗಿ ಭಾವಿಸಿದರೆ ಮಾಡಿದುದೆಲ್ಲವೂ ನಿಷ್ಫಲವೇ ಹೊರತು ಭಗವತ್ಪ್ರೀತಿ ಆಗುವುದಿಲ್ಲ. ||೨೧||

ಅವತಾರಿಕೆ:—ಈ ಪಂಚಭೂತಿಕ ಶರೀರದಲ್ಲಿನ ಪಂಚಭೂತಗಳಲ್ಲಿಯೂ ಅನಿರುದ್ಧಾದಿ ೫ ರೂಪಗಳಿಂದ ಪರಮಾತ್ಮನಿರುವನೆಂದು ಹೇಳುತ್ತಾರೆ.

**ಧರಣಿ (ಯಲ್ಲಿ) ನಾರಾಯಣನು ಉದಕದಿ**
**ಶುಚಿಯನಾಮಕ | ನಗ್ನಿಯೊಳುಸಂ**
**ಕರ್ಷಣಾಹ್ವಯ | ವಾಯುಗಪ್ರದ್ಯುಮ್ನನನಿರುದ್ಧ**
**ಇರುತಿಹನಾಕಾಶದೊಳು | ಮೂ**

ಕೆರಡುರೂಪವಧರಿಸಿ ಭೂತಗೆ
ಕರೆಸುವನು ತನ್ನಾಮರೂಪದಿಪ್ರಜರಸಂತೈಪ

ಪದ್ಯಾರ್ಥ :—ಧರಣಿ=ಪೃಥ್ವೀತತ್ವದಲ್ಲಿ ನಾರಾಯಣನು, ಉದಕದಿ=ಅಪ್ಪುತತ್ವದಲ್ಲಿ, ತುರಿಯನಾಮಕನು=ವಾಸುದೇವಮೂರ್ತಿಯು ಅಗ್ನಿಯೊಳು=ತೇಜಸ್ತತ್ವದಲ್ಲಿ.ಸಂಕರ್ಷಣಾಹ್ವಯ=ಸಂಕರ್ಷಣ ನಾಮಕನು, ವಾಯುಗೆ=ವಾಯುತತ್ವದಲ್ಲಿ, ಇರುವವನು, ಪ್ರದ್ಯುಮ್ನನು, ಆಕಾಶದೊಳು,ಅನಿರುದ್ಧ ಇರುತಿಹನು ಮೂರೆರಡುರೂಪವ=ಹೀಗೆ ೩ + ೨ =೫ ರೂಪಗಳನ್ನು ಸ್ವೀಕರಿಸಿ, ಭೂತಗೆ=ಪಂಚಭೂತಗಳಲ್ಲಿ, ತನ್ನಾಮರೂಪದಿ =ಆಯಾರೂಪದಿಂದಿದ್ದು, ಆಯಾಹೆಸರಿಂದ ಕರೆಸುವನು ಧರಣಿ, ಉದಕ, ಅನಲ, ಆಕಾಶ ಎಂಬ ನಾಮಗಳಿಂದಲೇ ಕರೆಸಿಕೊಂಡು, ಪ್ರಜರ ಸಂತೈಪ

ತಾತ್ಪರ್ಯ:—ಪರಮಾತ್ಮನ ಈ ವಿಭೂತಿಯನ್ನು ತಿಳಿದ ಜನರನ್ನು ವಿಶೇಷ ಕರುಣದಿಂದ ರಕ್ಷಿಸುವನು. |೨೨||

ಅವತಾರಿಕೆ:—ಮೇಘಾದಿ ೫ರಲ್ಲಿ ನಾರಾಯಣಾದಿ ೫ ರೂಪಗಳನ್ನು ತಿಳಿಯಬೇಕೆಂದು ಹೇಳುತ್ತಾರೆ.

ಘನಗತನು ತಾನಾಗಿ ನಾರಾಯ
ಣನು ತನ್ನಾಮದಲಿ ಕರೆಸುವ
ವನದಗರ್ಭೋದಕದಿನೆಲಸಿಹವಾಸುದೇವಾಖ್ಯ ||
ಧ್ವನಿಸಿಡಿಲುಸಂಕರ್ಷಣನುಮಿಂ
ಚಿನೊಳುಶ್ರೀಪ್ರದ್ಯುಮ್ನವೃಷ್ಟಿಯ
ಹನಿಗಳೊಳಗನಿರುದ್ಧನಿಪ್ಪನುವರ್ಷವೆಂದೆನಿಸಿ ||

ಪದ್ಯಾರ್ಥ :—ನಾರಾಯಣನು, ಘನಗತನು ತಾನಾಗಿ= ಮೇಘದೊಳಗೆ ತಾನಿದ್ದು, ತನ್ನಾಮದಲಿ= ಮೇಘವೆಂಬ ಹೆಸರಿನಿಂದ, ಕರೆಸುವ= ಕರೆಸಿಕೊಳ್ಳುವನು, ವನದ ಗರ್ಭೋದಕದಿ= ಮೇಘದಲ್ಲಿರುವ ನೀರಿನಲ್ಲಿ, (ವದನ= ಉದಕಪ್ರದ ನಾಮದಿ= ಮೇಘದಲ್ಲಿರುವ ಉದಕದಲ್ಲಿ ಇರುವವನು ವಾಸುದೇವನು) ವನಜನಾಮಕನಾಗಿ ಮೇಘದಲ್ಲಿರುವ ಉದಕದಲ್ಲಿ, ವಾಸುದೇವಾಖ್ಯಾ= ವಾಸುದೇವನೆಂಬ ಹೆಸರುಳ್ಳ ಶ್ರೀಹರಿಯು, ನೆಲಸಿಹ= ವಾಸವಾಗಿರುವನು,ಧ್ವನಿಸಿಡಿಲು= ಸಿಡಿಲು ಗುಡುಗುಗಳಲ್ಲಿ ಸಂಕರ್ಷಣನು, ಮಿಂಚಿನೊಳು, ಶ್ರೀ ಪ್ರದ್ಯುಮ್ನ, ವೃಷ್ಟಿಯ ಹನಿ

**ಗಳೊಳಗೆ**= ಮಳೆ ಹನಿಗಳೊಳಗೆ **ವರ್ಷವೆಂದೆನಿಸಿ**, **ಅನಿರುದ್ಧನು**, **ಇಪ್ಪನು**= ಇರುವನು.

ತಾತ್ಪರ್ಯ :—ಮೇಘದಲ್ಲಿ ನಾರಾಯಣನು, ಮೇಘಗರ್ಭದಲ್ಲಿರುವ ಉದಕದಲ್ಲಿ ವಾಸುದೇವನು, ಗುಡುಗು ಸಿಡಿಲುಗಳಲ್ಲಿ ಸಂಕರ್ಷಣನು, ಮಿಂಚಿನೊಳಗೆ ಪ್ರದ್ಯುಮ್ನನು, ಮಳೆಯ ಹನಿಗಳಲ್ಲಿ ಅನಿರುದ್ಧನು, ಹೀಗೆ ೫ ರೂಪಗಳಿಂದ ಮೇಘ ಮಿಂಚು ಮೊದಲಾದವುಗಳಲ್ಲಿ ಮೇಘಾದಿ ರೂಪ ಗಳಿಂದಲೂ ಅದೇ ಹೆಸರಿನಿಂದಲೂ ಶ್ರೀ ಹರಿಯು ವಾಸವಾಗಿರುವನು||೨೩||

ಅವತಾರಿಕೆ :—ಈ ರೀತಿಯಲ್ಲಿ ಶ್ರೀ ಪರಮಾತ್ಮನು ನಮ್ಮ ಒಳಗೊ ಹೊರಗೊ ಇದ್ದು ಸಂರಕ್ಷಿಸುವುದನ್ನು ಅರಿಯದೆ ಮಂದಮತಿಗಳು ಸ್ವಕರ್ತೃತ್ವಾಭಿಮಾನದಿಂದ ವೃಥಾ ಕೆಡುತ್ತಿದಾರೆಂದು ಹೇಳುತ್ತಾರೆ :—

**ಗೃಹ ಕುಟುಂಬ ಧನಾದಿಗಳ ಸಂ**
**ನ್ನಹಗಳುಳ್ಳವರಾಗಿ ವಿಹಿತಾ**
**ವಿಹಿತ ಧರ್ಮ ಸುಕರ್ಮಗಳ ತಿಳಿಯದಲೆ ನಿತ್ಯದಲಿ ||**
**ಆಹರಮೈಥುನ ನಿದ್ರೆಗೊಳಗಾ**
**ಗಿಹರು ಸರ್ವಪ್ರಾಣಿಗಳು ಹೃ**
**ದ್ಗುಹ ನಿವಾಸಿಯನರಿಯದಲೆ ಭವದೊಳಗೆ ತೊಳಲುವರು ||**

ಪದ್ಯಾರ್ಥ :—ಗೃಹ ಕುಟುಂಬ ಧನಾದಿಗಳ= ಮನೆ, ಹೆಂಡತಿ, ಮಕ್ಕಳು ಮೊದಲಾದವರು, ದ್ರವ್ಯಾದಿಗಳು, ಇವುಗಳ, ಸನ್ನಹಗಳುಳ್ಳವ ರಾಗಿ= ಇವುಗಳನ್ನು ಸಂಪಾದಿಸುವುದರಲ್ಲಿ ನಿರತರಾಗಿ, ವಿಹಿತ= ಮಾಡ ಬೇಕಾದ, ಅವಿಹಿತ= ಮಾಡಬಾರದ, ಧರ್ಮ ಸುಕರ್ಮಗಳ, ತಿಳಿಯದಲೆ, ನಿತ್ಯ ದಲಿ. ಆಹರ= ಆಹಾರ, ಮೈಥುನ , ನಿದ್ರೆಗೆ,ಒಳಗಾಗಿ, ಸರ್ವಪ್ರಾಣಿಗಳು ಇಹರು= ಇರುವರು ಹೃದ್ಗುಹನಿವಾಸಿಯನು= ತಮ್ಮ ಹೃದಯಾಕಾಶದಲ್ಲಿ ವಾಸಮಾಡುತ್ತಿರುವ ಶ್ರೀ ಬಿಂಬಮೂರ್ತಿ ಪರಮಾತ್ಮನನ್ನು, ಅರಿಯದಲೆ, ಭವದೊಳಗೆ= ಸಂಸಾರದಲ್ಲಿ, ತೊಳಲುವರು= ತಲ್ಲಣಿಸುವರು.

ತಾತ್ಪರ್ಯ :—ಹೆಂಡತಿ, ಮಕ್ಕಳು, ಮನೆ, ಬಾಗಿಲು, ಆಸ್ತಿ ಮೊದ ಲಾದವುಗಳನ್ನು ಸಂಪಾದಿಸುವುದಕ್ಕೆ ಬೇಕಾದ ಸನ್ನಾಹಗಳನ್ನು ಮಾಡುತ್ತ ಅದರಲ್ಲೇ ಪ್ರೈಮರಿತು ಧರ್ಮ ವಿಷಯದಲ್ಲಾಗಲಿ, ಕರ್ಮಗಳಲ್ಲೇ ಆಗಲಿ ವಿಹಿತವಾದುದು ಯಾವುದು, ಅವಿಹಿತವಾದುದು ಯಾವುದು ಎಂಬುದನ್ನೇ

ಮರೆತು ಸರ್ವ ಪ್ರಾಣಿಗಳು ಬೇಕಾದ ಆಹಾರಗಳನ್ನು ತಿಂದು ಸ್ತ್ರೀಯಾದಿ ಭೋಗಗಳನ್ನನುಭವಿಸಿ ಸುಖನಿದ್ರೆಯಲ್ಲಾಸಕ್ತರಾಗಿರುವರು. ಇವು ಲೋಕದಲ್ಲಿ ಎಲ್ಲರಿಗೂ ಸಾಮಾನ್ಯ. ಆದರೆ ಹೃತ್ಕಮಲನಿವಾಸಿಯಾದ ಬಿಂಬರೂಪಿ ಪರಮಾತ್ಮನ ಕ್ರಿಯಾವಿಶೇಷವನ್ನರಿತು ಸರ್ವತ್ರ ಗತ ಬಿಂಬರೂಪವನ್ನು ಏಕೀಭಾವದಿಂದ ಉಪಾಸನೆ ಮಾಡುವವರು ಮಾತ್ರ ವಿರಳ. ಆದ್ದರಿಂದಲೇ ಜನರು ಸಂಸಾರದಲ್ಲಿ ನಾನಾಪ್ರಕಾರವಾಗಿ ಕಷ್ಟಗಳನ್ನು ಅನುಭವಿಸುತ್ತಿರುವರು. ||೨೪||

ಅವತಾರಿಕೆ : —ಪರಮಾತ್ಮನು ಗೋಜಾದಿ ರೂಪಗಳಿಂದ ಅಡವಿಯಲ್ಲಿಯೂ, ಬೆಟ್ಟಗಳಲ್ಲಿಯೂ ಹುಟ್ಟಿದ ಮೃಗಗಳನ್ನು ರಕ್ಷಿಸುವನೆಂದು ಹೇಳುತ್ತಾರೆ —

**ಜಡಜಸಂಭವ ಖಗ ಫಣಿಪ ಕೆಂ**
**ಜಡೆಯರಿಂದೊಡಗೂಡಿ ರಾಜಿಸು**
**ತಡವಿಯೊಳಗಿಪ್ಪನು ಸದಾ ಗೋಜಾದ್ರಿಜನು ಎನಿಸಿ ||**
**ಉಡುಪನಿಂದಭಿವೃದ್ಧಿಗಳ ತಾ**
**ಕೊಡುತ ಪಕ್ಷಿ ಮೃಗಾಹಿಗಳ ಕಾ**
**ರೊಡಲ ಕಾವನು ತತ್ತದಾಹ್ವಯನಾಗಿ ಜೀವರನ ||**

ಪದ್ಯಾರ್ಥ :—ಜಡಜಸಂಭವ= ಬ್ರಹ್ಮದೇವರು, ಖಗ= ಗರುಡದೇವರು, ಫಣಿಪ= ಶೇಷದೇವರು ಕೆಂಜಡೆಯರಿಂದ= ಕೆಂಜಡೆಯ=ರುದ್ರದೇವರು ಇವರಿಂದೊಡಗೂಡಿ, ರಾಜಿಸುತ = ಶೋಭಿಸುತ, ಸದಾ, ಗೋಜನು, ಅದ್ರಿಜನು, ಎನಿಸಿ, ಅಡವಿಯೊಳಗೆ, ಇಪ್ಪನು, ತಾ= ತಾನು, ಉಡುಪನಿಂದ= ಚಂದ್ರನಿಂದ, ಅಭಿವೃದ್ಧಿಗಳ ಕೊಡುತ, ಪಕ್ಷಿ, ಮೃಗ, ಅಹಿಗಳ= ಸರ್ಪಗಳ, ಜೀವರನ, ತತ್ತದಾಹ್ವಯನಾಗಿ= ಆಯಾ ಹೆಸರುಗಳಿಂದ, ಕಾರೊಡಲ= ಕೃಷ್ಣವರ್ಣನಾದ ಶ್ರೀ ಪರಮಾತ್ಮನು,ಕಾವನು= ಸಂರಕ್ಷಿಸುವನು.

ತಾತ್ಪರ್ಯ :—ಅಡವಿಯಲ್ಲಿಯೂ, ಪರ್ವತಗಳಲ್ಲಿಯೂ ಸನ್ನಿಹಿತನಾದ ಪರಮಾತ್ಮನನ್ನು ವೇದೋಕ್ತ ಗೋಜಅದ್ರಿಜಾ ಎಂಬ ನಾಮಗಳಿಂದ ಧ್ಯಾನಿಸುವುದು ವಿಶೇಷ. ||೨೫||

ಆರು ವಿಧಗಳುಂಟು. ಇದರಂತೆ ರಸಗಳಲ್ಲಿಯೂ ಸಾರರಸ, ಶುಭರಸ, ಪ್ರವಿವಿಕ್ತರಸ, ಆನಂದರಸ, ಸ್ಥೂಲರಸ, ನಿಸ್ಸಾರಗಳೆಂದು ಆರು ವಿಧಗೆಳುಂಟು. ಕಾರಣ ರೂಪವೆಂದರೆ ಕಾರ್ಯವಾದ ಒಂದೊಂದು ಪದಾರ್ಥಕ್ಕೂ ಕರ್ತಾಕಾರಣ ಇವೆರಡೂ ಇರುವವು. ಘಟವೆಂಬುವದು ಕಾರ್ಯ. ಇದಕ್ಕೆ ಕಾರಣವು ಮೃತ್ತಿಕೆ; (ಮಣ್ಣು) ಕುಂಬಾರನು ಕರ್ತ. ಮಕ್ಕಳು ಕಾರ್ಯಭೂತರು; ತಂದೆಯು ಕರ್ತಾ; ರೇತಸ್ಸು ಕಾರಣ. ಇದರಂತೆ ಜಗತ್ತು ಕಾರ್ಯ; ತ್ರಿಗುಣಾತ್ಮಕಳಾದ ಪ್ರಕೃತಿಯು ಕಾರಣ; ಕರ್ತಾ ಪರಮಾತ್ಮನು. ಹೀಗೆ ಆದಿಸೃಷ್ಟಿ ಮೊದಲು, ಸ್ಥಿತಿ, ಸಂಹಾರ ಮೊದಲಾದ ಎಲಾ ವಿಷಯಗಳಲ್ಲೂ ಕಾರ್ಯ, ಕಾರಣ, ಕರ್ತಾ, ಎಂಬ ಮೂರು ಉಂಟು. ಇವುಗಳಲ್ಲಿ ಸೃಷ್ಟಿಗೆ ಕಾರಣಳು ಪ್ರಕೃತಿ. ಹೀಗೆ ಒಂದೊಂದು ಕಾರಣ ವಸ್ತುವಿನಲ್ಲಿಯೂ ಇರುವ ಭಗವದ್ರೂಪಗಳಿಗೆ ಕಾರಣ ರೂಪವೆಂದು ಹೆಸರು. ಎಲ್ಲಾ ಕಾರಣ ರೂಪಗಳನ್ನು ತೆಗೆದುಕೊಂಡು ಒಂದೊಂದಕ್ಕೂ ರಸಗಳನ್ನು ಭಾಗಿಸುವದೆಂದರೆ ಗ್ರಂಥ ವಿಸ್ತಾರವಾಗುವುದು. ಆದ್ದರಿಂದ ಮುಖ್ಯ ಜಗತ್ಸೃಷ್ಟಿಗೂ, ಸ್ಥಿತಿಗೂ, ಸಂಹಾರಕ್ಕೂ ಸಹ ಕಾರಣ ರೂಪವನ್ನು ಮಾತ್ರ ತೆಗೆದುಕೊಳ್ಳೋಣ. ಜಗತ್ತಿಗೆ ಕಾರಣಳು ತ್ರಿಗುಣ ಸ್ವರೂಪಳಾದ ಪ್ರಕೃತಿ, ಪರಮಾತ್ಮನೇ ಪ್ರಕೃತಿಯಲ್ಲಿದ್ದು ಪ್ರಾಕೃತ ಗುಣಗಳನ್ನು ಉಪಾದಾನವಾಗಿ ಸ್ವೀಕರಿಸಿ, ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುವನು. ಆದ್ದರಿಂದ ಪ್ರಕೃತ್ಯಾದಿಗಳಲ್ಲಿ ಇರುವ ಭಗವದ್ರೂಪಗಳಿಗೆ ಕಾರಣ ರೂಪಗಳೆಂದು ಹೆಸರು. ಇವುಗಳಿಗೆ ಸಾರರಸವನ್ನರ್ಪಿಸಬೇಕು. ಸಾರ ರಸವೆಂದರೆ ಪರಮಾತ್ಮನು ಸಾತ್ವಿಕ, ರಾಜಸ, ತಾಮಸರೆಂಬ ತ್ರಿವಿಧ ಜೀವರನ್ನು ಸೃಷ್ಟಿಸಿ, ಅವರುಗಳು ಭೋಗಿಸುವುದಕ್ಕಾಗಿ ಸಾತ್ವಿಕ, ರಾಜಸ, ತಾಮಸ ಪದಾರ್ಥಗಳನ್ನು ಸೃಷ್ಟಿಸಿರುವನು ಅಂದರೆ ಮಧುರವಾದ ಪದಾರ್ಥಗಳು ತುಪ್ಪ, ಹಾಲು, ಮೊದಲಾದ ಗವ್ಯಗಳು ಸಾತ್ವಿಕಗಳು. ರಾಜಸವೆಂದರೆ ತೊಗರಿ, ಕಡ್ಲೆ, ಮೆಣಸಿನಕಾಯಿ ಮೊದಲಾದವು. ಒಳ್ಳೆ ಗೆಡ್ಡೆ, ಬದನೇಕಾಯಿ ಮೊದಲಾದವು ತಾಮಸ ಪದಾರ್ಥಗಳು. ಹೀಗೆ ವಿಭಾಗಮಾಡಿ ಸೃಷ್ಟಿಸಿರುವನು ಇವುಗಳಲ್ಲಿ ಸಾರವೆಂದರೆ ಸಾತ್ವಿಕ ಪದಾರ್ಥಗಳ ರಸವನ್ನೇ ತ್ರಿಗುಣರೂಪಕಾರಣನಾಗಿರುವ ಭಗವದ್ರೂಪಕ್ಕೆ ಸಮರ್ಪಿಸಬೇಕೆಂದರ್ಥ. ಅಂತರ್ಯಾಮಿ ಅಂದರೆ ಬ್ರಹ್ಮಾದಿ ಸಕಲ

ಪ್ರಾಣಿಗಳ ಅಂತರ್ಯಾಮಿ ರೂಪ. ಈ ರೂಪಕ್ಕೆ ಶುಭ ರಸವನ್ನರ್ಪಿಸ ಬೇಕು ಶುಭವೆಂದರೆ ಮಂಗಳಕರವಾದ ಪದಾರ್ಥವೆಂದರ್ಥ. ಅಂತ ರ್ಯಾಮಿಯಾದ ಭಗವಂತನಿಗೆ ನಾವು ನೋಡುವುದು, ಕೇಳುವುದು,ಭುಂಜಿ ಸುವುದು, ಭೋಗಿಸುವುದು ಮೊದಲಾದವುಗಳಲ್ಲಿ ಇದು ಒಳ್ಳೆಯದು, ಇದು ಮಂಗಳವಸ್ತು ಎಂದು ನಮಗೆ ಯಾವುದು ತೋರುವುದೊ ತಕ್ಷಣ ಅವುಗ ಳನ್ನು ಸಮರ್ಪಿಸಬೇಕು. ಸ್ಥೂಲ ರೂಪ ಬ್ರಹ್ಮಾಂಡವೇ ಶರೀರವಾಗುಳ್ಳ ವಿರಾಟ್‌ರೂಪ ಈ ರೂಪಕ್ಕೆ ಪ್ರವಿವಿಕ್ತ ರಸವನ್ನು ಸಮರ್ಪಿಸಬೇಕು. ಪ್ರವಿವಿಕ್ತವೆಂದರೆ ಬಹಳ ಏಕಾಂತವೆಂದರ್ಥ. ಮುಖ್ಯ ಜನಸಂಚಾರ ವಿಲ್ಲದ ಪ್ರದೇಶವೆಂಬ ತಾತ್ಪರ್ಯ. ಪ್ರಪಂಚದಲ್ಲಿ ಇಂತಹ ಏಕಾಂತ ವಾದ ಸ್ಥಳಗಳಲ್ಲಿ ಅನೇಕ ಪುಣ್ಯಕರವಾದ ತೀರ್ಥಗಳು, ಕ್ಷೇತ್ರಗಳು ಇರುವವು. ಯಾತ್ರಾದಿಗಳನ್ನು ಮಾಡುತ್ತಿರುವಾಗ ನದೀ ಕ್ಷೇತ್ರಗಳಲ್ಲಿ ನಾವು ಮಾಡುವ ಪುಣ್ಯಕರ್ಮಗಳು, ನಮಗಾಗುವ ಆನಂದಗಳು ಇವುಗ ಳನ್ನು ವಿರಾಟ್‌ರೂಪಿಯಾದ ಪರಮಾತ್ಮನಿಗರ್ಪಿಸಬೇಕೆಂಬ ತಾತ್ಪರ್ಯ. ಅವತಾರ ರೂಪಗಳು ರಾಮಕೃಷ್ಣಾದಿಗಳು ಈ ರೂಪಗಳಿಗೆ ನಾವು ಭೋಜನ, ಪಾನ, ನಿದ್ರೆ, ಭೋಗಗಳಿಂದ ಅನುಭವಿಸುವ ಆನಂದವನ್ನು ಅರ್ಪಿಸಬೇಕೆಂಬ ಭಾವ. ವ್ಯಾಪ್ತ ರೂಪವೆಂದರೆ ಬ್ರಹ್ಮಾಂಡದೊಳಗೂ ಹೊರಗೂ ಚೇತನಾ ಚೇತನಾತ್ಮಕವಾದ ಸಕಲ ಪ್ರಪಂಚದೊಳಗೂ ವ್ಯಾಪಿಸಿಕ್ಕೊಂಡಿರುವ ರೂಪ. ಈ ರೂಪಕ್ಕೆ ಸ್ಥೂಲ ರಸವೆಂದರೆ, ನಮ್ಮ ಸ್ಥೂಲದೃಷ್ಟಿಗೆ ಯಾವುದು ಸಾರವೆಂದು ಕಾಣುವುದೊ ಅಂದರೆ, (ವೃಕ್ಷಗ ಳಿಗೆ=ಸಸ್ಯಗಳಿಗೆ)ಉದಕವೇ ಸಾರಭೂತವು; ಈಉದಕವನ್ನು ಹಾಕುವಾಗ ವೃಕ್ಷಾದಿಗಳಲ್ಲಿ ವ್ಯಾಪಿಸಿಕೊಂಡಿರುವ ಪರಮಾತ್ಮನಿಗೆ ಇದು ಪ್ರೀತಿಯಾಗಲಿ ಎಂದು ಒಪ್ಪಿಸಬೇಕು. ಹೀಗೆ ಒಂದೊಂದು ವಸ್ತುಗತ ಭಗವದ್ರೂಪಕ್ಕೂ ಅದಕ್ಕೆ ಸಾರವೆಂದು ತೋರುವ ರಸವನ್ನು ಸಮರ್ಪಿಸಬೇಕೆಂದು ಅರ್ಥ. ಅಂಶರೂಪವೆಂದರೆ "ಮಮೈವಾಂಶೋಜೀವಲೋಕೆ ಜೀವಭೂತಃ ಸನಾ ತನಃ" ಎಂಬ ಗೀತಾವಾಕ್ಯದಿಂದ ಸಕಲ ಜೀವರಾಶಿಗಳೂ ಭಗವಂತನ ಅಂಶರೂಪವೆಂದು ತಿಳಿಯಬೇಕು. ಈ ಸ್ಥಳದಲ್ಲಿ ಅಂಶವೆಂದರೆ ಪ್ರತಿ ಬಿಂಬನೆಂದರ್ಥ. ಇಂತಹ ಪ್ರತಿಬಿಂಬರಾದ ಜೀವರಲ್ಲೂ ತದಾಕಾರ ತದ್ರೂಪನಾಗಿ ಪರಮಾತ್ಮನು ಇರುವನು. ಅಂತರ್ಯಾಮಿ ರೂಪ

ವನ್ನು ಹೇಳುವಾಗ ದೇವ ಮನುಷ್ಯಾದಿಗಳನ್ನು ಹೇಳಿದಂತಾಯಿತು. ಇಲ್ಲಿ ಪಶು ಮೊದಲಾದ ಜೀವರನ್ನು ತೆಗೆದುಕೊಳ್ಳಬೇಕು. ಈ ರೂಪಗಳಿಗೆ ನಮಗೆ ಯಾವದು ನಿಸ್ಸಾರವೆಂದು ತೋರುವುದೋ ಅಂತಹ ಹುಲ್ಲು ಮೊದಲಾದವುಗಳು ಆಹಾರವಾಗಿರುವುವು ಪಶ್ವಾದಿ ರೂಪಿಯಾದ ಪರಮಾತ್ಮನಿಗೆ ಇಂತಹ ನಿಸ್ಸಾರವನ್ನು ಅರ್ಪಿಸಬೇಕು. "ಶುಭಂ ಪಿಬತ್ಯಸೋನಿತ್ಯಂ ನಾಶುಭಂಪಿಬತೇ ಹರಿಃ" ಎಂಬ ಪ್ರಮಾಣದಿಂದ ಪರಮಾತ್ಮನು ಯಾವಾಗಲೂ ಸಾರವನ್ನೇ ಸ್ವೀಕರಿಸುವನೆಂದಿರುವುದು. ಹೀಗಿರಲು ನಿಸ್ಸಾರವನ್ನು ಏನೆಂದರ್ಪಿಸಬೇಕೆಂದರೆ, ಪಶು ಮೊದಲಾದವುಗಳಿಗೆ ಅವು ನಿಸ್ಸಾರವಾಗಿ ಕಾಣವು. ಸಾರವತ್ತಾಗಿ ಇರುವವು ಆ ಪದಾರ್ಥಗಳು ನಮಗೆ ನಿಸ್ಸಾರ. ಅವುಗಳಲ್ಲೂ ನಿಸ್ಸಾರವೆಂದರೆ ನಿತರಾಂ ಸಾರವಾದುದು ಯಾವುದೋ ಅದನ್ನು ಸಮರ್ಪಿಸಬೇಕೆಂದರ್ಥ. ಇದು ಪರಮರಹಸ್ಯವಾದ ವಿಷಯು; ಇದನ್ನು ಅಯೋಗ್ಯರಿಗೆ ಹೇಳಬಾರದು, ನೀನು ಮಾತ್ರ ತಿಳಿದು ಮೇಲೆ ಹೇಳಿದ ಷಡ್ರೂಪಿಯಾದ ಪರಮಾತ್ಮನಿಗೆ ಷಡ್ರಸಗಳನ್ನರ್ಪಿಸುತ್ತಾ ಅಪಾರ ಮಹಿಮನಾದ ಪರಮಾತ್ಮನನ್ನು ಕೊಂಡಾಡುತ್ತಾ ಸುಖವಾಗಿರು ಎಂದು ದಾಸಾರ್ಯರು ಆಪ್ತ ಶಿಷ್ಯರನ್ನುದ್ದೇಶಿಸಿ ಹೇಳಿದರೆಂದು ಭಾವಿಸಬೇಕು ||೨೭||

ಅವತಾರಿಕೆ :—ಹೀಗೆ ಮೇಲೆ ಹೇಳಿದಂತೆ ಯಾವ ರೂಪಗಳಿಗೆ ಯಾವ ರಸವನ್ನು ಅರ್ಪಿಸಬೇಕೆಂಬ ವಿಷಯವನ್ನು ತಿಳಿಯದೆ ನಾವು ಸದಾಚಾರಸಂಪನ್ನರೆಂತಲೂ, ದೊಡ್ಡ ವಂಶದವರೆಂತಲೂ ಭಾವಿಸಿ ಪೂಜಿಸಲು ನಿಷ್ಫಲವೆಂದು ಹೇಳುತ್ತಾರೆ—

> ಜಲಗತುಡುಪನ ವಿಮಲ ಬಿಂಬವ
> ಮೆಲುವೆನೆಂದತಿಹರುಷದಿಂದಲಿ
> ಜಲಚರಪ್ರಾಣಿಗಳು ನಿತ್ಯದಿ ಎತ್ನಗೈವಂತೆ ||
> ಹಲಧರಾನುಜ ಭೋಗ್ಯ ರಸಗಳ
> ನೆಲೆಯನರಿಯದೆ ಪೂಜಿಸುತ ಹಂ
> ಬಲಿಸುವರು ಪುರುಷಾರ್ಥಗಳ ಸತ್ಕುಲಜರಾವೆಂದು ||

ಪದ್ಯಾರ್ಥ :—ಜಲಗತ= ನೀರೊಳಗೆ ಕಾಣುವ, ಉಡುಪನ= ಚಂದ್ರನ, ವಿಮಲಬಿಂಬವ= ನಿಷ್ಕಳಂಕವಾದ ಬಿಂಬವನ್ನು, ಮೆಲುವೆನೆಂ

ದತಿಹರುಷದಿಂದಲಿ=ತಿನ್ನಬೇಕೆಂಬ ಸಂತೋಷದಿಂದ, ಜಲಚರಪ್ರಾಣಿಗಳು=ಮೀನು ಮೊದಲಾದವು, ನಿತ್ಯದಿ, ಎತ್ನಗೈವಂತೆ=ಯತ್ನಮಾಡುವಂತೆ, ಹಲಧರಾನುಜ=ಬಲರಾಮನ ತಮ್ಮನಾದ ಶ್ರೀಕೃಷ್ಣನಿಗೆ, ಭೋಗ್ಯರಸಗೆಳ=ಸಮ್ಮತವಾದ ರಸಗೆಳ, ನೆಲೆಯನು=ಸ್ವರೂಪವನ್ನು,ಅರಿಯದೆ=ತಿಳಿಯದೆ, ಆವು=ನಾವು, ಸತ್ಕುಲಜರೆಂದು=ದೊಡ್ಡ ವಂಶೀಕರು ಎಂದು ಭಾವಿಸಿ, ಪೂಜಿಸುತ=ಪರಮಾತ್ಮನ ಪ್ರತಿಮಾದಿಗಳನ್ನು ಪೂಜಿಸುತ್ತ, ಪುರುಷಾರ್ಥಗಳ=ಧರ್ಮಾರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥಗಳನ್ನು, ಹಂಬಲಿಸುವರು=ಬಹುವಿಧವಾಗಿ ಬೇಡುವರು.

ತಾತ್ಪರ್ಯ :- ಚಂದ್ರನ ಪ್ರತಿಬಿಂಬವು ಕೆರೆ ಮೊದಲಾದವುಗಳಲ್ಲಿ ಕಾಣುತ್ತಿರಲು, ಅಲ್ಲಿರುವ ಜಲಚರ ಪ್ರಾಣಿಗಳು ಆ ಚಂದ್ರನ ಪ್ರತಿಬಿಂಬವನ್ನು ತಮಗೆ ಉತ್ತಮಾಹಾರವೆಂದು ಭಾವಿಸಿ ಅದನ್ನು ತಿನ್ನಬೇಕೆಂದು ಬಹಳ ಸಂತೋಷದಿಂದ ಪ್ರಯತ್ನ ಮಾಡುತ್ತವೆ. ಇದು ಎಂದಿಗೂ ಸಾಧ್ಯವಾಗತಕ್ಕದ್ದಲ್ಲ. ಹಾಗೆಯೇ ಎಲ್ಲೆಲ್ಲಿರುವ ಭಗವದ್ರೂಪಗಳಿಗೆ ಯಾವಯಾವ ರಸಗಳನ್ನು ಯಾವಯಾವ ರೀತಿಯಿಂದ ಅರ್ಪಿಸಬೇಕೆಂಬ ವಿಷಯವನ್ನರಿಯದೆ ತಾವು ಸತ್ಕುಲಪ್ರಸೂತರೆಂದು ತಿಳಿದು ಪ್ರತಿಮಾದಿಗಳನ್ನು ಆಡಂಬರದಿಂದ ಪೂಜಿಸಿ ಪುರುಷಾರ್ಥಗಳನ್ನುಬೇಡುವವರ ಪಾಡು. ಜಲಚರಪ್ರಾಣಿಗಳು ನೀರೊಳಗಿರುವ ಚಂದ್ರನ ಪ್ರತಿಬಿಂಬವನ್ನುಂಡು ಹೊಟ್ಟೆ ತುಂಬಿಸಿಕೊಳ್ಳುವ ಯೋಚನೆಯಿಂದ ಎಷ್ಟು ಫಲವನ್ನು ಕಾಣುವವೋ ಅಷ್ಟೇ ಫಲವು ಇದರಿಂದಲೂ ಆಗುವದೆಂಬ ಭಾವ ||೨೮||

ಅವತಾರಿಕೆ :—ಪರಮಾತ್ಮನು ಸಮಸ್ತ ಪ್ರಾಣಿಗಳಲ್ಲಿಯೂ ಇದ್ದು ಅವರವರ ಭೋಗ್ಯರಸಗಳ ಸಾರವನ್ನು ತಾನು ಗ್ರಹಿಸಿ, ಜೀವರ ಯೋಗ್ಯತಾನುಸಾರ ಅವರವರಿಗೆ ರಸಗಳನ್ನು ಕೊಡುವನೆಂದು ಹೇಳುತ್ತಾರೆ—

**ದೇವ ಋಷಿ ಗಂಧರ್ವ ಪಿತೃ ನರ**
**ದೇವ ಮಾನವ ದನುಜ ಗೋ ಖ**
**ಗಾದಿ ಮೊದಲಾದಖಿಲ ಚೇತನ ಭೋಗ್ಯ ರಸಗಳನು ||**
**ಯಾವದವಯವಗಳೊಳಗಿದ್ದು ರ**
**ಮಾವರನು ಸ್ವೀಕರಿಪ ಯಾವ**
**ಜೀವಗಣಕೆ ಸ್ವಯೋಗ್ಯ ರಸಗಳ ನೀವನೆಂದೆಂದು**

ಪದ್ಯಾರ್ಥ :—ದೇವ=ದೇವತೆಗಳು, ಋಷಿ, ಗಂಧರ್ವ, ಪಿತೃ, ನರದೇವ=ಪ್ರಿಯವ್ರತ ಮೊದಲಾದ ಚಕ್ರವರ್ತಿಗಳು, ಮಾನವ=ಮನುಷ್ಯರು, ದನುಜರು=ದೈತ್ಯರು, ಗೋ=ಗೋವುಗಳು, ಅಜ=ಮೇಕೆಗಳು, ಖರ=ಕತ್ತೆಗಳು, ಅವಿ=ಕುರಿಗಳು, ಮೊದಲಾದ, ಅಖಿಳ ಚೇತನ ಭೋಗ್ಯ ರಸಗಳನು=ಸಮಸ್ತ ಪ್ರಾಣಿಗಳು ಭೋಗಿಸುವ ಎಲ್ಲಾ ಪದಾರ್ಥಗಳ ಸಾರಗಳನ್ನು, ಯಾವದವಯವಗಳೊಳಗೆ=ಕಣ್ಣು ಕಿವಿ ಮೊದಲಾದ ಎಲ್ಲಾ ಅಂಗಗಳಲ್ಲೂ, ಇದ್ದು, ರಮಾವರನು=ಲಕ್ಷ್ಮೀಪತಿಯು, ಸ್ವೀಕರಿಪ=ಸ್ವೀಕರಿಸುವನು, ಯಾವಜ್ಜೀವಗಣಕೆ=ಎಲ್ಲಾ ಜೀವಗಣಗಳಿಗೂ, ಸ್ವಯೋಗ್ಯ ರಸಗಳ=ಅವರವರ ಯೋಗ್ಯತಾನುಸಾರವಾದ ರಸಗಳನ್ನು, ಎಂದೆಂದೂ=ಯಾವಾಗಲೂ, ಈವನು=ಕೊಡುವನು.

ತಾತ್ಪರ್ಯ :—ದೇವತೆಗಳು, ಋಷಿಗಳು, ಪಿತೃಗಳು, ಚಕ್ರವರ್ತಿಗಳು, ಮನುಷ್ಯರು, ದೈತ್ಯರು ಗೋವುಗಳು, ಮೇಕೆಗಳು, ಕತ್ತೆಗಳು, ಕುರಿ ಮೊದಲಾದ ಸಕಲ ಪ್ರಾಣಿಗಳ ಭೋಗ್ಯ ವಸ್ತುಗಳೆಂದರೆ, ಜ್ಞಾನೇಂದ್ರಿಯ, ಕರ್ಮೇಂದ್ರಿಯ, ಮನಸ್ಸು ಮೊದಲಾದ ಅವಯವಗಳಿಂದ ಅನುಭವಿಸುವ ಎಲ್ಲ ವಸ್ತುಗಳೆಂದರ್ಥ. ಕಣ್ಣಿನಿಂದ ನೋಡಿ ಆನಂದಪಡುವುದು ಕೆಲವು; ಕಿವಿಯಿಂದ ಕೇಳಿ ಸುಖಪಡುವುದು; ಭುಂಜಿಸುವುದು ಮೊದಲಾದ ಎಲ್ಲ ಭೋಗ್ಯವಸ್ತುಗಳ ಸಾರವನ್ನೂ ಶ್ರೀ ಪರಮಾತ್ಮನು ತತ್ತ ಪ್ರಾಣಿಗಳ ತತ್ತದ್ದಂಗಗಳಲ್ಲಿದ್ದು ಆಯಾ ವಸ್ತುಗಳ ಸಾರವನ್ನು ಸ್ವೀಕರಿಸಿ, ಎಲ್ಲಾ ಜೀವಗಣಗಳಿಗೂ ಅವರವರ ಯೋಗ್ಯತಾನುಸಾರವಾಗಿ ಅವರವರಿಗೆ ರಸಗಳನ್ನು ಉಣಿಸುವನೆಂಬ ಭಾವ. ||೨೯||

ಸರ್ವತ್ರ ಇರುವ ಭಗವದ್ರೂಪಗಳಲ್ಲಿ ಆಶಾದಿಗಳನ್ನು ಬಿಟ್ಟು ಪರಮಾತ್ಮನನ್ನು ಭಜಿಸಬೇಕೆಂದು ಹೇಳುತ್ತಾರೆ—

ಒರಟುಬುದ್ಧಿಯಬಿಟ್ಟು ಲೌಕಿಕ
ಹರಟೆಗಳನೀಡಾಡಿ ಕಾಂಚನ
ಪರಟಿ ಲೋಷ್ಠಾದಿಗಳು ಸಮವೆಂದರಿದು ನಿತ್ಯದಲಿ ||
ಪುರುಟಗರ್ಭಾಂಡೋದರನು ಸ
ತ್ಪುರುಟನೆಂದೆನಿಸೆಲ್ಲರೊಳಗಿ
ದ್ದುರುಟು ಕರ್ಮವ ಮಾಳ್ಪನೆಂದಡಿಗಡಿಗೆ ನೆನವುತಿರು ||

ಪದ್ಯಾರ್ಥ :—ಒರಟುಬುದ್ಧಿಯು ಬಿಟ್ಟು=ಪ್ರತಿಮೆಗಳೇ ದೇವರು, ತಿರುಪತಿಯಲ್ಲೇ ಶ್ರೀನಿವಾಸನಿರುವನು,ಗಂಗಾದಿಗಳೇ,ತೀರ್ಥಗಳುಎಂಬಿವೇ ಮೊದಲಾದ ಒರಟು ಬುದ್ಧಿಯನ್ನು ಬಿಟ್ಟು, ಲೌಕಿಕ ಹರಟೆಗಳನು= ಬರೇ ಪ್ರಪಂಚಸಂಬಂಧವಾದ ಮಾತುಗಳನ್ನು, ಈಡಾಡಿ=ತ್ಯಜಿಸಿ,ಲೋಕ ಸಂಬಂಧವಾದ ಹರಟೆಯಲ್ಲೇ ಕಾಲವನ್ನು ಕಳೆವುದನ್ನು ಬಿಟ್ಟು, ಕಾಂಚನ= ಬಂಗಾರ, ಪರಟಿ=ಚಿಪ್ಪು, ಲೋಷ್ಟಾದಿಗಳು=ಹೆಂಚು ಮೊದಲಾದವು ಗಳು, ಸಮವೆಂದರಿದು=ಸಮವೆಂದು ತಿಳಿದು, ನಿತ್ಯದಲಿ, ಪುರುಟ ಗರ್ಭಾಂಡೋದರನು=ಪುರುಟಗರ್ಭ=ಹಿರಣ್ಯಗರ್ಭ, ಅಂದರೆ ಬ್ರಹ್ಮಾ ಎಂದರ್ಥ. ಅಂಡೋದರನು=ಆ ಹೆಸರಿನ ಅಂಡ ಅಂದರೆ ಬ್ರಹ್ಮಾಂಡ ವೆಂದರ್ಥ. ಬ್ರಹ್ಮಾಂಡವನ್ನು ತನ್ನ ಉದರದಲ್ಲಿಟ್ಟುಕೊಂಡಿರುವ ಶ್ರೀ ಹರಿಯು, ಸತ್ಪುರುಟನೆಂದೆನಿಸಿ=ಪುರುಷೋತ್ತಮನೆಂದೆನಿಸಿ, ಎಲ್ಲರೊಳ ಗಿದ್ದು, ಉರುಟಕರ್ಮವ=ಉರು=ಉತ್ಕೃಷ್ಟವಾದ ಕರ್ಮಗಳು, ಟ=ಟ ಪ್ರತ್ಯಯವು ಕುತ್ಸಿತ ಕರ್ಮಗಳನ್ನು ಸೂಚಿಸುವುದು. ಹೀಗೆ ಉತ್ತಮ ವಾದ ಕರ್ಮಗಳು, ನೀಚವಾದ ಕರ್ಮಗಳು ಇಂತಹ ಎಲ್ಲಾ ಕರ್ಮಗ ಳನ್ನು, ಮಾಳ್ಪನೆಂದು=ಮಾಡುವನೆಂದು, ಅಡಿಗಡಿಗೆ=ಹೆಜ್ಜೆಜ್ಜೆಗೂ (ಪ್ರತಿ ಕ್ಷಣದಲ್ಲೂ) ನೆನವುತಿರು=ಸ್ಮರಿಸುತ್ತಿರು.

ತಾತ್ಪರ್ಯ :—ಇಲ್ಲೇ ದೇವರು ಇದ್ದಾನೆ, ಅಲ್ಲೇನಿದೆ ಪ್ರತಿಮೆಯೇ ದೇವರು. ಈ ದೇವರೇ ದೇವರು ಎಂಬಿವೇ ಮೊದಲಾದ ಒರಟು ಬುದ್ಧಿ ಯನ್ನು ಬಿಟ್ಟು, ಲೌಕಿಕ ಹರಟೆಗಳಲ್ಲೇ ಕಾಲವನ್ನು ಕಳೆಯದೇ ಬಂಗಾರ ಬೇಕು, ಬೆಳ್ಳಿ ಬೇಕು ಎಂಬ ದುರಾಶೆಯನ್ನು ಮಾಡದೇ ಇವೆಲ್ಲವೂ ನಶ್ವರ ವೆಂದು ತಿಳಿದು ಹೆಂಚು, ಕಲ್ಲು, ಚಿಪ್ಪು ಮೊದಲಾದವುಗಳಿಗೆ ಸಮವೆಂದು ಬಂಗಾರ ಮೊದಲಾದವುಗಳನ್ನೂ ಸಹ ತಿಳಿದು ಪರಮಾತ್ಮನನ್ನು ಭಜಿಸು ! ಬ್ರಹ್ಮಾಂಡವನ್ನೇ ಉದರದಲ್ಲಿಟ್ಟುಕೊಂಡಿರುವ ಪರಮಾತ್ಮನು ಸರ್ವೋ ತ್ತಮನು ; ಸರ್ವ ಪ್ರಾಣಿಗಳಲ್ಲೂ ಇದ್ದು ನೀಚೋಚ್ಚಭಾವದಿಂದ ಸಕಲ ಕರ್ಮಗಳನ್ನು ಮಾಡಿಸುವನು ಎಂದು ಭಾವಿಸಿ ಸರ್ವದಾ ಪರಮಾತ್ಮ ನನ್ನು ಸ್ಮರಿಸಬೇಕೆಂಬ ತಾತ್ಪರ್ಯ ||೩೦||

ಅವತಾರಿಕೆ :—ಪರಮಾತ್ಮನನ್ನು ಯಾವ ರೀತಿಯಿಂದ ಸ್ತೋತ್ರ ಮಾಡಿದರೂ ಪ್ರೀತನಾಗುವನೆಂದು ಹೇಳುತ್ತಾರೆ—

ಭೂತಳದಿ ಜನರುಗಳು ಮರ್ಮದ
ಮಾತುಗಳನಾಡಿದರೆ ಸಹಿಸದೆ
ಘಾತಿಸುವರತಿಕೋಪದಿಂದಲಿ ಎಚ್ಚರಿಪತೆರದಿ ||
ಮಾತುಳಾಂತಕ ಜಾರ ಹೇ ನವ
ನೀತಚೋರನೆ ಎನಲು ತನ್ನ ನಿ
ಕೇತನದೊಳಿಟ್ಟವರ ಸಂತೈಸುವನು ಕರುಣಾಳು ||

ಪದ್ಯಾರ್ಥ :—ಭೂತಳದಿ=ಭೂಮಿಯಲ್ಲಿ, ಜನರುಗಳು, ಮರ್ಮದ ಮಾತುಗಳನಾಡಿದರೆ=ಮರ್ಮವನ್ನು ತಿಳಿದು ಮಾತನಾಡಿದರೆ, ಸಹಿಸದೆ, ಅತಿಕೋಪದಿಂದಲಿ, ಘಾತಿಸುವರು=ಶಿಕ್ಷಿಸುವರು, ಎಚ್ಚರಿಪತೆರದಿ=ಭಕ್ತ ಜನರು ಎಚ್ಚರಿಪ ತೆರದಿ=ಜ್ಞಾಪಕ ಕೊಡೋ ರೀತಿಯಾಗಿ, ಮಾತುಳಾಂತಕ=ಎಲೈ ಸೋದರಮಾವನನ್ನು ಕೊಂದವನೆ! ಜಾರ! ಹೇ! ನವನೀತ ಚೋರನೆ=ಬೆಣ್ಣೆಯನ್ನು ಕದ್ದವನೇ! ಎನಲು=ಎಂದು ಭಕ್ತಿಯಿಂದ ಸ್ಮರಿಸಿದರೆ, ಅವರ=ಅವರನ್ನು, ತನ್ನ ನಿಕೇತನದೊಳಿಟ್ಟು=ತನ್ನ ಮನೆಯಲ್ಲಿಟ್ಟು (ಮುಕ್ತಿಯಲ್ಲಿ ತನ್ನ ಲೋಕದಲ್ಲಿಟ್ಟು) ಕರುಣಾಳು=(ಕೃಪೆಯಿಂದ) ದಯಾಸಮುದ್ರನು ಸಂತೈಸುವನು.

ತಾತ್ಪರ್ಯ :—ಲೋಕದಲ್ಲಿ ಸಾಮಾನ್ಯವಾಗಿ ಯಾರಲ್ಲಾದರೂ ಸ್ವಲ್ಪ ಜಾರತ್ವ ಚೋರತ್ವಾದಿ ಅಪವಾದ ಇರುವುದನ್ನು ಎತ್ತಿ ಮರ್ಮೋದ್ಘಾಟನೆಯಾಗಿ ಮಾತನಾಡಿದರೆ ತಕ್ಷಣ ಅವರಿಗೆ ಬಹಳ ಸಿಟ್ಟು ಬಂದು ಮರ್ಮವನ್ನು ಎತ್ತಿ ಮಾತನಾಡಿದವನನ್ನು ಹೊಡೆಯುವರು. ಶ್ರೀ ಪರಮಾತ್ಮನು ಹಾಗಲ್ಲ. ಎಲೈ ಮಾತುಳಾಂತಕ! ಹೇ ಜಾರ! ನವನೀತ ಚೋರ ಎಂದು ಮರ್ಮವನ್ನೆತ್ತಿ ಸ್ಮರಿಸಿದರೆ, ಕೃಪೆಯಿಂದ ದಿವ್ಯವಾದ ಮುಕ್ತಿಯನ್ನು ಕೊಟ್ಟು ಸಂರಕ್ಷಿಸುವನು. ಆದ್ದರಿಂದಲೇ ಕರುಣಾಳು ಅಂದರು ||೩೧||

ಅವತಾರಿಕೆ :—ಇದು ಪರಮ ಗೋಪ್ಯವಾದ ಹರಿಕಥೆ ಎಂಬ ಉತ್ತಮವಾದ ಅಮೃತವು. ಆದ್ದರಿಂದ ಭಕ್ತರಿಗಲ್ಲದೆ ಅಭಕ್ತರಿಗೆ ಹೇಳಬಾರದೆಂದು ಹೇಳುತ್ತಾರೆ —

ಹರಿಕಥಾಮೃತಸಾರವಿದು ಸಂ
ತರು ಸದಾ ಚಿತ್ತೈಸುವುದು ನಿ
ಷ್ಠುರಿಗಳಿಗೆ ಪಿಶುನರಿಗಯೋಗ್ಯರಿಗಿದನು ಪೇಳದಿರಿ ||

**ನಿರುತ ಸದ್ಭಕ್ತಿಯಲಿ ಭಗವ**
**ಚ್ಚರಿತೆಗಳ ಕೊಂಡಾಡಿ ಹಿಗ್ಗುವ**
**ಪರಮ ಭಗವದ್ದಾಸರಿಗೆ ತಿಳಿಸುವುದು ಈ ರಹಸ್ಯ॥**

ಪದ್ಯಾರ್ಥ :—ಇದು ಹರಿಕಥೆ ಎಂಬ ಉತ್ತಮವಾದ ಅಮೃತವು. ಸಂತರು=ಸಜ್ಜನರು, ಸದಾ, ಚಿತ್ತೈಸುವುದು=ಚಿತ್ತದಲ್ಲಿ ಧರಿಸತಕ್ಕದ್ದು, ನಿಷ್ಟುರಿಗೆಳಿಗೆ=ಅಸೂಯಾಪರರಿಗೆ, ಪಿಶುನರಿಗೆ=ಇತರರಿಗೆ ಬೆನ್ನಿನಹಿಂದೆ ಕೆಡುಕನ್ನು ಮಾತನಾಡುವವರಿಗೆ,ಅಯೋಗ್ಯರಿಗೆ=ಹರಿಗುರು ದ್ವೇಷಿಗೆಳಿಗೆ, ಇದನು, ಪೇಳದಲೆ, ನಿರುತ=ಸರ್ವದಾ, ಸದ್ಭಕ್ತಿಯಲಿ, ಭಗವಚ್ಚರಿತೆಗಳ, ಕೊಂಡಾಡಿ, ಹಿಗ್ಗುವ, ಪರಮ ಭಗವದ್ದಾಸರಿಗೆ,ಈ ರಹಸ್ಯ=ಈಗುಟ್ಟಾದ ವಿಷಯಗೆಳನ್ನು, ತಿಳಿಸುವದು.

ತಾತ್ಪರ್ಯ :—ಈಗೆ ನಾವು ಹೇಳಿದುದೆಲ್ಲವು ಕೇವಲ ರಹಸ್ಯವಾದ ಹರಿಕಥೆ ಎಂಬ ಅಮೃತದ ಸಾರವು. ಇದಕ್ಕೆ ಅಧಿಕಾರಿಗಳು ಕೇವಲ ಸಜ್ಜನರೇ ಹೊರತು ಇತರರಲ್ಲ. ಆದುದರಿಂದ ಇದನ್ನು ಭಗವನ್ಮಹಿಮೆ ಕೇಳುವುದರಲ್ಲಿ ವಿಶ್ವಾಸವಿಲ್ಲದೆ ಆಕ್ಷೇಪವಾಗಿ ಮಾತಾಡುವವರಿಗೆ ಹೇಳ ಬಾರದು. ಪರಮಾತ್ಮನಲ್ಲಿ ದ್ವೇಷ ಮಾಡುವವರಿಗೂ,ಅನ್ಯಥೋಪಾನಸನೆ ಯನ್ನು ಮಾಡುವ ತಮೋಯೋಗ್ಯರಿಗೂ ಹೇಳಬಾರದು. ಯಾರು ಕೇವಲ ಭಕ್ತಿಯಿಂದ ಭಗವಚ್ಚರಿತ್ರೆಗಳನ್ನು ಕೇಳಿ ಕೊಂಡಾಡಿ ಹಿಗ್ಗುವರೋ ಅಂತಹ ಭಗವದ್ದಾಸರಿಗೆ ಮಾತ್ರವೇ ಈ ರಹಸ್ಯವನ್ನು ಉಪದೇಶ ಮಾಡ ತಕ್ಕದ್ದು ||೩೨||

ಅವತಾರಿಕೆ:—ಸಂಧಿಯನ್ನು ಮುಗಿಸುತ್ತಾ ಈಶ್ವರ ಸಂಕಲ್ಪದಿಂದ ಏನು ಬಂದರೂ ಅಷ್ಟಕ್ಕೇ ಸಂತೋಷಪಟ್ಟು ಭಗವಂತನನ್ನು ಭಜಿಸಬೇ ಕೆಂಬ ಮುಖ್ಯ ವಿಷಯುವನ್ನು ಹೇಳುತ್ತಾರೆ—

**ಸತ್ಯಸಂಕಲ್ಪನು ಸದಾ ಏ**
**ನಿತ್ತು ದೆಪುರುಷಾರ್ಥವೆಂದರಿ**
**ದತ್ಯಧಿಕ ಸಂತೋಷದಲಿ ನೆನವುತ್ತ ಭುಂಜಿಪದು ॥**
**ನಿತ್ಯಸುಖಸಂಪೂರ್ಣ ಪರಮ ಸು**
**ಹೃತ್ತಮ ಜಗನ್ನಾಥವಿಠ್ಠಲ**
**ಬತ್ತಿಸಿ ಭವಾಂಬುಧಿಯ ಚಿತ್ಸುಖ ವ್ಯಕ್ತಿ ಕೊಡುತಿಪ್ಪ ॥**

ಸತ್ಯಸಂಕಲ್ಪನು=ಶ್ರೀ ಪರಮಾತ್ಮನ ಯಾವ ಸಂಕಲ್ಪವೂ ಸಜೀವರಿಗೆ ಹಿತವಾಗಿಯೇ ತೋರುವುದು. ಅಂತಹ ಸಂಕಲ್ಪಸ್ವರೂಪನಾಗಿರುವ ಪರಮಾತ್ಮನು ಜೀವರಿಗೆ ಯಾವ ದೇಶ-ಕಾಲ-ಅವಸ್ಥೆಗಳನ್ನು ಕೊಡುವನೋ ಅದೇ ಆತನಿತ್ತ ಪರಮ ಪುರುಷಾರ್ಥವೆಂದು ಅರಿತು ಪ್ರತಿಕ್ಷಣ ಅಧಿಕಾರಿ ಸಂತೋಷದಿಂದ ಆತನ ಮಹಿಮೆಯನ್ನು ಸ್ಮರಿಸುತ್ತ ಆ ಅವಸ್ಥಾದಿಗಳನ್ನು ಭೋಗಿಸುವುದು ನಿಜ ಭಕ್ತರ ಧರ್ಮ. ಶ್ರೀಹರಿಯು, ಸದಾ, ಏನಿತ್ತುದೆ= ಯಾವುದು ಕೊಡುವನೋ ಅದೇ, ಪುರುಷಾರ್ಥವೆಂದು, ಅರಿದು= ತಿಳಿದು, ಅತ್ಯಧಿಕ ಸಂತೋಷದಲಿ, ನೆನವುತ್ತ=ಸ್ಮರಿಸುತ್ತ,ಭುಂಜಿಪದು=ಭೋಗಿಸ ತಕ್ಕದ್ದು, ನಿತ್ಯಸುಖಸಂಪೂರ್ಣ=ನಿತ್ಯ ಆನಂದಮಯನಾದ, ಪರಮ, ಸುಹೃತ್ತಮ=ಆಪತ್ತುಗಳನ್ನು ಪರಿಹರಿಸಿ ರಕ್ಷಿಪ ಉತ್ತಮ ಮಿತ್ರರೂಪಿಯಾಗಿ ಸದಾ ಬದಿಯಲ್ಲಿರುವ, ಜಗನ್ನಾಥವಿಠ್ಠಲ= ಜಗನ್ನಾಥ ದಾಸರಿಗೆ ಒಲಿದ ಶ್ರೀ ಪರಮಾತ್ಮನು, ಭವಾಂಬುಧಿಯ ಈ ಸಂಸಾರ ಸಮುದ್ರವನ್ನು,ಬತ್ತಿಸಿ= ಸುಲಭದಿಂದ ದಾಟಿಸಿ ಕ್ರಮೇಣ ಚೇತನರಿಗೆ,ಚಿತ್ಸುಖ= ಸ್ವರೂಪ ಆನಂದ ಆವಿರ್ಭಾವವನ್ನು, ವ್ಯಕ್ತಿ ಕೊಡುತಿಪ್ಪ.

ತಾತ್ಪರ್ಯ :— ಸತ್ಯಸಂಕಲ್ಪನೆಂದರೆ, ತನ್ನ ಮನಸ್ಸಿಗೆ ಮೊದಲು ಯಾವುದು ಬಂದಿರುವುದೋ ಅದನ್ನೇ ಸತ್ಯವಾಗಿ ನಡಿಸುವವನು. ಅದನ್ನು ಅನ್ಯಥಾ ಮಾಡಲು ಬ್ರಹ್ಮಾದಿಗಳಿಂದಲೂ ಆಗುವುದಿಲ್ಲ. ಆದ್ದರಿಂದಲೇ ಸತ್ಯಸಂಕಲ್ಪನೆಂದು ಪರಮಾತ್ಮನಿಗೇ ಹೆಸರು. "ಈಶಾವಾಸ್ಯಮಿದಂ ಸರ್ವಂ ಯಜ್ಜಗೆತ್ಯಾಂ ಜಗೆನ್ಮನಃ|| ತೇನತ್ಯಕ್ತೇನ ಭುಂಜೀಥಾಃ" ಎಂಬ ಈಶಾವಾಸ್ಯೋಪನಿಷತ್ತಿನ ವಾಕ್ಯದಂತೆ, ಇಂತಹ ಸ್ವಾಮಿಯು ತನ್ನ ಸಂಕಲ್ಪಕ್ಕೆ ಬಂದುದನ್ನು ಸದಾ ನಮಗೆ ಕೊಡುವನು. ಆದ್ದರಿಂದ ನಮ್ಮ ಯೋಗ್ಯತಾನುಸಾರವಾಗಿ ಅವನು ಕೊಟ್ಟುದುದೇ ಪುರುಷಾರ್ಥ. ಅಂದರೆ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳು ೪ ಪ್ರಕಾರಗಳುಂಟು ದೇವರು ಕೊಟ್ಟುದೇ ನಮಗೆ ಪುರುಷಾರ್ಥವೆಂದು ಭಾವಿಸಿ ಇಲ್ಲದ ಪದಾರ್ಥಗಳಲ್ಲಿ ದುರಾಶೆಯನ್ನು ಬಿಡಬೇಕೆಂಬ ಭಾವ. "ಯದೃಚ್ಛಾಲಾಭತುಷ್ಟಸ್ಯ ತೇಜೋವಿಪ್ರಸ್ಯ ವರ್ಧತೆ" ಈಶ್ವರ ಪ್ರೇರಣೆಯಿಂದ ಲಬ್ಧವಾದುದರಲ್ಲಿ ಯಾವನು ಸಂತೋಷಪಡುತ್ತಿರುವನೋ ಅವನಿಗೆ ತೇಜಸ್ಸು ವೃದ್ಧಿಯಾಗುವುದು. "ಅಸಂತುಷ್ಟಃ ಸುಖಂವಿಪ್ರನಾಪ್ನೋತ್ಯಪಿ

ಸುರೇಶ್ವರಃ ” ಎಲೈ ಬ್ರಾಹ್ಮಣನೇ! ಅಸಂತುಷ್ಟನಾಗಿದ್ದರೆ ಅವನು ದೇವೇಂದ್ರನಾದರೂ ಸುಖವಿಲ್ಲ ಎಂದು ಭಾಗವತ ದಶಮ ಸ್ಕಂಧದಲ್ಲಿ ರುಕ್ಮಿಣಿದೇವಿಯು ಕಳುಹಿಸಿದ ಪತ್ರವನ್ನು ತೆಗೆದುಕೊಂಡು ಕೃಷ್ಣನಲ್ಲಿ ಬಂದಿದ್ದ ಬ್ರಾಹ್ಮಣನನ್ನು ನೋಡಿ ಶ್ರೀಕೃಷ್ಣನು ಹೇಳಿದ ಶ್ಲೋಕ. ಈ ರೀತಿಯಾಗಿ ಕೊಟ್ಟುದುದನ್ನು ಸಂತೋಷದಿಂದ ಭೋಗಿಸುತ್ತ, ಪರಮಾತ ನನ್ನು ಭಜಿಸುತ್ತಿದ್ದರೆ ಪರಮ ಸಖನಾದ ಶ್ರೀ ಹರಿಯು ಸಂಸಾರವೆಂಬ ಸಮುದ್ರವನ್ನು ಒಣಗಿಸಿ (ಸಂಸಾರದಿಂದ ಮುಕ್ತನನ್ನಾಗಿ ಮಾಡಿ) ಮುಕ್ತಿ ಯಲ್ಲಿ ಸ್ವರೂಪಾನಂದವನ್ನು ವ್ಯಕಿ ಮಾಡಿ ಸಂರಕ್ಷಿಸುವನು.

ಎಂಬಲ್ಲಿಗೆ ಹರಿಕಥಾಮೃತಸಾರದ ಭಾವಪ್ರಕಾಶಿಕೆಯಲ್ಲಿ ೧೩ನೆಯ ನಾಮಸ್ಮರಣೆ ಸಂಧಿಯು ಸಮಾಪ್ತವಾದುದು.



## ಹರಿಕಥಾಮೃತಸಾರ



### ೧೪ನೆಯ ಪಿತೃಗಣ ವಿಚಾರ ಸಂಧಿ ಪ್ರಾರಂಭ

ಅವತಾರಿಕೆ :—ಹಿಂದಿನ ಸಂಧಿಯಲ್ಲಿ ಪರಮಾತ್ಮನು ಸಕಲ ವಸ್ತು ಗಳಲ್ಲಿಯೂ ಕರ್ತೃ, ಕಾರಣ ಮೊದಲಾದ ರೂಪಿಯಾಗಿದ್ದು ನಿಯಮಿಸುತ್ತಿ ರುವನು ಎಂದು ತಿಳಿದು ಸದಾ ಸ್ಮರಿಸುತ್ತ ಮಾಡುವ ಕರ್ಮಗಳೆಲ್ಲವೂ ಸಫಲವಾಗುವವು ಇಂತಹ ಭಕ್ತಿ ಇಲ್ಲದೆ ಮಾಡುವ ಕರ್ಮಗಳು ಮಹಾಫಲಕ್ಕೆ ಹೇತುವಲ್ಲವೆಂದು ನಿರೂಪಿಸಿ, ಅನುಸಂಧಾನ ಮತ್ತು ಭಕ್ತಿ ಇಲ್ಲದವರು ಮಾಡುವ ಕರ್ಮಗಳು ಅಲ್ಪ ಫಲಕಾರಿಯಾಗಿದ್ದರೂ ತದುದ್ದೇಶವಾಗಿಯೂ ವಿಹಿತ ಕರ್ಮಗಳನ್ನು ಮಾಡುವುದೇ ಯುಕ್ತ, ಬಿಡಬಾ ರದೆಂಬ ಅರ್ಥವನ್ನು ಈ ೧೪ನೆಯ ಸಂಧಿಯಲ್ಲಿ ಪಿತ್ರಾದಿಗಳನ್ನು ಕುರಿತು ಮಾಡುವ ನಿತ್ಯ ನೈಮಿತ್ತಿಕ ಕರ್ಮಗಳು ಅವಶ್ಯಕವೆಂದು ನಿರೂಪಿಸುತ್ತಾರೆ.

ಮತ್ತು ಪ್ರತಿ ಸಾಂವತ್ಸರೀಕ ಮೊದಲಾದ ಶ್ರಾದ್ಧ ವಿಚಾರಗಳು, ಪ್ರಸಕ್ತಿಯಿಂದ ಸಪ್ತಾನ್ನಪ್ರಕರಣ, ಅಂಶಾಂಶವಿಚಾರ ಮೊದಲಾದವುಗೆಳನ್ನೂ ಹೇಳುತ್ತಾರೆ—

**ಹರಿಕಥಾಮೃತಸಾರ ಗುರುಗಳ ||ಪ||**

**ಕೃತಿರಮಣ ಪ್ರದ್ಯುಮ್ನ ವಸುದೇ**
**ವತೆಗಳಾಹಂಕಾರತ್ರಯಗಳೊಳು**
**ಚತುರವಿಂಶತಿ ರೂಪದಿಂದಲಿ ಭೋಜ್ಯನೆನಿಸುವನು ||**
**ಹುತವಹಾಕ್ಷಾಂತರ್ಗತ ಜಯಾ**
**ಪತಿಯು ತಾನೆ ಮೂರಧಿಕತ್ರಿಂ**
**ಶತಿ ಸುರೂಪದಿ ಭೋಕ್ತ್ರ ಎನಿಸುವ ಭೋಕ್ತ್ರಗಳೊಳಿದ್ದು ||**

ಪದ್ಯಾರ್ಥ:—ಕೃತಿರಮಣ=ಕೃತೀದೇವಿಯ ಪತಿಯಾದ,ಪ್ರದ್ಯುಮ್ನ =ಪ್ರದ್ಯುಮ್ನ ನಾಮಕ ಪರಮಾತ್ಮನು,ವಸುದೇವತೆಗಳ=ಅಷ್ಟವಸುಗಳಲ್ಲಿರುವ, ಅಹಂಕಾರತ್ರಯದೊಳು=ವೈಕಾರಿಕ, ತೈಜಸ, ತಾಮಸವೆಂಬ ಮೂರುವಿಧ ಅಹಂಕಾರಗಳೊಳಗೆ, ಚತುರವಿಂಶತಿರೂಪದಿಂದಲಿ=೮×೩ =೨೪ ರೂಪಗಳಿಂದ, ಭೋಜ್ಯನೆನಿಸುವನು=ಭೋಜನಯೋಗ್ಯವಾದ ಪದಾರ್ಥಗಳಲ್ಲಿದ್ದು ಭೋಜ್ಯನೆಂದೆನಿಸುವನು, ಹೃತವಹಾಕ್ಷ=ಅಗ್ನಿನೇತ್ರರಾದ ರುದ್ರದೇವರೆ ಪ್ರಧಾನರಾದ ೧೧ ರುದ್ರರಲ್ಲಿ, ಅಂತರ್ಗತ=ಅಂತರ್ಯಾಮಿಯಾದ,ಜಯಾಪತಿಯು=ಜಯಾದೇವಿಯ ಪತಿಯಾದ ಶ್ರೀಸಂಕರ್ಷಣನು ತಾನೆ, ಮೂರಧಿಕತ್ರಿಂಶತಿಸುರೂಪದಿ=೩೩ ಉತ್ತಮ ರೂಪಗಳಿಂದ, ಭೋಕ್ತ್ರಗಳೊಳಿದ್ದು ಭೋಕ್ತ್ರಎನಿಸುವನು.

ತಾತ್ಪರ್ಯ :—ಪಿತೃ, ಪಿತಾಮಹ, ಪ್ರಪಿತಾಮಹರೆಂಬ ಮೂರುವಿಧ ಪಿತೃಗಳಿಗೆ ಅಧಿಪತಿಗಳು ವಸುಗಣ, ರುದ್ರಗಣ, ಆದಿತ್ಯಗಣ ಎಂಬ ಮೂರು ಗಣಗಳು. ಅದರಲ್ಲಿ ವಸುಗಣಕ್ಕೆ ಸೇರಿದವರು ೮ ಮಂದಿ. ಒಬ್ಬೊಬ್ಬರಲ್ಲೂ, ವೈಕಾರಿಕ, ತೈಜಸ, ತಾಮಸವೆಂದು ಮೂರುವಿಧ ಅಹಂಕಾರ ತತ್ವಗಳು ಇರುವವು. ಒಂದೊಂದು ಅಹಂಕಾರದಲ್ಲಿ. ಒಂದೊಂದು ರೂಪದಂತೆ ೮×೩=೨೪ ರೂಪಗಳಿಂದ ; ಶ್ರಾದ್ಧದಲ್ಲಿ ಭೋಜನಯೋಗ್ಯವಾದ ಪದಾರ್ಥಗಳಲ್ಲಿದ್ದು ಭೋಜ್ಯನೆನಿಸುವನು. ೧೧ರುದ್ರರಲ್ಲಿಯೂ ಒಬ್ಬೊಬ್ಬರಲ್ಲಿ ಮೂರು ಮೂರು ಅಹಂಕಾರಗಳಂತೆ ೧೧× ೩=೩೩ ಅಹಂಕಾರಗಳಲ್ಲೂ ೩೩ ರೂಪಗಳಿಂದ ಜಯಾಪತಿಯಾದ ಸಂಕರ್ಷಣನು ಪಿತೃಗಳನ್ನು ಆವಾಹನ ಮಾಡಿರುವ ಬ್ರಾಹ್ಮಣರಲ್ಲಿದ್ದು ಶ್ರಾದ್ಧಾನ್ನವನ್ನು ಭುಂಜಿಸಿ, ಭೋಕ್ತ್ರ ಎನಿಸುವನು ||೧||

**ಆರಧಿಕ ಮೂವತ್ತು ರೂಪದಿ
ವಾರಿಜಾಪ್ತನೊಳಿರುತಿಹನು ಮಾ
ಯಾರಮಣ ಶ್ರೀವಾಸುದೇವನು ಕಾಲನಾಮದಲಿ ||
ಮೂರುವಿಧ ಪಿತೃಗಳೊಳು ವಸು ತ್ರಿಪು
ರಾರಿಯಾದಿತ್ಯಗನಿರುದ್ಧನು
ತೋರಿಕೊಳ್ಳದೆ ಕರ್ತೃಕರ್ಮಕ್ರಿಯನೆನಿಸಿಕೊಂಬ ||**

ಪದ್ಯಾರ್ಥ :—ಆರಧಿಕ ಮೂವತ್ತುರೂಪದಿ=೩೬ ರೂಪಗಳಿಂದ, ಮಾಯಾರಮಣ=ಮಾಯಾರೂಪಳಾದ ಶ್ರೀಲಕ್ಷ್ಮೀದೇವಿಯರೊಡನೆ ವಾಸುದೇವರೂಪಿ ಪರಮಾತ್ಮನು, ಕಾಲನಾಮದಲಿ=ಕಾಲನಾಮಕನಾಗಿ, ವಾರಿಜಾಪ್ತನೊಳು=ಸೂರ್ಯರೊಳಗೆ,ಇರುತಿಹನು=ಮೂರು ವಿಧ ಪಿತೃಗಳೊಳು ಇರುವ, ವಸು=ವಸುಗಣ, ತ್ರಿಪುರಾರಿ=ರುದ್ರಗಣ, ಆದಿತ್ಯಗೆ=ಆದಿತ್ಯಗಣ ಇವರುಗಳಲ್ಲಿರುವ, ಅನಿರುದ್ಧನು, ತೋರಿಕೊಳ್ಳದೆ, ತಾನು ಮಾಡುವುದನ್ನು ತಿಳಿಸದೆ, ಕರ್ತೃ=ಮಾಡುವವನು, ಕರ್ಮ=ಮಾಡಲ್ಪಟ್ಟದ್ದು, ಕ್ರಿಯೆ=ಮಾಡುವಿಕೆ ಎಂಬ ನಾಮಗಳನ್ನು ಧರಿಸುವನು, ಎನಿಸಿಕೊಂಬ=ಕರ್ತನೊಳಗಿದ್ದು ಕರ್ತೃ ಎಂತಲೂ, ಕರ್ಮದಲ್ಲಿದ್ದು ಕರ್ಮನೆಂತಲೂ, ಮಾಡಲ್ಪಟ್ಟ ಕಾರ್ಯಗಳಲ್ಲಿದ್ದು ಕ್ರಿಯ ಯೆಂತಲೂ ಎನಿಸಿಕೊಳ್ಳುವನು. ಮತ್ತು ಈ ರೂಪಗಳಾಗಿದ್ದು ಆ ಹೆಸರುಗಳಿಂದಲೇ ಕರಿಸಿಕೊಳ್ಳುವನು.

ತಾತ್ಪರ್ಯ :—ಆದಿತ್ಯಗಣದವರು ೧೨ ಮಂದಿ; ಇವರು ಪ್ರಪಿತಾಮಹರಲ್ಲಿರುವರು. ಇವರ ಒಬ್ಬೊಬ್ಬರಲ್ಲೂ ವೈಕಾರಿಕಾದಿ ಮೂರು ಅಹಂಕಾರಗಳಂತೆ ೧೨×೩=೩೬ ಆದವು. ಈ ೩೬ ರೂಪಗಳಿಂದ ಮಾಯಾದೇವಿಯ ಪತಿಯಾದ ಶ್ರೀವಾಸುದೇವನು ಕಾಲನೆಂದೆನಿಸಿ ಶ್ರಾದ್ಧ ಮಾಡುವ ಕಾಲದಲ್ಲಿ ವ್ಯಾಪ್ತನಾಗಿರುವನು. ಹೀಗೆ ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಈ ಮೂವರನ್ನು ಹೇಳಿದರು ಮುಂದೆ ಅನಿರುದ್ಧನೆಲ್ಲಿರುವನೆಂದು ಹೇಳುತ್ತಾರೆ. ಪಿತೃ, ಪಿತಾಮಹ, ಪ್ರಪಿತಾಮಹರೆಂಬ ಮೂರು ವಿಧ ಪಿತೃಗಳಿಗೆ ಅಧಿಪತಿಗಳಾದ ವಸುಗಣ, ರುದ್ರಗಣ, ಆದಿತ್ಯಗಣಗಳಲ್ಲಿಯೂ ಅನಿರುದ್ಧನಿರುವನಲ್ಲದೆ ತನ್ನ ಕರ್ತೃತ್ವವನ್ನು ತೋರ್ಪಡಿಸದೆ ಶ್ರಾದ್ಧ ಮಾಡುವವರಲ್ಲಿದ್ದು ಕರ್ತನೆಂತಲೂ, ಶ್ರಾದ್ಧ ಕರ್ಮದೊಳಗಿದ್ದು ಕರ್ಮವೆಂತಲೂ, ಬ್ರಾಹ್ಮಣ ಪಾದಪ್ರಕ್ಷಾಳನ ಭೋಜನ ಮುಂತಾದ ಕ್ರಿಯೆಗಳಲ್ಲಿದ್ದು ಕ್ರಿಯೆಯೆಂತಲೂ ಅನಿಸಿಕೊಳ್ಳುವನು. ಯದ್ಯಪಿ ಶ್ರಾದ್ಧಕಲ್ಪದಲ್ಲಿ ವಿಶ್ವೇದೇವತೆ

ಗಳಲ್ಲಿ ಅನಿರುದ್ಧ, ನಾರಾಯಣ ರೂಪಗಳಿಂತಲೂ, ಪಿತ್ರಾದಿಗಳಲ್ಲಿ ಪ್ರದ್ಯು ಮ್ನಾದಿ ರೂಪಗಳಿಂತಲೂ ಹೇಳಿರುವರು. ಇಲ್ಲಿ ಪಿತೃಗಳಲ್ಲೇ ಅನಿರುದ್ಧ ನನ್ನೇಕೆ ಹೇಳಿದರೆಂದರೆ, ಕಲ್ಪದಲ್ಲಿ ವಿಶ್ವೇದೇವತೆಗಳಲ್ಲಿದ್ದು ಆವಾಹಿತರಾಗಿ ಅನಿರುದ್ಧ ನಾರಾಯಣರು ಭೋಜ್ಯ ಭೋಕ್ತೃ ವಾಚ್ಯರಾಗಿರುವರು ಎಂದು ಹೇಳಿರುವರು. ಇಲ್ಲಿ ಅಷ್ಟುಮಾತ್ರವೇ ಅಲ್ಲ; ಪಿತೃಗಳಲ್ಲೂ ಸಹ ಇದ್ದು ಕರ್ತೃ ಕರ್ಮ ಕ್ರಿಯೆ ವಾಚಕನೂ ಆಗುವನೆಂದು ವಿಶೇಷಾರ್ಥವನ್ನು ಹೇಳುತ್ತಾರೆ ||೨||

ಅವತಾರಿಕೆ ;—ಈ ಪದ್ಯದಿಂದ ನಾರಾಯಣನ ವ್ಯಾಪಾರ ಹೇಳು ತ್ತಾರೆ—

ಸ್ವವಶ ನಾರಾಯಣನು ತಾವಸು ಷ
ಣ್ಣವತಿ ನಾಮದಲಿ ಕರೆಸುತಲಿ
ಶಿವ ದಿವಾಕರ ಕರ್ತೃಕರ್ಮಕ್ರಿಯೆಗಳೊಳಿದ್ದು ||
ನೆವನವಿಲ್ಲದೆ ನಿತ್ಯದಲಿ ತ
ನ್ನವರು ಮಾಡುವ ಸೇವೆ ಕೈಕೊಂ
ಡವರ ಪಿತೃಗಳಿಗೀವನಂತಾನಂತ ಸುಖಗಳನು ||

ಪದ್ಯಾರ್ಥ ;—ಸ್ವವಶ=ಸ್ವತಂತ್ರನಾದ, ನಾರಾಯಣನು, ತಾ= ತಾನು, ವಸು=೮ ವಸುಗಳಲ್ಲಿ ೨೪ ರೂಪಗಳಿಂದಲೂ, ಶಿವ=೧೧ ರುದ್ರ ರಲ್ಲಿ, ೩೩ ರೂಪಗಳಿಂದಲೂ, ದಿವಾಕರ=೧೨ ಸೂರ್ಯರಲ್ಲಿ ೩೬ ರೂಪಗ ಳಿಂದಲೂ, ಕರ್ತೃಕರ್ಮಕ್ರಿಯಗಳೊಳು=ಕರ್ತೃ, ಕರ್ಮ, ಕ್ರಿಯೆಯೆಂಬ ಈ ಮೂರರಲ್ಲಿ ಮೂರು ರೂಪಗಳಿಂದಲೂ, ಷಣ್ಣವತಿನಾಮದಲಿ=ಹೀಗೆ (೯೬) ಷಣ್ಣವತಿ ಎಂಬ ಹೆಸರಿನಿಂದ, ಕರೆಸುತಲಿ=ಕರಿಸಿಕೊಳ್ಳುತ್ತಾ, ಇದ್ದು, ನೆವನವಿಲ್ಲದೆ=ನಿಮಿತ್ತವಿಲ್ಲದೆ, ನಿತ್ಯದಲಿ, ತನ್ನವರು=ತನ್ನ ಭಕ್ತರು, ಮಾಡುವ=ಮೇಲೆ ಹೇಳಿದಂತೆ ಅನುಸಂಧಾನಪೂರ್ವಕವಾಗಿ ಮಾಡುವ, ಸೇವೆ ಕೈಕೊಂಡು=ಶ್ರಾದ್ಧಾದಿರೂಪ ಸೇವೆಯನ್ನು ಸ್ವೀಕರಿಸಿ, ಅವರ ಪಿತೃಗಳಿಗೆ, ಅನಂತಾನಂತ ಸುಖಗಳನ್ನು, ಈವ=ಕೊಡುವ.

ತಾತ್ಪರ್ಯ :—ಮೇಲೆ ಹೇಳಿದಂತೆ ಪ್ರದ್ಯುಮ್ನನು ೮ ವಸುಗಳ ಲ್ಲಿಯೂ, ಒಬ್ಬೊಬ್ಬರಲ್ಲಿರುವ ವೈಕಾರಿಕ ತೈಜಸ ತಾಮಸಗಳೆಂಬ ಮೂರು ವಿಧ ಅಹಂಕಾರಗಳಲ್ಲಿ ಮೂರು ರೂಪಗಳಂತೆ ೮×೩=೨೪ ರೂಪಗಳಿಂದ

ಇರುವನು. ಇದರಂತೆ ೧೧ ರುದ್ರರಲ್ಲಿ ಸಂಕರ್ಷಣನ ರೂಪಗಳು ೩೩, ೧೨ ಆದಿತ್ಯರಲ್ಲಿ ವಾಸುದೇವನ ರೂಪಗಳು ೩೬. ಕರ್ತೃ ಕರ್ಮ ಕ್ರಿಯೆಗಳಲ್ಲಿ ಅನಿರುದ್ಧನ ರೂಪಗಳು ೩. ಅಂತು ೯೬ ರೂಪಗಳಾದವು. ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವರೆಂಬ ೯೬ ಖಂಡರೂಪಗಳು ಇವುಗಳಲ್ಲಿ ಅಖಂಡನಾಗಿ ಶ್ರೀ ನಾರಾಯಣನು ಅನಿರುದ್ಧಾದಿ ೪ ರೂಪಗಳಿಂದ ವ್ಯಾಪಿಸಿಕೊಂಡು ಷಣ್ಣವತಿ ಎಂಬ ಹೆಸರಿನಿಂದ ಕರೆಸಿಕೊಳ್ಳುವನು. ಅಂದರೆ ಅನಿರುದ್ಧನ ರೂಪಗಳು ಕರ್ತೃ ಕರ್ಮ ಕ್ರಿಯಾ ಎಂಬ ೩. ವಸುಗಳಲ್ಲಿ ಪ್ರದ್ಯುಮ್ನನ ರೂಪಗಳು ೨೪. ರುದ್ರರಲ್ಲಿ ಸಂಕರ್ಷಣನ ರೂಪಗಳು ೩೩. ಆದಿತ್ಯರಲ್ಲಿ ವಾಸುದೇವನ ರೂಪಗಳು ೩೬. ಹೀಗೆ ೯೬ ರೂಪಗಳು ಅನಿರುದ್ಧಾದಿ ೪ ರೂಪಗಳಿಗೆ ಹಂಚಲ್ಪಟ್ಟವು. ಶ್ರೀ ನಾರಾಯಣನು, ವಸುಗಣ, ರುದ್ರಗಣ, ಆದಿತ್ಯಗಣ, ಕರ್ತೃ, ಕರ್ಮ, ಕ್ರಿಯೆ ಇವುಗಳಲ್ಲಿ ವ್ಯಾಪ್ತನಾಗಿ ಒಟ್ಟು ೯೬ ರೂಪಗಳಿಂದ ಷಣ್ಣವತಿ ನಾಮಧೇಯದಿಂದ ಇದ್ದು ತನ್ನ ಭಕ್ತರು ಮಾಡುವ ಶ್ರಾದ್ಧ ಕರ್ಮವನ್ನು ತನ್ನ ಸೇವೆಯೆಂದು ಸ್ವೀಕರಿಸಿ ಅವರ ಪಿತೃಗಳಿಗೆ ಅನಂತಾನಂತ ಸುಖವನ್ನು ಕೊಟ್ಟು ಉದ್ಧರಿಸುವನು ||೩||

ಅವತಾರಿಕೆ :—ಪಿತೃಗಳನ್ನು ಮಾತ್ರ ಉದ್ಧರಿಸುತ್ತಾನೆಂದಲ್ಲ, ಅನುಸಂಧಾನಪೂರ್ವಕ ಭಕ್ತಿ ಶ್ರದ್ಧೆಯಿಂದ ಶ್ರಾದ್ಧ ಮಾಡುವವರನ್ನೂ ಸಹ ಉದ್ಧಾರ ಮಾಡುತ್ತಾನೆಂದು ಹೇಳುತ್ತಾರೆ—

ತಂತುಪಟದಂದದಲಿ ಲಕುಮಿಾ
ಕಾಂತ ಪಂಚಾತ್ಮಕನೆನಿಸಿ ವಸು
ಕಂತುಹರ ರವಿ ಕರ್ತೃಗಳೊಳಿದ್ದನವರತ ತನ್ನ ||
ಚಿಂತಿಸುವ ಸಂತರನ ಗುರು ಮ
ಧ್ವಾಂತರಾತ್ಮಕ ಸಂತೈಸುವನು
ಸಂತತಖಿಲಾರ್ಥಗಳ ಪಾಲಿಸಿ ಇಹಪರಂಗಳಲಿ ||

ಪದ್ಯಾರ್ಥ :—ತಂತುಪಟದಂದದಲಿ=ಧಾರಗಳು ಅಡ್ಡವಾಗಿಯೂ ಉದ್ದವಾಗಿಯೂ ಸೇರಿಕೊಂಡು ವಸ್ತ್ರರೂಪವಾಗಿ ಪರಿಣಮಿಸುವಂತೆ, ಲಕುಮಿಾಕಾಂತ = ಲಕ್ಷ್ಮೀಪತಿಯು, ಪಂಚಾತ್ಮಕನೆನಿಸಿ = ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ ಸ್ವರೂಪನೆಂದೆನಿಸಿ,

ವಸುಗಣ, ಕಂತುಹರ=ಮನ್ಮಥನನ್ನು ದಹಿಸಿದ ರುದ್ರರು ೧೧ ಅಂದರೆ ರುದ್ರಗಣ, ರವಿ=ಆದಿತ್ಯಗಣ, ಕರ್ತೃಗಳೊಳು=ಕರ್ಮ ಮಾಡುವವರಲ್ಲಿ ಇದ್ದು, ಅನವರತ=ನಿತ್ಯದಲ್ಲಿಯೂ, ತನ್ನ, ಚಿಂತಿಸುವ=ಧ್ಯಾನಮಾಡುವ ಸಂತರನ=ಸಜ್ಜನರನ್ನು, ಗುರುಮಧ್ವಾಂತರಾತ್ಮಕ=ನಮ್ಮ ಮುಖ್ಯ ಗುರುಗಳಾದ ಶ್ರೀ ಮಧ್ವಾಚಾರ್ಯರ ಅಂತರ್ಯಾಮಿಯಾದ ಶ್ರೀಪರಮಾತ್ಮನು ಇಹಪರಂಗಳಲಿ, ಸತತ=ಸರ್ವ ಕಾಲದಲ್ಲೂ ಅಖಿಳಾರ್ಥಗಳ,ಪಾಲಿಸಿ= ಕೊಟ್ಟು ಸಂತೈಸುವನು.

ತಾತ್ಪರ್ಯ :—ಧಾರಗಳು ಹೇಗೆ ಅಡ್ಡವಾಗಿಯೂ ಉದ್ದವಾಗಿಯೂ ನೇಯಲ್ಪಟ್ಟು ವಸ್ತ್ರರೂಪವಾಗಿ ಪರಿಣಮಿಸುವುವೋ ಹಾಗೆ ಅನಿರುದ್ಧಾದಿ ರೂಪಗಳಿಂದ ವಸು ರುದ್ರಾದಿತ್ಯರೊಳಗೆ ೯೬ ರೂಪಗಳಿಂದಿದ್ದು ಲಕ್ಷ್ಮೀಪತಿಯಾದ ನಾರಾಯಣನೊಬ್ಬನೇ ತನ್ನನ್ನು ನಿತ್ಯದಲ್ಲಿಯೂ ಧ್ಯಾನ ಮಾಡುತ್ತಾ ಅನುಸಂಧಾನಪೂರ್ವಕ ಶ್ರಾದ್ಧಾದಿಗಳನ್ನು ಮಾಡುವವರನ್ನು "ಆಯುಃ ಪ್ರಜಾಂ ಧನಂ ವಿದ್ಯಾಂ ಸ್ವರ್ಗಂ ಮೋಕ್ಷಂ ಸುಖಾನಿಚ | ಪ್ರಯಚ್ಛಂತಿ'' ಎಂಬುವದಾಗಿ ಶ್ರಾದ್ಧಕಲ್ಪದಲ್ಲಿ ಹೇಳುವಂತೆ ಆಯುಷ್ಯ, ಸಂತತಿ, ದ್ರವ್ಯ, ವಿದ್ಯಾ, ಸ್ವರ್ಗ, ಮೋಕ್ಷಗಳೆಂಬ ಇಹಪರ ಸುಖವನ್ನು ಕೊಟ್ಟುದ್ಧರಿಸುವನೆಂಬ ಭಾವ ||೪||

ಅವತಾರಿಕೆ :—ತಂದೆ ತಾಯಿಗಳನ್ನು ಭಗವಂತನ ವಿಭೂತಿ ರೂಪಗಳಿಗೆ ಅಧಿಷ್ಠಾನರೆಂದು ತಿಳಿದು ಪ್ರೀತಿಯಿಂದ ಶ್ರಾದ್ಧಾದಿ ವಿಹಿತ ಕರ್ಮಗಳನ್ನಾಚರಿಸುವವರು ಸುಖದಿಂದ ಬಾಳ್ವರೆಂದು ಹೇಳುತ್ತಾರೆ—

ತಂದೆತಾಯ್ಗಳ ಪ್ರೀತಿಗೋಸುಗ
ನಿಂದ್ಯಕರ್ಮವ ತೊರದು ವಿಹಿತಗ
ಳೊಂದು ಮಾರದೆ ಸಾಂಗ ಕರ್ಮಗಳಾಚರಿಸುವವರು ||
ವಂದನಿಯರಾಗಿಳೆಯೊಳಗೆ ದೈ
ನಂದಿನದಿ ದೈಹಿಕದಹಿಕ ಸುಖ
ದಿಂದ ಬಾಳ್ವರು ಬಹುದಿವಸದಲಿ ಕೀರ್ತಿಯುತರಾಗಿ ||

ಪದ್ಯಾರ್ಥ :—ತಂದೆ ತಾಯಿಗಳ, ಪ್ರೀತಿಗೋಸುಗ, ನಿಂದ್ಯ ಕರ್ಮವ= ಮಾಡಬಾರದೆಂದು ಶಾಸ್ತ್ರದಲ್ಲಿ ನಿಷೇಧ ಮಾಡಿರುವ ಕರ್ಮಗಳನ್ನು, ತೊರದು= ಬಿಟ್ಟು, ವಿಹಿತಗಳೊಂದು ಮಾರದೆ= ಶಾಸ್ತ್ರವಿಹಿತ

ವಾಗಿ ಮಾಡಬೇಕಾದ ಒಂದು ಕರ್ಮವನ್ನಾದರೂ ಬಿಡದೆ, ಸಾಂಗೆ ಕರ್ಮ ಗಳ= ವಿಧಿಯಲ್ಲಿ ಹೇಳಿದ ಪ್ರಕಾರ ಸಾಂಗವಾಗಿ, ಕರ್ಮಗಳನ್ನು, ಆಚರಿಸುವವರು, ಇಳೆಯೊಳಗೆ= ಭೂಮಿಯಲ್ಲಿ, ವಂದನಿಯರಾಗಿ= ಎಲ್ಲರಿಂದಲೂ ಪೂಜ್ಯರಾಗಿ, ದೈನಂದಿನದಿ= ಪ್ರತಿ ದಿವಸದಲ್ಲೂ, ಕೀರ್ತಿಯುತರಾಗಿ, ಬಹುದಿವಸದಲಿ= ಬಹು ಕಾಲದವರೆಗೂ, ದೈಶಿಕ= ದೇಶಸಂಬಂಧವಾದ, ಮತ್ತು ದಹಿಕ= ದೇಹಸಂಬಂಧವಾದ ಸುಖದಿಂದ,ಬಾಳುವರು.

ತಾತ್ಪರ್ಯ :—ಶ್ರಾದ್ಧಕರ್ಮಗಳನ್ನು ಮಾಡುವವರು ತಾಯಿ ತಂದೆಗಳಲ್ಲಿ ಪ್ರೀತಿಯಿಂದ ಶಾಸ್ತ್ರನಿಂದ್ಯವಾದ ನಿಷಿದ್ಧ ಕರ್ಮಗಳನ್ನಾಚರಿಸದೇ, ವಿಧಿವಿಹಿತವಾದ ಕರ್ಮಗಳನ್ನು ಬಿಡದೆ ಸಾಂಗವಾಗಿ ಶ್ರಾದ್ಧ ಕರ್ಮವನ್ನು ಮಾಡಿ ಪಿತೃಗಳಂತರ್ಯಾಮಿ ಜನಾರ್ದನ ವಾಸುದೇವಗೆ ಪ್ರೀತಿಯಾಗಲಿ ಎಂದು ಸಮರ್ಪಿಸಿದರೆ, ಭೂಮಿಯಲ್ಲಿ ಜನರಿಂದ ಪೂಜ್ಯರಾಗಿ, ಪ್ರತಿ ದಿವಸದಲ್ಲಿಯೂ ದೇಶಸಂಬಂಧದಿಂದಲೂ, ದೇಹಸಂಬಂಧದಿಂದಲೂ ಸುಖವನ್ನೇ ಅನುಭವಿಸುತ್ತಾ ಕೀರ್ತಿವಂತರಾಗಿ ಬಹು ಕಾಲದವರೆಗೂ ಇರುವರು. ದೇಶಸಂಬಂಧವೆಂದರೆ ಕೆಲವು ದೇಶಗಳಲ್ಲಿ ಬಿಸಿಲು ಕಾಲದಲ್ಲಿಯೂ ಸಹ ,ಛಳಿಯಾಗುತ್ತಿರುವುದು ಕೆಲವು ಕಡೆ ಛಳಿಕಾಲದಲ್ಲೂ ಸಹ ತಾಪವಾಗಿ ಇರುವುದು. ಇಂತಹ ದೇಶಗಳಲ್ಲಿದ್ದರೂ ದೇಶಸಂಬಂಧವಾದ ಶೀತೋಷ್ಣಗಳ ಬಾಧೆ ಇಲ್ಲದೇ ಸಮೋಷ್ಣದಿಂದ ಸುಖವಾಗಿರುವರೆಂಬ ಭಾವ ದೇಹಸಂಬಂಧವೆಂದರೆ ನಿರೋಗರಾಗಿ ದೃಢಗಾತ್ರರಾಗಿ ಇರುವರೆಂಬ ಭಾವ ||೫||

ಅವತಾರಿಕೆ :—ಪಿತೃಗಳ ಶರೀರದಲ್ಲಿರುವ ತತ್ವಾಭಿಮಾನಿಗಳಾದ ಬ್ರಹ್ಮಾದಿಗಳ ಅಂತರ್ಯಾಮಿಯಾದ ಜನಾರ್ದನ ವಾಸುದೇವನ ೯೬ ರೂಪಗಳನ್ನು ತಿಳಿದು ಸ್ಮರಣೆ ಮಾಡುತ್ತಾ ಶ್ರಾದ್ಧಾದಿಗಳಲ್ಲಿ ಪಿತೃಗಳಂತರ್ಯಾಮಿ ಜನಾರ್ದನನನ್ನು ಪೂಜಿಸುವವರೇ ಕೃತಾರ್ಥರೆಂದು ಹೇಳುತ್ತಾರೆ—

ಅಂಶಿ ಅಂಶಾಂತರ್ಗತತ್ರಯ
ಹಂಸವಾಹನ ಮುಖ್ಯ ದಿವಿಜರ
ಸಂಶಯದಿ ತಿಳಿದಂತರಾತ್ಮಕ ಶ್ರೀ ಜನಾರ್ದನನ ||
ಸಂಸ್ಮರಣೆಪೂರ್ವಕದಿ ಷಡಧಿಕ

ತ್ರಿಂಶತಿತ್ರಯರೂಪವರಿತು ವಿ
ಪಾಂಸಗನ ಪೂಜಿಸುವವರೇ ಕೃತಾರ್ಥರೆನಿಸುವರು ||

ಪದ್ಯಾರ್ಥ :—ಅಂಶಿ= ಅಂಶವುಳ್ಳವರು ಅಂದರೆ ಪಿತೃಪಿತಾಮಹ ಪ್ರಪಿತಾಮಹರಲ್ಲಿ ಪ್ರವಿಷ್ಟರಾದ ವಸುಗಣ, ರುದ್ರಗಣ, ಆದಿತ್ಯಗಣಗಳೆಂದರ್ಥ. ಅಂಶ= ಅಂಶರೂಪವೆಂದರೆ ಪ್ರದ್ಯುಮ್ನ, ಸಂಕರ್ಷಣ. ವಾಸುದೇವ ರೂಪಗಳು,ಅಂತರ್ಗತತ್ರಯ= ಇವುಗಳಲ್ಲಿ ಅಂತರ್ಗತ ರೂಪಗಳು೩ ಇಷ್ಟು ರೂಪಗಳುಳ್ಳ ಜನಾರ್ದನನು, ಹಂಸವಾಹನಮುಖ್ಯ ದಿವಿಜರು= ಬ್ರಹ್ಮದೇವರು ಮೊದಲಾದ ದೇವತೆಗಳು, ಅಸಂಶಯದಿ= ಸಂಶಯವಿಲ್ಲದೆ ತಿಳಿದು, ಅಂತರಾತ್ಮಕ= ಅಂತರ್ಯಾಮಿಯಾಗಿ ವಾಸಮಾಡುವ ಶ್ರೀಜನಾರ್ದನನ, ತಿಳಿದು,ಸಂಸ್ಮರಣೆಪೂರ್ವಕದಿ= ಚೆನ್ನಾಗಿ ಸ್ಮರಣಪೂರ್ವಕವಾಗಿ, ಷಡಧಿಕ= ಆರು ಹೆಚ್ಚಾದ,ತ್ರಿಂಶತಿತ್ರಯ= ೩೦ × ೩ =೯೦,ರೂಪವರಿತು ೯೬ ರೂಪಗಳನ್ನರಿತು, ವಿಪಾಂಸಗನ= ಪಕ್ಷಿರಾಜನಾದ ಗರುಡನ, ಅಂಸಗನ= ಹೆಗಲೇರಿದವನ, ಪೂಜಿಸುವರು, ಯಾರೊ ಅವರೇ ಕೃತಾರ್ಥರೆನಿಸುವರು.

ಅಂಶಿಗಳೆಂದರೆ ಸಾಂಶರೆಂದರ್ಥ. ಅಂದರೆ ಒಂದು ರೂಪದಿಂದ ಒಂದು ಕಡೆಯೂ, ರೂಪಾಂತರದಿಂದ ಮತ್ತೊಂದು ಕಡೆಯೂ ಇರುವ ಯೋಗ್ಯತೆಯುಳ್ಳ ತತ್ವಾಭಿಮಾನಿ ದೇವತೆಗಳು ; ಮನುಷ್ಯರು ನಿರಂಶರು. ಸೂರ್ಯನು ಅಂತರಿಕ್ಷದಲ್ಲಿ ಶೋಭಿಸುತ್ತಿರುವನು. ಕೆಲವು ಕಾಲ ಸುಗ್ರೀವನಾಗಿಯೂ ಕರ್ಣನಾಗಿಯೂ ಹುಟ್ಟಿದ್ದನು. ಮತ್ತು ಎಲ್ಲರ ಕಣ್ಣುಗಳಲ್ಲೂ ಅಂಶದಿಂದ ಇದ್ದೇ ಇರುವನು. ಆದರೂ ಮೇಲೆ ಕಾಣುವ ಸೂರ್ಯನು ಇರುವನು. ಅಂಶದಿಂದ ರೂಪಾಂತರ ತೆಗೆದುಕೊಂಡು ಅನ್ಯತ್ರ ಇರುವನು. ಈ ಶಕ್ತಿಯು ಎಲ್ಲಾ ದೇವ ದೈತ್ಯರಲ್ಲಿ ಉಂಟು, ಮನುಷ್ಯರಿಗೆ ಇಲ್ಲವಾದುದರಿಂದ ಅವರು ನಿರಂಶರು. ಪ್ರಕೃತ ಶ್ರಾದ್ಧದಲ್ಲಿ ನಿರಂಶರಾದ ಪಿತೃ ಪಿತಾಮಹ ಪ್ರಪಿತಾಮಹರಲ್ಲಿ ಪ್ರವಿಷ್ಟರಾದ ೮ ವಸುಗಳು, ೧೧ ರುದ್ರರು, ೧೨ ಆದಿತ್ಯರು ಅಂಶಿಗಳು. ಇವರಲ್ಲಿ ಮೇಲಿನ ಪದ್ಯದಲ್ಲಿ ಹೇಳಿದಂತೆ ಒಬ್ಬೊಬ್ಬರಲ್ಲಿಯೂ ಪ್ರದ್ಯುಮ್ನ ಸಂಕರ್ಷಣ ವಾಸುದೇವರೆಂಬ ಮೂರು ರೂಪಗಳಿರುವವು. ಇವು ಅಂಶರೂಪಗಳು. ಅಂತರ್ಯಾಮಿ ರೂಪಗಳು ೩. ಪಿತ್ರಂತರ್ಯಾಮಿ, ಪಿತಾಮಹಾಂತ

ರ್ಯಾಮಿ, ಪ್ರಪಿತಾಮಹಾಂತರ್ಯಾಮಿ ಎಂದು ಈ ಮೂವರಲ್ಲೂ ಜನಾರ್ದನನು ಅಂತರ್ಯಾಮಿಯು. ಈ ರೂಪವನ್ನು ಪಿತೃಗಳನ್ನು ಆವಾಹನ ಮಾಡಿರುವ ಬ್ರಾಹ್ಮಣರ ದೇಹದಲ್ಲಿರುವ ತತ್ವಾಭಿಮಾನಿಗಳಾದ ಬ್ರಹ್ಮಾದಿಗಳ ಅಂತರ್ಯಾಮಿಯಾಗಿದ್ದು ಶ್ರೀ ಜನಾರ್ದನನು ಶ್ರಾದ್ಧವನ್ನು ಸ್ವೀಕರಿಸುವನೆಂದು ತಿಳಿದು ಸ್ಮರಣೆ ಮಾಡುತ್ತ ಮೇಲೆ ಹೇಳಿದ ಪ್ರಕಾರ ಪಿತ್ರಂತರ್ಗತ ವಸುಗಣರಲ್ಲಿ ೨೪ ರೂಪಗಳು, ಪಿತಾಮಹಾಂತರ್ಗತ ರುದ್ರಗಣದಲ್ಲಿ ೩೩ ರೂಪಗಳು. ಪ್ರಪಿತಾಮಹಾಂತರ್ಗತ ಆದಿತ್ಯಗಣದಲ್ಲಿ ೩೬ ರೂಪಗಳು, ಪಿತ್ರಾದಿ ಮೂವರಲ್ಲೂ ಜನಾರ್ದನರೂಪ ೩. ಅಂತು ೯೬ ರೂಪಗಳನ್ನು ಬ್ರಾಹ್ಮಣರಲ್ಲಿ ಚಿಂತಿಸಿ ಬ್ರಾಹ್ಮಣರಲ್ಲಿ ಆವಾಹಿತರಾಗಿ ಪಿತೃಗಳಂತರ್ಯಾಮಿಯಾದ ಗರುಡವಾಹನನಾದ ಶ್ರೀ ಪರಮಾತ್ಮನನ್ನು ಪೂಜಿಸುವವರೇ ಕೃತಾರ್ಥರೆಂದು ತಿಳಿಯಬೇಕು. ಈಪದ್ಯದಲ್ಲಿ "ಹಂಸವಾಹನ ಮುಖ್ಯದಿವಿಜರ ಸಂಶಯದಿ" ಎಂಬ ಸ್ಥಳದಲ್ಲಿ "ಅಸಂಶಯದಿ" ಎಂದು ಪದ ಮಾಡಿದರೂ ಆಗಬಹುದು. ಸಂಶಯದಿ ಎಂತಲೂ ಪದ ಮಾಡಬಹುದು. ಅಸಂಶಯದಿ ಅಂದರೆ ಬ್ರಹ್ಮ ಮೊದಲಾದ, ದೇವತೆಗಳ ಅಂತರಾತ್ಮಕನೆಂದು ಸಂಶಯವಿಲ್ಲದೆ (ನಿಃಸಂಶಯವಾಗಿ) ತಿಳಿದು ಎಂದರ್ಥ. ಸಂಶಯದಿ ಅಂದರೆ " ಸಮ್ಯಕ್ ಶೇತೇಽಸ್ಮಿನ್ನಿತಿ 'ಸಂಶಯಃ" ಬ್ರಹ್ಮಾದಿ ದೇವತೆಗಳ, ಸಂಶಯದಿ= ಒಳ್ಳೆ ಹಾಸಿಗೆಯಲ್ಲಿ ಅಂದರೆ ವಾಸಮಾಡಲು ಯೋಗ್ಯವಾದ ಅವರ ಹೃದಯಾಕಾಶದಲ್ಲಿ ಅಂತರಾತ್ಮಕನೆಂದು ತಿಳಿದು ಎಂದು ಅರ್ಥವಾಗುವುದು ||೬||

ಅವತಾರಿಕೆ:—ಜನಾರ್ದನನ ಸ್ಮರಣೆ ಮಾಡುತ್ತ ಶ್ರಾದ್ಧಾದಿಗಳನ್ನು ಮಾಡುವವರಿಗೆ ಯಾವ ವಿಘ್ನವು ಬಾರದಂತೆ ರಕ್ಷಿಸುವನೆಂದು ಹೇಳುತ್ತಾರೆ—

**ಮೂರುವರೆಸಾವಿರದ ಮೇಲರೆ**
**ನೂರ್ಕೈದುರೂಪದಿ ಜನಾರ್ದನ**
**ಸೂರಿಗಳು ಮಾಡುವ ಸಮಾರಾಧನೆಗೆ ವಿಘ್ನಗಳು ॥**
**ಬಾರದಂತೆ ಬಹುಪ್ರಕಾರ ಖ**
**ರಾರಿ ಕಾಪಾಡುವನು ಸರ್ವಶ**
**ರೀರಗಳೊಳಿದ್ದವರವರ ಪೆಸರಿಂದ ಕರೆಸುತಲಿ ॥**

ಪದ್ಯಾರ್ಥ :— ಮೂರುವರೆ ಸಾವಿರದಮೇಲೆ= (೩೫೦೦) ಮೂರು ಸಾವಿರದ ಐನೂರರ ಮೇಲೆ, ಅರೆನೂರೈದು= ೫೫ ರೂಪದಿ, ಒಟ್ಟು ೩೫೫೫ ರೂಪಗಳಿಂದ ಜನಾರ್ದನ= ಜನಾರ್ದನನು, ಸೂರಿಗಳುಮಾಡುವ = ಜ್ಞಾನಿಗಳು ಮಾಡುವ, ಸಮಾರಾಧನೆಗೆ= ಪಿತ್ರಂತರ್ಗತ ಜನಾರ್ದನನ ಉದ್ದೇಶ್ಯ ಮಾಡುವ ಪೂಜೆಗೆ, ವಿಘ್ನಗಳು, ಬಾರದಂತೆ, ಖರಾರಿ= ಖರರಾಕ್ಷಸನ ವೈರಿಯಾದ ಶ್ರೀರಾಮನು ಶ್ರೀಕೃಷ್ಣನು(ಶ್ರೀಹರಿಯು)ಸರ್ವ ಶರೀರಗಳೊಳಿದ್ದು ಕರ್ತೃ ಭೋಕ್ತೃ ಮೊದಲಾದವರುಗಳ ಶರೀರಗಳಲ್ಲಿದ್ದು, ಅವರವರ ಪೆಸರಿಂದ= ಅವರವರ ಹೆಸರಿನಿಂದ ಕರೆಸಿಕೊಳ್ಳುತ್ತಾ, ಬಹು ಪ್ರಕಾರ ಕಾಪಾಡುವನು.

ತಾತ್ಪರ್ಯ :—ಜನಾರ್ದನ ಎಂಬ ಪದವನ್ನು ಅಕ್ಷರಸಂಖ್ಯಾ ಮಾಡಲು, ಜ= ೩, ನಾ= ೫, ರ್ದ= ೫ (ರ್= ೨, ದ= ೩, ೨+ ೩= ೫) ನ= ೫. ಅಂತು ೩೫೫೫ ಆಗುವವು. ಈ ಸ್ಥಳದಲ್ಲಿ ಅಂಕಿಯನ್ನು ವಾಮಾಂಕ ಮಾಡದೆ ಸಮಾಂಕವಾಗಿಯೇ ಹೇಳಿರುವರು. ಇಷ್ಟು ರೂಪಗಳಿಂದ ಶ್ರೀ ಜನಾರ್ದನನು ಜ್ಞಾನಿಗಳು ಅಂದರೆ ಮೇಲೆ ಹೇಳಿದಂತೆ ಅನುಸಂಧಾನಪೂರ್ವಕ ಪರಮಾತ್ಮನನ್ನು ಸರ್ವತ್ರ ಸ್ಮರಿಸುತ್ತ ಶ್ರಾದ್ಧವನ್ನು ಮಾಡುವವರೆಂದರ್ಥ. ಇಂತಹವರು ಮಾಡುವ ಸಮಾರಾಧನೆ ಅಂದರೆ ಬ್ರಾಹ್ಮಣ ಪಾದಪ್ರಕ್ಷಾಲನೆ ಮೊದಲು ಗಂಧಾಕ್ಷತೆ ಭೋಜನ ತಾಂಬೂಲ ದಕ್ಷಿಣಾದಿಗಳಿಂದ ಪೂಜಿಸುವುದೆಂದರ್ಥ. ಶ್ರಾದ್ಧಕಲ್ಪದಲ್ಲಿ ಕಲಶಪೂಜಾದಿಗಳು ಆದಮೇಲೆ " ಪಿತ್ರಂತರ್ಯಾಮಿ ಜನಾರ್ದನ ವಾಸುದೇವಸ್ಯ ಸಮಾರಾಧನಂ ಕರಿಷ್ಯೇ " ಎಂದು ಸಂಕಲ್ಪ ಮಾಡುವುದರಿಂದ ಸಮಾರಾಧನೆ ಶಬ್ದಕ್ಕೆ ಸಂಮ್ಯಕ್ ಆರಾಧನೆ= ಚೆನ್ನಾಗಿ ಪೂಜಿಸುವದೆಂದು ತಾತ್ಪರ್ಯ. ಇಂತಹ ಸಮಾರಾಧನೆಗೆ ಯಾವ ವಿಧವಾದ ವಿಘ್ನಗಳೂ ಬಾರದೇ ಕರ್ತೃ ಭೋಕ್ತೃ ಮೊದಲಾದವರಲ್ಲಿ ತತ್ತಚ್ಛಬ್ದವಾಚ್ಯನಾಗಿದ್ದು ಸರ್ವಪ್ರಕಾರದಿಂದಲೂ ರಕ್ಷಿಸುವನು ||೭||

ಅವತಾರಿಕೆ :—ಪರಮಾತ್ಮನನ್ನು ಪ್ರಾರ್ಥಿಸುವ ರೀತಿಯನ್ನು ತೋರಿಸುತ್ತಾರೆ—

**ಜಯಜಯ ಜಯಾಕಾಂತ ದತ್ತಾ**
**ತ್ರೇಯ ಕಪಿಲ ಮಹಿದಾಸ ಭಕ್ತ**

ಪ್ರಿಯ ಪುರಾತನಪುರುಷ ಪೂರ್ಣಾನಂದ ಜ್ಞಾನಘನ ||
ಹಯವದನ ಹರಿಹಂಸಲೋಕ
ತ್ರಯ ವಿಲಕ್ಷಣ ನಿಖಿಳ ಜಗದಾ
ಶ್ರಯ ನಿರಾಮಯ ದಯದಿ ಸಂತೈಸೆಂದು ಪ್ರಾರ್ಥಿಪುದು ||

ಪದ್ಯಾರ್ಥ :—ಜಯಜಯ= ನಿನ್ನ ರೂಪದ ದರ್ಶನವನ್ನು ಕೊಡು ಜಯಾಕಾಂತ= ಜಯಾ ನಾಮುಕಳಾದ ಲಕ್ಷ್ಮೀದೇವಿಯ ಅರಸೆ (ಸಂಕರ್ಷಣ) ದತ್ತಾತ್ರೇಯ ! ಕಪಿಲ ! ಮಹಿದಾಸ ! ಭಕ್ತಪ್ರಿಯ, ಪುರಾತನ ಪುರುಷ= ಸರ್ವ ಕಾಲದಲ್ಲೂ ಸರ್ವರ ದೇಹದಲ್ಲೂ ವಾಸವಾಗಿರುವವನೇ ! ಪೂರ್ಣಾನಂದ= ಪೂರ್ಣವಾದ ಆನಂದಸ್ವರೂಪನೇ ! ಜ್ಞಾನಘನ= ಕೇವಲ ಜ್ಞಾನಾತ್ಮಕ ಸ್ವರೂಪನೆ ! ಹಯವದನ ! ಹರಿ ! ಹಂಸ = ದುಃಖಶಮನನಾದ ಹಂಸರೂಪಿಯೇ ! ಲೋಕತ್ರಯವಿಲಕ್ಷಣ= ಮೂರು ಲೋಕದಲ್ಲಿರುವ ಪ್ರಾಣಿಗಳಿಂದ ವಿಲಕ್ಷಣನೇ ! ನಿಖಿಳ ಜಗದಾಶ್ರಯ= ಸಕಲ ಜಗತ್ತಿಗೂ ಆಶ್ರಯನೇ, ನಿರಾಮಯ= ಯಾವ ವಿಧವಾದ ದೋಷಸ್ಪರ್ಶ ಇಲ್ಲದವನೇ ! ದಯದಿ, ಸಂತೈಸೆಂದು ಪ್ರಾರ್ಥಿಪುದು. ಹೀಗೆ ಪ್ರಾರ್ಥಿಸುತ್ತಾ ಕರ್ಮಗಳನ್ನು ಮಾಡಬೇಕೆಂದು ಅರ್ಥ.

ತಾತ್ಪರ್ಯ :—ಜಯಾಕಾಂತ, ಪರಮಾತ್ಮನು ಸಂಕರ್ಷಣ ರೂಪವನ್ನು ಸ್ವೀಕರಿಸಿದಾಗ ಲಕ್ಷ್ಮೀದೇವಿಯರು ಜಯಾ ಎಂಬ ಹೆಸರಿನಿಂದ ರೂಪಾಂತರವನ್ನು ತಾಳಿ ಸಂಕರ್ಷಣನ ಪತ್ನಿಯಾಗಿರುವರು. ಆದ್ದರಿಂದ ಜಯಾಕಾಂತನೆಂದರೆ ಸಂಕರ್ಷಣನೆಂದರ್ಥ. ಅತ್ರಿ ಋಷಿಗಳ ತಪಸ್ಸಿಗೆ ಮೆಚ್ಚಿ ತನ್ನ ದೇಹವನ್ನು “ ಪುತ್ರತ್ವೇನ ದತ್ತಃ ” ಪುತ್ರವಾತ್ಸಲ್ಯದಿಂದ ಲಾಲಿಸುವದಕ್ಕಾಗಿ ಕೊಟ್ಟನು. ಈ ರೀತಿಯಾಗಿ ಅತ್ರಿಯಲ್ಲಿ ಅವತಾರ ಮಾಡಿದ್ದರಿಂದ ದತ್ತಾತ್ರೇಯನೆಂದು ಹೆಸರು. ಪುತ್ರನೆಂದು ದತ್ತ ಮಾಡಿದ್ದರಿಂದ ದತ್ತ ಎಂತಲೂ, “ ಅತ್ರೇರಪತ್ಯಂಪುಮಾನಾತ್ರೇಯಃ ” ಅತ್ರಿಋಷಿಗಳ ಮಗನಾದುದರಿಂಪ ಆತ್ರೇಯನೆಂತೆಲೂ, ಎರಡೂ ಶೇರಿ ದತ್ತಾತ್ರೇಯ ಎಂದು ಹೆಸರಾಯಿತು. ಅಥವಾ “ ದದಾತಿ ಅಭೀಷ್ಟ ಮಿತಿದತ್ತಃ ” ಅಭೀಷ್ಟವನ್ನು ಭಕ್ತರಿಗೆ ಕೊಡುವವನಾದ್ದರಿಂದ ದತ್ತ ಎಂದು ಹೆಸರು. ಕಪಿಲ ಅಂದರೆ “ ಕಂ ಸುಖಂಪಿಬತೀತಿ ಕಪಿಃಲಾತಿ= ಭಕ್ತಾನ್‌ಸ್ವೀಕರೋತೀತಿ ಲಃ= ಕಪಿಶ್ಚಾ ಸೌಲಶ್ಚೇತಿಕಪಿಲಃ ” ಕಂ ಅಂದರೆ

ಸುಖ; ಪಿ ಅಂದರೆ ಪಾನ ಮಾಡುವವನು. ಒಟ್ಟು ಕಪಿ ಅಂದರೆ ಸುಖ ಸ್ವರೂಪನೆಂಬ ತಾತ್ಪರ್ಯ ; ಲಾತಿ ಅಂದರೆ ಸ್ವೀಕರಿಸುವುದು. ಭಕ್ತರನ್ನು ಸ್ವೀಕರಿಸುವವನೆಂದರ್ಥ. ಹೀಗೆ ಸುಖಸ್ವರೂಪನೂ, ಭಕ್ತೋದ್ಧಾರಕನೂ ಆದುದರಿಂದ ಕಪಿಲ ಎಂದು ಹೆಸರು. ಮಹಿದಾಸನೆಂಬುದು ದೇವರ್ಷಿ ಅವತಾರವು. ಮಹಿ ಅಂದರೆ ಪೂಜ್ಯರೆಂದರ್ಥ. ಲೋಕ ಪೂಜ್ಯರಾದ ಬ್ರಹ್ಮಾದಿಗಳೆಲ್ಲರೂ ಪರಮಾತ್ಮನಿಗೆ ದಾಸರಾಗಿರುವುದರಿಂದ ಮಹಿದಾಸನೆಂದು ಹೆಸರು. ಹರಿ= ದುರಿತನಿವರ್ತಕ, ಹಂಸ= ದುಃಖ ನಾಶಕನೆಂದರ್ಥ. ಮಿಕ್ಕದು ಪ್ರಸಿದ್ಧಿಯಾದ ಪದಗಳೇ ಇರುವವು ||೮||

ಅವತಾರಿಕೆ :—ಷಣ್ಣವತಿ ನಾಮಧೇಯದಿಂದ ಶ್ರೀ ಹರಿಯು ತನ್ನ ಭಕ್ತರು ಮಾಡುವ ಸತ್ಕರ್ಮಗಳನ್ನು ಸ್ವೀಕರಿಸಿ ಅವರನ್ನು ಸಂಸಾರದಿಂದ ಉದ್ಧಾರ ಮಾಡುತ್ತಾನೆಂದು ಹೇಳುತ್ತಾರೆ—

ಷಣ್ಣವತಿಎಂಬಕ್ಷರೆಡ್ಯನು
ಷಣ್ಣವತಿ ನಾಮದಲಿ ಕರೆಸುತ
ತನ್ನವರು ಸದ್ಭಕ್ತಿಯಿಂ ಮಾಡುತಿಹ ||
ಪುಣ್ಯಕರ್ಮವ ಸ್ವೀಕರಿಸಿ ಕಾ
ರುಣ್ಯಸಾಗರ ಸಲಹುವನು ಬ್ರ
ಹ್ಮಣ್ಯದೇವ ಭವಾಬ್ಧಿಪೋತ ಬಹುಪ್ರಕಾರದಲಿ ||

ಪದ್ಯಾರ್ಥ :—ಷಣ್ಣವತಿಯೆಂಬ ೯೬ ರೂಪಗಳುಳ್ಳ, ಅಕ್ಷರ= ಲಕ್ಷ್ಮೀದೇವಿಯರಿಂದ, ಈಡ್ಯನು= ಸ್ತುತ್ಯನಾದ, ಕಾರುಣ್ಯಸಾಗರ= ಕರುಣಾಸಮುದ್ರನಾದ, ಬ್ರಹ್ಮಣ್ಯದೇವ= ಬ್ರಾಹ್ಮಣರಲ್ಲಿ ಅನುಗ್ರಹ ಮಾಡುವ ಸ್ವಾಮಿಯು, ಭವಾಬ್ಧಿಪೋತ= ಸಂಸಾರವೆಂಬ ಸಮುದ್ರಕ್ಕೆ ಹಡಗಿನಂತಿರುವ, ಶ್ರೀಹರಿಯು, ಷಣ್ಣವತಿನಾಮದಲಿ ಕರೆಸುತ= ಷಣ್ಣವತಿ ಎಂಬ ಹೆಸರಿನಿಂದ ಕರೆಸಿಕೊಳ್ಳುತ್ತ, ತನ್ನವರು= ತನ್ನ ಭಕ್ತರು, ಸದ್ಭಕ್ತಿಯಿಂ ಮಾಡುತಿಹ, ಪುಣ್ಯಕರ್ಮವ= ಶ್ರಾದ್ಧಾದಿ ಕರ್ಮಗಳನ್ನು, ಸ್ವೀಕರಿಸಿ, ಬಹು ಪ್ರಕಾರದಲಿ, ಸಲಹುವನು.

ತಾತ್ಪರ್ಯ :—ಮೇಲೆ ೧-೨-೩-೬ನೆಯ ಪದ್ಯಗಳಲ್ಲಿ ಹೇಳಿರುವ ಪ್ರಕಾರ ಪರಮಾತ್ಮನು ೯೬ ರೂಪಗಳಿಂದ ಪಿತೃಗಳಲ್ಲಿ ಇರುವುದರಿಂದ ಷಣ್ಣವತಿ (ಅಂದರೆ ೯೬ ಎಂದರ್ಥ) ಈ ಹೆಸರಿನಿಂದ ಕರೆಸಿಕೊಳ್ಳುತ್ತ,

ಕರುಣಾಸಮುದ್ರನೂ, ಬ್ರಾಹ್ಮಣರಲ್ಲಿ ಪರಮ ಪ್ರೀತಿ ಉಳ್ಳವನೂ ಆದ ಸಂಸಾರ ಸಮುದ್ರಕ್ಕೆ ವಾಡೆಯಂತಿರುವ ಲಕ್ಷ್ಮೀವಂದ್ಯನಾದ ಶ್ರೀ ಹರಿಯು ತನ್ನ ಭಕ್ತರು ಮಾಡುವ ಶ್ರಾದ್ಧಾದಿ ಕರ್ಮಗಳನ್ನು ಸ್ವೀಕರಿಸಿ ಅವರಿಗೆ ಇಹದಲ್ಲೂ ಪರದಲ್ಲೂ ಸಹ ಸುಖವನ್ನು ಕೊಟ್ಟುದ್ಧರಿಸುವನು. ಅಕ್ಷರೆಡ್ಯನು ಅಂದರೆ "ಕ್ಷರಃಸರ್ವಾಣಿಭೂತಾನಿ ಕೂಟಸ್ಥೋಽಕ್ಷರ ಉಚ್ಯತೆ" ಎಂಬ ಗೀತಾವಾಕ್ಯಾನುಸಾರ, ಕ್ಷರ ಅಂದರೆ ಸರ್ವ ಪ್ರಾಣಿಗಳಿಗೆ ಹೆಸರು ; ಅಕ್ಷರ ಅಂದರೆ ಲಕ್ಷ್ಮೀದೇವಿಯರಿಗೆ ಹೆಸರು ಆದ್ದರಿಂದ ಲಕ್ಷ್ಮೀದೇವಿಯರಿಂದ ಸ್ತುತ್ಯನೆಂದು ಅರ್ಥ ॥೯॥

ಅವತಾರಿಕೆ :—ನಮ್ಮನ್ನು ಸೃಷ್ಟಿಸಿದವನು ರಕ್ಷಿಸದೇ ಇರುವನೇ? ಅವನನ್ನು ನಂಬಿ ಭಜಿಸಿದರೆ ಉದ್ಧಾರ ಮಾಡೇ ಮಾಡುವನೆಂದು ಹೇಳುತ್ತಾರೆ—

ದೇಹಗಳ ಕೊಡುವವನವರವ<br>
ರಹರವನು ಕೊಡದಿಹನೆ ಸುಮನಸ<br>
ಮಹಿತ ಮಂಗಳಚರಿತ ಸದ್ಗುಣಭರಿತನನವರತ ॥<br>
'ಅಹಿಕ ಪಾರತ್ರಿಕ ಸುಖಪ್ರದ<br>
ವಹಿಸಿ ಬೆನ್ನಲಿಬೆಟ್ಟ ಮೃತವ<br>
ದ್ರುಹಿಣ ಮೊದಲಾದರಿಗುಣಿಸಿದ ವಂದನಹಿತರನ ॥

ಪದ್ಯಾರ್ಥ :— ದೇಹಗಳ ಕೊಡುವವ=ಜೀವರಿಗೆ ದೇಹಗಳನ್ನು ಕೊಟ್ಟು ಸೃಷ್ಟಿ ಮಾಡುವ ಸ್ವಾಮಿಯು, ಅವರವರ=ಆಯಾ ಪ್ರಾಣಿಗಳ, ಅಹರವನು=ಯೋಗ್ಯತಾನುಸಾರವಾದ ಆಹಾರವನ್ನು, ಕೊಡದಿಹನೆ=ಕೊಡದೆ ಇರುವನೆ? ಸುಮನಸಮಹಿತ=ದೇವತೆಗಳಿಂದ ಪೂಜಿತನು, ಮಂಗಳಚರಿತ=ಮಂಗಳಕರವಾದ ಚರಿತ್ರೆಯುಳ್ಳವನು, ಸದ್ಗುಣಭರಿತ =ಉತ್ತಮ ಗುಣಗಳಿಂದ ಪೂರ್ಣನು, ಅನವರತ=ಸರ್ವ ಕಾಲದಲ್ಲೂ, ಅಹಿಕ=ಈ ಲೋಕದಲ್ಲೂ, ಪಾರತ್ರಿಕ=ಪರಲೋಕದಲ್ಲೂ ಕೂಡ, ಸುಖಪ್ರದ=ಸುಖವನ್ನು ಕೊಡುವವನು, ಬೆನ್ನಲಿ=ಕೂರ್ಮರೂಪದಿಂದ ತನ್ನ ಬೆನ್ನಿನಲ್ಲಿ, ಬೆಟ್ಟವ. ವಹಿಸಿ=ಹೊತ್ತು, ಅಮೃತವ, ದ್ರುಹಿಣ ಮೊದಲಾದವರಿಗೆ=ಬ್ರಹ್ಮದೇವರೇ ಮೊದಲಾಗಿ ಉಳ್ಳವರೆಂದರೆ ಇಂದ್ರಾದಿದೇವತೆಗಳೆಂದರ್ಥ ; ಇಂತಹ ದೇವತೆಗಳಿಗೆ, ಉಣಿಸಿದ ಅಹಿತರನ=ಇಂದ್ರಾದಿ

ದೇವತೆಗಳಿಗೆ ಶತ್ರುಗಳಾದ ಕಾಲನೇಮಿ ಮೊದಲಾದ ದೈತ್ಯರನ್ನು, ಮುರಿದನು=ಸಂಹರಿಸಿದನು.

ತಾತ್ಪರ್ಯ :—ಸರ್ವ ಪ್ರಾಣಿಗಳಿಗೂ ಶರೀರವನ್ನು ಕೊಟ್ಟು ಸೃಷ್ಟಿಸಿದ ಶ್ರೀ ಹರಿಯು ಅವರವರ ಯೋಗ್ಯತಾನುಸಾರವಾದ ಆಹಾರವನ್ನು ಕೊಡದೇ ಇರುವನೆ? ಭಾಗವತ ಪ್ರಥಮಸ್ಕಂಧದಲ್ಲಿ "ಅಹಸ್ತಾನಿ ಸಹಸ್ತಾನಾಮಪದ್ವೋದ್ವಿಚತುಷ್ಪದಾಂ ॥ ಅಣೂನಿತಾತ ಮಹತಾಂ ಜೀವೋಜೀವಸ್ಯಜೀವನಂ" ಕೈ ಉಳ್ಳ ಮನುಷ್ಯಾದಿಗಳಿಗೆ ಕೈ ಇಲ್ಲದ ಪ್ರಾಣಿಗಳೂ, ತೃಣಾದಿಗಳೂ ಜೀವರೇ ಆದುದರಿಂದ ಸಸ್ಯಾದಿಗಳಿಂದ ಹುಟ್ಟುವ ಭತ್ತ, ಜೋಳ ಮೊದಲಾದವೆಲ್ಲವೂ ಇವರಲ್ಲೇ ಶೇರಿದಂತಾಯಿತು ಇಂತಹ ವಸ್ತುಗಳನ್ನು ಆಹಾರವೆಂದು ಕಲ್ಪಿಸಿರುವನು. ಎರಡು ಕಾಲು ನಾಲ್ಕು ಪಾದಗಳುಳ್ಳ ಪ್ರಾಣಿಗಳಿಗೆ ಕಾಲಿಲ್ಲದ ಪ್ರಾಣಿಗಳು; ಅಂದರೆ ಗೋವು, ಕುದುರೆ, ಆನೆ ಮೊದಲಾದವುಗಳಿಗೆ ತೃಣಗಳು, ಸೊಪ್ಪುಗಳು, ಧಾನ್ಯಗಳು ಇಂತಹ ಆಹಾರಗಳನ್ನು ಕ್ಲಪ್ತ ಮಾಡಿರುವನು. ಸಣ್ಣಸಣ್ಣ ಪ್ರಾಣಿಗಳನ್ನು ದೊಡ್ಡದೊಡ್ಡ ಪ್ರಾಣಿಗಳಿಗೆ ಆಹಾರವನ್ನಾಗಿ ಮಾಡಿರುವನು. ಅಂದರೆ, ಹುಲಿ ಮೊದಲಾದವುಗಳಿಗೆ ಕುರಿ, ಮೇಕೆ ಮೊದಲಾದವುಗಳನ್ನೂ, ನಾಯಿ ಮೊದಲಾದವುಗಳಿಗೆ ಅವುಗಳಿಗಿಂತಲೂ ಸಣ್ಣವಾದ ಬೆಕ್ಕು ಮೊದಲಾದವುಗಳನ್ನೂ, ಬೆಕ್ಕು ಮೊವಲಾದವುಗಳಿಗೆ ಇಲಿ ಮೊದಲಾದವುಗಳನ್ನೂ, ಕೋಳಿ, ಕಾಗೆ, ಗುಬ್ಬಿ ಮೊದಲಾದವುಗಳಿಗೆ ಸಣ್ಣಸಣ್ಣ ಕ್ರಿಮಿಕೀಟಾದಿಗಳನ್ನೂ, ನೀರಿನೊಳಗಿರುವ ಮತ್ಸ್ಯಾದಿಗಳಿಗೆ ಅಲ್ಲಿರುವ ಜಲಚರಪ್ರಾಣಿಗಳನ್ನು ಆಹಾರವನ್ನಾಗಿ ಕಲ್ಪಿಸಿರುವನು. ಅಂತು ಒಂದು ಜೀವಕ್ಕೆ ಮತ್ತೊಂದು ಜೀವವನ್ನು ಜೀವನ ಎಂದು ಕಲ್ಪಿಸಿರುವನು. ನಾವು ಭ್ರಾಂತಿಯಿಂದ ನಮ್ಮ ಹೆಂಡರು ಮಕ್ಕಳನ್ನು ಸಾಕುತ್ತೇವೆಂದು ತಿಳಿದುಕೊಳ್ಳುವೆವೇ ಹೊರತು ಸಾಕಲು ನಾವು ಸ್ವತಂತ್ರರಲ್ಲ ಏಕೆಂದರೆ "ಕಾಲಕರ್ಮಗುಣಾಧೀನೋ ದೇಹೋಯಂಪಾಂಚಭೌತಿಕಃ ॥ ಕಥಮನ್ಯಾಂಸ್ತು ಗೋಪಾಯೇತ್ಸರ್ಪಗ್ರಸ್ತೋಯಥಾಪರಂ" ಕಾಲ, ಪ್ರಾರಬ್ಧ, ಕರ್ಮ, ಪ್ರಕೃತಿಗುಣಗಳು ಇವುಗಳಿಗೆ ಅಧೀನವಾದ ಪಂಚಭೂತಗಳಿಂದಾದ ಶರೀರವಿದು. ಅಂದರೆ ನಮ್ಮ ಶರೀರವೇ ನಮಗೆ ಸ್ವಾಧೀನವಿಲ್ಲ. ಬಾಲ್ಯದಲ್ಲಿ ಪರಾಧೀನತೆ ಎಲ್ಲರಿಗೂ ತಿಳಿದಿದೆ. ಮುದುಕನಾದಮೇಲೂ

ಪರಾಧೀನವೆಂಬುವದು ತಿಳಿದ ವಿಷಯವೆ. ಮಧ್ಯಕಾಲದಲ್ಲಿ ನಾನು ಸ್ವತಂತ್ರದಿಂದ ಸಂಪಾದನೆ ಮಾಡುತ್ತೇನೆಂದು ತಿಳಿದಿರುವನು. ಅದು ಭ್ರಾಂತಿ. ಆಗಲೂ ಇವನ ಪ್ರಾಚೀನ ಕರ್ಮಾನುಸಾರವಾಗಿ ನಡೆಯುವುದೇ ಹೊರತು, ನಾವು ಏನು ಪ್ರಯತ್ನ ಮಾಡಿದರೂ ನಮ್ಮ ಇಷ್ಟಾನುಸಾರವಾಗಿ ನಡೆಯುವಂತಿಲ್ಲ. ಇಷ್ಟೇಕೆ ! ನಮ್ಮ ದೇಹವು ನಮ್ಮ ಸ್ವಾಧೀನದಲ್ಲಿ ಇದ್ದುದೇ ಆದರೆ ನಾವು ಮುದುಕರಾದರೆ ಹಲ್ಲು ಹೋಯಿತು ; ಕಿವಿ ಹೋಯಿತು ; ಕಣ್ಣು ಹೋಯಿತು ಎಂದು ವ್ಯಸನಪಡುವುದೇಕೆ ? ಮುಖ ವಿಕಾರ ಹೊಂದುವದೇಕೆ? ನಮ್ಮ ಸ್ವತಂತ್ರದಿಂದ ನಾವು ಸ್ವೇಚ್ಛೆಯಾಗಿ ಯೌವನದಲ್ಲಿ ಹೇಗೋ ಹಾಗೆ ನಮ್ಮ ಶರೀರವನ್ನು ಇಟ್ಟುಕೊಳ್ಳಬಹುದಾಗಿತ್ತು ಹಾಗೇಕಿಲ್ಲ ! ಇದು ನೋಡುವಾಗಲೆ ನಮ್ಮ ದೇಹವು ನಮ್ಮ ಸ್ವಾಧೀನದಲ್ಲಿಲ್ಲವೆಂದು ಗೊತ್ತಾಗುವುದಿಲ್ಲವೆ ? ಹೀಗಿರಲು ನಾವು ಮತ್ತೊಬ್ಬರನ್ನು ಕಾಪಾಡುವದೆಂತು ? ನಾವು ಕಾಪಾಡುತ್ತೇವೆಂದು ಹೇಳುವುದು ಹೇಗಿದೆಯೆಂದರೆ '' ಸರ್ಪಗ್ರಸ್ತೋಯಥಾಪರಂ '' ಒಂದು ಹಾವಿನ ಬಾಯಲ್ಲಿ ಮರಣೋನ್ಮುಖವಾಗಿ ಶಿಕ್ಕಿಕೊಂಡಿರುವ ಒಂದು ಕಪ್ಪೆಯು ಮತ್ತೊಂದು ಹಾವಿನ ಬಾಯಿಯಲ್ಲಿ ತಗಲಿಕ್ಕೊಂಡು ಪ್ರಾಣ ಬಿಡುತ್ತಿರುವ ಕಪ್ಪೆಯನ್ನು ಬಿಡಿಸುತ್ತೇನೆಂದು ಪ್ರಯತ್ನಪಡುವುದು ಹೇಗೊ ಹಾಗೆ. ಆದ್ದರಿಂದ ದೇವತಾವಂದ್ಯನೂ, ಮಂಗಳಚರಿತನೂ, ಸದ್ಗುಣಪೂರ್ಣನೂ ಆದ ಶ್ರೀ ಹರಿಯನ್ನು ನೀನೇ ಗತಿಯೆಂದು ನಂಬಿದರೆ ನಮ್ಮನ್ನು ರಕ್ಷಿಸದೇ ಬಿಡುವನೇ ? ಇಹಲೋಕದಲ್ಲೂ, ಪರಲೋಕದಲ್ಲೂ ನಮಗೆ ಸುಖವನ್ನು ಕೊಟ್ಟು ನಮ್ಮ ದುಃಖಗಳನ್ನು ಪರಿಹರಿಸಿ ಸರ್ವ ಕಾಲದಲ್ಲೂ ಸಂರಕ್ಷಣೆ ಮಾಡೇ ಮಾಡುವನು. ಇಂದ್ರಾದಿ ದೇವತೆಗಳು ರಾಜ್ಯಭ್ರಷ್ಟರಾಗಿ ಪರಮಾತ್ಮನನ್ನು ಮೊರೆಹೊಕ್ಕಾಗ ಪರಮಾತ್ಮನು ಅಮೃತ ಮಥನ ಕಾಲದಲ್ಲಿ ಕಡಗೋಲು ರೂಪವಾದ ಮಂದರಪರ್ವತವು ಕ್ಷೀರಸಮುದ್ರದಲ್ಲಿ ಮುಣಗಿ ಹೋಗಲು ಕೂರ್ಮರೂಪವನ್ನು ತಾಳಿ ಬೆಟ್ಟವನ್ನು ಹೊತ್ತುಕೊಂಡು ದೇವತೆಗಳಿಗೋಸ್ಕರ ತಾನೇ ಅಮೃತಮಥನ ಮಾಡಿ ಇಂದ್ರಾದಿ ದೇವತೆಗಳಿಗೆ ಅಮೃತವನ್ನುಣಿಸಿ, ಅವರ ಶತ್ರುಗಳನ್ನು ಸಂಹಾರ ಮಾಡಲಿಲ್ಲವೆ ? ಅವರು ನಂಬಿದಂತೆ ನಾವೂ ನಂಬದರೆ ನಮ್ಮನ್ನೇಕೆ ಸಂರಕ್ಷಣೆ ಮಾಡಲಾರನು ? ಮಾಡೇ ಮಾಡುವನು. ಇಲ್ಲಿ ದ್ರುಹಿಣ ಮೊದಲಾದವರಿಗೆ ಎಂಬ

ಪದದಲ್ಲಿ ದ್ರುಹಿಣ ಅಂದರೆ ಬ್ರಹ್ಮ ಮೊದಲಾದ ದೇವತೆಗಳಿಗೆ ಎಂದರ್ಥವಾದರೂ, ಬ್ರಹ್ಮದೇವರಿಗೆ ಅಮೃತಪ್ರಾಶನೆ ಮಾಡಿದ್ದರಿಂದ ಅಮರರಾಗಬೇಕಾಗಿಲ್ಲ. ಅವರಿಗೆ ಬ್ರಹ್ಮಕಲ್ಪ ೧ ಕಲ್ಪಾಯುಷ್ಯ ಮೊದಲೇ ಕ್ಲಿಪ್ತವಾಗಿರುವುದು. ರುದ್ರ ಗರುಡ ಶೇಷರಿಗೂ ಇಲ್ಲ. ಇಂದ್ರಾದಿಗಳಿಗೆ ಯುದ್ಧಾದಿಗಳಲ್ಲಿ ಮರಣ ಇಲ್ಲದೆ ಇರುವದಕ್ಕಾಗಿ ಅಮೃತಪ್ರಾಶನದಿಂದ ಅಮರರಾಗಬೇಕೆಂದು ಮೊದಲಿನಿಂದಲೂ ಕ್ಲಿಪ್ತವಾಗಿರುವುದು. ಆದ್ದರಿಂದ ಬ್ರಹ್ಮದೇವರು ಮೊದಲಾದವರು ಅಂದರೆ ಬ್ರಹ್ಮದೇವರು ಯಾವ ದೇವತೆಗಳಿಗೆ ಮೊದಲಾಗಿರುವರೋ ಆದೇವತೆಗಳೆಂದರೆ,ಇಂದ್ರಾದಿಗಳೆಂದು ಅರ್ಥ ಮಾಡತಕ್ಕದ್ದು. ಭಾಗವತ ಚತುರ್ಥ ಸ್ಕಂಧದಲ್ಲಿ ದಕ್ಷಾಧ್ವರ ಧ್ವಂಸವನ್ನು ಹೇಳುವಾಗ ಬ್ರಹ್ಮಾದಿಗಳು ರುದ್ರದೇವರಿಗೆ ನಮಸ್ಕಾರಮಾಡುತ್ತಿರುವರು ಎಂಬಂತೆ "ಬ್ರಹ್ಮಾದಯಸ್ತಮವಕೀರ್ಯಜಟಾಃಸ್ಮಶಾನೇ" ಎಂಬ ವಾಕ್ಯದಿಂದ ತೋರುವುದು.; ಅಲ್ಲಿ "ಬ್ರಹ್ಮಾದಯಃ" ಎಂಬ ಪದಕ್ಕೆ ಬ್ರಹ್ಮಾ ಆದಿಃ ಪಿತಾ ಯೇಷಾಂತೆ ಬ್ರಹ್ಮಾದಯಃ ಸನಕಾದಯಃ ಎಂದು ವ್ಯಾಖ್ಯಾನ ಮಾಡಿರುವರು ಅಂದರೆ ಬ್ರಹ್ಮದೇವರು ಯಾರಿಗೆ ಆದಿಯೋ ಅಂದರೆ ತಂದೆಯೋ ಅವರು ಬ್ರಹ್ಮಾದಿಗಳು ಎಂದು ಅರ್ಥ. ಆದ್ದರಿಂದ ಬ್ರಹ್ಮದೇವರ ಮಕ್ಕಳಾದಸನಕಾದಿಗಳಿಗೆ ಬ್ರಹ್ಮಾದಿಗಳೆಂದು ಹೇಳಿರುವರು ಇಲ್ಲೂ ಬ್ರಹ್ಮದೇವರು ರುದ್ರದೇವರು ಅಮೃತಪ್ರಾಶನಕಾಲದಲ್ಲಿ ಅಲ್ಲಿ ಇರಲಿಲ್ಲವೆಂದು ಭಾಗವತಾದಿಗಳಲ್ಲಿ ಇರುವುದರಿಂದ ಇಂದ್ರ ಮೊದಲಾದವರೆಂದು ಅರ್ಥ ಮಾಡುವುದು ನ್ಯಾಯ. ||೧೦||

ಅವತಾರಿಕೆ :—ಮೇಲೆ ಹೇಳಿದ ಅನ್ನ ದಾತೃತ್ವ ವಿಷಯವನ್ನೇ ಮುಂದಿನ ಎರಡು ಪದ್ಯಗಳಿಂದ ವಿವರ ಮಾಡುತ್ತಾರೆ—

ದ್ರುಹಿಣ ಮೊದಲಾದಮರರಿಗೆ ಸ
ನ್ಮಹಿತ ಮಾಯಾರಮಣ ಶಶಿನೆ
ಸ್ವಹನೆನಿಸಿ ಸಂತೃಪ್ತಿ ಬಡಿಸುವ ಸರ್ವಕಾಲದಲಿ||
ಪ್ರಹಿತ ಸಂಕರ್ಷಣನು ಪಿತೃಗಳ
ಗಹರನೆನಿಪ ಸ್ವಧಾಖ್ಯರೂಪದಿ
ಮಹಿಜಫಲ ತೃಣಪೋಷಿನಲಿ ಪ್ರದ್ಯುಮ್ನನನಿರುದ್ಧ||

ಪದ್ಯಾರ್ಥ :—ದ್ರುಹಿಣ ಮೊದಲಾದಮರರಿಗೆ= ಬ್ರಹ್ಮ ಮೊದಲಾದ ದೇವತೆಗಳಿಗೆ, ಸನ್ಮಹಿತ= ಸಜ್ಜನರಿಂದ ಪೂಜ್ಯನಾದ, ಮಾಯಾ

ರಮಣ= ಮಾಯಾರೂಪಿಯಾದ ಲಕ್ಷ್ಮೀದೇವಿಯರಿಂದ ರಮಿಸುವ ಶ್ರೀ ವಾಸುದೇವನು, ಸ್ವಹನೆನಿಸಿ= ಸ್ವಾಹಾಶಬ್ದ ವಾಚ್ಯನಾಗಿ, ಸರ್ವಕಾಲದಲಿ, ಸಂತೃಪ್ತಿಬಡಿಸುವ= ಚೆನ್ನಾಗಿ ತೃಪ್ತಿಪಡಿಸುವನು, ಪ್ರಹಿತ= ವಿಶೇಷವಾಗಿ ಎಲ್ಲರಿಗೂ ಹಿತವನ್ನು ಮಾಡುವ, ಸಂಕರ್ಷಣನು, ಸ್ವಧಾಖ್ಯರೂಪದಿ= ಸ್ವಧಾ ಶಬ್ದವಾಚ್ಯನಾಗಿ, ಅಹರನೆನಿಪ= ಅಹಾರನೆಂದೆನಿಸುವನು, (ಈ ಷಟ್‌ಪದಿಯಲ್ಲಿರುವ "ಮಹಿಜ ಫಲತೃಣ ಪೆಸರಿನಲಿ ಪ್ರದ್ಯುಮ್ನ ನನಿರುದ್ಧ" ಎಂಬ ೬ನೆಯ ಪಾದವು, ಮುಂದಿನ ಪದ್ಯದಲ್ಲಿ ಅನ್ನನೆನಿಸುವ ನೃಪಶುಗಳಿಗೆ ಎಂಬ ಮೊದಲನೆಯ ಪಾದದಲ್ಲಿ ಅನ್ವಯಿಸುವುದು)

ತಾತ್ಪರ್ಯ :—ಯಾಗಾದಿಗಳಲ್ಲಿ ಆಹುತಿಗಳನ್ನು ಕೊಡುವಕಾಲ ದಲ್ಲಿ ದೇವತೆಗಳಿಗೆ ಬ್ರಹ್ಮಣೇಸ್ವಾಹಾ, ರುದ್ರಾಯಸ್ವಾಹಾ, ಎಂದು ಸ್ವಾಹಾಕಾರದಿಂದಲೂ, ಪಿತೃಗಳಿಗೆ ಸ್ವಧಾಕಾರದಿಂದಲೂ ಕೊಡುವವಿಧಿ ಇರುವುದು, ಆದ್ದರಿಂದ ಶ್ರೀ ಮಾಯಾಪತಿಯಾದ ವಾಸುದೇವನು ಬ್ರಹ್ಮಾದಿ ದೇವತೆಗಳಿಗೆ ಸ್ವಹಾನಾಮಕನಾಗಿ ತಾನೇ ಅನ್ನರೂಪನಾ ಗಿದ್ದು ಅವರನ್ನು ತೃಪ್ತಿಪಡಿಸುವನು ಸಂಕರ್ಷಣನು ಸ್ವಧಾ ಶಬ್ದ ವಾಚ್ಯನಾಗಿ ಅನ್ನವಾಗಿದ್ದು ಪಿತೃಗಳನ್ನು ತೃಪ್ತಿಪಡಿಸುವನೆಂದರ್ಥ ||೧೧||

ಅವತಾರಿಕೆ :—ಅನ್ನಮಯನಾದ ಶ್ರೀಹರಿಯು ಸಕಲ ಪ್ರಾಣಿಗೆ ಳಿಗೂ ಅನ್ನವನ್ನು ಕೊಡುವನೆಂದು ಉಪಾಸನೆ ಮಾಡುವವರಿಗೆ ತನ್ನ ಅಪ ರೋಕ್ಷವನ್ನಿತ್ತು ಪರಲೋಕದಲ್ಲೂ ಸಾಲೋಕ್ಯಾದಿ ಮುಕ್ತಿಯನ್ನು ಕೊಡು ವನೆಂದು ಹೇಳುತ್ತಾರೆ—

ಅನ್ನನೆನಿಸುವ ನೃಪಶುಗಳಿಗೆ
ಹಿರಣ್ಯಗರ್ಭಾಂಡದೊಳು ಸಂತತ
ತನ್ನನೀಪರಿಯಿಂದುಪಾಸನೆಗೈವ ಧಿಳಕರನ ||
ಬನ್ನಪಡಿಸದೆ ಭವಸಮುದ್ರ ಮ
ಹೋನ್ನತಿಯ ದಾಟಿಸಿ ಚತುರವಿಧ
ಪನ್ನಮಯನಾತ್ಮಪ್ರದರ್ಶನ ಸುಖವನೀವಸದಾ ||

ಪದ್ಯಾರ್ಥ :—ಹಿರಣ್ಯಗರ್ಭಾಂಡದೊಳು= ಬ್ರಹ್ಮಾಂಡದೊಳಗೆ, (ಮಹಿಜ= ಭೂಮಿಯಲ್ಲಿ ಉತ್ಪನ್ನವಾದ, ಫಲ, ತೃಣಪೆಸರಿನಲಿ= ಧಾನ್ಯ ಗಳು ಫಲಗಳು, ತೃಣಗಳು ಈ ಹೆಸರುಗಳಿಂದ, ಪ್ರದ್ಯುಮ್ನನು, ಅನಿರು

ದ್ಧನು,) ನೃಪಶುಗಳಿಗೆ= ಮನುಷ್ಯರಿಗೂ, ಪಶುಗಳಿಗೂ ಸಹ, ಅನ್ನನೆನಿಸುವ= ತೃಣಧಾನ್ಯಾದಿರೂಪಗಳಿಂದ ಭೋಜ್ಯರೂಪನಾಗಿರುವನು. ತನ್ನನು (ಶ್ರೀಪರಮಾತ್ಮನನ್ನು ಈ ಪರಿಯಿಂದ= ಪರಮಾತ್ಮನು ಅನ್ನಮಯನೆಂದು, ಸಂತತ= ಸರ್ವಕಾಲದಲ್ಲಿಯೂ, ಉಪಾಸನೆ ಗೈವ = ಉಪಾಸನೆಯನ್ನು ಮಾಡುವ ಭಕತರನ= ಭಕ್ತರನ್ನು, ಬನ್ನಪಡಿಸದೆ= ಯಾವ ವಿಧವಾದ ಕಷ್ಟವನ್ನೂ ಪಡಿಸದೆ, ಚತುರ್ವಿಧವನ್ನ ಮಯನು= ಖಾದ್ಯ, ಪೇಯ, ಲೇಹ್ಯ, ಚೋಷ್ಯವೆಂಬ ೪ ವಿಧದ ಅನ್ನಸ್ವರೂಪನಾದ ಶ್ರೀಹರಿಯು, ಭವ ಸಮುದ್ರಮಹೋನ್ನತಿಯ= ದಾಟಲಶಕ್ಯವಾದ ಸಂಸಾರ ಸಮುದ್ರವನ್ನು ದಾಟಿಸಿ, ಆತ್ಮಪ್ರದರ್ಶನಸುಖವನ್ನು= ಇಹದಲ್ಲಿ ತನ್ನ ಅಪರೋಕ್ಷ ದರ್ಶನ ಸುಖವನ್ನು ಮುಕ್ತಿಯಲ್ಲಿ ಸದಾ ಭಗವದ್ರೂಪ ಸಂದರ್ಶನ ಸುಖವನ್ನೂ, ಈವ= ಕೊಡುವನು

ತಾತ್ಪರ್ಯ :—ಬ್ರಹ್ಮಾಂಡದೊಳಗೆ ಸಕಲ ಪ್ರಾಣಿಗಳಿಗೂ ಅವರ ವರಯೋಗ್ಯತಾನುಸಾರವಾಗಿ ಯಾವ ಯಾವ ಪ್ರಾಣಿಗಳಿಗೆ ಯಾವಯಾವುದು ಆಹಾರವೋ ಅಂದರೆ ಮನುಷ್ಯರಿಗೆ ಖಾದ್ಯ, ಲೇಹ್ಯ, ಚೋಷ್ಯ, ಪೇಯ, ಇದರರ್ಥ ತಿನ್ನುವುದು. ಅನ್ನಾದಿಗಳಿಗೆ ಸಾಧಕವಾದ ಹಿಟ್ಟು, ಮೆಣಸು ಚಟ್ಟಣಿ ಮೊದಲಾದವು,ಕುಡಿಯುವುದುಯೆಂದು ೪ ಪ್ರಕಾರ. ಪಶು ಮೊದಲಾದವುಗಳಿಗೆ ತೃಣಾದಿಗಳು, ಈ ಹೆಸರುಗಳಿಂದ ಪ್ರದ್ಯುಮ್ನನೂ, ಅನಿರುದ್ಧನೂ ತೃಪ್ತಿಪಡಿಸುವರು. ಹೀಗೆ ಸಕಲ ಪ್ರಾಣಿಗಳೂ ಭುಂಜಿಸುವ ಅನ್ನರೂಪನಾಗಿ ಪರಮಾತ್ಮನೇ ಯಲ್ಲರನ್ನೂ ತೃಪ್ತಿಪಡಿಸುವನು. "ಅನ್ನಂಬ್ರಹ್ಮೇತಿವ್ಯಜಾನಾತ್" ಎಂಬ ಉಪನಿಷದ್ವಾಕ್ಯಾನುಸಾರವಾಗಿ ಪರಮಾತ್ಮನನ್ನು ಅನ್ನನೆಂದು ಉಪಾಸನೆಮಾಡಬೇಕೆಂದರ್ಥ. ಯದ್ಯಪಿ ಅನ್ನಶಬ್ದಕ್ಕೆ "ಅತ್ತೀತ್ಯನ್ನಂ" ಪ್ರಪಂಚವನ್ನೆಲ್ಲ ಭಕ್ಷಿಸುವುದರಿಂದ ಪರಮಾತ್ಮನಿಗೆ ಅನ್ನನೆಂದು ಹೆಸರು ಎಂದು ಅರ್ಥಮಾಡಿರುವರು. ಆದ್ದರಿಂದ ಪ್ರಪಂಚದಲ್ಲಿ ಅನ್ನರೂಪನಾಗಿ ಇರುವುದರಿಂದಲೂ, ಪ್ರಳಯಕಾಲದಲ್ಲಿ ಪ್ರಪಂಚವನ್ನು ತನ್ನ ಉದರದಲ್ಲಿ ಇಟ್ಟುಕೊಳ್ಳುವುದರಿಂದಲೂ ಅನ್ನನೆಂದು ಪರಮಾತ್ಮನಿಗೆ ಹೆಸರು. ಪ್ರಕೃತ ಹೀಗೆ ಪರಮಾತ್ಮನು ಅನ್ನರೂಪನಾಗಿ ಇರುವನೆಂದು ಯಾರು ಉಪಾಸನೆ ಮಾಡುವರೋ ಅಂತಹ ಭಕ್ತರನ್ನು ಸಂಸಾರ

ದಲ್ಲಿ ಕಷ್ಟಪಡಿಸದೆ ದಾಟಲಶಕ್ಯವಾದ ಸಂಸಾರವೆಂಬ ಸಮುದ್ರದಿಂದ ಪಾರಗಾಣಿಸಿ ಚತುರ್ವಿಧ ಅನ್ನಮಯನಾದ ಶ್ರೀಹರಿಯು ಇಹದಲ್ಲಿ ತನ್ನ ಅಪರೋಕ್ಷ ದರ್ಶನಸುಖವನ್ನು ಕೊಟ್ಟು ಸಂಪೂರ್ಣಸಾಧನೆ ಮಾಡಿಸಿ ಮುಕ್ತಿಯಲ್ಲಿ ಸಾಮೀಪ್ಯಾದಿ ಸ್ಥಾನವನ್ನು ಕೊಟ್ಟು ಅಲ್ಲಿಯೂ ತನ್ನ ಸಂದರ್ಶನಸುಖವನ್ನು ಸರ್ವದಾ ಕೊಡುತ್ತಾ ಪಾಲಿಸುವನು ॥೧೨॥

ಪ್ರತಿದಿವಸವೂ ನಾವು ಮಾಡುವ ನೀಚೋಚ್ಚ ಕರ್ಮಗಳನ್ನು ಪರಮಾತ್ಮನೇ ಮಾಡಿಸಿದನೆಂದು ತಿಳಿದು ಭಕ್ತಿಪೂರ್ವಕ ಆತನಿಗೆ ಅರ್ಪಿಸಿದರೆ ಆತನು ನಮ್ಮನ್ನು ಉದ್ಧಾರಮಾಡುವನೆಂದು ಹೇಳುತ್ತಾರೆ—

ಮನವಚನಕಾಯಗಳದೆಶೆಯಿಂ
ದನುದಿನದಿ ಬಿಡದಾಚರಿಸುತಿ
ಪ್ಪನುಚಿತೋಚಿತ ಕರ್ಮಗಳ ಸದ್ಭಕ್ತಿಪೂರ್ವಕದಿ॥
ಅನಿಲದೇವನೊಳಿಪ್ಪ ನಾರಾ
ಯಣಗಿದನ್ನವು ಯೆಂದು ಕೃಷ್ಣಾ
ರ್ಪಣವೆನುತ ಕೊಡೆ ಸ್ವೀಕರಿಸಿ ಸಂತೃಪ ಕರುಣಾಳು॥

ಪದ್ಯಾರ್ಥ :—ಮನವಚನ ಕಾಯಗಳ ದೆಶೆಯಿಂದ= ಮನಸ್ಸಿನಿಂದಲೂ, ವಾಕ್ಯದಿಂದಲೂ, ಶರೀರದಿಂದಲೂ, ಅನುದಿನದಿ= ಪ್ರತಿದಿವಸದಲ್ಲೂ, ಬಿಡದೆ ಆಚರಿಸುತ್ತಿಪ್ಪ= ಮಾಡುತ್ತಿರುವ, ಅನುಚಿತ= ಮಾಡಬಾರದ, ಉಚಿತ= ಮಾಡಬೇಕಾದ, ಕರ್ಮಗಳ= ಕರ್ಮಗಳನ್ನು, ಸದ್ಭಕ್ತಿಪೂರ್ವಕದಿ, ಅನಿಲದೇವನೊಳಿಪ್ಪ= ಭಾರತೀರಮಣ ಮುಖ್ಯ ಪ್ರಾಣಾಂತರ್ಗತನಾದ, ನಾರಾಯಣಗೆ, ಇದು ಅನ್ನವೆಂದು, ಕೃಷ್ಣಾರ್ಪಣವೆನುತ, ಕೊಡೆ= ಕೊಡಲು (ಸಮರ್ಪಿಸಲು) ಕರುಣಾಳು= ಕರುಣಾಳುವಾದ ಶ್ರೀಹರಿಯು, ಸ್ವೀಕರಿಸಿ, ಸಂತೃಪ= ಸಂತೃಪಿಸುವನು.

ತಾತ್ಪರ್ಯ :—ಮನೋವಾಕ್ಕಾಯಗಳಿಂದ ನಾವು ನಿತ್ಯದಲ್ಲೂ ಮಾಡುವ ಪುಣ್ಯ ಪಾಪ ಕರ್ಮಗಳನ್ನು ಪರಮಾತ್ಮನೇ ಮಾಡಿಸುವನೆಂದು ತಿಳಿದು ದೃಢವಾದ ಭಕ್ತಿಯಿಂದ ಇವೆಲ್ಲವೂ ಪರಮಾತ್ಮನಿಗೆ ಅನ್ನವು ಯೆಂದು ಭಾವಿಸಿ, ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಂ, ಶ್ರೀಕೃಷ್ಣಾರ್ಪಣಮಸ್ತು, ಎಂದು ಸಮರ್ಪಿಸಿದರೆ ಪರಮಾತ್ಮನು ಸ್ವೀಕರಿಸಿ ಪಾಪಗಳನ್ನು ಸುಟ್ಟು, ಪುಣ್ಯಗಳನ್ನು

ವೃದ್ಧಿಗೊಳಿಸಿ, ಕರುಣಾಸಮುದ್ರನಾದ ಸ್ವಾಮಿಯು ನಮ್ಮನ್ನು ಸಂರಕ್ಷಿಸುವನು ||೧೩||

ಅವತಾರಿಕೆ :—ಸಪ್ತಾನ್ನಲಕ್ಷಣವನ್ನು ತಿಳಿದು ಸಪ್ತಾನ್ನಮಯನು ಪರಮಾತ್ಮನೆಂದು ಭಾವಿಸಿ ಪೂಜಿಸಬೇಕೆಂದು ಹೇಳುತ್ತಾರೆ—

ಏಳುವಿಧ ಅನ್ನಪ್ರಕರ್ಣವ
ಕೇಳಿ ಕೋವಿದರಾಸ್ಯದಿಂದಲಿ
ಆಲಸವ ಮಾಡದಲೆ ಅನಿರುದ್ಧಾದಿರೂಪಗಳ||
ಕಾಲಕಾಲದಿ ನೆನೆದು ಪೂಜಿಸು
ಸ್ಥೂಲಮತಿಗಳಿಗಿದನು ಪೇಳದೆ
ಶ್ರೀಲಕುಮಿವಲ್ಲಭನೇ ಅನ್ನಾದನ್ನ ಅನ್ನದನು ||

ಪದ್ಯಾರ್ಥ :—ಏಳುವಿಧ=೭ ವಿಧವಾದ ಅನ್ನ ಪ್ರಕರ್ಣವ= ಅನ್ನಪ್ರಕಾರಗಳನ್ನು, ಕೋವಿದರ= ಜ್ಞಾನಿಗಳ, ಆಸ್ಯದಿಂದಲಿ= ಮುಖದಿಂದ ಕೇಳಿ. ಆಲಸವ= ಆಲಸ್ಯವನ್ನು, ಮಾಡದಲೆ, ಅನಿರುದ್ಧಾದಿರೂಪಗಳ= ಅನಿರುದ್ಧ ಮೊದಲಾದ ರೂಪಗಳನ್ನು, ಕಾಲಕಾಲದಿ= ಆಯಾ ಕಾಲಗಳಲ್ಲಿ, ನೆನದು= ಸ್ಮರಿಸುತ್ತಾ, ಸ್ಥೂಲಮತಿಗಳಿಗೆ= ಸಾಧಾರಣವಾಗಿ ಹೆಂಡರು ಮಕ್ಕಳು ಮೊದಲಾದ ಗೃಹಕೃತ್ಯಲೋಲುಪರಾಗಿ ಭಗವದ್ವಿಷಯ ಜ್ಞಾನಭಕ್ತಿಯು ಲೇಶಮಾತ್ರವು ಇಲ್ಲದವರಿಗೆ ಇದನುಪೇಳದೆ, ಶ್ರೀಲಕುಮಿವಲ್ಲಭನೇ = ಶ್ರೀಲಕ್ಷ್ಮೀಪತಿಯೇ ಅನ್ನಾದ = ಅನ್ನವನ್ನು ಭೋಕ್ತೃಗಳಲ್ಲಿದ್ದು ಭುಂಜಿಸುವವನೂ, ಅನ್ನ= ಅನ್ನಮಯನೂ, ಅನ್ನದನು=ಅನ್ನವನ್ನು ಕೊಡುವವನು ಎಂದು ಪೂಜಿಸು.

ತಾತ್ಪರ್ಯ :—೧೧, ೧೨, ೧೩ನೆ ಮೂರು ಪದ್ಯಗಳಿಂದ ೭ ವಿಧವಾದ ಅನ್ನಪ್ರಕರಣವನ್ನು ಹೇಳಿದರು. ಆ ಸಪ್ತಾನ್ನವನ್ನೇ ಕ್ರೋಢೀಕರಿಸಿ ಈ ಪದ್ಯದಲ್ಲಿ ಹೇಳುತ್ತಾರೆ—ಏಳು ವಿಧ (ಸಪ್ತಾನ್ನ) ಅನ್ನಪ್ರಕರಣವನ್ನು ಬೃಹದಾರಣ್ಯೋಪನಿಷತ್ತಿನಲ್ಲಿ ವಿಶದ ಮಾಡಿರುವರು. ಬೃಹದಾರಣ್ಯೋಪನಿಷತ್ ೩ನೆಯ ಅಧ್ಯಾಯ ೫ನೆಯ ಸಪ್ತಾನ್ನ ಬ್ರಾಹ್ಮಣದಲ್ಲಿ ಮೊದಲನೆಯ ಖಂಡ—"ಯತ್ಸಪ್ತಾನ್ನಾನಿಮೇಧಯಾತಪಸಾಽಜನಯತ್ಪಿತೈಕಮಸ್ಯಸಾಧಾರಣಂದ್ವೇದೇವಾನಭಾಜಯುತ್, ತ್ರೀಣ್ಯಾತ್ಮನೇಕುರುತಪಶುಭ್ಯಪಕಂಪ್ರಾಯಚ್ಛತ್ತಸ್ಮಿನ್ಸರ್ವಂಪ್ರತಿಷ್ಠಿತಂ ಇತ್ಯಾದಿ "

ಇದರ ಖಂಡಾರ್ಥ—“ ವಿಷ್ಣು ಬ್ರಹ್ಮಾಣಾವಪಿಗೃಹಣಾ ವತಿಷ್ಟಮತೋ ಗೃಹೀ ಉತ್ತಮ ಇತ್ಯುಕ್ತಮಾತ್ಮೈವೇತ್ಯಾದಿನಾ ॥ ತಸ್ಯಗೃಹಿಣೋ ಭಗವತ್ಸೃಷ್ಟಂ ಯತ್ಸಾಧಾರಣಮನ್ನಂ ತನ್ನಸ್ವಕೀಯಮೇವೇತಿಮಂತವ್ಯಮಿತಿ ಭಾವೇನ ಪ್ರಕೃತಹರೇಃ ಸಪ್ತಾನ್ನಸ್ರಷ್ಟೃತ್ವಮಹಿಮಾನಮಾಹ ॥ ಯತ್ಸಪ್ತಾನ್ನಮಿತಿ ॥ ” ವಿಷ್ಣು ಬ್ರಹ್ಮದೇವರಿಬ್ಬರೂ ಗೃಹಸ್ಥಾಶ್ರಮಿಗಳಾದರು. ಆದುದರಿಂದ ಗೃಹಸ್ಥಾಶ್ರಮದಲ್ಲಿರುವವನು ಉತ್ತಮನುಯೆಂದು ಆತ್ಮೈವ ಇತ್ಯಾದಿ ಖಂಡಗಳಿಂದ ಹೇಳಿದರು. ಆ ಗೃಹಸ್ಥನು ಭಗವಂತನಿಂದ ಸೃಷ್ಟವಾದ ಅನ್ನವನ್ನು ಎಲ್ಲಾ ಪ್ರಾಣಿಗಳಿಗೂ ಸಮಬಾಧ್ಯವೆಂದರಿಯದೆ ತನ್ನದೆಂದು ತಿಳಿಯಬಾರದೆಂದು ಹೇಳುತ್ತಾರೆ. ಯತ್ಸಪ್ತಾನ್ನಾನಿ ಎಂಬ ಖಂಡದಿಂದ ಪಿತಾ=ಸರ್ವ ಜಗತ್ತಿಗೂ ತಂದೆಯಾದ ಶ್ರೀಹರಿಯು, ಮೇಧಯಾ =ತನ್ನ ಇಚ್ಛೆಯಿಂದ, ತಪಸಾ=ಪ್ರಾಣಿಗಳ ಸಂಬಂಧವಾದ ಕರ್ಮಗಳಿಂದ ಸಪ್ತಾನ್ನಾನಿ=೭ ವಿಧ ಅನ್ನಗಳನ್ನು, ಅಜನಯತ್=ಸೃಷ್ಟಿಸಿದನು ಪ್ರಾಣಿಗಳಿಗೆ ತೃಪ್ತಿಯಾಗುವುದರಿಂದ ಅನ್ನವೆಂದು ಹೆಸರು ಆ ೭ ವಿಧಾನ್ನಗಳು ಯಾವುವೆಂದರೆ ; ಪ್ರಾಣಿಭಿರದ್ಯಮಾನಮೇಕಂ=ಪ್ರಾಣಿಗಳು ಭುಂಜಿಸುವ ಸಾಧಾರಣವಾದ ಅನ್ನ ಒಂದು, ವೈಶ್ವದೇವ, ಬಲಿಹರಣ ಇವೆರಡು. ಪ್ರಾಣಿಗಳ ಮನಸ್ಸು, ವಾಕ್ ಪಂಚಪ್ರಾಣರೂಪವಾದವು ಮೂರು,ಹಾಲು ಅಥವಾ ನೀರು ಓಂದು ಅಂತು ೭. ಈ ಏಳರ ಪೈಕಿ ಒಂದು ಮಾತ್ರ ಜಗತ್ತಿಗೆ ಸಾಧಾರಣವಾದುದು. ವೈಶ್ವದೇವ, ಬಲಿಹರಣರೂಪವಾದ ಎರಡು ಅನ್ನಗಳು ದೇವತೆಗಳಿಗೆ, ಉಪಲಕ್ಷಣಯಾಪಿತೃಗಳಿಗೂ ಸೇರುವುದು. ಸಪ್ತಾನ್ನಗಳಲ್ಲಿ ವೈಶ್ವದೇವ ಬಲಿಹರಣ ರೂಪವಾದ ಎರಡು ಅನ್ನಗಳಿಗೆ ದೇವತೆಗಳನ್ನೂ ಪಿತೃಗಳನ್ನೂ ಭಾಗಿಗಳನ್ನಾಗಿ ಮಾಡಿದರೆಂದರ್ಥ. ಮನಸ್ಸು ವಚನ ಪಂಚಪ್ರಾಣ ಈ ಮೂರು ಅನ್ನಗಳನ್ನು ಪರಮಾತ್ಮನು ತನಗಾಗಿ ಇಟ್ಟುಕೊಂಡನು. ಪಶುಗಳಿಗೆ ಉದಕರೂಪವಾದ ಒಂದು ಅನ್ನವನ್ನು ಕೊಟ್ಟನು. ಆದರೆ ಈ ಉದಕವು ಪಶುಗಳಿಗೆ ಮಾತ್ರವೇ ಅಲ್ಲ, ಸರ್ವ ಜಗತ್ತೂ ಉದಕದಿಂದ ಉಪಜೀವಿಸಿಕೊಂಡು ಇರುವಂತೆ ಮಾಡಿದನು, ಎಂಬಿವೇ ಮೊದಲಾದ ವಿಷಯಗಳನ್ನು ವಿಸ್ತಾರವಾಗಿ ಹೇಳಿರುವರು. ಈ ಸಪ್ತಾನ್ನ ಬ್ರಾಹ್ಮಣವು ಒಟ್ಟು ೨೩ ಖಂಡಗಳಿರುವವು ಪ್ರಕೃತ ನಮಗೆ ಬೇಕಾದ ೧ ಖಂಡದಲ್ಲಿ ಸ್ವಲ್ಪ ಭಾಗವು ಮಾತ್ರ ಇಲ್ಲಿ ಬರೆಯಲ್ಪಟ್ಟದೆ.

ಹೆಚ್ಚು ವಿಷಯುಗಳನ್ನು ತಿಳಿಯುಬೇಕಾದರೆ ಬೃಹದಾರಣ್ಯೋಪನಿಷತ್ತಿನಲ್ಲೂ ಖಂಡಾರ್ಥದಲ್ಲೂ ಭಾಷ್ಯದಲ್ಲೂ, ಸಪ್ತಾನ್ನ ಬ್ರಾಹ್ಮಣವೆಂಬ ೬ನೆಯು ಬ್ರಾಹ್ಮಣವನ್ನು ನೋಡಿ ತಿಳಿಯುಬಹುದು. ಇದೇ ಉಪನಿಷತ್ತಿನ ಈ ಖಂಡಕ್ಕೆ ಭಾಷ್ಯದಲ್ಲಿ "ಸಪ್ತಾನ್ನಾನಿಯದಾ ವಿಷ್ಣುಃ ಪರಮಃ ಪುರುಷೋ ವಿಭುಃ || ಸಸರ್ಜತೇಷಾಂ ಸ್ವಾರ್ಥಾನಿ ಚಕಾರ ತ್ರೀಣಿಕೇಶವಃ ಮನೋ ವಾಚಂತಥಾಪ್ರಾಣಂ ತಸ್ಮಾತ್ತ್ರ್ಯಸ್ತ್ವಿಷ್ಟಮೇತಿಸಃ || ತಸ್ಮಾತ್ತದ್ಭಕ್ತಿ ಕಾಮುಸ್ಯಾ ತ್ಸಂಕಲ್ಪಂ ತತ್ಕೃತಿಂಪ್ರತಿ || ಕುರ್ಯಾತ್ತದ್ವೇದನೇಚ್ಛಾಂಚ ಶ್ರದ್ಧಾಂತಸ್ಯಗುಣೋನ್ನತೌ ||ಇತ್ಯಾದಿ|| ಚತುರ್ಥಂ ಭೋಜ್ಯಮೇವಾನ್ನಂ ಸರ್ವಸಾಧಾರಣಂ ಸ್ಮೃತಂ || ಆತ್ಮನೋತಿಸಮೀಪತ್ವಂ ತಸ್ಯಯೋನ್ನಸ್ಯ ಮನ್ಯತೇ|| ಅಕ್ಷಯಂ ಪಾಪಮುಸ್ಯಸ್ಯಾದ್ದೇವಬ್ರಹ್ಮಸ್ವಹಾರಿಣಃ|| ತದೇವ ಮಂತ್ರಯುಕ್ತತ್ವಾದ್ಬಲಿಹೋಮಾತ್ಮನಾದ್ವಯಂ | ದೇವಾನಾಂ ಪ್ರದದೌ ವಿಷ್ಣು ಸ್ತಸ್ಮಾನ್ನೈವೇಚ್ಛಯಾಯುಜೇತ್ | ಯದೀಚ್ಛಯಾಯುಜೇತ್ತೇಷಾ ಮುಪಹರ್ತಾ ಭವಿಷ್ಯತಿ || ದೇವಸ್ವಂತೇನಯೋನ್ನೈವ ಕಾಮ್ಯಾರ್ಥಂವಿನಿಯೋಜಿತಂ | ಪರಕೀಯೋನವಿತ್ತೇನ ತಸ್ಮಿನ್ನಿನಿಮುಯೇಯಥಾ|ಚತುಷ್ಪಾದ್ಭ್ಯೋ ದ್ವಿಪಾದ್ಭ್ಯಶ್ಚ ಪಶುಭ್ಯಃ ಪಯಆತ್ಮಕಂ || ಪ್ರಾಯಚ್ಛತ್ಸಪ್ತಮಾನ್ನಂ ಸಗೋಕ್ಷೀರಂಮುಖ್ಯಮತ್ರಚ | ಆತ್ಮನೇಚೈವದೇವಾನಾಂ ತದ್ಧೋಮಾರ್ಥಂ ಪ್ರಕಲ್ಪಿತಂ || ಸಂವತ್ಸರಂಗೋಪಯ ಸಾಯೇನ ಹೋಮೋಹರೇಃ ಕೃತಃ || ಭಗವತ್ತತ್ವ ವಿದುಷಾತಸ್ಯಮುಕ್ತಿರ್ನಸಂಶಯಃ || ಅದೃಷ್ಟಭಗವದ್ರೂಪಸ್ಯೈತದ್ದರ್ಶನಕಾರಣಂ || ಸಪ್ತಾನ್ನೋಪಾಸನಂ ಯಸ್ಮಾದ್ದೇವಾನಾಂ ಯೋಗ್ಯಮುತ್ತಮಂ || ತಸ್ಮಾದ್ದೇವತ್ವಮಾಪ್ನೋತಿ ,ಯೋಗ್ಯೋ ದೇವಪದಸ್ಯಯಃ|| " ಇದರರ್ಥ—ಶ್ರೀಪರಮಾತ್ಮನು ಯಾವಾಗ ಸಪ್ತಾನ್ನವನ್ನು ಸೃಷ್ಟಿಸಿದನೋ ಆಗ ಪರಮ ಪುರುಷನಾದ ಪ್ರಭುವಾದ ಶ್ರೀ ಹರಿಯು ಮನಸ್ಸಿನಿಂದಲೂ, ವಾಕ್ಯದಿಂದಲೂ, ಪಂಚಪ್ರಾಣಗಳಿಂದಲೂ ಮಾಡುವ ಕ್ರಿಯಾರೂಪವಾದ ಮೂರು ವಿಧ ಅನ್ನಗಳನ್ನು ತನ್ನ ಭಾಗವೆಂದು ಇಟ್ಟುಕೊಂಡನು. ಈ ಮೂರು ವಿಧವಾದ ಕರ್ಮಗಳಿಂದ ಪರಮಾತ್ಮನು ಪ್ರೀತನಾಗುವನು. ಆದ್ದರಿಂದ ಮನಸ್ಸಂಬಂಧವಾದ ಅನ್ನವೆಂದರೆ ಮನಸ್ಸನ್ನು ಪರಮಾತ್ಮನ ಪಾದಾರವಿಂದದಲ್ಲಿಟ್ಟು ಭಗವತ್ಸೇವಾರೂಪವಾದ ಕರ್ಮವನ್ನು ಮಾಡುವೆನೆಂದು ಮನಸಾ ಸಂಕಲ್ಪ

ಸಾವಿರದ ಮೇಲೆ ನೂರು ಸಂಖ್ಯೆಯುಳ್ಳ ಶ್ವಾಸಗಳನ್ನು ತಿಳಿಯಬೇಕು ಹನ್ನೆರಡು ತಾಸಿಗೆ—೪ ಝಾಮು ಕಾಲವಾದ ೧೨ ಘಂಟೆಗಳ ಹೊತ್ತಿಗೆ, ಹತ್ತು ಸಾವಿರದೆಂಟನೂರಹವು=೧೦೮೦೦ ಶ್ವಾಸ ಜಪಗಳಾಗುವವು.

ತಾತ್ಪರ್ಯ :--ಮೂರು ಘಂಟೆಯ ಹೊತ್ತಿಗೆ ಒಂದು ಝಾಮು (ಯಾಮ) ವೆಂದು ಹೆಸರು. ಅದರಂತೆ ಒಂದು ಘಂಟೆಯ ಹೊತ್ತಿಗೆ ೯೦೦ ರಂತೆ ಮೂರು ಘಂಟೆಯ ಹೊತ್ತಿಗೆ ೯೦೦×೩=೨೭೦೦ ಶ್ವಾಸಗೆಳಾಗುವವು. ೬ ಘಂಟೆಯ ಹೊತ್ತಿಗೆ ೯೦೦×೬=೫೪೦೦ ಶ್ವಾಸಗಳಾಗುವವು. ೯ ಘಂಟೆಯ ಹೊತ್ತಿಗೆ ೯೦೦×೯=೮೧೦೦ ಶ್ವಾಸಗಳು. ೧೨ ಘಂಟೆಯ ಹೊತ್ತಿಗ ೯೦೦×೧೨=೧೦೮೦೦ ಶ್ವಾಸ ಜಪಗಳಾಗುವವೆಂದು ತಿಳಿಯಬೇಕು ||೩||

ಅವತಾರಿಕೆ :—ಒಂದು ದಿವಸದಲ್ಲಿ ಆಗುವ ಶ್ವಾಸಗಳ ಸಂಖ್ಯೆಯನ್ನು ಹೇಳುತ್ತಾರೆ—

**ಒಂದುದಿನದೊಳಗನಿಲ ಇಪ್ಪ**
**ತ್ತೊಂದುಸಾವಿರದಾರುನೂರು ಮು**
**ಕುಂದನಾಜ್ಞಗಿ ಮಾಡಿಮಾಡಿಸಿ ಲೋಕಗಳ ಪೊರೆವ ||**
**ನೆಂದು ಪವನನ ಪೊಗಳುತಿರುಯೆಂ**
**ದೆಂದುಮರಿಯುದೆ ಈ ಮಹಿಮೆ ಸು**
**ಕ್ರಂದನಾದ್ಯರಿಗುಂಟೆ ನೋಡಲು ಸರ್ವಕಾಲದಲಿ ||**

ಪದ್ಯಾರ್ಥ :—ಅನಿಲ=ಮುಖ್ಯ ಪ್ರಾಣದೇವರು, ಒಂದು ದಿನದೊಳಗೆ ಇಪ್ಪತ್ತೊಂದುಸಾವಿರದಾರುನೂರು=೨೧೬೦೦ ಶ್ವಾಸ ಜಪಗಳನ್ನು, ಮುಕುಂದನ=ಮೋಕ್ಷವನ್ನು ಕೊಡುವ ಶ್ರೀ ಪರಮಾತ್ಮನ, ಆಜ್ಞದಿ= ಅಪ್ಪಣೆಯಿಂದ, ಮಾಡಿಮಾಡಿಸಿ, ಲೋಕಗಳ ಪೊರೆವನು ಎಂದು, ಪವನನ =ಮುಖ್ಯ ಪ್ರಾಣದೇವರನ್ನು ಯೆಂದೆಂದು ಮರಿಯುದೆ, ಪೊಗಳುತಿರು= ಸ್ತುತಿಸುತ್ತಿರು. ಈ ಮಹಿಮೆ, ಸುಕ್ರಂದನ=ಇಂದ್ರದೇವರು, ಆದ್ಯರಿಗೆ=ಮೊದಲಾದವರಿಗೆ, ಸರ್ವಕಾಲದಲಿ=ಎಂದಿಗಾದರು, ನೋಡಲು, ಉಂಟೆ? ಇಲ್ಲ

ತಾತ್ಪರ್ಯ :—"ಏಕವಿಂಶತ್ಸಹಸ್ರಾತ್ಮಾಸಷಟ್‌ಶತಮಹರ್ನಿಶಂ" ಎಂಬ ತಂತ್ರಸಾರದ ವಾಕ್ಯರೀತ್ಯಾ ಒಂದು ದಿವಸದೊಳಗೆ ೨೧೬೦೦ಶ್ವಾಸ

ಜಪವನ್ನು ಶ್ರೀ ವಾಯುದೇವರು ಭಗವದಾಜ್ಞಾ ಪ್ರಕಾರ ಜೀವರಲ್ಲಿದ್ದು ಮಾಡಿ ಮಾಡಿಸುತ್ತ ಲೋಕಗಳನ್ನು ಅಂದರೆ ಸರ್ವ ಪ್ರಾಣಿಗಳನ್ನು ಸಂರಕ್ಷಣೆ ಮಾಡುವರೆಂದು ಶ್ರೀ ವಾಯುದೇವರನ್ನು ಎಂದಿಗೂ ಮರಿಯದೆ ಸ್ತುತಿಸುತ್ತಿರು. ಇಂತಹ ಮಹಿಮೆಯು ಯಾವ ಕಾಲದಲ್ಲೂ ಇಂದ್ರಾದಿಗಳಿಗೆ ಇಲ್ಲವೆಂದು ತಿಳಿಯಬೇಕು ||೪||

ಅವತಾರಿಕೆ :—ಒಂದು ಪಕ್ಷ ಕಾಲದಲ್ಲಿ (೧೫ ದಿವಸಗಳಲ್ಲಿ) ಆಗುವ ಶ್ವಾಸಗಳ ಸಂಖ್ಯೆಯನ್ನು ಹೇಳುತ್ತಾರೆ—

**ಮೂರು ಲಕ್ಷದಮೇಲೆ ವಿಂಶತಿ**
**ಈರೆರಡುಸಾವಿರವು ಪಕ್ಷಕೆ**
**ಕಾರುಣಿಕಪವಮಾನನಿರ್ವ್ಯಾಜದಲಿ ತಾ ಮಾಡಿ ||**
**ಘೋರತರ ಸಂಸಾರಪಾರಾ**
**ವಾರ ದಾಟಿಸಿ ಸಜ್ಜನರ ಪರಿ**
**ವಾರಪಾಲಿಪ ಪರಿಪರಿ ಸದ್ಭೋಗಗಳನಿತ್ತು ||**

ಪದ್ಯಾರ್ಥ:—ಕಾರುಣಿಕ=ಕರುಣಾಳುವಾದ, ಪವಮಾನ=ವಾಯುದೇವರು, ಪಕ್ಷಕೆ=ಹದಿನೈದು ದಿವಸಗಳಿಗೆ, ಮೂರು ಲಕ್ಷದಮೇಲೆ, ವಿಂಶತಿ ಈರೆರಡು ಸಾವಿರವು=೩೨೪,೦೦೦ ಶ್ವಾಸಜಪಗಳನ್ನು, ನಿರ್ವ್ಯಾಜದಲಿ=ಪ್ರತಿಫಲವನ್ನು ಅಪೇಕ್ಷಿಸದೆ, ತಾ=ತಾನು, ಮಾಡಿ ಘೋರತರ=ಬಹಳ ಭಯಂಕರವಾದ,ಸಂಸಾರಪಾರಾವಾರ=ಸಂಸಾರವೆಂಬ ಸಮುದ್ರವನ್ನು, ದಾಟಿಸಿ, ಸಜ್ಜನರ ಪರಿವಾರ=ಸದ್ಭಕ್ತರನ್ನು, ಅವರ ಹೆಂಡರು ಮಕ್ಕಳು ಮೊದಲಾದ ಪರಿವಾರಗಳನ್ನೂ ಸಹ, ಪರಿಪರಿಯ ಸದ್ಭೋಗಗಳನಿತ್ತು=ಸ್ವರ್ಗ ಮತ್ತು ಮೋಕ್ಷ ಸುಖಗಳನ್ನು ಕೊಟ್ಟು, ಪೊರೆವ=ರಕ್ಷಿಸುವರು.

ತಾತ್ಪರ್ಯ :—ತಿಂಗಳಿಗೆ ಎರಡು ಪಕ್ಷಗಳಿರುವವು. ಪಕ್ಷ ಒಂದಕ್ಕೆ ಹದಿನೈದು ದಿವಸಗಳು. ದಿವಸ ಒಂದಕ್ಕೆ ೨೧೬೦೦ ಶ್ವಾಸಗಳಂತೆ ೨೧೬೦೦×೧೫=೩೨೪೦೦೦ ಮೂರು ಲಕ್ಷದ ಇಪ್ಪತ್ತನಾಲ್ಕು ಸಾವಿರ ಶ್ವಾಸಗಳು ಆಗುತ್ತವೆ. ಉಪಲಕ್ಷಣಯಾ ಒಂದು ಪಕ್ಷಕ್ಕೆ ಹೇಳಿದಮೇಲೆ ಒಂದು ತಿಂಗಳಿಗೆ ಎರಡು ಪಕ್ಷಗಳು. ಒಂದು ಪಕ್ಷಕ್ಕೆ ೩೨೪೦೦೦ ಆದರೆ

ಎರಡು ಪಕ್ಷಗಳಿಗೆ ೩೨೪೦೦೦×೨=೬೪೮೦೦೦ ಶ್ವಾಸಗಳಾದವು ಎಂದು ತೆಗೆದುಕೊಳ್ಳಬೇಕು. ಮಹಾ ಕರುಣಾಳುವಾದ ವಾಯುದೇವರು ಜೀವರಿಂದ ಪ್ರತಿಫಲವನ್ನು ಅಪೇಕ್ಷಿಸದೆ, ಈ ಪರಿಯಾಗಿ ಶ್ವಾಸಜಪಗಳನ್ನು ಮಾಡಿಸಿ, ಯೋಗ್ಯ ಜೀವರನ್ನೂ ಅವರ ಪರಿವಾರಜನರನ್ನೂ ಸಹ ಘೋರತರವಾದ ಸಂಸಾರಸಮುದ್ರದಿಂದ ದಾಟಿಸಿ ಅವರಿಗೆ ಬೇಕಾದ ಭೋಗಗಳನ್ನು ಕೊಟ್ಟು ಪರಿಪಾಲಿಸುವರು ||೫||

ಅವತಾರಿಕೆ :—ಋತು, ಅಯನ ಈ ಕಾಲಗಳಿಗೆ ಆಗುವ ಶ್ವಾಸ ಸಂಖ್ಯೆಯನ್ನು ಹೇಳುತ್ತಾರೆ—

**ಎರಡುತಿಂಗಳಿಗಹವು ಋತುಭೂ**
**ಸುರರು ತಿಳಿವದು ಶ್ವಾಸಜಪ ಹ**
**ನ್ನೆರಡುಲಕ್ಷದಮೇಲೆ ತೊಂಭತ್ತಾರು ಸಾಹಸ್ರ ||**
**ಕರೆಸುವದು ಅಯನಾಹ್ವಯದಲರೆ**
**ವರುಷ ಮೂವತ್ತೆಂಟು ಲಕ್ಷೋ**
**ಪರಿತಿಳಿವದೆಂಭತ್ತೆಂಟು ಸಹಸ್ರ ಕೋವಿದರು ||**

ಪದ್ಯಾರ್ಥ :—ಎರಡು ತಿಂಗಳಿಗೆ ಒಂದು ಋತು, ಅಹವು=ಒಂದು ಋತುವೆಂದು ಎನಿಸುವದು. ಈ ಋತುವೆನಿಸುವ ಎರಡು ತಿಂಗಳಿಗೆ, ಶ್ವಾಸಜಪ, ಹನ್ನೆರಡು ಲಕ್ಷದಮೇಲೆ ತೊಂಭತ್ತಾರುಸಹಸ್ರ=೧೨೯೬೦೦೦ ಸಂಖ್ಯಾಗಳಾಗುವವೆಂದು, ಭೂಸುರರು = ಬ್ರಾಹ್ಮಣರು, ತಿಳಿವದು. ಅಯನಾಹ್ವಯದಲಿ=ಅಯನವೆಂಬ ಹೆಸರಿನಿಂದ, ಅರೆವರುಷ ಅರ್ಧವರ್ಷ (೬ ತಿಂಗಳು) ಕರೆಸುವದು, ಕೋವಿದರು=ಜ್ಞಾನಿಗಳು (ಈ ಆರು ತಿಂಗಳಿಗೆ) ಮೂವತ್ತೆಂಟು ಲಕ್ಷೋಪರಿ=೩೮ ಲಕ್ಷದ ಮೇಲೆ ಯಂಭತ್ತು ಯೆಂಟುಸಹಸ್ರ=೮೮ ಸಾವಿರ ಶ್ವಾಸಜಪಗಳಾಗುವವೆಂದು ತಿಳಿವದು.

ತಾತ್ಪರ್ಯ :—ಒಂದು ಋತುವೆಂದರೆ ಎರಡು ತಿಂಗಳ ಕಾಲವು. ತಿಂಗಳು ಒಂದಕ್ಕೆ ೬೪೮೦೦೦ ಶ್ವಾಸಗಳಮೇರಿಗೆ ಎರಡು ತಿಂಗಳುಗಳಿಗೆ (೬೪೮೦೦೦×೨=೧೨೯೬೦೦೦) ಹನ್ನೆರಡು ಲಕ್ಷದ ತೊಂಭತ್ತಾರು ಸಹಸ್ರ ಶ್ವಾಸಜಪಗಳು ಆಗುವವು ಅಯನವೆಂದರೆ ಆರು ತಿಂಗಳ ಕಾಲವು. ಈ ಆರು ತಿಂಗಳಿಗೆ (೬೪೮೦೦೦×೬=೩೮೮೮೦೦೦) ಮೂವ

ತ್ತೆಂಟು ಲಕ್ಷದ ಎಂಭತ್ತೆಂಟು ಸಾವಿರ ಶ್ವಾಸಜಪಗಳನ್ನು ಮುಖ್ಯ ಪ್ರಾಣ ದೇವರು ಮಾಡಿಸುವರೆಂದು ಜ್ಞಾನಿಗಳು ತಿಳಿಯಬೇಕು. ||೬||

**ಅವತಾರಿಕೆ :**—ಒಂದು ವರ್ಷಕಾಲಕ್ಕೆ ಬಿಡುವ ಶ್ವಾಸಜಪಗಳ ಸಂಖ್ಯೆಯನ್ನು ಹೇಳುತ್ತಾರೆ :—

**ವರುಷಕಿದರಿಮ್ಮಡಿ ಜಪಂಗಳು**
**ಗುರುವರ್ಯ ತಾ ಮಾಡಿ ಮಾಡಿಸಿ**
**ದುರಿತಗಳ ಪರಿಹರಿಸುವನು ಚಿಂತಿಸುವ ಸಜ್ಜನರ ॥**
**ಸುರವಿರೋಧಿಗಳೊಳಗೆ ನೆಲಸಿ**
**ದ್ದರವಿದೂರತಮೋಧಿಕರಿಗ**
**ಳರಿತು ಸೋಹಮುಪಾಸನೆ ಮಾಳ್ಪನವರಂತೆ ॥**

ಪದ್ಯಾರ್ಥ:— ವರುಷಕ್ಕೆ, ಇದರಿಮ್ಮಡಿ ಜಪಂಗಳು ಇದರ ಎರಡರಷ್ಟು ಜಪಗಳನ್ನು, ಗುರುವರ್ಯ= ಗುರುವರ್ಯರಾದ ಶ್ರೀಮುಖ್ಯಪ್ರಾಣದೇವರು, ತಾ =ತಾವು, ಮಾಡಿ, ಮಾಡಿಸಿ, ಚಿಂತಿಸುವ ಸಜ್ಜನರ =ಹಂಸಃ ಸೋಹಂ ಸ್ವಾಹಾ ಎಂಬ ಮಂತ್ರಾರ್ಥವನ್ನು ಯಥಾರ್ಥವಾಗಿ ತಿಳಿದು ಜಪಿಸುವ ಸಜ್ಜನರ ದುರಿತಗಳ ಪರಿಹರಿಸುವನು. ಅರವಿದೂರನು =ದೋಷ ರಹಿತರಾದ ವಾಯುದೇವರು, ಸುರವಿರೋಧಿಗಳೊಳಗೆ =ದೈತ್ಯರೊಳಗೆ ನೆಲಸಿದ್ದು= ವಾಸವಾಗಿದ್ದು, ತಮೋಧಿಕಾರಿಗಳ =ತಮೋಯೋಗ್ಯರ, ಇರವರಿತು =ಯೋಗ್ಯತೆಯನ್ನು ತಿಳಿದು,ಅವರಂತೆ, ಸೋಹಮುಪಾಸನೆ =ಅವನೇನಾನೆಂಬ (ಪರಮಾತ್ಮನೇನಾನೆಂಬ) ಉಪಾಸನೆಯನ್ನು, ಮಾಳ್ಪ =ಮಾಡಿಸುವರು

ತಾತ್ಪರ್ಯ:—ಆರು ತಿಂಗಳಿಗೆ ೩೮೮೮೦೦೦ ಶ್ವಾಸಗಳಂತೆ ವರ್ಷಕ್ಕೆ ಇದಕ್ಕೆ ಇಮ್ಮಡಿ (ಅಂದರೆ ೩೮೮೮೦೦೦ × ೨ =೭೭೭೬೦೦೦) ಎಪ್ಪತ್ತೇಳು ಲಕ್ಷದ ಯಪ್ಪತ್ತಾರುಸಾವಿರ ಜಪಗಳನ್ನು ಶ್ರೀಮುಖ್ಯ ಪ್ರಾಣದೇವರು ಪ್ರಾಣಿಗಳಲ್ಲಿದ್ದು ಮಾಡಿಸುವರು. ಯೋಗ್ಯಜೀವರು, ಹಂಸಃ ಸೋಹಂ ಸ್ವಾಹಾ ಯೆಂಬುವ ಹಂಸಮಂತ್ರಜಪದ ಅರ್ಥವನ್ನು ಅಂದರೆ ದುಃಖಗಳನ್ನು ನಾಶಮಾಡುವುದರಿಂದ ಹಂಸನೆಂದು ಪರಮಾತ್ಮನಿಗೆ ಹೆಸರು. ಸೋಹಂ ಅಂದರೆ ಅವನೇನಾನು ಅಂದರೆ ಅವನೇ ನನ್ನ ಅಂತರ್ಯಾಮಿಎಂದು

ಅರ್ಥ ಮಾಡಬೇಕು. ಬ್ರಹ್ಮಸೂತ್ರ ಭಾಷ್ಯದಲ್ಲಿ, "ಅಂತರ್ಯಾಮಿಣಮೀಶೇಶಮುಪೇಕ್ಷ್ಯಾಹಂತ್ವಮಿತ್ಯಪಿ||ಇರ್ವೇಶಬ್ದಾಃಪ್ರಯುಜ್ಯಂತೇ ಸತಿಭೇದೇಪಿವಸ್ತುಷು'' ಎಂಬ ವಾಕ್ಯದಿಂದ ಪರಮಾತ್ಮನನ್ನೇ ಕುರಿತಾಗಲಿ, ಗರುಗಳು ಮೊದಲಾದವರಲ್ಲಿ ಆಗಲಿ ನೀನೇ ಪರಬ್ರಹ್ಮನು. ನೀನೇ ನಾನು ಎಂಬಿವೇ ಮೊದಲಾದ ವಾಕ್ಯಗಳನ್ನು ಪ್ರಯೋಗ ಮಾಡುವುದುಂಟು. ಅಲ್ಲಿ ಅಂತರ್ಯಾಮಿಪರವಾಗಿ ಅರ್ಥವನ್ನಿಟ್ಟುಕೊಂಡು ಹಾಗೆ ಹೇಳಿರುವರು ಎಂದು ತಿಳಿಯಬೇಕು. ಸಾಕ್ಷಾತ್ಪರಬ್ರಹ್ಮನೇ ನಿನ್ನಂತರ್ಯಾಮಿಯು, ಅವನೇ ನನ್ನೊಳಗೂಇರುವನೆಂಬ ಭಾವನೆಯಿಂದ ಅವನೇ ನಾನು ಯಂಬಿವೇ ಮೊದಲಾದ ವಾಕ್ಯಗಳು ಹೊರಟವೆಯೆಂದು ತಿಳಿಯಬೇಕು. ಹೀಗೆ ತಿಳಿದು ಉಪಾಸನೆಮಾಡುವ ಸಜ್ಜನರ ದುರಿತಗಳನ್ನು ಪರಿಹರಿಸಿ ಅವರನ್ನುದ್ಧಾರಮಾಡುವರು. ದೇವಶತೃಗಳಾದ, ತಮೋಯೋಗ್ಯರಾದ, ದೈತ್ಯರ ಯೋಗ್ಯತಾನುಸಾರವಾಗಿ ಅವನೇನಾನು ಎಂಬ ಉಪಾಸನೆಯನ್ನು ಮಾಡಿ ಮಾಡಿಸಿ ಜಗದೀಶ್ವರನಾದ ಪರಮಾತ್ಮನಿಗೂ ತನಗೂ ಭೇಧವಿಲ್ಲವೆಂದು ಉಪಾಸನೆಮಾಡಿದ್ದರಿಂದ ಅದರ ಫಲರೂಪವಾಗಿ ತಮಸ್ಸನ್ನೇ ಕೊಡಿಸುವರು ||೭||

(ಶ್ವಾಸರೂಪ ಮಂತ್ರಜಪೋಪಾಸನೆ ಕ್ರಮ,ಆಮಂತ್ರ, ಮಂತ್ರಾರ್ಥ ಸಹ ಮೊದಲನೆಯ ಸಂಧಿಯ ನಾಲ್ಕನೆಯ ಪದ್ಯದ ವಿಶೇಷಾರ್ಥದಲ್ಲಿ ವಿಶದವಾಗಿ ಬರಿಯಲ್ಪಟ್ಟವೆ) ಎರಡನೆಯ ಸಂಚಿಕೆಯಲ್ಲಿ ನೋಡತಕ್ಕದ್ದು

ಅವತಾರಿಕೆ :—ಹೀಗೆ ಸರ್ವ ಜೀವರಲ್ಲೂ ಇದ್ದು ವಾಯುದೇವರು ಮಾಡಿಸುವ ಶ್ವಾಸರೂಪ ಹಂಸಮಂತ್ರವನ್ನರಿಯದೆ ಬರಿ ಜಪ ತಪಸ್ಸುಗಳೇನುಮಾಡಿದರೂ ನಿಷ್ಫಲವೆಂದು ಹೇಳುತ್ತಾರೆ :—

**ಇನಿತುಪಾಸನೆ ಸರ್ವಜೀವರೊ**
**ಳನಿಲದೇವನು ಮಾಡುತಿರೆ ಚಿಂ**
**ತನೆಯಮಾಡದೆ ಕಂಡನೀರೊಳು ಮುಣಗಿ ನಿತ್ಯದಲಿ ||**
**ಮನಯೊಳಗೆ ಕೃಷ್ಣಾಜಿನಾದ್ಯಾ**
**ಸನದಿ ಕುಳಿತು ವಿಶಿಷ್ಟ ಜಪ ಸ**
**ಜನನೆನಿಸಿ ಜಪಮಣಿಗಳೆಣಿಸಿದರೇನು ಬೇಸಂದೆ ||**

ಪದ್ಯಾರ್ಥ:—ಇನಿತು= ಮೇಲಿನ ಪದ್ಯಗಳಲ್ಲಿ ಹೇಳಿದಂತೆ, ಉಪಾಸನೆ= ಹಂಸಮಂತ್ರ ಜಪೋಪಾಸನೆಯನ್ನು ಸರ್ವಜೀವರೊಳು ಅನಿಲ ದೇವನು = ವಾಯುದೇವರು, ಮಾಡುತಿರೆ, ಚಿಂತನೆಯ ಮಾಡದೆ= ಶ್ವಾಸವೇ ಹಂಸಮಂತ್ರ ಜಪವೆಂದು ಭಾವಿಸಿ ಉಪಾಸನೆಯನ್ನು ಮಾಡದೆ, ಕಂಡನೀರೊಳು ಮುಣಗಿ, ನಿತ್ಯದಲಿ, ಮನೆಯೊಳಗೆ, ಕೃಷ್ಣಾಜಿನಾದ್ಯಾಸನದಿ= ಕೃಷ್ಣಾಜಿನ ಮೊದಲಾದ ಆಸನದ ಮೇಲೆ, ಕುಳಿತು, ವಿಶಿಷ್ಟ= ವಿಶಿಷ್ಟಾಚಾರ ಸಂಪನ್ನನು, ಬಹು ಸಜ್ಜನನು, ಯೆನಿಸಿ, ಬೇಸರದೆ, ಜಪ ಮಣಿಗಳೆಣಿಸಿದರೇನು ! ನಿಷ್ಪ್ರಯೋಜನವೆಂದರ್ಥ.

ತಾತ್ಪರ್ಯ :—ಮೇಲಿನ ಪದ್ಯಗಳಲ್ಲಿ ಹೇಳಿದಂತೆ ಶ್ವಾಸರೂಪ ಹಂಸಮಂತ್ರ ಜಪಗಳನ್ನು ವಾಯುದೇವರು ಪ್ರತಿಜೀವರೊಳಗೂ ಇದ್ದು ಮಾಡಿಸುತ್ತಾರೆಂದು ಜಪರೂಪೋಪಾಸನೆಯನ್ನು ಮಾಡದೆ ಕಂಡ ನೀರಿನೊಳಗೆ ನಿತ್ಯದಲ್ಲೂ ಮುಣುಗಿ, ಮನೆಯೊಳಗೆ ಕೃಷ್ಣಾಜಿನ ಮೊದಲಾದ ಆಸನದಮೇಲೆ ಕೂತುಕೊಂಡು ಈತನು ವಿಶಿಷ್ಟಾಚಾರ ಸಂಪನ್ನನು ಬಹು ಸಜ್ಜನನು ಎಂದು ಪ್ರಖ್ಯಾತನಾಗಿ ಜಪಮಣಿಗಳನ್ನೆಣಿಸಿದರೆ ಅದರಿಂದೇನೂ ಫಲವಿಲ್ಲ. ಸ್ವತಂತ್ರ ಕರ್ತೃತ್ವಾಭಿಮಾನವನ್ನು ಬಿಟ್ಟು ಭಗವದಾಜ್ಞಾ ಪ್ರಕಾರ ವಾಯುದೇವರೇ ಸಕಲವೂ ಮಾಡಿಸುತ್ತಾರೆಂದು ತಿಳಿಯದೆ ತಾನೇ ಜಪಾದ್ಯನುಷ್ಠಾನ ಮಾಡುತ್ತೇನೆಂದು ತಿಳಿದು ಮಾಡುವವೆಲ್ಲವೂ ನಿಷ್ಫಲವೆಂದು ತಾತ್ಪರ್ಯ ||೮||

ಅವತಾರಿಕೆ :—ಭೋಜನ ಪಾನಾದಿಗಳಲ್ಲಿ ಮಾಡುವ ಅನ್ನೋದಕಗಳು ಪರಂಪರ ಪರಮಾತ್ಮನಲ್ಲಿ ಸೇರುವವೆಂದುಲಯಚಿಂತನೆಯಿಂದ ಭುಂಜಿಸಬೇಕೆಂದು ಹೇಳುತ್ತಾರೆ—

**ಓದನೋದಕವೆರಡು ತೇಜಸೊ**
**ಳೈದುವವುಲಯ ತದಭಿಮಾನಿಗ**
**ಳಾದ ಶಿವಪವನರು ರಮಾಧೀನತ್ವವೈದುವರು ॥**
**ಈ ದಿವಿಜರೊಡಗೂಡಿ ಶ್ರೀ ಮಧು**
**ಸೂದನನನೆಯ್ದುವಳುಯಿಂದರಿ**
**ಧಾದರದಲನ್ನೋದಕವಕೊಡುತುಣುತ ಸುಖಿಸುತಿರು ॥**

ಪದ್ಯಾರ್ಥ :—ಓದನೋದಕವೆರಡು= ನಾವು ಭುಂಜಿಸುವ ಮತ್ತು ಪಾನಮಾಡುವ ಅನ್ನೋದಕಗಳೆರಡು, ತೇಜದೊಳು= ಅಗ್ನಿಯಲ್ಲಿ, ಲಯ ವೈದುವವು, ತದಭಿಮಾನಿಗಳಾದ= ಅನ್ನೋದಕಗಳಿಗಭಿಮಾನಿಗಳಾದ, ಶಿವ ಪವನರು= ರುದ್ರದೇವರು, ವಾಯುದೇವರು, ರಮಾಧೀನತ್ವಯೈದುವರು = ರಮಾದೇವಿಯರಲ್ಲಿ ಅನ್ನೋದಕ ರೂಪವಾಗಿ ಲಯವಾಗುವರು. ಈ ದಿವಿಜರೊಡಗೂಡಿ= ಈ ಶಿವವಾಯುಗಳೆಂಬ ದೇವತೆಗಳಿಂದೊಡಗೂಡಿ, ಶ್ರೀ ಮಧುಸೂದನನ= ಮಧು ನಾಮಕ ದೈತ್ಯನನ್ನು ಸಂಹರಿಸಿದ ಶ್ರೀ ಪರಮಾತ್ಮನನ್ನು, ಐದುವಳು= ರಮಾದೇವಿಯರು ಸೇರುವರು, ಎಂದ ರಿದು= ಎಂದು ತಿಳಿದು, ಆದರದಿ= ಪ್ರೀತಿಯಿಂದ, ಅನ್ನೋದಕವ= ಅನ್ನೋದಕಗಳನ್ನು, ಕೊಡುತ= ಬ್ರಾಹ್ಮಣಾದಿಗಳಿಗೆ ಕೊಡುತ, ಉಣುತ = ನೀನು ಭುಂಜಿಸುತ್ತ, ಸುಖಿಸುತಿರು

ತಾತ್ಪರ್ಯ :—ನಾವು ಭೋಜನ ಮಾಡುವ ಅನ್ನೋದಕಗಳೆರಡು ಜಠರಾಗ್ನಿಯಲ್ಲಿ ಲಯವಾಗುವವು. ಅನ್ನೋದಕಗಳಿಗೆ ಅಭಿಮಾನಿಗಳು ರುದ್ರದೇವರು, ವಾಯುದೇವರು. ಇವರಿಬ್ಬರು ಅನ್ನೋದಕರೂಪರಾಗಿ ರಮಾದೇವಿಯರಲ್ಲಿ ಸೇರುವರು. ರಮಾದೇವಿಯರು ಅನ್ನೋದಕರೂಪ ರಾದ ಶಿವ ವಾಯುಗಳಿಂದೊಡಗೂಡಿ ಶ್ರೀ ಪರಮಾತ್ಮನಲ್ಲಿ ಸೇರುವರು. ಹೀಗೆ ನಾವು ಭೋಜನಪಾನಮಾಡಿದ ಅನ್ನೋದಕಗಳು ಪರಂಪರಾ ಪರ ಮಾತ್ಮನಲ್ಲಿ ಲಯವಾಗಿ ಸಾರ್ಥಕವಾಗುವವೆಂದು ತಿಳಿದು ಬ್ರಾಹ್ಮಣಾದಿ ಗಳಿಗೆ ಅನ್ನವನ್ನು ಕೊಡುತ್ತ ನೀನೂ ಭೋಜನವನ್ನು ಮಾಡುತ್ತ ಈ ಅನು ಸಂಧಾನದಿಂದ ಭುಂಜಿಸಿ ಸುಖವಾಗಿರಬೇಕೆಂಬ ಭಾವ ||೯||

ಅವತಾರಿಕೆ :—ನಾವು ಭೋಜನ ಪಾನ ಮೊದಲಾದವುಗಳನ್ನು ಮಾಡುವ ಕರ್ಮಗಳನ್ನು ಪರಮಾತ್ಮನಿಗೆ ಸಮರ್ಪಿಸಿದರೆ ಮುಕ್ತಿಯನ್ನು ಕೊಟ್ಟುದ್ಧರಿಪನೆಂದು ಸದೃಷ್ಟಾಂತವಾಗಿ ಹೇಳುತ್ತಾರೆ—

**ಜಾಲಿತೊಪ್ಪಲಜಾವಿಗಳು ಮೊ**
**ದ್ದಾಲಯದಿ ಸ್ವೇಚ್ಛಾನುಸಾರದಿ**
**ಪಾಲಗರವಂದದಲಿ ಲಕ್ಷ್ಮೀರಮಣ ತನ್ನವರ ॥**
**ಕೀಳಕರ್ಮವ ಸ್ವೀಕರಿಸಿ ತ**

**ನ್ನಾಲಯದಲಿಟ್ಟವರ ಪೊರೆವ ಕೃ**
**ಪಾಳು ಕಾಮದಕೈರವದಳಶ್ಯಾಮ ಶ್ರೀರಾಮ ॥**

ಪದ್ಯಾರ್ಥ :—ಅಜಾ= ಮೇಕೆಗಳು, ಅವಿಗಳು= ಕುರಿಗಳು, ಜಾಲಿ ತೊಪ್ಪಲ= ಜಾಲೀ ಸೊಪ್ಪನ್ನು, ಮೆದ್ದು= ತಿಂದು, ಆಲಯದಿ= ಮನೆಯಲ್ಲಿ, ಸ್ವೇಚ್ಛಾನುಸಾರದಿ= ಬೇಕಾದಹಾಗೆ, ಪಾಲಗರೆವಂದದಲಿ= ಹಾಲನ್ನು ಕರೆಯುವಂತೆ, ಲಕುಮೀರಮಣ= ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನು, ತನ್ನವರ= ತನ್ನ ಭಕ್ತರು ಮಾಡುವ, ಕೀಳಕರ್ಮವ= ಅಲ್ಪವಾದ ಕರ್ಮಗಳನ್ನು, ಸ್ವೀಕರಿಸಿ= ತೆಗೆದುಕೊಂಡು, ತನ್ನಾಲಯದೊಳಿಟ್ಟು = ತನ್ನ ಲೋಕದಲ್ಲಿಟ್ಟು, ಕೃಪಾಳು= ಕರುಣಾಳುವಾದ, ಕಾಮದ= ಎಲ್ಲರ ಮನೋಭೀಷ್ಟವನ್ನು ಪೂರೈಸುವ, ಕೈರವದಳಶ್ಯಾಮ= ಕರಿದಾವರೆಯಂತೆ ನೀಲವರ್ಣನಾದ, ಶ್ರೀರಾಮ= ಲೋಕರಮಣನಾದ ಶ್ರೀ ಪರಮಾತ್ಮನು, ಅವರ= ಆ ಭಕ್ತರನ್ನು, ಪೊರೆವ

ತಾತ್ಪರ್ಯ :—ಕುರಿಗಳು, ಮೇಕೆಗಳು ಅಡವಿಯಲ್ಲಿ ಜಾಲಿ (ಬೊಬ್ಬಳಿ) ತೊಪ್ಪಲನ್ನು ತಿಂದು ಮನೆಗೆ ಬಂದು ಹಾಲು ಕರೆಯುವುವು. ಎಮ್ಮೆ ಆಕಳುಗಳಂತೆ ಅವುಗಳಿಗೆ ಹತ್ತಿಯ ಬೀಜ ತವುಡು ಮೊದಲಾದವುಗಳನ್ನು ಹಾಕದೆ ಅಡವಿಯಲ್ಲಿರುವ ಅಲ್ಪವಾದ ಜಾಲಿ ತೊಪ್ಪಲನ್ನು ತಿಂದು ಹಾಲನ್ನು ಕೊಡುವುವು ಅದರಂತೆ ಪರಮಾತ್ಮನು ಭಕ್ತರು ಮಾಡುವ ಅಲ್ಪವಾದ ಪೂಜಾದಿ ಕರ್ಮಗಳನ್ನು ಪ್ರಾಕೃತವಾದ ಅನ್ನೋದಕಗಳನ್ನು ಸ್ವೀಕರಿಸಿ, ಅದರ ಫಲರೂಪವಾಗಿ ಅಮೋಘವಾದ ಮುಕ್ತಿಯಲ್ಲಿ ಸ್ವರೂಪಾನಂದವನ್ನು ಕೊಟ್ಟು ರಕ್ಷಿಸುವನು ॥೧೦॥

ಅವತಾರಿಕೆ :—ಈ ಶರೀರವು ಅನ್ನ ಉದಕ ಅಗ್ನಿ ಇವುಗಳಿಂದಲೇ ವೃದ್ಧಿ ಹೊಂದುವುದರಿಂದ ಆ ಮೂರರಲ್ಲಿ ಚಿಂತಿಸಬೇಕಾದ ದೇವತೆಗಳನ್ನೂ ತನ್ನಿಯಾಮಕ ಭಗವದ್ರೂಪಗಳನ್ನೂ ಹೇಳುತ್ತಾರೆ—

**ಶಶಿ ದಿವಾಕರ ಪಾವಕರೊಳಿಹ**
**ಅಸಿತಸಿತ ಲೋಹಿತಗಳಲಿ ಶಿವ**
**ಶ್ವಸನ ಭಾರ್ಗವಿ ಮೂವರೊಳು ಕೃಷ್ಣ ಹಯವದನ ॥**
**ವಸುಧಿಪಾರ್ದನತ್ರಿವೃತ್ ಯನಿಸಿ**

**ವಸುಮತಿಯೊಳನ್ನೋದಕಾನಲ**
**ಪೆಸರಿನಿಂದಲಿ ಸರ್ವಜೀವರ ಸಲಹುವನು ಕರುಣಿ ॥**

ಪದ್ಯಾರ್ಥ :—ಶಶಿ= ಚಂದ್ರ, ದಿವಾಕರ= ಸೂರ್ಯ, ಪಾವಕರೊಳ್ರ = ಅಗ್ನಿ ಈ ಮೂವರೊಳಗೆ, ಇಹ= ಇರುವ, ಅಸಿತ= ಕಪ್ಪು, ಸಿತ= ಬಿಳಪು, ಲೋಹಿತಗಳಲಿ= ಕೆಂಪು ಈ ಮೂರು ವರ್ಣಗಳಿಗೆ ಅಭಿಮಾನಿಗಳಾದ ಶಿವ, ಶ್ವಸನ= ವಾಯುದೇವರು, ಭಾರ್ಗವಿ= ಲಕ್ಷ್ಮೀದೇವಿಯರು, ಮೂವರೊಳು, ನಿಯಾಮಕನಾಗಿ ಶ್ರೀಕೃಷ್ಣ, ಹಯವದನ, ವಸುಧಿಪಾರ್ದನ= ಭೂಪಾಲರೂಪಿಯಾದ ದುಷ್ಟಜನರನ್ನು ನಾಶಮಾಡಿದ ಜನಾರ್ದನ, ಈ ಮೂವರು, ತ್ರಿವೃತ್‌ಯೆನಿಸಿ= ಮೂವರೊಳಗೆ ಇರುವವರು ಯೆಂದೆನಿಸಿ, ವಸುಮತಿಯೊಳು= ಭೂಮಿಯೊಳಗೆ ಅನ್ನೋದಕಾನಲ ಪೆಸರಿನಿಂದಲಿ= ಅನ್ನ, ಉದಕ, ಅಗ್ನಿಯೆಂಬ ಹೆಸರಿನಿಂದ, ಕರುಣೀ= ಕರುಣಾಳುವಾದ ಶ್ರೀಹರಿಯು, ಸರ್ವಜೀವರ, ಸಲಹುವನು.

ತಾತ್ಪರ್ಯ :—ಪ್ರಾಣಿಗಳು ಪ್ರಾಣಧಾರಣೆ ಮಾಡಬೇಕಾದರೆ ಮುಖ್ಯವಾದವು ಅನ್ನ, ಉದಕ, ಅಗ್ನಿ ಇವು ಮೂರು. ಇದರಲ್ಲಿ ಅನ್ನಕ್ಕೆ ಉಪಯುಕ್ತವಾದ್ಧ ವ್ರೀಹಿ ಅಂದರೆ ಭತ್ತ, ಗೋಧಿ ಮೊದಲಾದ ಸಸ್ಯಗಳು ವೃದ್ಧಿಯಾಗಬೇಕಾದರೆ ಚಂದ್ರನಿಂದಾಗಬೇಕು. ಔಷಧಿ ಮೊದಲಾದವುಗಳಿಗೆ ಚಂದ್ರನನ್ನೇ ರಾಜನನ್ನಾಗಿ ಮಾಡಿದರೆಂದು ಹರಿವಂಶದಲ್ಲಿ ಸ್ಪಷ್ಟ ಮಾಡಿರುವರು ಅದರಲ್ಲೂ ಮುಖ್ಯವಾದದ್ದು ಚಂದ್ರನ ಮಧ್ಯ ಭಾಗದಲ್ಲಿರುವ ಭೂಚ್ಛಾಯಾ ರೂಪವಾದ ಕಪ್ಪು. ಅದಕ್ಕಭಿಮಾನಿಗಳು ರುದ್ರದೇವರು. ಅವರಿಗೆ ನಿಯಾಮಕರು ಶ್ರೀಕೃಷ್ಣರೂಪಿಯಾದ ಪರಮಾತ್ಮ. ಸೂರ್ಯನ ಬಿಳುಪಾದ ಪ್ರಕಾಶದಿಂದ ಉದಕವು ಹುಟ್ಟುವುದು. ಸಮುದ್ರಾದಿಗತ ಉದಕವು ಸೂರ್ಯಕಿರಣದಿಂದ ಆವಿಯಾಗಿ ಮೇಘರೂಪವಾಗಿ ಮಳೆಗರೆದು ಭೂಮಿಯಲ್ಲಿ ಉದಕವಾಗುವ ಕಾರಣ ಸೂರ್ಯನಲ್ಲಿರುವ ಬಿಳಿಯ ಬಣ್ಣವೇ ಉದಕಕ್ಕೆ ಮೂಲಕಾರಣವು ಇದಕ್ಕಭಿಮಾನಿಗಳು ವಾಯುದೇವರು. ಅವರಿಗೆಂತರ್ಯಾಮಿ ಹಯಗ್ರೀವರೂಪಿಯು. ದೇಹಗತ ಅಗ್ನಿಸಂಬಂಧವಾದ ಕೆಂಪು ಬಣ್ಣಕ್ಕಭಿಮಾನಿ ರಮಾದೇವಿಯರು ತದಂತರ್ಯಾಮಿ ಜನಾರ್ದನರೂಪಿಯು ಕರುಣಾಸಮುದ್ರನಾದ ಶ್ರೀ

ಹರಿಯು ಹೀಗೆ ಅನ್ನೋದಕಗಳಿಗೆ ಅಭಿಮಾನಿಗಳಾದ, ಶಿವ, ವಾಯು ಲಕ್ಷ್ಮೀದೇವಿಯರ ಅಂತರ್ಗತನಾಗಿ ಅನ್ನ, ಉದಕ, ಅಗ್ನಿಯೆಂಬ ಹೆಸರಿನಿಂದ ತ್ರಿವೃತ್ ಎಂದರೆ ಮೂರು ರೂಪದಿಂದ ವಾಸಮಾಡುವವನೆಂದೆನಿಸಿ ರೂಪತ್ರಯಗಳಿಂದ ಸರ್ವ ಪ್ರಾಣಿಗಳನ್ನು ರಕ್ಷಿಸುವನು ||೧೮||

ಅವತಾರಿಕೆ :—ವೇದಶಾಸ್ತ್ರವನ್ನೋದಿದರೂ ಸ್ವತಂತ್ರ ಕರ್ತೃತ್ವ ಪರಮಾತ್ಮನದೆಂದು ಅರಿಯದೆ ಜನರು ಕೆಡುತ್ತಾರೆಂದು ಹೇಳುತ್ತಾರೆ—

**ದೀಪ ಕರದಲಿ ಪಿಡಿದು ಕಾಣದೆ**
**ಕೂಪದೊಳುಬಿದ್ದಂತೆ ವೇದಮ**
**ಹೋಪನಿಷದರ್ಥಗಳ ನಿತ್ಯದಿ ಪೇಳುವವರೆಲ್ಲ ||**
**ಶ್ರೀ ಪವನಮುಖವಿನುತನಮಲ ಸು**
**ರೂಪಗಳ ವ್ಯಾಪಾರ ತಿಳಿಯದೆ**
**ಪಾಪಪುಣ್ಯಕೆ ಜೀವಕತೃಕತೃಹರಿಯೆಂಬ ||**

ಪದ್ಯಾರ್ಥ :—ದೀಪ= ದೀಪವನ್ನು, ಕರದಲಿ= ಕೈಯ್ಯಲ್ಲಿ, ಪಿಡಿದು =ಹಿಡಿದುಕೊಂಡು, ಕಾಣದೆ, ಕೂಪದೊಳು=ಭಾವಿಯಲ್ಲಿ ಬಿದ್ದಂತೆ, ವೇದ, ಮಹೋಪನಿಷದರ್ಥಗಳ=ಐತರೇಯಾದಿ ಮಹಾ ಉಪನಿಷತ್ತಿನ ಅರ್ಥಗಳನ್ನು, ನಿತ್ಯದಿ, ಪೇಳುವವರೆಲ್ಲ=ಅನೇಕರು ಹೇಳುವರು, ಶ್ರೀ= ಲಕ್ಷ್ಮೀದೇವಿಯರು, ಪವನ=ವಾಯುದೇವರು, ಮುಖ=ಮೊದಲಾದ ದೇವತೆಗಳಿಂದ, ವಿನುತನ=ಸ್ತುತ್ಯನಾದ ಶ್ರೀ ಹರಿಯ, ಅಮಲ=ನಿರ್ಮಲವಾದ, ಸುರೂಪಗಳ, ವ್ಯಾಪಾರ=ಕ್ರಿಯಾವಿಶೇಷಗಳನ್ನು, ತಿಳಿಯದೆ, ಪಾಪಪುಣ್ಯಕೆ, ಜೀವಕತೃ=ಜೀವನೇಸ್ವತಂತ್ರಕರ್ತಾ, ಹರಿಯು, ಅಕರ್ತಾಯೆಂಬ=ಕರ್ತೃತ್ವ ಹರಿಗೆ ಇಲ್ಲವೆಂದು ತಿಳಿದು ಕೆಡುವರು

ತಾತ್ಪರ್ಯ :— ದೀಪವನ್ನು ಕೈಯ್ಯಲ್ಲಿ ಹಿಡಿದು ಮತ್ತೊಬ್ಬನಿಗೆ ಮಾರ್ಗವನ್ನು ತೋರಿಸುತ್ತ ತಾನು ಮಾರ್ಗವನ್ನು ಕಾಣದೆ ಭಾವಿಯಲ್ಲಿ ಬೀಳುವುದುಂಟು. ಅದರಂತೆ ವೇದವೇದಾಂತಗಳನ್ನು ವ್ಯಾಸಂಗಮಾಡಿ, ಶಾಸ್ತ್ರಾರ್ಥಗಳನ್ನು ಪರರಿಗೆ ಉಪದೇಶ ಮಾಡುತ್ತ ತಾನು ಅದನ್ನು ಸರಿಯಾಗಿ ಅನುಸಂಧಾನ ಮಾಡದೆ ಸ್ವತಂತ್ರ ಕರ್ತೃತ್ವವು ತನ್ನದೆಂತಲು ಪುಣ್ಯಪಾಪಗಳು ಮಾಡುವ ವಿಷಯಗಳಲ್ಲಿ ಪರಮಾತ್ಮನ ಪ್ರೇರಣೆ ಇಲ್ಲವೆಂದು ತಿಳಿದು ಕೆಡುತ್ತಾರೆಂಬ ಭಾವ ||೧೨||

ಅವತಾರಿಕೆ :—ವಾಯುದೇವರು ನಮ್ಮೊಳಗಿದ್ದು ಭಗವದ್ರೂಪ ಗಳ ಸ್ಮರಣೆ ಮೊದಲಾದವುಗಳನ್ನು ಮಾಡಿಸಿ ಉದ್ಧರಿಸುವರೆಂದು ಹೇಳು ತ್ತಾರೆ—

**ಅನಿಲದೇವನು ವಾಜಮನೋಮಯ**
**ನೆನೆಸಿ ಪಾವಕವರುಣಸಂಕ್ರಂ**
**ದನಮುಖಾದ್ಯರೊಳಿದ್ದು ಭಗವದ್ರೂಪಗುಣಗಳನು ||**
**ನೆನನೆನದುಚ್ಚರಿಸುತಲಿ ನ**
**ಮ್ಮನು ಸದಾ ಸಂತೈಸುವನು ಸ**
**ನ್ಮುನಿಗಣಾರಾಧಿತಪದಾಂಬುಜಗೋಜ ಸುರರಾಜ ||**

ಪದ್ಯಾರ್ಥ :—ಸನ್ಮುನಿಗಣಾರಾಧಿತಪದಾಂಬುಜ=ಉತ್ತಮರಾದ ಋಷಿಗಳಿಂದ ಪೂಜಿತವಾದ ಪಾದಕಮಲಗಳುಳ್ಳ, ಗೋಜ=ವೇದಾಂತ ಗ್ರಂಥಗಳನ್ನು ರಚಿಸಿದ, ಸುರರಾಜ=ಗರುಡ ಶೇಷ ರುದ್ರಾದಿ ದೇವತೆಗಳಿಗೆ ಅರಸನಾದ, ಅನಿಲದೇವನು=ವಾಯುದೇವರು, ವಾಜಮನೋಮಯ ನೆಸಿಸಿ=ವಾಜಮಯ, ಮನೋಮಯನೆಂಬ ಹೆಸರಿನಿಂದ, ವಾಕ್ಯಕ್ಕಭಿ ಮಾನಿಗಳಾದ, ಪಾವಕವರುಣ=ಅಗ್ನಿ ವರುಣರಲ್ಲೂ, ಸಂಕ್ರಂದನಮುಖಾ ದ್ಯರೊಳು=ಕರಚರಣಾದಿ ಇಂದ್ರಿಯಗಳಿಗೆ ಅಭಿಮಾನಿಗಳಾದ, ಇಂದ್ರಾದಿ ತತ್ವಾಭಿಮಾನಿ ದೇವತೆಗಳಲ್ಲೂ ಇದ್ದು, ಭಗವದ್ರೂಪ ಗುಣಗಳನು, ನೆನ ನೆನದು=ಸ್ಮರಿಸಿ ಸ್ಮರಿಸಿ, ಉಚ್ಚರಿಸುತಲಿ, ನಮ್ಮನು, ಸದಾ, ಸಂತೈಸು ವನು.

ತಾತ್ಪರ್ಯ :—ಮುನಿಶಬ್ದಕ್ಕೆ ಜ್ಞಾನಿಯೆಂದರ್ಥ. ಉತ್ತಮ ರಾದ ಜ್ಞಾನಿಸಮೂಹದಿಂದ, ಅಥವಾ ವಸಿಷ್ಠಾದಿ ಸನ್ಮುನಿಗಳಿಂದ ಪೂಜಿತ ವಾದ ಪಾದಕಮಲಗಳುಳ್ಳವರು ವಾಯುದೇವರು ಮತ್ತು ಗೋಜ ಅಂದರೆ "ಗಾಃ=ವೇದಾಂತರೂಪವಾದ ವಾಣಿ, ಜಾತಾಯಸ್ಮಾತ್ಸಃ ಗೋಜಃ" ಗಾಃ ಅಂದರೆ ವೇದಾಂತ ವಾಕ್ಯಗಳೆಂದರ್ಥ. ವೇದಾಂತ ಗ್ರಂಥಗಳು ಯಾರ ದೆಸೆಯಿಂದ ಹುಟ್ಟಿದವೋ ಅವರಿಗೆ ಗೋಜ ಎಂದು ಹೆಸರು ವಾಯುದೇವರೇ ಮಧ್ವಾವತಾರದಿಂದ ವೇದಾಂತ ಗ್ರಂಥಗ ಳನ್ನು ರಚಿಸಿದವರೆಂದರ್ಥ. ಇವರು ರುದ್ರದೇವರು ಮೊದಲಾದ ದೇವತೆ ಗಳಿಗೆ ಅರಸರು ಇಂತಹ ವಾಯುದೇವರು ವಾಕ್ಯಭಿಮಾನಿ ಅಗ್ನಿ, ನಾಲಿ

ಗೆಗೆ ಅಭಿಮಾನಿ ವರುಣ, ಮನೋಶಬ್ದದಿಂದ ಚಿತ್ತವನ್ನು ತೆಗೆದುಕೊಳ್ಳ ಬೇಕು. ಚಿತ್ತಾಭಿಮಾನಿಗಳು ತಾವೇ ಆಗಿರುವರು. ಅಥವಾ ಮನೋಭಿ ಮಾನಿ ಚಂದ್ರ ಇವರುಗಳಲ್ಲಿ ವಾಙಮಯ, ಮನೋಮಯ, ಎಂಬ ಹೆಸರಿನಿಂದ, ಇರುವದಲ್ಲದೆ, ಕರಚರಣಾದಿಗಳಿಗೆ ಅಭಿಮಾನಿಗಳಾದ ಇಂ ದ್ರಾದಿ ತತ್ವೇಶರಲ್ಲೂ ಇದ್ದು ಸರ್ವ ಕಾಲದಲ್ಲೂ ಪರಮಾತ್ಮನ ಗುಣರೂಪ ಗಳನ್ನು ಸ್ಮರಿಸುತ್ತ ಬಾಯಿಂದಲೂ ಉಚ್ಚರಿಸುತ್ತ ಇರುವರು. ಅಂದರೆ ನಮ್ಮಗಳ ವಾಕ್ಯದಲ್ಲೂ, ಮನಸ್ಸಿನಲ್ಲೂ ಇದ್ದಂತೆ ಇಂದ್ರಾದಿ ತತ್ವಾಭಿ ಮಾನಿಗಳ ವಾಕ್ಯದಲ್ಲೂ, ಮನಸ್ಸಿನಲ್ಲೂ ಸಹ ವಾಙಮಯ, ಮನೋ ಮಯನೆನಿಸಿ ವಾಸವಾಗಿದ್ದು ಭಗವನ್ಮಾಹಾತ್ಮ್ಯಗಳನ್ನು ಮನಸ್ಸಿನಿಂದ ಸ್ಮರಿಸಿ, ಬಾಯಿಂದ ಉಚ್ಚರಿಸಿ, ಸಕಲ ಪ್ರಾಣಿಗಳೂ ಮನೋವಾಕ್ಯಗ ಳಿಂದ ಸ್ಮರಿಸವಂತೆಯೂ ಉಚ್ಚರಿಸುವಂತೆಯೂ ಮಾಡಿ ಉದ್ಧಾರ ಮಾಡುವನೆಂಬ ತಾತ್ಪರ್ಯ ||೧೩||

ಅವತಾರಿಕೆ.—ಮನೋವಾಕ್ಮಯರಾದ ವಾಯುದೇವರಲ್ಲಿ ರೂಪ ದ್ವಯದಿಂದ ಪರಮಾತ್ಮನಿದ್ದು ಶಾಸ್ತ್ರಪುರಾಣಾದಿಗಳ ಪಠನ ಮನನಾದಿಗ ಳನ್ನು ಮಾಡಿಸಿ ಸಜ್ಜನರನ್ನು ರಕ್ಷಿಸುವನೆಂದು ಹೇಳುತ್ತಾರೆ—

ಪಾದವೆನಿಪವು ವಾಙ್ಮನೋಮಯ
ಪಾದರೂಪದ್ವಯಗಳೊಳು ಪ್ರ
ಹ್ಲಾದಪೋಷಕ ಸಂಕರ್ಷಣಾಹ್ವಯದಿ ನೆಲಸಿದ್ದು ||
ವೇದಶಾಸ್ತ್ರಪುರಾಣಗಳ ಸಂ
ವಾದರೂಪದಿ ಮನನಗೈವುತ
ಮೋದವುಣಿಸ ಬಿವಿತ್ತು ಸಲಹುವ ಸರ್ವಸಜ್ಜನರ ||

ಪದ್ಯಾರ್ಥ :—ವಾಗ್ಮನೋಮಯ=ವಾಕ್ಮಯ ಮನೋಮಯ ಎಂಬಿವೆರಡೂ, ಪಾದವೆನಿಪುದು = ಪಾದಗಳೆನಿಸುವವು ಪಾದರೂಪ ದ್ವಯಗಳೊಳು=ವಾಗ್ಮಯ ಮನೋಮಯವೆಂಬ ಪಾದರೂಪವಾದ ಇವೆರಡರಲ್ಲಿ ಪ್ರಹ್ಲಾದಪೋಷಕ=ಪ್ರಹ್ಲಾದನನ್ನು ರಕ್ಷಿಸಿದ ನರಸಿಂಹ ದೇವರೂ ಸಂಕರ್ಷಣಾಹ್ವಯದಿ=ಸಂಕರ್ಷಣನೆಂಬ ಈ ಎರಡು ಹೆಸರುಗ ಳಿಂದ, ನೆಲಸಿದ್ದು=ಪರಮಾತ್ಮನು ವಾಸವಾಗಿದ್ದು, ವೇದಶಾಸ್ತ್ರಪುರಾಣ

ಗಳ, ಸಂವಾದರೂಪದಿ=ಶ್ರವಣಾಧಿಕಾರಿಗಳು ಪಠನಾಧಿಕಾರಿಗಳನ್ನನುಸರಿಸಿ, ಪಠನೆ ಮಾಡಿಸಿ. ಶ್ರವಣದಿಂದ ಮನನವನ್ನು ಮಾಡಿಸುತ್ತ ಮೋದಮಯ ಆನಂದ ಸ್ವರೂಪನಾದ ಹರಿಯು, ಸರ್ವ ಸಜ್ಜನರ, ಸುಖವಿತ್ತು ಸಲಹುವನು.

ತಾತ್ಪರ್ಯ :—ನಡೆಯುವವರಿಗೆ ಪಾದಗಳು ಹೇಗೆ ಮುಖ್ಯವಾದವೋ ಹಾಗೆ ಜ್ಞಾನಮಾರ್ಗವನ್ನು ನಡೆದು ಮುಕ್ತ ಸ್ಥಾನವನ್ನು ಸೇರುವುದಕ್ಕೆ ವಾಕ್, ಮನಸ್ಸು ಇವೆರಡೂ ಮುಖ್ಯವಾದವು ಮೇಲಿನ ಪದ್ಯದಲ್ಲಿ ವಾಕ್ಮನೋಭಿಮಾನಿಗಳಲ್ಲಿ ವಾಯುದೇವರೇ ಇರುವರೆಂದು ಹೇಳಿದ್ದರು. ಮುಕ್ತಿಗೆ ಹೋಗಲಿಕ್ಕೆ ವಾಕ್ಮಯ ಒಂದು ಪಾದ, ಮನೋಮಯ ಒಂದು ಪಾದ. ವಾಯುದೇವರೇ ಪಾದದ್ವಯರೂಪರಾಗಿ ಇರುವರು. ಈ ಪಾದದ್ವಯದಲ್ಲಿ ವಾಕ್ಮಯರೂಪದಲ್ಲಿ ನರಸಿಂಹ ದೇವರು, ಮನೋಮಯರೂಪದಲ್ಲಿ ಸಂಕರ್ಷಣ ದೇವರು ಇರುವರು ಭಾರತಾದಿ ಶಾಸ್ತ್ರಗಳು, ಋಗಾದಿ ವೇದಗಳು, ಭಾಗವತಾದಿ ಪುರಾಣಗಳು ಇವುಗಳ ಶ್ರವಣ, ಪಠನ, ಮನನಗಳೇ ಜ್ಞಾನಕ್ಕೆ ಸಾಧನವು. ಇವುಗಳನ್ನು ಪಠನ ಮಾಡುವದು, ವಾಕ್ಮಯ ವ್ಯಾಪಾರ. ಈ ವಾಕ್ಮಯ ರೂಪಿಯಾದ ವಾಯುದೇವರಲ್ಲಿ ನರಸಿಂಹರೂಪಿಯಾದ ಪರಮಾತ್ಮನಿದ್ದು, ವೇದ ಶಾಸ್ತ್ರಾದಿಗಳನ್ನು ಪಠನೆ ಮಾಡಿಸುವನು ಶ್ರವಣಮಾಡಿ ಅವುಗಳನ್ನು ಮನನ ಮಾಡುವದು ಮನೋವ್ಯಾಪಾರವು. ಇಲ್ಲಿ ಮನೋರೂಪಿಯಾದ ವಾಯುದೇವರಲ್ಲಿ ಸಂಕರ್ಷಣ ನಾಮಕ ಪರಮಾತ್ಮನಿದ್ದು ಮನನಮಾಡಿಸುವನು. ಪರಮಾತ್ಮನು ಸ್ವಯಂ ನಿತ್ಯಾನಂದಮಯನು. ಗ್ರಂಥಗಳ ಪಠನ ಶ್ರವಣಾದಿಗಳನ್ನು ಮಾಡಿಸಿ ಸಜ್ಜನರಿಗೆ ಜ್ಞಾನ ಹುಟ್ಟಿಸಿ ಸಾಧನೆ ಪೂರ್ತಿ ಮಾಡಿಸಿ ಅಪರೋಕ್ಷ ಜ್ಞಾನವನ್ನು ಹುಟ್ಟಿಸಿ ಕಡೆಗೆ ಮುಕ್ತಿಯನ್ನು ಕೊಟ್ಟುದ್ಧರಿಸುವನು ||೧೪||

ಅವತಾರಿಕೆ :— ಪರಮಾತ್ಮನು ಇಂತಹ ಮಹಿಮೆಯುಳ್ಳವನಾದುದರಿಂದ ಇವನನ್ನು ನಿತ್ಯದಲ್ಲೂ ಸ್ತುತಿಸಿ ಆನಂದಪಡುತ್ತ ನಿರ್ಲಿಪ್ತನಾಗಿರು ಎಂದು ಅಧಿಕಾರಿಕೆ ಹೇಳುತ್ತಾರೆ—

ಗಂಧವಹ ದಶದಿಶಗಳೊಳಗರ
ವಿಂದಸೌರಭ ಪಸರಿಸುತ ಘ್ರಾ
ಣೇಂದ್ರಿಯಗಳಿಗೆ ಸುಖವನೀವುತ ಸಂಚರಿಸುವಂತೆ ||
ಇಂದಿರೇಶನ ಸುಗುಣಗಳ ದೈ
ನಂದಿನದಿ ತುತಿಸುತನುಮೋದಿಸು
ಅಂಧಬಧಿರಸುಮೂಕನಂತಿರು ಮಂದಜನರೊಡನೆ ||

ಪದ್ಯಾರ್ಥ :—ಗಂಧವಹ=ಗಾಳಿಯು, ದಶ ದಿಶಗಳೊಳಗೆ= ಹತ್ತು ದಿಕ್ಕುಗಳಲ್ಲೂ, ಅರವಿಂದ=ಕಮಲದ, ಸೌರಭ=ಸುವಾಸನೆಯನ್ನು ಪಸರಿಸುತ=ಹರಡುತ್ತ, ಘ್ರಾಣೇಂದ್ರಿಯಗಳಿಗೆ=ವಾಸನೆ ನೋಡುವ ಮೂಗಿಗೆ, ಸುಖವನೀವುತ, ಸಂಚರಿಸುವಂತೆ=ಸಂಚಾರ ಮಾಡುವಂತೆ, ಇಂದಿರೇಶನ, ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನ, ಸುಗುಣಗಳ= ಒಳ್ಳೆ ಗುಣಗಳನ್ನು, ದೈನಂದಿನದಿ=ಪ್ರತಿ ದಿವಸದಲ್ಲೂ, ತುತಿಸುತ= ಸ್ತುತಿಸುತ್ತ, ಅನುಮೋದಿಸುತ=ಸ್ತೋತ್ರಮಾಡುವವರನ್ನು ನೋಡಿ ಸಂತೋಷಪಡುತ್ತಲೂ, ಮಂದಜನರೊಡನೆ=ಅಜ್ಞ ಜನರಲ್ಲಿ, ಅಂಧ= ಕುರುಡನಂತೆಯು, ಬಧಿರ=ಕಿವುಡನಂತೆಯೂ, ಸು=ಒಳ್ಳೆಯ (ಕೇವಲ) ಮೂಕನಂತಿರು=ಮೂಕನಂತೆಯೂ ಇರು ||೧೫||

ತಾತ್ಪರ್ಯ :—ಗಾಳಿಯು ಕಮಲಪುಷ್ಪದಲ್ಲಿರುವ ಸುವಾಸನೆಯನ್ನು ತಾನು ಸ್ವೀಕರಿಸಿ ಅಲ್ಲಲ್ಲಿ ಕೂತಿರುವ ಜನರ ಘ್ರಾಣೇಂದ್ರಿಯಗಳಿಗೆ ಸುವಾಸನೆಯನ್ನು ಕೊಟ್ಟು, ಆ ಜನರಿಗೆ ಆನಂದವನ್ನುಂಟುಮಾಡುವದು. ತಾನು ನಿರ್ಲಿಪ್ತವಾಗಿಯೇ ಇರುವದು. ಅದರಂತೆ ಇಂದಿರೇಶನ ಉತ್ಕೃಷ್ಟವಾದ ಗುಣಗಳನ್ನು ನೀನು ಸ್ವೀಕರಿಸಿದರೂ ಗಾಳಿಯು ಹೇಗೆ ಆ ಸುಗಂಧವನ್ನು ಪರರಿಗೆ ಕೊಟ್ಟು ತಾನು ನಿರ್ಲಿಪ್ತವಾಗಿರುವದೋ ಹಾಗೆ ಭಗವಂತನನ್ನು ನಾನು ಸ್ತುತಿಸಿದೆನು ನಾನು ಜ್ಞಾನಿಯು, ನಾನು ಭಕ್ತನು, ಎಂಬ ಕರ್ತೃತ್ವಾಭಿಮಾನವನ್ನು ಇಟ್ಟುಕೊಳ್ಳದೆ, ಪರಮಾತ್ಮನಿಗೆ ಆ ಸ್ತೋತ್ರಪೂಜಾದಿಗಳನ್ನು ಸಮರ್ಪಿಸಿ ನಿರ್ಲಿಪ್ತನಾಗಿರು. ಅಥವಾ ಗಾಳಿಯು ಘ್ರಾಣೇಂದ್ರಿಯಗಳಿಗೆ ಮಾತ್ರವೇ ಸುಗಂಧವನ್ನು ಕೊಟ್ಟು ಆನಂದ ಪಡಿಸುವಂತೆ, ನೀನು ಮಾಡುವ ಸ್ತೋತ್ರಾದಿಗಳನ್ನು ಪೂಜಾದಿಗಳನ್ನೂ

ಸಜ್ಜನರು ಮಾತ್ರ ಕೇಳಿ ಆನಂದಪಡುವಂತೆ ಮಾಡು ಪಾಪಿಗಳಾದ ತಮೋಯೋಗ್ಯರನ್ನು ನೋಡುವಾಗ ಕುರುಡನಂತಿರು. ಅವರು ನಿನ್ನನ್ನು ದೂಷಿಸಿದರೆ ಕಿವುಡನಂತಿರು. ಅವರ ಕೂಡ ಮಾತನಾಡಬೇಕಾದರೆ ಮೂಕನಾಗು. ಇದೇ ಜ್ಞಾನಿಗಳ ಲಕ್ಷಣವು ಜ್ಞಾನಿಗಳ ಲಕ್ಷಣವನ್ನು ಜಗನ್ನಾಥದಾಸರಾಯರವರು "ಮೂಕಾಬಧಿರರಂತಿಪ್ಪರೊನೊಳ್ಪಾಜನಕೆ" ಎಂದು ಹೇಳಿರುವರು ಅದರಂತೆ ಇರಬೇಕೆಂಬ ತಾತ್ಪರ್ಯ||೧೫||

ಅವತಾರಿಕೆ:—ಮುಕ್ತರಾಗಿ ವೈಕುಂಠವನ್ನು ಪ್ರವೇಶ ಮಾಡುವಾಗ ಯಾವಯಾವ ಅಧಿಕಾರಿಗಳು ಯಾವಯಾವ ದ್ವಾರಗಳಿಂದ ಪ್ರವೇಶ ಮಾಡುತ್ತಾರೆಂಬುವದನ್ನು ನಾಲ್ಕು ಪದ್ಯಗಳಿಂದ ಹೇಳುತ್ತಾರೆ ಅದರಲ್ಲಿ ಶ್ರೀರಮಣನೆಂಬ ಪದ್ಯದಿಂದ ಪೂರ್ವದಿಕ್ಕಿನಿಂದ ಪ್ರವೇಶಮಾಡುವ ಅಧಿಕಾರಿಗಳನ್ನು ಹೇಳುತ್ತಾರೆ—

ಶ್ರೀರಮಣನರಮನೆಯ ಪೂರ್ವ
ದ್ವಾರದಲ್ಲಿಹ ಸಂಜ್ಞಾಸೂರ್ಯಗ
ಭಾರತೀಪತಿ ಪ್ರಾಣನೊಳಗಿಹ ಲಕುಮಿನಾರಾಯಣನ ||
ಸೇರಿ ಮನುಜೋತ್ತಮರು ಸರ್ವ ಶ
ರೀರಗತ ನಾರಾಯಣನವ
ತಾರಗುಣಗಳ ತುತಿಸುತಲಿ ಮೋದಿಪರು ಮುಕ್ತಿಯಲಿ ||

ಪದ್ಯಾರ್ಥ .—ಶ್ರೀರಮಣನ=ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನ, ಅರಮನೆಯ = ವೈಕುಂಠಲೋಕದ ಪೂರ್ವದ್ವಾರದಲ್ಲಿ, ಇಹ =ಇರುವ, ಸಂಜ್ಞಾಸೂರ್ಯಗೆ=ಸಂಜ್ಞಾ ಎಂಬ ಭಾರ್ಯಳಿಂದ ಕೂಡಿದ ಸೂರ್ಯನೊಳಗಿರುವ, ಭಾರತೀಪತಿ ಪ್ರಾಣನೊಳಗಿಹ=ಭಾರತೀದೇವೀರ ಗಂಡಂದಿರಾದ ವಾಯುದೇವರಲ್ಲಿರುವ, ಲಕುಮಿನಾರಾಯಣನ=ಲಕ್ಷ್ಮೀನಾರಾಯಣರನ್ನು, ಮನುಜೋತ್ತಮರು=ಮನುಷ್ಯೋತ್ತಮರು, ಸೇರಿ, ಸರ್ವಶರೀರಗತ, ನಾರಾಯಣನ ಅವತಾರ ಗುಣಗಳನು, ತುತಿಸುತಲಿ=ಸ್ತೋತ್ರಮಾಡುತ್ತ, ಮುಕ್ತಿಯಲಿ, ಮೋದಿಪರು=ಆನಂದಪಡುವರು

ತಾತ್ಪರ್ಯ:—ಪ್ರಾಣಿಗಳ ದೇಹಗಳಲ್ಲಿ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಐದು ಗಾಳಿಗಳು ವ್ಯಾಪಿಸಿಕೊಂಡಿರುವವು.

ಇವುಗಳಲ್ಲಿ ಪ್ರಾಣಾಪಾನಾದಿ ಹೆಸರಿನಿಂದ ಮುಖ್ಯ ಪ್ರಾಣದೇವರೇ ಜಡ ವಾಯುಗಳಿಗೆ ಪ್ರೇರಕರಾಗಿ, ಅವುಗಳ ಕಾರ್ಯವನ್ನು ಮಾಡಿಸುತ್ತಿರುವರು. ಇದಲ್ಲದೆ ಪ್ರಾಣಾಪಾನಾದಿ ಜಡ ವಾಯುಗಳಿಗೆ ಸೂರ್ಯ ಚಂದ್ರಾದಿಗಳು ಅಭಿಮಾನಿಗಳಾಗಿರುವರು ಅವರಂತರ್ಯಾಮಿಯಾಗಿ ಪ್ರಾಣಾಪಾನಾದಿ ಹೆಸರಿನಿಂದ ವಾಯುದೇವರು ಇರುವರು. ಯಾವಯಾವ ವಾಯುಗಳಿಗೆ ಅಮುಖ್ಯಾಭಿಮಾನಿಗಳಾರು ಅಂದರೆ, ಪಂಚರಾತ್ರಾಗಮದಲ್ಲಿ "ಪ್ರಾಣಾಭಿಮಾನೀಚಕ್ಷೋಃಶ್ಚ ಸೂರ್ಯ ಏವ ಉದಾಹೃತಃ ತೇಜೋನ್ನಾದ್ಯಭಿಮಾನೀಚ ಪ್ರಾಗ್ದ್ವಾರಾಧಿಪತಿರ್ಹರೇಃ" ಪ್ರಾಣವಾಯುವಿಗೂ, ನೇತ್ರಗಳಿಗೂ, ತೇಜಸ್ತತ್ವಕ್ಕೂ, ಅನ್ನಾದಿಗಳಿಗೂ ಸಹ ಅಭಿಮಾನಿಯು ಸೂರ್ಯನು. ಇದೇ ಸೂರ್ಯನು ಪರಮಾತ್ಮನ ಪೂರ್ವದ್ವಾರಾಧಿಪತಿಯಾಗಿರುವನೆಂದು ಹೇಳಿರುವರು. ಛಾಂದೋಗ್ಯಭಾಷ್ಯದಲ್ಲಿ "ಸೂರ್ಯಪ್ರಸಾದಾಸ್ತುನರಾಃ ಪೂರ್ವದ್ವಾರೇಣ ಕೇಶವಃ ಪ್ರಾಪ್ನುವಂತಿ" ಪೂರ್ವದ್ವಾರಾಧಿಪತಿಯಾದ ಸೂರ್ಯನ ಪ್ರಸಾದದಿಂದ ಮನುಷ್ಯೋತ್ತಮರು ಪೂರ್ವದ್ವಾರದಿಂದ ಪರಮಾತ್ಮನನ್ನು ಹೊಂದುವರೆಂದು ಹೇಳಿರುವರು. ಅದೇ ಅರ್ಥವನ್ನೇ ದಾಸರಾಯರು ಇಲ್ಲಿ ಹೇಳುತ್ತಾರೆ. "ಪೂರ್ವದ್ವಾರದಲ್ಲಿ ಸಂಜ್ಞಾ ನಾಮಕಳಾದ ಹೆಂಡತಿಯಿಂದೊಡಗೂಡಿ ಪ್ರಾಣಾಭಿಮಾನಿ ಸೂರ್ಯನು ಇರುವನು. ಅವನೊಳಗೆ ಶ್ರೀ ಭಾರತೀಪತಿಯಾದ ಪ್ರಾಣದೇವರು ಪ್ರಾಣನಾಮಕರಾಗಿ ಇರುವರು. ಮನುಷ್ಯೋತ್ತಮರು ಮುಕ್ತಿಯನ್ನು ಹೊಂದುವಾಗ ಸೂರ್ಯನ ದ್ವಾರಾ ಪ್ರಾಣದೇವರನ್ನು ಹೊಂದಿ, ಅವರನುಗ್ರಹದಿಂದ ಅವರಂತರ್ಯಾಮಿಯಾದ ಶ್ರೀ ಲಕ್ಷ್ಮೀನಾರಾಯಣರನ್ನು ಸೇರುವರು. ಆಗಲೇ ಅವರು ಮುಕ್ತರಾದರು. ಅನಂತರ ಬೇಕಾದ ಸ್ಥಳಗಳಲ್ಲಿ ಸ್ವೇಚ್ಛಾವಿಹಾರ ಮಾಡುತ್ತಾ ಸ್ವಭಾವದಿಂದ ಸರ್ವ ಶರೀರಗತ ಭಗವದ್ರೂಪಗಳನ್ನು ಅವತಾರ ರೂಪಗಳನ್ನು ಗುಣಗಳನ್ನು ಕೊಂಡಾಡುತ್ತಾ ಸ್ವರೂಪಾನಂದವನ್ನು ಹೊಂದಿ ಸುಖದಿಂದ ವಾಸಮಾಡುತ್ತಿರುವರು ||೧೬||

ಅವತಾರಿಕೆ :—ದಕ್ಷಿಣದ್ವಾರದಿಂದ ವೈಕುಂಠ ಪ್ರವೇಶ ಮಾಡುವ ಅಧಿಕಾರಿಗಳನ್ನು ಹೇಳುತ್ತಾರೆ :—

ಪ್ರಣವಪ್ರತಿಪಾದ್ಯನ ಪುರದ ದ
ಕ್ಷಿಣಕವಾಟದಲಿಪ್ಪ ಶಶಿರೋ
ಹಿಣಿಗತವ್ಯಾನಸ್ಥಕೃತಿಪ್ರದ್ಯುಮ್ನರೂಪವನು ||
ಗುಣಗಳನು ಸಂಸ್ತುತಿಸುತಲಿ ಪಿತೃ
ಗಣಗದಾಧರನತಿವಿಮಲ ಪ
ಟ್ಟಣದೊಳಗೆ ಸ್ವೇಚ್ಛಾನುಸಾರದಿ ಸಂಚರಿಸುತಿಹರು ||

ಪದ್ಯಾರ್ಥ :— ಪ್ರಣವಪ್ರತಿಪಾದ್ಯನ=ಓಂಕಾರ ಪ್ರತಿಪಾದ್ಯನಾದ ಶ್ರೀಪರಮಾತ್ಮನ, ಪುರದ=ವೈಕುಂಠದ, ದಕ್ಷಿಣಕ ವಾಟದಲಿ=ದಕ್ಷಿಣದ ಬಾಗಿಲಿನಲ್ಲಿ, ಇಪ್ಪ=ಇರುವ, ಶಶಿ=ಚಂದ್ರನು, ರೋಹಿಣಿ=ಅವನ ಹೆಂಡತಿಯಾದ ರೋಹಿಣಿದೇವಿಯು, ಇವರಿಬ್ಬರೊಳಗೆ, ಗತ=ಪ್ರವಿಷ್ಟರಾದ, ವ್ಯಾನಸ್ಥ=ವ್ಯಾನನಾಮಕಪ್ರಾಣದೇವರ ಅಂತರ್ಯಾಮಿಯಾದ, ಕೃತಿ=ಕೃತಿನಾಮಕ ಲಕ್ಷ್ಮೀದೇವಿಯರಿಂದ ಕೂಡಿದ, ಪ್ರದ್ಯುಮ್ನರೂಪವನು=ಪ್ರದ್ಯುಮ್ನನಾಮಕ ಶ್ರೀ ಪರಮಾತ್ಮನ ಗುಣಗಳನ್ನು, ಸಂತುತಿಸುತಲಿ=ಚೆನ್ನಾಗಿ ಸ್ತೋತ್ರಮಾಡುತ್ತ, ಪಿತೃಗಣ=ಪಿತೃಗಣಗಳು, ಗದಾಧರನ=ಗದೆಯನ್ನು ಧರಿಸಿರುವ ಶ್ರೀಹರಿಯ, ಅತಿವಿಮಲ=ಅತ್ಯಂತ ನಿರ್ಮಲವಾದ, ಪಟ್ಟಣದೊಳಗೆ, ಸ್ವೇಚ್ಛಾನುಸಾರದಿ, ಸಂಚರಿಸುತಿಹರು.

ತಾತ್ಪರ್ಯ:—ದೇಹಗತ ವ್ಯಾನನಾಮಕ ಜಡವಾಯುವಿಗೆ ಅಧಿಪತಿಯು ಚಂದ್ರನು ಅವನು ಕಿವಿಗಳಿಗೂ ಅಧಿಪತಿಯಾಗಿ ಇರುವನು. ವ್ಯಾನನಾಮಕರಾದ ಮುಖ್ಯ ಪ್ರಾಣದೇವರು ಅವನಂತರ್ಯಾಮಿಯಾಗಿರುವರು ಹೀಗೆ ತನ್ನ ಅಂತರ್ಯಾಮಿಯಾದ ವ್ಯಾನನಾಮಕ ಪ್ರಾಣದೇವರಿಂದ ಕೂಡಿ ಪರಮಾತ್ಮನ ಮನೆಯ ದಕ್ಷಿಣದಿಕ್ಕಿಗೆ ಚಂದ್ರನು ಅಧಿಪತಿಯಾಗಿರುವನು. "ದಕ್ಷಿಣಾಧಿಪತಿಸ್ಸೋಮಃ, ವ್ಯಾನಃ ಶ್ರೋತ್ರಾಭಿಮಾನವಾನ್ ||" ಎಂಬ ಪಾಂಚರಾತ್ರಾಗಮದ ವಾಕ್ಯದಿಂದ ಈ ಅರ್ಥವು ಸಿದ್ಧವಾಗುವುದು ಛಾಂದೋಗ್ಯ ಭಾಷ್ಯದಲ್ಲೂ "ಪ್ರಾಪ್ನುವಂತ್ಯಥ ಸೋಮಸ್ಯ ಪ್ರಸಾದಾತ್ಪಿತರಸ್ತಥಾ" ಎಂದು ಹೇಳಿರುವರು. ಈ ಪ್ರಮಾಣಾರ್ಥವನ್ನೇ ದಾಸರಾಯರು ಇಲ್ಲಿ ವಿಶದಮಾಡಿರುತ್ತಾರೆ. ಓಂಕಾರ ಪ್ರತಿಪಾದ್ಯನಾದ ಶ್ರೀ ಪರಮಾತ್ಮನ ದಕ್ಷಿಣದ್ವಾರಾಧಿಪತಿಯು ರೋಹಿಣೀ

ಸಮೇತನಾದ ಚಂದ್ರನು, ಇವನಂತರ್ಗತರು ವ್ಯಾನನಾಮಕ ವಾಯು ದೇವರು, ಪಿತೃಗಣಗಳು ಮುಕ್ತರಾಗಿ ಪರಮಾತ್ಮನ ಮನೆಯ ದಕ್ಷಿಣದ್ವಾರದಲ್ಲಿರುವ ಚಂದ್ರನ ಪ್ರಸಾದದಿಂದ ಆ ದ್ವಾರದಲ್ಲಿ ಪ್ರವೇಶಮಾಡಿ ಅಲ್ಲಿ ಚಂದ್ರಾಂತರ್ಗತ ವ್ಯಾನನಾಮಕ ಪ್ರಾಣದೇವರ ಅಂತರ್ಯಾಮಿಯಾದ ಶ್ರೀ ಕೃತಿದೇವಿ ಸಮೇತನಾದ ಶ್ರೀ ಪ್ರದ್ಯುಮ್ನರೂಪವನ್ನು ಉಪಾಸನೆ ಮಾಡುತ್ತ ಅವನ ಗುಣಗಳನ್ನು ಕೊಂಡಾಡುತ್ತ ಸ್ವೇಚ್ಛಾನುಸಾರವಾಗಿ ವಿಹಾರ ಮಾಡಿಕೊಂಡು ಸ್ವರೂಪಸುಖವನ್ನನುಭವಿಸುವರು ||೧೭||

ಅವತಾರಿಕೆ :— ಪಶ್ಚಿಮದ್ವಾರದಿಂದ ಮುಕ್ತಿ ಹೊಂದುವ ಅಧಿಕಾರಿಗಳನ್ನು ಹೇಳುತ್ತಾರೆ—

**ಅಮಿತವಿಕ್ರಮನಾಲಯದ ಪ**
**ಶ್ಚಿಮಕವಾಟದಿ ಸತಿಸಹಿತ ಸಂ**
**ಭ್ರಮದಿ ಭಗವದ್ಗುಣಗಳನೆ ಪೊಗಳುತಲಿ ಮೋದಿಸುವ ||**
**ಸುಮನಸಾಸ್ಯನೊಳಿಪ್ಪಪಾನಗ**
**ದಮನ ಸಂಕರುಷಣನ ನಿಜ ಹೃ**
**ತ್ಕಮಲದೊಳು ಧೇನಿಸುವ ಋಷಿಗಣಯೈದಿ ಸುಖಿಸುವರು ||**

ಪದ್ಯಾರ್ಥ :— ಅಮಿತ ವಿಕ್ರಮನ=ಅಪರಿಮಿತ ಪರಾಕ್ರಮಶಾಲಿಯಾದ ಶ್ರೀ ಪರಮಾತ್ಮನ, ಆಲಯದ=(ಮನೆಯ) ವೈಕುಂಠದ, ಪಶ್ಚಿಮ ಕವಾಟದಿ=ಪಶ್ಚಿಮ ದ್ವಾರದಲ್ಲಿ, ಸತಿಸಹಿತ=ಭಾರ್ಯಳಾದ ಸ್ವಾಹಾದೇವಿಯಿಂದೊಡಗೂಡಿ, ಸಂಭ್ರಮದಿ=ಸಂತೋಷದಿಂದ, ಭಗವದ್ಗುಣಗಳನೆ =ಪರಮಾತ್ಮನ ಗುಣಗಳನ್ನು, ಪೊಗಳುತಲಿ=ಸ್ತೋತ್ರಮಾಡುತ್ತ, ಮೋದಿಸುವ=ಆನಂದಪಡುತ್ತಿರುವ, ಸುಮನಸಾಸ್ಯನೊಳು=ದೇವತೆಗಳಿಗೆ ಮುಖದಂತಿರುವ, ಅಗ್ನಿಯೊಳಗೆ, ಇಪ್ಪ=ಇರುವ,ಅಪಾನಗ=ಅಪಾನ ವಾಯುದೇವರ ಅಂತರ್ಯಾಮಿಯಾದ, ದಮನ=ಸಂಹಾರರೂಪಕನಾದ, ಸಂಕರ್ಷಣನ=ಸಂಕರ್ಷಣರೂಪಿಪರಮಾತ್ಮನನ್ನು, ನಿಜಹೃತ್ಕಮಲದೊಳು =ತಮ್ಮ ಹೃದಯಕಮಲದಲ್ಲಿ, ಧೇನಿಸುವ, ಧ್ಯಾನಮಾಡುತ್ತಿರುವ, ಋಷಿಗಣ=ಋಷಿಸಮೂಹವು, ಯೈದಿ=ಪಶ್ಚಿಮದ್ವಾರದಿಂದ ಮುಕ್ತರಾಗಿ ಪ್ರವೇಶಮಾಡಿ, ಸುಖಿಸುವರು=ಸ್ವರೂಪಾನಂದವನ್ನನುಭವಿಸುತ್ತ ಸುಖದಿಂದಿರುವರು.

ತಾತ್ಪರ್ಯ :— ಅಪಾನನಾಮಕ ಜಡವಾಯುವಿಗೆ ಅಭಿಮಾನಿಯೂ ಮತ್ತು ವಾಕ್ಯಕ್ಕೂ ಅಭಿಮಾನಿಯಾದ ಅಗ್ನಿಯು ತನ್ನ ಪತ್ನಿಯಾದ ಸ್ವಾಹಾಸಮೇತನಾಗಿ ಪರಮಾತ್ಮನ ಮನೆಯ ಪಶ್ಚಿಮದ ಬಾಗಿಲಲ್ಲಿ ಪರಮಾತ್ಮನನ್ನು ಸ್ತುತಿಸುತ್ತ ಇರುವನು. ಅವನಂತರ್ಯಾಮಿ ಅಪಾನವಾಯುದೇವರು. ಋಷಿಗಣಗಳು ಮುಕ್ತರಾಗಿ ಅಗ್ನಿದೇವರ ಪ್ರಸಾದದಿಂದ ಪಶ್ಚಿಮದ್ವಾರದಿಂದ ಪ್ರವೇಶಮಾಡಿ ಅಗ್ನ್ಯಂತರ್ಗತ ಅಪಾನಾಂತರ್ಗತ ಸಂಕರ್ಷಣರೂಪಿಯಾದ ಶ್ರೀ ಪರಮಾತ್ಮನನ್ನು ಹೃದಯಕಮಲದಲ್ಲಿ ಧ್ಯಾನಿಸುತ್ತ ಸ್ವೇಚ್ಛಾನುಸಾರವಾಗಿ ವಿಹಾರ ಮಾಡುತ್ತಾ ಸ್ವರೂಪಾನಂದವನ್ನು ಅನುಭವಿಸುತ್ತಿರುವರು ||೧೮||

ಅವತಾರಿಕೆ :—ಉತ್ತರದ್ವಾರದಿಂದ ಮುಕ್ತರಾಗುವವರನ್ನು ಹೇಳುತ್ತಾರೆ—

**ಸ್ವರಮಣನ ಗುಣರೂಪ ಸಪ್ತ**
**ಸ್ವರಗಳಿಂದಲಿ ಪಾಡುತಿಹ ತುಂ**
**ಬರನೆ ಮೊದಲಾದಖಿಳ ಗಂಧರ್ವರು ರಮಾಪತಿಯ ||**
**ಪುರದ ಉತ್ತರಬಾಗಿಲಾಧಿಪ**
**ಸುರಪಶಚಿಗ ಸಮಾನವಾಯುಗ**
**ಹರಿನ್ಮಣಿನಿಭಶಾಂತಿಪತಿಯನಿರುದ್ಧನೈದುವರು ||**

ಪದ್ಯಾರ್ಥ :—ಸ್ವರಮಣನ=ಶ್ರೀ ಪರಮಾತ್ಮನ, ಗುಣರೂಪ=ಗುಣರೂಪಾದಿಗಳನ್ನು, ಸಪ್ತಸ್ವರಗಳಿಂದಲಿ=ನಿಷಾದ, ಋಷಭ, ಗಾಂಧಾರ ಮೊದಲಾದ ಸಪ್ತಸ್ವರಗಳಿಂದ, ಪಾಡುತಿಹ=ಹಾಡುತ್ತಿರುವ, ತುಂಬರನೆ ಮೊದಲಾದ ಅಖಿಳ ಗಂಧರ್ವರು, ರಮಾಪತಿಯ=ಲಕ್ಷ್ಮೀಪತಿಯಾದ ಪರಮಾತ್ಮನ, ಪುರದ=ಪಟ್ಟಣದ, ಉತ್ತರಬಾಗಿಲ,ಅಧಿಪ=ಅಧಿಪತಿಯಾದ ಸುರಪ ಶಚಿಪ=ಶಚೀಪತಿಯಾದ ದೇವೇಂದ್ರನಂತರ್ಗತರಾದ, ಸಮಾನ ವಾಯುದೇವರ ಅಂತರ್ಯಾಮಿಯಾದ, ಹರಿನ್ಮಣಿನಿಭ, ಇಂದ್ರನೀಲ (ಪಚ್ಚೆ) ಮಾಣಿಕ್ಯದಂತೆ ಶೋಭಿಸುತ್ತಿರುವ, ಶಾಂತಿಪತಿಯನಿರುದ್ಧನ=ಶಾಂತಿದೇವಿಯ ಪತಿಯಾದ ಶ್ರೀ ಅನಿರುದ್ಧನನ್ನು, ಐದುವರು.

ತಾತ್ಪರ್ಯ:—"ಉತ್ತರದ್ವಾರಪಸ್ತ್ವಿಂದ್ರಃ ಸಮಾನೋ ಮನ ಆತ್ಮಕಃ" ಎಂಬ ಪಾಂಚರಾತ್ರಾಗಮದ ಪ್ರಮಾಣಾನುಸಾರ ಉತ್ತರದಿಕ್ಪಾಲಕನು ದೇವೇಂದ್ರನು, ಇವನಲ್ಲಿ ಸಮಾನನಾಮಕ ವಾಯುದೇವರು ಮನಸ್ಸಿನಲ್ಲಿ ಅಂತರ್ಯಾಮಿಯಾಗಿರುವರು ಶ್ರೀ ಪರಮಾತ್ಮನ ಗುಣರೂಪಗಳನ್ನು ಸಪ್ತ ಸ್ವರಗಳಿಂದ ಗಾನಮಾಡುತ್ತ ತುಂಬರರು ಮೊದಲಾದ ಗಂಧರ್ವರು ಇಂದ್ರನ ಪ್ರಸಾದದಿಂದ ಮುಕ್ತರಾಗಿ ಉತ್ತರದ್ವಾರವನ್ನುಪ್ರವೇಶಮಾಡಿ ಅಲ್ಲಿ ಶಚಿ ಇಂದ್ರ ಅಂತರ್ಯಾಮಿ ಸಮಾನ ವಾಯುದೇವರ ಅಂತರ್ಯಾಮಿಯಾದ ಶಾಂತಿದೇವಿಯರ ಪತಿಯಾದ ಅನಿರುದ್ಧರೂಪವನ್ನು ಉಪಾಸನೆ ಮಾಡುತ್ತಾ ಸ್ವೇಚ್ಛಾವಿಹಾರಮಾಡುತ್ತ ಸ್ವರೂಪಾನಂದವನ್ನು ಹೊಂದಿ ಸುಖಪಡುತ್ತಿರುವರು ||೧೯||

ಅವತಾರಿಕೆ :—ಊರ್ಧ್ವದ್ವಾರದಿಂದ ವೈಕುಂಠವನ್ನು ಸೇರುವ ಅಧಿಕಾರಿಗಳನ್ನು ಹೇಳುತ್ತಾರೆ—

ಗರುಡಶೇಷಸುರೇಂದ್ರಮುಖಪು
ಷ್ಕರನೆಕಡೆಯಾಗಿಪ್ಪಖಿಳ ನಿ
ರ್ಜರರು ಊರ್ಧ್ವದ್ವಾರಗತಭಾರತಿಉದಾನನೊಳು ||
ಮೆರೆವಮಾಯಾವಸುದೇವನ
ಪರಮಮಂಗಳವಯುವಗಳ ಮಂ
ದಿರವನೈದಿ ಸದಾ ಮುಕುಂದನನೋಡಿ ಸುಖಿಸುವರು

ಪದ್ಯಾರ್ಥ :—ಗರುಡ ಶೇಷ ಸುರೇಂದ್ರಮುಖ=ಗರುಡ, ಶೇಷ, ದೇವೇಂದ್ರ ಮೊದಲ್ಗೊಂಡು, ಪುಷ್ಕರನೆ ಕಡೆಯಾಗಿ, ಇಪ್ಪ=ಇರುವ, ಅಖಿಳ=ಸಮಸ್ತರಾದ ನಿರ್ಜರರು=ದೇವತೆಗಳು, ಊರ್ಧ್ವದ್ವಾರಗತ=ಮೇಲಿನ ಬಾಗಿಲಲ್ಲಿರುವ, ಭಾರತೀ ಸಮೇತರಾದ ಉದಾನನಾಮಕ ಪ್ರಾಣದೇವರೊಳಗೆ, ಮೆರೆವ=ಶೋಭಿಸುತ್ತಿರುವ, ಮಾಯಾ ವಸುದೇವನ=ಮಾಯಾದೇವಿಯರಿಂದೊಡಗೂಡಿ ಇರುವ ವಾಸುದೇವನ, ಪರಮ ಮಂಗಳಕರವಾದ, ಅವಯುವಗಳ= ಅಂಗಗಳಿಂದ ಕೂಡಿದ, ಮಂದಿರವನು=ಮನೆಯನ್ನು, ಐದಿ=ಹೊಂದಿ, ಸದಾ, ಮುಕುಂದನ, ನೋಡಿ, ಸುಖಿಸುವರು.

ತಾತ್ಪರ್ಯ:—ಮೇಲಿನ ಬಾಗಿಲ ಪಾಲಕರು, ಪ್ರಧಾನ ವಾಯುದೇವರು. ಇವರು ಉದಾನನಾಮಕರಾಗಿ ಪತ್ನಿಸಮೇತರಾಗಿರುವರು. ಅವ

ರಂತರ್ಯಾಮಿಯು ಮಾಯಾಪತಿಯಾದ ಶ್ರೀ ವಾಸುದೇವಮೂರ್ತಿಯು. ಪೂರ್ವಾದಿ ದಿಕ್ಕುಗಳಲ್ಲಿ ಜಯವಿಜಯಾದಿ ದ್ವಾರಪಾಲಕರೆಂದು ಭಾಗವತಾದಿ ಪುರಾಣಗಳಲ್ಲಿ ಪ್ರಸಿದ್ಧವಾಗಿರುವುದು ಇಲ್ಲಿ ಸೂರ್ಯ ಚಂದ್ರ ಅಗ್ನಿ ಮೊದಲಾದವರೆಂದು ಹೇಳಿರುವರು ಪರಸ್ಪರ ವಿರೋಧ ಬಂತೆಂದರೆ, ಪಾಂಚರಾತ್ರಾಗಮದಲ್ಲಿ "ಪರಸ್ಯ ಬ್ರಹ್ಮಣಸ್ತ್ವೇತೇ ಪುರುಷಾಃ ಪಂಚ ಕೀರ್ತಿತಾಃ ದ್ವಾರಪಾ ಹೃದಯೇಚೈವ ವಿಷ್ಣುಲೋಕೇ ಚ ಸರ್ವದಾ || ಅಂತಶ್ಚ ದ್ವಾರಪಾಹ್ಯೇತೇ ಜಯಾದ್ಯಾ ಭಾಗತಃ ಸ್ಮೃತಾಃ" ಪರಬ್ರಹ್ಮನಾದ ಶ್ರೀಮನ್ನಾರಾಯಣನಿಗೆ ಮೇಲಿನ ಪದ್ಯಗಳಲ್ಲಿ ಹೇಳಿದಂತೆ ಪೂರ್ವಾದಿ ೪ ದ್ವಾರಗಳಲ್ಲಿ, ಸೂರ್ಯ, ಚಂದ್ರ, ಅಗ್ನಿ, ಇಂದ್ರ ಇವರು ನಾಲ್ವರು,ಮೇಲ್ಭಾಗದಲ್ಲಿ ಉದಾನ ಪ್ರಾಣದೇವರು, ಈ ೫ ಮಂದಿ ದೇವತೆಗಳು ಪರಮಾತ್ಮನ ಮನೆಯಲ್ಲೂ ಮತ್ತೂ ಹೃದಯಾಕಾಶದಲ್ಲೂ ಸಹ ಕಾದುಕೊಂಡಿರುವರು ಒಳಗಿನ ದ್ವಾರಪಾಲಕರು. ಜಯವಿಜಯಾದಿಗಳು ಕೋಟೆಯ ಹೊರಬಾಗಿಲನ್ನು ಕಾಯುವರೆಂದು ಹೇಳಿರುವರು. ಈ ವಾಕ್ಯದಿಂದ ಮೇಲಿನ ವಿರೋಧವು ಪರಿಹಾರವಾದಂತಾಯಿತು. ಇಂತಹ ಮೇಲಿನ ದ್ವಾರದಿಂದ ಒಳಗೆ ಪ್ರವೇಶಮಾಡುವವರು ಗರುಡ, ಶೇಷ, ಇಂದ್ರ ಮೊದಲು ಕರ್ಮಾಭಿಮಾನಿಯಾದ ಪುಷ್ಕರನವರೆಗೂ ಸರ್ವದೇವತೆಗಳೂ ಮುಕ್ತರಾಗಿ ಮುಕ್ತಿಸ್ಥಾನವನ್ನು ಹೊಂದಬೇಕಾದರೆ ಈ ಪುರದ ಊರ್ಧ್ವದ್ವಾರದಿಂದ ಅಲ್ಲಿರುವ ಪ್ರಾಣದೇವರ ಪ್ರಸಾದದಿಂದ ಒಳಹೊಕ್ಕು ಅವರಂತರ್ಯಾಮಿ ವಾಸುದೇವ ಮೂರ್ತಿಯನ್ನು ಸದಾ ಕಣ್ಣಿಂದ ನೋಡುತ್ತಾ ಸ್ವರೂಪಾನಂದವನ್ನು ಅನುಭವಿಸುತ್ತಾ ಸುಖದಿಂದಿರುವರು ||೨೦||

ಅವತಾರಿಕೆ :—ಮೇಲಿನ ಈ ಪ್ರಕರಣವನ್ನು ಮುಗಿಸುತ್ತಾ ೫ ಪದ್ಯಗಳಿಂದ ವಿಷಯಗಳನ್ನು ಸಂಗ್ರಹಿಸಿ ಹೇಳುತ್ತಾರೆ—

**ದ್ವಾರಪಂಚಕಪಾಲಕರೊಳಿಹ**
**ಭಾರತೀ ಪ್ರಾಣಾಂತರಾತ್ಮಕ**
**ಮಾರವ ಣನೈರೂಪತತ್ತ್ವದ್ವಾರದಲಿ ಬಪ್ಪ ||**
**ಮೂರೆರಡು ವಿಧ ಮುಕ್ತಿಯೋಗ್ಯರ**
**ತಾರತಮ್ಯವನರಿತವರ ಕಂ**
**ಸಾರಿ ಸಂಸಾರಾಬ್ಧಿ ದಾಟಿಸಿ ಮುಕ್ತರನ ಮಾಳ್ಪ ||**

ಪದ್ಯಾರ್ಥ :— ದ್ವಾರಪಂಚಕ=ಪೂರ್ವ ದಕ್ಷಿಣ ಪಶ್ಚಿಮ ಉತ್ತರ ಊರ್ಧ್ವ ಎಂಬ ೫ ದ್ವಾರಗಳ, ಪಾಲಕರೊಳು, ಸೂರ್ಯಾದಿ ಮೇಲೆ ಹೇಳಿದ ೫ ದ್ವಾರಪಾಲಕರೊಳಗೆ, ಇಹ= ಇರುವ, ಭಾರತೀ=ಶ್ರೀ ಭಾರತೀ ದೇವಿಯರ ಐದು ರೂಪಗಳೂ, ಇವರ ಪತಿಯಾದ ಮುಖ್ಯ ಪ್ರಾಣದೇವರ ಐದು ರೂಪಗಳೂ ಇವುಗಳ, ಅಂತರಾತ್ಮಕ=ಪ್ರಾಣಾಪಾನಾದಿ ೫ ರೂಪ ಗಳುಳ್ಳ ಮುಖ್ಯ ಪ್ರಾಣದೇವರ ಅಂತರಾತ್ಮಕನಾದ, ಮಾರಮಣನ= ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನ, ಐರೂಪ=ಶಾಂತಿ, ಕೃತಿ, ಜಯಾ, ಮಾಯಾ, ಲಕ್ಷ್ಮಿ ಎಂಬ ೫ ರೂಪಗಳುಳ್ಳ ರಮಾದೇವಿಯರಿಂದೊಡಗೂ ಡಿದ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ ನೆಂಬ ಐದು ರೂಪಗಳು, ತತ್ತದ್ವಾರದಲಿ=ಪೂರ್ವ ಮೊದಲಾದ ಆಯಾ ದ್ವಾರಗಳಲ್ಲಿ, ಬಪ್ಪ=ಬರುವ ಮೂರೆರಡುವಿಧ=ಮನುಷ್ಯೋತ್ತಮರು, ಪಿತೃಗಳು, ಋಷಿಗಳು, ಗಂಧರ್ವರು, ಗರುಡಾದಿ ಪುಷ್ಕರಾಂತ ದೇವತೆ ಗಳು, ಇಂತಹ ೫ ವಿಧರಾದ ಮುಕ್ತಿಯೋಗ್ಯರ ತಾರತಮ್ಯವನ್ನು, ಅರಿತು, ಅವರ=ಈ ೫ ವಿಧ ಮುಕ್ತಿಯೋಗ್ಯರನ್ನು, ಕಂಸಾರಿ=ಕಂಸಮರ್ದಕ ನಾದ ಶ್ರೀ ಪರಮಾತ್ಮನು, ಸಂಸಾರಾಬ್ಧಿದಾಟಿಸಿ=ಜನನ ಮರಣ ರೂಪ ವಾದ ಸಂಸಾರ ಸಮುದ್ರವನ್ನು ದಾಟಿಸಿ, ಮುಕ್ತರನ=ಮುಕ್ತರನ್ನಾಗಿ, ಮಾಳ್ಪ.

ತಾತ್ಪರ್ಯ :— ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ, ಊರ್ಧ್ವ ಹೀಗೆ ಐದು ದ್ವಾರಗಳಲ್ಲಿ ಅಂತರ್ದ್ವಾರಪಾಲಕರಾದ ಸೂರ್ಯ, ಚಂದ್ರ, ಅಗ್ನಿ, ಇಂದ್ರ ಪ್ರಧಾನ ವಾಯು ಹೀಗೆ ೫ ದ್ವಾರಪಾಲಕರಂತರ್ಯಾಮಿ ಯಾಗಿ ವಾಯುದೇವರು ಪ್ರಾಣ, ಅಪಾನ, ವ್ಯಾನ, ಸಮಾನ, ಉದಾನ ಎಂಬ ೫ ರೂಪಗಳಿಂದ ಇರುವರು. ಇವರ ಪತ್ನಿಯಾದ ಭಾರತೀದೇವಿ ಯರು ೫ ರೂಪಗಳಿಂದ ಇರುವರು. "ಪೃಥಿವೀ ನಾಮಿಕಾ ಶ್ರೀಸ್ತು ದ್ಯಾ ರ್ದಿಶೋವಿದ್ಯುದೇವಚ || ವಾಯುಪತ್ನೀ ಸಮುದ್ದಿಷ್ಟಾ ತತ್ತದ್ವಾರಾಧಿಪಾ ಶ್ಚತಾಃ" ಪೃಥ್ವೀದೇವಿಯರು, ಶ್ರೀದೇವಿಯರು, ದ್ಯುದೇವಿಯರು,ದಿಗ್ದೇವಿ ಯರು, ವಿದ್ಯುದ್ದೇವಿಯರು ಎಂದು ಭಾರತೀ ದೇವಿಯರಿಗೆ ೫ ರೂಪಗಳಿ ರುವವು. ಇವರು ಪ್ರಾಣಾಪಾನ ವ್ಯಾನಾದಿ ಪ್ರಾಣದೇವರ ೫ ರೂಪಗಳಿಗೂ ಪತ್ನಿಯಾಗಿ ಪತಿಯಿಂದೊಡಗೂಡಿ ಆಯಾ ದ್ವಾರಗಳಲ್ಲಿರುವರು ಎಂದು

ಛಾಂದೋಗ್ಯಭಾಷ್ಯದಲ್ಲಿ ಹೇಳಿರುವರು. ಈ ಪಂಚರೂಪಿಯಾದ ಪ್ರಾಣ ದೇವರ ಅಂತರಾತ್ಮಕನಾದ ಪರಮಾತ್ಮನು, ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧನೆಂಬ ೫ ರೂಪಗಳಿಂದ ಲಕ್ಷ್ಮೀ, ಮಾಯಾ, ಜಯಾ, ಕೃತಿ, ಶಾಂತಿ ಎಂಬ ೫ ರೂಪವುಳ್ಳ ಲಕ್ಷ್ಮೀದೇವಿಯ ರಿಂದೊಡಗೂಡಿ, ಪೂರ್ವಾದಿ ದ್ವಾರಗಳಿಗೆ ಬರುವ ಮನುಷ್ಯೋತ್ತಮರು, ಪಿತೃಗಣರು ಋಷಿಗಣರು, ಗಂಧರ್ವರು, ದೇವತೆಗಳು ಎಂಬ ೫ ವಿಧ ಮುಕ್ತಿಯೋಗ್ಯರನ್ನು ಅವರವರ ತಾರತಮ್ಯವನ್ನು ತಿಳಿದು ಕಂಸಾರಿಯಾದ ಶ್ರೀ ಹರಿಯು ಸಂಸಾರಸಮುದ್ರದಿಂದ ಅವರನ್ನು ದಾಟಿಸಿ ಅವರವರ ಯೋಗ್ಯತಾನುಸಾರ ಸ್ವರೂಪಸುಖವನ್ನು ಮುಕ್ತಿಯಲ್ಲಿ ಅಭಿವ್ಯಕ್ತಿ ಮಾಡಿ ಕೊಡಿಸುವನು.' ಕಂಸಾರಿ ಎಂದರೆ ಕಂಸನನ್ನು ಕೊಂದ ಕೃಷ್ಣರೂಪದಿಂ ದಲೇ ಮುಕ್ತಿಯನ್ನು ಕೊಡುತ್ತಾನೆಂದು ಅರ್ಥವಲ್ಲ. ಕಸಿಹಿಂಸಾಯಾ ಮಿತಿಧಾತೋಃ ಕಂಸ ಎಂದರೆ ಮುಕ್ತಿಮಾರ್ಗಕ್ಕೆ ಪ್ರತಿಬಂಧಕರೂಪ ವಾಗಿ ಧರ್ಮವನ್ನು ಹಿಂಸಿಸುವದು ಸಂಸಾರ. ಇದಕ್ಕೆ ಕಂಸ ಎಂದು ಹೆಸರು. ಇಂತಹ ಸಂಸಾರಮೋಚಕನಾದ ಶ್ರೀಹರಿಯೆಂದು ತಾತ್ಪರ್ಯ ||೨೧

ಅವತಾರಿಕೆ :— ಶ್ರೀಮನ್ಮಧ್ವಶಾಸ್ತ್ರದ ಮರ್ಮವನ್ನರಿಯದೆ ಬರೀ ವೇಷಗಳಿಂದ ಅಲಂಕೃತರಾಗಿ ಪ್ರಾಕೃತ ಗ್ರಂಥವೆಂದು ಈ ಗ್ರಂಥದಲ್ಲಿ ದೋಷಚಿಂತನೆ ಮಾಡಿದ್ದರಿಂದ ಪ್ರಯೋಜನವಿಲ್ಲವೆಂದು ಹೇಳುತ್ತಾರೆ—

**ಬೆಳಗಿದ ಹೂಜಿಯು ನೋಳ್ಪರಿಗೆ ಥಳ**
**ಥಳಿಸುತಲೆ ಕಂಗೊಳಿಸುವಂದದಿ**
**ತೊಳೆದು ದೇಹವ ನಾಮಮುದ್ರೆಗಳಿಂದಲಂಕರಿಸಿ ||**
**ಒಲಿಸಿ ನಿತ್ಯ ಕುತರ್ಕಯುಕ್ತಿಗ**
**ಳಲವಬೋಧರಶಾಸ್ತ್ರಮರ್ಮವ**
**ತಿಳಿಯ ದಿಹ ನರ ಒರಿವೆ ಇದರೊಳು ಶಂಕಿಸಿದರೇನು ||**

ಪದ್ಯಾರ್ಥ :— ಬೆಳಗಿದ=ಚನ್ನಾಗಿ ತೊಳೆದಿರುವ, ಹೂಜಿಯು= ಸಣ್ಣ ಬಾಯುಳ್ಳ ಕಂಚಿನ ಪಾತ್ರೆಯು, ನೋಳ್ಪರಿಗೆ=ನೋಡುವವರಿಗೆ ಥಳಥಳಿಸುತಲೆ ಕಂಗೊಳಿಸುವಂದದಿ=ಥಳಥಳ ಎಂದು ಹೊಳೆಯುವಂತೆ, ದೇಹವ=ಶರೀರವನ್ನು, ತೊಳೆದು=ಶುದ್ಧಮಾಡಿ, ನಾಮಮುದ್ರೆಗಳಿಂದ

=ದ್ವಾದಶನಾಮ ಮುದ್ರೆಗಳಿಂದ, ಅಲಂಕರಿಸಿ=ಅಲಂಕಾರಮಾಡಿ, ನಿತ್ಯ ಕುತರ್ಕಯುಕ್ತಿಗಳ=ಶ್ರುತಿ ಸ್ಮೃತಿಗಳನ್ನನುಸರಿಸದೆ ಬರೆ ಯುಕ್ತಿಗಳಿಂದಲೇ ಊಹಿಸುವ ಕುತರ್ಕಗಳನ್ನು, ಒಲಿಸಿ=ಪಾಠಮಾಡಿ, ಅಲವಬೋಧರ =ಶ್ರೀ ಪೂರ್ಣಪ್ರಜ್ಞರ(ಮಧ್ವಾಚಾರ್ಯರ) ಶಾಸ್ತ್ರಮರ್ಮವ, ತಿಳಿಯದಿಹ= ತಿಳಿಯದಿರುವ, ನರ=ಮನುಷ್ಯನು, ಬರಿದೆ=ನಿಷ್ಪ್ರಯೋಜನವಾಗಿ, ಇದರೊಳು=ಈ ಗ್ರಂಥದೊಳಗೆ, ಶಂಕಿಸಿದರೆ=ಸಂಶಯಪಟ್ಟರೆ, ಏನು= ಏನು ಪ್ರಯೋಜನ?

ತಾತ್ಪರ್ಯ:—ಸಣ್ಣದಾದ ಬಾಯಿಯ ಕಂಚಿನ ಹೂಜಿಯನ್ನು ಥಳಥಳಿಸುವಂತೆ ತೊಳದು ಇಟ್ಟರಲು ಒಳಗೆ ಕಶ್ಮಲವು ತುಂಬಿದ್ದರೂ ಹೊರಗೆ ನೋಡುವವರಿಗೆ ಹೇಗೆ ಥಳಥಳ ಹೊಳೆಯುತ್ತ ಕಂಗೊಳಿಸುವುದೋ ಹಾಗೆ ಚನ್ನಾಗಿ ಸ್ನಾನಮಾಡಿ ೧೨ ನಾಮಗಳು ಮೈತುಂಬ ಮುದ್ರೆಗಳನ್ನು ಹಾಕಿಕೊಂಡು ದೊಡ್ಡ ಪಂಡಿತರೆಂದು ಪ್ರಖ್ಯಾತಿ ಪಡೆದು ಬರೆ ಯುಕ್ತಿ ಶಾಸ್ತ್ರವೆನಿಸುವ ಕುತರ್ಕಶಾಸ್ತ್ರಗಳ ಅಂದರೆ ಶ್ರುತಿ ಮೊದಲಾದ ಶಾಸ್ತ್ರಗಳನ್ನನುಸರಿಸದೆ ಬರೆ ಯುಕ್ತಿಗಳಿಂದ ಹೇಳುವ ತರ್ಕಕ್ಕೆ ಕುತರ್ಕವೆಂದು ಹೆಸರು, ಇಂತಹ ತರ್ಕಶಾಸ್ತ್ರವನ್ನೊಲಿಸಿ ತಾರ್ಕಿಕರೆಂದು ಪ್ರಸಿದ್ಧಿಯನ್ನು ಪಡೆದು ಶ್ರೀಮನ್ಮಧ್ವಶಾಸ್ತ್ರದ ಮರ್ಮವನ್ನೇ ತಿಳಿಯದಿರುವವರು ತಮ್ಮ ಕುತರ್ಕ ಯುಕ್ತಿಗಳಿಂದ ಈ ಗ್ರಂಥದಮೇಲೆ ಆಕ್ಷೇಪಣೆ ಹೊರಿಸಿದರೇನು ಪ್ರಯೋಜನ, ಈ ಗ್ರಂಥದ ಯೋಗ್ಯತೆಯು ಭಗವದ್ಭಕ್ತರಿಗೆ ಗೊತ್ತಾಗುವದೇ ಹೊರತು ಒಳಗೆ ಭಕ್ತಿಯಿಲ್ಲದೆ ಹೊರಗೆ ಮಾತ್ರ ವೇಷಧಾರಿಗಳಾಗಿ ಪಂಡಿತರೆಂಬ ಹೆಸರುಪಡೆದ ತಾರ್ಕಿಕರು ಮೊದಲಾದವರಿಗೆ ಎಂದಿಗೂ ರುಚಿಸಲಾರದು. ಹೂಜಿಯ ಉಪಮಾನವನ್ನು ಏಕೆಕೊಟ್ಟರೆಂದರೆ ಹೂಜಿಯ ಮೇಲ್ಭಾಗವನ್ನು ಸುಲಭವಾಗಿ ಶುದ್ಧಿಮಾಡಬಹುದು. ಒಳಗೆ ತೊಳೆಯುವದು ಕಷ್ಟ ಹಾಗೆಯೇ ಒಳಗೆ ಕಶ್ಮಲವನ್ನು ಇಟ್ಟುಕೊಂಡು ದೇಹವನ್ನುಮಾತ್ರ ತೊಳೆದು ಅಲಂಕಾರಮಾಡಿಕೊಂಡರೆ ಒಳಗಿನ ಕಳಂಕವು ಹೋದೀತೆ? ಒಳಗೆ ಶುದ್ಧನಾಗಬೇಕಾದರೆ ಭಕ್ತಿಯಿಂದ ಭಗವದನುಗ್ರಹವನ್ನು ಸಂಪಾದಿಸಿದರೇನೇ ಶುದ್ಧನಾಗುವನು. ಅಂತಹ ಭಕ್ತನು ಎಂದಿಗೂ ಈ ಗ್ರಂಥವನ್ನು ಧಿಕ್ಕರಿಸಲಾರನೆಂಬಭಾವ ||೨೨||

ಅವತಾರಿಕೆ :—ಸಮುದ್ರದಲ್ಲಿ ಅಲೆಗಳು ಅಪರಿಮಿತವಾಗಿ ಕಾಣು ವಂತೆ ಭಗವಂತನ ಅವತಾರ ರೂಪಗಳು, ವ್ಯಾಪ್ತಿರೂಪಗಳು ಶ್ರೀ ಪದ್ಮ ನಾಭ ರೂಪದಲ್ಲಿ ಕಾಣುವವೆಂದು ಹೇಳುತ್ತಾರೆ—

ಉದಧಿಯೊಳಗೂರ್ಮಿಗಳ ತೋರ್ಪಂ
ದದಲಿಹಂಸೋದ್ಗೀಥಹರಿಹಯ
ವದನ ಕೃಷ್ಣಾದ್ಯಮಿತನವತಾರಗಳು ನಿತ್ಯದಲಿ ||
ಪದುಮನಾಭನೊಳಿರುತಿಹವು ಸ
ರ್ವದ ಸಮಸ್ತ ಪ್ರಾಣಿಗಳ ಚಿ
ದ್ಧೃದಯಗತರೂಪಗಳನವ್ಯವಧಾನದಲಿ ಬಿಡದೆ ||

ಪದ್ಯಾರ್ಥ :—ಉದಧಿಯೊಳಗೆ=ಸಮುದ್ರದಲ್ಲಿ, ಊರ್ಮಿಗಳು= ಅಲೆಗಳು, ತೋರ್ಪಂದದಲಿ=ಬೇರೆಬೇರೆಯಾಗಿ ಕಾಣುವಂತೆ, ಹಂಸ, ಹರಿ, ಹಯವದನ, ಕೃಷ್ಣಾದಿ=ಕೃಷ್ಣ ಮೊದಲಾದ, ಅಮಿತನ=ಸಂಖ್ಯೆ ಇಲ್ಲದ ಗುಣರೂಪಗಳುಳ್ಳ ಶ್ರೀ ಪರಮಾತ್ಮನ ಅವತಾರಗಳು, ನಿತ್ಯದಲಿ, ಮತ್ತು, ಸಮಸ್ತ ಪ್ರಾಣಿಗಳ, ಚಿದ್ಧೃದಯಗತ=ಸ್ವರೂಪದೇಹದ ಹೃದ ಯಾಕಾಶದಲ್ಲಿರುವ, ರೂಪಗಳನ್ನು, ಬಿಡದೆ (ಎಲ್ಲ ರೂಪಗಳೂ ಕೂಡಿ) ಅವ್ಯವಧಾನದಲಿ=ಒಂದಕ್ಕೊಂದು ಸಂಬಂಧಿಸಿಕೊಂಡು, ಸರ್ವದಾ, ಪದ್ಮನಾಭನೊಳು=ಮೂಲರೂಪಿಯಾದ ಪದ್ಮನಾಭಮೂರ್ತಿಯಲ್ಲಿ, ಇರು ತಿಹವು

ತಾತ್ಪರ್ಯ:—ಸಮುದ್ರದಲ್ಲಿ ಅಲೆಗಳು ತರಂಗತರಂಗವಾಗಿ ಒಂದರ ಹಿಂದೆ ಒಂದೊಂದಾಗಿ ಬೇರೆಬೇರೆ ಕಂಡುಬಂದರೂ ಆ ಅಲೆಗಳು ಸಮುದ್ರ ವನ್ನು ಬಿಟ್ಟು ಬೇರೆ ಎಂದು ಹೇಳಲಾಗುವುದಿಲ್ಲ. ಅಖಂಡವಾದ ಸಮು ದ್ರೋದಕವೇ ಖಂಡವಾಗಿ ಅಲೆಗಳೆಂಬ ಹೆಸರಿನಿಂದ ಕಂಡುಬರುವುದು. ಆದರೂ ಸಮುದ್ರಕ್ಕೂ ಅಲೆಗಳಿಗೂ ಭೇದವಿಲ್ಲ. ಹಾಗೆಯೇ ಮೂಲ ರೂಪವಾದ ಪದ್ಮನಾಭರೂಪದಿಂದ ಹಂಸ, ಹರಿ, ಹಯಗ್ರೀವ, ರಾಮ ಕೃಷ್ಣಾದಿ ರೂಪಗಳು ಸಮುದ್ರದಿಂದ ಅಲೆಗಳು ತರಂಗತರಂಗವಾಗಿ ಹೊರಡುವಂತೆ ಹೊರಡುತ್ತಿರುವವು. ಆ ಅಲೆಗಳು ಮತ್ತೂ ಸಮುದ್ರ ದಲ್ಲೇ ಲಯವಾಗುವವು. ಅದರಂತೆ ರಾಮಕೃಷ್ಣಾದಿ ರೂಪಗಳೂ ಸಹ

ಪದ್ಮನಾಭಮೂರ್ತಿಯಲ್ಲೇ ಲಯವಾಗುವವು. ಮತ್ತೂ ಸರ್ವ ಪ್ರಾಣಿಗಳ ಸ್ವರೂಪದೇಹ ಹೃದಯಾಕಾಶದಲ್ಲಿ ಶೋಭಿಸುವ ಅನಂತಾನಂತ ರೂಪಗಳೂ ಸಹ ಪದ್ಮನಾಭರೂಪದಲ್ಲೇ ಸೇರುವವು. ಭಾಗವತ ಪ್ರಥಮ ಸ್ಕಂಧ ೩ನೆಯ ಅಧ್ಯಾಯದಲ್ಲಿ "ಏತನ್ನಾನಾವತಾರಾಣಾಂ ನಿಧಾನಂ ಬೀಜಮವ್ಯಯಂ ‖ ಯಸ್ಯಾಂಶೇನಸೃಜ್ಯಂತೇ ದೇವತಿರ್ಯಙ್‌ನರಾದಯಃ‖" ಈ ಪದ್ಮನಾಭರೂಪವೇ ನಾನಾ ವಿಧವಾದ ಮತ್ಸ್ಯ ಕೂರ್ಮಾದಿ ಎಲ್ಲಾ ಅವತಾರಗಳಿಗೂ ಬೀಜಸ್ಥಾನವಾದುದು. "ನಿಧಾನಂ=ಅಂತತೋತ್ರ ಸರ್ವಾವತಾರಾನಿಧೀಯಂತೇ ಏಕೀಕ್ರಿಯಂತ ಇತಿ ನಿಧಾನಂ" ಅಂತ್ಯದಲ್ಲಿ ಎಲ್ಲಾ ಅವತಾರಗಳು ಈ ರೂಪದಲ್ಲೇ ಐಕ್ಯ ಹೊಂದುವದರಿಂದ ನಿಧಾನ ಎಂದು ಹೆಸರು. ನಾಶಹೊಂದದೆ ಅವತಾರರೂಪಗಳು ಈ ಮೂಲರೂಪದಲ್ಲಿ ಸೇರುವದರಿಂದ ಅವ್ಯಯವೆಂದರು ಈ ಪದ್ಮನಾಭದೇವರ ಸಾಮರ್ಥ್ಯೈಕದೇಶದಿಂದಲೇ ದೇವತೆಗಳು, ದಾನವರು, ಮಾನವ ಮೊದಲಾದ ಸರ್ವಪ್ರಾಣಿಗಳು ಹುಟ್ಟುವರು ಎಂದು ಹೇಳಿರುವರು. ಮತ್ತು "ಅವತಾರಾಹ್ಯಸಂಖ್ಯೇಯಾಃ ಹರೇಃಸತ್ವನಿಧೇರ್ದ್ವಿಜಾಃ ‖ ಯಥಾವಿದಾಸಿನಃ ಕುಲ್ಯಾಃಸರಸಸ್ಯುಃಸಹಸ್ರಸಃ ‖ ಋಷಯೋ ಮಾನವೋದೇವಾ ಮನುಪುತ್ರಾಮಹೌಜಸಃ ಕಲಾಃ ಸರ್ವೇಹರೇರೇವಸಪ್ರಜಾಪತಯಃಸ್ಮೃತಾಃ‖" ಸತ್ವನಿಧಿಯಾದ ಪರಮಾತ್ಮನ ಅವತಾರಗಳನ್ನು ಎಣಿಸಲು ಸಾಧ್ಯವಿಲ್ಲ. ಎತ್ತರವಾದ ಸ್ಥಳದಿಂದ ಕೆಳಗ ಬೀಳುವ ನೀರು ಹೇಗೆ ನದಿಗಳಾಗಿಯೂ, ಸಹಸ್ರಾರು ಕ್ಷುದ್ರ ನದಿಗಳಾಗಿಯೂ, ಅವುಗಳಿಂದ ಕಾಲುವೆಗಳು ಹೊರಡುವವೋ ಹಾಗೆ ಎಣಿಸಲು ಸಾಧ್ಯವಿಲ್ಲದ ಭಗವದ್ರೂಪಗಳು ಇರುವವು. ಇವಲ್ಲದೆ, ಋಷಿಗಳು, ಮನುಗಳು, ದೇವತೆಗಳು, ಮನುಪುತ್ರರು, ಇವರೆಲ್ಲರೂ ಪರಮಾತ್ಮನ ಭಿನ್ನಾಂಶರು ಎಂದು ಹೇಳಿರುವರು. ಹೀಗೆ ಸ್ವಾಂಶರೂಪಗಳು ಭಿನ್ನಾಂಶರೂಪಗಳು ಬಿಂಬರೂಪಗಳು, ಅಂತರ್ಯಾಮಿ ರೂಪಗಳು ಇವೆಲ್ಲವೂ ಸಮುದ್ರದಲ್ಲಿರುವ ಅಲೆಗಳು ಹೇಗೆ ಸಮುದ್ರವನ್ನು ಬಿಟ್ಟಿರುವುದಿಲ್ಲವೋ ಹಾಗೆಯೇ ಭಗವಂತನನ್ನು ಬಿಟ್ಟಿರದೆ ಎಲ್ಲವೂ ಭಗವದ್ರೂಪಗಳೇ ಆಗಿವೆ. ಇವೆಲ್ಲವೂ ಪದ್ಮನಾಭರೂಪದಲ್ಲೇ ಸೇರಿರುವವು ‖೨೩‖

**ಅವತಾರಿಕೆ:**— ಪರಮಾತ್ಮನಲ್ಲಿ ಸಕಲ ಪ್ರಪಂಚವು ಅಡಗಿರುವುದು ಎಂದು ಸದೃಷ್ಟಾಂತವಾಗಿ ಹೇಳುತ್ತಾರೆ—

**ಶರಧಿಯೊಳು ಮಕರಾದಿ ಜೀವರು**
**ಇರಳು ಹಗಲೇಕಪ್ರಕಾರದಿ**
**ಚರಿಸುತನುಮೋದಿಸುತಇಪ್ಪಂದದಿ ಜಗತ್ರಯವು ||**
**ಇರುತಿಹವು ಜಗದೀಶನುದರದಿ**
**ಕರೆಸುವದು ಪ್ರತಿಬಿಂಬನಾಮದಿ**
**ಧರಿಸಿಹವು ಹರಿನಾಮರೂಪಂಗಳಸನವರತ ||**

ಪದ್ಯಾರ್ಥ:—ಶರಧಿಯೊಳು=ಸಮುದ್ರದಲ್ಲಿ, ಮಕರಾದಿ=ಮೊಸಳೆ ಮೊದಲಾದ, ಜೀವರು, ಇರಳು ಹಗಲು=ರಾತ್ರಿ ಹಗಲು, ಏಕಪ್ರಕಾರದಿ =ಒಂದೇ ರೀತಿಯಾಗಿ, ಚರಿಸುತ=ಸಂಚಾರಮಾಡುತ್ತ, ಅನುಮೋದಿಸುತ =ಆನಂದಪಡುತ್ತ, ಇಪ್ಪಂದದಿ=ಇರುವಂತೆ, ಜಗತ್ರಯವು=ಮೂರು ಲೋಕಗಳು, ಜಗದೀಶನ ಉದರದಿ=ಪರಮಾತ್ಮನ ಉದರದಲ್ಲಿ, ಇರುತಿ ಹವು, ಮತ್ತು ಪ್ರತಿಬಿಂಬನಾಮದಿ=ಪ್ರತಿಬಿಂಬವೆಂಬ ಹೆಸರಿನಿಂದ, ಕರೆ ಸುವದು=ಕರಿಸಿಕೊಳ್ಳುವುದು, ಅನವರತ=ಅವಿಚ್ಛಿನ್ನವಾಗಿ, ಹರಿನಾಮ ರೂಪಂಗಳ, ಧರಿಸಿಹವು.

ತಾತ್ಪರ್ಯ:—ಸಮುದ್ರದಲ್ಲಿ ಮೀನು ಮೊಸಳೆ ಮೊದಲಾದ ಅನಂತಾನಂತ ಜೀವರಾಶಿಗಳು ರಾತ್ರಿ ಹಗಲು ಒಂದೇ ರೀತಿಯಿಂದ ಸಂಚರಿಸುತ್ತ ತನ್ನ ಗುಂಪುಗಳೊಂದಿಗೆ ಸುಖಪಡುತ್ತಿರುವಂತೆ ಈ ಮೂರು ಲೋಕವು ಪರಮಾತ್ಮನ ಪ್ರತಿಬಿಂಬವೆನಿಸಿ, ನಾನಾಪ್ರಕಾರವಾದ ರೂಪ ನಾಮ ಭೇದಗಳಿಂದ ಪರಮಾತ್ಮನ ಅಂಶಾಂಶಿರೂಪಗಳು ಶ್ರೀ ಪರಮಾತ್ಮನ ಉದರದಲ್ಲಿ ಶೋಭಿಸುತ್ತಿರುವವು ||೨೪||

ಅವತಾರಿಕೆ :— ಪರಮಾತ್ಮನು ರಸವತ್ತಾದ ಸರ್ವ ಪದಾರ್ಥಗಳನ್ನು ಸ್ವೀಕರಿಸಿ ಜೀವರನ್ನು ತೃಪ್ತಿಪಡಿಸುವನೆಂದು ದೃಷ್ಟಾಂತ ಸಹಿತವಾಗಿ ತೋರಿಸುತ್ತಾರೆ :—

**ಜನನಿಸೌಷ್ಟಪದಾರ್ಥಗಳ ಭೋ**
**ಜನವುಮಾಡಲು ಗರ್ಭಗತಶಿಶು**
**ದಿನದಿನದಲಭಿವೃದ್ಧಿಯೈದುವತೆರದಿ ಜೀವರಿಗೆ ||**
**ವನಜನಾಭನು ಸರ್ವ ರಸ ಉಂ**

ಉಣಿಸಿ ಸಂರಕ್ಷಿಸುವ ಜಾನ್ಹವಿ
ಜನಕಜನ್ಮಾದ್ಯಖಿಳ ದೋಷವಿದೂರಗಂಭೀರ ||

ಪದ್ಯಾರ್ಥ :—ಜನನಿ=ಗರ್ಭಿಣಿಯಾದ ತಾಯಿಯು, ಸೌಷ್ಟಪದಾರ್ಥಗಳು=ಸ್ವಾದುವಾದ ಪದಾರ್ಥಗಳನ್ನು ಭೋಜನ ಮಾಡಲು, ಗರ್ಭಗತಶಿಶು=ಗರ್ಭದಲ್ಲಿರುವ ಮಗು, ದಿನದಿನದಿ, ಅಭಿವೃದ್ಧಿಯನ್ನು ಹೊಂದುವಂತೆ, ಜಾನ್ಹವಿಜನಕ=ಗಂಗೆಯನ್ನು ಪಡೆದ, ಜನ್ಮಾದ್ಯಖಿಳ ದೋಷವಿದೂರ=ಜನನಾದಿ ಸಕಲ ದೋಷರಹಿತನಾದ, ಗಂಭೀರ=ಗಂಭೀರಗುಣಗಳುಳ್ಳ ವನಜನಾಭನು=ಕಮಲನಾಭನು, ಸರ್ವ ರಸ=ಸರ್ವ ಪದಾರ್ಥಗಳ ರಸವನ್ನು, ಉಂಡು=ಸ್ವೀಕರಿಸಿ. ಜೀವರಿಗೆ,ಉಣಿಸಿ, ಸಂರಕ್ಷಿಸುವನು.

ತಾತ್ಪರ್ಯ :—ಗರ್ಭಿಣಿ ಸ್ತ್ರೀಯು ಸ್ವಾದುವಾದ ಪದಾರ್ಥಗಳನ್ನು ಭೋಜನ ಮಾಡಿದರೆ ಆ ರಸವು ಆಕೆಯ ನಾಭಿಯಿಂದ ಹೊರಟಿರುವ ನಾಡಿಯ ದ್ವಾರಾ ಆಕೆಯ ಗರ್ಭದಲ್ಲಿರುವ ಮಗುವಿನ ಹೊಟ್ಟೆಯಲ್ಲಿ ಸೇರಿ ಆ ಮಗು ದಿನೇದಿನೇ ವೃದ್ಧಿ ಹೊಂದುವುದು. ಅದರಂತೆ ಪರಮಾತ್ಮನು ಭೂಮಿಯಲ್ಲಿರುವ ಸಕಲ ವಿಧವಾದ ಭೋಜ್ಯ ಪಧಾರ್ಥಗಳ ರಸಗಳನ್ನು ತಾನು ಸ್ವೀಕರಿಸಿ ಜೀವರಿಗೆ ಉಣಿಸಿ ಸಂರಕ್ಷಿಸುವನು ಆ ರಸವನ್ನು ಪರಮಾತ್ಮನು ತನ್ನ ಹೊಟ್ಟೆ ತುಂಬುವದಕ್ಕಾಗಿ ತಾನು ಸ್ವೀಕರಿಸುವುದಿಲ್ಲ. ಏಕೆಂದರೆ ಅವನನುಗ್ರಹಕ್ಕೆ ಪಾತ್ರರಾದ ದೇವತೆಗಳಿಗೇನೇ ಹಸಿವು ನೀರಡಿಕೆ ಇಲ್ಲ. ಹಾಗಿರಲು ಪರಮಾತ್ಮನಿಗೆ ನೀರಡಿಕೆ ಯಾವುದು? ಹಸಿವು ಯಾವುದು? ಇಲ್ಲಿರುವ ಜಾನ್ಹವಿ ಜನಕ, ಜನ್ಮಾದ್ಯಖಿಳ ದೋಷವಿದೂರ ಎಂಬ ಎರಡು ವಿಶೇಷಣಗಳಿಂದ ಹಸಿವು ನೀರಡಿಕೆ ಇಲ್ಲವೆಂಬುವದನ್ನು ದಾಸರಾಯರು ಸೂಚಿಸಿರುವರು ಗಂಗಾಜನಕ=ಗಂಗೆಯನ್ನು ಪಾದದಿಂದ ಸೃಷ್ಟಿಸಿದ ಪರಮಾತ್ಮನಿಗೆ ನೀರು ಬೇಕೆಂಬ ಅಪೇಕ್ಷೆಯು, ಇಲ್ಲವೆಂಬುವದನ್ನು ಸೂಚಿಸುವುದು. "ಜನ್ಮಾದ್ಯಖಿಳ ದೋಷವಿದೂರ" ಎಂಬ ಪದದಿಂದ ಹುಟ್ಟಿದವರಿಗೆ ಹೊಟ್ಟೆ ತುಂಬಿಕೊಂಡು ದೇಹವನ್ನು ವೃದ್ಧಿಪಡಿಸಬೇಕೆಂಬ ಆಶೆಯು ಇರುವದು. ಮತ್ತೆ ಮರಣಭಯವು ಉಂಟು. ಹುಟ್ಟುವಿಕೆ, ಸಾಯುವಿಕೆ ಮೊದಲಾದ ದೋಷಗಳೇ ಇಲ್ಲದಮೇಲೆ ಆಶೆಯೆಲ್ಲಿಯದು? ಆದ್ದರಿಂದ ಕರುಣದಿಂದ ಜೀವರನ್ನು ಉದ್ಧರಿಸುವುದಕ್ಕಾಗಿ

ತಾನು ರಸವನ್ನುಂಡು ಜೀವರಿಗುಣಿಸುವನೇ ಹೊರತು ಸ್ವಪ್ರಯೋಜನೆ ಕ್ಕಲ್ಲ. ಗರ್ಭಿಣಿಯು ಭೋಜನದ್ವಾರಾ ಮಗುವಿಗೆ ತೃಪ್ತಿಯೇ ಹೊರತು ಹೊಟ್ಟೆಯ ಒಳಗಿರುವ ಮಗುವಿಗೆ ಅನ್ನವನ್ನು ಉಣಿಸುವುದು ಹೇಗೆ ಸಾಧ್ಯವಿಲ್ಲವೋ ಹಾಗೆ ಬಿಂಬಕ್ರಿಯಾ ಹೊರತು ಪ್ರತಿಬಿಂಬನಿಗೆ ತೃಪ್ತಿ ಯಾಗುವುದಿಲ್ಲವಾದ್ದರಿಂದ ಪರಮಾತ್ಮನುಂಡೇ ಉಣಿಸುವನು ||೨೫||

ಅವತಾರಿಕೆ :—ನಿಷ್ಕಾಮೋಪಾಸನೆಯಿಂದ ಉತ್ತಮಗತಿಯಾಗುವ ದೆಂದು ಹೇಳುತ್ತಾರೆ—

**ಆಶೆಗೊಳಗಾದವನು ಜನರಿಗೆ**
**ದಾಸನೆನಿಸುವ ಆಶೆಯನು ನಿಜ**
**ದಾಸಗೈದಿಹಪುಂಸಗೆಲ್ಲರು ದಾಸರೆನಿಸುವರು ||**
**ಶ್ರೀಶನಂಘ್ರಿಸರೋಜಯುಗಳ ನಿ**
**ರಾಶೆಯಿಂದಲಿ ಭಜಿಸೆ ವಲಿದು ರ**
**ಮಾಸಹಿತ ತನ್ನನೆ ಕೊಡುವ ಕರುಣಾಸಮುದ್ರಹರಿ ||**

ಪದ್ಯಾರ್ಥ:—ಆಶೆಗೆ=ತನಗೆ ಅದು ಬೇಕು ಇದು ಬೇಕು ಅನ್ನುವ ಅಪೇಕ್ಷೆಗೆ,ಒಳಗಾದವನು ಜನರಿಗೆ ದಾಸನೆನಿಸುವನು=ಇತರರಿಗೆ ಅಡಿಯಾ ಳಾಗುವನು, ಆಶೆಯನು=ಇಂತಹ ಆಸೆಯನ್ನು, ನಿಜದಾಸಗೈದಿಹ=ತನ್ನ ದಾಸನನ್ನಾಗಿ ಮಾಡಿಕೊಂಡಿರುವ, ಪುಂಸಗೆ=ಪುರುಷನಿಗೆ, ಎಲ್ಲರು= ಪ್ರಪಂಚದ ಜನರೆಲ್ಲ,ದಾಸರೆನಿಸುವರು=ಅಧೀನರಾಗಿರುವರು, ಶ್ರೀಶನಂಘ್ರಿ ಸರೋಜಯುಗಳ=ಲಕ್ಷ್ಮೀಪತಿಯಾದ ಶ್ರೀ ಹರಿಯ ಪಾದಕಮಲಗಳನ್ನು ನಿರಾಶೆಯಿಂದಲಿ=ಫಲಾಪೇಕ್ಷೆಯಿಲ್ಲದೆ, ಭಜಿಸೆ,ಕರುಣಾಸಮುದ್ರ, ಹರಿ= ಹರಿಯು, ರಮಾಸಹಿತ=ಲಕ್ಷ್ಮೀಸಮೇತನಾದ, ತನ್ನನೆ=ತನ್ನ ರೂಪ ವನ್ನೆ, ಕೊಡುವ, ಅಪರೋಕ್ಷದಲ್ಲಿ ದರ್ಶನವನ್ನು ಕೊಡುವ, ಮುಕ್ತಿಯಲ್ಲಿ ತನ್ನ ದೇಹದಲ್ಲಿ ಸ್ಥಾನವನ್ನು ಕೊಡುವ.

ತಾತ್ಪರ್ಯ :—ಲೋಕದಲ್ಲಿ ಯಾವನೇ ಆಗಲಿ "ನಿಸ್ಪೃಹಸ್ಯ ತೃಣಂಜಗತ್" ಎಂಬಂತೆ ಯಾವ ಪದಾರ್ಥದಲ್ಲೂ ತನಗೆ ಅಪೇಕ್ಷೆ ಇಲ್ಲ ದಿದ್ದರೆ ಮಹಾರಾಜನಿಂದಲಾದರೂ ತನಗಾಗುವದೇನು? "ಆಶಾನಾಮಹಿ

ಲೋಕೇಸ್ಮಿನ್ನಾಚಿದಾಶ್ಚರ್ಯಶೃಂಖಲಾ || ಯಯಾಬದ್ಧಾಃಪ್ರಧಾವಂತಿ ಮುಕ್ತಾಸ್ತಿಷ್ಠಂತಿಪಂಗುವತ್'' ಆಶೆಯೆಂಬುವದು ಈ ಲೋಕದಲ್ಲಿ ಒಂದು ಆಶ್ಚರ್ಯಕರವಾದ ಬೇಡಿಯು. ಅದೇಕೆಂದರೆ ಸಾಮಾನ್ಯವಾಗಿ ಲೋಕದಲ್ಲಿ ಒಬ್ಬನಿಗೆ ಕಾಲಿಗೆ ಬೇಡಿ ಹಾಕಿದರೆ ಅವನು ಕಾಲಿಲ್ಲದವನಂತೆ ಕೂತು ಬಿಡುವನು. ಆ ಬೇಡಿಯನ್ನು ತೆಗೆದಕೂಡಲೆ ಸಂತೋಷದಿಂದ ಓಡಿ ಹೋಗುವನು ಈ ಆಶಾಬೇಡಿಯು ಅಂತಹದಲ್ಲ. ಆಶೆಯೆಂಬ ಬೇಡಿಯು ಕಾಲಿಗೆ ಬಿದ್ದಕೂಡಲೆ ಆ ದೇಶಕ್ಕೆ ಹೋಗಲೆ, ಈ ದೇಶಕ್ಕೆ ಹೋಗಲೆ ಎಂದು ಓಡುತ್ತಿರುವನು. ಆಶೆಯೆಂಬ ಬೇಡಿಯು ಹೋದರೆ ಕಾಲಿಲ್ಲದವ ನಂತೆ ಕೂತುಬಿಡುವನು ಎಂದು ಶ್ಲೋಕಾರ್ಥ. ಇಂತಹ ಆಶೆಗೆ ಒಳಗಾ ದವನು ಕಂಡವರಿಗೆ ದಾಸನಾಗಿ ಬೇಡಿದರೂ ಆಶೆ ಪೂರ್ತಿ ಕಾಣದೆ ಕಷ್ಟ ಪಡುವನು. ಯಾವನಿಗೆ ಆಶೆಯೇ ಇಲ್ಲವೋ ಆಶೆಯನ್ನು ತನ್ನ ದಾಸನ ನ್ನಾಗಿ ಮಾಡಿಕೊಂಡಿರುವನೋ ಅಂದರೆ ಆಶೆಯು ತಾನು ಹೇಳಿದಂತೆ ಕೇಳ ಬೇಕೇ ಹೊರತು ತಾನು ಆಶೆಗೆ ಒಳಗಾದವನಲ್ಲ. ಆಶೆ ಬಿಟ್ಟವನು ಯಾವನೋ ಅವನಿಗೆ ಈಜಗತ್ತಿನಲ್ಲಿ ಯಾವುದರಿಂದಾದರೂ ಏನು ಪ್ರಯೋ ಜನ? ಅವನಿಗೆ ಜಗತ್ತೆಲ್ಲವು ತೃಣಪ್ರಾಯುವೇ. ಆದ್ದರಿಂದ ಇಂತಹ ಆಶೆಯನ್ನು ಬಿಟ್ಟು ಫಲವನ್ನು ಅಪೇಕ್ಷಿಸದೆ ಪರಮಾತ್ಮನನ್ನು ಭಜಿಸಿದರೆ ಕರುಣಾಸಮುದ್ರನಾದ ಹರಿಯು ರಮಾಸಮೇತನಾಗಿ ತಾನೇ ಪ್ರಸನ್ನ ನಾಗಿ ತನ್ನನ್ನೇ ಕೊಡುವ. ಪಾಂಡವರಿಗೆ ಕೃಷ್ಣರೂಪದಿಂದ ತಾನೇ ದಾಸನಂತೆ ಕಾದಿರಲಿಲ್ಲವೆ? ಬಲಿಚಕ್ರವರ್ತಿಯ ಮನೆಯಲ್ಲಿ ವಾಮನ ರೂಪದಿಂದ ಮನೆ ಬಾಗಿಲು ಕಾಯುತ್ತಿರುವನು. ಹಾಗೆ ನಿಷ್ಕಾಮ ಭಕ್ತರಿಗೆ ಪ್ರಸನ್ನನಾಗಿ ಇಹಪರಂಗಳಲಿ ಸರ್ವಪ್ರಕಾರದಿಂದಲೂ ಅವರನ್ನು ರಕ್ಷಿಸುವನು ||೨೬||

ಅವತಾರಿಕೆ :—ಭಕ್ತರು ಪರಮಾತ್ಮನ ಒಂದೆರಡು ಗುಣಗಳನ್ನು ತಿಳಿದು ಉಪಾಸನೆಯನ್ನು ಮಾಡಿದರೂ ಕೃತಾರ್ಥರಾಗುವರೆಂದು ಹೇಳು ತ್ತಾರೆ—

**ದ್ಯುನದಿಯಾದ್ಯಂತವನು ಕಾಣದೆ**
**ಮನುಜನೇಕತ್ರದಲಿ ತಾ ಮ**
**ಜ್ಜನವಗೈಯೆ, ಸಮಸ್ತದೋಷದಿ ಮುಕ್ತನಹತೆರದಿ ||**

ಅನಘನಮಲಾನಂತಾನಂತ ಸು
ಗುಣಗಳೊಳಗೊಂದೇಗುಣೋಪಾ
ಸನವಗೈವ ಮಹಾತ್ಮ ಧನ್ಯಕೃತಾರ್ಥನೆನಿಸುವನು ||

ಪದ್ಯಾರ್ಥ :—ಮನುಜನು=ಮನುಷ್ಯನು, ದ್ಯುನದಿಯ=ಗಂಗೆಯ ಆದ್ಯಂತವನು=ಮೊದಲು ಕೊನೆಯನ್ನು, ಕಾಣದೆ, ಏಕತ್ರದಲಿ=ಒಂದೇ ಸ್ಥಳದಲ್ಲಿ, ತಾ=ತಾನು, ಮಜ್ಜನವ=ಸ್ನಾನವನ್ನು. ಗೈಯೆ=ಮಾಡಲು, ಸಮಸ್ತ ದೋಷದಿ=ಎಲ್ಲಾ ದೋಷಗಳಿಂದಲೂ, ಮುಕ್ತನಹತೆರದಿ= ಮುಕ್ತನಾಗುವಂತೆ ಅನಘನ=ದೋಷರಹಿತನಾದ ಪರಮಾತ್ಮನ, ಅಮಲ =ನಿರ್ಮಲವಾದ, ಅನಂತಾನಂತ=ಅಸಂಖ್ಯಾಕವಾದ, ಸುಗುಣಗಳೊಳಗೆ, ಒಂದೇ ಗುಣೋಪಾಸನವ ಗೈವ=ಮಾಡುವ, ಮಹಾತ್ಮ=ಮಹಾತ್ಮನು, ಧನ್ಯ=ಕೃತಾರ್ಥನು ಎನಿಸುವನು.

ತಾತ್ಪರ್ಯ :—ಗಂಗೆಯ ಮೊದಲು ಕೊನೆಯನ್ನು ನೋಡಲಪೇಕ್ಷಿಸದೆ ಭಕ್ತಿಯಿಂದ ಯಾವುದೋ ಒಂದು ಸ್ಥಳದಲ್ಲಿ ಸ್ನಾನ ಮಾಡುವವರು ಸಕಲ ಪಾಪಗಳಿಂದ ಮುಕ್ತರಾಗುವರು. ಗಂಗೆಯ ಮಹಾತ್ಮೆ ಜ್ಞಾನ ಒಂದಿದ್ದರೆ ಸಾಕು ಅದರ ಮೊದಲು ಕೊನೆಯನ್ನು ತಿಳಿಯಬೇಕಾದುದು ಅನಾವಶ್ಯಕ. ಅದರಂತೆ ನಿರ್ದೋಷಿಯಾದ ಪರಮಾತ್ಮನ ಅನಂತಾನಂತ ಗುಣಗಳಷ್ಟೈಕಿ ಒಂದು ಗುಣದ ಸ್ವಲ್ಪಭಾಗವನ್ನಾದರೂ ತಿಳಿದು ಭಕ್ತಿಯಿಂದ ಉಪಾಸನೆಯನ್ನು ಮಾಡಿದರೆ ಅವನೇ ಮಹಾತ್ಮನು, ಕೃತಾರ್ಥನು ಧನ್ಯನೆಂದು ಲೋಕದಲ್ಲಿ ಪ್ರಖ್ಯಾತನಾಗುವನು ||೨೭||

ಅವತಾರಿಕೆ :—ಮನುಷ್ಯರು ವಸ್ತ್ರಾದಿಗಳನ್ನು ಧರಿಸುವಾಗ ಚಿಂತಿಸಬೇಕಾದ ಭಗವದ್ರೂಪಗಳನ್ನು ಹೇಳುತ್ತಾರೆ—

ವಾಸುದೇವನುಕರಿಸುವನು ಕಾ
ರ್ಪಾಸನಾಮದಿ ಸಂಕರ್ಷಣನು
ವಾಸವಾಗಿಹ ತಂತುದೊಳುತಂತುಗನು ಪ್ರದ್ಯುಮ್ನ ||
ವಾಸರೂಪಾನಿರುದ್ಧದೇವನು
ಭೂಷಣನು ತಾನಾಗಿತೋರ್ಪ
ರೀಶನಾರಾಯಣನು ಸರ್ವಪಾ ಮಾನ್ಯಮಾನದನು ||

ಪದ್ಯಾರ್ಥ :—ವಾಸುದೇವನು= ವಾಸುದೇವನಾಮಕನಾದ ಶ್ರೀ ಪರಮಾತ್ಮನು, ಕಾರ್ಪಾಸನಾಮದಿ= ಹತ್ತಿಯೆಂಬ ಹೆಸರಿನಿಂದ, ಕರೆಸುವನು, ಸಂಕರ್ಷಣನು, ತೂಲದೊಳು= ಹಂಜಿಯಲ್ಲಿ, ವಾಸವಾಗಿಹ= ವಾಸಮಾಡುತ್ತಿರುವನು, ಪ್ರದ್ಯುಮ್ನ= ಪ್ರದ್ಯುಮ್ನನು, ತಂತುಗೆನು= ದಾರಗಳಲ್ಲಿ ಇರುವನು. ಅನಿರುದ್ಧದೇವನು, ವಾಸರೂಪನು= ವಸ್ತ್ರರೂಪನಾಗಿ ತೋರುವನು, ಪರೇಶ ನಾರಾಯಣನು= ನಾರಾಯಣರೂಪಿ ಪರಮಾತ್ಮ, ಸರ್ವದಾಮಾನ್ಯ= ಪೂಜ್ಯನಾಗಿಯೂ,ಮಾನದನು= ಬಹುಮಾನವನ್ನು ಕೊಡುವವನಾಗಿಯೂ, ಭೂಷಣನುತಾನಾಗಿ= ಅಲಂಕಾರಸ್ಥಾನೀಯನು ತಾನಾಗಿ ತೋರ್ಪ.

ತಾತ್ಪರ್ಯ :—ವಾಸುದೇವನು ಹತ್ತಿ ಎಂಬ ಹೆಸರಿನಿಂದ ಹತ್ತಿಯಲ್ಲಿರುವನು. ಸಂಕರ್ಷಣನು ಬೀಜ ಬಿಡಿಸಿದ ಹತ್ತಿಯಲ್ಲಿ ತನ್ನಾಮದಿಂದ ಇರುವನು ಪ್ರದ್ಯುಮ್ನನು ಧಾರಗಳಲ್ಲಿ ಧಾರನಾಮಕನಾಗಿ ಇರುವನು. ಅನಿರುದ್ಧನು ವಸ್ತ್ರರೂಪದಿಂದ ವಸ್ತ್ರನಾಮಕನಾಗಿ ವಸ್ತ್ರದಲ್ಲಿರುವನು. ಭೂಷಣಗಳಲ್ಲಿ ಮುಖ್ಯವಾದುದು ವಸ್ತ್ರವೆಂದು ಪ್ರಸಿದ್ಧಿಯಾಗಿರುವದು. ಅಂತಹ ಭೂಷಣಸ್ಥಾನೀಯನು ಪರೇಶನಾದ ಶ್ರೀಮನ್ನಾರಾಯಣನು. ಹೀಗೆ ಅನುಸಂಧಾನ ಪೂರ್ವಕವಾಗಿ ವಸ್ತ್ರಗಳನ್ನು ಧರಿಸಿದರೆ ಅವನು ಕೃತಾರ್ಥನಾಗುವನು ವಸ್ತ್ರವನ್ನು ಧರಿಸುವವನಲ್ಲಿದ್ದು ಮಾನ್ಯನಾಗುವನು. ಅದೇ ನಾರಾಯಣನೇ ನೋಡುವವರಲ್ಲಿದ್ದು ಮಾನವನ್ನು ಕೊಡುವನು ||೨೯||

ಅವತಾರಿಕೆ :—ವಸ್ತ್ರರೂಪದಿಂದ ಪರಮಾತ್ಮನು ನಮ್ಮನ್ನು ರಕ್ಷಿಸುವನೆಂದು ಅನುಸಂಧಾನದಿಂದ ಚಿಂತಿಸುವವರನ್ನು ಸರ್ವ ಪ್ರಕಾರದಿಂದಲೂ ಉದ್ಧರಿಸುವನೆಂದು ಹೇಳುತ್ತಾ ಸಂಧಿಯನ್ನು ಉಪಸಂಹಾರ ಮಾಡುತ್ತಾರೆ—

**ಲಲನೆಯಿಂದೊಡಗೂಡಿ ಚೇಲಗ**
**ಳೊಳಗೆ ಬಿಂಬಪ್ರೇರಕರೂಪದಿ**
**ನೆಲಸಿ ಜನುಮಕಾರಾತ್ಮಕಜಗನ್ನಾಥವಿಠ್ಠಲನು ||**
**ಛಳಿಬಿಸಿಲು ಸುಳಿಗಾಳಿಯಿಂದರ**

**ಘಳಿಗೆ ಬಿಡದಲೆ ಕಾವನೆಂದರಿ**

**ದಿಳಿಯೊಳರ್ಚಿಸು ರು ಸದಾ ಸರ್ವಾಂತರಾತ್ಮಕನ ||**

ಪದ್ಯಾರ್ಥ :—ಚತುರಾತ್ಮಕ= ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವನೆಂಬ ೪ ರೂಪಾತ್ಮಕನಾದ, ಜಗನ್ನಾಥವಿಠ್ಠಲನು= ದಾಸರಾಯರ ಹೃತ್ಕಮಲನಿವಾಸಿಯಾದ ಜಗನ್ನಾಥ ವಿಠ್ಠಲಾತ್ಮಕ ಶ್ರೀ ನಾರಾಯಣನು, ಲಲನೆಯಿಂದೊಡಗೂಡಿ= ಭಾರ್ಯಳಿಂದೊಡಗೂಡಿ, ಚೇಲಗಳೊಳಗೆ= ವಸ್ತ್ರಗಳ ಒಳಗೆ, ಓತಪ್ರೋತರೂಪದಿ= ಅಡ್ಡವಾಗಿಯೂ ಉದ್ದವಾಗಿಯೂ ಹೆಣೆದಿರುವ ಧಾರಗಳ ರೂಪದಿಂದ, ನೆಲಸಿಹನು= ವಾಸವಾಗಿರುವನು. ಛಳಿ, ಬಿಸಿಲು, ಮಳೆ, ಗಾಳಿಯಿಂದ ಅರೆಘಳಿಗೆ ಬಿಡದಲೆ ಕಾವನೆಂದು= ಸಂರಕ್ಷಿಸುವನೆಂದು ಅರಿದು= ತಿಳಿದು, ಇಳಿಯೊಳು= ಭೂಮಿಯಲ್ಲಿ ಸದಾ, ಸರ್ವಾಂತರಾತ್ಮಕನ= ಸರ್ವರಲ್ಲಿ ಅಂತರ್ಗತನಾದ ಶ್ರೀ ಪರಮಾತ್ಮನನ್ನು, ಅರ್ಚಿಸುತಿರು – ಪೂಜಿಸುತ್ತಿರು.

ತಾತ್ಪರ್ಯ .—ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವನೆಂಬ ೪ ಮೂರ್ತಿಗಳ ಸ್ವರೂಪಭೂತನಾದ ಜಗನ್ನಾಥ ವಿಠ್ಠಲಾತ್ಮಕನಾದ ಶ್ರೀಮನ್ನಾರಾಯಣನು ವಸ್ತ್ರಗಳಲ್ಲಿ ಅಡ್ಡವಾಗಿಯೂ ಉದ್ದವಾಗಿಯೂ (ಓತಪ್ರೋತ) ಹೆಣೆದಿರುವ ಧಾರಗಳ ರೂಪದಿಂದ ಇದ್ದು ಛಳಿ ಬಿಸಿಲು ಮಳೆಗಾಳಿಯಿಂದ ಅರ್ಧಘಳಿಗೆಯಾದರೂ ಬಿಡದೆ ಸದಾ ನಮ್ಮನ್ನು ರಕ್ಷಿಸುವನೆಂದು ತಿಳಿದು ಪೂಜಿಸುತ್ತಿರು. ಧಾರಗಳು ಬಟ್ಟೆಗೆ ಹೇಗೆ ಹಾಗೆ ಶ್ರೀ ಪರಮಾತ್ಮನ ರೂಪಗಳು ನಮ್ಮ ಶರೀರಕ್ಕೆ ಒಳಗೂ ಹೊರಗೂ ಸೇರಿಕೊಂಡಿವೆ ಎಂದು ಭಾವವು ||೨೯

ಎಂಬಲ್ಲಿಗೆ ಹರಿಕಥಾಮೃತಸಾರದ ಭಾವಪ್ರಕಾಶಿಕೆಯಲ್ಲಿ ೧೫ನೆಯ ಶ್ವಾಶಸಂಧಿಯು ಸಮಾಪ್ತಮಾದುದು

**ಶ್ರೀಕೃಷ್ಣಾರ್ಪಣಮಸ್ತು**

